



# ಆರೋಗ್ಯವಾಣಿ





ಸಾರ್ವಜನಿಕರು ರಾಜ್ಯದ ಯಾವುದೇ ಭಾಗದಿಂದ ಯಾವುದೇ ಶುಲ್ಕವಿಲ್ಲದೇ ತಮ್ಮ ದೂರವಾಣಿಯಿಂದ **104** ಕ್ಕೆ ಕರೆಮಾಡಿ ಆರೋಗ್ಯ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬಹುದಾಗಿದೆ.

- ಆರೋಗ್ಯ ಸಲಹೆ, ಆಪ್ತ ಸಲಹೆ, ಕಾರ್ಯಕ್ರಮಗಳ ಮಾಹಿತಿ
- ಸೇವಾ-ಸೌಲಭ್ಯಗಳ ಮಾಹಿತಿ, ಸಾಂಕ್ರಾಮಿಕ ರೋಗಗಳ ಕುರಿತಾಗಿ ತ್ವರಿತ ಮಾಹಿತಿ
- ಸೇವಾ ಕೊರತೆಗಳ ವಿವರಗಳನ್ನು ಜರೂರಾಗಿ ವ್ಯವಸ್ಥೆಯ ಗಮನಕ್ಕೆ ತರಬಹುದಾದ ಒಂದು ಸುಲಭ ವಿಧಾನ
- **104** ಸುಲಭವಾಗಿ ನೆನಪಿನಲ್ಲಿಡುವ ಹಾಗೂ ಉಚಿತವಾಗಿ ಕರೆ ಮಾಡಬಹುದಾದ ದೂರವಾಣಿ ಸಂಖ್ಯೆ
- ಪ್ರಸಕ್ತ ಸಾಲಿನಲ್ಲಿ 100 ಸ್ಥಳಗಳಲ್ಲಿ ದೂರವಾಣಿ ಕೇಂದ್ರ ಸ್ಥಾಪನೆ. ನಂತರ ಮೂರು ವರ್ಷಗಳ ಅವಧಿಯಲ್ಲಿ ಅಗತ್ಯಾನುಸಾರ ಹಂತ ಹಂತವಾಗಿ 300 ಸ್ಥಳಗಳಿಗೆ ಸೇವೆಯ ವಿಸ್ತರಣ




"ಯಾವುದೇ ಆರೋಗ್ಯ ಮಾಹಿತಿಗೆ 104 ಕ್ಕೆ ಸಂಪರ್ಕಿಸಿ."

ದಿನದ 24 ಗಂಟೆ ಹಾಗೂ ವರ್ಷದ 365 ದಿನ ಸೇವಾ ಸೌಲಭ್ಯ ಲಭ್ಯವಿರುತ್ತದೆ.



# ಜನನಿ-ಶಿಶು ಸುರಕ್ಷಾ ಕಾರ್ಯಕ್ರಮ

ಎಲ್ಲಾ ಗರ್ಭಿಣಿಯರಿಗೆ ಮತ್ತು ನವಜಾತ ಶಿಶುಗಳಿಗೆ (ಹುಟ್ಟಿದ 30 ದಿನಗಳವರೆಗೆ) ಕೆಳಕಂಡ ಸೇವೆಗಳು ಸಂಪೂರ್ಣ ಉಚಿತ

- ಹೆರಿಗೆ
- ಸಿಜೇರಿಯನ್ ಹೆರಿಗೆ
- ಔಷಧಗಳು ಮತ್ತಿತರ ವೈದ್ಯಕೀಯ ಬಳಕೆ ವಸ್ತುಗಳು ಹಾಗೂ ರಕ್ತ ಪೂರೈಕೆ
- ಪ್ರಯೋಗಾಲಯ ಪರೀಕ್ಷೆಗಳು (ರಕ್ತ, ಮೂತ್ರ ಹಾಗೂ ಸ್ಕ್ಯಾನಿಂಗ್)
- ಒಳರೋಗಿಯಾಗಿ ತಂಗಿದ್ದಾಗ ಆಹಾರ (ಸಾಮಾನ್ಯ ಹೆರಿಗೆಗೆ ಎರಡು ದಿನ, ಸಿಜೇರಿಯನ್ ಹೆರಿಗೆಗೆ ಏಳು ದಿನ)
- ಮನೆಯಿಂದ ಆಸ್ಪತ್ರೆಗೆ, ಆಸ್ಪತ್ರೆಯಿಂದ ಮೇಲ್ದರ್ಜೆ ಆಸ್ಪತ್ರೆಗೆ ವಾಹನ ವ್ಯವಸ್ಥೆ
- ಎಲ್ಲಾ ತರಹದ ಸೇವಾ ಶುಲ್ಕದಿಂದ ವಿನಾಯಿತಿ

ಗರ್ಭಿಣಿ ಮತ್ತು ನವಜಾತ ಶಿಶುಗಳ ಸಂರಕ್ಷಣೆಗಾಗಿ ಎಲ್ಲಾ ಸರ್ಕಾರಿ ಆರೋಗ್ಯ ಸಂಸ್ಥೆಗಳಲ್ಲಿ ಸಂಪೂರ್ಣ ಉಚಿತ ಸೇವೆ

**ಎಲ್ಲರಿಗೂ ಆರೋಗ್ಯ-ಎಲ್ಲೆಡೆಯೂ ಆರೋಗ್ಯ**

ಪ್ರಕಟಣೆ :- ಅಭಿಯಾನ ನಿರ್ದೇಶಕರು (ಎನ್.ಆರ್.ಹೆಚ್.ಎಂ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು-560 009




## ಸಂಕಷ್ಟದಲ್ಲಿರುವ ಅವಿವಾಹಿತ / ವಿಚ್ಛೇದಿತ
## ಮಹಿಳೆಯರ ಆರ್ಥಿಕ ಭದ್ರತೆಗೆ ವಿನೂತನ ಯೋಜನೆ




ಸಾಮಾಜಿಕ ಭದ್ರತೆ ನೀಡುವ ಹೊಸ ಯೋಜನೆಗಳ ಅನುಷ್ಠಾನದಲ್ಲಿ ಕರ್ನಾಟಕವು ದೇಶಕ್ಕೆ ಮತ್ತೊಮ್ಮೆ ಮಾದರಿಯಾಗಿದೆ.

ಬಡ ಕುಟುಂಬಗಳ ಅವಿವಾಹಿತ / ವಿಚ್ಛೇದಿತ ಮಹಿಳೆಯರಿಗೆ ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ರಕ್ಷಣೆ ಒದಗಿಸುವ 'ಮನಸ್ವಿನಿ' ವಿನೂತನ ಯೋಜನೆಯನ್ನು ರಾಜ್ಯದ ಜನತೆಗೆ ಉಡುಗೊರೆಯಾಗಿ ನೀಡಿದೆ.



ಶ್ರೀ ಸಿದ್ದರಾಮಯ್ಯ
ಸನ್ಮಾನ್ಯ ಮುಖ್ಯಮಂತ್ರಿಗಳು

### ಯೋಜನೆಯ ವೈಶಿಷ್ಟ್ಯಗಳು

- 40 ವರ್ಷದಿಂದ ರಿಂದ 64 ವರ್ಷದೊಳಗಿನ ಅವಿವಾಹಿತ ಮತ್ತು ವಿಚ್ಛೇದಿತ ಮಹಿಳೆಯರಿಗೆ 500/– ರೂ.ಗಳ ಮಾಸಾಶನ
- ಸಾರ್ವಜನಿಕ ಮತ್ತು ಖಾಸಗಿ ಮೂಲಗಳಿಂದ ಯಾವುದೇ ಮಾಸಾಶನ ಪಡೆಯುತ್ತಿರಬಾರದು
- 500/– ರೂ.ಗಳ ಮಾಸಾಶನವನ್ನು ಪ್ರತಿ ತಿಂಗಳು ಫಲಾನುಭವಿಯ ಬ್ಯಾಂಕ್ ಅಥವಾ ಅಂಚೆ ಕಚೇರಿಯ ಖಾತೆಗೆ ವರ್ಗಾಯಿಸಲಾಗುವುದು

### ನೀಡಬೇಕಾದ ಅರ್ಹತಾ ದಾಖಲೆಗಳು

- ಬಿಪಿಎಲ್ ಪಡಿತರ ಚೀಟಿ/ ಸ್ವಯಂ ಘೋಷಿತ ಆದಾಯ ಪ್ರಮಾಣಪತ್ರ
- ಚುನಾವಣಾ ಗುರುತಿನ ಚೀಟಿ ಅಥವಾ ವಿಳಾಸ ದೃಢೀಕರಣ ಪತ್ರ /ವಯೋಮಿತಿಗೆ ವೈದ್ಯಕೀಯ ದೃಢೀಕರಣ ಪತ್ರ
- ಅವಿವಾಹಿತರು, ವಿವಾಹವಾಗದಿರುವ ಬಗ್ಗೆ ಮತ್ತು ವಿಚ್ಛೇದಿತರು, ವಿಚ್ಛೇದನ ಪಡೆದಿರುವ ಬಗ್ಗೆ ಸ್ವಯಂ ಘೋಷಿತ ಪ್ರಮಾಣಪತ್ರ

ಪ್ರಕಟಣೆ : ನಿರ್ದೇಶಕರು, ವಾರ್ತಾ ಇಲಾಖೆ

ಕರ್ನಾಟಕ ವಾರ್ತೆ



ಶ್ರೀ ಸಿದ್ದರಾಮಯ್ಯ
ಸನ್ಮಾನ್ಯ ಮುಖ್ಯಮಂತ್ರಿಗಳು



# ಮನೆಯೇ ಮೊದಲ ಪಾಠಶಾಲೆ - ಪೋಷಕರೇ ಮೊದಲ ಗುರುವು!



ಶ್ರೀ ಕಿಮ್ಮನೆ ರತ್ನಾಕರ
ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು

'ಮಕ್ಕಳ ಬೇಕು-ಬೇಡಗಳ ಜೊತೆಗೆ ಅವರಿಗೆ ಉತ್ತಮ ಶಿಕ್ಷಣ ಕೊಡಿಸುವುದೂ ಅಷ್ಟೇ ಮುಖ್ಯ. ಅಲ್ಲದೆ, ಇದು ಪೋಷಕರ ಬಹುಮುಖ್ಯ ಕರ್ತವ್ಯ ಕೂಡ ಹೌದು! ಆದ್ದರಿಂದ ಶಿಕ್ಷಣ ಹಕ್ಕು ಕಾಯಿದೆ ಕಲ್ಪಿಸಿರುವ ಅವಕಾಶದ ಬಗ್ಗೆ ಅರಿತುಕೊಂಡು, ಅದರ ಪ್ರಯೋಜನ ಪಡೆಯುವುದು ಎಲ್ಲರ ಜವಾಬ್ದಾರಿಯಾಗಿದೆ'







**ಶಿಕ್ಷಣ ಹಕ್ಕು ಕಾಯಿದೆಯ ವೈಶಿಷ್ಟ್ಯಗಳು :**

- ಮಕ್ಕಳನ್ನು ಹತ್ತಿರದ ಶಾಲೆಗಳಿಗೆ ಸೇರಿಸುವುದು ಪೋಷಕರ ಕರ್ತವ್ಯ
- ಮಕ್ಕಳಿಗೆ ಅಥವಾ ಪೋಷಕರಿಗೆ ಆಯ್ಕೆ ಪರೀಕ್ಷೆ ನಿಷಿದ್ಧ
- ಮಕ್ಕಳ ವಯಸ್ಸಿಗನುಗುಣವಾಗಿ ಸೂಕ್ತ ತರಗತಿಗೆ ಸೇರ್ಪಡೆ
- ಅವಕಾಶ ವಂಚಿತ ಮತ್ತು ದುರ್ಬಲ ವರ್ಗದ ಮಕ್ಕಳಿಗೆ ಅನುದಾನ ರಹಿತ ಶಾಲೆಗಳಲ್ಲಿ ಶೇ.25ರಷ್ಟು ಮೀಸಲಾತಿ

6-14 ವಯೋಮಿತಿಯ
ಎಲ್ಲಾ ಮಕ್ಕಳಿಗೆ
ಉಚಿತ ಮತ್ತು ಕಡ್ಡಾಯ
ಶಿಕ್ಷಣದ ಹಕ್ಕು




ಹೆಚ್ಚಿನ ವಿವರಗಳಿಗೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ಅಥವಾ ಉಚಿತ ಸಹಾಯವಾಣಿ : 1800 4253 4567
(ಬೆ: (ಬೆಳಗ್ಗೆ 10 ರಿಂದ ಸಂಜೆ 6 ರವರೆಗೆ) ವೆಬ್‌ಸೈಟ್ www.ssakarnataka.gov.in ಸಂಪರ್ಕಿಸಿ



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೫ ಸಂಚಿಕೆ-೬ ಜನವರಿ ೨೦೧೪

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@gmail.com
hosathu@gmail.com
hosathu.nkp@gmail.com
URL : www.navakarnataka.com
http : //navakarnataka.blogspot.in
http : //hosathumonthly.blogspot.in


# ಈ ತಿಂಗಳು

ಕಂಚಿಯ ಈ ಶತಮಾನದ ಶಂಕರಾಚಾರ್ಯರು ಪುದುಚೇರಿ ನ್ಯಾಯಾಲಯವು ನೀಡಲಿದ್ದ ತೀರ್ಪಿನಿಂದ ಸಂತ್ರಸ್ತರಾಗುವ ನಿರೀಕ್ಷೆ ಇದ್ದಿತು, ಆದರೆ ನ್ಯಾಯಾಲಯವು ಅವರಿಗೆ ಅತೀವ ಸಂತಸವನ್ನು ತುಂಬುವ ಕೈಂಕರ್ಯವನ್ನು ವಿಧಿವತ್ತಾಗಿ ನೆರವೇರಿಸಿತು. ಸ್ವಾಮಿಗಳಿಗೂ ಶಂಕರರಾಮನ್ ಕೊಲೆಗೂ ಸುತರಾಂ ಸಂಬಂಧವಿಲ್ಲವೆಂಬ ನ್ಯಾಯಾಲಯದ ತೀರ್ಪನ್ನು ಉಲ್ಲಾಸದಿಂದ ಸ್ವಾಗತಿಸಿದ ಸ್ವಾಮಿವರ್ಯರು 'ದಿ ಹಿಂದು' ಪತ್ರಿಕೆಯಲ್ಲಿ ಒಂದು ಇಡೀ ಪುಟದ ಜಾಹಿರಾತು ನೀಡಿ ನಿಟ್ಟುಸಿರುಬಿಟ್ಟರು. ಯಥಾಪ್ರಕಾರ ಕೋರ್ಟು ಶಂಕರರಾಮನ್ ಹತ್ಯೆಗೈದವರಾರೆಂಬ ತನಿಖೆಯನ್ನು ಮುಂದುವರಿಸಬೇಕೆಂದು ಪೊಲೀಸರಿಗೆ ಸೂಚಿಸಲಿಲ್ಲವಾದ್ದರಿಂದ ಸ್ವಾಮಿ ಸರಸ್ವತಿಯವರ ಪ್ರಫುಲ್ಲ ವದನವು ತನ್ನ ಕಾಂತಿ ಕಳೆದುಕೊಳ್ಳುವ ಸಂಭವವೇನೂ ಇಲ್ಲ. ಈ ತೀರ್ಪು ಅನಿರೀಕ್ಷಿತವಲ್ಲವೆಂಬುದಕ್ಕೆ ಎರಡು ಸೂಚನೆಗಳಿದ್ದವು : (ಅ) ಮೊಕದ್ದಮೆಯನ್ನು ಪುದುಚೇರಿಗೆ ವರ್ಗಾಯಿಸಿದ್ದು, ಮತ್ತು (ಆ) ಹದಿನೆಂಟು ಸಾಕ್ಷಿಗಳು ತಮ್ಮ ಮೊದಲಿನ ಹೇಳಿಕೆಗಳಿಗೆ ಪೂರ್ತಿ ವಿರುದ್ಧವಾಗಿ ನ್ಯಾಯಾಲಯದಲ್ಲಿ ಹತ್ಯೆಗೆ ಸಂಬಂಧಿಸಿದ ಘಟನೆಗಳ ಬಗ್ಗೆ ತಮ್ಮ ಹುಸಿ ಅಜ್ಞಾನವನ್ನು ಪ್ರದರ್ಶಿಸಿ ಮೋಕ್ಷ ಸಾಧನೆಯ ಮೆಟ್ಟಿಲುಗಳನ್ನು ಹತ್ತಿದ್ದು. ಹಿಂದೆ ಸರ್ವೋಚ್ಚ ನ್ಯಾಯಾಲಯವು ಅತ್ಯಾಚಾರವೊಂದರ ಮೊಕದ್ದಮೆಯಲ್ಲಿ "ನಮ್ಮ ದೇಶದ ಉಚ್ಚ ಜಾತಿಯವರು ಅಂತಹ ಹೀನ ಅಪರಾಧಗಳನ್ನು ಸರ್ವಥಾ ಎಸಗುವುದಿಲ್ಲ" ಎಂದು ಘೋಷಿಸಿ ಮಹಿಳೆಯರ ಮುಖದ ಮೇಲೆ ಸಗಣಿ ಸುರಿದಿತ್ತು. ಈಗ ಅಂತಹ ಯಾವ ಮಾತೂ ಬಂದಿಲ್ಲದಿದ್ದರೂ 'ಕಂಚಿ ಸ್ವಾಮಿಗಳಂಥವರು ಇಂತಹ ಕುತ್ಸಿತ ಪಾತಕಗಳನ್ನೆಸಗಲು ಸಾಧ್ಯವೇ ಇಲ್ಲ' ಎಂಬ ಪ್ರಮೇಯವನ್ನು ತನ್ನದೇ ರೀತಿಯಲ್ಲಿ ನ್ಯಾಯಾಲಯವು ಮಂಡಿಸಿದೆ. ಎರಡು ತಿಂಗಳ ಹಿಂದೆ ಬಿಹಾರದ ಸಾಕ್ಷಿಗಳು ಬೆದರಿಕೆಗೆ ಅಂಜಿ ನ್ಯಾಯಾಲಯದಲ್ಲಿ 'ಉಲ್ಟಾ' ಹೊಡೆದಿದ್ದರು ಮತ್ತು ಐವತ್ತು ದಲಿತರ ಹತ್ಯೆಯನ್ನು ಮಾಡಿದವರು ಅಜ್ಞಾತರು ಎಂಬಂತೆ ಬಿಂಬಿಸಿದರು. ಈಗ ಅದು ಶಂಕರರಾಮನ್ ಸಂದರ್ಭದಲ್ಲಿಯೂ ನಡೆದಿದೆ. ಕಾನೂನನ್ನು ತಿಳಿದಿರುವ ನ್ಯಾಯಾಲಯದೆದುರು ಶಂಕರರಾಮನ್‌ನ ಪತ್ನಿ ಮತ್ತು ಪುತ್ರ ಏನು ತಾನೆ ಹೇಳಬಲ್ಲರು! ನ್ಯಾಯದೇವತೆಯು ಕರುಣಿಸಿದ ತೀರ್ಪನ್ನು ಪ್ರಸಾದವೆಂದು ಸ್ವೀಕರಿಸಿ, 'ಭಗವಂತ ಸ್ವರ್ಗದಲ್ಲಿದ್ದಾನೆ, ಭೂಮಿಯ ಮೇಲೆ ಎಲ್ಲವೂ ಹಸನಾಗಿ ಜರುಗುತ್ತಿದೆ' ಎಂದು ರಾಬರ್ಟ್ ಬ್ರೌನಿಂಗನ ಪದ್ಯವನ್ನು ನೆನೆದು, ತಲೆಯ ಮೇಲೆ ಒದ್ದೆಬಟ್ಟೆ ಹಾಕಿಕೊಂಡು ಕಂಚಿಯ ಬಿಸಿಲಿನ ಝಳವನ್ನು ಸವಿಯಬೇಕು.

* * *

ಸಿನಿಮಾ ತಾರೆಯರು ಮತ್ತು ನಂದನ ನೀಲೇಕಣಿಯವರಂತೆ, ಎಂದೋ ಕ್ರಿಕೆಟ್ ವೀರನಾಗಿ ಸೌರಭವನ್ನು ಸೂಸಿದ್ದ ಕೊಲ್ಕತ್ತಾದ ಗಂಗೂಲಿಗೆ ರಾಜಕೀಯ ಮಾರುಕಟ್ಟೆ ತೆರೆದುಕೊಂಡಿದೆ. ತಾರೆಯರು ಹಾಗೂ ನೀಲೇಕಣಿ ದೇಶದ ಏಳಿಗೆಗಾಗಿ ಬೆವರು ಸುರಿಸಲು ಸದಾ ಸಿದ್ಧರು : ಅಂದರೆ, ಚುನಾವಣೆಯ ಕಾಲದಲ್ಲಿ ಒಂದಷ್ಟು ಬಿಸಿಲಿನಲ್ಲಿ ತಿರುಗಿ ಬೆವರುತ್ತಾರೆ. ಆಮೇಲೆ ಇದ್ದೇ ಇದೆ ಅವರ ಸಂಪದ್ಭರಿತವಾದ ಹವಾ ನಿಯಂತ್ರಿತ ಕೋಣೆಗಳಲ್ಲಿ ಜನರ ಬೆವರಿನಿಂದ ಬಂದ ಸಂಪತ್ತಿನ ಭೋಗ. ಈಗ ಗಂಗೂಲಿಯ ಹಿಂದೆ ಬಿದ್ದಿರುವ ರಾಜಕೀಯ ಪಕ್ಷಗಳು ಆತನನ್ನು ಲೋಕಸಭೆಯೊಳಕ್ಕೆ ತೂರಿಸಲು ಪೈಪೋಟಿ ನಡೆಸುತ್ತಿವೆ. ಆತನೂ ಮನಸ್ಸಿನಲ್ಲಿ ತನ್ನ ಸಹ-ಆಟಗಾರ




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಎಚ್. ಎಸ್. ಗೋಪಾಲ ರಾವ್
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಜಿ. ನಾಗಕುಮಾರ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮುರಳೀಧರ್
ವಿಜಯಾ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೫/- |
| ವಾರ್ಷಿಕ ಸಂಚಿಕೆ | ರೂ. ४೫/- |
| ವಾರ್ಷಿಕ ಚಂದಾ | ರೂ. ೨೦೦/- |
| ಮೂರು ವರ್ಷಕ್ಕೆ | ರೂ. ೪೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ತೆಂಡೂಲ್ಕರನನ್ನು ಮತ್ಸರದಿಂದ ನೋಡುತ್ತಿರಬೇಕು. ರಾಜ್ಯಸಭೆಯಲ್ಲಿ ಆಸನ, ಕಿರೀಟದಲ್ಲಿ ಭಾರತ ರತ್ನ, ಇವೆಲ್ಲಾ ತರುಣರನ್ನು ಆಕರ್ಷಿಸಲು ಭ್ರಷ್ಟ ಕಾಂಗ್ರೆಸ್ ಅನುಸರಿಸಿರುವ ಕುಮಾರ್ಗ. ಗಂಗೂಲಿ ಮತ್ತು ತೆಂಡೂಲ್ಕರ್ ಎರಡು ವಿಷಯಗಳಲ್ಲಿ ಸಮಾನರು : (ಅ) ಇಬ್ಬರೂ ಕ್ರಿಕೆಟ್ ಆಡಿ ಹೊರಲಾರದಷ್ಟು ಸಂಪತ್ತು ಸೆಳೆದುಕೊಂಡಿದ್ದಾರೆ; ಮತ್ತು (ಆ) ಇಬ್ಬರೂ ರಾಜ್ಯಕ್ಕೆ ತೆರಿಗೆ ತೆರಬೇಕಾಗಿ ಬಂದಾಗ ಅಪಾಮಾರ್ಗ ಹಿಡಿದು ತೆರಿಗೆ ಮುಕ್ತರಾಗಿದ್ದಾರೆ. ಮೊದಲು ತೆಂಡೂಲ್ಕರನ ಗಾನ ಆಲಿಸೋಣ : ಆತ ಒಮ್ಮೆ ವಿದೇಶದಿಂದ ಹಿಂದಿರುಗುವಾಗ ಅದೆಷ್ಟೋ ಕೋಟಿ ಕ್ರಯವಿರುವ 'ಬ್ರಿಲಿಯಂಟ್' ಕಾರು ತಂದ. ಅದಕ್ಕೆ ಸುಂಕ ತೆರದೆ ಬಂದರಿನಿಂದ ಹೊರಗೆ ತೆಗೆದುಕೊಂಡು ಹೋಗುವಂತಿಲ್ಲವೆಂದು ಅಧಿಕಾರಿಗಳು ತಡೆದರು. ಈತ ಸಿಟ್ಟಿಗೆದ್ದು, ಯಾರುಯಾರಿಗೋ ದೂರವಾಣಿ ಕರೆ ಮಾಡಿದ, ತನಗೆ ಸುಂಕ ಮನ್ನಾ ಮಾಡಬೇಕೆಂದು ಆಗ್ರಹಿಸಿದ. ಅಧಿಕಾರಿಗಳು ಅಲುಗಾಡಲಿಲ್ಲ. ಕಾರು ಹಲವು ತಿಂಗಳುಗಳ ಕಾಲ ಬಂದರಿನಲ್ಲೇ ಕುಳಿತಿತ್ತು. ಕಡೆಗೂ ಬಿಡಿಗಾಸು ಸುಂಕ ನೀಡದೆ 'ಭಾರತ ರತ್ನ' ಆಗಲಿದ್ದ ಮೇಧಾವಿ ಕ್ರಿಕೆಟ್ಟಿಗ ಕಾರನ್ನು ಮನೆಗೆ ತೆಗೆದುಕೊಂಡು ಹೋಗುವಷ್ಟು ಗಟ್ಟಿಗನಾದ. ದೇಶದ ಅನೇಕ ಯುವಕರು "ಹಾ, ನಮ್ಮ ತೆಂಡೂಲ್ಕರನ ಖ್ಯಾತಿ" ಎಂದು ಕುಣಿದರು. ಇನ್ನು ಗಂಗೂಲಿ ಪುರಾಣ : ಆತ ಎಷ್ಟು ಕೂಡಿ ಹಾಕಿಕೊಂಡಿದ್ದಾನೋ ಆತನಿಗೆ ತಿಳಿಯದು. ಅಷ್ಟೊಂದು ಬಂದಾಗ ಲೆಕ್ಕ ಯಾರಿಡುತ್ತಾರೆ, ಏಕಿಡಬೇಕು ! ಒಂದು ಪಂದ್ಯ ಇನ್ನೆರಡು ದಿನದಲ್ಲಿ ಆರಂಭ ವಾಗಬೇಕು, ಈ ಗಂಗೂಲಿ ಆಗ್ಗೆ ತಂಡದ ನಾಯಕ; ಎಲ್ಲಿಂದಲೋ ಹದ್ದು ಹಾರಿಬಂದು ಈತನ ತಲೆಯನ್ನು ಕುಕ್ಕಿತು. ಅದು ಆದಾಯ ತೆರಿಗೆ ಇಲಾಖೆಯಿಂದ ಬಂದ ನೋಟೀಸು, "ಇಷ್ಟು ತೆರಿಗೆ ಬಾಕಿ ಇದೆ, ಕೂಡಲೆ ತುಂಬು" ಎಂದು. ಗಂಗೂಲಿ ಖಿನ್ನನಾದಂತೆ ನಟಿಸಿದ, ಇಂಥ ಸಮಯದಲ್ಲಿ ನೋಟೀಸ್ ಜಾರಿ ಮಾಡುತ್ತೀರಾ ಎಂದು ರೇಗಿದ. ಆಗ ಪಶ್ಚಿಮ ಬಂಗಾಳದ ಮುಖ್ಯಮಂತ್ರಿಯಾಗಿದ್ದವರು ಕಾಮ್ರೇಡ್ ಬುದ್ಧದೇವ ಭಟ್ಟಾಚಾರ್ಯ. ಆ ಕ್ರಾಂತಿಕಾರಿ ನಾಯಕರು ಗಂಗೂಲಿಗೆ ಹೇಳಿದರು, "ನೀನು ತಲೆ ಬಿಸಿ ಮಾಡಿಕೊಳ್ಳುವುದು ಬೇಡ. ಹೋಗಿ ಚೆನ್ನಾಗಿ ಆಡು ಮತ್ತು ನಾಯಕತ್ವ ನೀಡು. ನಿನ್ನ ತೆರಿಗೆಯ ವಿಚಾರವನ್ನು ನನಗೆ ಬಿಡು, ನಾನೆಲ್ಲಾ ನೋಡಿಕೊಳ್ಳುತ್ತೇನೆ," ಎಂದು. ಅದೇನು ನೋಡಿಕೊಂಡರೋ ಮತ್ತು ಹೇಗೆ ನೋಡಿಕೊಂಡರೋ, ಅಂತೂ ಗಂಗೂಲಿ ತೆರಿಗೆ ಕಟ್ಟಬೇಕಾಗಿ ಬರಲಿಲ್ಲ. ಇಂತಹ ಕ್ರಿಕೆಟ್ ನಾಯಕ ಶಿರೋಮಣಿಗೆ ಈಗ ಗುಜರಾತಿನ ಮೋದಿ, ದೆಹಲಿಯ ರಾಜನಾಥ ಸಿಂಗ್, ಎಲ್ಲಾ ದುಂಬಾಲು ಬೀಳುತ್ತಿದ್ದಾರೆ. ಆತ ಇವರ ಪಕ್ಷದ ಅಭ್ಯರ್ಥಿಯಾಗಬೇಕಂತೆ. ಪೈಪೋಟಿ ಆರಂಭವಾಯಿತು. ಋಣಮೂಲ ಮತ್ತು ತೃಣಮೂಲ ಕಾಂಗ್ರೆಸ್‌ಗಳೆರಡೂ ಗಂಗೂಲಿಯನ್ನು ಬಾಚಿ ತಬ್ಬಿಕೊಳ್ಳಲು ಮುಂದಾದವು. ಇನ್ನೆಲ್ಲಿ ತಬ್ಬಿಯೇ ಬಿಡುತ್ತಾರೋ ಎಂದು ಕಂಪಿಸಿದ ಬುದ್ಧದೇವ ಭಟ್ಟಾಚಾರ್ಯ ಹೇಳಿದರು, "ಛೆ, ಆತ ನಮ್ಮವನು; ಬೇರೆಯವರ ಗಾಳಕ್ಕೆ ಬೀಳುವುದಿಲ್ಲ, ಆತ ನಮ್ಮ ಅಭ್ಯರ್ಥಿ ಎಂಬುದು ಖಚಿತ" ಎಂದು. ಇದು ನಮ್ಮ ದೇಶದ "ಅಭಿವೃದ್ಧಿ ರಾಜಕೀಯ"ದ ಮಾದರಿ. ಕ್ರಿಕೆಟ್ಟಿಗ, ಸಿನಿಮಾ ತಾರೆ ಮತ್ತು ನೀಲೇಕಣಿ : ಇವರೇ ನಮ್ಮ ರಾಜಕೀಯ ಮುತ್ತುಗಳು. ದೇವಯಾನಿಯನ್ನು ಪೀಡಿಸಿದ ದೇಶದ ಮುತ್ಸದ್ದಿಗಳು ಈ ರತ್ನತ್ರಯಗಳನ್ನು ಕಂಡು ಹಿಗ್ಗುತ್ತಿದ್ದಾರಂತೆ. ತಾವು ಹೇಳಿದಂತೆ ಕೇಳಿ ಕುಣಿಯುವ ಸಂಸದರು ಅವರಿಗೆ ಅತಿ ಪ್ರಿಯರು. ವಾಲ್‌ಮಾರ್ಟ್ ಜಾಹಿರಾತಿಗೆ ಗಂಗೂಲಿ ಮತ್ತು ಹೇಮಮಾಲಿನಿ ಜೊತೆಯಲ್ಲಿ ನಟಿಸಿ ದೇಶದ ಯುವಕರಿಗೆ ಮಾನಸಿಕ ಸುಖ ನೀಡಬಹುದು. ದೇಶಕ್ಕೆ ಇನ್ನೇನು ಬೇಕು !




* * *

ಈ ಗಂಗೂಲಿಯಲ್ಲದೆ ಇನ್ನೊಬ್ಬ ಗಂಗೂಲಿ ಪ್ರತಿದಿನ ಪತ್ರಿಕೆಗಳಲ್ಲಿ ಮತ್ತು ಇತರ ಮಾಧ್ಯಮಗಳಲ್ಲಿ ಕಾಣಿಸಿಕೊಳ್ಳುತ್ತಿದ್ದಾರೆ. ಈಗ ಬರೆಯುತ್ತಿರುವುದನ್ನು 'ಹೊಸತು' ಓದುಗರು ಓದುವ ವೇಳೆಗೆ ನ್ಯಾಯಮೂರ್ತಿ ಗಂಗೂಲಿಯವರು ಮಾನವ ಹಕ್ಕುಗಳನ್ನು ಕಾಯುವ ಕಾಯಕದಿಂದ ನಿರ್ಗಮಿಸಿ ಸರ್ವೋಚ್ಚ ನ್ಯಾಯಾಲಯದ ಮುಂದೆ ಕಕ್ಷಿದಾರರಾಗಿ ನಿಂತಿರುತ್ತಾರೋ ಏನೋ ! ಮಾನ್ಯ ಸೋಮನಾಥ ಚಟರ್ಜಿಯವರ ಮಾತನ್ನು ಕಪಿಲ್ ಸಿಬಲ್ ಆಲಿಸುವ ಗೋಜಿಗೆ ಹೋಗುವುದಿಲ್ಲವೆಂದು ಶಪಥ ಮಾಡಿದ್ದಾರೆ. ಆ ಹುಡುಗಿ, ಗಂಗೂಲಿಯವರ ಬಳಿ ತರಬೇತಿ ಪಡೆಯಲು ಹೋಗಿದ್ದವಳು, ಬಿರುಗಾಳಿ ಎಬ್ಬಿಸಿಬಿಟ್ಟಿದ್ದಾಳೆ. ಎಲ್ಲಾ ಗಣಕಯಂತ್ರದ ಒಂದು 'ಟ್ವಿಟರ್'ನಿಂದ ನಡೆದುಹೋಯಿತು. ಮಹಿಳೆಯರ ರಕ್ಷಣೆಗೆ ನಮ್ಮ ಪ್ರಭುತ್ವ ಟೊಂಕಕಟ್ಟಿ ನಿಂತಿರುವುದಕ್ಕೆ ಇದೊಂದು ನಿದರ್ಶನ. ನಾನು–ನೀವು 'ಟ್ವಿಟರ್' ಬರೆದರೆ ಕೇಳುವವರಾರು ! ಬರೆದರೆ ನ್ಯಾಯಮೂರ್ತಿ ಗಂಗೂಲಿಯಂಥವರ ಕ್ರೀಡಾ ವಾಂಛಲ್ಯದ ಬಗ್ಗೆ ಬರೆಯಬೇಕು. ಆಗ ಸರ್ವೋಚ್ಚ ನ್ಯಾಯಾಲಯವು ನಿಬಂಧನೆಗಳನ್ನು ಕಡೆಗಾಣಿಸಿ ತನಿಖೆ ನಡೆಸಲು ಮೂವರು ನ್ಯಾಯಾಧೀಶರನ್ನು ನೇಮಿಸುತ್ತದೆ ಮತ್ತು ಅವರು ಜಾಗ್ರತೆ ವರದಿ ನೀಡುತ್ತಾರೆ. "ಈ ಮುದುಕನ ಅಂಗಚೇಷ್ಟೆ ನೋಡಿ" ಎಂದು ದೇಶದ ಮುಂದೆ ಪಶ್ಚಿಮ ಬಂಗಾಳದ ಮಾನವ ಹಕ್ಕು ಆಯೋಗದ ಅಧ್ಯಕ್ಷರನ್ನು ಬೆತ್ತಲೆ ನಿಲ್ಲಿಸಲು ಸರ್ವಸಿದ್ಧತೆ ನಡೆಯುತ್ತದೆ. ಅವರ ಬಳಿ ಕಲಿಯಲು ಹೋಗಿದ್ದ ಯುವತಿ ಪೊಲೀಸರಿಗೆ ಒಂದು ಸಾದಾ ದೂರು ಸಹ ದಾಖಲಿಸಬೇಕಾಗಿಲ್ಲ. ದೂರು ಸಲ್ಲಿಸಿದರೆ ನಡೆಯುವ ವಿಚಾರಣೆ ಬೇರೆ, ಈಗ 'ಟ್ವಿಟರ್'ನಿಂದ ಗಂಗೂಲಿ ಮಹಾಶಯರಿಗೆ ಆಗಿರುವ ಶಾಸ್ತಿಯೇ ಬೇರೆ. ಈ ಇಡೀ ಪ್ರಕರಣದ "ರಾಜಕೀಯ ಆರ್ಥಿಕತೆ"ಯು ಬೇರೆಯೇ ಇದೆಯೆಂಬ ಅಭಿಪ್ರಾಯವೊಂದಿದೆ. ಅದನ್ನು 'ಹೊಸತು' ಓದುಗರು ಬೇಕಾದರೆ ಪರಿಶೀಲಿಸಬಹುದು. ಆತ ಅಪರಾಧಿಯಾದರೆ ತಕ್ಕ ಶಿಕ್ಷೆ ಅನುಭವಿಸಬೇಕೆಂಬುದರ ಬಗ್ಗೆ ಭಿನ್ನಾಭಿಪ್ರಾಯವೇ ಇರಕೂಡದು. ಆದರೆ 'ನಾನು ಅಪರಾಧಿಯಲ್ಲ' ಎಂಬಾತನಿಗೆ ಏಕೆ ಅಪರಾಧಿಯಲ್ಲ ಎಂಬುದನ್ನು ಸಾಬೀತು ಪಡಿಸಲು ಅವಕಾಶ ನೀಡಬೇಕಾದ್ದು ಸಂವಿಧಾನದ ನಿರ್ದೇಶನ. ಅಭಿಪ್ರಾಯವೊಂದು ಹೀಗಿದೆ : ಯಾರೀತ ಗಂಗೂಲಿ ? ೨–ಜಿ ಹಗರಣಕ್ಕೆ ಸಂಬಂಧಿಸಿದ ಮೊಕದ್ದಮೆಯಲ್ಲಿ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಯಾಗಿ ಈತ ಇಪ್ಪತ್ತಕ್ಕೂ ಹೆಚ್ಚು ಬೃಹತ್ ಕಂಪನಿಗಳ ಅಂಡಿನ ಮೇಲೆ ಬರೆ ಹಾಕಿದ್ದವನು. ಅವರ ಲೈಸೆನ್ಸ್‌ಗಳನ್ನು ಅಸಿಂಧುವೆಂದು ತೀರ್ಪು ನೀಡಿದ್ದವನು. ಅದು ಕಪಿಲ್ ಸಿಬಲ್ ಸಚಿವಾಲಯಕ್ಕೆ ಘಾಸಿ ಉಂಟುಮಾಡಿತ್ತು. ಬೃಹತ್ ಕಂಪನಿಗಳು ತಮಗೆ ನೀಡಲಾದ ಹೊಡೆತವನ್ನು ಮರೆಯುವುದುಂಟೆ ? ಹುಲಿಯನ್ನು ಹಳ್ಳಕ್ಕೆ ಬೀಳಿಸಿ ತಲಾ ಒಂದೊಂದು ಕಲ್ಲು ಎಸೆದಿದ್ದಾರೆ. ಇಲ್ಲದಿದ್ದರೆ ಕೇವಲ ಒಂದು 'ಟ್ವಿಟರ್' ಅಷ್ಟು ಅಗಾಧವಾಗಿರುತ್ತಿತ್ತೆ ? ಸಿಬಲ್‌ರಂಥವರ ನೈತಿಕತೆಗೆ ಅಷ್ಟು ದಟ್ಟವಾಗಿ ಜಾಗೃತಿ ಮೂಡಿಸುತ್ತಿತ್ತೆ ? ಆಕೆ ಪೊಲೀಸರಿಗೆ ದೂರು ನೀಡದೆಯೇ ನ್ಯಾಯಮೂರ್ತಿಗೆ ನೀರು ಕುಡಿಸಲಾಗುತ್ತಿತ್ತೆ ?

ಈ ಅಭಿಪ್ರಾಯವನ್ನು ಅಪ್ಪಿಕೊಳ್ಳಬೇಕೆಂದು 'ಹೊಸತು' ಯಾರನ್ನೂ ಪ್ರೇರೇಪಿಸುವುದಿಲ್ಲ, ಆದರೆ ಅಂತಹ ಅಭಿಪ್ರಾಯವೊಂದಿದೆ ಮತ್ತು ಓದುಗರಿಗೆ ಅದನ್ನು ಪರಿಚಯಿಸುವುದಷ್ಟೇ ಉದ್ದೇಶ. ಪರಾಮರ್ಶೆಯು ಓದುಗರಿಗೆ ಇರುವ ಸ್ವಾತಂತ್ರ್ಯ.

ಇದೇ ಸಂದರ್ಭದಲ್ಲಿ ವಿದ್ಯುನ್ಮಾನ ಮಾಧ್ಯಮಗಳ ಮುಖಾಂತರ ದೆಹಲಿಯ ಮಧ್ಯಮ ವರ್ಗದ ಜನರನ್ನು ಸಂಪರ್ಕಿಸಿ ಚುನಾವಣೆಯಲ್ಲಿ ಜಯಭೇರಿ ಬಾರಿಸಿದ ಅರವಿಂದ ಕೇಜ್ರಿವಾಲ್ ಮತ್ತು ಅವರ ಪಕ್ಷವನ್ನು ಗಂಭೀರವಾಗಿ ಪರಿಗಣಿಸಬೇಕು. ಅವರು ಕೇವಲ ಮಾಧ್ಯಮಗಳಿಂದಾಗಿ ಗೆಲ್ಲಲಿಲ್ಲ, ಮಾಧ್ಯಮಗಳ ಮೂಲಕ ಜನಸಮುದಾಯದ ಒಂದು ಭಾಗದೊಡನೆ ಸಂಪರ್ಕ ಸಾಧಿಸಿ ಅವರನ್ನು ಕಾರ್ಯಕರ್ತರನ್ನಾಗಿಸಿಕೊಂಡರು. ಪ್ರತಿದಿನ ಬೆಳಗ್ಗೆ ಐದು ಗಂಟೆಯಿಂದ ರಾತ್ರಿ ಒಂಬತ್ತರವರೆಗೆ ದೆಹಲಿಯ ಎಲ್ಲಾ ಪ್ರದೇಶಗಳಿಗೂ

ಭೇಟಿನೀಡಿ ಜನರ ಅಹವಾಲು ಕೇಳಿದರು, ಅದಕ್ಕೆ ಪರಿಹಾರದ ಭರವಸೆ ಕೊಟ್ಟರು. ಭರವಸೆ ಈಡೇರಿಸಲು ತಮ್ಮಲ್ಲಿ ಯೋಜನೆ ಇದೆಯೆಂದು ಅವರು ಹೇಳಿದ್ದಾರೆ. ಅವರು ಸರ್ಕಾರ ರಚಿಸಿದ್ದಾರೆ, ಆದ್ದರಿಂದ ಈಗ ಅವರ ವಿಧಾನದ ಅರಿವು ನಮಗೆ ದೊರೆತೀತು. ಅವರ ಪಕ್ಷಕ್ಕೆ ಆರ್ಥಿಕ ನೀತಿಯಿಲ್ಲ, ವಿದೇಶಿ ಬಂಡವಾಳದ ಬಗೆಗೆ ನಿಖರ ನಿಲುವಿಲ್ಲ, ದುಡಿಯುವ ಜನರ ನಾಡಿಮಿಡಿತ ಅವರಿಗೆ ತಿಳಿಯುವುದಿಲ್ಲ, ಅವರಿಗೆ ಎನ್‌ಜಿಓಗಳ ಬೆಂಬಲ ಮಾತ್ರ ಇದೆ, ಎಂದೆಲ್ಲಾ ಹೀಗಳೆಯುವ ಬದಲು ಅವರ ಅದ್ಭುತ ಜಯದ ಹಿಂದಿನ ಶ್ರಮವನ್ನು ಗುರುತಿಸಬೇಕು, ಅನುಕರಿಸಬೇಕು. ಅವರ ಜನಸಂಪರ್ಕ ವಿಧಾನಕ್ಕೆ ಜನಪರ ಆರ್ಥಿಕ ನೀತಿಯ ಸೂತ್ರಗಳನ್ನು ಕಸಿಮಾಡಿದರೆ ಎಂತಹ ಸಾಧನೆಯಾಗುತ್ತದೆಂಬುದರತ್ತ ಗಮನ ಹರಿಸಬೇಕು. ಮಧ್ಯಮ ವರ್ಗವು ಎಡಪಕ್ಷಗಳ ಹೋರಾಟದ ಲಾಭ ಪಡೆದುಕೊಳ್ಳುತ್ತದೆ, ಆದರೆ ಚುನಾವಣೆಯಲ್ಲಿ ಬೆಂಬಲ ನೀಡುವುದಿಲ್ಲ. ಮಧ್ಯಮ ವರ್ಗವಷ್ಟೇ ಏಕೆ, ಛತ್ತೀಸಗಢದಲ್ಲಿ ಸಾಲ್ವಾ ಜುಡುಂನಿಂದ ಸಂಕಷ್ಟಕ್ಕೆ ಸಿಲುಕಿದ್ದ ಜನ ಕಮ್ಯುನಿಸ್ಟ್ ಪಕ್ಷದ ನಾಯಕತ್ವದಲ್ಲಿ ಹೋರಾಡಿದರು, ಆದರೆ ಪಕ್ಷದ ಅಭ್ಯರ್ಥಿಯನ್ನು ಗೆಲ್ಲಿಸಲಿಲ್ಲ. ಎಡಪಕ್ಷಗಳ ಹೋರಾಟವನ್ನು ಕೇಜ್ರಿವಾಲ್ ಪಕ್ಷದ ಜನಸಂಪರ್ಕ ವಿಧಾನದೊಂದಿಗೆ ಅನುಷ್ಠಾನಕ್ಕೆ ತಂದರೆ ಮನಮೋಹನ ಸಿಂಗ್ ಮತ್ತು ನರೇಂದ್ರ ಮೋದಿ, ಇಬ್ಬರನ್ನೂ ಹದ್ದುಬಸ್ತಿನಲ್ಲಿಡಲು ಸಾಧ್ಯ. ಕೇವಲ ಟ್ವಿಟರ್ ಏನೇನೂ ಸಾಲದು, ಆದರೆ ಅದರ ಬಳಕೆಯು ವರ್ಜ್ಯವಲ್ಲ.

✳ ✳ ✳

ಕಡೆಗೂ ಮಾನ್ಯ ವೀರಪ್ಪ ಮೊಯ್ಲಿಯವರು ಮುಖೇಶ ಅಂಬಾನಿಯ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸಿದ್ದಾರೆ. ಅದು "ದೇಶದ ಆರ್ಥಿಕ ಅಭಿವೃದ್ಧಿಗೆ ಅತ್ಯವಶ್ಯಕ" ಎಂದು ಸಹ ಹೇಳಿದ್ದಾರೆ. ಎರಡು ವರ್ಷಗಳಿಂದ ನಡೆದ ಜಗ್ಗಾಟದಲ್ಲಿ ಭಾರಿ ಬಂಡವಾಳವು ವಿಜಯಿಯಾಗಲು ಮೊಯ್ಲಿಯವರ ಕಾಣಿಕೆ ಅಪಾರವಾಗಿದೆ. ಅಂಬಾನಿ ಕಂಪನಿಯು ಮೊಯ್ಲಿಯವರಿಗೆ ಕೇವಲ ಬಾಯಿಮಾತಿನಲ್ಲಿ ಗೌರವ ಮತ್ತು ಕೃತಜ್ಞತೆ ಸಲ್ಲಿಸುವುದಿಲ್ಲವೆಂಬುದು ನಿಶ್ಚಿತ. ಈವರೆಗೆ ಅನಿಲವಿರದಿದ್ದ ಬಾವಿಯಲ್ಲಿ ಇನ್ನು ಮುಂದೆ ಅನಿಲ ಹೇರಳವಾಗಿ ದೊರೆಯುತ್ತದೆ; ಅದೊಂದು ಬಂಡವಾಳಶಾಹಿ ಪವಾಡ. ಅನಿಲದ ಬೆಲೆಯನ್ನು ಶೇಕಡ ನೂರರಷ್ಟು ಹೆಚ್ಚಿಸಿದ ಮೊಯ್ಲಿಯವರ ಪ್ರಕಾರ ಬೆಲೆ ಹೆಚ್ಚಿಸದಿದ್ದರೆ ವಿದೇಶಗಳಿಂದ ಇನ್ನೂ ಹೆಚ್ಚಿನ ಬೆಲೆ ನೀಡಿ ಅನಿಲವನ್ನು ಆಮದು ಮಾಡಿಕೊಳ್ಳಬೇಕಾಗುತ್ತದಂತೆ. ಇದು ಶುದ್ಧ ಸುಳ್ಳು ಮತ್ತು ಮೋಸ. ಹಿಂದಿನ ಒಪ್ಪಂದದ ಪ್ರಕಾರ ನಡೆದುಕೊಳ್ಳದ ಅಂಬಾನಿಯಿಂದ ಬಾವಿಗಳನ್ನು ವಶಪಡಿಸಿಕೊಂಡು ಸಾರ್ವಜನಿಕ ವಲಯವು ಉದ್ಯಮವನ್ನು ಸೊಗಸಾಗಿ ಬೆಳೆಸಬಹುದಿತ್ತು ; ೪೫,೦೦೦ ಕೋಟಿ ರೂಪಾಯಿಗಳ ಲಾಭ ಪಡೆಯಬಹುದಿತ್ತು. ಆದರೆ ಅಂಬಾನಿ ಆಣತಿಯ ಮುಂದೆ ಮೊಯ್ಲಿ ಕುಸಿದುಹೋದರು. ಖಾಸಗೀಕರಣದ ಶ್ರೇಷ್ಠತೆಯನ್ನು ಹಿಗ್ಗಾಮುಗ್ಗಾ ಎತ್ತಿ ಹಿಡಿಯುವ ಆರ್ಥಿಕ ತಜ್ಞರು ಈ ಪ್ರಕರಣವನ್ನು ಕಂಡಾದ ಮೇಲೂ ತಲೆ ತೊಳೆದುಕೊಳ್ಳದಿದ್ದರೆ ನಮ್ಮ ಸಂಪತ್ತು ಹೀಗೆಯೇ ಲೂಟಿಯಾಗುತ್ತಿರುತ್ತದೆ. ಪಾರ್ಲಿಮೆಂಟಿನಲ್ಲಿ ಅಂಬಾನಿ ಏಜೆಂಟರು ತುಂಬದಂತೆ ಮಾಡುವ ಜವಾಬ್ದಾರಿ ಜನರ ಮೇಲಿದೆ.

✳ ✳ ✳

ಕೇಂದ್ರ ಕಾರ್ಮಿಕ ಸಚಿವರಾಗಿ ಶ್ರೀ. ಓಲ ಎಂಬುವವರೊಬ್ಬರು ಇದ್ದರೆಂಬುದು ಅವರ ನಿಧನದಿಂದಾಗಿ ಎಲ್ಲರಿಗೂ ಇದೀಗ ತಿಳಿದುಬಂದಿದೆ. ಆರು ತಿಂಗಳಿಗೂ ಹೆಚ್ಚು ಕಾಲ ಅವರು ಯಾವ ಕೆಲಸವನ್ನೂ ಮಾಡಲಾಗದಂತಹ ದೇಹಸ್ಥಿತಿ ಹೊಂದಿದ್ದರಂತೆ, ಆದರೂ ಸಚಿವರಾಗಿಯೇ ಮುಂದುವರಿದಿದ್ದರು. ಕೇಂದ್ರ ಸರ್ಕಾರದ ಬಜೆಟ್‌ನಲ್ಲಿ ಅವರು ನಿರ್ವಹಿಸಬೇಕಾಗಿದ್ದ ವಿಭಾಗಗಳಿಗೆ ತೆಗೆದಿರಿಸಲಾಗಿದ್ದ ಹಣದಲ್ಲಿ ಸುಮಾರು ಹದಿಮೂರು ಸಾವಿರ ಕೋಟಿ ರೂಪಾಯಿಗಳು ಖರ್ಚಾಗಿಲ್ಲವಂತೆ. ಅಂದರೆ, ಆ ವಿಭಾಗದ ಯಾವ ಯೋಜನೆಯೂ ಕಾರ್ಯಗತಗೊಳ್ಳಲಿಲ್ಲ ವೆಂದರ್ಥ. ದುಡಿಮೆಗಾರರಿಗೆ ಮನಮೋಹನ ಸಿಂಗ್ ಸರ್ಕಾರ ನೀಡಿದ ಮನ್ನಣೆ ಇಂಥದು. ದುಡಿಮೆಗಾರರಾಗಲಿ, ಅವರ ಸಂಘಟಿತ ಹೋರಾಟವಾಗಲಿ ಸಿಂಗ್ ಸಾಹೇಬರ ತಲೆಯೊಳಗೆ ಸುಳಿಯುವಂತಿಲ್ಲ. ಅಂಥವರನ್ನು ಇನ್ನೆಷ್ಟು ಕಾಲ ದುಡಿಮೆಗಾರರು ಸಲಹಬೇಕು, ಸಹಿಸಬೇಕು ? ದುಡಿಯುವ ಜನರ ಆಲೋಚನೆಗೆ ಇದು ಒಳ್ಳೆಯ ಸಾಮಗ್ರಿ.

✳ ✳ ✳

ಉನ್ನತ ಶಿಕ್ಷಣ, ಅದರಲ್ಲೂ ವೃತ್ತಿಶಿಕ್ಷಣ ಯದ್ವಾತದ್ವಾ ದುಬಾರಿಯಾಗಿ ಬೆಳೆದಿರುವ ಗೊಂದಲದ ಗೂಡು ನಮ್ಮ ರಾಜ್ಯದಲ್ಲಿ. ವ್ಯಾಪಾರೀಕರಣಗೊಂಡ ಈ ಕ್ಷೇತ್ರ ಯಾವತ್ತೂ ವಿದ್ಯಾರ್ಥಿಗಳಿಗೆ, ಪೋಷಕರಿಗೆ ಆತಂಕಕಾರಿ. ಖಾಸಗಿ ವಿದ್ಯಾಸಂಸ್ಥೆಗಳು, ಸರಕಾರ, ನ್ಯಾಯಾಲಯ ಇವುಗಳ ಮಧ್ಯೆ ಹಗ್ಗಜಗ್ಗಾಟದಿಂದ ಉನ್ನತ ಶಿಕ್ಷಣ ಪಡೆಯಬೇಕು ಎನ್ನುವ ಬಡ ವಿದ್ಯಾರ್ಥಿಗಳ ಕನಸು ಭಗ್ನ. 'ಕ್ಯಾಪಿಟೇಶನ್ ಫೀ' ಎನ್ನುವ ಪಿಡುಗನ್ನು ಹುಟ್ಟುಹಾಕಿದ ರಾಜ್ಯ ಅಂದರೆ ನಮ್ಮದು. ಲಕ್ಷಗಟ್ಟಳೆ ಹಣ ಸುರಿದು ವೈದ್ಯಕೀಯ, ಇಂಜಿನಿಯರಿಂಗ್ ಸೀಟು ಗಿಟ್ಟಿಸಿ ಕೊಳ್ಳುವವರ ಸಂಖ್ಯೆ ಕಡಿಮೆ ಏನಿಲ್ಲ. ಈ ವ್ಯಾಪಾರ ಹೆಚ್ಚಿದ ಮೇಲೆ ಹುಟ್ಟಿಕೊಂಡ ಬಹಳಷ್ಟು ಖಾಸಗಿ ವೃತ್ತಿಶಿಕ್ಷಣ ಸಂಸ್ಥೆಗಳು ರಾಜಕಾರಣಿಗಳು, ಮಠಾಧೀಶರುಗಳ ಅಧೀನದಲ್ಲಿರುವುದು ದೊಡ್ಡ ಪವಾಡವೇನಲ್ಲ. ಇದೇ ವ್ಯವಹಾರವನ್ನು ಪ್ರಾಥಮಿಕ ಶಾಲೆಯಿಂದ ಮೇಲಿನವರೆಗೆ ನಾವು ರಾಜ್ಯದಲ್ಲಿ ಕಾಣುತ್ತಿದ್ದೇವೆ. ಈ ಶೈಕ್ಷಣಿಕ ಲಾಬಿ ಎಷ್ಟು ಪ್ರಬಲವಾಗಿದೆಯೆಂದರೆ ಸರಕಾರದ ಬುಡವನ್ನೇ ಅಲುಗಾಡಿಸುತ್ತಿದೆ. ಕನ್ನಡ ಮಾಧ್ಯಮ ಕಡ್ಡಾಯಗೊಳಿಸುವ ವಿಚಾರದಲ್ಲಿ ಸರಕಾರದ ನಿಸ್ಸಹಾಯಕತೆಯನ್ನು ನಾವು ನೋಡುತ್ತಿದ್ದೇವೆ. ಅದು ಬೇರೆಯೇ ವಿಷಯವಾಗುತ್ತದೆ ಬಿಡಿ.

ಈಗ ರಾಜ್ಯ ಸರ್ಕಾರ ಸುಪ್ರೀಮ್ ಕೋರ್ಟ್ ಆದೇಶದ ಮೇರೆಗೆ ಕರ್ನಾಟಕ ವೃತ್ತಿಶಿಕ್ಷಣಕ್ಕೆ ಸಂಬಂಧಪಟ್ಟಂತೆ ೨೦೦೬ರಲ್ಲಿ ಮಾಡಿದ್ದ ಕಾಯಿದೆಯನ್ನು ಜಾರಿಗೆ ತರಲು ಮುಂದಾಗಿದೆ. ಇದರಿಂದ ಖಾಸಗಿ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಕಾಲೇಜುಗಳಲ್ಲಿ ಮೀಸಲಾಗಿರಿಸುತ್ತಿದ್ದ ಸರಕಾರಿ ಸೀಟುಗಳಿಗೆ ಕತ್ತರಿ ಬೀಳುತ್ತದೆ. ಇದಲ್ಲದೆ ಖಾಸಗಿ ವಿದ್ಯಾಸಂಸ್ಥೆಗಳು ವಿಧಿಸುವ ಶುಲ್ಕದ ಮೇಲೆ ಯಾವುದೇ ಬಗೆಯ ನಿಯಂತ್ರಣ ಇರುವುದಿಲ್ಲ. ಇದರಿಂದ ಖಾಸಗಿ ಸಂಸ್ಥೆಗಳ ಯಜಮಾನರು ಆಡಿದ್ದೇ ಆಟ ಆಗುತ್ತದೆ. ಶ್ರೀಮಂತರು, ಐಟಿ, ಬಿಟಿಯವರು ಇದನ್ನು ಹೇಗೋ ನಿಭಾಯಿಸಿ ಕೊಳ್ಳುತ್ತಾರೆ, ಆದರೆ ನಿಜವಾಗಿ ವಂಚಿತರಾಗುವವರು ದುರ್ಬಲವರ್ಗದವರು.

ಸರಕಾರ ಇದನ್ನು ನಿವಾರಿಸಲು ಏನಾದರೂ ಕ್ರಮ ಕೈಗೊಳ್ಳಬೇಕು. ಕೇವಲ ಕಾನೂನಿನ ದೃಷ್ಟಿಯಿಂದ ನ್ಯಾಯಾಲಯಗಳು ನೋಡುತ್ತವೆಯೇ ಹೊರತು ಸಾಮಾಜಿಕ ನ್ಯಾಯದ ಹಿತದಿಂದ ನೋಡುವುದಿಲ್ಲ. ಇದನ್ನು ಚೆನ್ನಾಗಿ ಮನದಟ್ಟು ಮಾಡಿಕೊಂಡಿರುವ ಖಾಸಗಿ ವಿದ್ಯಾಸಂಸ್ಥೆಗಳು ನ್ಯಾಯಾಲಯದ ಮೆಟ್ಟಿಲೇರುತ್ತವೆ. ಸಾಕಷ್ಟು ಹಣ ಇವರ ಬಳಿ ಇರುವುದರಿಂದ ಸಮರ್ಥ ವಕೀಲರನ್ನು ನೇಮಿಸಿ ಕೊಂಡು ತಮ್ಮ ಬೇಳೆ ಬೇಯಿಸಿಕೊಳ್ಳುತ್ತಾರೆ. ಸುಪ್ರೀಮ್ ಕೋರ್ಟಿನ ತೀರ್ಮಾನ ಏನೇ ಇದ್ದರೂ ಸರಕಾರ ದುರ್ಬಲ ವರ್ಗಗಳ ನೆರವಿಗೆ ಬರಲು ಸೂಕ್ತ ಕ್ರಮ ಕೈಗೊಳ್ಳುವುದು ಅಗತ್ಯವಾಗಿದೆ. ಪ್ರತಿ ವರ್ಷವೂ ಕೂಡ ವೃತ್ತಿಶಿಕ್ಷಣಕ್ಕೆ ಸಂಬಂಧಿಸಿದಂತೆ ಏನಾದರೂ ಒಂದು ಗೋಳು ಇದ್ದೇ ಇರುತ್ತದೆ. ಈ ಸಂಸ್ಥೆಗಳಿಗೆ ಪ್ರವೇಶ ಪ್ರಾರಂಭವಾದಾಗ ವಿದ್ಯಾರ್ಥಿಗಳ, ಪೋಷಕರ ಪರದಾಟ ನೋಡುತ್ತಲೇ ಇದ್ದೇವೆ. ಈ ಫಜೀತಿ ಅಂತ್ಯಗೊಳಿಸಲು ಸರಕಾರ ಏನಾದರೂ ಕ್ರಮ ಕೈಗೊಳ್ಳುವುದೇ ?

✳ ✳ ✳

ಅಮೆರಿಕದ ಪೊಲೀಸರು ಭಾರತದ ರಾಜತಾಂತ್ರಿಕ ಅಧಿಕಾರಿ ದೇವಯಾನಿ ಖೋಬ್ರಾಗಡೆ ಅವರನ್ನು ನಡುದಾರಿಯಲ್ಲೇ ಬಂಧಿಸಿ, ಕೈಗೆ ಕೋಳ ತೊಡಿಸಿ ಅವಮಾನಿಸಿದ ಪ್ರಕರಣ ಉಭಯ ರಾಷ್ಟ್ರಗಳ ನಡುವಿನ ಸಂಬಂಧದಲ್ಲಿ ಕೋಲಾಹಲ ಎಬ್ಬಿಸಿದೆ. ಭಾರತದಲ್ಲಿ ಈ ಬಗ್ಗೆ ಆಕ್ರೋಶ ವ್ಯಕ್ತವಾಗಿದೆ. ಅಮೆರಿಕದ ಪೊಲೀಸರ ಅಸಭ್ಯ ವರ್ತನೆಯನ್ನು ಎಲ್ಲರೂ ಖಂಡಿಸಿದ್ದಾರೆ. ಅಪರೂಪವಾಗಿ ಸರಕಾರ ತೀವ್ರವಾಗಿ ಪ್ರತಿಕ್ರಿಯೆ ವ್ಯಕ್ತಪಡಿಸಿರುವುದು ಹಾಗೂ ಭಾರತದಲ್ಲಿರುವ ಅಮೆರಿಕದ ರಾಯಭಾರಿ ಕಚೇರಿಗೆ ಒದಗಿಸಿದ್ದ ವಿಶೇಷ ಭದ್ರತೆಯನ್ನು ಪ್ರತೀಕಾರ ಕ್ರಮವಾಗಿ ಹಿಂತೆಗೆದು ಕೊಂಡಿರುವುದು ಅತಿಯಾಯಿತೆನಿಸಿದರೂ ಅವಶ್ಯಕ. ಅಮೆರಿಕದ ಉದ್ಧಟತನದ ನಡವಳಿಕೆಗಳನ್ನು ಕಡೆಗಣಿಸುವುದು ಸರಕಾರದ ಜಾಯಮಾನ. ಅದು ಏನೇ ಅಪಚಾರ ಮಾಡಿದರೂ ಯಾವಾಗಲೂ ಸಹಿಸಿಕೊಳ್ಳುವ ಮನೋವೃತ್ತಿ ಸರಕಾರದ್ದು. ಕೆಲ ತಿಂಗಳ ಹಿಂದೆ ಅಮೆರಿಕದ ಭದ್ರತಾ ಸಂಸ್ಥೆ ನಡೆಸುತ್ತಿದ್ದ ದೂರವಾಣಿ ಕದ್ದಾಲಿಕೆ ಹಾಗೂ ಖಾಸಗಿ ಇ–ಮೇಲ್‌ಗಳ ತಪಾಸಣೆ ಕುರಿತು ಮನೋಮೋಹನ್ ಸಿಂಗ್ ಸರಕಾರ ಕಿಮಕ್ ಕಮಕ್ ಎನ್ನಲಿಲ್ಲ. ಈಗ ವೀರಾವೇಶ ತೋರುತ್ತಿರುವ ವಿದೇಶಾಂಗ ಸಚಿವರು ಅಂಥವು ಯಾವತ್ತೂ ನಡೆಯುತ್ತಿರುತ್ತದೆ ಎಂದು ಹಾರಿಕೆಯ, ಬೇಜವಾಬ್ದಾರಿ ಹೇಳಿಕೆ ನೀಡಿದ್ದು ಮರೆತಿಲ್ಲ. ದೇವಯಾನಿ ಪ್ರಕರಣದಲ್ಲಿ ಅಮೆರಿಕದ ಪೊಲೀಸರ ಅಸಭ್ಯ ವರ್ತನೆ ಅನಾಗರಿಕ, ಎಲ್ಲ ಅಂತರರಾಷ್ಟ್ರೀಯ ನಿಬಂಧನೆಗಳ

೧೮ನೇ ಪುಟಕ್ಕೆ

ಸಂಪಾದಕೀಯ

# ೨೦೧೪ ಎಷ್ಟು ನೂತನವಾದೀತು ?

'**ಹೊ**ಸತು' ತನ್ನ ಪ್ರಕಟಣೆಯ ಹದಿನೈದನೇ ವರ್ಷಕ್ಕೆ ಕಾಲಿಟ್ಟಿದೆ. ವೈಚಾರಿಕ ಬದ್ಧತೆ, ತಾತ್ವಿಕ ನಿಲುವು, ಜನಪರ ಆಶಯಗಳನ್ನಿಟ್ಟುಕೊಂಡು ಒಂದು ಪತ್ರಿಕೆ ಇಷ್ಟು ವರ್ಷ ನಿರಂತರವಾಗಿ ನಡೆಯುವುದು ಸುಲಭದ ವಿಷಯವಲ್ಲ. ಈ ದಿನಗಳಲ್ಲಿ ಪತ್ರಿಕೆಯ ಜೊತೆ ನಿಂತ ಓದುಗರ, ಲೇಖಕರ, ಕಲಾವಿದರ, ಜಾಹಿರಾತುದಾರರ, ಹಿತೈಷಿಗಳ ಬೆಂಬಲ, ಪ್ರೋತ್ಸಾಹದಿಂದ ಇದು ಸಾಧ್ಯವಾಗಿದೆ. ನಾಡಿನ ಹಿರಿಯ ಚಿಂತಕರು, ಜನಪರ ಹೋರಾಟಗಾರರು, ಯುವ ಬರಹಗಾರರು 'ಹೊಸತು'ಗೆ ಬರೆದು ಸಲಹೆ, ಸೂಚನೆ ಕೊಟ್ಟು ಅದರ ಬೆಳವಣಿಗೆಗೆ ಮತ್ತು ವೈವಿಧ್ಯತೆಗೆ ಕಾರಣರಾಗಿದ್ದಾರೆ. ಈ ಹದಿನೈದು ವರ್ಷಗಳಲ್ಲಿ ಪತ್ರಿಕೆಗೆ ಅವರೆಲ್ಲ ನೀಡಿದ ಸಹಕಾರವನ್ನು ಹೊಸತು ಬಳಗ ವಿನಮ್ರತೆಯಿಂದ ಸ್ಮರಿಸುತ್ತದೆ ಹಾಗೂ ಮುಂದೆಯೂ ಇದೇ ರೀತಿ ತಮ್ಮ ಸಹಕಾರ, ಪ್ರೋತ್ಸಾಹ ಇರಲೆಂದು ವಿನಂತಿಸುತ್ತದೆ. ಪತ್ರಿಕೆ ಅರ್ಥಪೂರ್ಣವಾಗಿ ಬರಲು, ಹೆಚ್ಚು ಜನರನ್ನು ತಲುಪಲು ನಮ್ಮ ನಾಡಿನ ಹೆಮ್ಮೆಯ ನವಕರ್ನಾಟಕ ಪ್ರಕಾಶನ ಸಂಸ್ಥೆ ಹಾಗೂ ಸಿಬ್ಬಂದಿಯ ಶ್ರಮ ಕಾರಣವಾಗಿದೆ. ಈ ಎಲ್ಲರಿಗೂ 'ಹೊಸತು' ಸಂಪಾದಕ ಮಂಡಲಿ ವಂದನೆಗಳನ್ನು ಸಲ್ಲಿಸುತ್ತದೆ.

ವಿಶ್ವ ದಿನೇ ದಿನೇ ಚಿಕ್ಕದಾಗುತ್ತಿದೆ. ವಿಶ್ವದ ವಿದ್ಯಮಾನಗಳು ಪ್ರತಿ ಮನೆಯ ವಿದ್ಯಮಾನಗಳಾಗುತ್ತಿವೆ. ನಮ್ಮ ರಾಜ್ಯ, ದೇಶ, ವಿಶ್ವ ಅನೇಕ ಅಹಿತಕಾರಿ, ಆತಂಕಕಾರಿ ಘಟನೆ, ಬೆಳವಣಿಗೆಗಳಿಗೆ ಸಾಕ್ಷಿಯಾಗುತ್ತಿವೆ. ಕಳೆದ ವರ್ಷ ಅದರ ಹಿಂದಿನ ವರ್ಷಕ್ಕಿಂತ ಹೆಚ್ಚು ಆತಂಕಕಾರಿಯಾಗಿತ್ತು. ಸೀಮಿತವಾದ ಗುಣಾತ್ಮಕ ಬೆಳವಣಿಗೆಗಳೂ ಇದ್ದವು ಎನ್ನುವುದೂ ಸತ್ಯ. ಹೊಸ ವರ್ಷ ಬಂದಿದೆ. ಹೊಸ ಸವಾಲು, ಸಾಧ್ಯತೆಗಳು ನಮ್ಮ ಮುಂದಿವೆ. ಈ ಹೊಸ ವರ್ಷ ಎಲ್ಲರ ಬದುಕಿಗೆ ನೆಮ್ಮದಿ ತರಲಿ, ಆ ನಿಟ್ಟಿನಲ್ಲಿ ನಮ್ಮೆಲ್ಲರ ಪ್ರಯತ್ನಗಳು ಯಶಸ್ವಿಯಾಗಲಿ ಎಂದು ಆಶಿಸುತ್ತಾ, 'ಹೊಸತು' ಮತ್ತು ನಿಮ್ಮ ಸಂಬಂಧ 'ನೆಮ್ಮದಿಯ ನಾಳೆ ನಮ್ಮದು' ಎಂದು ಹೇಳಲು ಗಟ್ಟಿಯಾಗಿರಲಿ. ಈ ಸಲದ ವಿಶೇಷ ಸಂಚಿಕೆ 'ಅಂಧಶ್ರದ್ಧೆ – ವೈಜ್ಞಾನಿಕ ಮನೋಭಾವ' ಈ ವಿಷಯವನ್ನು ಕೇಂದ್ರವಾಗಿಟ್ಟುಕೊಂಡು, ಪ್ರತಿವರ್ಷದಂತೆ ವಿವಿಧ ವಿಷಯಗಳನ್ನೊಳಗೊಂಡು ತಮ್ಮ ಕೈಸೇರಿದೆ. ಓದುಗರ ಅನಿಸಿಕೆ ಸಲಹೆ ಸೂಚನೆಗಳಿಗೆ ಎಂದಿನಂತೆ ಸದಾ ಸ್ವಾಗತ.

* * *

ದೇಶ ಮತ್ತೊಂದು ಚುನಾವಣೆಗೆ ಸಿದ್ಧವಾಗುತ್ತಿದೆ. ಈಗಾಗಲೇ ಚುನಾವಣೆಯ ಪೂರ್ವ ತಯಾರಿ ದೇಶದ ಎಲ್ಲ ರಾಜಕೀಯ ಪಕ್ಷಗಳಲ್ಲೂ ನಡೆದಿದೆ. ಸಾಮಾಜಿಕ ವಲಯದಲ್ಲೂ ಹಿಂದೆಂದಿಗಿಂತಲೂ ಈ ಬಾರಿ ಬರುವ ಲೋಕಸಭೆ ಚುನಾವಣೆಯ ಹಿನ್ನೆಲೆಯಲ್ಲಿ ಚಿಂತನ–ಮಂಥನ ನಡೆದಿದೆ. ಹಿಂದಿನ ಚುನಾವಣೆಗಳ ಸಂದರ್ಭದಲ್ಲಿ ರಾಜಕೀಯ ಪಕ್ಷಗಳ ಕುರಿತು ಚರ್ಚೆ ನಡೆಯುತ್ತಿದ್ದರೆ ಈ ಬಾರಿ ಚುನಾವಣಾ ವ್ಯವಸ್ಥೆಯ ಕುರಿತೇ ವಿಭಿನ್ನ ಅಭಿಪ್ರಾಯಗಳು ವ್ಯಕ್ತವಾಗುತ್ತಿವೆ. ಇದು ಒಂದು ವ್ಯವಸ್ಥೆ ಇಷ್ಟು ದಿನ ನಡೆದುಕೊಂಡು ಬಂದ ಮಾರ್ಗದ ವೈಫಲ್ಯವನ್ನು ಬಿಂಬಿಸುತ್ತದೆ. ಪ್ರಸ್ತುತ ಚುನಾವಣಾ ಪದ್ಧತಿ ನಮ್ಮ ಪ್ರಜಾಸತ್ತೆಯ ಆಶಯಗಳನ್ನು ಪೂರೈಸಲು ಅಸಮರ್ಥವಾಗಿರುವುದೇ ಈ ವೈಫಲ್ಯಕ್ಕೆ ಕಾರಣವಾಗಿದೆ. ಈ ವ್ಯವಸ್ಥೆಯಲ್ಲಿ ಆಯ್ಕೆಯಾಗುವ ಪ್ರತಿನಿಧಿ ಅಥವಾ ಆಡಳಿತಕ್ಕೆ ಬರುವ ಪಕ್ಷ ಬಹುಜನತೆಯನ್ನು ಪ್ರತಿನಿಧಿಸುವುದಿಲ್ಲ ಎಂಬುದು ಒಂದು ಅಂಶವಾದರೆ, ಅಧಿಕಾರಕ್ಕೆ ಬರುತ್ತಿರುವ ಬಹುತೇಕ ಪಕ್ಷಗಳು ಜನವಿರೋಧಿಯಾಗುತ್ತಿವೆ ಹಾಗೂ ಭ್ರಷ್ಟಾಚಾರ, ಅಪರಾಧ, ಸ್ವಜನ ಪಕ್ಷಪಾತದಲ್ಲಿ ಮುಳುಗಿಹೋಗಿವೆ ಎಂಬುದು ಇನ್ನೊಂದು ಅಂಶ. ಇಂಥ ಪಕ್ಷಗಳನ್ನು ನಿಯಂತ್ರಿಸುವುದು ಪ್ರಸ್ತುತ ಚುನಾವಣಾ ಪದ್ಧತಿಯಿಂದ ಸಾಧ್ಯವಾಗುತ್ತಿಲ್ಲ ಎಂಬುದು ವಾಸ್ತವ ಸಂಗತಿ. ನಮ್ಮ ದೇಶದ ಈಗಿನ ಚುನಾವಣಾ ವ್ಯವಸ್ಥೆಯನ್ನು ಸುಧಾರಿಸಲು ಹಲವಾರು ಪ್ರಯತ್ನಗಳನ್ನು ಹಲವಾರು ಸಮಿತಿಗಳ ಮೂಲಕ ಮಾಡಲಾಗಿದೆ. ನಮ್ಮ ಚುನಾವಣಾ ಆಯೋಗವೂ ಸಾಕಷ್ಟು ಪ್ರಯತ್ನ ಮಾಡಿದೆ. ಆದರೂ ಜಾತಿ, ಹಣ, ತೋಳ್ಬಲ, ಅಪರಾಧದ ಹಿನ್ನೆಲೆಯನ್ನು ನಿಯಂತ್ರಿಸಲಾಗುತ್ತಿಲ್ಲವೆಂಬುದು ಸತ್ಯ. ಇಂಥ ಸಂದರ್ಭದಲ್ಲಿ ಚುನಾವಣಾ ವ್ಯವಸ್ಥೆಯನ್ನೇ ಬದಲಾವಣೆ ಮಾಡಬೇಕೆನ್ನುವ ಚಿಂತನೆಗಳು ಆರಂಭವಾಗಿವೆ. ಇಂಥ ಚಿಂತನೆಗಳಿಗೆ ಎರಡು ಆಯಾಮಗಳಿರುವುದನ್ನು ಮುಖ್ಯವಾಗಿ ಗಮನಿಸಬೇಕು. ಪ್ರಸ್ತುತ ವ್ಯವಸ್ಥೆಯ 'ಜನತಂತ್ರೀಕರಣ'ದ ಚಿಂತನೆ ಒಂದು ಆಯಾಮವಾದರೆ 'ಕಾರ್ಪೋರೇಟೀಕರಣ' ಇನ್ನೊಂದು ಆಯಾಮ. ದ್ವಿಪಕ್ಷೀಯ ಪದ್ಧತಿ, ಅಧ್ಯಕ್ಷ ಮಾದರಿ, ಇಂಥ ರಾಜಕೀಯ ಕೇಂದ್ರೀಕರಣದ ಮಾದರಿಗಳನ್ನು ಬಹುರಾಷ್ಟ್ರೀಯ ಕಂಪನಿಗಳು ಪ್ರತಿಪಾದಿಸುತ್ತಿವೆ. ಅನುಪಾತ ಮಾದರಿ, ಅರೆ ಅನುಪಾತ ಮಾದರಿಗಳನ್ನು ಜನಪರ ಚಳುವಳಿಗಾರರು, ಎಡಪಂಥೀಯರು ಪ್ರತಿಪಾದಿಸುತ್ತಿದ್ದಾರೆ. ಈ ಸಂದರ್ಭದಲ್ಲಿ ಒಂದು ವಿಷಯವನ್ನು ಸ್ಮರಿಸಿಕೊಳ್ಳುವುದು ಒಳಿತು. ೧೯೯೮ರಲ್ಲಿ ಕೇಂದ್ರ ಸರಕಾರ ಅಂದಿನ ಎಂಟು ಜನ ಪಾರ್ಲಿಮೆಂಟ್ ಸದಸ್ಯರ ಸಮಿತಿಯನ್ನು ಸಂಸದ ಇಂದ್ರಜಿತ್ ಗುಪ್ತ ಅವರ ಅಧ್ಯಕ್ಷತೆಯಲ್ಲಿ ರಚಿಸಿತ್ತು. 'ಪ್ರಭುತ್ವ ನಿಧಿ' (ಸ್ಟೇಟ್ ಫಂಡಿಂಗ್) ವಿಷಯ ಕುರಿತು ಅಧ್ಯಯನ ಮಾಡಿ ವರದಿ ಸಲ್ಲಿಸುವುದು ಈ ಸಮಿತಿಯ ಗುರಿಯಾಗಿತ್ತು. ಆ ವರದಿಯಲ್ಲಿ ಕಾರ್ಪೋರೇಟ್ ಕಂಪನಿಗಳು ರಾಜಕೀಯ ಪಕ್ಷಗಳಿಗೆ ದೇಣಿಗೆ ಕೊಡುವುದನ್ನು ನಿಷೇಧಿಸಬೇಕೆಂಬ ಪ್ರಸ್ತಾಪವನ್ನು ಇಂದ್ರಜಿತ್ ಗುಪ್ತ ಮಾಡುತ್ತಾರೆ. ಇದಕ್ಕೆ ಇನ್ನೊಬ್ಬ ಸಮಿತಿಯ ಸದಸ್ಯ ಸಂಸದ ಸೋಮನಾಥ ಚಟರ್ಜಿ ಬೆಂಬಲಿಸುತ್ತಾರೆ. ಆದರೆ ಉಳಿದ ಬಹುತೇಕ ಸದಸ್ಯರು ಈ ಪ್ರಸ್ತಾಪವನ್ನು ವಿರೋಧಿಸುತ್ತಾರೆ. ಮಾತ್ರವಲ್ಲ ತಮ್ಮ ಪಕ್ಷಗಳನ್ನು ನಡೆಸಲು ಕಾರ್ಪೋರೇಟ್ ಕಂಪನಿಗಳ ದೇಣಿಗೆ ಅವಶ್ಯವೆಂದು ವಾದಿಸುತ್ತಾರೆ. ಹೀಗೆ ಹೇಳಿದವರಲ್ಲಿ ಕಾಂಗ್ರೆಸ್, ಬಿ.ಜೆ.ಪಿ. ಪಕ್ಷದವರು ಪ್ರಮುಖರು. ಇನ್ನೂ ವಿಶೇಷವೆಂದರೆ ಇಂದಿನ ಪ್ರಧಾನಿ ಮನಮೋಹನ ಸಿಂಗ್ ಅವರು ಅಂದು ಆ ಸಮಿತಿ ಸದಸ್ಯರು. ಅವರು ಬಲವಾಗಿಯೇ ಇಂಥ ದೇಣಿಗೆಗಳ ಪರವಾಗಿ ವಾದಿಸುತ್ತಾರೆ. ಇಂದ್ರಜಿತ್ ಗುಪ್ತ ಪ್ರಸ್ತಾಪ ಬಿದ್ದುಹೋಗುತ್ತದೆ. ಆದರೂ ಗುಪ್ತ, ಕಾರ್ಪೋರೇಟ್ ಕಂಪನಿಗಳು ಕೋಟ್ಯಾಂತರ ಹಣವನ್ನು ರಾಜಕೀಯ ಪಕ್ಷಗಳಿಗೆ ಒದಗಿಸುವುದರಿಂದ ಆ ಪಕ್ಷಗಳನ್ನು ಭ್ರಷ್ಟವಾಗಿಸುತ್ತವೆ, ಆಯ್ಕೆಯಾಗಿ ಬಂದ ಪಕ್ಷ ಅಥವಾ ವಿರೋಧ ಪಕ್ಷಗಳನ್ನು ತಮ್ಮ ಹಿತಾಸಕ್ತಿಗೆ ಬಳಸಿಕೊಳ್ಳುತ್ತವೆ ಎಂದು ಹೇಳಿದ್ದರು. ಅಂದು ಅವರು ಹೇಳಿದುದಕ್ಕಿಂತಲೂ ಅಪಾಯಕಾರಿಯಾಗಿ ಇಂದು ಕಾರ್ಪೋರೇಟ್ ಕಂಪನಿಗಳು ಈ ದೇಶದ ಆಡಳಿತದಲ್ಲಿ ಮಧ್ಯ ಪ್ರವೇಶ ಮಾಡುತ್ತಿವೆ. ನೀರಾ ರಾಡಿಯಾ ಪ್ರಕರಣ ಇದಕ್ಕೊಂದು ಉತ್ತಮ ಉದಾಹರಣೆ. ಅಂಬಾನಿ ಬಳಗದ ಸೂಚನೆಯಂತೆ



# ಸಂಪಾದಕೀಯ

ಈ ದೇಶದ ಪೆಟ್ರೋಲಿಯಂ ಖಾತೆಯ ಮಂತ್ರಿ ಬದಲಾವಣೆಯಾದದ್ದು ಒಂದು ಸಣ್ಣ ಉದಾಹರಣೆ ಮಾತ್ರ. ಈಗ ರಾಜಕೀಯ ಪಕ್ಷಗಳನ್ನೇ ತಮ್ಮ ಹಿತಾಸಕ್ತಿಗೆ ಬಳಸಿಕೊಳ್ಳುವಷ್ಟು, ಗೆಲ್ಲಿಸಿಕೊಳ್ಳುವಷ್ಟು ಈ ಕಂಪನಿಗಳು ಬೆಳೆದು ನಿಂತಿವೆ, ತಮಗೆ ಬೇಕಾದ ರೀತಿಯಲ್ಲಿ ಚುನಾವಣಾ ವ್ಯವಸ್ಥೆಯನ್ನು ರೂಪಿಸಿಕೊಳ್ಳಲೂ ಸಮರ್ಥವಾಗಿವೆ. ಅದಕ್ಕೆ ಸಹಕರಿಸಲು ಎಡಪಕ್ಷಗಳನ್ನು ಹೊರತುಪಡಿಸಿ ಬಹುತೇಕ ರಾಜಕೀಯ ಪಕ್ಷಗಳೂ ಸಿದ್ಧವಾಗಿವೆ. ಮೇಲೆ ಹೇಳಿದಂತೆ ಕಾರ್ಪೊರೇಟ್ ಕಂಪನಿಗಳಿಂದ ರಾಜಕೀಯ ಪಕ್ಷಗಳಿಗೆ ದೇಣಿಗೆ ನಿಷೇಧಿಸಬೇಕೆಂದು ವಾದಿಸಿದವರು ಅಂದಿನ ಸಂಸದರಾಗಿದ್ದ ಸಿಪಿಐನ ಇಂದ್ರಜಿತ್ ಗುಪ್ತ ಮತ್ತು ಸಿಪಿಎಂನ ಸಂಸದ ಸೋಮನಾಥ್ ಚಟರ್ಜಿ ಮಾತ್ರ. ಇದು ಬಹುತೇಕ ರಾಜಕೀಯ ಪಕ್ಷಗಳು ಬಹುರಾಷ್ಟ್ರೀಯ ಕಂಪನಿಗಳು, ಕಾರ್ಪೊರೇಟ್ ಹೌಸ್‌ಗಳ ಪ್ರತಿನಿಧಿಗಳಾಗಿ ಜನ ಪ್ರತಿನಿಧಿ ವೇದಿಕೆಗಳಲ್ಲಿ ಕೆಲಸ ಮಾಡಲು, ಅವರು ಹೇಳಿದ ರೀತಿ ಚುನಾವಣಾ ಸುಧಾರಣೆ, ಬದಲಾವಣೆ ತರಲು ಬದ್ಧವಾಗಿದ್ದಾರೆಂಬುದನ್ನು ತೋರಿಸುತ್ತದೆ.

ಪ್ರಸ್ತುತ ಚುನಾವಣಾ ವ್ಯವಸ್ಥೆಗೆ ಬದಲಿಯಾಗಿ ಅನುಪಾತ ಪದ್ಧತಿಯ ಚುನಾವಣಾ ಪದ್ಧತಿ ಅಥವಾ ಅರೆ ಅನುಪಾತ (ನೇರ ಹಾಗೂ ಅನುಪಾತಗಳ ಸಮ್ಮಿಶ್ರ) ಪದ್ಧತಿ ಈ ದೇಶಕ್ಕೆ ಸೂಕ್ತವೆಂಬ ವಾದವಿದೆ. ವಿಶ್ವದ ಸುಮಾರು ೮೦ ದೇಶಗಳಲ್ಲಿ ಇಂಥ ವ್ಯವಸ್ಥೆ ಜಾರಿಯಲ್ಲಿದೆ. ತೀರ ಇತ್ತೀಚಿನ ಉದಾಹರಣೆಯೆಂದರೆ ನೇಪಾಳ. ಯಾವುದೇ ಪಕ್ಷ ಪಡೆದ ಮತಗಳಿಗನುಗುಣವಾಗಿ ಪ್ರಾತಿನಿಧ್ಯ ಪಡೆಯಬೇಕೆನ್ನುವ ಈ ವ್ಯವಸ್ಥೆ ಪರಿಪೂರ್ಣವಲ್ಲವಾದರೂ ಸದ್ಯದ ನಮ್ಮ ಚುನಾವಣಾ ವ್ಯವಸ್ಥೆಯ ಹಲವಾರು ರೋಗಗಳನ್ನು ನಿವಾರಿಸಬಲ್ಲದು. ಬಹುಭಾಷೆ, ಬಹುಸಂಸ್ಕೃತಿ, ಪ್ರಾದೇಶಿಕ ವೈವಿಧ್ಯತೆಯನ್ನು ಹೊಂದಿರುವ ನಮ್ಮ ದೇಶಕ್ಕೆ ಈ ಅನುಪಾತ ಮಾದರಿ ಸೂಕ್ತ ಎಂದೇ ಹೇಳಬಹುದು. ಈ ಕುರಿತು ಗಂಭೀರವಾದ ಚಿಂತನ–ಮಂಥನಗಳು ವ್ಯಾಪಕವಾಗಿ ನಡೆಯಬೇಕು.

✴ ✴ ✴

ಇತ್ತೀಚೆಗೆ ದೆಹಲಿ ರಾಜ್ಯ ವಿಧಾನಸಭೆಗೆ ನಡೆದ ಚುನಾವಣೆಯಲ್ಲಿ ಆಮ್ ಆದ್ಮಿ ಪಕ್ಷ ಮಾಡಿದ ಪ್ರಯೋಗ ಹೆಚ್ಚು ಚರ್ಚೆಗೊಳಗಾಗುತ್ತಿದೆ. ಮತ್ತೆ ನಮ್ಮ ಚುನಾವಣಾ ವ್ಯವಸ್ಥೆಯ ಬಗ್ಗೆ ಮರುಚಿಂತನೆ ಮಾಡಲು ಯೋಚಿಸಬೇಕೆಂದು ಕೆಲವರು ಹೇಳುವಂತೆ ಮಾಡಿದೆ. ಆಮ್ ಆದ್ಮಿಯ ಪ್ರಯೋಗ, ಪ್ರಯತ್ನ ಸ್ವಾಗತಾರ್ಹವೇ. ಇದೇ ಸಂದರ್ಭದಲ್ಲಿ ಈ ಪ್ರಯೋಗ ಪ್ರತಿಕ್ರಿಯೆಯ ರಾಜಕಾರಣದ ಪರಿಣಾಮ, ಕ್ರಿಯಾತ್ಮಕ ರಾಜಕಾರಣವಲ್ಲ ಎಂಬುದನ್ನು ಗಮನಿಸಬೇಕು. ಆಮ್ ಆದ್ಮಿ ಬೇಕು ಎನ್ನುವ ಆಶಯದ ಹಿಂದೆ ಕಾಂಗ್ರೆಸ್ ಮತ್ತು ಬಿ.ಜೆ.ಪಿ. ಕುರಿತು ಜನರಿಗಿರುವ ತಿರಸ್ಕಾರ ಬಲವಾಗಿತ್ತು ಎಂಬುದನ್ನು ಗಮನಿಸಬೇಕು. ಆಮ್ ಆದ್ಮಿ ಪಕ್ಷದ ಹೊಸ ಪ್ರಯೋಗ ಕೇವಲ ಚುನಾವಣೆಗೆ ಸಂಬಂಧಿಸಿದ್ದಲ್ಲ, ಅದು ಆಡಳಿತಕ್ಕೂ ಸಂಬಂಧಿಸಿದೆ. ಇದು ಸಿನಿಕತನದ ಮಾತಲ್ಲ. ಅದು ಯಶಸ್ವಿಯಾದರೆ ಇತರರಿಗೆ ಮಾದರಿಯಾಗುತ್ತದೆಂಬ ಆಶಯ. ಆದರೂ ಇಂತಹ ಒಂದೇ ಒಂದು ಗೆಲುವು ದೇಶಕ್ಕೇ ಮಾದರಿಯೆಂದರೆ ನಾವು ಹೆಚ್ಚು ಅಪಾಯಗಳನ್ನು ಎದುರಿಸಬೇಕಾಗುತ್ತದೆ. ದೆಹಲಿಯೇ ಭಾರತವಲ್ಲ, ದೆಹಲಿಯ ಚುನಾವಣಾ ಸಂದರ್ಭ ಸಾರ್ವಕಾಲಿಕ ಸಂದರ್ಭವಲ್ಲ. ಆದರೆ ಆಮ್ ಆದ್ಮಿ ಒಂದು ಮಾದರಿಯನ್ನಂತೂ ಕೊಟ್ಟಿದೆ. ಯಾವುದೇ ಚುನಾವಣಾ ವ್ಯವಸ್ಥೆಯಿರಲಿ ಜನರು ಜಾಗೃತರಾದರೆ ಆ ವ್ಯವಸ್ಥೆಯಡಿಯಲ್ಲಿಯೇ ಹಲವಾರು ಬದಲಾವಣೆಗಳನ್ನು ತರಬಹುದು. ಸದ್ಯ ಇರುವ ಸವಾಲು ಜನ ಜಾಗೃತಿಗೆ ಇರುವ ಅಡಚಣೆಗಳು ಮತ್ತು ಮಿತಿಗಳು, ಅವುಗಳನ್ನು ಮೀರಬೇಕಾದ ಸಾಧ್ಯತೆಗಳಾವುವು ಎಂಬುದು.

✴ ✴ ✴

ಪರಿಸ್ಥಿತಿ ಗಂಭೀರವಾಗಿದೆ. ಅದು ಪ್ರಜಾಪ್ರಭುತ್ವವೋ, ಅರಸೊತ್ತಿಗೆಯೋ, ಸರ್ವಾಧಿಕಾರವೋ, ಧರ್ಮಾಧಿಕಾರವೋ ನವ ಸಾಮ್ರಾಜ್ಯಶಾಹಿ ಎಲ್ಲವನ್ನೂ ಗುಡಿಸಿಹಾಕಿ ತನ್ನ ಹಿತಾಸಕ್ತಿಗೆ ಬಳಸಿಕೊಳ್ಳುತ್ತಿದೆ. ಪ್ರಭುತ್ವಗಳನ್ನು, ಪ್ರಜಾಪ್ರತಿನಿಧಿಗಳನ್ನು ಅಂತಿಮವಾಗಿ ಜನರನ್ನು ಭ್ರಷ್ಟಗೊಳಿಸಿ ಆಯಾ ದೇಶಗಳ ಸಂಪನ್ಮೂಲಗಳನ್ನು ಲೂಟಿಮಾಡುವುದೇ ಅದರ ಮೂಲ ಉದ್ದೇಶ. ನವಸಾಮ್ರಾಜ್ಯಶಾಹಿಗಳ ಹುನ್ನಾರವನ್ನು ಕೇವಲ ಚುನಾವಣಾ ವ್ಯವಸ್ಥೆಯ ಬದಲಾವಣೆಯಿಂದ ಎದುರಿಸಲಾಗುವುದಿಲ್ಲ. ಜನ ಸಮುದಾಯದ ಜಾಗೃತಿ ಮತ್ತು ಅವರಲ್ಲಿ ಪ್ರತಿರೋಧಿಸುವ ಶಕ್ತಿಯನ್ನು ಹೆಚ್ಚಿಸುವುದರಿಂದ ಈ ಸವಾಲನ್ನು ಎದುರಿಸಲು ಸಾಧ್ಯ. ೨೦೧೪ ಇಂಥ ಸಾಧ್ಯತೆಗಳನ್ನು ಗುಣಾತ್ಮಕವಾಗಿ ಹೆಚ್ಚಿಸುವಂಥ ವರ್ಷವಾಗಲಿ.

ಸಿದ್ದನಗೌಡ ಪಾಟೀಲ.

ಕನ್ನಡ ವಿಶ್ವವಿದ್ಯಾಲಯ, ಹಂಪಿ, ಈ ವರ್ಷ ಮಾನ್ಯರಾದ ಶ್ರೀ. ಕೋ. ಚೆನ್ನಬಸಪ್ಪ, ನ್ಯಾ. ಮೂ. ಸಂತೋಷ್ ಹೆಗಡೆ ಮತ್ತು ಭಾರತ ಬಾಹ್ಯಾಕಾಶ ಕೇಂದ್ರದ ನಿರ್ದೇಶಕರಾದ ಖ್ಯಾತ ವಿಜ್ಞಾನಿ ಡಾ॥ ಎಸ್. ಕೆ. ಶಿವಕುಮಾರ್ ಅವರನ್ನು 'ನಾಡೋಜ'ರನ್ನಾಗಿ ಗುರುತಿಸಿ ಸನ್ಮಾನಿಸಿದೆ. ಈ ಮೂವರಿಗೂ 'ಹೊಸತು' ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತಾ ಅವರಿಂದ ನಾಡಿನ ಶ್ರೇಯಸ್ಸಿಗೆ ಮೌಲಿಕವಾದ ಕೊಡುಗೆಗಳು ಇನ್ನೂ ಅಧಿಕವಾಗಿ ಲಭಿಸಲೆಂದು ಆಶಿಸುತ್ತದೆ. ಅಲ್ಲದೆ ಖ್ಯಾತ ವಿಮರ್ಶಕ ಡಾ॥ ಸಿ. ಎನ್. ರಾಮಚಂದ್ರನ್ ಅವರ ಕೀರ್ತಿಗೆ ಇನ್ನೊಂದು ಗರಿಯೂ ಸೇರಿದ್ದು. ಕೇಂದ್ರ ಸಾಹಿತ್ಯ ಅಕಾಡೆಮಿಯ ಈ ವರ್ಷದ ಪ್ರಶಸ್ತಿ ಅವರಿಗೆ ಲಭಿಸಿದೆ. ಅದಕ್ಕೆ ಹರ್ಷಿಸುತ್ತಾ 'ಹೊಸತು' ಅವರನ್ನು ಅಭಿನಂದಿಸುತ್ತದೆ.

'ಹೊಸತು'ಗೆ ಮೊದಲಿನಿಂದಲೂ ತಮ್ಮ ಬೆಂಬಲ ನೀಡುತ್ತಾ ಬಂದಿರುವ ಹಿರಿಯ ಸಾಹಿತಿ ಸನ್ಮಾನ್ಯ ಶ್ರೀ. ನಾ. ಡಿಸೋಜ ಅವರು ಸದ್ಯದಲ್ಲೇ ಮಡಿಕೇರಿಯಲ್ಲಿ ಜರುಗಲಿರುವ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಗೊಂಡಿರುವುದು ಒಂದು ಸಂಭ್ರಮದ ಸಂಗತಿ. ಕನ್ನಡ ಭಾಷೆ ಹಾಗೂ ಕರ್ನಾಟಕದ ಜನತೆಯ ಏಳಿಗೆಗೆ ಅವರಿಂದ ವಿಪುಲ ಮಾರ್ಗದರ್ಶನ ದೊರೆಯುತ್ತದೆಂಬ ಭರವಸೆ ನಮ್ಮ ಜನತೆಗಿದೆ. ಮಾನ್ಯ ಶ್ರೀ. ಡಿಸೋಜ ಅವರಿಗೆ 'ಹೊಸತು' ತನ್ನ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.



## ಪರಿವಿಡಿ













# ಪರಿವಿಡಿ



---


***ಮುಖಚಿತ್ರ :*** ಧಾರವಾಡದ ಕಲಾವಿದ ಶ್ರೀ ಮಾರುತಿ ಬಾಣದ ಅವರು ರಚಿಸಿದ ಫೈಬರ್ ಮಾಧ್ಯಮದಲ್ಲಿ 'ಬುದ್ಧ'

***ವಿನ್ಯಾಸ :*** ನವಕರ್ನಾಟಕ ವಿನ್ಯಾಸ

***ಈ ಸಂಚಿಕೆಯ ಚಿತ್ರಗಳ ಕಲಾವಿದರು :***

ಶ್ರೀಹರಿ, ಕಮಲಂ ಅರಸು, ವಿ. ಗೋಪಾಲ್, ತನು,
ರವಿ ಹೆಗ್ಗಡಿ, ಜಿಎಂಬೊ, ಗೋಪಿ, ವಿ. ಆರ್. ಸಿ. ಶೇಖರ್

***ಕಚೇರಿ ಸಹಕಾರ :*** ಜಿ. ವಿ. ತೇಜೋವತಿ












ಧಾರ್ಮಿಕ ನಿಯಮಾವಳಿಯಂತೆ ಹಾಸನಾಂಬೆ ಗುಡಿ, ಹಾವನ್ನೂ ಒಳ ಬಿಟ್ಟುಕೊಳ್ಳದೆ ವರ್ಷದ ಕೆಲವು ದಿನ ಮಾತ್ರ ತೆರೆದಿರುತ್ತದೆ. ಧ್ರುವ ಪ್ರದೇಶಗಳನ್ನು ಹೊರತುಪಡಿಸಿದ್ದಲ್ಲಿ ಯಾವುದೇ ಅಥವಾ ದೇವರ ನೈವೇದ್ಯ (ಎಡೆ)ಯನ್ನು ತಿರುಪತಿ, ಕೊಲ್ಲೂರು, ಉಡುಪಿ, ಮಂತ್ರಾಲಯ, ಧರ್ಮಸ್ಥಳದ ದೈವ ಸನ್ನಿಧಿಯಲ್ಲಿಟ್ಟರೂ ಕೊಳೆತು ಹುಳ ಬಿಡುತ್ತದೆ. ಇದಕ್ಕೆ ಹಾಸನಾಂಬೆಯೂ ಹೊರತಲ್ಲ. ಕೆಡದಂತೆ ಇದೆಯೆಂದು ಹುನ್ನಾರ ರೂಪಿಸಿದ ಅರ್ಚಕರು ಮತ್ತು ದೂರದ ಭಕ್ತರು ನಂಬಬೇಕಷ್ಟೆ.

ಪೂನಾ ಒಪ್ಪಂದದೊಳಗೆ ಬೆರೆತ ಗಾಂಧೀಜಿಯ ಕ್ರೌರ್ಯ, ಆ ಕ್ರೌರ್ಯಕ್ಕಾಗಿ ಬಳಸಿಕೊಂಡ ಆಮರಣಾಂತ ಉಪವಾಸ – ಈ ಕುರಿತಂತೆ ಡಾ॥ ಅಪ್ಪಗೆರೆ ಸೋಮಶೇಖರ್ ಬರೆದ ಬರಹ ಚಿಂತನೆಗೆ, ಮರು ಚಿಂತನೆಗೆ ಹಚ್ಚುವಂತಿದೆ. ೭೮ ಪ್ರತ್ಯೇಕ ದಲಿತ ಮತಕ್ಷೇತ್ರ ಬದಲಾಗಿ ೧೫೧ ಮೀಸಲು ಮತಕ್ಷೇತ್ರ ಲಭ್ಯವಾದರೂ ಬನಿಯಾ ಗಾಂಧಿ, ಉಳಿದ ಮೇಲ್ಜಾತಿ ಕಾಂಗ್ರೆಸ್ ನಾಯಕರು ಮೀಸಲು ಕ್ಷೇತ್ರದಲ್ಲಿ ಕಾಂಗ್ರೆಸ್ ಹರಿಜನರನ್ನು ನಿಲ್ಲಿಸಿ; ಅಂಬೇಡ್ಕರ್ ಅವರ ದಲಿತ ಪ್ರಜ್ಞೆಯನ್ನು ಅವಮಾನಿಸಿಬಿಟ್ಟ ಗಾಂಧೀಜಿಯ ವಿಕೃತಿ ಹೆಚ್ಚೆಚ್ಚು ಚರ್ಚೆಗೆ ಒಳಗಾಗಬೇಕಿದೆ.

ಮಡಿಕೇರಿ **ಮೂರ್ನಾಡು ರಾಮಸ್ವಾಮಿ**

ಡಾಕ್ಟರ್ ಅಪ್ಪಗೆರೆ ಸೋಮಶೇಖರ್‌ರವರು ಬರೆದಿರುವ ಪೂನಾ ಒಪ್ಪಂದದ ಮರುಚಿಂತನೆ ಲೇಖನ ಓದಿದೆ. ಲೇಖನದಲ್ಲಿ ಅವರು ವ್ಯಕ್ತಪಡಿಸಿರುವ ಬಹಳಷ್ಟು ವಿಚಾರಗಳು ಒಪ್ಪಬಹುದಾದಂಥವು ಆಗಿವೆ. ಕೆಲವು ಐತಿಹಾಸಿಕ ಸಂಗತಿಗಳೂ ಇವೆ. ಆದರೆ ಲೇಖನದ ಕೊನೆಯ ಕಾಲಂನಲ್ಲಿ ಬರೆದಿರುವ ಮಾತುಗಳು ನ್ಯಾಯಸಮ್ಮತವಾಗಿಲ್ಲ. ಕೇವಲ ಭಾವಾವೇಶದಿಂದ ಬರೆಯಲಾಗಿದೆ. ಅದರಲ್ಲಿ ಅವರು "ಗಾಂಧೀಜಿ ಕುತಂತ್ರದಿಂದ ಉಪವಾಸ ಮಾಡಿ ಪೂನಾ ಒಪ್ಪಂದದ ಮೂಲಕ ವಿಶೇಷ ಮತದಾನದ ಹಕ್ಕನ್ನು ನಾಶ ಮಾಡಿದರು" ಎಂದು ಹೇಳಿದ್ದಾರೆ. ಗಾಂಧೀಜಿ ಎಂದೂ ಕುತಂತ್ರಿಯಾಗಿರಲಿಲ್ಲ. ಅಸ್ಪೃಶ್ಯತೆ ಇರುವುದಕ್ಕಿಂತ ಹಿಂದೂಧರ್ಮ ಸತ್ತುಹೋಗುವುದೇ ಲೇಸೆಂಬ ಮಾತನ್ನು ಪೂನಾ ಒಪ್ಪಂದದ ಸಂದರ್ಭದಲ್ಲಿ ಗಾಂಧೀಜಿ ಹೇಳಿದ್ದರು. ದಲಿತರು ಅನುಭವಿಸಿದ ಕಷ್ಟಕಾರ್ಪಣ್ಯಗಳನ್ನು ತಾಯಿ ಹೃದಯದಿಂದ ಗಾಂಧೀಜಿ ಅರಿತಿದ್ದರು. ಆದ್ದರಿಂದ ದಲಿತರ 'ಸ್ವಂತ ಮಗ'ನಿಗಿಂತ 'ದತ್ತು ಮಗ'ನಾಗಿ ಅವರು ದಲಿತರ ದಯನೀಯ ಸ್ಥಿತಿಯನ್ನು ಅರಿತಿದ್ದರು. ಅಸ್ಪೃಶ್ಯತಾ ನಿವಾರಣೆಗಾಗಿ ಅವರು ಮಾಡಿದ ಪ್ರಯಾಸ ಎಲ್ಲರಿಗೂ ಗೊತ್ತಿರುವ ವಿಚಾರ. ಗಾಂಧೀಜಿ ಯಾವ ಸಾಮಾಜಿಕ ಸಮಸ್ಯೆಯನ್ನೂ ರಾಜಕೀಯ ಪರಿಹಾರದ ದೃಷ್ಟಿಯಿಂದ ಪರಿಹರಿಸಿದವರಲ್ಲ. ಮಾನವೀಯತೆಯನ್ನು ಎತ್ತಿ ಹಿಡಿಯುವುದೇ ಅವರ ಜೀವನದ ಧ್ಯೇಯವಾಗಿತ್ತು. ಸರ್ವೋದಯ ಸಮಾಜದ ಸ್ಥಾಪನೆ ಅವರ ಗುರಿಯಾಗಿತ್ತು. ಆದ್ದರಿಂದ ಪೂನಾ ಒಪ್ಪಂದಕ್ಕೂ ಮುನ್ನ ಲಂಡನ್‌ನಲ್ಲಿ ನಡೆದ ದುಂಡು ಮೇಜಿನ ಪರಿಷತ್ತಿಗಾಗಿ ಆಯ್ಕೆಮಾಡಿಕೊಳ್ಳಲಾಗಿದ್ದ ವಿಷಯಗಳೆಲ್ಲವೂ ರಾಜಕೀಯವಾಗಿದ್ದವು ಹಾಗೂ ಇತರ ಬೆಳವಣಿಗೆಗಳು ಕೇವಲ ರಾಜಕೀಯ ದೃಷ್ಟಿಯಿಂದ ಕೂಡಿದ್ದಾಗಿದ್ದವು. ಪೂನಾ ಒಪ್ಪಂದದ ನಂತರ ಅನೇಕ ಮಹನೀಯರು ಆ ಒಪ್ಪಂದವನ್ನು ಮೆಚ್ಚಿ




ಹೇಳಿಕೆಗಳನ್ನು ಕೊಟ್ಟರು. ಆ ಮಹನೀಯರಲ್ಲಿ ರವೀಂದ್ರನಾಥ್ ಠಾಕೂರ್, ಸಿ. ರಾಜಗೋಪಾಲಾಚಾರಿ, ಡಾ॥ ರಾಜೇಂದ್ರ ಪ್ರಸಾದ್, ಸೈಯದ್ ಮಹಮದ್ ಮುಂತಾದವರೆಲ್ಲ ಇದ್ದರು. ಅಸ್ಪೃಶ್ಯತಾಚರಣೆಯ ವಿರೋಧ ಮಾಡುವುದರಲ್ಲಿ ದಲಿತೋದ್ಧಾರದ ವಿಷಯದಲ್ಲಿ ಗಾಂಧೀಜಿ ಮತ್ತು ಡಾಕ್ಟರ್ ಅಂಬೇಡ್ಕರ್‌ರ ಉದ್ದೇಶ ಒಂದೇ ಆಗಿತ್ತು. ಕೆಲವೊಂದು ಸಂದರ್ಭದಲ್ಲಿ ಮಾರ್ಗಗಳು ಮತ್ತು ಮಾತುಗಳು ಭಿನ್ನವಾಗಿದ್ದಿರಬಹುದು. ಆದರೆ ಅವರಿಬ್ಬರ ಪರಿಶ್ರಮ ಮತ್ತು ತ್ಯಾಗದ ಬಲದಿಂದಲೇ ಇಂದು ಭಾರತೀಯ ಸಮಾಜ ಅಖಂಡವಾಗಿ ಉಳಿದಿದೆ. ಭಾರತೀಯ ಸಮಾಜ ಅವರಿಬ್ಬರಿಗೂ ಸಮನಾಗಿ ಋಣಿಯಾಗಿದೆ.

ಮೇಲುಕೋಟೆ **ಸುರೇಂದ್ರ ಕೌಲಗಿ**

 **ಮಿಥ್ಯೆಗಳ ಮಡುವಿನಲ್ಲಿ ಹಾಸನಾಂಬೆ**

'ಹೊಸತು' ಡಿಸೆಂಬರ್ ೨೦೧೩ರ ಸಂಚಿಕೆಯಲ್ಲಿ ಹಾಸನಾಂಬೆಯ ಬಗ್ಗೆ ಜ. ಹೊ. ನಾರಾಯಣ ಸ್ವಾಮಿಯವರು ಮೂಢನಂಬಿಕೆಗಳ ಬಗ್ಗೆ ಚರ್ಚೆಯಾಗುತ್ತಿರುವ ಈ ಸಮಯದಲ್ಲಿ ಅನೇಕ ವಿಚಾರಗಳನ್ನು ಕೆದಕಿದ್ದಾರೆ. ವೇದಕಾಲದ ಜ್ಞಾನಶಾಖೆ, ರಕ್ಷಣಾಶಾಖೆ, ಉತ್ಪಾದನಾಶಾಖೆ ಹಾಗೂ ಸೇವಾಶಾಖೆ ಹೇಗೆ ಮುಂದೆ ಚತುರ್ವರ್ಣಗಳಾದವು ಎಂದು ಹೇಳುತ್ತಾ ಸ್ಮೃತಿ ಪುರಾಣಗಳ ಮೂಲಕ ಬ್ರಾಹ್ಮಣರು ತಮ್ಮ ರಕ್ಷಣೆಗೆ ಮೌಢ್ಯಗಳನ್ನು ಸಮಾಜದೊಳಗೆ ಇಳಿಬಿಟ್ಟರು ಎಂಬುದನ್ನು ಸೂಕ್ಷ್ಮವಾಗಿ ಅವಲೋಕಿಸಿದ್ದಾರೆ.

ಹಾಸನಾಂಬೆ ಗುಡಿಯು ದೀಪಾವಳಿ ಸಮಯದಲ್ಲಿ ಒಂಭತ್ತು ದಿನ ಮಾತ್ರ ತೆರೆಯುವ ನಂಬಿಕೆ ಮೂಲದ್ದು. ಆಗ ಹಚ್ಚಿಟ್ಟ ದೀಪ ಮುಂದಿನ ವರ್ಷ ಬಾಗಿಲು ತೆರೆದಾಗಲೂ ಉರಿಯುತ್ತಿರುತ್ತದೆ. ಮಾಡಿದ ನೈವೇದ್ಯ ಮುಂದಿನ ವರ್ಷ ಬಾಗಿಲು ತೆರೆದಾಗಲೂ ಯಥಾಸ್ಥಿತಿ ಇರುತ್ತದೆ. (ಅನ್ನ ಉಕ್ಕುವುದು ಆವರೆಗೂ ಹಾಗೇ ಉಕ್ಕುತ್ತಿರುತ್ತದೆ ಎಂದೂ ಹೇಳುವರು.) ಪೂಜೆ ಮಾಡಿದ ಹೂಗಳೂ ಕೂಡ ಬಾಡಿರುವುದಿಲ್ಲ. ಇದನ್ನೆಲ್ಲಾ ಮುಗ್ಧಜನ ನಂಬುತ್ತಾರೆ. ೨೦೧೩ರ ಈ ವರ್ಷವಂತೂ ಒಂದು ಕೋಟಿ ಸಂಗ್ರಹವಾಗಿದೆ. ಜಿಲ್ಲಾಡಳಿತ 'ಎ' ದರ್ಜೆಗೆ ಈ ದೇವಸ್ಥಾನವನ್ನು ಸೇರಿಸಲು ಶಿಫಾರ್ಸು ಮಾಡಿದೆ. ಅಲ್ಲಿ ಕಳ್ಳಪ್ಪನ ಗುಡಿಯಿದೆ. ಹಿಂದೊಮ್ಮೆ ನಾಲ್ಕು ಜನ ಕಳ್ಳರು ಆಭರಣ ಕದಿಯಲು ಬಂದು ದೇವಿಯ ಕೋಪಕ್ಕೆ ಗುರಿಯಾಗಿ ಕಲ್ಲುಗಳಾದರು. 'ಸೊಸೆ ಕಲ್ಲು' ಎಂಬುದು ಅಲ್ಲಿದೆ. ಅತ್ತೆ ಕಾಟ ತಾಳಲಾರದೆ ದೇವಿಯ ಮುಂದೆ 'ಧ್ಯಾನ'ಕ್ಕೆ ಕುಳಿತಿದ್ದಳು. ಅಲ್ಲಿಗೂ ಬಿಡದ ಅತ್ತೆ ತಲೆ ಮ್ಯಾಲೆ ಕುಕ್ಕಿದಾಗ ಸೊಸೆ ಕಲ್ಲಾದಳು; ವರ್ಷಕ್ಕೊಂದು ಭತ್ತದ ಕಾಳಿನಷ್ಟು ದೇವಿ ಕಡೆ ಚಲಿಸುವ ಈ ಸೊಸೆ ಕಲ್ಲು ದೇವಿ ಪಾದ ಮುಟ್ಟಿದಾಗ ಕಲಿಯುಗ ಮುಗಿಯುತ್ತದೆ. ಸಂವಿಧಾನ ೪೨ನೇ ತಿದ್ದುಪಡಿಯ ೫೧ ಎ(H) ಪ್ರಕಾರ ಪ್ರತಿಯೊಬ್ಬನೂ ವೈಜ್ಞಾನಿಕ ಮನೋಭಾವನೆ ಬೆಳೆಸಿಕೊಳ್ಳಬೇಕು. ಮೇಲಿನ ಹಾಸನಾಂಬೆಯ ಬಗ್ಗೆ ಮೂಢನಂಬಿಕೆಗಳು ಪುರೋಹಿತಶಾಹಿಗಳು ಮಾಡಿಕೊಂಡ ಮೌಢ್ಯಗಳು ಎಂಬುದು ಜ.ಹೊ.ನಾ. ಅವರ ವಾದ. ವೈಚಾರಿಕ ವಕೀಲರಾದ ಇವರು ಹೇಳುವುದೇನೋ ಸರಿ. ಆದರೆ!

ಮಾನವನು ನಂಬಿಕೆಗಳ ಬಲದಿಂದಲೇ ಬದುಕು ರೂಢಿಸಿಕೊಂಡಿದ್ದಾನೆ. ಅವುಗಳನ್ನು ಮೌಢ್ಯಕ್ಕೆ ನೂಕಿ ಬಾಗಿಲು ಭದ್ರಪಡಿಸಿಕೊಂಡದ್ದು ವರ್ಣಚರಿತ್ರೆ. ಹಾಸನಾಂಬೆ ವಿಚಾರದಲ್ಲಿಯೂ ಇದು ನಡೆಯದೆ ಇಲ್ಲ. ಹಾಗೆಂದು ವೈಚಾರಿಕ ದೊಣ್ಣೆಯಿಂದ ಒಂದೇ ಬಾರಿ ಮೌಢ್ಯವೆಂಬ ದೆವ್ವಕ್ಕೆ ಬಡಿದರೆ ಆ ಏಟು ನಂಬಿಕೆಗಳ ಮನಸ್ಸಿಗೂ ಗಾಯವಾಗಿಬಿಡುವುದುಂಟು. ಅದೂ ಅಲ್ಲದೆ ಮಾನವನ ಘನತೆಗೆ ಧಕ್ಕೆ ತರುವ ಅನೇಕ ಘಟನೆಗಳಂತೆ ಇವು ಘಾತಾಗಿ ಕಾಣುತ್ತಿಲ್ಲ. ಮಲ್ಲಿಕಾಫರನು ದಂಡೆತ್ತಿ ಬಂದು ಇಲ್ಲಿ ಬೀಡು ಬಿಟ್ಟಿದ್ದಾಗ ಕನಸಿಗೆ ಈ ದೇವಿ ಬಂದಳು. ಅವನು ಈಗಿರುವ ಗದ್ದುಗೆ ಸುತ್ತ ಗುಡಿ ಕಟ್ಟಿಸಿದ ಎಂಬ

ಪ್ರತೀತಿ ಇಲ್ಲಿ ಉಂಟು. ಸೊಸೆ ಕಲ್ಲು ವಿಚಾರವುಂಟು. ಹಾಸನದಮ್ಮನನ್ನು, 'ಹಸನಬೀ' ಎಂದು ಆಕೆಯನ್ನು ಮುಸಲ್ಮಾನರು ಸಹ ಆಚರಿಸುವುದುಂಟು. ಕಳ್ಳರನ್ನು ಆರಾಧಿಸುವ ಗುಡಿಯುಂಟು. ಈಗ ಈ ವಿಚಾರಗಳನ್ನು ಚರ್ಚಿಸೋಣ. ಹಾಸನದಮ್ಮ ಮತ ಸಹಿಷ್ಣುತೆಯ ದಾರಿ ಹೇಳುತ್ತಾಳೆ. ಕಳ್ಳರಿಗೆ ಜ್ಞಾನೋದಯವಾದಾಗ ಜನ ಆವರಿಸುತ್ತಾರೆ. ಪೂಜೆಯನ್ನು ಸಹ ಮಾಡುತ್ತಾರೆ. ಇದು ಕುವೆಂಪುವಿನ 'ಪಾಪಿಗುದ್ಧಾರವಿಹುದು' ಎಂಬುದರ ಸಾಮಾಜಿಕ ಚಲನೆಯಲ್ಲವೆ! ನಿತ್ಯನಾರಕಿ-ದ್ವೈತ ಪಂಥಕ್ಕೆ ಇದಿರೇಟು ಕೊಟ್ಟ ನಮ್ಮ ಜನಪದೀಯ ತಿಳಿವಳಿಕೆ ಇದಲ್ಲವೆ! ಅತ್ತೆ ಸೊಸೆಯರ ಅಂತರ್ಯುದ್ಧವೇ ನಮ್ಮ ಸಮಾಜದಲ್ಲಿದೆ. ಈಗಿನ ಗೋಳೀಕರಣ ಯುಗದಲ್ಲಿ ಯಾರಿಗೆ ಗೋಳು ಹೆಚ್ಚು ಎಂಬುದೇ ಚರ್ಚೆಯ ವಿಚಾರ. ಆಗಿನ ಕಾಲದಲ್ಲಿ ನಡೆಯಿತೆನ್ನುವ 'ಸೊಸೆಯ ಧ್ಯಾನವು' ಒಂದು ಪಾಠ ಹೇಳುವಂತಿಲ್ಲವೆ! ಇದರಿಂದ ಅತ್ತೆ-ಸೊಸೆಯರಿಗೆ ನಮ್ಮ ಜನಪದೀಯರು ಒಂದು ಶಿಕ್ಷಣ ನೀಡುತ್ತಿದ್ದಾರೆನಿಸುತ್ತದೆ. ಉರಿಯುವ ದೀಪ-ಹಳಸದ ನೈವೇದ್ಯ, ಬಾಡದ ಹೂಗಳು, ಇವೆಲ್ಲವನ್ನು ನಂಬುತ್ತಾ ಪೂಜೆಗೆ ಹೋಗುವಷ್ಟು ಭಕ್ತರು ದುರ್ಬಲರಾಗಬಾರದು. ನಂಬಿಕೆ ಮತ್ತು ಮೂಢ ನಂಬಿಕೆಗಳ ವಿಂಗಡಣೆ ಆಗಲೇಬೇಕು. ಇಲ್ಲದಿದ್ದರೆ ಕುಕ್ಕೆಯ ನಂಬಿಕೆಯ ಸಾಂಸ್ಕೃತಿಕ ನಾಗಪೂಜೆ ಕುಲಗೆಟ್ಟು ಹೋಗಿ ಪುರೋಹಿತಶಾಹಿ ಮಡಿಲಿಗೆ ಬಿದ್ದ ಅವಾಂತರ ಹಾಸನದಲ್ಲೂ ಆದೀತು! ಮೌಢ್ಯದ ದೆವ್ವ ವರ್ಷವಿಡೀ ಬಾಗಿಲು ಹಾಕಿರುವ ಹಾಸನಮ್ಮನ ಗುಡಿಯೊಳಗೆ ಹೊಕ್ಕುಬಿಟ್ಟೀತು! ಈ ಗುಡಿಯ ಮುಂದಿರುವ ಕಳ್ಳರ ಗುಡಿಯ ಪೂಜೆ-ಸೊಸೆ ಕಲ್ಲು ನಂಬಿಕೆಗಳು ಹೀಗೆ ಶಿಕ್ಷಣ ನೀಡುವ ತಾಣವಾಗಲಿ ಎಂದು ಆಶಿಸೋಣ. ಹಾಸನಮ್ಮ-ಹಸನಬೀ ಈ ದೇಶದ ಸರ್ವಧರ್ಮ ತಾಳ್ಮೆ ಗುಣವನ್ನು ಹೇಳುತ್ತಾ ಹೀಗೇ ಇರಲಿ. ಇದೇ ಜಹೊನಾ ಲೇಖನದ ಕಡೆಯಲ್ಲಿ ನೀಡಿರುವ ಕವನದ ಇಚ್ಛೆ.

ಸಿಂಹಾಸನ ಪುರಿ ಎಂಬ ಪುರಾಣ ಹಿನ್ನೆಲೆ ಹೇಳುವರು. ಹಾಸನ ಪದನಿಷ್ಪತ್ತಿ ಇದಲ್ಲ. ಈಕೆ ಮಾತೃ ಸಂಸ್ಕೃತಿಯ ಪ್ರತೀಕ. ಸಾಂಸ್ಕೃತಿಕವಾಗಿ ಭೌಗೋಳಿಕವಾಗಿ ಅಂದೊಮ್ಮೆ ಈ ಪ್ರದೇಶ ಅಡವಿ ಪ್ರದೇಶ. ಅಸ್ಯೆ + ಅಣ್ಯೆ = ಆಸನ ಎಂಬುದು ಪದನಿಷ್ಪತ್ತಿ. ಈಗಲೂ ನಮ್ಮ ಜನಪದರು 'ಆಸನ' ಎಂದೇ ಹಾಸನವನ್ನು ಸಂಬೋಧಿಸುತ್ತಾರೆ. ಆಸನವೆಂದರೆ ಮಲವಿಸರ್ಜನೆಯ ದೇಹಭಾಗ ಎಂಬ ಅರ್ಥವೂ ಇರುವುದರಿಂದ ಪದನಿಷ್ಪತ್ತಿ ಗಂಭೀರ ಅರ್ಥ ಬಯಸಿರಬೇಕು. ಅಸ್ಯೆ ಎಂದರೆ ಸ್ಥಳ. ಅಣ್ಯೆ ಎಂದರೆ ಅಡವಿ. ಆಸನವು ಹೀಗೆ ಅಡವಿ ಪ್ರದೇಶ. ಆಸನದಮ್ಮ ಅಡವಿ ದೇವಿ. ಈಗಲೂ ಈಕೆ ಪ್ರಕೃತಿ ಪೂಜಾ ಮೂಲದ ಹುತ್ತದಮ್ಮ. ಮೂರ್ತಿಯ ಆಗಮನದಿಂದ ದೂರವಿರುವಾಕೆ. ಈ ದೇವಸ್ಥಾನದಾವರಣದಲ್ಲಿ ಸಿದ್ದೇಶ್ವರನ ಗುಡಿಯಿದೆ. ಇದರ ಪೂಜಾರಿಕೆಯೇ ಅಲ್ಲಿನ ಪೂಜಾರಿಗಳಿಗೆ ಆಧಾರ. ಸಿದ್ದೇಶ್ವರ-ಭೈರುವ ಬೇರೆ ಬೇರೆಯಲ್ಲ. ಶೈವ ಪರಂಪರೆಯ ಆದಿ ದೇವರುಗಳು. ಈ ವಿಗ್ರಹದಲ್ಲಿ ನಾಯಿಯಿದೆ. ಅದು ಅವನ ವಾಹನ. ಬೇಟೆ ಸಂಸ್ಕೃತಿಯ ಪ್ರತೀಕ. ಮೈಲಾರನ ಮತ್ತೊಂದು ಸ್ವರೂಪ. ಪಶುಪಾಲನೆ-ಬೇಟೆ-ಆಳ್ವಿಕೆ ಇವೆಲ್ಲಾ ಕಾಲಮಾನದ ತಳಿಕೆಗಳು. ಹೀಗಾಗಿ ಸಂಸ್ಕೃತಿ ಚಿಂತಕರಿಗೆ ಹಾಸನಮ್ಮನ ಗುಡಿ ಆವರಣ ಶಿಕ್ಷಣ ಶಾಲೆ ಕೂಡ ಹೌದು. ಸಾಮಾಜಿಕ ನಂಬಿಕೆಗಳನ್ನು ಈ ರೀತಿ ಚಿಂತನೆಗೊಳಪಡಿಸಿ ನಂಬಿಕೆ ವಿಧಾನಗಳಿಗೆ ಜೀವ ಕೊಡುತ್ತಾ ಜನರನ್ನು ವೈಚಾರಿಕತೆ ಯತ್ತ ತಿರುವಿಕೊಳ್ಳಬೇಕು. ಆದಿ ಸಂಸ್ಕೃತಿಯ ದನ ಕುರಿಯೊಳಗಿದ್ದ ಜನ ನಾಗರಿಕರಾಗುತ್ತ ಹೋದಂತೆ ವಿವೇಕಾನಂದರ, ಗಾಂಧಿಯ, ಅಂಬೇಡ್ಕರ್- ಬುದ್ಧ-ಬಸವರ ಹಾದಿ ತುಳಿದರೆ ಅದು ವಿಚಾರದ ದಾರಿಯಾಗಬಲ್ಲುದು. ಜ.ಹೊ.ನಾ. ಅವರಂತಹ ವಿಚಾರವಂತರು ಇತ್ತ ತಿರುಗಿಸುವ ಸುಧಾರಕರಾಗ ಬೇಕು. ಆಗುತ್ತಾರೆ. ಇನ್ನು ಹಾಸನದಮ್ಮ ಸಪ್ತ ಮಾತೃಕೆಯಲ್ಲೊಬ್ಬಳು. ಮಲೆನಾಡಿನ ಕೆಂಚಮ್ಮ ಬಯಲುಸೀಮೆ ಕಾಸೀಗೆದಮ್ಮ ಇವರೆಲ್ಲ ಅಕ್ಕ ತಂಗಿಯರೆಂಬ ಇಂತಹ ಪುರಾಣಗಳೆಲ್ಲ ಉಂಟು. ಕಾಲಮಾನದಲ್ಲಿ ಸೇರಿಕೊಂಡಿರುವ ಮೌಢ್ಯ ವಿಚಾರ ಗಳುಂಟು. ಇವುಗಳಿಂದ ಬೇರ್ಪಡಿಸಿ ದೇವದೇವಿ ಯರನ್ನು ಈಗ ಮಾನವರು ಕಾಪಾಡಿಕೊಳ್ಳ ಬೇಕೆನ್ನುವುದೇ ಚಿಂತಕರ ಕೆಲಸ. ಹಾಸನಮ್ಮನ ದೇವಗೆರೆ ಕೊಳೆತು ನಾರುತ್ತಿದೆ. ಅಲ್ಲಿದ್ದ ಹೂವು ಹಣ್ಣು ತರಕಾರಿ ಮಾರ್ಕೆಟ್ಟನ್ನು ತೆರವುಗೊಳಿಸಲು ಹೋಗಿ ಸರ್ಕಾರವು ಅಲ್ಲಿ ಹೇಲು ಉಚ್ಚೆ ಗುಂಡಿ ಮಾಡಿದೆ. ಇಂಥವನ್ನು ನಾಗರಿಕರು ಪರಿಹರಿಸಿಕೊಳ್ಳಬೇಕು.

*ಬೆಂಗಳೂರು* ***ಡಾ|| ರಾಜೇಗೌಡ ಹೊಸಹಳ್ಳಿ***

ನವೆಂಬರ್ ಸಂಚಿಕೆಯ "ಸುಗ್ರೀವಾಜ್ಞೆ ಹಿಂದಕ್ಕೆ ಪಡೆದ ರಾಜಕೀಯ ಪ್ರಹಸನ" ಎಂಬ ಸಿ. ಆರ್. ಕೃಷ್ಣರಾವ್‌ರವರು ನೀಡಿದ ಸಂಪಾದಕೀಯ ಬರಹ ಮರುಚಾಟಿ ಹೊಡೆದಂತೆ ಮೂಡಿಬಂದಿದೆ. ಚೆನ್ನಾಗಿ ಏಟಿನ ಗುರುತವೂ ತೋರಿಸಿಕೊಂಡಿದೆ. ಹಾಗೆಯೇ ಭಾಷೆ ಮತ್ತು ಬದುಕು ಕರುಳುಕೊರಳಿನ ಸಂಬಂಧ ಎನ್ನುವ ಸಿದ್ದನಗೌಡ ಪಾಟೀಲರ ಮಾತು ನ್ಯಾಯಾಲಯದಲ್ಲಿ ವಕೀಲರೊಬ್ಬರ ಪಾಟೀ ಸವಾಲಿಗೆ ಆಪಾದಿತರು ಮರು ಹೊಡೆತ ನೀಡಿದಂತೆ ಇಂದಿನ ರಾಜ್ಯಗಳಲ್ಲಿನ ಭಾಷಾ ಅನುಬಂಧವನ್ನು ತೋರಿಸಿಕೊಟ್ಟಿದೆ. ಉದಾಹರಣೆ : ಸ್ಪಷ್ಟ. ಬೆಂಗಳೂರಿನ ಕನ್ನಡ ಪರಿಸ್ಥಿತಿ ಕನ್ನಡಿ ಹಿಡಿದಂತೆ ಸ್ಫುಟವಾಗಿ ತೋರಿಬರುತ್ತಿದೆ. ಇದಕ್ಕಿಂತ ಹೆಚ್ಚಿನ ಸ್ಪಷ್ಟೀಕರಣ ಅಗತ್ಯವೂ ಇಲ್ಲ. ಒಟ್ಟಿನಲ್ಲಿ ಈ ಹಿಂದೆಯೇ ಸ್ಪಷ್ಟಪಡಿಸಿದಂತೆ ಸುಸ್ಪಷ್ಟವಾದ ಸಂಪಾದಕೀಯ ಬರಹಗಳೇ ಹೌದು.

ನೇತ್ರಾವತಿ ನದಿ ತಿರುಗಣೆ ಯೋಜನೆ ಎಂಬ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನಾದ್ಯಂತ ಜೀವನದಿಯಾಗಿ ಹರಿಯುತ್ತಿರುವ ನದಿಯೊಂದರ ಒಳನೋಟದಲ್ಲಿ ಪೂರ್ತಿ ವಿವರಿಸಿದ ಬೆಂಗಳೂರಿನ ಕೆ. ಎಸ್. ನವೀನ್‌ರವರು ಮಂಗಳೂರಿನವರಿಗಿಂತಲೂ ಚೆನ್ನಾಗಿ ಅರೆದು ತಿರುಗಿ ಇಲ್ಲಿಯ ಜನರ ಪರಿಸ್ಥಿತಿ ಬವಣೆಗಳನ್ನು ತಿಳಿಸುವಲ್ಲಿ ಮೂಕಸಾಕ್ಷಿಯ ರೀತಿಯಲ್ಲಿ ಈ ಊರಿನ ಆದರಕ್ಕೆ ಪಾತ್ರರಾಗಿದ್ದಾರೆ.

*ಕಾಸರಗೋಡು* ***ಕೀರಿಕ್ಕಾಡು ವನಮಾಲ ಕೇಶವ ಭಟ್ಟ***



ಶ್ರೀಯುತ ಕೆ. ಸಿ. ರಮೇಶ್ ಅವರಲ್ಲಿ,

ಡಿಸೆಂಬರ್ ೨೦೧೩ರ ಹೊಸತು ಸಂಚಿಕೆಯಲ್ಲಿ ಬಂದ ತಮ್ಮ ಲೇಖನ ಓದಿ ಆನಂದವಾಗಿ ಈ ಪತ್ರ ಬರೆಯುತ್ತಿರುವೆ. ತಾವು ಮನ್ನಾ ಡೇಯ ಸಮಗ್ರ ವ್ಯಕ್ತಿಚಿತ್ರವನ್ನು ಕೊಟ್ಟಿದ್ದೀರಿ. ಮನ್ನಾ ಡೇಯ ಬಗ್ಗೆ ನಾಡಿನ ಅನೇಕ ಪತ್ರಿಕೆಗಳಲ್ಲಿ ಲೇಖನಗಳು ಪ್ರಕಟ ವಾಗಿವೆ. ಆದರೆ ನೀವು ಕೊಟ್ಟಷ್ಟು ವಿವರಗಳನ್ನು ಬಹುಶಃ ಯಾರೂ ಕೊಟ್ಟಿಲ್ಲ. ಲೇಖನದಲ್ಲಿ ಯಾವ ಮುಲಾಜಿಗೆ ಒಳಗಾಗದೇ ಸತ್ಯ ಸಂಗತಿಗಳನ್ನು ಮರೆಮಾಚದೆ ಅಂದಿನ ಹಿಂದೀ ಚಲನಚಿತ್ರರಂಗದ ಇತಿಹಾಸವನ್ನೇ ಬಿಚ್ಚಿಟ್ಟಿದ್ದೀರಿ. ಲೇಖನ ನಿಜಕ್ಕೂ ಅದ್ಭುತವಾಗಿದೆ, ಪರಿಣಾಮಕಾರಿಯಾಗಿದೆ. ಈ ಲೇಖನವನ್ನು ಸಂಗ್ರಹಿಸಿಡಲು ಯೋಗ್ಯವಾಗಿ ಇಡೀ ಲೇಖನದಲ್ಲಿಯ ಈ ಕೆಳಗಿನ ವಾಕ್ಯಗಳು ನನ್ನ ಗಮನ ಸೆಳೆದವು : "ಸಂಗೀತ ನಿರ್ದೇಶಕರಾದ ಶಂಕರ್ ಜೈಕಿಶನ್ ಮನ್ನಾ ಡೇ ಅವರಿಂದ ಹಾಡಿಸಿ ಆತನೊಬ್ಬ ಸ್ಟಾರ್ ಗಾಯಕನಲ್ಲವೆಂಬಂತೆ ಸರಳವಾಗಿಯೇ ಇದ್ದ ಮನ್ನಾ ಡೇ ಅವರಿಗೇ ಸ್ವತಃ ತನ್ನ ಸಂಗೀತ ಪಯಣದಲ್ಲಿ ಹೇಗಿರಬೇಕಿತ್ತು ಅಥವಾ ಹೇಗಿರಬೇಕು ಎಂದು ತಿಳಿಸಿದ ಅನ್ನಿಸುತ್ತದೆ."

'ಪಾಪ್ಯುಲರ್' ಎಂಬ ಮಾನದಂಡದಲ್ಲಿ ಮನ್ನಾ ಡೇ ಮೊದಲಿಗರಾಗಿರಲಿಲ್ಲ. ಭಾರತೀಯ ಸಿನೇಮಾಗಳಲ್ಲಿ ಸಂಗೀತವೇ ಬೇರೆಲ್ಲಾ ಅಂಶಗಳಿಗಿಂತಲೂ ಹೆಚ್ಚು ಪ್ರಧಾನವಾಯಿತು. ಕೆಲವು ಚಿತ್ರಗಳಂತೂ ಕೇವಲ ಸಂಗೀತದಿಂದಲೇ ಗೆದ್ದವು. "ಕೆಲವು ನಿರ್ದಿಷ್ಟ ಸನ್ನಿವೇಶ ಅಥವಾ ಪಾತ್ರಗಳಿಗೆ ಇಂತಹ ಗಾಯಕರೇ ಬೇಕೆನ್ನುವ ಮಟ್ಟಿಗೆ ಅನೇಕ ಗಾಯಕರುಗಳು 'ಫಿಕ್ಸ್' ಆಗಿ ಹೋದರು": "ಮನ್ನಾಡೇ ಮಾತ್ರ ಯಾವ ನಿರ್ದಿಷ್ಟ ನಾಯಕ ನಟನಿಗೆ 'ಫಿಕ್ಸ್' ಆಗಲಿಲ್ಲ." "ಎಷ್ಟೋ ಹೀರೋಗಳಿಗೆ ಅವರು ಅನೇಕ ಹಾಡು ಗಳನ್ನು ಹಾಡಿದ್ದರೂ ಅವರು ಸ್ಟಾರ್ ವಾಯ್ಸ್ ಆಗಲಿಲ್ಲ." "ಇವರು ನಾಯಕ ನಟರಿಗೆ (ಹೀರೋಗಳಿಗೆ) ಮಾತ್ರ ಹಾಡಿ ಪ್ರಖ್ಯಾತರಾಗಲಿಲ್ಲ." - ಇಂತಹ ವಾಸ್ತವಿಕ ವಾಕ್ಯಗಳು ಈ ಲೇಖನದಲ್ಲಿ ಮೂಡಿವೆ.

ಈ ಲೇಖನದಲ್ಲಿ ತಾವು ಬರೆದ "ರಾಜ್‌ಕಪೂರ್ ಅವರಿಗೆ ಇವರ ಕಂಠವು ಮುಖೇಶ್ ಅವರ ಕಂಠಕ್ಕಿಂತಲೂ ಹೆಚ್ಚು ಹೊಂದುತ್ತಿತ್ತು" ಎಂಬುದನ್ನು ನಾನು ಅಷ್ಟೊಂದು ಒಪ್ಪುವುದಿಲ್ಲ. ವಾಸ್ತವವಾಗಿ ಮನ್ನಾ ಡೇಯವರ ಧ್ವನಿ ಯಾವ ನಟರಿಗೂ ಹೊಂದುತ್ತಿರಲಿಲ್ಲ. ಹೀಗಾಗಿ ಅವರು ಚಲನಚಿತ್ರ ಸಂಗೀತಲೋಕದಲ್ಲಿ ಎರಡನೇ ದರ್ಜೆಯ ಗಾಯಕರ ಇಾಗಿ ಉಳಿದರು. ಎಲ್ಲಿ ಶಾಸ್ತ್ರೀಯ ಸಂಗೀತದ ಸನ್ನಿವೇಶ ಇರುತ್ತದೆಯೋ ಅಲ್ಲಿ ಮನ್ನಾ ಡೇಯವರನ್ನು ಸಂಗೀತ ದಿಗ್ದರ್ಶಕರು ಉಪಯೋಗಿಸಿಕೊಂಡರು, ಎಂದು ಅನ್ನಿಸುವುದು.

*ಧಾರವಾಡ* ***ರಾಜಶೇಖರ ಬ. ಜಂಗಮಶೆಟ್ಟಿ***

(ಈ ತಿಂಗಳು) ೧೧ನೇ ಪುಟದಿಂದ

ಉಲ್ಲಂಘನೆ ಎನ್ನುವುದರಲ್ಲಿ ಸಂಶಯವಿಲ್ಲ. ಆದರೂ ಅಮೆರಿಕದಲ್ಲಿರುವ ನಮ್ಮ ರಾಜತಂತ್ರಜ್ಞರು ವೀಸಾ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸದಿದ್ದರೆ ಇಡೀ ದೇಶಕ್ಕೆ ಕಳಂಕ ಲೇಪಿಸುತ್ತದೆ. ಇಂಥದಕ್ಕೆ ಅಮೆರಿಕದ ಅಧಿಕಾರಿಗಳು ಕಾಯುತ್ತಿರುತ್ತಾರೆ.

ಭಾರತದ ಪ್ರಮುಖರನ್ನು ಅವಮಾನಗೊಳಿಸುತ್ತಿರುವುದು ಇದೇ ಮೊದಲ ಸಲವೇನಲ್ಲ ಅಮೆರಿಕದಲ್ಲಿ. ಭಾರತ ಸರಕಾರ ಅಂಥ ಪ್ರಕರಣಗಳು ಸಂಭವಿಸಿದಾಗ ಸರಿಯಾದ ಪ್ರತಿಭಟನೆ ತೋರಿದ್ದರೆ ಪರಿಸ್ಥಿತಿ ಬೇರೆಯೇ ಆಗಿರುತ್ತಿತ್ತೇನೊ. ಅಮೆರಿಕದ ಪೊಲೀಸರು, ವಿಮಾನ ನಿಲ್ದಾಣಗಳಲ್ಲಿನ ಭದ್ರತಾ ಸಿಬ್ಬಂದಿ ಯಾವತ್ತೂ ಭಾರತದಿಂದ ಬಂದಿಳಿಯುವವರನ್ನು ಸಂಶಯದಿಂದಲೇ ನೋಡುತ್ತಾರೆ. ಅನಗತ್ಯವಾಗಿ ಹೆಚ್ಚಿನ ತಪಾಸಣೆಗೆ ಗುರಿಪಡಿಸುತ್ತಾರೆ. ಭಾರತದ ಮಾಜಿ ರಕ್ಷಣಾ ಸಚಿವ ಜಾರ್ಜ್ ಫರ್ನಾಂಡಿಸ್‌ಗೆ ಎರಡು ಸಲ ಅಮೆರಿಕದ ವಿಮಾನ ನಿಲ್ದಾಣದಲ್ಲಿ ವಿವಸ್ತ್ರಗೊಳಿಸಿ ತಪಾಸಣೆ ನಡೆಸಿದರು. ಆದರೂ ಆತ ಅದನ್ನು ಪ್ರತಿಭಟಿಸಲಿಲ್ಲ. ಮತ್ತೆ ಭಾರತದ ಮಾಜಿ ರಾಷ್ಟ್ರಪತಿ ಎ. ಪಿ. ಜೆ. ಅಬ್ದುಲ್ ಕಲಾಮ್ ಅವರನ್ನು ಎರಡು ಸಲ ತಪಾಸಣೆಗೆ ಗುರಿಮಾಡಿತು. ಭಾರತ ಸರಕಾರ ಪ್ರತಿಭಟನೆ ವ್ಯಕ್ತಪಡಿಸಿದ ಮೇಲೆ ಅಮೆರಿಕ ಸಮಜಾಯಿಷಿ ನೀಡಿ ಕ್ಷಮೆ ಯಾಚಿಸಿತು. ಇನ್ನು ಇದೇ ರೀತಿ ವಿಮಾನ ನಿಲ್ದಾಣದಲ್ಲಿ ತಪಾಸಣೆಗೆ ಗುರಿಯಾಗಿ ಅವಮಾನಿತರಾದವರ ಪಟ್ಟಿಯಲ್ಲಿ ಬಾಲಿವುಡ್ ನಟ ಶಾರುಖ್ ಖಾನ್, ಅಮೆರಿಕದ ಮಾಜಿ ರಾಯಭಾರಿ ಮೀರಾ ಶಂಕರ್, ಕೇಂದ್ರ ಸಚಿವ ಪ್ರಫುಲ್ ಪಟೇಲ್ ಮೊದಲಾದವರಿದ್ದಾರೆ.

ಅಮೆರಿಕದಲ್ಲಾಗಲಿ, ಬೇರೆಲ್ಲಾದರೂ ಆಗಲಿ ಪೊಲೀಸರ ನಡವಳಿಕೆಯಲ್ಲಿ ವ್ಯತ್ಯಾಸವೇನಿಲ್ಲ. ಮುಜುಗರವಾದರೂ ಸರಕಾರಗಳು ಸಮರ್ಥಿಸಿಕೊಳ್ಳುತ್ತವೆ. ಅಮೆರಿಕ ಸರಕಾರವೂ ದೇವಯಾನಿ ಪ್ರಕರಣದಲ್ಲಿಯೂ ಹಾಗೆಯೇ ಮಾಡಿದೆ. ವಿದೇಶಾಂಗ ಕಾರ್ಯದರ್ಶಿ ಜಾನ್ ಕೆರ್ರಿಯವರು ಸಮಜಾಯಿಷಿ ನೀಡಿದ್ದಾರೆ. ಭಾರತ ಅಪೇಕ್ಷಿಸುತ್ತಿರುವಂತೆ ಅಮೆರಿಕ ಕ್ಷಮೆ ಯಾಚಿಸುವುದೆ ?

✶ ✶ ✶

ಕೊನೆಗೂ ಪಾರ್ಲಿಮೆಂಟಿನ ಉಭಯ ಸದನಗಳಲ್ಲಿ ಚುಮುಚುಮು ಛಳಿಗಾಲದ ಅಧಿವೇಶನದಲ್ಲಿ ಲೋಕಪಾಲ ಮಸೂದೆ ಅಂಗೀಕಾರವಾಗಿದೆ. ಈ ಅಧಿವೇಶನದಲ್ಲೇ ಮಸೂದೆ ಅಂಗೀಕಾರವಾಗಬೇಕು ಎಂದು ಎಂಟೊಂಬತ್ತು ದಿನಗಳಿಂದ ಉಪವಾಸ ಕುಳಿತಿದ್ದ ಅಣ್ಣಾ ಹಜಾರೆ ಉಪವಾಸ ಮುಗಿಸಿ ಕೃತಾರ್ಥ ರಾಗಿದ್ದಾರೆ. ಅವರ ಬೆಂಬಲಿಗರು ಜೈಕಾರ ಹಾಕಿದ್ದಾರೆ. ಅವರಿಂದ ದೂರ ಸರಿದು ರಾಜಕಾರಣದಲ್ಲಿ ಮುಳುಗಿರುವ ಅರವಿಂದ ಕೇಜ್ರಿವಾಲ್ ಮಾತ್ರ ಇದು ನಿರುಪಯುಕ್ತ ನಿತ್ರಾಣ ಮಸೂದೆ ಎಂದಿದ್ದಾರೆ. ಈಚೆಗೆ ನಡೆದ ದೆಹಲಿ ವಿಧಾನಸಭಾ ಚುನಾವಣೆಗಳಲ್ಲಿ ೨೮ ಅಭ್ಯರ್ಥಿಗಳನ್ನು ವಿಜಯಗೊಳಿಸಿದ ಕೇಜ್ರಿವಾಲರ 'ಆಮ್ ಆದ್ಮಿ ಪಕ್ಷ' ಬಹುಮತವಿಲ್ಲದೆ ಕಾಂಗ್ರೆಸ್ ಬೆಂಬಲದಿಂದ ಸರಕಾರ ರಚಿಸದೆ, ಆಶ್ವಾಸನೆಗಳನ್ನು ಎಷ್ಟು ಈಡೇರಿಸುತ್ತಾರೆ ನೋಡಬೇಕು. ಒಂದು ಕಾಲದಲ್ಲಿ ಅಣ್ಣಾ ಹಜಾರೆ ಪಟ್ಟಶಿಷ್ಯನಾಗಿದ್ದ ಈತ ಈಗ ಕಡು ವಿರೋಧಿ. ಇಬ್ಬರೂ ಲೋಕಪಾಲ ಕಾಯಿದೆಯಿಂದ ಭ್ರಷ್ಟಾಚಾರ ತೊಲಗುವುದೆಂದು ನಂಬಿರುವವರೆ.

ಈ ಕಾನೂನು ಬರುತ್ತಿದೆ. ಅದು ಜಾರಿಯಾಗುತ್ತದೆ. ಮುಂದೆ ಭ್ರಷ್ಟಾಚಾರಕ್ಕೆ ಮೂಗುದಾರವಾಗುತ್ತದೆ. ಇನ್ನು ಭ್ರಷ್ಟರು ತಪ್ಪಿಸಿಕೊಳ್ಳುವ ಹಾಗೇ ಇಲ್ಲ: ಹೀಗೆ ಯಾರಾದರೂ ನಂಬಿಕೊಂಡರೆ ಮೂರ್ಖರಾಗುತ್ತಾರೆ. ಕಾನೂನಿನಿಂದ ಅಕ್ರಮ ಗಳನ್ನು ತಡೆಯಬಹುದು ಎಂದುಕೊಂಡರೆ ಪ್ರಯೋಜನವಿಲ್ಲ. ಈಗಿರುವ ಕಾನೂನುಗಳಿಂದ ಭ್ರಷ್ಟರನ್ನು ದಂಡಿಸಬಹುದು, ಆಡಳಿತದಲ್ಲಿರುವವರಲ್ಲಿ ಇಚ್ಛಾಶಕ್ತಿ ಇದ್ದರೆ. ಎಂಥ ಪ್ರಬಲವಾದ ಕಾನೂನು ತಂದರೂ ಅದನ್ನು ಜಾರಿಗೆ ತರುವುದು ಸರಕಾರ ತಾನೆ. ಭ್ರಷ್ಟತೆಯಿಂದ ತುಂಬಿ ತುಳುಕುತ್ತಿರುವ ಆಡಳಿತ ಯಂತ್ರ ಈ ಲೋಕಪಾಲ ಕಾಯಿದೆಯನ್ನು ಹೇಗೆ ಪಾವನ ಮಾಡುತ್ತದೆ ನೋಡೋಣ. ಸದ್ಯಕ್ಕಂತೂ ಮಸೂದೆ ಅಂಗೀಕಾರವಾಗಿದೆ. ರಾಷ್ಟ್ರಪತಿ ಅಂಕಿತ ಮುದ್ರೆ ಔಪಚಾರಿಕ. ಮನಮೋಹನ ಸಿಂಗ್ ಮತ್ತು ಕಂಪೆನಿ ಬೆನ್ನೂ ತಟ್ಟಿಕೊಳ್ಳಬಹುದು. ಭ್ರಷ್ಟಾಚಾರ ಮುಂದುವರಿಯುವುದಕ್ಕೆ ಅಡ್ಡಿಯೇನಿಲ್ಲ.

# ಒಬಾಮಾನ ಬಸ್ಸು



ಜಗತ್ತನ್ನು ಸುತ್ತುವ ಒಬಾಮಾನ ಬಸ್ಸು
'ಉದಾರೀಕರಣ' ಹೆಸರಿನ ರಂಗಿನ ಗತ್ತು.
ಭಾರತದಲ್ಲಿ ನಿಲ್ದಾಣ, ಪ್ರಯಾಣಿಕರು ಬೇಕು
ಪ್ರಯಾಣದಲ್ಲಿ ಪರಿಚಯಿಸುತ್ತಾರೆ ಸಂಪತ್ತಿನ ಸವಲತ್ತು.
'ಕರಡಿ' – 'ಗೂಳಿ'ಗಳ ಮಾರುಕಟ್ಟೆ ಮೇಲಾಟ
ಷೇರು ಸೂಚಂಕಗಳ ಕಾಂಚಾಣ ಕುಣಿತ,
ಹಣಕೊಟ್ಟರೆ ಮಾತ್ರ ಇಲ್ಲಿ ಸರ್ವವು ಉಚಿತ
ಜನರ ಸುಖನೆಮ್ಮದಿಗಾಗಿ ಖಾಸಗಿ ಶುಲ್ಕ ಬಿಗಿತ,
ಅನೇಕ ಸಮಾಜಗಳ ವಿವಿಧ ದೇಶಗಳ
ಭಿನ್ನರು ಅಭಿನ್ನ ಧನದೆಡೆಗೆ ಪ್ರಯಾಣಿಸುತ್ತಿದ್ದಾರೆ,
ಚಾಲಕ ಒಬಾಮಾ ಇಸ್ರೇಲಿ ಕಂಡೆಕ್ಟರ್
ಭಾರತದ ನಕ್ಷೆ ನೋಡುತ್ತಿದ್ದಾರೆ,
'ನಾವು ಪ್ರಯಾಣಿಕರ ಪ್ರಾಮಾಣಿಕ ಸೇವಕರು'
'ಜನಸೇವೆಯೇ ಗುರಿ' ಗಟ್ಟಿಯಾಗಿ ಕೂಗುತ್ತಿದ್ದಾರೆ,
'ನಾವು ಪ್ರಯಾಣಿಸುವ ಬಸ್ಸು – ದಾರಿ ಸರಿಯಾಗಿದೆ'
ಪ್ರಧಾನಿ ಮನಮೋಹನ ಆಶ್ವಾಸನೆ ನೀಡುತ್ತಿದ್ದಾರೆ,
'ಪ್ರಪಾತಗಳ ಪಕ್ಕ ಪ್ರಯಾಣ ಅಪಾಯ
ಬಸ್ಸಿನ ಎಂಜಿನ್, ಡ್ರೈವರ್ ಸರಿಯಿಲ್ಲ',
ಪ್ರಯಾಣ ಜನಗಳಿಗೆ ಸುರಕ್ಷಿತವಲ್ಲ
'ಬಸ್ಸು ತೆಗೆಯಿರಿ' ಪ್ರತಿಭಟಿಸುತ್ತಿದ್ದಾರೆ ಕಾಮ್ರೇಡುಗಳು,
ಈ ಬಸ್ಸಿನಂಥ ಮತ್ತೊಂದು ಬಸ್ಸಿಲ್ಲ
ನಾನೇ ಭಾರತಕ್ಕೆ ಬುಕ್ಕಿಂಗ್ ಏಜೆಂಟ್
ಆರೆಸ್ಸೆಸ್ ಸೀಟಿ ಗಟ್ಟಿಯಾಗಿ ಊದುತ್ತಾ
ಕೇಸರಿಬಾವುಟ ಬೀಸುತ್ತಿದ್ದಾರೆ ಮೋದಿಗಳು,
ನನ್ನದೇ ಬಸ್ಸು ನನ್ನದೇ ಪರವಾನಗಿ
ಎನ್ನುತ್ತಿದೆ 'ದುಡ್ಡಣ್ಣ' ಅಮೇರಿಕಾ,
ಹೌದೆಂದು ತಲೆಹಾಕುತ್ತಿದೆ
ಅಮೇರಿಕಾ ಪ್ರಾಯೋಜಿತ ಪರಿಚಾರಕ,
ಗಾಂಧಿದೇಶದಲ್ಲಿ ಸ್ವಂತ ಬಸ್ಸು ಇರುವಾಗ
ಬಾಡಿಗೆ ಬಸ್ಸು ಯಾರಿಗೆ ಬೇಕು ? ಚಿಂತಿಸುತ್ತಾನೆ
ಭಾರತೀಯ.

ಕಾವ್ಯಧಾರೆ

**ಎಂ. ಇಕ್‌ಬಾಲ್ ಹುಸೇನ್**, ವಕೀಲರು, ನಂ. ೫ 'ಎ', ೧ನೇ ಬ್ಲಾಕ್, ೨ನೇ ಮುಖ್ಯರಸ್ತೆ (ಬ್ಯಾಂಕ್ ಆಫ್ ಇಂಡಿಯಾ ಎದುರು), ಆರ್. ಟಿ. ನಗರ, ಬೆಂಗಳೂರು – ೫೬೦ ೦೩೨

# ಋಗ್ವೇದ ಪ್ರವೇಶಿಕೆ
## ಐತಿಹ್ಯ ಮತ್ತು ವಾಸ್ತವ



**ಜಿ. ರಾಮಕೃಷ್ಣ**

ಮೂಲತಃ ಮಾರ್ಕ್ ಟ್ವೇನ್‌ದೆಂದು ಹೇಳಲಾದ ಒಂದು ಹಾಸ್ಯಚಟಾಕಿಯು ಬೇರೆ ಬೇರೆ ರೂಪಗಳಲ್ಲಿ ಪ್ರಚಲಿತವಾಗಿದೆ. ಒಬ್ಬ ಸ್ನೇಹಿತ ಅವನ ಬಳಿ ಬಂದು ಹೇಳಿದನಂತೆ : "ಏ ಮಾರ್ಕ್, ನನ್ನ ಮನಸ್ಸನ್ನು ಗಟ್ಟಿ ಮಾಡಿಕೊಂಡುಬಿಟ್ಟಿದ್ದೇನೆ. ಏನು ಗೊತ್ತೆ ? ಇಂದಿನಿಂದ ಧೂಮಪಾನ ಮಾಡಕೂಡದೆಂದು ನಿರ್ಧರಿಸಿ ಅದನ್ನು ಬಿಟ್ಟುಬಿಟ್ಟೆ . ಮೂವತ್ತು ವರ್ಷಗಳ ಹವ್ಯಾಸಕ್ಕೆ ಕೊನೆಗೂ ಗತಿ ಕಾಣಿಸಿದೆ." ಅದಕ್ಕೆ ಟ್ವೇನ್‌ನ ಮಾರುತ್ತರ ಹೀಗಿತ್ತು : "ಅದೇನು ಮಹಾ ದೊಡ್ಡ ವಿಷಯವಯ್ಯ ? ನಾನು ಧೂಮಪಾನಕ್ಕೆ ನಲವತ್ತು ವರ್ಷಗಳಿಂದ ಅಂಟಿಕೊಂಡಿದ್ದೇನೆ ಮತ್ತು ಸ್ವಪ್ರೇರಣೆಯಿಂದ ನಾನು ಅದನ್ನು ಎಷ್ಟೋ ಬಾರಿ ಬಿಟ್ಟುಬಿಟ್ಟಿದ್ದೇನೆ."

ಋಗ್ವೇದದ ನಮ್ಮ ಜೂಜುಗಾರನು ಮಾರ್ಕ್ ಟ್ವೇನ್‌ನ ಪೂರ್ವರೂಪ ಎನ್ನಬಹುದು. ಅವನು ಜೂಜುಕಟ್ಟೆಗೆ ಇನ್ನು ಕಾಲಿರಿಸಕೂಡದೆಂದು ತೀರ್ಮಾನಿಸಿದ್ದಾನೆ ಮತ್ತು ಅಕ್ಷದ ಶಬ್ದ ಕೇಳಿಸಿಕೊಂಡಾಗ ತನ್ನ ಅರಿವಿಲ್ಲದೆ ಜೂಜುಕಟ್ಟೆಯ ಕಡೆ ಪಾದ ಬೆಳೆಸಿದ್ದಾನೆ. ಮನೋವಿಜ್ಞಾನಿಗಳು ಈ ಸ್ವಭಾವಕ್ಕೆ ಗೀಳು, ಗ್ರಸ್ತತೆ, ಸಂಪೀಡನೆ ಎಂದು ಬೇರೆ ಬೇರೆ ಹೆಸರುಗಳನ್ನಿತ್ತಿದ್ದಾರೆ. ಚಾರಿತ್ರಿಕವಾಗಿ 'ಅಕ್ಷ' ಎಂಬ ವೇದಕಾಲೀನ ಪದಕ್ಕೆ ಜೂಜಿನ ಒಂದು ಪರಿಕರವೆಂಬ ಒಂದೇ ಅರ್ಥವಿಲ್ಲ. ಅದೊಂದು ಸಂಕೀರ್ಣ ಪರಿಕಲ್ಪನೆ, ಅತಿ ಪ್ರಾಚೀನ ಘಟ್ಟದ ಸಮಾಜದ ಒಂದು ಪದ್ಧತಿಯ ಸಂಕೇತ. ಕವಷ ಐಲೂಷನ ಋಗ್ವೇದ ಸೂಕ್ತವು (10.34) ಆ ಹಿನ್ನೆಲೆಯಲ್ಲಿ ಬಹಳ ಸಾರವತ್ತಾದ್ದು ಮತ್ತು ಬದಲಾಗುತ್ತಿರುವ ಸಾಮಾಜಿಕ ಪದ್ಧತಿಗಳತ್ತ ಬೆರಳುಮಾಡಿ ತೋರಿಸುವಂಥದು. ಇದನ್ನು ಸ್ವಲ್ಪ ಸಹನೆಯಿಂದ ಕರಗತ ಮಾಡಿಕೊಳ್ಳುವ ಅಗತ್ಯವಿದೆ. ಪ್ರಸ್ತುತ ಸೂಕ್ತವು ಒಳ್ಳೆಯ ಕವನವಾಗಿರುವುದರ ಜೊತೆಗೆ ಒಂದು ಪ್ರಮುಖ ಚಾರಿತ್ರಿಕ ದಾಖಲೆಯೂ ಆಗಿದೆ. ಇದು ಈ ಸರಣಿಯ ಏಳನೆಯ ಕಂತು.

ಸೂಕ್ತದ ಐದನೆಯ ಮಂತ್ರದಲ್ಲಿ ಅಕ್ಷದ ಬಗೆಗೆ ಪೂರ್ಣ ನಿರಾಸಕ್ತಿಯ ಭಾವ ತಾಳಬೇಕೆಂಬ ಆಶಯವು ಅದು ಹೇಗೋ ಎಂದೂ ಕೈಗೂಡುವುದಿಲ್ಲವೆಂಬ ವಿಚಾರ ಪ್ರಸ್ತಾಪಕ್ಕೆ ಬಂದಿದೆ. ಇಂದಿನ ಅಂತರ ರಾಷ್ಟ್ರೀಯ ರಾಜಕೀಯ ವಿದ್ಯಮಾನಗಳಲ್ಲಿ ಪರಮಾಣು ಅಸ್ತ್ರಗಳಿಂದ ಉಂಟಾಗಬಹುದಾದ ಕ್ಷೋಭೆಯನ್ನು ನಿವಾರಿಸಿಕೊಳ್ಳುವುದು ಹೇಗೆಂಬ ಚರ್ಚೆ ಆಗಾಗ್ಗೆ ನಡೆಯುತ್ತಿರುತ್ತದೆ. ಅದಕ್ಕೆ ನಾವು ಕಂಡುಕೊಂಡಿರುವ ಒಂದು ಪರಿಹಾರವು ಪರಮಾಣು ಅಸ್ತ್ರಗಳನ್ನು ಹೊಂದಿರುವ ರಾಷ್ಟ್ರಗಳೆಲ್ಲಾ ತಾವು ಅದನ್ನು ಬಳಸುವುದರಲ್ಲಿ ಮೊದಲಿಗರಾಗುವುದಿಲ್ಲವೆಂದು ಘೋಷಿಸಿಕೊಳ್ಳುವುದು. ಹಾಗೆ ಘೋಷಿಸಿಕೊಂಡವರು ಯಾವುದೋ ವಿಷಗಳಿಗೆಯಲ್ಲಿ ತಾವೇ ಮೊದಲು ಅದನ್ನು ಬಳಸಿದರೆ ಮನುಕುಲ ಏನು ಮಾಡಬಲ್ಲುದು ? ಆ ರಾಷ್ಟ್ರವನ್ನು ಅನೀತಿವಂತವೆಂದು ಕಪ್ಪು ಚುಕ್ಕೆ ಹಚ್ಚಬಹುದು, ಆದರೆ ಅನಾಹುತವು ನಿವಾರಣೆ ಯಾದಂತಾಗುವುದಿಲ್ಲ. ಸ್ವಗತ ಶೂರನಾದ ನಮ್ಮ ಜೂಜುಗಾರನ ಸಂದರ್ಭ ಅಷ್ಟು ಹೀನಾಯವಾದುದಲ್ಲ, ಆದರೆ ಅವನ ನಿರ್ಧಾರವು ಅಚಲವಾಗಿ ನಿಲ್ಲುವುದಿಲ್ಲ. "ಕುದುರೆಯ ಬಾಲಕ್ಕೆ ಇನ್ನುಮುಂದೆ ಹಣ ಕಟ್ಟುವುದಿಲ್ಲ" ಎಂದು ತೀರ್ಮಾನಿಸುವವನ ಮೋಹವು ಅವನ ನಿರ್ಧಾರವನ್ನು ಅಸಿಂಧುಗೊಳಿಸುವಂತೆ ಅಕ್ಷವು ಜೂಜುಗಾರನ ನಿರ್ಧಾರವನ್ನು ಪೊಳ್ಳಾಗಿಸಿ ಬಿಡುತ್ತದೆ. ತಾನೇ ಮೊದಲು ಅಕ್ಷವನ್ನು ಉರುಳಿಸದಿದ್ದರೂ ಬೇರೆಯವರು ಉರುಳಿಸಿದ





ಅಕ್ಷದ ಶಬ್ದವು ಅವನನ್ನು ಜೂಜಿನ ತಾಣಕ್ಕೆ ಸೆಳೆದೊಯ್ಯುತ್ತದೆ. ಕವಿಯು ಇಲ್ಲೊಂದು ಉಪಮೆ ಕೊಡುತ್ತಾನೆ : ಜಾರಿಣಿಯೊಬ್ಬಳು ಪ್ರಿಯಕರನನ್ನು ಕೂಡಿಕೊಳ್ಳಲು ನಿರ್ಧರಿತ ಜಾಗಕ್ಕೆ ಸಡಗರದಿಂದ ತೆರಳುವಂತೆ ಜೂಜುಗಾರನು ಜೂಜಿನ ತಾಣಕ್ಕೆ ನಡೆದುಬಿಡುತ್ತಾನೆ (೧.೩೪.೫ : ಯದಾದೀಧ್ಯೇ ನ ದವಿಷಾಣ್ಯೇಭಿಃ ಪರಾಯದ್ಭ್ಯೋ ಅವ ಹೀಯೇ ಸಖಿಭ್ಯಃ। ನ್ಯುಪ್ತಾಶ್ಚ ಬಭ್ರವೋ ವಾಚಮಕ್ರತ ಏಮೀದೇಷಾಂ ನಿಷ್ಕೃತಂ ಜಾರಿಣೀವ ॥). ಹಾಗೆ ಜೂಜಿನ ಮನೆಗೆ ತೆರಳುವ ಜೂಜುಗಾರನ ಮನಸ್ಸಿನಲ್ಲಿ ಜಯವು ಅವನಿಗಾಗಿ ಕಾಯುತ್ತಿದೆಯೆಂಬ ಭಾವನೆ ಮೂಡುತ್ತದೆ. "ಇಂದು ಯಾವ ಶ್ರೀಮಂತನನ್ನು ಜಯಿಸಲಿ" ಎಂದು ಕೇಳುತ್ತಲೇ ಒಳಗೆ ಹೋಗುತ್ತಾನೆ. ಹೋಗಿ ಅಕ್ಷವನ್ನು ಕಾಣುತ್ತಲೇ ಅವನ ಇಚ್ಛೆಯು ದ್ವಿಗುಣಗೊಳ್ಳುತ್ತದೆ (೧.೩೪.೬). ಇಚ್ಛೆಯ ಪರಿಣಾಮವು ಪ್ರತಿಕೂಲದ್ದಾಗುವ ಸಂಭವವಿದ್ದೇ ಇರುತ್ತದೆ, ಏಕೆಂದರೆ ಇವನನ್ನು ಪರಾಜಯಗೊಳಿಸಲು ಕಾತುರರಾಗಿರುವವರು ಇರುತ್ತಾರಲ್ಲ! ಬರಿಗೈಯವನನ್ನಾಗಿಸಿ ಅವರು ಇವನನ್ನು ಸಂತಾಪಕ್ಕೀಡುಮಾಡುತ್ತಾರೆ (೧.೩೪.೭).

ಮುಂದಿನ ಎರಡು ಮಂತ್ರಗಳಲ್ಲಿ ಅಕ್ಷದ ವಸ್ತುನಿಷ್ಠ ಲಕ್ಷಣಗಳನ್ನು ಹೇಳಲಾಗಿದೆ. ಅಕ್ಷಗಳನ್ನು ಜನಸಮುದಾಯದ ನೂರಾರು ಮಂದಿ ಎಸೆದು ಜೂಜಾಡುತ್ತಾರೆ, ಆದರೆ ಅವಕ್ಕೆ ಯಾರ ಬಗೆಗೂ ವ್ಯಾಮೋಹವಿಲ್ಲ; ಸವಿತೃ ದೇವತೆಯಂತೆ ಅವು ತಮ್ಮ ನೈಜ ಧರ್ಮವನ್ನು ಪಾಲಿಸುತ್ತವೆ. ಪಕ್ಷಪಾತವು ಅವಕ್ಕೆ ಹೊರತಾದದ್ದು. ಜೂಜುಗಾರನು ಕ್ರೂರಿಯೋ ನಮ್ರನಾದವನೋ ಎಂಬುದು ಅಕ್ಷಕ್ಕೆ ಅಪ್ರಸ್ತುತ; ಅವನು ಕೋಪಿಷ್ಠನಾದರೆ ಅಕ್ಷಕ್ಕೇನೂ ಮುಲಾಜಿಲ್ಲ. ಜನಸಮುದಾಯದ ಅಥವಾ ಗಣಸಂಘದ ರಾಜನೇ ಆದರೂ ಅವಕ್ಕೆ ಅವನು ನಮಿಸಬೇಕೇ ವಿನಾ ಅಧಿಕಾರ ಚಲಾಯಿಸಲಾಗದು. ಯಾರು ಆಡಿದರೇನು, ಎಷ್ಟು ಜನ ಆಡಿದರೇನು, ಅಕ್ಷವು ಅದರಿಂದ ವಿಚಲಿತವಾಗುವುದಿಲ್ಲ (ಮಂತ್ರ ೮ : ತ್ರಿಪಂಚಾಶಃ ಕ್ರೀಳತಿ ವ್ರಾತ ಏಷಾಂ ದೇವ ಇವ ಸವಿತಾ ಸತ್ಯಧರ್ಮಾ। ಉಗ್ರಸ್ಯ ಚಿನ್ಮನ್ಯವೇ ನಾ ನಮಂತೇ ರಾಜಾ ಚಿದೇಭ್ಯೋ ನಮ ಇತ್ಕೃಣೋತಿ ॥). ಇಲ್ಲಿ 'ವ್ರಾತ' ಎಂದರೆ ಗಣ ಅಥವಾ ಸಂಘ ಎಂದರ್ಥ. ಈ ಮಂತ್ರದಿಂದ ಅಕ್ಷದ ಬೇರೊಂದು ಆಯಾಮದ ಪ್ರಸ್ತಾಪವು ಆರಂಭವಾಗಲಿದೆ. ಗಣದಲ್ಲಿ ಎಲ್ಲರೂ ಅದನ್ನು ಮಾನ್ಯ ಮಾಡಲೇಬೇಕು. ಹಿರಿಯನಿಗೆ ಒಲಿಯುವುದು ಅಥವಾ ಕಿರಿಯವನಿಗೆ ಉಪೇಕ್ಷೆ ತೋರುವುದು ಅದರ ಲಕ್ಷಣವಲ್ಲ. ಎಲ್ಲರನ್ನೂ ಒಂದೇ ದೃಷ್ಟಿಯಿಂದ ಕಾಣುವುದು ಅಕ್ಷದ ಗುಣ. ಗಣದಲ್ಲಿ ಅಕ್ಷವು ಒಂದು ಸಂಕೇತ, ಅದು ಎಲ್ಲರ ಸಮಾನತೆಯನ್ನು ಎತ್ತಿಹಿಡಿಯುತ್ತದೆ. ಹಂಚಿಕೆಯ ವ್ಯವಹಾರವೇನಾದರೂ ಇದ್ದರೆ ಗಣದಲ್ಲಿ ಆ ಬಗ್ಗೆ ತಾರತಮ್ಯಕ್ಕೆ ಸ್ಥಾನವಿಲ್ಲ. ಅವು ತಣ್ಣನೆಯ ಭಾವವನ್ನು ತಮ್ಮಲ್ಲಿ ಏಕೀಭವಿಸಿಕೊಂಡಿವೆ ಮತ್ತು ಯಾವ ಉದ್ವೇಗವೂ ಇಲ್ಲದೆ ಯಾವುದೇ ಜೂಜುಗಾರನನ್ನಾದರೂ ದಹಿಸಲು ಅವು ಅಂಜುವುದಿಲ್ಲ. ಅವಕ್ಕೆ ಕೈಗಳಿಲ್ಲ, ಆದರೆ ಅವನ್ನು ತನ್ನ ಕೈಗಳಲ್ಲಿ ಹಿಡಿದವನನ್ನು ಸುಮ್ಮನೆ ಬಿಡುವುದಿಲ್ಲ (ಮಂತ್ರ ೯ : ... ಅಹಸ್ತಾಸಃ ಹಸ್ತವಂತಂ ಸಹಂತೇ। ...ಶೀತಾಃ ಸಂತಃ ಹೃದಯಂ ನಿರ್ದಹಂತಿ). ಇದರಿಂದಾಗಿಯೇ ಜೂಜುಗಾರನ ಪತ್ನಿ, ಪುತ್ರರು, ತಾಯಿ, ಎಲ್ಲರೂ ಸಂತಾಪ ಅನುಭವಿಸಬೇಕಾದೀತು. ಸಾಲಗಾರನಾಗಿ ಜೂಜುಗಾರನು ಭಯದಿಂದ ಕಂಗಾಲಾಗುತ್ತಾನೆ, ಕಳ್ಳತನಕ್ಕೆ ಜಾರುತ್ತಾನೆ. (೧.೩೪.೧೦ : ಜಾಯಾ ತಪ್ಯತೇ ಕಿತವಸ್ಯ ಹೀನಾ ಮಾತಾ ಪುತ್ರಸ್ಯ ಚರತಃ ಕ್ವ ಸ್ವಿತ್। ಋಣಾವಾ ಬಿಭ್ಯತ್ ಧನಮಿಚ್ಛಮಾನೋ ಅನ್ಯೇಷಾಂ ಅಸ್ತಮುಪ ನಕ್ತಮೇತಿ ॥). ಬೇರೆಯವರ ಮನೆಗೆ ಕನ್ನ ಹಾಕುವವನಿಗೆ ರಾತ್ರಿಯು ಪ್ರಿಯವಾಗುತ್ತದೆಂಬ ಸೂಚನೆ ಇಲ್ಲಿದೆ. ಕಾವ್ಯದಲ್ಲಿ ಮನೋವಿಜ್ಞಾನದ ಮೂಲಕ ನೀತಿಪಾಠ ಹೇಳುವ ಪರಿಯಲ್ಲಿ ಸೂಕ್ತವು ಮುಂದುವರಿದಿದೆ. ಜೂಜುಗಾರನ ಮನಸ್ಸು ತೂಗಾಡುತ್ತದೆ, ಬೇರೆಯವರನ್ನು ನೋಡಿ ಅವನು ಕರುಬುತ್ತಾನೆ. 'ಅವರ ಹೆಂಡತಿ–ಮಕ್ಕಳು ಅನ್ಯೋನ್ಯವಾಗಿ ಸುಖಿಸುತ್ತಿದ್ದಾರಲ್ಲ' ಎಂದು ಇವನಿಗೆ ಸಂಕಟ ಮತ್ತು ಪಶ್ಚಾತ್ತಾಪ. ಆದರೆ ಮತ್ತೆ ದಿನವೆಲ್ಲಾ ಕಂಗೊಳಿಸುವ ಅಕ್ಷದ್ದೇ ಗೀಳು ಮತ್ತು ರಾತ್ರಿ ಹೊತ್ತಿನಲ್ಲಿ ಬೆಚ್ಚಗಿರಲು ಬೆಂಕಿ ಕಾಯಿಸಬೇಕು, ಅಷ್ಟೆ. ಅಂದರೆ, ಅವನು ಸೂರಿಲ್ಲದವನಾಗುತ್ತಾನೆ. (೧.೩೪.೧೧ : ಸ್ತ್ರಿಯಂ ದೃಷ್ಟ್ವಾಯ ಕಿತವಂ ತತಾಪ ಅನ್ಯೇಷಾಂ ಜಾಯಾಂ ಸುಕೃತಂ ಚ ಯೋನಿಂ। ಪೂರ್ವಾಹ್ಣೇ ಅಶ್ವಾನ್ ಯುಯುಜೇ ಹಿ ಬಭ್ರೂನ್ ಸೋ ಅಗ್ನೇರಂತೇ ವೃಷಲಃ ಪಪಾದ ॥). ಅವನನ್ನು ನೋಡಿದರೆ ಕನಿಕರ ಉಕ್ಕಬೇಕು, ಹಾಗಿದೆ ಇಲ್ಲಿಯ ಚಿತ್ರಣ. ಲೋಕವೆಲ್ಲಾ ನೆಮ್ಮದಿಯಿಂದಿರುವಾಗ ತಾನು ಹಾದಿ ತಪ್ಪಿದೆನಲ್ಲಾ ಎಂಬ ಪರಿತಾಪ ಅವನನ್ನು ಬಾಧಿಸುತ್ತದೆ.

ಹನ್ನೆರಡನೆಯ ಮಂತ್ರದಲ್ಲಿ ಜೂಜುಗಾರನಿಗೆ ನೇರವಾಗಿ ಸಂಬಂಧಿಸಿಲ್ಲದಂತೆ ಅಕ್ಷಗಳನ್ನು "ಗಣಸಂಘದ ಸೇನಾನಿ" ಮತ್ತು "ವ್ರಾತದ (ಅಂದರೆ, ಜನಸಮುದಾಯದ) ಹಿರಿಯ" ಎಂದು ಸಂಬೋಧಿಸಲಾಗಿದೆ; ಅದಕ್ಕೆ ಗೌರವ ಸೂಚಿಸುವುದು, ಜೂಜಿಗಾಗಿ ಹಣ ಸಂಗ್ರಹಿಸದಿರುವುದು, ಕೈಗಳನ್ನು ಅಕ್ಷಕ್ಕೆ ಹಿಮ್ಮುಖವಾಗಿ ಹಿಡಿಯುವುದು ಮತ್ತು ಸದಾ ಋತವನ್ನು ನುಡಿಯುವುದು, ಇವನ್ನು ಎತ್ತಿಹಿಡಿಯಲಾಗಿದೆ (೧೦.೩೪.೧೨ : ಯೋ ವಃ ಸೇನಾನೀರ್ಮಹತೋ ಗಣಸ್ಯ ರಾಜಾ ವ್ರಾತಸ್ಯ ಪ್ರಥಮೋ ಬಭೂವ। ತಸ್ಮೈ ಕೃಣೋಮಿ ನ ಧನಾ ರುಣಧ್ಮಿ ದಶಾಹಂ ಪ್ರಾಚೀಃ ತದೃತಂ ವದಾಮಿ ॥). ಇಲ್ಲಿ "ಜನಸಮುದಾಯದ ರಾಜ" ಎಂದಾಗ ಆಳುವ ರಾಜನನ್ನು ಕಲ್ಪಿಸಿಕೊಳ್ಳಬಾರದು. ಮುಂದೆ ತಕ್ಷಣವೇ ಬರುವ "ಪ್ರಥಮಃ" ಎಂಬ ಪದದೊಡನೆ ಅದನ್ನು ಓದಿಕೊಂಡು 'ಹಿರಿಯ' ಎಂಬರ್ಥದಲ್ಲಿ ತೆಗೆದುಕೊಳ್ಳುವುದು ಸೂಕ್ತವಾಗಿರುತ್ತದೆ. ಗಣವು ಋತಕ್ಕೆ ನೀಡುವ ಪ್ರಮುಖ ಸ್ಥಾನವನ್ನು ಸಹ ಇಲ್ಲಿ ನೆನೆಯಬಹುದು. ಜೂಜಿನಲ್ಲಿ ಬಳಸುವ ಅಕ್ಷದಿಂದ ತುಸು ಭಿನ್ನವಾದ ಅಕ್ಷವು ಈ ಮಂತ್ರದಲ್ಲಿದೆಯೆಂದು ಭಾಸವಾಗುತ್ತದೆ. ಗಣದ ನಡವಳಿಕೆಯಲ್ಲಿ ಅದೊಂದು ಸಂಕೇತವೆಂಬುದನ್ನು ಮುಂದೆ ನೋಡೋಣ. ಸೂಕ್ತದ ಕಡೆಯ ಮಂತ್ರವು ಅಕ್ಷವನ್ನು ದೂರವಿರಿಸಿ ಕೃಷಿಗೆ ಬದ್ಧವಾಗುವಂತೆ ಸಂದೇಶ ನೀಡುತ್ತದೆ. ಕೃಷಿಯ ಉತ್ಪನ್ನವು ಹರ್ಷವನ್ನುಂಟುಮಾಡುತ್ತದೆ, ಗೋವುಗಳು ಮತ್ತು ಕುಟುಂಬವನ್ನು ವರ್ಧಿಸುತ್ತದೆ, ಗೌರವವನ್ನು ತಂದುಕೊಡುತ್ತದೆ; ಸವಿತೃ ದೇವತೆಯ ಬೋಧನೆಯೂ ಇದೇ ಆಗಿದೆ ಎನ್ನುತ್ತದೆ ಈ ಮಂತ್ರ (೧೦.೩೪.೧೩: ಅಕ್ಷೈರ್ಮಾ ದೀವ್ಯಃ ಕೃಷಿಮಿತ್ಕೃಷಸ್ವ ವಿತ್ತೇ ರಮಸ್ವ ಬಹು ಮನ್ಯಮಾನಃ। ತತ್ರ ಗಾವಃ ಕಿತವ ತತ್ರ ಜಾಯಾ ತನ್ಮೇ ವಿ ಚಷ್ಟೇ ಸವಿತಾಯಮರ್ಯಃ ॥).

ಹಿಂದೆಯೇ ಸೂಚಿಸಿದ್ದಂತೆ ಹತ್ತನೆಯ ಮಂಡಲದ ಈ ಸೂಕ್ತವು ಋಗ್ವೇದದ ಉತ್ತರಕಾಲೀನ ಘಟ್ಟಕ್ಕೆ ಸೇರಿದ್ದು. ಹಿಂದಿನ ಗೋ–ಪಾಲಕರು ಈಗ ಕೃಷಿಯ ಹಂತವನ್ನು ತಲುಪಿದ್ದಾರೆ ಮತ್ತು ಗಣಸಂಘವು ಬದಲಾವಣೆಯ ಹಾದಿಯಲ್ಲಿದೆ. ಇದನ್ನು ನೆನಪಿನಲ್ಲಿರಿಸಿಕೊಂಡು ಚಾರಿತ್ರಿಕವಾಗಿ 'ಅಕ್ಷ'ದ ಸ್ಥಾನವೇನು ಎಂಬುದನ್ನು ಪರಿಶೀಲಿಸುವ ಅಗತ್ಯವಿದೆ. ಋಗ್ವೇದದಲ್ಲಿ 'ಭಾಗ' ಮತ್ತು 'ಅಂಶ' ಎಂಬ ಎರಡು ಪದಗಳು ಅಂದಿನ ವಿತರಣಾ ವ್ಯವಸ್ಥೆಯನ್ನು ವಿವರಿಸುವಂಥವು. ಚಾರ್ಲ್ಸ್ ಡಾರ್ವಿನ್ ತನ್ನ ಪ್ರವಾಸಗಳನ್ನು ಕುರಿತು ಬರೆಯುವಾಗ ಫ್ಯೂಜಿಯನ್ ಬುಡಕಟ್ಟುಗಳನ್ನು ಪ್ರಸ್ತಾಪಿಸುತ್ತಾನೆ. ಅಲ್ಲಿ ಸಮಾನ ಹಂಚಿಕೆಯು ಒಂದು ನಿಯಮ : "ಒಬ್ಬರಿಗೆ ಒಂದು ತುಂಡು ಬಟ್ಟೆ ಸಿಕ್ಕರೆ ಅದನ್ನು ಹರಿದು ಎಲ್ಲರೂ ಸಮವಾಗಿ ಹಂಚಿಕೊಳ್ಳುತ್ತಿದ್ದರು" ಎನ್ನುತ್ತಾನೆ

ಡಾರ್ವಿನ್. ಋಗ್ವೇದದ ಕಾಲದಲ್ಲಿ ಸಮಾನ ಹಂಚಿಕೆಗೆ ಎಷ್ಟು ಮಹತ್ವವಿದ್ದಿತೆಂದರೆ ಕಡೆಗೆ 'ಭಾಗ' ಮತ್ತು 'ಅಂಶ' ದೇವತೆಗಳೇ ಆಗಿಬಿಟ್ಟವು. ಪ್ರಾಚೀನ ಗ್ರೀಸಿನ ಮೊಯಿರೈ ಎಂಬ ಹೆಣ್ಣು ದೇವತೆಗಳಲ್ಲಿ ಲಕೇಸಿಸ್ ಎಂಬುವಳು ಒಬ್ಬಳು. ಅವಳು ಭಾಗ ಮಾಡಿ ಹಂಚುವ ಅಧಿದೇವತೆ. ಆಗ್ಗೆ ಭೂಮಿಯನ್ನು ಹಂಚಲು ಗ್ರೀಸಿನ ಜನ ಮರದ ಚಿಕ್ಕ ತುಂಡುಗಳನ್ನು ಬಳಸಿಕೊಳ್ಳುತ್ತಿದ್ದರೆಂದು ಹೇಳುತ್ತಾರೆ.

ಋಗ್ವೇದದಲ್ಲಿ ಸಂಪತ್ತಿನ ಹಂಚಿಕೆಗೆ ಸಂಬಂಧಿಸಿದ ಅನೇಕ ಪ್ರಸ್ತಾಪಗಳಿವೆ. ಆಹಾರ, ಭೌತಿಕ ಸಂಪತ್ತು, ಗೋವುಗಳು, ಭೂಮಿ ಇವೆಲ್ಲಾ ಅಂದಿನ ಸಂಪತ್ತು. ಅವನ್ನು ಬ್ರಹ್ಮನ್, ಶ್ರವಸ್, ಯಶಸ್, ಇಳಾ, ಇತ್ಯಾದಿ ಪದಗಳು ಸೂಚಿಸುತ್ತವೆ. ಆ ಪದಗಳು ನಿರ್ದಿಷ್ಟವಾಗಿ ಸಂಪತ್ತಿನ ಯಾವುದೋ ಒಂದು ರೂಪವನ್ನು ಸೂಚಿಸುವುದಿಲ್ಲ; ಯಾವುದನ್ನು ಬೇಕಾದರೂ ಈ ಪದಗಳು ಸೂಚಿಸಬಲ್ಲವು. ಭೌತಿಕ ಸಂಪತ್ತನ್ನು ಸೂಚಿಸುವ ಇನ್ನೊಂದು ಪದ 'ವಾರ್ಯ.' ಅದು ಗೋವು, ವ್ರೀಹಿ, ಯವ (ಧಾನ್ಯಗಳು), ಇತ್ಯಾದಿಗಳನ್ನು ಸೂಚಿಸುತ್ತದೆ. ಸಂಪತ್ತನ್ನು ಹಂಚುವವನು ಎಂಬರ್ಥದಲ್ಲಿ ಸವಿತೃ ದೇವತೆಯನ್ನು 'ಭಗಭಕ್ತ' ಎಂದು ಕರೆಯಲಾಗಿದೆ (ಋ.೧.೨೪.೫). ಹಂಚುವುದರಲ್ಲಿ ಉದ್ಯುಕ್ತನಾದವನು ಎಂಬರ್ಥದಲ್ಲಿ ಅಗ್ನಿಯನ್ನು 'ಭಾಜಯು' ಎನ್ನಲಾಗಿದೆ (ಋ.೨.೧.೪). ಬೇರೆ ದೇವತೆಗಳಿಗೂ ಹಂಚುವ ಪಾತ್ರವಿದೆ. ಉದಾಹರಣೆಗೆ, ಉಷೋದೇವತೆ, ಇಂದ್ರ, ಸೋಮ, ಇತ್ಯಾದಿ. ಇಂದ್ರನನ್ನು ಕುರಿತ ಒಂದು ಮಂತ್ರ ಹೀಗಿದೆ: "ಇಂದ್ರನೆ, ನಮಗೆ ದೊರೆಯಲು ಅಡ್ಡಿಪಡಿಸಲ್ಪಟ್ಟ ಸಂಪತ್ತಿದೆ; ಅದರ ಅಂಶವನ್ನು ನಮಗೆ ಕೊಡು. ಆಶ್ವಾಸನೆ ಪಡೆದವನು ಸಂಪತ್ತು ಪಡೆಯಬೇಕಲ್ಲವೆ! ಮರದ ಮೇಲಿನ ಹಣ್ಣನ್ನು ಒಂದು ದೊಣ್ಣೆಯಿಂದ ಬೀಳಿಸುವಂತೆ ನೀನು ನಮಗೆ ಸಂಪತ್ತನ್ನು ಕಳಿಸುತ್ತೀಯೆ" (೩.೪೫.೪ : ಆ ನಃ ತುಜಂ ರಯಿಂ ಭರಾಂಶಂ ನ ಪ್ರತಿಜಾನತೇ। ವೃಕ್ಷಂ ಪಕ್ವಂ ಫಲಂ ಅಂಕೀ ಇವ ಧೂನುಹಿ ಇಂದ್ರ ಸಂಪಾರಣಂ ವಸು॥).

ಜನಸಮುದಾಯವು ಏಕತ್ರ ಸೇರುತ್ತಿದ್ದ ಸಭೆಗಳಿಗೆ ಋಗ್ವೇದದಲ್ಲಿ ಸಮಿತಿ, ಸಭಾ, ವಿದಥ, ಮುಂತಾದ ಪದಗಳಿವೆ. 'ವಿದಥ'ವು ಜನರ ನಡುವೆ ಉತ್ಪನ್ನ ಅಥವಾ ಸಂಪತ್ತನ್ನು ಹಂಚುವ ಜಾಗವೂ ಹೌದು. ಅದನ್ನು ಸೂಚಿಸುವ ಅನೇಕ ಮಂತ್ರಗಳಿವೆ. ಉದಾಹರಣೆಗೆ, ೭.೪೦.೧, ೧.೧೬೪.೨೧, ೨.೧.೪, ಇತ್ಯಾದಿ. ಸಂಪತ್ತಿನ ಹಂಚಿಕೆಯ ಇನ್ನೊಂದು ಸ್ಥಳಕ್ಕೆ 'ಸಭಾ' ಎಂಬ ಹೆಸರಿದೆ. ಪಾಲು ಮಾಡಿಕೊಳ್ಳಲು 'ಚೀಟಿ ಎತ್ತುತ್ತಿದ್ದ ಜಾಗ' ಇದು. 'ಚೀಟಿ' ಎಂದರೆ ನಿಜಕ್ಕೂ ಚೀಟಿ ಎಂಬ ಅರ್ಥವಲ್ಲ; ಯಾವುದೇ ಬೇರೆ ಸಾಂಕೇತಿಕ ವಸ್ತುವೂ ಆಗಬಹುದು. ಉದಾಹರಣೆಗೆ, ಒಂದು ಕಡ್ಡಿ. "ಅಕ್ಷ" ಅಥವಾ ದಾಳವೂ ಅಂತಹ ಒಂದು ಸಾಧನ. 'ಅಕ್ಷ' ಎಂಬ ಪದದ ಸಾಮಾನ್ಯಾರ್ಥವು 'ದಾಳ'; ಅದು ಜೂಜಿಗೆ ಸಂಬಂಧಿಸಿದ್ದು. ಆದರೆ ಅದು ಅಸ್ತಿತ್ವಕ್ಕೆ ಬಂದಿದ್ದು ವೇದಕಾಲೀನ ಜನರ ಬೆಳವಣಿಗೆಯ ಯಾವ ಹಂತದಲ್ಲಿ ಎಂಬುದು ಮುಖ್ಯಪ್ರಶ್ನೆ. ಈವರೆಗೆ ನಾವು ಪರಿಚಯಿಸಿಕೊಂಡ ಅಕ್ಷಸೂಕ್ತದಲ್ಲಿ (೧೦.೩೪) ಜೂಜಿನ ಅಮಲು ಮತ್ತು ಅದರಿಂದ ಉಂಟಾಗುವ ಅಳಲು ಎಂಥದು ಮತ್ತು ಯಾವ ಪ್ರಮಾಣದ್ದು ಎಂಬುದರ ಪ್ರಸ್ತಾಪವಿದೆ. ಆ ಹಿನ್ನೆಲೆಯಲ್ಲಿ ನಾವು ಹಾಕಿಕೊಳ್ಳಬೇಕಾದ ಪ್ರಶ್ನೆಯೊಂದಿದೆ: ವೇದಕಾಲೀನ ಜನರಿಗೆ 'ಅಕ್ಷ'ವು ಕೇವಲ ಜೂಜಿನ ಪರಿಕರವಾಗಿದ್ದಿತೆ ಅಥವಾ ಅದಕ್ಕೆ ಬೇರೇನಾದರೂ ಆಯಾಮವೂ ಇದ್ದಿತೆ? ನಾವೀಗಾಗಲೆ ನೋಡಿರುವಂತೆ "ಅನುಕ್ರಮಣಿ"ಯ ಕರ್ತೃವಿಗೆ ಈ ಸೂಕ್ತವು ಸಂಕೀರ್ಣವಾಗಿ ಕಂಡಿದೆ. ಅವನ ಪ್ರಕಾರ ಒಂದು ಭಾಗದಲ್ಲಿ 'ಅಕ್ಷ'ವನ್ನು ಭಾವೋಪೇತವಾಗಿ ಹೊಗಳಲಾಗಿದೆ ಮತ್ತು ಅದು ಕೃಷಿಸಂಬಂಧಿ ಹಿನ್ನೆಲೆಯದು; ಇನ್ನೊಂದು ಭಾಗದಲ್ಲಿ 'ಅಕ್ಷ'ವನ್ನು ತೀವ್ರವಾಗಿ ತೆಗಳಲಾಗಿದೆ ಮತ್ತು ಅದು ಜೂಜಿನ ಹಿನ್ನೆಲೆಯದು. ಆದ್ದರಿಂದ 'ಅನುಕ್ರಮಣಿ'ಯು ಈ ಸೂಕ್ತವನ್ನು 'ಕೃಷಿ ಸಂಬಂಧಿ ಅಕ್ಷದ ಶ್ಲಾಘನೆ ಮತ್ತು ಜೂಜಿಗೆ ಸಂಬಂಧಿಸಿದಂತೆ ದೂಷಣೆ' (ಅಕ್ಷ ಕೃಷಿ ಪ್ರಶಂಸಾ ಅಕ್ಷ ಕಿತವ ನಿಂದಾ ಚ) ಎಂದಿದೆ. ಕೃಷಿಗೆ ಸಂಬಂಧಿಸಿದಂತೆ ಅಕ್ಷವನ್ನು ಹೊಗಳಿರುವುದು ಗಮನಾರ್ಹ; ಆದರೆ ನಮ್ಮ

ಅನೇಕ ವಿದ್ವಾಂಸರು ಅದನ್ನು ಗಮನಿಸುವ ಗೋಜಿಗೂ ಹೋಗುವುದಿಲ್ಲ, ಅಂದಿನ ಚಾರಿತ್ರಿಕ ಹಂತವನ್ನು ಗುರುತಿಸಲೂ ಹೋಗುವುದಿಲ್ಲ.

ಹಿಂದುಳಿದ ಬುಡಕಟ್ಟು ಜನಾಂಗಗಳಲ್ಲಿ 'ಅಕ್ಷ' ಮತ್ತು 'ಕೃಷಿ'ಗಳ ನಡುವಣ ಸಂಬಂಧವು ಇತ್ತೀಚಿನವರೆಗೂ ಕಾಣಬರುತ್ತಿತ್ತು. ಈಗಲೂ ಕೆಲವೆಡೆ ಉಳಿದಿದ್ದರೆ ಆಶ್ಚರ್ಯವಿಲ್ಲ. ಕೃಷಿಯೋಗ್ಯ ಭೂಮಿಯನ್ನು ಆವರ್ತದಲ್ಲಿ ಪಡೆದುಕೊಳ್ಳಲು ಅಥವಾ ಹಂಚಲು 'ಚೀಟಿ ಎತ್ತುವ' ಅಥವಾ ಅದಕ್ಕೆ ಸಮನಾದ ಯಾವುದಾದರೂ ಬೇರೊಂದು ಪದ್ಧತಿ ಉಂಟು. ಸಮಾನತೆ ಮತ್ತು ಪಕ್ಷಪಾತ ರಹಿತವಾದ ಆವರ್ತದ ಹಂಚಿಕೆಗೆ ಅದೊಂದು ಸಾಧನ. ಫಲವತ್ತಾದ ಮತ್ತು ಬರಡಾದ ಭೂಮಿ ಇರುವಾಗ ಯಾರೂ ಕೇವಲ ಒಂದು ವಿಧದ ಭೂಮಿಯನ್ನೇ ಪಡೆಯುವಂತಾಗದಿರಲೆಂದು ಈ ಪದ್ಧತಿಯನ್ನು ಅನುಸರಿಸುತ್ತಾರೆ. ಅಂದರೆ, ಅಲ್ಲಿ ಮಾಲೀಕತ್ವ ಇಲ್ಲ, ಆದರೆ ಅನುಭೋಗ ಇದೆ. ಭೂಮಿಯ ಗುಣದಲ್ಲಿ ವ್ಯತ್ಯಾಸವಿದ್ದಾಗ ಹತ್ತಾರು ವೃತ್ತಗಳನ್ನು ರಚಿಸಿ ಭೂಮಿಯನ್ನು ಶ್ರೇಣೀಕರಣಕ್ಕೆ ಗುರಿ ಮಾಡುವುದು ಮತ್ತು ಆವರ್ತದಲ್ಲಿ ಬೇರೆಬೇರೆ ವಿಧದ ಭೂಮಿಯನ್ನು ಪ್ರತಿಯೊಬ್ಬರೂ ಪಡೆಯುವಂತೆ ಮಾಡುವುದು ಉದ್ದೇಶ. ಇದು ಸಾಮೂಹಿಕದಲ್ಲಿನ ಖಾಸಗಿತ್ವ ಎನ್ನಬಹುದು. ಮೌರ್ಯರ ಕಾಲದಲ್ಲಿತ್ತೆನ್ನಲಾದ ಒಂದು ಪದ್ಧತಿಯನ್ನು ಸ್ಟ್ರಾಬೋ ದಾಖಲಿಸಿದ್ದಾನೆ: "ಕೆಲವು ಬುಡಕಟ್ಟುಗಳು ಭೂಮಿಯನ್ನು ಸಾಮೂಹಿಕವಾಗಿ ಕೃಷಿ ಮಾಡುತ್ತವೆ. ಕಟಾವಿನ ನಂತರ ಪ್ರತಿಯೊಬ್ಬರೂ ತಮಗೆ ವರ್ಷಪೂರ್ತಿ ಪೂರೈಕೆಯಾಗುವಂತೆ ಹೊರೆಗಳನ್ನು ಎತ್ತಿಕೊಳ್ಳುತ್ತಾರೆ. ಉಳಿದ ಉತ್ಪನ್ನವನ್ನು ಸುಟ್ಟುಬಿಡುತ್ತಾರೆ."




ಮಿಗುತಾಯ ಉತ್ಪನ್ನವನ್ನು ನಿಜಕ್ಕೂ ಸುಡುತ್ತಿದ್ದರೆಂಬುದು ಅನುಮಾನಿಸ ಬೇಕಾದ ಸಂಗತಿ. ಪ್ರಸ್ತುತ ಅದನ್ನು ಅಮೆರಿಕಾದಲ್ಲಿ ಮಾಡುತ್ತಾರೆ, ಮಾರುಕಟ್ಟೆಯಲ್ಲಿ ಧಾನ್ಯದ ಬೆಲೆ ಕುಸಿಯದಿರಲೆಂದು. "ಕ್ರೋಧಕೇತನ" ಕವನದಲ್ಲಿ ವಿ. ಸೀ. ಹೇಳಿದಂತೆ "ಕೋಟಿ ಖಂಡುಗ ಧಾನ್ಯ ಬೆಳೆಯಲು ಲಾಭ ಸಾಲದೆ ಸುಡುವರು." ಮೂಲತಃ ಗ್ರಹಿಸಬೇಕಾದ ವಿಷಯವಿಷ್ಟೇ: ಕೆಲವು ವೈದಿಕ ಬುಡಕಟ್ಟುಗಳು ಸಾಮ್ಯತೆಯ ಸಾಧನೆಗಾಗಿ 'ಚೀಟಿ ಎತ್ತುವ' ಪದ್ಧತಿ ಬೆಳೆಸಿಕೊಂಡಿದ್ದವು ಮತ್ತು ಅದಕ್ಕೆ "ಅಕ್ಷ"ದ ಬಳಕೆಯಾಗುತ್ತಿತ್ತು. ಈ ಸಂಬಂಧದಲ್ಲಿ ಮೂರು ಅಂಶಗಳನ್ನು ಗಮನಿಸಬೇಕು: (ಅ) 'ಅಕ್ಷ' ಎಂಬುದು ಚೀಟಿ ಎತ್ತುವ ಪದ್ಧತಿಗೆ ಸಂಬಂಧಿಸಿಲ್ಲವೆಂದು ಹೇಳಿದರೆ ಆಗ ಅದು ಕೃಷಿಸಂಬಂಧಿ ಅಲ್ಲವೆಂದಾಗುತ್ತದೆ, ಅದು ಕೇವಲ ಜೂಜುಸಂಬಂಧಿಯಾಗಿ ಉಳಿಯುತ್ತದೆ. ಹಾಗಿದ್ದರೆ 'ಅಕ್ಷ'ಕ್ಕೆ ಋಗ್ವೇದವು ಮಹತ್ವವನ್ನು ನೀಡುವುದೇಕೆ? ನಾವೀಗಾಗಲೆ ನೋಡಿರುವಂತೆ ಅಕ್ಷಸೂಕ್ತದಲ್ಲಿ ಅಕ್ಷವನ್ನುದ್ದೇಶಿಸಿ ಹೇಳುವ ಮಾತೊಂದು ಹೀಗಿದೆ: "ಎಲೈ ಅಕ್ಷವೇ, ನಿನ್ನ ಮಹಾನ್ ಗಣದ ನಾಯಕ ನೀನಾಗಿರುವೆ, ವ್ರಾತರ (ಸಮುದಾಯದ) ಸೇನಾನಿ ನೀನು. ನಾನವನನ್ನು (ಸೇನಾನಿಯನ್ನು) ಕುರಿತು ಹೇಳುತ್ತೇನೆ, ನಾನವನ ಸಂಪತ್ತನ್ನು ಹಿಡಿದಿಡುತ್ತಿಲ್ಲ, ಎಂದು. ನನ್ನ ಹತ್ತು ಬೆರಳುಗಳನ್ನೂ ನನ್ನ ಕಡೆಗೆ ತಿರುಗಿಸಿಕೊಂಡು (ಅಂದರೆ, ಅಕ್ಷವನ್ನು ಮುಟ್ಟದೆ) ಹೇಳುತ್ತಿದ್ದೇನೆ, ನಾನು ನಿಜವನ್ನು (ಋತ) ಹೇಳುತ್ತಿದ್ದೇನೆ, ಎಂದು" (೧೦.೩೪.೧೨). "ಸಂಪತ್ತನ್ನು ಹಿಡಿದಿಡುತ್ತಿಲ್ಲ" ಎಂಬುದು ಜೂಜಿಗೆ ಸಂಬಂಧಿಸಿರಲಾರದೆಂಬುದು ಸ್ಪಷ್ಟ. ಋಗ್ವೇದದ ಕೆಲವು ಮಂತ್ರಗಳಲ್ಲಿ ದೇವತೆಗಳನ್ನು ಅಕ್ಷವನ್ನೆಸೆದಾಗ ದೊರೆಯುವ, ಇಲ್ಲವೆ ನಷ್ಟವಾಗುವ, ಸಂಪತ್ತಿಗೆ ಹೋಲಿಸಲಾಗಿದೆ. ಅದು ಕೃಷಿ ಉತ್ಪನ್ನವನ್ನು ಕುರಿತಾದದ್ದೇ ವಿನಾ ಜೂಜಿನ ಲಾಭ–ನಷ್ಟಗಳಲ್ಲ. (ಆ) ಅಕ್ಷವನ್ನು ಕೆಲವು ಆಚರಣೆಗಳಲ್ಲಿ ಬಳಸುವುದನ್ನು ವೈದಿಕ ಸಾಹಿತ್ಯವು ದಾಖಲಿಸಿದೆ. ಉದಾಹರಣೆಗೆ, ರಾಜಸೂಯ ಮತ್ತು ಅಗ್ನ್ಯಾಧೇಯ ಎಂಬ ಆಚರಣೆಗಳಲ್ಲಿ ಅಕ್ಷಕ್ಕೆ ಮಹತ್ವದ ಸ್ಥಾನವಿದೆ. ಅದು ಜೂಜುಸಂಬಂಧಿ ಆಚರಣೆಯಲ್ಲ; ಪಕ್ಷಪಾತರಹಿತ ಹಂಚಿಕೆಗೆ ಸಂಬಂಧಿಸಿದ್ದೆನ್ನಲು ಅಲ್ಲಿ ಪುರಾವೆಯಿದೆ. (ಇ) ಋಗ್ವೇದದ 'ಸಮಿತಿ'ಯು ಸಂಪತ್ತನ್ನು ಹಂಚಿಕೊಳ್ಳುವ ಜಾಗವೂ ಆಗಿತ್ತು ಮತ್ತು ಅಲ್ಲಿ 'ಚೀಟಿ ಎತ್ತುವವನಿಗೆ' ಒಂದು ನಿರ್ದಿಷ್ಟ ಹೆಸರಿತ್ತು. "ಸಭಾ ಸ್ಥಾಣು" ಅಥವಾ ಸಭೆಯ ಕಂಭ, ಆಧಾರ, ಎಂದು ಅವನ ಹೆಸರು. ಜೂಜಿನಲ್ಲಿ ಅಕ್ಷವನ್ನು ಎಸೆಯುವವನಿಗೆ ಆ ಹೆಸರಿಲ್ಲ, ಏಕೆಂದರೆ ಆ ಪರಿಭಾಷೆಯು ಜೂಜಿಗೆ ಏನೂ ಸಂಬಂಧವಿಲ್ಲದ ಸೂಕ್ತಗಳಲ್ಲಿ ಮಾತ್ರವೇ ಬರುತ್ತದೆ. ಜೂಜುಗಾರನನ್ನು ಎಲ್ಲೂ 'ಸಭಾ ಸ್ಥಾಣು' ಎಂದು ಕರೆದಿಲ್ಲ. ಋಗ್ವೇದ ಕಾಲದ 'ಸಮಿತಿ' ಅಥವಾ 'ಸಭಾ'ದ ಜಾಗವು ಕೆಲವೇಳೆ ಜೂಜುತಾಣವೂ ಆಗಿರುತ್ತಿತ್ತೆಂದು ಕೆಲವು ವಿದ್ವಾಂಸರು ಊಹಿಸಿದ್ದಾರೆ. ಆದರೆ ಅದು ಬೇಜವಾಬ್ದಾರಿ ಊಹೆ, ಏಕೆಂದರೆ ಸಮಿತಿಯು ಋಗ್ವೇದಕಾಲೀನರ ಬುಡಕಟ್ಟಿನ ಆಡಳಿತ ಕೇಂದ್ರ, ಸಮಾನತೆಗಾಗಿ ಚೀಟಿ ಎತ್ತುವ ಪ್ರಶಸ್ತ ಸ್ಥಾನ. ಅಲ್ಲಿ ಅಕ್ಷಕ್ಕೆ ಮಹತ್ವವಿದ್ದಿತು. ಅದೇ ಅಕ್ಷವು ಮುಂದೆಂದೋ ಜೂಜಿನ ಸಾಧನವಾದರೆ ಏನು ಮಾಡಲಾದೀತು! ಬುಡಕಟ್ಟು ಸಂಘಟನೆಯು ಕ್ರಮೇಣ ವಿಘಟನೆಗೊಂಡಿದುದರ ಸೂಚನೆ ಅದು, ಸಾಮೂಹಿಕತೆಯ ಜಾಗದಲ್ಲಿ ಖಾಸಗಿ ಆಸ್ತಿಯು ಉಗಮವಾದುದರ ಸೂಚನೆ ಅದು.

ನಾಗರಿಕತೆಯ ವಿಕಾಸದ ಇತಿಹಾಸವನ್ನು ಗುರುತಿಸುವಲ್ಲಿ ಅಕ್ಷಸೂಕ್ತಕ್ಕಿರುವ ಮಹತ್ವ ಇದು. ಆ ಸೂಕ್ತವು ಒಂದು ನೆಲೆಯಲ್ಲಿ ಕವನ, ಇನ್ನೊಂದು ನೆಲೆಯಲ್ಲಿ ಒಂದು ಚಾರಿತ್ರಿಕ ದಾಖಲೆ. ಹೇಗೆ ತೆಗೆದುಕೊಂಡರೂ ಅದರಲ್ಲಿ ನಿಗೂಢತೆಯ ಅಂಶವಾಗಲಿ, ಅಧ್ಯಾತ್ಮ ಜ್ಞಾನದ ಲೇಶವಾಗಲಿ ತೋರಿಬರದು.

ಇಲ್ಲದ ಮಹತ್ವವನ್ನು ಋಗ್ವೇದಕ್ಕೆ ಆರೋಪಿಸದಿದ್ದರೆ ಅದಕ್ಕೇನೋ ಕುಂದುಂಟಾಗುತ್ತದೆಂಬ ಮಿಥ್ಯಾಪ್ರಜ್ಞೆ ನಮ್ಮಲ್ಲಿ ಹೇರಳವಾಗಿ ಪ್ರದರ್ಶಿತವಾಗುತ್ತಿದೆ. ಅದು ಅನಗತ್ಯ ಮಾತ್ರವಲ್ಲ, ಅಬದ್ಧ ಕೂಡ. ಅದಕ್ಕೊಂದು ಉದಾಹರಣೆಯನ್ನು ಸ್ನೇಹಿತರೊಬ್ಬರು ಇತ್ತೀಚೆಗೆ ಪರಿಚಯಿಸಿದರು; ಅದನ್ನು ಪ್ರಸ್ತಾಪಿಸುವುದು ಅಪಚಾರವೆನಿಸುವುದಿಲ್ಲ. ನಮ್ಮ ರಾಜ್ಯದ ಒಂಭತ್ತನೆಯ ಇಯತ್ತೆಗೆ ಶಿಕ್ಷಣ ಕ್ಷೇತ್ರದಲ್ಲಿ ಪ್ರಸಿದ್ಧವಾದ 'ಶೈಕ್ಷಣಿಕ ಬೋಧನೆ ಮತ್ತು ಸಂಶೋಧನಾ ಕೇಂದ್ರ' (ಡಿ.ಎಸ್.ಇ.ಆರ್.ಟಿ.) ಸಿದ್ಧಪಡಿಸಿರುವ ಗಣಿತಶಾಸ್ತ್ರದ ಪಠ್ಯಪುಸ್ತಕವೊಂದಿದೆ; ಅಥವಾ ಅದು ಭೌತಶಾಸ್ತ್ರದ್ದೂ ಇರಬಹುದು. ಅಲ್ಲಿ ಹಾಸ್ಯಾಸ್ಪದವೆನಿಸುವ ಒಂದು ಮಾಹಿತಿಯನ್ನು ಪಠ್ಯಪುಸ್ತಕ ರಚಿಸಿದ ಮತ್ತು ವಿಜ್ಞಾನದಲ್ಲಿ ಪರಿಣತರಾಗಿರುವ "ವಿದ್ವಾಂಸರು" ದಾಖಲಿಸಿದ್ದಾರೆ. ಅದನ್ನು ಗಂಭೀರವಾಗಿ ಪರಿಗಣಿಸಬೇಕೆಂದು ಅವರು ನಿರೀಕ್ಷಿಸಿದ್ದಾರೋ ಏನೋ ತಿಳಿಯದು. ಆದರೆ ಪ್ರಸಂಗವು "ವೈದಿಕ ಜ್ಞಾನ"ವನ್ನು ಅಗಾಧವೆಂದು ಬಗೆಯಬೇಕೆಂಬ ಬಾಲಿಶ ಉತ್ಸಾಹವನ್ನಂತೂ ಪ್ರತಿಫಲಿಸುತ್ತದೆಯಾದ್ದರಿಂದ ಅದನ್ನು ಇಲ್ಲಿ ಪ್ರಸ್ತಾಪಿಸಲಾಗುತ್ತಿದೆ. ಹೇಗೆ ಓದಿ, ಹಾಗೆ ಮರೆತುಬಿಡಬಹುದಾದ ವಿಚಾರ ಇದು.

ಸೂರ್ಯದೇವತೆಯನ್ನು ಕುರಿತಾದ ಋಗ್ವೇದದ ಒಂದು ಮಂತ್ರ ಹೀಗಿದೆ: ತರಣಿಃ ವಿಶ್ವದರ್ಶತೋ ಜ್ಯೋತಿಷ್ಕೃತ್ ಅಸಿ ಸೂರ್ಯ। ವಿಶ್ವಂ ಆ ಭಾಸಿ ರೋಚನಂ॥ (೧.೫೦.೪). ಗಾಯತ್ರಿ ಛಂದಸ್ಸಿನಲ್ಲಿರುವ ಈ ಸರಳ ಪದ್ಯದ ಅರ್ಥ ಇದು: "ಎಲೈ ಸೂರ್ಯ, ಬೇರೆಯವರು ಹೋಗಲಾರದಷ್ಟು ದೂರ ನೀನು ಹೋಗಬಲ್ಲೆ. ಎಲ್ಲೆಡೆ ರೋಚಮಾನ ಪ್ರಕಾಶವನ್ನು ನೀನು ಪಸರಿಸುತ್ತೀಯೆ."

ಇದರ ಅರ್ಥವನ್ನು ಹಿಗ್ಗಿಸಲು ನಮ್ಮ ಡಿ.ಎಸ್.ಇ.ಆರ್.ಟಿ. ಪರಿಣತರಿಗೆ ಈ ಮಂತ್ರದ ಮೇಲಿನ ಸಾಯಣನ ಭಾಷ್ಯವು ಪ್ರಚೋದಿಸಿದೆ. ಆದರೆ ಪಾಪ, ಅದನ್ನೂ ಅಪಾರ್ಥಕ್ಕೆ ಗುರಿಪಡಿಸಿಬಿಟ್ಟಿದ್ದಾರೆ. ಭಾಷ್ಯದಲ್ಲಿ ಸಾಯಣನು ಯಾವುದೋ ಒಂದು ಹೇಳಿಕೆಯನ್ನು ಉದ್ಧರಿಸಿದ್ದಾನೆ. ಅದು ಹೀಗಿದೆ: "ಒಂದೆಡೆ ಹೇಳಿರುವಂತೆ, ಎರಡು ಸಾವಿರದ ಇನ್ನೂರೆರಡು ಯೋಜನಗಳನ್ನು

ನಿಮಿಷಾರ್ಧದಲ್ಲಿ ಕ್ರಮಿಸುವ ಸೂರ್ಯನೇ, ನಿನಗೆ ನಮಸ್ಕಾರ." (ತಥಾ ಚ ಸ್ಮರ್ಯತೇ : ಯೋಜನಾನಾಂ ಸಹಸ್ರೇ ದ್ವೇ ದ್ವೇ ಶತೇ ದ್ವೇ ಚ ಯೋಜನೇ। ಏಕೇನ ನಿಮಿಷಾರ್ಧೇನ ಕ್ರಮಮಾಣ ನಮೋಽಸ್ತು ತೇ॥). ಪಠ್ಯಪುಸ್ತಕ ರಚಿಸಿದ ವಿಜ್ಞಾನದ ವಿದ್ವಾಂಸರು ಈ ಉದ್ಧರಿತ ಪದ್ಯದಲ್ಲಿ ಸೂರ್ಯಕಿರಣವು ಸೆಕೆಂಡಿಗೆ ಇಂತಿಷ್ಟು ದೂರ ಧಾವಿಸುತ್ತದೆಯೆಂಬ ವಿಜ್ಞಾನದ ಜ್ಞಾನವನ್ನು ಅರಸಿದ್ದಾರೆ. ಒಂಭತ್ತನೆಯ ಇಯತ್ತೆಯ ವಿದ್ಯಾರ್ಥಿಗಳ 'ರಾಷ್ಟ್ರೀಯ ಪ್ರಜ್ಞೆ'ಯನ್ನು ಉದ್ಬೋಧಿಸಲು ಈ ಪದ್ಯವು ಸಹಾಯ ಮಾಡುತ್ತದೆಂದು ಅವರ ಭಾವನೆ ಇರಬೇಕು, ಆದರೆ ಆ ಇಯತ್ತೆಯ ಮಕ್ಕಳಿಗೆ ಹೀಗೆ ಹಾದಿ ತಪ್ಪಿಸುವುದು ಉಚಿತವೆ? ಆ ಪದ್ಯದಲ್ಲಿ ಸೆಕೆಂಡಿಗೆ ೧,೭೬,೦೦೦ ಮೈಲಿಗಳಷ್ಟು ದೂರ ಧಾವಿಸುವ ಬೆಳಕಿನ ಪ್ರಸ್ತಾಪವೇನೂ ಇಲ್ಲ. ಒಂದು 'ಯೋಜನ'ವೆಂದರೆ ನಾಲ್ಕು ಕ್ರೋಶ ಎನ್ನುತ್ತಾರೆ; ಯೋಜನವೆಂದರೆ ಸುಮಾರು ಎಂಟು ಮೈಲಿಗಳಷ್ಟು. ಯಾವ ಸಂಸ್ಕೃತ ಕೋಶವನ್ನು ನೋಡಿದರೂ ಇದು ತಿಳಿಯುತ್ತದೆ. ಉದಾಹರಣೆಗೆ, ಜಿ. ಎನ್. ಚಕ್ರವರ್ತಿಯವರ "ಸಂಸ್ಕೃತ–ಕನ್ನಡ ನಿಘಂಟು." (ಪ್ರಕಾಶನ : ಗೀತಾ ಬುಕ್ ಹೌಸ್, ಮೈಸೂರು, ೨೦೦೬; ಪುಟ ೭೮೫). ಮೂವತ್ತು ಸೆಕೆಂಡಿಗೆ ಸೂರ್ಯನ ಜ್ಯೋತಿಯು ೧೭,೬೧೬ ಮೈಲಿ ಚಲಿಸುವುದು ಎಂದು ಋಗ್ವೇದ ಹೇಳಿಲ್ಲ; ಯಾರೋ ಹೇಳಿದ್ದೆಂದು ಸಾಯಣ ಹೇಳಿದ್ದಾನೆ, ಅಷ್ಟೆ. ಅದನ್ನು ೧೦೦೦ x ೧೦೦೦ + ೧೦೦ x ೧೦೦ + ೨ x ೨ ಎಂದು ತಪ್ಪಾಗಿ ಅರ್ಥೈಸಿದರೂ ೧೦,೧೦,೦೦೪ ಮೈಲಿಗಳಾಗುತ್ತವೆ; ಅದೂ ಮೂವತ್ತು ಸೆಕೆಂಡುಗಳಲ್ಲಿ. ಅಂದರೆ, ಸೆಕೆಂಡಿಗೆ ಸುಮಾರು ೩೩,೬೬೬ ಮೈಲಿಗಳು. ಅದು ಬೆಳಕಿನ ವೇಗವೆ? ವಿದ್ಯಾರ್ಥಿಗಳಿಗೆ ಹೀಗೆ ಮಂಕುತನ ತುಂಬುವ ವಿದ್ವತ್ತು ನಮಗೆ ಬೇಕೆ? ಡಿ.ಎಸ್.ಇ.ಆರ್.ಟಿ. ಕೆಲಸ ಅದೇ ಏನು? 'ನಿಮಿಷಾರ್ಧ' ಎಂಬುದನ್ನು ವಾಚ್ಯವಾಗಿ ತೆಗೆದುಕೊಳ್ಳದೆ 'ಕ್ಷಣಾರ್ಧ' ಎಂದು ತೆಗೆದುಕೊಂಡರೂ ಬೆಳಕಿನ ವೇಗವನ್ನು ತಪ್ಪಾಗಿ ಹೇಳಿದಂತೆಯೇ ಆಗುತ್ತದೆ. ಈ ವಿದ್ವಾಂಸರು ಸಾಯಣ ಭಾಷ್ಯದಲ್ಲಿ ಮುಂದುವರಿದು ಏನು ಹೇಳಲಾಗಿದೆಯೋ ಅದನ್ನೂ ಮಕ್ಕಳಿಗೆ ತಿಳಿಸಹೋಗಲಿಲ್ಲವೆಂಬುದೇ ಸಮಾಧಾನ. ಅವನು ಹೇಳುತ್ತಾನೆ : "ಸೂರ್ಯನಿಂದ ಆರೋಗ್ಯವನ್ನು ಪಡೆಯಿರಿ ಎಂದಿದ್ದಾರೆ. ಸೂರ್ಯನ ದರ್ಶನದಿಂದ ಚಂಡಾಲಾದಿ ಜನರನ್ನು ನೋಡಿದಾಗ ಉಂಟಾದ ಪಾಪದ ನಿವಾರಣೆಯಾಗುತ್ತದೆ. ಆ ಅರ್ಥದಲ್ಲಿ ಸೂರ್ಯನಿಂದ ಆರೋಗ್ಯವು ಪ್ರಾಪ್ತಿಯಾಗುತ್ತದೆ." (ಆರೋಗ್ಯಂ ಭಾಸ್ಕರಾದಿಚ್ಛೇತ್। ಆದಿತ್ಯದರ್ಶನಸ್ಯ ಚಂಡಾಲಾದಿ ದರ್ಶನ ಜನಿತ ಪಾಪನಿರ್ಹರಣ ಹೇತುತ್ವಾತ್॥). ಸದ್ಯ, ನಮ್ಮ ವಿಜ್ಞಾನದ ವಿದ್ವಾಂಸರು ಮಕ್ಕಳಿಗೆ ಇದನ್ನು ಬೋಧಿಸಲಿಲ್ಲವಲ್ಲ! ಆದರೆ ಸಾಯಣನ ಇನ್ನೊಂದು ಮಾತಿದೆ, ಅದು ವಿಜ್ಞಾನವು ಖಚಿತಪಡಿಸಿರುವ ವಿಚಾರ: "ಚಂದ್ರನ ಬೆಳಕು ಸೂರ್ಯನ ಕಿರಣಗಳ ಪ್ರತಿಫಲನದಿಂದ ಉಂಟಾಗುತ್ತದೆ" (ರಾತ್ರೌ ಹಿ ಅಮ್ಮಯೇಷು ಚಂದ್ರಾದಿಬಿಂಬೇಷು ಸೂರ್ಯಕಿರಣಾಃ ಪ್ರತಿಫಲಿತಾಃ ಸಂತಃ ಅಂಧಕಾರಂ ನಿವಾರಯಂತಿ). ನಾರ್ವೆ ದೇಶದ ಒಂದು ಹಳ್ಳಿಯವರು ಮಾಡುತ್ತಿರುವುದನ್ನು ಸಾಯಣನ ಮಾತಿನಲ್ಲಿ ಕಾಣಲಡ್ಡಿಯಿಲ್ಲ: ಆ ಊರಿಗೆ ಸೂರ್ಯನ ದರ್ಶನವೇ ಇಲ್ಲವಂತೆ, ಏಕೆಂದರೆ ಸುತ್ತಲೂ ಬೆಟ್ಟಗಳು. ಆದ್ದರಿಂದ ಬೆಟ್ಟಗಳ ಮೇಲೆ ದೊಡ್ಡ ಕನ್ನಡಿಗಳನ್ನಿರಿಸಿ ಸೂರ್ಯನ ಬೆಳಕಿನ ಪ್ರತಿಫಲನವನ್ನು ಹಳ್ಳಿಯು ಪಡೆಯುತ್ತಿದೆಯಂತೆ. ಸಾಯಣ ಹೇಳುತ್ತಾನೆ : "ಕತ್ತಲೆಯ ಮನೆಯೆದುರು ಕನ್ನಡಿ ಇರಿಸಿ ಒಳಕ್ಕೆ ಬೆಳಕು ಹರಿಸುವಂತೆ", ಎಂದು. (ಯಥಾ ದ್ವಾರಸ್ಥದರ್ಪಣೋಪರಿ ನಿಪತಿತಾಃ ಸೂರ್ಯರಶ್ಮಯೋ ಗ್ರಹಾಂತರ್ಗತಂ ತಮೋ ನಿವಾರಯಂತಿ ತದ್ವದಿತ್ಯರ್ಥಃ).

ಇರಲಿ, ಇದೆಲ್ಲಾ ಋಗ್ವೇದದಿಂದ ಬಹಳ ದೂರ ಹೋದಾಗಿನ ಮಾತು. ಯಥಾರ್ಥವಾಗಿ ಋಗ್ವೇದವನ್ನು ಗ್ರಹಿಸಿದಾಗ ಅದರ ಸ್ವಾರಸ್ಯವು ಎಣೆಯಿಲ್ಲದಷ್ಟು ಮೌಲಿಕವಾಗಿದೆಯೆಂಬುದು ನಾವು ತಿಳಿಯಬಹುದಾದ ವಿಷಯ. ಅದರ ಮೇಲೆ ಆಧುನಿಕ ಜ್ಞಾನವನ್ನು ಆರೋಪಿಸಿ ಅದರ ಮೌಲ್ಯವನ್ನು ಹಿಗ್ಗಿಸುವ ಅಕ್ರಮ ತೀರಾ ಅನಗತ್ಯ.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫














## ಪುಸ್ತಕ ಪ್ರಕಾಶನ

91, 9ನೇ ಮುಖ್ಯರಸ್ತೆ
ಸರಸ್ವತಿಪುರಂ
ಮೈಸೂರು – 570 009
ಫೋನ್ : 0821-2545774




ಅಂಚೆ ಮೂಲಕ ತರಿಸಿಕೊಳ್ಳುವವರಿಗೆ :

## ಪುಸ್ತಕ ಪ್ರಕಾಶನ

ಬುಕ್‌ಪೋಸ್ಟ್ ಸರ್ವೀಸ್
ಪಿ. ಬಿ. ನಂ. 58, ಮೂಡಿಗೆರೆ
ಚಿಕ್ಕಮಗಳೂರು ಜಿಲ್ಲೆ-577132
ಫೋನ್ : 08263-228353, 240202
ಮೊಬೈಲ್ : 94482 03730
e-mail : praghu2@sancharnet.in
















ಪುಸ್ತಕ ಬೆಲೆ ಪಟ್ಟಿ – 2012*

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ:**

| | |
|---|---|
| ಕಿರಗೂರಿನ ಗಯ್ಯಾಳಿಗಳು | 90.00 |
| ಕರ್ವಾಲೊ | 105.00 |
| ಚಿದಂಬರ ರಹಸ್ಯ | 186.00 |
| ಸಹಜ ಕೃಷಿ | 60.00 |
| ಪರಿಸರದ ಕತೆ | 105.00 |
| ಮಿಸ್ಸಿಂಗ್ ಲಿಂಕ್ | 90.00 |
| ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ | 114.00 |
| ಜುಗಾರಿ ಕ್ರಾಸ್ | 186.00 |
| ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು | 87.00 |
| ಫ್ಲೈಯಿಂಗ್ ಸಾಸರ್ಸ್ (1) | 75.00 |
| ಫ್ಲೈಯಿಂಗ್ ಸಾಸರ್ಸ್ (2) | 81.00 |
| ಕಾಡಿನ ಕತೆಗಳು 1 | 75.00 |
| ಕಾಡಿನ ಕತೆಗಳು 2, 3, ಪ್ರತಿಯೊಂದೂ | 75.00 |
| ಕಾಡಿನ ಕತೆಗಳು 4 | 78.00 |
| ರುದ್ರಪ್ರಯಾಗದ ಭಯಾನಕ ನರಭಕ್ಷಕ | 105.00 |
| ಕನ್ನಡನಾಡಿನ ಹಕ್ಕಿಗಳು (1) - ಮಿಂಚುಳ್ಳಿ | 90.00 |
| (2) - ಹೆಜ್ಜೆ ಮೂಡದ ಹಾದಿ | 90.00 |
| ಹಕ್ಕಿ-ಪುಕ್ಕ | 369.00 |
| ಅಣ್ಣನ ನೆನಪುಗಳು | 207.00 |
| ಹುಲಿಯೂರಿನ ಸರಹದ್ದು | 105.00 |
| ಅಬಚೂರಿನ ಪೋಸ್ಟಾಫೀಸು | 90.00 |
| ಮಿಲನಿಯಮ್ (1) - ಹುಡುಕಾಟ | 87.00 |
| ಮಿಲನಿಯಮ್ (2) - ಜೀವನ ಸಂಗ್ರಾಮ | 87.00 |
| ಮಿಲನಿಯಮ್ (3) - ಪೆಸಿಫಿಕ್ ದ್ವೀಪಗಳು | 87.00 |
| ಮಿಲನಿಯಮ್ (4) - ಚಂದ್ರನ ಚೂರು | 81.00 |
| ಮಿಲನಿಯಮ್ (5) - ನೆರೆಹೊರೆಯ ಗೆಳೆಯರು | 81.00 |
| ಮಿಲನಿಯಮ್ (6) - ಮಹಾಯುದ್ಧ (1) | 87.00 |
| ಮಿಲನಿಯಮ್ (7) - ಮಹಾಯುದ್ಧ (2) | 87.00 |
| ಮಿಲನಿಯಮ್ (8) - ಮಹಾಯುದ್ಧ (3) | 81.00 |
| ಮಿಲನಿಯಮ್ (9) - ದೇಶ ವಿದೇಶ (1) | 81.00 |
| ಮಿಲನಿಯಮ್ (10) - ದೇಶ ವಿದೇಶ (2) | 81.00 |
| ಮಿಲನಿಯಮ್ (11) - ದೇಶ ವಿದೇಶ (3) | 81.00 |
| ಮಿಲನಿಯಮ್ (12) - ದೇಶ ವಿದೇಶ (4) | 87.00 |
| ಮಿಲನಿಯಮ್ (13) - ವಿಸ್ಮಯ ವಿಶ್ವ (1) | 87.00 |
| ಮಿಲನಿಯಮ್ (14) - ಮಹಾಪಲಾಯನ | 87.00 |
| ಮಿಲನಿಯಮ್ (15) - ವಿಸ್ಮಯ ವಿಶ್ವ (2) | 87.00 |
| ಮಿಲನಿಯಮ್ (16) - ಅಡ್ವೆಂಚರ್ | 87.00 |
| ಮಾಯಾಲೋಕ - 1 | 216.00 |
| ಪಾಕ ಕ್ರಾಂತಿ ಮತ್ತು ಇತರ ಕತೆಗಳು | 72.00 |
| ವ್ಯಕ್ತಿ ವಿಶಿಷ್ಟ ಸಿದ್ಧಾಂತ ಮತ್ತು ಯಮಳ ಪ್ರಶ್ನೆ | 60.00 |
| ಬೃಹನ್ನಳೆ ಸೋಮುವಿನ ಸ್ವಗತ ಲಹರಿ ಮತ್ತು ಇತರ ಕವನಗಳು | 68.00 |
| ವಿಮರ್ಶೆಯ ವಿಮರ್ಶೆ | 183.00 |
| 'ಮಾಯೆಯ ಮುಖಗಳು' | 600.00 |
| ಕಾಡು ಮತ್ತು ಕ್ರೌರ್ಯ | 120.00 |
| (ಚಿತ್ರಸಂಪುಟ - ನಾಲ್ಕು ವರ್ಣಗಳಲ್ಲಿ) | |

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ– ಶ್ರೀ ಪ್ರದೀಪ ಕೆಂಜಿಗೆ :**

| | |
|---|---|
| ವಿಸ್ಮಯ (1) (2) ಪ್ರತಿಯೊಂದೂ | 75.00 |
| ವಿಸ್ಮಯ (3) | 78.00 |
| ಪ್ಯಾಪಿಲಾನ್ (1) (2) ಪ್ರತಿಯೊಂದೂ | 147.00 |

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ– ಡಾ|| ವಿ. ವಿ. ಬೆಳವಾಡಿ :**

| | |
|---|---|
| ನೆಡೆಯುವ ಕಡ್ಡಿ! ಹಾರುವ ಎಲೆ! | 63.00 |

**ಶ್ರೀ ಪ್ರದೀಪ ಕೆಂಜಿಗೆ :**

| | |
|---|---|
| ಬರ್ಮುಡಾ ಟ್ರ್ಯಾಂಗಲ್ | 72.00 |
| ಅದ್ಭುತ ಯಾನ | 108.00 |
| ಹೆಬ್ಬಾವಿನೊಡನೆ ಹೋರಾಟ | 120.00 |

**ಶ್ರೀ ಎಮ್. ಶಿವಕುಮಾರ್**

| | |
|---|---|
| ಸೈಕಲ್ ವಾಲ | 40.00 |
| ಕಂಪ್ಯೂಟರ್ ಕಲಿಯಿರಿ | 147.00 |
| 'ಗಡಿಯಾರ' ವಿಕಾಸದ ಹಾದಿಯಲ್ಲಿ | 66.00 |

**ವಿದ್ವಾನ್ ಶ್ರೀ ಕೋಳಂಬೆ ಪುಟ್ಟಣ್ಣ ಗೌಡರು :**

| | |
|---|---|
| ಅಚ್ಚ ಕನ್ನಡ ನುಡಿಕೋಶ | 360.00 |
| **ಶ್ರೀ ನರೇಂದ್ರ ರೈ ದೇರ್ಲ :** ಸಾವಯವ ಕೃಷಿ | 51.00 |

**ಶ್ರೀ ಕೃಪಾಕರ – ಸೇನಾನಿ :**

| | |
|---|---|
| ಸೆರೆಯಲ್ಲಿ ಕಳೆದ ಹದಿನಾಲ್ಕು ದಿನಗಳು | 93.00 |
| **ಶ್ರೀ ಕೃಷ್ಣ ಆಲನಹಳ್ಳಿ :** ಗೋಡೆ | 66.00 |

**ಡಾ|| ಎಸ್. ಎಂ. ವೃಷಭೇಂದ್ರ ಸ್ವಾಮಿ :**

| | |
|---|---|
| ತರಗತಿಗಳಲ್ಲಿ ಕುವೆಂಪು | 198.00 |

**ಶ್ರೀ ದೇವನೂರು ಮಹಾದೇವ**

| | |
|---|---|
| ಕುಸುಮಬಾಲೆ | 81.00 |
| ದ್ಯಾವನೂರು ಹಾಗೂ ಒಡಲಾಳ | 96.00 |

**ಶ್ರೀಮತಿ ತಾರಿಣಿ ಚಿದಾನಂದ :**

| | |
|---|---|
| ಮಗಳು ಕಂಡ ಕುವೆಂಪು | 370.00 |

**ಶ್ರೀಮತಿ ಪದ್ಮಾಶ್ರೀರಾಮ :**

| | |
|---|---|
| ಗಿಡಗಂಟೆಯಾ ಕೊರಳು | 78.00 |

**ಡಾ|| ಕೆ. ಚಿದಾನಂದ ಗೌಡ :**

| | |
|---|---|
| ಬದುಕು.. ಬೆಳಕು... ಚುಟುಕು....! ಭಾಗ1 | 89.00 |
| ಬದುಕು.. ಬೆಳಕು... ಚುಟುಕು....! ಭಾಗ2 | 90.00 |
| **ಶ್ರೀಮತಿ ರಾಜೇಶ್ವರಿ ತೇಜಸ್ವಿ:** ನನ್ನ ತೇಜಸ್ವಿ | 369.00 |

* *ಹೊಸ ಆವೃತ್ತಿ (Edition) ಬಿಡುಗಡೆಗೊಂಡಾಗ್ಯೂ ಮುಖಪುಟ ಬೆಲೆಯಲ್ಲಿ ವ್ಯತ್ಯಾಸವಿರುವುದು.*

## ಅವಲೋಕನ

# ಹರ್ಷ ತಾರದ ವರ್ಷ – ೨೦೧೩

### ಅಸಮಾನತೆ ತಂದ ಹೊಸ ಪ್ರಜ್ಞೆ

ಪ್ರಪಂಚದ ಯಜಮಾನನಂತೆ ಬೀಗುತ್ತಿದ್ದ ಅಮೆರಿಕ ಸಮಸ್ಯೆಗಳ ಸುಳಿಯಲ್ಲಿ ಸಿಕ್ಕು ತತ್ತರಿಸುತ್ತಿದೆ. ೨೦೦೮ರಲ್ಲಿ ನ್ಯೂಯಾರ್ಕ್‌ನ ವಾಲ್‌ಸ್ಟ್ರೀಟ್‌ನ ಬ್ಯಾಂಕ್ ಮತ್ತು ವಿತ್ತ ಸಂಸ್ಥೆಗಳ ಪತನದಿಂದ ಪ್ರಾರಂಭವಾದ ಆರ್ಥಿಕ ಬಿಕ್ಕಟ್ಟು ವಿಶ್ವದ ಅನೇಕ ರಾಷ್ಟ್ರಗಳಿಗೆ ಹಬ್ಬಿ ತತ್ಪರಿಣಾಮವಾಗಿ ಹುಟ್ಟಿದ ಸಮಸ್ಯೆಗಳು ಬಗೆಹರಿಯದೆ ಉಳಿದಿವೆ. ಲಕ್ಷಾಂತರ ಅಮೆರಿಕದ ಜನರು ಉದ್ಯೋಗ ಕಳೆದುಕೊಂಡದ್ದು ಮತ್ತು ಅವರ ಜೀವನಮಟ್ಟ ಕುಸಿದದ್ದು ಇವರ ಆಲೋಚನಾ ಕ್ರಮವನ್ನೇ ಬದಲಾಯಿಸುತ್ತಿದೆ. ತಮ್ಮ ದೇಶದ ವ್ಯವಸ್ಥೆ ಹುಟ್ಟುಹಾಕಿರುವ ಅಸಮಾನತೆಯ ಬಗ್ಗೆ ಅರಿವು ಮೂಡಿದೆ. ಅಮೆರಿಕ ಶೇ. ೧ ಶ್ರೀಮಂತರು ಉಳಿದ ಶೇ. ೯೯ ಜನರನ್ನು ಸುಲಿಗೆ ಮಾಡಿ ಅವರ ನೆಮ್ಮದಿಯನ್ನು ಹಾಳುಮಾಡಿರುವ ಸತ್ಯ ಜನತೆಯ ಮನ ಹೊಕ್ಕು ನೆಲಸಿಬಿಟ್ಟಿದೆ. ಇದರ ಪರಿಣಾಮವೇ "ವಾಲ್ ಸ್ಟ್ರೀಟ್ ಆಕ್ರಮಿಸು" ಹೋರಾಟದ ಉಗಮ. ಬದಲಾವಣೆ ಬಯಸುತ್ತಿರುವ ಅಮೆರಿಕದ ಸಾಮಾನ್ಯರ ಹಂಬಲದ ಅಭಿವ್ಯಕ್ತಿ. ಇದು ಎಚ್ಚೆತ್ತಿರುವ ಜನರ ಧ್ವನಿ ಮಾತ್ರವಲ್ಲದೆ ಮುಂಬರುವ ಹೋರಾಟಗಳ ಮುನ್ಸೂಚನೆಯಾಗಿರಬಹುದು. ಪ್ರತಿಭಟನೆ ವಿರಳವಾಗಿದ್ದ ಈ ದೇಶದಲ್ಲಿ ಈಗ ಅವು ಹೇರಳವಾಗುತ್ತಿವೆ.




### ಅಮೆರಿಕ ಸೃಷ್ಟಿಸಿದ ಅರಾಜಕತೆ

೨೦೧೨ರಲ್ಲಿ ನಡೆದ ಚುನಾವಣೆಯಲ್ಲಿ ಬರಾಕ್ ಒಬಾಮ ಎರಡನೆ ಬಾರಿಗೆ ಅಧ್ಯಕ್ಷ ಸ್ಥಾನಕ್ಕೆ ಆಯ್ಕೆಗೊಂಡು ಫೆಬ್ರವರಿ ೨೦೧೩ರಂದು ಅಧಿಕಾರ ವಹಿಸಿಕೊಂಡದ್ದು ವಿಶೇಷವೇ ಸರಿ. ಹಿಂದಿನ ಅಧ್ಯಕ್ಷ ಜಾರ್ಜ್ ಬುಷ್‌ನ ಎಂಟು ವರ್ಷದ ದುರಾಡಳಿತದಿಂದ ಬೇಸತ್ತ ಜನ ಹೊಸ ಭರವಸೆಗಳನ್ನು ಹುಟ್ಟಿಸಿದ ಬರಾಕ್ ಒಬಾಮನನ್ನು ಆಯ್ಕೆ ಮಾಡಿತ್ತು. ಇರಾಕ್ ಮತ್ತು ಆಫ್ಘಾನಿಸ್ತಾನದಲ್ಲಿ ಅಮೆರಿಕದ ಸೈನ್ಯದ ಕಾರ್ಯಾಚರಣೆ ಮಿತಿಮೀರಿದ ಸಾವು–ನೋವುಗಳನ್ನು ತಂದುಕೊಂಡ ಕಾರಣ ಈ ದೇಶಗಳಿಂದ ತನ್ನ ಸೈನ್ಯವನ್ನು ವಾಪಸ್ಸು ಕರೆಸುವ ಒತ್ತಡ ಒಬಾಮನ ಮೇಲೆ ಬಿದ್ದಿತ್ತು. ಭಾಗಶಃ ಸೈನ್ಯ ಇರಾಕ್ ಮತ್ತು ಆಫ್ಘಾನಿಸ್ತಾನದಿಂದ ಹಿಂದಿರುಗಿದೆ. ಅಮೆರಿಕದ ಸೈನ್ಯದ ಕಾರ್ಯಾಚರಣೆ ಕಡಿಮೆಯಾದರೂ ಈ ಎರಡೂ ದೇಶಗಳಲ್ಲಿನ ಅಶಾಂತಿಯೇನೂ ಕಡಿಮೆಯಾಗಿಲ್ಲ. ಇರಾಕ್‌ನಲ್ಲಿ ದಿನನಿತ್ಯ ಸ್ಫೋಟಿಸುತ್ತಿರುವ ಬಾಂಬ್‌ಗಳು ಮತ್ತು ಅಪಾರ ಸಾವು–ನೋವುಗಳನ್ನು ವೀಕ್ಷಿಸಿದಾಗ ಸದ್ದಾಂ ಹುಸೇನ್‌ನ ಆಳ್ವಿಕೆಯನ್ನು ಕೊನೆಗೊಳಿಸಿ, ಅವನನ್ನು ಕೊಂದನಂತರ ಇರಾಕ್‌ನ ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿ ಅರಾಜಕಗೊಂಡಿರುವುದು ಬಂಡವಾಳಶಾಹಿ ರಾಷ್ಟ್ರಗಳ ಕ್ರೌರ್ಯವನ್ನು ಎತ್ತಿ ತೋರಿಸುತ್ತದೆ. ಆಫ್ಘಾನಿಸ್ತಾನದಲ್ಲಿ ಅಮೆರಿಕದ ಹಸ್ತಕ್ಷೇಪದ ನಂತರ ತಾಲೀಬಾನ್‌ನ ಸಂತತಿ ಹೆಚ್ಚಿದೆಯೇ ಹೊರತು

೨೦೧೨ – ಪ್ರಪಂಚದ ಕೊನೆಯ ವರ್ಷವೆಂದು ನ್ಹೋವನ ನೌಕೆಯಲ್ಲಿ ಸಾಗುವ ಕೆಲವೇ ಮನುಷ್ಯರು ಮತ್ತು ಪ್ರಾಣಿ ಪಕ್ಷಿಗಳು ಹೊಸ ಶಕೆಯ ಆದ್ಯ ಪ್ರವರ್ತಕರಾಗುವವರೆಂದೂ ಸಾರಿದ ಚಲನಚಿತ್ರ ೨೦೧೩ರಲ್ಲೂ ನಿರ್ವಿಘ್ನವಾಗಿ ಪ್ರಸಾರಗೊಳ್ಳುತ್ತಿದೆ. ಆಗ ಕಾತರ ಮತ್ತು ಆತಂಕದಿಂದ ಈ ಚಲನಚಿತ್ರವನ್ನು ವೀಕ್ಷಿಸಿದ್ದ ಜನರು ಈಗ ಅದನ್ನು ನಿರಾತಂಕದಿಂದ ನೋಡುವಂತಾಗಿದ್ದಾರೆ. ಆದರೆ ೨೦೦೮–೨೦೧೨ರವರೆಗಿನ ವಿಶ್ವದ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಬೆಳವಣಿಗೆಗಳು ಇಡೀ ಜನಸಮುದಾಯವನ್ನು ಕಂಗೆಡಿಸಿ ಅವುಗಳನ್ನು ವರ್ಷ ೨೦೧೩ಕ್ಕೆ ಸಾಗಿಸಿದ್ದು ಬಂಡವಾಳಶಾಹಿ ವ್ಯವಸ್ಥೆ ಅನುಭವಿಸುತ್ತಿರುವ ಸುದೀರ್ಘ ಸಂಕಟಕ್ಕೆ ಸಾಕ್ಷಿ. ಆರ್ಥಿಕ ಬಿಕ್ಕಟ್ಟಿನ ಕೆಸರಿನಲ್ಲಿ ಸಿಕ್ಕ ರಾಷ್ಟ್ರಗಳು ಮೇಲೇಳಲು ಮಾಡುತ್ತಿರುವ ಕಸರತ್ತುಗಳೇ ಅವುಗಳನ್ನು ಕೆಸರಿನಾಳಕ್ಕೆ ಅದುಮುತ್ತಿರುವುದು ಮತ್ತು ನೊಂದ ಜನರ ಪ್ರತಿಭಟನೆಗಳು ವ್ಯಾಪಕವಾಗಿ ಬೆಳೆಯುತ್ತಿರುವುದು ಬಂಡವಾಳಶಾಹಿ ವ್ಯವಸ್ಥೆಯನ್ನು ಪರಿಚಯಿಸಿದೆ. ಪರಿಹಾರ ಕೊಡಲಶಕ್ಯವಾದ ವ್ಯವಸ್ಥೆಗೆ ಪರ್ಯಾಯದ ಹುಡುಕಾಟ ನಿರಂತರವಾಗಿ ನಡೆದಿದೆ.

**ಮುರಳಿಧರ ಚಿಕ್ಕಮಗಳೂರು**



ಕಡಿಮೆಯಾಗಿಲ್ಲವೆಂಬುದೂ ವಿಧಿತ ವಾಗಿದೆ. ಅಮೆರಿಕದ ಮತ್ತು ಅದರ ಮಿತ್ರ ರಾಷ್ಟ್ರಗಳಾದ ಬ್ರಿಟನ್, ಫ್ರಾನ್ಸ್ ಮತ್ತು ಜರ್ಮನಿ ಅನುಸರಿಸುತ್ತಿರುವ ಯುದ್ಧ ನೀತಿಯ ಪರಿಣಾಮವಾಗಿ ಉಂಟಾಗುತ್ತಿರುವ ಅಮಾಯಕ ಜನರ ಸಾವು, ನೋವು, ಹತಾಶೆ ಬಗ್ಗೆ ಕಾಳಜಿ ತೋರಿಸಿ, ಸ್ವತಂತ್ರ ರಾಷ್ಟ್ರಗಳ ಆಂತರಿಕ ವ್ಯವಹಾರಗಳಲ್ಲಿ ಮೂಗು ತೂರಿಸುವ ಕೊಂಕು ಬುದ್ಧಿಯ ಹವ್ಯಾಸ ಕೈ ಬಿಡದಿದ್ದಲ್ಲಿ ತಮ್ಮ ದೇಶಗಳ ಜನರ ವಿರೋಧ ಮತ್ತು ಆಕ್ರೋಶಕ್ಕೆ ಈಡಾಗುವುದರಲ್ಲಿ ಸಂಶಯವಿಲ್ಲ. ಮಿಲಿಟರಿ ಕಾರ್ಯಾಚರಣೆಯಿಂದ ಯಾವ ದೇಶದ ವ್ಯವಸ್ಥೆಯನ್ನೂ ಸರಿಪಡಿಸಲಾಗಿಲ್ಲ ಎಂಬ ಸತ್ಯವನ್ನು ಇತಿಹಾಸ ಪದೇ ಪದೇ ಎತ್ತಿ ತೋರಿಸಿದೆ. ಸಾಮಾನ್ಯಜನರಿಗೆ ಇದು ಅರಿವಿಗೆ ಬಂದಿರುವ ವಿಷಯ. ಸಿರಿಯ ದೇಶದ ಬಗ್ಗೆ ನಡೆದ ಬೆಳವಣಿಗೆಯೇ ಇದಕ್ಕೊಂದು ನಿದರ್ಶನ.

## ಸ್ವತಂತ್ರ ರಾಷ್ಟ್ರಗಳ ಅತಂತ್ರ ಸ್ಥಿತಿ

ಅಮೆರಿಕದ ಆಡಳಿತ ವರ್ಗಕ್ಕೆ ಯುದ್ಧ ಹೂಡುವುದು ಕೇವಲ ಒಂದು ಹವ್ಯಾಸ ಮಾತ್ರವಲ್ಲ. ಅದೊಂದು ಉದ್ದಿಮೆಯೂ ಕೂಡ. "ಶಾಂತಿಗಾಗಿ ಯುದ್ಧ", "ಪ್ರಜಾಪ್ರಭುತ್ವ ಸ್ಥಾಪನೆಗಾಗಿ ಯುದ್ಧ" ಇತ್ಯಾದಿ ಸಬೂಬುಗಳನ್ನು ಮುಂದೆ ಮಾಡಿ ಸ್ವತಂತ್ರ ರಾಷ್ಟ್ರಗಳನ್ನು ಅತಂತ್ರಗೊಳಿಸಿದೆ. ಇರಾಕ್, ಅಫ್ಘಾನಿಸ್ತಾನ, ಲಿಬಿಯ ನಂತರ ಅಮೆರಿಕದ ವಕ್ರದೃಷ್ಟಿಗೆ ಬಿದ್ದದ್ದು ಸಿರಿಯ. ಬಾಅತ್ ಪಕ್ಷ ೧೯೭೧ರಿಂದ ಈ ದೇಶದ ಅಧ್ಯಕ್ಷ ಬಷರ್ ಅಸ್ಸಾದ್‌ನ ಕುಟುಂಬ ಆಡಳಿತ ನಡೆಸಿದೆ, ಅಸ್ಸಾದ್ ಆಳ್ವಿಕೆಯ ವಿರುದ್ಧ ದಂಗೆಯೆದ್ದ ಸೈನಿಕರು, ಅವರ ವಿರುದ್ಧ ಅಸ್ಸಾದನ ಸೈನಿಕರ ದಾಳಿಯಿಂದಾಗಿ ಏಪ್ರಿಲ್ ೨೦೧೧ರಿಂದ ಸಿರಿಯದಲ್ಲಿ ನಡೆದಿರುವ ಅಂತರ್ಯುದ್ಧ ವಿಷಮ ಸ್ಥಿತಿಗೇರಲು ಅಮೆರಿಕ ಅಸ್ಸಾದ್ ವಿರೋಧಿಗಳಿಗೆ ಪರೋಕ್ಷವಾಗಿ ನೀಡುತ್ತಿರುವ ಶಸ್ತ್ರಾಸ್ತ್ರಗಳ ನೆರವು ಕಾರಣ. ಒಂದು ಅಂತರರಾಷ್ಟ್ರೀಯ ಸಂಘಟನೆಯ ವರದಿಯ ಪ್ರಕಾರ ಅಸ್ಸಾದ್-ವಿರೋಧಿ ಬಣವೇ, ರಾಸಾಯನಿಕ ಅಸ್ತ್ರವನ್ನು ಪ್ರಯೋಗಿಸಿದ್ದು ಎಂದು ತಿಳಿದುಬಂದಿದೆ. ಸಿರಿಯದ ಈ ಅಂತಃಕಲಹ ಈವರೆಗೆ ಸುಮಾರು ೧,೨೫,೦೦೦ ಜನರನ್ನು ಬಲಿ ತೆಗೆದುಕೊಂಡಿದೆ. ಅಲ್ಲದೆ ಲಕ್ಷಾಂತರ ಜನರನ್ನು ನಿರಾಶ್ರಿತರನ್ನಾಗಿಸಿದೆ. ಲೆಬನಾನ್ ಮುಕ್ತ ಜೋರ್ಡಾನ್ ದೇಶಗಳು ನಿರಾಶ್ರಿತರ ಬೀಡಾಗಿವೆ. ನಂತರದ ಬೆಳವಣಿಗೆಯಲ್ಲಿ ಅಧ್ಯಕ್ಷ ಅಸ್ಸಾದ್ ರಾಸಾಯನಿಕ ಅಸ್ತ್ರಗಳನ್ನು ಬಳಸಿರುವನೆಂದೂ ಮತ್ತು ತಾನು ಹಾಕಿದ್ದ ಲಕ್ಷ್ಮಣ ರೇಖೆಯನ್ನು ದಾಟಿರುವನೆಂದೂ ಇವನ ಆಳ್ವಿಕೆಯನ್ನು ಕೊನೆಗೊಳಿಸಲು ಯುದ್ಧವೊಂದೇ ಮಾರ್ಗವೆಂದು ಅಮೆರಿಕ ನಿರ್ಧರಿಸಿಬಿಟ್ಟಿತ್ತು.



ಅಮೆರಿಕದ ಬಂಟ ಯುದ್ಧ ಪಿಪಾಸು ಇಸ್ರೇಲ್ ಯುದ್ಧದ ತಯಾರಿ ನಡೆಸಿಬಿಟ್ಟಿತ್ತು. ಆದರೆ ಅತೀವ ಆಂತರಿಕ ಸಂಕಟದಲ್ಲಿರುವ ಅಮೆರಿಕ ಮತ್ತು ಯೂರೋಪ್‌ನ ಜನತೆ ಸಿರಿಯದ ಮೇಲಿನ ಯುದ್ಧ ಘೋಷಣೆಯನ್ನು ತೀವ್ರವಾಗಿ ಪ್ರತಿಭಟಿಸಿದ ಕಾರಣ, ರಷ್ಯ ಮತ್ತು ಇತರೆ ಅಂತರರಾಷ್ಟ್ರೀಯ ಸಂಸ್ಥೆಗಳ ಮಧ್ಯಸ್ಥಿಕೆಯಲ್ಲಿ ಸಿರಿಯ ತನ್ನೆಲ್ಲ ರಾಸಾಯನಿಕ ಅಸ್ತ್ರಗಳನ್ನು ನಾಶಗೊಳಿಸಲು ಒಪ್ಪಿದ ಕಾರಣ ಈ ದೇಶ ಅಮೆರಿಕ-ಇಸ್ರೇಲ್ ಸೈನ್ಯದ ಆಕ್ರಮಣದಿಂದ ತಪ್ಪಿಸಿಕೊಂಡಿದ್ದು. ಇದು ರಷ್ಯಾದ ರಾಯಭಾರ

ರಾಜಕಾರಣಕ್ಕೆ ಸಿಕ್ಕ ಜಯವೆಂದು ಪರಿಗಣಿಸಬಹುದು. ಈ ಸಂದರ್ಭದಲ್ಲಿ ಸ್ಮರಿಸಬೇಕಾದ ವಿಷಯವೆಂದರೆ ಅಮೆರಿಕ ವಿಯಟ್ನಾಂ ಯುದ್ಧದಲ್ಲಿ ಬಳಸಿದ ಏಜೆಂಟ್ ಆರೆಂಜ್ ಎಂಬ ವಿನಾಶಕಾರಿ ಅನಿಲದ ಬಗ್ಗೆ. ಅಮೆರಿಕ, ಸಿರಿಯ ಯಾವ ದೇಶವೇ ಆಗಲಿ ವಿಷಾನಿಲವನ್ನು ಬಳಸುವುದು ಅಮಾನವೀಯ ಮತ್ತು ಖಂಡನೀಯ. ಅಸ್ಸಾದ್ ತನ್ನ ದೇಶದಲ್ಲಿನ ಅಂತಃಕಲಹವನ್ನು ಕೊನೆಗೊಳಿಸುವ ಪ್ರಯತ್ನಕ್ಕೆ ಮುಂದಾಗಬೇಕು. ಬಹುಶಃ ಆರ್ಥಿಕ ಬಿಕ್ಕಟ್ಟಿನಿಂದ ನರಳುತ್ತಿರುವ ಅಮೆರಿಕ ಮತ್ತು ಯುರೋಪ್ ರಾಷ್ಟ್ರಗಳಿಗೆ ರಾಯಭಾರಿ ರಾಜಕಾರಣವೇ ಸಾಂದರ್ಭಿಕವೆಂದು ಕಂಡುಬಂದಿರಬಹುದು. ಯುದ್ಧವಾಗದಿದ್ದರೆ ಚಿಂತೆಯಿಲ್ಲ. ಸಿ.ಐ.ಎ. ಇದೆಯಲ್ಲ ಎಂಬ ಆಲೋಚನೆ, ತಲೆಗೆ ಹತ್ತಿರಬಹುದು. ಒಟ್ಟಾರೆ ಸಿರಿಯದಲ್ಲಿ ಅಂತರರಾಷ್ಟ್ರೀಯ ಯುದ್ಧವೊಂದು ಸಂಭವಿಸದಿದ್ದುದು ಸಕಾರಾತ್ಮಕ ಬೆಳವಣಿಗೆ.

## ಇರಾನ್ – ಹೊಸ ತಿರುವು

೨೦೧೩ರ ಇನ್ನೊಂದು ಮಹತ್ತರ ಬೆಳವಣಿಗೆಯೆಂದರೆ ಅಮೆರಿಕದ ಬದ್ಧ ದ್ವೇಷಿಯೆನಿಸಿಕೊಂಡಿದ್ದ ಇರಾನ್ ನವೆಂಬರ್ ೨೪ರಂದು ಫ್ರಾನ್ಸ್, ಬ್ರಿಟನ್, ಜರ್ಮನಿ, ರಷ್ಯಾ, ಚೀನಾ ಮತ್ತು ಅಮೆರಿಕದ ನಡುವೆ ಮಾಡಿಕೊಂಡ ಅಣು ಒಪ್ಪಂದ. ಈ ಒಪ್ಪಂದದ ಪ್ರಕಾರ ಇರಾನ್ ತನ್ನ ಅಣು ಕಾರ್ಯಕ್ರಮಗಳನ್ನು ಸೀಮಿತಗೊಳಿಸಲು, ತನ್ನಲ್ಲಿರುವ ಅಣು ಸರಕನ್ನು ಕಡಿಮೆ ಮಾಡಲು ಮತ್ತು ಮುಂದಿನ ಆರು ತಿಂಗಳಲ್ಲಿ ಯಾವುದೇ ಅಣು ಪ್ರಯೋಗಗಳನ್ನು ಕೈಗೊಳ್ಳದಿರುವುದು. ಬದಲಾಗಿ ಇರಾನ್‌ನ ಮೇಲಿನ ಆರ್ಥಿಕ ದಿಗ್ಬಂಧನವನ್ನು ಭಾಗಶಃ ತೆರವುಗೊಳಿಸಲಾಗುವುದು. ಅಮೆರಿಕ ಮತ್ತು ನ್ಯಾಟೊ ರಾಷ್ಟ್ರಗಳು ತಮ್ಮ ಅವಶ್ಯಕತೆ ಮತ್ತು ಸಂದರ್ಭಕ್ಕನುಗುಣವಾಗಿ ಇರಾನ್ ಮತ್ತು ಇರಾಕ್ ದೇಶಗಳನ್ನು ಪರಸ್ಪರ ಎತ್ತಿಕಟ್ಟಿ ಶಿಯ–ಸುನ್ನಿ–ಕರ್ಡ್ ಜನರ ನಡುವೆ ಜನಾಂಗ ದ್ವೇಷ ಹಬ್ಬಿಸಿ, ಈ ದೇಶಗಳ ತೈಲ ಸಂಪತ್ತಿನ ಮೇಲೆ ಸ್ವಾಮ್ಯ ಸಾಧಿಸಿದ್ದು ಜಗತ್ತಿಗೇ ಗೊತ್ತಿರುವ ವಿಷಯ. ಇರಾನ್ ಅಣ್ವಸ್ತ್ರ ತಯಾರಿಕೆಯಲ್ಲಿ ತೊಡಗಿದೆಯೆಂಬ ಗುಮಾನಿಯ ಮೇಲೆ ಅಮೆರಿಕ ಮತ್ತು ನ್ಯಾಟೊ ರಾಷ್ಟ್ರಗಳು ಆರ್ಥಿಕ ದಿಗ್ಬಂಧನ ಹೇರಿ ಈ ದೇಶದ ಪರಿಸ್ಥಿತಿಯನ್ನು ಉಸಿರುಗಟ್ಟಿಸುವಂತೆ ಮಾಡಿ ಅಂತಃಕಲಹದ ಬೀಜ ಬಿತ್ತಿದ್ದವು. ಇತ್ತೀಚೆಗೆ ಇರಾನ್‌ನಲ್ಲಿ ನಡೆದ ಚುನಾವಣೆಯಲ್ಲಿ ಅಧ್ಯಕ್ಷನಾಗಿ ಆಯ್ಕೆಯಾದ ಹಸನ್ ರೌಹಾನಿ ಅವರಿಗೆ ದೇಶದ ಆಂತರಿಕ ಆರ್ಥಿಕ ಒತ್ತಡಗಳನ್ನು ಪರಿಹರಿಸಿಕೊಳ್ಳಲು ಸುಮಾರು ೩೦ ವರ್ಷಗಳಿಂದ ಪಾಲಿಸಿಕೊಂಡು ಬಂದಿದ್ದ ಅಮೆರಿಕ ವಿರೋಧಿ ನೀತಿಯನ್ನು ಬದಲಾಯಿಸಿಕೊಳ್ಳಬೇಕಾದ್ದು ಅನಿವಾರ್ಯವಾಗಿತ್ತು. ಇರಾನ್ ಜನತೆಯ ಇಂಗಿತವೂ ಇದೇ ಆಗಿತ್ತು. ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮನಿಗೂ ಇಂತಹ ಬೆಳವಣಿಗೆಯ ಅವಶ್ಯಕತೆಯಿತ್ತು. ೨೦೧೪ರಲ್ಲಿ ಆಫ್ಘಾನಿಸ್ತಾನದಿಂದ ಅಮೆರಿಕದ ಬಹುಪಾಲು ಸೈನ್ಯವನ್ನು ವಾಪಸ್ಸು ಕರೆಸಲು ಒಬಾಮ ತೀರ್ಮಾನಿಸಿದ್ದಾನೆ. ಸುಮಾರು ೧೪,೦೦೦ ಅಮೆರಿಕ ಸೈನಿಕರನ್ನು ಆಫ್ಘಾನಿಸ್ತಾನದ ಆಂತರಿಕ ರಕ್ಷಣೆಗಾಗಿ ಇರಿಸಿಕೊಳ್ಳುವ ಒಪ್ಪಂದಕ್ಕೆ ಈ ಎರಡೂ ದೇಶಗಳು ಸಹಿ ಹಾಕುವಲ್ಲಿ ಭಿನ್ನಾಭಿಪ್ರಾಯ ತಲೆದೋರಿದೆ. ಇಂತಹ ಸಂದರ್ಭದಲ್ಲಿ ಅಮೆರಿಕಕ್ಕೆ ಇರಾನ್‌ನ ಸಹಾಯ ಅತ್ಯಗತ್ಯ. ಇರಾನ್ ಆಫ್ಘಾನಿಸ್ತಾನದೊಡನೆ ಉತ್ತಮ ಬಾಂಧವ್ಯ ಹೊಂದಿದೆ. ಹಾಗೆಯೇ ಇರಾನ್ ಮತ್ತು ಸಿರಿಯ ಮಿತ್ರ ದೇಶಗಳು. ಸಿರಿಯದಲ್ಲಿನ ಅಂತರ್ಯುದ್ಧ ನಿಲ್ಲಬೇಕೆಂದರೆ ಹಠಹಿಡಿದಿರುವ ಅಸ್ಸಾದ್‌ನನ್ನು ಒಪ್ಪಂದದ ಹಾದಿಗೆ ತರಬೇಕು. ಈ ದಿಸೆಯಲ್ಲಿ ಇರಾನ್ ಪಾತ್ರ ಮಹತ್ವದ್ದೆಂದು ಅಮೆರಿಕದ ಲೆಕ್ಕಾಚಾರ. ಪಶ್ಚಿಮ ಏಷ್ಯದಲ್ಲಿ ಶಾಂತಿ ನೆಲೆಸಲು ಇರಾನ್ ಮಹತ್ವದ ಪಾತ್ರವಹಿಸಬಹುದು. ಆದರೆ ಹಾದಿ ಸುಗಮವಾಗೇನಿಲ್ಲ. ಸದ್ಯದ ಬೆಳವಣಿಗೆಯಂತೂ ಆಶಾದಾಯಕ. ಒಪ್ಪಂದವಾದದ್ದು ಮತ್ತು ಇರಾನ್ ಮೇಲಿನ ಆರ್ಥಿಕ ದಿಗ್ಬಂಧನವನ್ನು ಭಾಗಶಃ ತೆರವುಗೊಳಿಸಿದ್ದು ಈ ದೇಶದ ಜನತೆಗೆ ಮಾತ್ರವಲ್ಲ, ಇರಾನ್ ಜೊತೆ ವ್ಯಾಪಾರ–ವಾಣಿಜ್ಯ ಸಂಬಂಧಗಳನ್ನು ಹೊಂದಲು ಮತ್ತು ಬೆಳೆಸಲು ಬಯಸುವ, ಭಾರತವೂ ಸೇರಿದಂತೆ ಇತರ ರಾಷ್ಟ್ರಗಳಿಗೆ ಮಹತ್ವದ ಹೆಜ್ಜೆ. ಆದರೆ ಎಲ್ಲವೂ ಸುಸೂತ್ರವಾಯಿತೆಂದು ತಿಳಿಯುವಂತಿಲ್ಲ. ಇಸ್ರೇಲ್, ಸೌದಿ ಅರೇಬಿಯ ಮತ್ತು ಜೋರ್ಡಾನ್ ಈ ಒಪ್ಪಂದದ ಬಗ್ಗೆ ತಮ್ಮ ಅಸಮಾಧಾನ ಮತ್ತು ಅಸಂತೋಷವನ್ನು ಈಗಾಗಲೇ ವ್ಯಕ್ತಪಡಿಸಿವೆ. ಅಮೆರಿಕದ ವಿದೇಶಾಂಗ ನೀತಿಗಳನ್ನು ರೂಪಿಸುವಲ್ಲಿ ಮಹತ್ತರ ಪಾತ್ರ ನಿರ್ವಹಿಸುವ ಅಮೆರಿಕ–ಇಸ್ರೇಲ್ ಸಾರ್ವಜನಿಕ ವ್ಯವಹಾರ ಸಮಿತಿ ಈ ಒಪ್ಪಂದದ ಬಗ್ಗೆ ತನ್ನ ಪ್ರಬಲ ವಿರೋಧವನ್ನು ವ್ಯಕ್ತಪಡಿಸಿದೆ. ಇಸ್ರೇಲ್‌ನ ಪ್ರಧಾನ ಮಂತ್ರಿ ಬೆಂಜಮಿನ್ ನೇತನ್ಯಾಹು ಈ ಒಪ್ಪಂದವೊಂದು ಚಾರಿತ್ರಿಕ ತಪ್ಪು ಎಂದು ಹೇಳಿಕೆಯಿತ್ತಿದ್ದಾನೆ. ಶಾಂತಿಪ್ರಿಯ ರಾಷ್ಟ್ರಗಳು ಒಕ್ಕೊರಲಿನಿಂದ ಈ ಒಪ್ಪಂದವನ್ನು ಸಮರ್ಥಿಸಬೇಕು. ಭಾರತದ ಹಿತದೃಷ್ಟಿಯೂ ಇದರಲ್ಲಿದೆ. ಇರಾನ್‌ನ ಈ ಬೆಳವಣಿಗೆ ರಾಯಭಾರ ರಾಜಕೀಯಕ್ಕೆ ದೊರೆತ ಇನ್ನೊಂದು ಜಯವೆನ್ನಬಹುದು.

## ಈಜಿಪ್ಟ್ – ರಾಜಕೀಯ ಮಂಥನ

ಟ್ಯುನೀಷಿಯದಿಂದ ಆರಂಭಗೊಂಡ ಅರಬ್ ಜನತೆಯ ಆಕ್ರೋಶದ ಬಿರುಗಾಳಿ ಈಜಿಪ್ಟ್, ಲಿಬಿಯ, ಸಿರಿಯ, ಜೋರ್ಡಾನ್ ಇತ್ಯಾದಿ ಅರಬ್ ರಾಷ್ಟ್ರಗಳ ಸರ್ಕಾರಗಳನ್ನು ಅಲ್ಲೋಲ–ಕಲ್ಲೋಲಗೊಳಿಸಿ, ಸರ್ವಾಧಿಕಾರಿಗಳನ್ನು ಪದಚ್ಯುತಿಗೊಳಿಸಿದ್ದು ಜನಶಕ್ತಿಗೊಂದು ಉಜ್ವಲ ಉದಾಹರಣೆ. ಈಜಿಪ್ಟ್‌ನ ಹೋಸ್ನಿ ಮುಬಾರಕ್‌ನ ಸರ್ವಾಧಿಕಾರ ಕೊನೆಗೊಂಡು ಹೊಸ ಸಂವಿಧಾನದ ರಚನೆಯೊಂದಿಗೆ ಪ್ರಜಾಪ್ರಭುತ್ವ ವ್ಯವಸ್ಥೆಯ ಸ್ಥಾಪನೆಯ ನಿರೀಕ್ಷೆ ಹುಸಿಯಾಗಿದೆ. ನಂತರ ಅಧಿಕಾರಕ್ಕೆ ಬಂದ ಮುಸ್ಲಿಂ ಬ್ರದರ್ ಹುಡ್ ಪಕ್ಷ ಈಜಿಪ್ಟ್‌ಅನ್ನು ಧರ್ಮಾಧಾರಿತ ಸಮಾಜವನ್ನಾಗಿ ಮಾಡುವ ಪ್ರಯತ್ನವನ್ನು ಈ ದೇಶದ ಬಹುಸಂಖ್ಯಾತ ಜನರು ವಿರೋಧಿಸಿ, ಪ್ರತಿಭಟಿಸಿ ಈ ಪಕ್ಷದ ಮೊಹಮದ್ ಮೋರ್ಸಿಯನ್ನು ಅಧ್ಯಕ್ಷ ಸ್ಥಾನದಿಂದ ಇಳಿಸಿದ್ದರೂ ಮೋರ್ಸಿ ತಾನೇ ಅಧ್ಯಕ್ಷನೆಂದು ಘೋಷಿಸಿಕೊಂಡಿರುವುದು ಇಡೀ ಜನಸ್ತೋಮವನ್ನು ಅಂತಃಕಲಹದಲ್ಲಿ ತೊಡಗಿಸಿದೆ. ವಿಪರ್ಯಾಸವೆಂದರೆ ಈಜಿಪ್ಟ್‌ನ ಹತಾಶ ಜನತೆ ಪ್ರಜಾಪ್ರಭುತ್ವದ ಸ್ಥಾಪನೆಗಾಗಿ ಅಲ್ಲಿಯ ಸೈನ್ಯವನ್ನು ನಂಬಿ ಅದಕ್ಕೆ ತಮ್ಮ ಬೆಂಬಲ ಸೂಚಿಸಿ ಅಧಿಕಾರ ನೀಡಿರುವುದು. ಮತ್ತೊಮ್ಮೆ ಹೊಸ ಸಂವಿಧಾನದ ರಚನೆಯ ಪ್ರಕ್ರಿಯೆ ನಡೆದಿದೆ. ಇದು ಮತ್ತೊಂದು ಜನಾಂದೋಳನವನ್ನು ಹುಟ್ಟುಹಾಕಿದಲ್ಲಿ ಈಜಿಪ್ಟ್‌ನ ಜನಜೀವನ ಮತ್ತಷ್ಟು ಅಸ್ತವ್ಯಸ್ತಗೊಳ್ಳುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಅಂದರೆ ಈಜಿಪ್ಟ್‌ನಲ್ಲಿ ೨೦೧೧ರಲ್ಲಿ ಆರಂಭಗೊಂಡ ರಾಜಕೀಯ ಮತ್ತು ಸಾಮಾಜಿಕ ಮಂಥನ ಮತ್ತು ಬದಲಾವಣೆ ಬಯಸಿರುವ ಜನರ ಹೋರಾಟ ಅಂತ್ಯಗೊಳ್ಳುವ ಸೂಚನೆಗಳಿಲ್ಲ.



## ಯೂರೋಪ್‌ನ ಆರ್ಥಿಕ ಬಿಕ್ಕಟ್ಟು

ನಿರಂತರ ಬವಣೆ ಮತ್ತು ಹೋರಾಟಗಳು ಈಜಿಪ್ಟ್‌ಗೆ ಮಾತ್ರ ಸೀಮಿತವಾಗಿಲ್ಲ. ಶ್ರೀಮಂತ ರಾಷ್ಟ್ರಗಳೆನಿಸಿಕೊಂಡು ಮೆರೆಯುತ್ತಿದ್ದ ಯೂರೋಪ್‌ನ ಬಹುಪಾಲು ರಾಷ್ಟ್ರಗಳು ಆರ್ಥಿಕ ಮುಗ್ಗಟ್ಟಿನಲ್ಲಿ ನಲುಗಿವೆ. ಯೂರೋಪ್ ರಾಷ್ಟ್ರಗಳಲ್ಲಿನ ಜನಾಂದೋಳನದ ಪ್ರವಾಹದಲ್ಲಿ ಕೊಚ್ಚಿಹೋದ ರಾಷ್ಟ್ರಾಧ್ಯಕ್ಷರು ಮತ್ತು ಪ್ರಧಾನ ಮಂತ್ರಿಗಳೆಷ್ಟೋ. ಭೀಕರ ನಿರುದ್ಯೋಗ ಇಡೀ ಯೂರೋಪನ್ನು ಆವರಿಸಿದೆ. ಗ್ರೀಸ್‌ನ ಯುವಜನತೆಯ ನಿರುದ್ಯೋಗದ ಪ್ರಮಾಣ ಶೇ. ೬೪.೨ ಎಂದರೆ ಸಮಸ್ಯೆಯ ಅಗಾಧತೆಯನ್ನು ಕಲ್ಪಿಸಿಕೊಳ್ಳಬಹುದು. ಸ್ಪೇನ್, ಇಟಲಿ, ಪೋರ್ತುಗಲ್ ರಾಷ್ಟ್ರಗಳ ಪರಿಸ್ಥಿತಿಯೇನೂ ಭಿನ್ನವಾಗಿಲ್ಲ. ೨೦೧೩ರಲ್ಲಿ ಈ ರೋಗಗ್ರಸ್ತ ರಾಷ್ಟ್ರಗಳ ಪಟ್ಟಿಗೆ ಸೇರಿದ ಇನ್ನೊಂದು ದೇಶ ಸೈಪ್ರಸ್. ಗ್ರೀಸ್ ದೇಶಕ್ಕೆ ಕೊಟ್ಟ ಸಾಲದಿಂದಾಗಿ ಸೈಪ್ರಸ್‌ನ ಪ್ರಮುಖ ಬ್ಯಾಂಕ್ ದಿವಾಳಿಯಾಗಿದೆ. ರಾಜಕೀಯ ಪಕ್ಷಗಳಿಗೆ ದಿಕ್ಕು ಕಾಣದಾಗಿದೆ. ಯೂರೋಪ್‌ನ ಪ್ರಬಲ ರಾಷ್ಟ್ರವೆನಿಸಿಕೊಂಡ ಜರ್ಮನಿಯ ರಾಜಕೀಯ ಪರಿಸ್ಥಿತಿಯೂ ಭಿನ್ನವಾಗಿಲ್ಲ. ಜರ್ಮನಿಯ ಎಂಜೆಲ ಮರ್ಕೆಲ್



ಮೂರನೇ ಬಾರಿಗೆ ಛಾನ್ಸಲರ್ ಆಗಿ ಆಯ್ಕೆಗೊಂಡಿದ್ದರೂ ಈಕೆಯ ಪಕ್ಷ ಬಹುಮತ ಹೊಂದದ ಕಾರಣ ಬಲಪಂಥೀಯ ಕ್ರಿಶ್ಚಿಯನ್ ಡೆಮಾಕ್ರಟಿಕ್ ಪಕ್ಷ ಮತ್ತು ಸಮಾಜವಾದಿ ಪಕ್ಷಗಳ ಬೆಂಬಲದಿಂದ ಸರ್ಕಾರ ರಚಿಸಬೇಕಾದ ವಿಚಿತ್ರ ಸನ್ನಿವೇಶ ತಲುಪಿದೆ. ಯೂರೋಪ್‌ನ ಆರ್ಥಿಕ ಮುಗ್ಗಟ್ಟು ಭಾರತವೂ ಸೇರಿದಂತೆ ಅನೇಕ ರಾಷ್ಟ್ರಗಳ ಮೇಲೆ ಪರಿಣಾಮ ಬೀರುತ್ತಿದೆ.

## ಅಮೆರಿಕದ ಅಂತರ್ಜಾಲ ಬೇಹುಗಾರಿಕೆ

೨೦೧೦ರಲ್ಲಿ ವಿಕಿಲೀಕ್ಸ್ ಬಹಿರಂಗಗೊಳಿಸಿದ ಪೆಂಟಗನ್‌ನ ೨.೫ ಲಕ್ಷ ದಾಖಲೆಗಳಿಂದ ಅಮೆರಿಕ ಪ್ರಪಂಚದಾದ್ಯಂತ ವಿವಿಧ ದೇಶಗಳಲ್ಲಿ ನಡೆಸುತ್ತಿದ್ದ ಬೇಹುಗಾರಿಕೆ ಕಾರ್ಯಾಚರಣೆ ಬೆಳಕಿಗೆ ಬಂತು. ವಿಕಿಲೀಕ್ಸ್‌ನ ಜೂಲಿಯನ್ ಅಸಾಂಜ್‌ನನ್ನು ಅಮೆರಿಕ ಸರ್ಕಾರದ ವಶಕ್ಕೆ ಕೊಡಬೇಕೆಂಬ ಸ್ವೀಡನ್ ಮತ್ತು ಬ್ರಿಟನ್‌ನ ಸಂಚಿಗೆ ಈಕ್ವೆಡಾರ್‌ನ ಅಧ್ಯಕ್ಷ ರಫೈಲ್ ಕೊರ್ರಿಯ ಅಡ್ಡನಿಂತು ಲಂಡನ್‌ನ ತನ್ನ ರಾಯಭಾರಿ ಕಛೇರಿಯಲ್ಲಿ ಆಶ್ರಯವಿತ್ತು ಲ್ಯಾಟಿನ್ ಅಮೆರಿಕ ದೇಶಗಳ ನೈತಿಕ ಶಕ್ತಿಯನ್ನು ಜಗತ್ತಿಗೆ ಪರಿಚಯಿಸಿದ. ವಿಕಿಲೀಕ್ಸ್ ಬಹಿರಂಗ ಗೊಳಿಸಿದ ದಾಖಲೆಗಳು ಅಮೆರಿಕವನ್ನು ಮುಜುಗರಕ್ಕೀಡುಮಾಡಿದರೆ, ೨೦೧೩ರಲ್ಲಿ ಎಡ್ವರ್ಡ್ ಸ್ನೋಡೆನ್, ಅಮೆರಿಕದ ಪ್ರಜೆ, ೩೦ ವರ್ಷದ ತರುಣ, ಮಾಹಿತಿ ತಂತ್ರಜ್ಞಾನ ನಿಪುಣ, ನ್ಯಾಷನಲ್ ಸೆಕ್ಯುರಿಟಿ ಏಜನ್ಸಿಯ ಗುತ್ತಿಗೆ ನೌಕರ ತನ್ನ ದೇಶದ ಸರ್ಕಾರ ವಿವಿಧ ದೇಶಗಳಲ್ಲಿ ನಡೆಸುತ್ತಿರುವ ಅಂತರ್ಜಾಲ ಬೇಹುಗಾರಿಕೆ ಮತ್ತು ದೂರವಾಣಿ ಕದ್ದಾಲಿಕೆಯನ್ನು ಬಯಲುಗೊಳಿಸಿದ. ವಿಶ್ವದ ಅನೇಕ ರಾಷ್ಟ್ರಗಳು ಅಮೆರಿಕದ ಈ ಅಂತರ್ಜಾಲ ಬೇಹುಗಾರಿಕೆಯನ್ನು ತೀವ್ರವಾಗಿ ಖಂಡಿಸಿವೆ. ಬೇಹುಗಾರಿಕೆ ಅಮೆರಿಕದ ಇತ್ತೀಚಿನ ಕಾಯಕವೇನಲ್ಲ. ಜರ್ಮನಿಯಿಂದ ಅಮೆರಿಕಕ್ಕೆ ವಲಸೆ ಬಂದ ಶ್ರೇಷ್ಠ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೈನ್‌ನ ದೂರವಾಣಿ ಸಂಭಾಷಣೆಗಳನ್ನು ಎಫ್.ಬಿ.ಐ. ಕದ್ದಾಲಿಸುತ್ತಿದ್ದುದು ಮತ್ತು ಹೆಸರಾಂತ ನಟಿ ಮರ್ಲಿನ್ ಮನ್ರೋಳನ್ನೂ ಇದೇ ರೀತಿಯ ಬೇಹುಗಾರಿಕೆಗೆ ಒಳಪಡಿಸಿದ್ದು ತಿಳಿದ ವಿಷಯವೆ. ಐನ್‌ಸ್ಟೈನ್ ಮತ್ತು ಮನ್ರೋ ಕಮ್ಯೂನಿಸ್ಟರೆಂಬುದೇ ಇದಕ್ಕೆ ಕಾರಣ. ಇನ್ನು ಸಿ.ಐ.ಎ.ನ ಕಾರ್ಯಾಚರಣೆಯ ಬಗ್ಗೆ ಜಾನ್ ಪರ್ಕಿನ್ ಪುಸ್ತಕವನ್ನೇ ಬರೆದಿದ್ದಾನೆ. ಎಡ್ವರ್ಡ್ ಸ್ನೋಡೆನ್ ಬಹಿರಂಗಗೊಳಿಸಿದ ದಾಖಲೆಗಳ ಸಾರಾಂಶವೆಂದರೆ, ಅಮೆರಿಕ ಸರ್ಕಾರ ಭಯೋತ್ಪಾದನೆಯ ಬಗ್ಗೆ ಮಾಹಿತಿ ಸಂಗ್ರಹಿಸುವ ನೆಪದಲ್ಲಿ ಅಂತರ್ಜಾಲ ಬೇಹುಗಾರಿಕೆಯನ್ನು ವಿವಿಧ ದೇಶಗಳ ವಿದೇಶಾಂಗ ನೀತಿ, ಆರ್ಥಿಕ ಸ್ಥಿತಿ–ಗತಿಗಳ ಬಗ್ಗೆ ಮಾಹಿತಿ ಸಂಗ್ರಹಿಸಲು ಬಳಸಿಕೊಳ್ಳುತ್ತಿದೆ. ಚೀನಾ, ರಷ್ಯಾ, ಪಾಕಿಸ್ತಾನ ಮತ್ತು ಆಫ್ಘಾನಿಸ್ತಾನ ಅಂತರ್ಜಾಲ ಬೇಹುಗಾರಿಕೆಗೊಳಗಾದ ಪ್ರಮುಖ ದೇಶಗಳಾಗಿದ್ದರೂ ಅಮೆರಿಕ ತನ್ನ ಮಿತ್ರರಾಷ್ಟ್ರಗಳಾದ ಫ್ರಾನ್ಸ್, ಜರ್ಮನಿ, ಜಪಾನ್, ಬ್ರಿಟನ್, ಬ್ರೆಸಿಲ್, ಮೆಕ್ಸಿಕೋನ ರಾಜಕೀಯ ನಾಯಕರು ಮತ್ತು ಇತರೆ ರಾಷ್ಟ್ರಗಳ ೩೫ ಪ್ರಮುಖ ರಾಜಕಾರಣಿಗಳನ್ನು ತನ್ನ ಅಂತರ್ಜಾಲ

ಬೇಹುಗಾರಿಕೆಗೆ ಮತ್ತು ದೂರವಾಣಿ ಕದ್ದಾಲಿಕೆಗೆ ಒಳಪಡಿಸಿದ್ದು ಅಮೆರಿಕದ ಈ ಹೀನಕೃತ್ಯ ಖಂಡಿಸಲ್ಪಡುತ್ತಿದೆ. ಅಮೆರಿಕದ ಬಗ್ಗೆ ವಿಶ್ವದ ಇತರೆ ದೇಶಗಳ ದೃಷ್ಟಿಕೋನ ಬದಲಾಗುತ್ತಿದೆ. ಲ್ಯಾಟಿನ್ ಅಮೆರಿಕ ದೇಶಗಳಲ್ಲಿ ಈ ಬಗ್ಗೆ ಬೃಹತ್ ಪ್ರತಿಭಟನಾ ಪ್ರದರ್ಶನಗಳು ನಡೆದಿವೆ.

## ಹ್ಯೂಗೋ ಚಾವೇಜ್ ಕಣ್ಮರೆ

ಲ್ಯಾಟಿನ್ ಅಮೆರಿಕದ ಜನಪ್ರಿಯ ನಾಯಕ ವೆನಿಜುವೇಲದ ಅಧ್ಯಕ್ಷನಾಗಿದ್ದ ಹ್ಯೂಗೋ ಚಾವೇಜ್‌ನ ಮರಣ ೨೦೧೩ರ ದುಃಖದ ಘಟನೆಗಳಲ್ಲೊಂದು. ಸಾಮ್ರಾಜ್ಯಶಾಹಿ ವ್ಯವಸ್ಥೆಯ ವಿರುದ್ಧ ದನಿಯೆತ್ತಿ, ಕಿಡಿಕಾರಿ ಲ್ಯಾಟಿನ್ ಅಮೆರಿಕದ ದೇಶಗಳಿಗೆ ಮಾತ್ರವಲ್ಲ ಎಲ್ಲ ಶೋಷಿತ ರಾಷ್ಟ್ರಗಳಿಗೆ ಆತ್ಮಸ್ಥೈರ್ಯವನ್ನು ಕೊಟ್ಟಂತಹ ನಾಯಕ. ತನ್ನ ದೇಶದ ವಿಶಾಲ ತೈಲ ಸಂಪತ್ತನ್ನು ಬಡಜನರಿಗೆ ಮತ್ತು ಬಡರಾಷ್ಟ್ರಗಳಿಗೆ ಬಳಸಿದ್ದು ಈತನ



ಮಾನವೀಯತೆಗೆ ಸಾಕ್ಷಿ. ತೈಲಕ್ಕಾಗಿ ರಕ್ತ ಚೆಲ್ಲುವ ಅಮೆರಿಕ ಮತ್ತು ನ್ಯಾಟೋ ರಾಷ್ಟ್ರಗಳಿಗೆ ಚಾವೇಜ್ ಪರ್ಯಾಯ ವ್ಯವಸ್ಥೆಯ ಸಂಕೇತವಾದ. ಆರ್ಥಿಕ ದಿಗ್ಬಂಧನಕ್ಕೊಳಗಾದ ಕ್ಯೂಬಾಕ್ಕೆ ತೈಲ ಸರಬರಾಜು ಮಾಡಿ ಅದಕ್ಕೆ ಬದಲಾಗಿ ಕ್ಯೂಬಾದ ವೈದ್ಯರನ್ನು ಕರೆಸಿ ತನ್ನ ದೇಶದ ಆರೋಗ್ಯ ವ್ಯವಸ್ಥೆಯನ್ನು ಸುಧಾರಿಸಿದ. ಲ್ಯಾಟಿನ್ ಅಮೆರಿಕದ ಐಕ್ಯತೆಗಾಗಿ ಮತ್ತು ಪ್ರಗತಿಗಾಗಿ ದುಡಿದ. ಚಾವೇಜ್ ಕ್ಯಾನ್ಸರ್ ರೋಗಕ್ಕೆ ತುತ್ತಾದದ್ದು ವಿಷಾದನೀಯ. ತನ್ನ ಜೀವಿತ ಕಾಲದಲ್ಲೇ ಲ್ಯಾಟಿನ್ ಅಮೆರಿಕದ ದೇಶಗಳಲ್ಲಿ ಅನೇಕ ಚಾವೇಜ್‌ರಂಥವರನ್ನು ತಯಾರು ಮಾಡಿದ್ದು ಈತನ ಬೃಹತ್ ಸಾಧನೆ. ಲ್ಯಾಟಿನ್ ಅಮೆರಿಕದ ಸ್ವಾತಂತ್ರ್ಯ ಹೋರಾಟಗಾರರಾದ ಸೈಮನ್ ಬೋಲಿವರ್, ಸೈಮನ್ ರಾಡ್ರಿಗ್ರೂಸ್ ಮತ್ತು ಜೋಸ್ ಮಾರ್ಟಿ ಸಾಲಿಗೆ ಹ್ಯೂಗೋ ಚಾವೇಜ್ ಸೇರುವುದರಲ್ಲಿ ಸಂಶಯವಿಲ್ಲ.

## ವಿಶ್ವಮಾನವ – ಮಂಡೇಲಾ

೨೦೧೩ರಲ್ಲಿ ನಮ್ಮನ್ನಗಲಿದ ಇನ್ನೊಬ್ಬ ನಾಯಕ ದಕ್ಷಿಣ ಆಫ್ರಿಕಾದ ನೆಲ್ಸನ್ ಮಂಡೇಲಾ. ವರ್ಣಭೇದ ನೀತಿಯನ್ನು ಪ್ರತಿಭಟಿಸಿ, ೨೭ ವರ್ಷಕ್ಕೂ ಹೆಚ್ಚಿನ ಸೆರೆವಾಸ ಅನುಭವಿಸಿ ಜಯಶೀಲನಾದದ್ದು, ನಂತರ ೧೯೯೪ರಲ್ಲಿ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ ಪಕ್ಷ ಗೆದ್ದು ಮಂಡೇಲಾ ಅಧ್ಯಕ್ಷನಾದದ್ದು ಇತಿಹಾಸದ ಅದ್ಭುತ ಘಟನೆಗಳು. ೧೯೯೩ರ ನೊಬೆಲ್ ಶಾಂತಿ ಪಾರಿತೋಷಕ ನೀಡಿ ಮಂಡೇಲಾನನ್ನು ವಿಶ್ವ ಗೌರವಿಸಿತು. ಈತ ವಿಶ್ವಮಾನವ. ಧೀಮಂತ ರಾಜಕೀಯ ನಾಯಕ, ಮಾನವತಾವಾದಿ. ದಕ್ಷಿಣ ಆಫ್ರಿಕಾದ ಇತಿಹಾಸದಲ್ಲಿ ಅಜರಾಮರವಾಗಿ ಉಳಿಯುವ ನೆಲ್ಸನ್ ಮಂಡೇಲಾಗೆ ವಿಶ್ವವೇ ಅಶ್ರುತರ್ಪಣ ನೀಡಿದೆ.



## ಏಷ್ಯಾಖಂಡದ ಹೊಸ ಸಮಸ್ಯೆಗಳು

ಪ್ರಪಂಚದ ಎಲ್ಲೆಡೆ ಕಾಣುವ ಆರ್ಥಿಕ ಬಿಕ್ಕಟ್ಟು, ಸಾಮಾಜಿಕ ಆಂದೋಲನಗಳು ಮತ್ತು ರಾಜಕೀಯ ಅಸ್ಥಿರತೆ ಏಷ್ಯದ ಅನೇಕ ರಾಷ್ಟ್ರಗಳನ್ನು ಕಾಡುತ್ತಿದೆ. ಥೈಲ್ಯಾಂಡ್‌ನ ಚುನಾಯಿತ ಪ್ರಧಾನ ಮಂತ್ರಿ ಇಂಗ್‌ಲಕ್ ಶಿನವತ್ರ ರಾಜೀನಾಮೆ ನೀಡಬೇಕೆಂಬ ಬೇಡಿಕೆಯಿಟ್ಟು ಸರ್ಕಾರಿ ಇಲಾಖೆಗಳನ್ನು ಮುತ್ತಿಗೆ ಹಾಕಿ ವಿರೋಧ ಪಕ್ಷದ ನಾಯಕ ಸುತೇಪ್‌ನ ನೇತೃತ್ವದಲ್ಲಿ ಪ್ರತಿಭಟನೆ ನಡೆಯುತ್ತಿದೆ. ಈ ದೇಶದ ಪ್ರಮುಖ ಉದ್ದಿಮೆಯೆಂದರೆ ಪ್ರವಾಸೋದ್ಯಮ. ಥೈಲ್ಯಾಂಡ್‌ನಲ್ಲಿ ನಡೆಯುತ್ತಿರುವ ಪ್ರತಿಭಟನೆ ಸದ್ಯಕ್ಕೆ ನಿಲ್ಲುವ ಸೂಚನೆಗಳಿಲ್ಲ. ಚುನಾಯಿತ ಸರ್ಕಾರವನ್ನು ತಾವು ಹುಟ್ಟುಹಾಕಿರುವ ಕ್ರಿಯಾಸಮಿತಿಗೆ ಅಧಿಕಾರ ವರ್ಗಾಯಿಸಬೇಕೆಂಬ ಪ್ರತಿಭಟನಾಕಾರರ ಬೇಡಿಕೆ ಸಮಂಜಸವೆಂದು ಕಾಣುವುದಿಲ್ಲ. ಭಾರತ ಮತ್ತು ಅಕ್ಕ-ಪಕ್ಕದ ರಾಷ್ಟ್ರಗಳ ಸಂಬಂಧ ಅಷ್ಟೇನೂ ಸುಧಾರಿಸಿಲ್ಲ. ಪಾಕಿಸ್ತಾನದಲ್ಲಿ ಮತ್ತೊಂದು ಚುನಾವಣೆ ನಡೆದು ನವಾಜ್ ಷರೀಫ್ ಪ್ರಧಾನ ಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದ ನಂತರ ಭಾರತದೊಡನೆ ಸಂಬಂಧ ಉತ್ತಮ ಗೊಳಿಸುವ ಮಾತನ್ನಾಡಿದ್ದಾನೆ. ಹಾಗೆಯೇ ಕಾಶ್ಮೀರದ ಬಗ್ಗೆ ಭಾರತದ ನಿಲುವನ್ನು ಟೀಕಿಸಿದ್ದಾರೆ. ಹಾಗಾಗಿ ಸಂಬಂಧ ಉತ್ತಮಗೊಳ್ಳುವ ಬಗ್ಗೆ ಅನುಮಾನವಿದೆ. ಚೀನದೊಡನೆಯ ಸಂಬಂಧ ಸ್ವಲ್ಪಮಟ್ಟಿಗೆ ಸುಧಾರಿಸಿದಂತೆ ಕಂಡರೂ ಹಳೆಯ ಸಂಶಯಗಳು ತಲೆ ಎತ್ತುತ್ತಿವೆ. ಬಂಗ್ಲಾದೇಶದಲ್ಲಿ ತೀವ್ರ ಪ್ರತಿಭಟನೆಗಳೂ ನಡೆದಿವೆ. ಅಧಿಕಾರಾರೂಢ ಬಂಗ್ಲಾದೇಶ ಅವಾಮಿ ಲೀಗ್ ಪಕ್ಷದ ಆಡಳಿತದಲ್ಲಿ ಚುನಾವಣೆ ನಡೆಸಕೂಡದೆಂಬ ವಿರೋಧ ಪಕ್ಷಗಳ ಬೇಡಿಕೆಗೆ ಸರ್ಕಾರ ಸಮ್ಮತಿಸಿಲ್ಲ. ಬಂಗ್ಲಾ ದೇಶದಲ್ಲಿ ಚುನಾವಣೆ ನಡೆಯಲಿದೆ. ಇದು ಹೊಸ ಪ್ರತಿಭಟನೆಗಳಿಗೆ ನಾಂದಿ ಯಾಗುವ ಸಾಧ್ಯತೆಗಳಿವೆ. ಶ್ರೀಲಂಕಾದ ತಮಿಳರ ರಾಷ್ಟ್ರೀಯ ಪ್ರಶ್ನೆ ಹೊಸ ತಿರುವು ಪಡೆದಿದೆ.

## ದಿಕ್ಕೆಟ್ಟ ಕಾಂಗ್ರೆಸ್ ಪಕ್ಷ

ಕಾಂಗ್ರೆಸ್ ನೇತೃತ್ವದ ಯು.ಪಿ.ಎ. ತನ್ನ ಮೊದಲ ಅವಧಿಯಲ್ಲಿ ಅಧಿಕಾರ ನಡೆಸಿದ್ದು ಎಡಪಕ್ಷಗಳ ಬಾಹ್ಯ ಬೆಂಬಲದಿಂದ ಮತ್ತು ಸಾಮಾನ್ಯ ಕನಿಷ್ಠ ಕಾರ್ಯಕ್ರಮಗಳ ಆಧಾರದ ಮೇಲೆ. ಹಾಗಾಗಿ ಆಡಳಿತಕ್ಕೊಂದು ಸ್ಪಷ್ಟ ಪರಿಕಲ್ಪನೆಯಿತ್ತು. ಅಮೆರಿಕದೊಡನೆ ಭಾರತ ಸರ್ಕಾರ ಮಾಡಿಕೊಂಡ ೧೨೩- ಅಣು ಒಪ್ಪಂದದ ಹಿನ್ನೆಲೆಯಲ್ಲಿ ಎಡಪಕ್ಷಗಳು ತಮ್ಮ ಬೆಂಬಲ ಹಿಂತೆಗೆದುಕೊಂಡ ನಂತರದ ಚುನಾವಣೆಯಲ್ಲಿ ಪಶ್ಚಿಮಬಂಗಾಳ ಮತ್ತು ಕೇರಳ ರಾಜ್ಯಗಳಲ್ಲಿ ಸೋತರೂ ಸೈದ್ಧಾಂತಿಕ ದೃಷ್ಟಿಯಿಂದ ಆ ನಿರ್ಧಾರ ಸಮರ್ಥನೀಯವಾಗಿತ್ತು. ಆದರೆ ಯು.ಪಿ.ಎ.-೨ ಸಾಧ್ಯವಾದದ್ದು ಮೊದಲ ಯು.ಪಿ.ಎ. ಸರ್ಕಾರದ ಸಾಮಾನ್ಯ ಕನಿಷ್ಠ ಕಾರ್ಯಕ್ರಮಗಳ ಅನುಷ್ಠಾನದಿಂದ ಎಂಬುದನ್ನು ಮರೆಯುವಂತಿಲ್ಲ. ಯು.ಪಿ.ಎ.-೨ಕ್ಕೆ ಸಾಮಾನ್ಯ ಕನಿಷ್ಠ ಕಾರ್ಯಕ್ರಮಗಳಾಗಲೀ ಅಥವಾ ಸೈದ್ಧಾಂತಿಕ ಗುರಿಯಾಗಲಿ ಇಲ್ಲದ ಕಾರಣ ತನ್ನ ಎರಡನೇ ಅವಧಿಯಲ್ಲಿ ದಿಕ್ಕು-ದೆಸೆಯಿಲ್ಲದೆ ಅನಿವಾರ್ಯವಾಗಿ ಅಧಿಕಾರದಲ್ಲಿ ಮುಂದುವರಿದಿದೆ. ತೃಣಮೂಲ ಕಾಂಗ್ರೆಸ್, ಡಿ.ಎಂ.ಕೆ., ಎನ್.ಸಿ.ಪಿ. ಪಕ್ಷಗಳ ಜೊತೆ ಸಮ್ಮಿಶ್ರ ಸರ್ಕಾರ ನಡೆಸುವುದು ಎಂಥ ಸಾಹಸದ ಕೆಲಸವೆಂದು ಕಾಂಗ್ರೆಸ್ ನಾಯಕರಿಗೆ ಅರಿವಾಗಿದೆ. ಯು.ಪಿ.ಎ. ಸರ್ಕಾರ ಈಗ ಅಧಿಕಾರದಲ್ಲಿ ಉಳಿದಿರುವುದು ಸಮಾಜವಾದಿ ಪಕ್ಷ ಮತ್ತು ಬಹುಜನ ಸಮಾಜ ಪಕ್ಷಗಳ ಬಾಹ್ಯ ಬೆಂಬಲದಿಂದಾಗಿ. ಈ ಬೆಂಬಲವನ್ನೂ ಭಾರಿ ಬೆಲೆ ಕೊಟ್ಟು ಕೊಂಡದ್ದೆ. ಕಾಂಗ್ರೆಸ್ ಪಕ್ಷ ಇಂದು ತನ್ನೆಲ್ಲ ನೈತಿಕತೆಯನ್ನು ಕಳೆದುಕೊಂಡಿದೆ. ಜನಸಾಮಾನ್ಯರ ಆಸೆ-ನಿರೀಕ್ಷೆಗಳಿಗೆ ಸ್ಪಂದಿಸಲಾಗದ ಪಕ್ಷವಾಗಿದೆ. ಸೋನಿಯಾ-ರಾಹುಲ್ ಗಾಂಧಿ ಈ ದೇಶದಲ್ಲಿ ಚಲಾವಣೆಗೊಳ್ಳದ ಸವಕಲು ನಾಣ್ಯಗಳಾಗುವ ಕಾಲ ದೂರವಿಲ್ಲ.

## ಎಲ್ಲೂ ಸಲ್ಲದ ಯು.ಪಿ.ಎ. – 2

ಕಾಂಗ್ರೆಸ್‌ನ ಪ್ರಮುಖ ಸಮಸ್ಯೆಯೆಂದರೆ ತಾವು ಯಾರ ಪರ ಇರಬೇಕು ಎಂಬುದರ ಬಗ್ಗೆ ಸ್ಪಷ್ಟತೆಯಿಲ್ಲದಿರುವುದು. ಯು.ಪಿ.ಎ. ತನ್ನ

ಅಧಿಕಾರಾವಧಿಯಲ್ಲಿ ಅನೇಕ ಉಪಯುಕ್ತ ಕಾನೂನುಗಳನ್ನು ತಂದರೂ ಅವೆಲ್ಲ ಕಾಗದದ ಮೇಲಿನ ಅಕ್ಷರಗಳಾಗಿ ಮಾತ್ರ ಆಗಿವೆ. ಅದರ ಜೊತೆಗೇ ಅವುಗಳ ಅನುಷ್ಠಾನಕ್ಕೆ ವಿರೋಧವಾದ ಆರ್ಥಿಕ ನೀತಿಗಳನ್ನು ಜಾರಿಗೊಳಿಸಿ ಎಲ್ಲವನ್ನೂ ಗೋಜಲುಮಯಮಾಡಿ ತಾನೂ ಗೋಜಲಾಗಿರುವುದು ಈ ಪಕ್ಷದ ದುರಂತ. ತೆಲಂಗಾಣದ ಸಮಸ್ಯೆ ಇದಕ್ಕೊಂದು ನಿದರ್ಶನ. ತೆಲಂಗಾಣ ಪ್ರತ್ಯೇಕ ರಾಜ್ಯದ ಬೇಡಿಕೆ ಬಹಳ ಹಳೆಯದು. ಈ ಬೇಡಿಕೆಗೆ ಪೂರಕವಾದ ಪ್ರಬಲ ಕಾರಣಗಳಿವೆ. ಪ್ರತ್ಯೇಕ ರಾಜ್ಯ ರಚನೆಯ ಬೇಡಿಕೆಗೆ ತೆಲಂಗಾಣ ಪ್ರದೇಶದ ಜನರು ಅನೇಕ ಹೋರಾಟಗಳನ್ನು ನಡೆಸಿದ್ದಾರೆ. ಆದರೆ ಆಂಧ್ರಪ್ರದೇಶದ ವಿಭಜನೆಯನ್ನು ವಿರೋಧಿಸಿ ಉಗ್ರ ಪ್ರತಿಭಟನೆಗಳು ನಡೆದಿವೆ. ಜನಜೀವನ ಅಸ್ತವ್ಯಸ್ತಗೊಂಡಿದೆ. ಯು.ಪಿ.ಎ. ಸರ್ಕಾರಕ್ಕೆ ಈ ಪ್ರಶ್ನೆಯನ್ನು ಹೇಗೆ ಅಂತ್ಯಗೊಳಿಸಬೇಕೆಂದು ತಿಳಿಯುತ್ತಿಲ್ಲ. ಒಂದು ತಪ್ಪಿನಿಂದ ಇನ್ನೊಂದು ತಪ್ಪಿಗೆ ಅದು ಸಾಗುತ್ತಿದೆ. ಪರಿಣಾಮವಾಗಿ ಆಂಧ್ರಪ್ರದೇಶದ ಕಾಂಗ್ರೆಸ್ ಪಕ್ಷ ದಿಕ್ಕು ತೋಚದೆ ಛಿದ್ರಗೊಂಡಿದೆ. ಮನಮೋಹನ್ ಸಿಂಗ್ ಸರ್ಕಾರದ ದುರ್ಬಲತೆಗೆ ಇದೊಂದು ಜ್ವಲಂತ ಉದಾಹರಣೆ, ಕೇಂದ್ರ ಸರ್ಕಾರದ ದಿಕ್ಕೆಟ್ಟ ನೀತಿಗಳು ಆಂಧ್ರಪ್ರದೇಶವನ್ನು ಅಗ್ನಿಕುಂಡವನ್ನಾಗಿಸಿವೆ.

## ಜನವಿರೋಧಿ ನೀತಿಗಳು

ಚಿಲ್ಲರೆ ವ್ಯಾಪಾರದಲ್ಲಿ ವಿದೇಶಿ ಬಂಡವಾಳ ಹೂಡಿಕೆ, ಭೂಸ್ವಾಧೀನ ಕಾಯ್ದೆಗೆ ತಿದ್ದುಪಡಿಗಳು, ವಿದೇಶಿ ಮತ್ತು ಖಾಸಗಿ ಬ್ಯಾಂಕ್‌ಗಳ ಅನಾವರಣ, ಸಾರ್ವಜನಿಕ ಕ್ಷೇತ್ರದ ಬ್ಯಾಂಕ್‌ಗಳ ಮತ್ತು ಉದ್ದಿಮೆಗಳ ಬಂಡವಾಳವನ್ನು ಖಾಸಗಿಗೊಳಿಸುವುದು ಇತ್ಯಾದಿ ಆರ್ಥಿಕ ನೀತಿಗಳಿಂದ ಮತ್ತು ಪ್ರಕ್ರಿಯೆಗಳಿಂದ ಸಾಮಾನ್ಯ ಜನರ ಜೀವನೋಪಾಯಕ್ಕೆ ಕುತ್ತು ತರುವಂತಹ ಕಾರ್ಯಕ್ಕೆ ಕೈಹಾಕಿ ಕಾಂಗ್ರೆಸ್ ಬಡವರ ಪರ ಕಾಳಜಿಯಿಲ್ಲದ ಪಕ್ಷವೆನಿಸಿಕೊಂಡಿದೆ. ಬೆಲೆ ಏರಿಕೆಯನ್ನು ತಡೆಗಟ್ಟುವಲ್ಲಿ ವಿಫಲವಾಗಿದೆ. ಜೊತೆಗೆ ಸಾವಿರಾರು ಕೋಟಿ ರೂಪಾಯಿಗಳ ಹಗರಣಗಳಲ್ಲಿ ಸಿಕ್ಕಿಬಿದ್ದಿರುವ ತನ್ನ ಮತ್ತು ಯು.ಪಿ.ಎ.ನ ಇತರ ಪಕ್ಷಗಳ ರಾಜಕಾರಣಿಗಳನ್ನು ಸಂರಕ್ಷಿಸಲು ಪ್ರಯತ್ನಿಸುತ್ತಿದೆ. ಭ್ರಷ್ಟಾಚಾರದ ವಿರುದ್ಧ ನಡೆದ ಜನಾಂದೋಳನಗಳನ್ನು ಕಡೆಗಣಿಸಿ ಲೋಕಪಾಲ್ ಮಸೂದೆಯನ್ನು ಜಾರಿಗೊಳಿಸಲು ವಿಫಲವಾಗಿದೆ. ಟಾಟಾ, ಬಿರ್ಲಾ, ಅಂಬಾನಿಗಳಿಗೆ ಕೊಡುವ ಸುಂಕ ರಿಯಾಯಿತಿಗಳಿಂದಾಗಲೀ, ಅಥವಾ ರಿಲೆಯನ್ಸ್, ಪೋಸ್ಕೊ, ವೇದಾಂತ ಇತ್ಯಾದಿ ಕಂಪನಿಗಳಿಗೆ ಧಾರಾಳವಾಗಿ ಹಂಚುವ ಭೂಮಿಯಾಗಲೀ ಕಾಂಗ್ರೆಸ್ ಪಕ್ಷಕ್ಕೆ ಓಟು ತರುವಂತಹ ಕ್ರಮಗಳಲ್ಲ ಎಂದು ಅದಕ್ಕೆ ಮನವರಿಕೆಯಾಗಿಲ್ಲ. ಹಾಗಾಗಿ ಕಾಂಗ್ರೆಸ್‌ನ ಭವಿಷ್ಯ ಮತ್ತು ಅದರೊಂದಿಗೆ ಯು.ಪಿ.ಎ.ನ ಭವಿಷ್ಯ ಡೋಲಾಯಮಾನವಾಗಿದೆ.

## ಅವತಾರ ಪುರುಷನ ಪ್ರತಿಷ್ಠಾಪನೆ

ಇನ್ನು ಭಾರತೀಯ ಜನತಾ ಪಕ್ಷದ ಪರಿಸ್ಥಿತಿ ಕಾಂಗ್ರೆಸ್ ಪಕ್ಷಕ್ಕಿಂತ ಭಿನ್ನವಾಗಿಲ್ಲ. ಕರ್ನಾಟಕದಲ್ಲಿ ಈ ಪಕ್ಷದ ದುರಾಡಳಿತ, ಭ್ರಷ್ಟಾಚಾರ, ಗಣಿ ಹಗರಣಗಳು, ಮುಖ್ಯಮಂತ್ರಿಯೇ ಸೆರೆಮನೆ ಸೇರಬೇಕಾದ್ದು, ಈ ಪಕ್ಷದ ಸಂಸ್ಕೃತಿಯನ್ನು ಬಯಲು ಮಾಡಿದೆ. ರಾಷ್ಟ್ರೀಯ ಸ್ವಯಂಸೇವಕ ಸಂಘ ತನ್ನ ಸದಸ್ಯರನ್ನು ಯಾವ ರೀತಿಯಲ್ಲಿ, ಎಷ್ಟರಮಟ್ಟಿಗೆ ತಯಾರು ಮಾಡಿದೆ ಎಂದು ಕರ್ನಾಟಕ ಬಿ.ಜೆ.ಪಿ. ನಾಯಕರ ವರ್ತನೆಗಳಿಂದ ತಿಳಿದು ಬರುತ್ತದೆ. ರಾಷ್ಟ್ರೀಯ ಮಟ್ಟದಲ್ಲಿ ಅದರ ಅಧ್ಯಕ್ಷನಾಗಿದ್ದ ನಿತಿನ್ ಗಡ್ಕರಿ ತಾನೇ ಭ್ರಷ್ಟಾಚಾರದ ಸುಳಿಯಲ್ಲಿ ಸಿಕ್ಕು ಎರಡನೆ ಅವಧಿಗೆ ಪಕ್ಷದ ಅಧ್ಯಕ್ಷನಾಗುವ ಆಸೆ ಬಿಡಬೇಕಾಯಿತು. ತಾನೊಂದು ಸಾಂಸ್ಕೃತಿಕ ಸಂಘಟನೆ, ರಾಜಕೀಯದಿಂದ

ದೂರ ಎಂದು ಹೇಳಿಕೊಳ್ಳುತ್ತಿದ್ದ ರಾಷ್ಟ್ರೀಯ ಸ್ವಯಂಸೇವಕ ಸಂಘದ ಮುಖವಾಡ ಕಳಚಿಬಿದ್ದು ಈಗ ಅದು ರಾಜಕೀಯದ ಬಗ್ಗೆ ಮಾತನಾಡಲು ಪ್ರಾರಂಭಿಸಿದೆ. ಈ ದೇಶದ ಹಿಂದಿನ ಮತ್ತು ಮುಂದಿನ ಸಮಸ್ಯೆಗಳನ್ನೆಲ್ಲ ಪರಿಹರಿಸುವನೆಂದು ಒಬ್ಬ ಅವತಾರ ಪುರುಷನನ್ನು ಹುಡುಕಿದೆ. ಸಾವಿರಾರು ಅಮಾಯಕರ ಹತ್ಯೆಗೆ ಕಾರಣನಾದ ಮತ್ತು ಕೋಮುಜ್ವಾಲೆಯನ್ನು ಹಬ್ಬಿಸಿದ ಈತನನ್ನು ವಿಕಾಸ ಪುರುಷನೆಂದು ನಾಮಕರಣ ಮಾಡಿದೆ. ಗುಜರಾತ್ ರಾಜ್ಯದ ಮುಖ್ಯಮಂತ್ರಿ ನರೇಂದ್ರ ಮೋದಿಯನ್ನು ಬಿ.ಜೆ.ಪಿ.ಯ ಪ್ರಧಾನ ಮಂತ್ರಿಯ ಅಭ್ಯರ್ಥಿಯೆಂದೂ ಘೋಷಿಸಿಬಿಟ್ಟಿದೆ. ಕೂಸು ಹುಟ್ಟುವ ಮುನ್ನವೆ ಕುಲಾವಿ ಹೊಲಿಸಿಬಿಟ್ಟಿದೆ. ಇದು ಈ ಪಕ್ಷ ಪರಿಪಾಲಿಸುವ ಪ್ರಜಾಪ್ರಭುತ್ವದ ಒಂದು ನಮೂನೆ.

## ಕಟಕಟೆಯಲ್ಲಿರುವ ವಿಕಾಸ ಪುರುಷ

ವಿಭಿನ್ನ ಸಂಸ್ಕೃತಿ ಹೊಂದಿದ ಈ ದೇಶಕ್ಕೆ ನರೇಂದ್ರ ಮೋದಿಯಂತಹ ವ್ಯಕ್ತಿ ಪ್ರಧಾನ ಮಂತ್ರಿ ಪದವಿ ಅಲಂಕರಿಸಲು ಯೋಗ್ಯನೇ ಎಂಬುದು ಮತದಾರರು ಆಲೋಚಿಸಬೇಕಾದ ವಿಷಯ. ಗುಜರಾತ್ ರಾಜ್ಯದ ಬೆಳವಣಿಗೆಯ ಸತ್ಯ–ಮಿಥ್ಯಗಳ ಬಗ್ಗೆ ಬಹಳಷ್ಟು ಲೇಖನಗಳು ಪ್ರಕಟವಾಗಿವೆ ಮತ್ತು ಈ ಬಗ್ಗೆ ಸಾಕಷ್ಟು ಚರ್ಚೆ ನಡೆದಿದೆ. ಈ ದೇಶದ ವಿಭಿನ್ನ ಸಂಸ್ಕೃತಿಯ ಜನರನ್ನು ಒಂದುಗೂಡಿಸುವ ವ್ಯಕ್ತಿತ್ವ ಈತನಲ್ಲಿಲ್ಲವೆಂದು ಗೋಧ್ರಾ ಹತ್ಯಾಕಾಂಡ ಸಾಬೀತು ಪಡಿಸಿದೆ. ಈ ಸಂಬಂಧವಾಗಿ ನರೇಂದ್ರ ಮೋದಿ ಇನ್ನೂ ಕಟಕಟೆಯಲ್ಲಿರುವ ವ್ಯಕ್ತಿ. ಇತರೆ ಪಕ್ಷಗಳ ಜೊತೆಗೂಡಿ ಸರ್ಕಾರ ರಚಿಸುವ ಸಾಮರ್ಥ್ಯವಿದೆಯೆ ಎಂದರೆ, ಮೋದಿಯ ಹೆಸರನ್ನು ಸೂಚಿಸುತ್ತಿದ್ದಂತೆಯೆ ಬಿಹಾರದ ಮುಖ್ಯಮಂತ್ರಿ ನಿತೀಶ್ ಕುಮಾರ್ ಬಿ.ಜೆ.ಪಿ.ಯೊಡನೆ ಹೊಂದಿದ್ದ ದೀರ್ಘಾವಧಿಯ ಮೈತ್ರಿಕೂಟವನ್ನು ಕೊನೆಗೊಳಿಸಿದ್ದು ನೆನಪಿಗೆ ಬರುತ್ತದೆ. ಅಷ್ಟೇಕೆ ಬಿ.ಜೆ.ಪಿ.ಯಲ್ಲೇ ಈ ಬಗ್ಗೆ ಬಿರುಕು ಉಂಟಾದುದನ್ನು ಗಮನಿಸಿದರೆ ನರೇಂದ್ರ ಮೋದಿ ತನ್ನ ಪಕ್ಷದಲ್ಲೇ ಸರ್ವಸಮ್ಮತ ನಾಯಕನಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದರೆ ಶ್ರೀಮಂತ ಉದ್ಯೋಗಪತಿಗಳಿಗೆ, ವ್ಯಾಪಾರಸ್ಥರಿಗೆ ಮತ್ತು ಕಾರ್ಪೊರೇಟ್‌ಗಳಿಗೆ ಪ್ರಿಯ ವ್ಯಕ್ತಿ ಈತ. ಹಿಟ್ಲರ್‌ನಂತೆ ಈತ ಉತ್ತಮ ವಾಗ್ಮಿ. ಆಡಂಬರದ ಮಾತುಗಳು ಹೇರಳ. ಅದರಲ್ಲಿನ ಸತ್ವ ವಿರಳ. ಕರ್ನಾಟಕ ಹಾಗೂ ದೆಹಲಿ ವಿಧಾನಸಭಾ ಚುನಾವಣೆಯಲ್ಲಿ ಈತ ಭಾಷಣ ಮಾಡಿದೆಡೆಗಳಲ್ಲಿ ಬಿ.ಜೆ.ಪಿ. ಅಭ್ಯರ್ಥಿಗಳ ಸೋಲು. ಇಡೀ ದಕ್ಷಿಣ ಭಾರತದಲ್ಲಿ ಈತನ ಪ್ರಭಾವ ಕಡಿಮೆ. ಕೆಲವು ಹಿಂದಿ ರಾಜ್ಯಗಳಲ್ಲಿ ಈತ ಸಲ್ಲಬಹುದು.



## ಸೀಮಿತ ಪ್ರಭಾವ

ಇತ್ತೀಚೆಗೆ ಮಧ್ಯಪ್ರದೇಶ, ರಾಜಾಸ್ಥಾನ, ಚತ್ತೀಸ್‌ಘಡ, ದೆಹಲಿ ಮತ್ತು ಮಿಜೋರಾಂ ರಾಜ್ಯಗಳಿಗೆ ನಡೆದ ಚುನಾವಣೆಯಲ್ಲಿ ಮಿಜೋರಾಂ ಹೊರತು ಮಿಕ್ಕೆಲ್ಲೆಡೆ ಕಾಂಗ್ರೆಸ್ ಪಕ್ಷ ಹೀನಾಯ ಸೋಲನ್ನು ಅನುಭವಿಸಿದೆ. ಬಿ.ಜೆ.ಪಿ. ಮಧ್ಯಪ್ರದೇಶ ಮತ್ತು ಚತ್ತೀಸ್‌ಘಡದಲ್ಲಿ ಮರು ಆಯ್ಕೆಗೊಂಡದ್ದು ಮೋದಿಯ ಪ್ರಭಾವದಿಂದೇನಲ್ಲ. ಮಧ್ಯಪ್ರದೇಶದ ವಿಜಯ ಪಕ್ಷದ ಸಿದ್ಧಾಂತದಿಂದಾಗಿ ಎಂದು ಬಿ.ಜೆ.ಪಿ.ಯ ಶಿವರಾಜ್ ಸಿಂಗ್ ಚವ್ಹಾಣ್ ಮಾರ್ಮಿಕವಾಗಿ ಹೇಳಿದ್ದಾನೆ. ರಾಜಾಸ್ಥಾನದಲ್ಲಿ ಮಾತ್ರ ಮೋದಿಯ ಹೆಸರು ಕೆಲಸ ಮಾಡಿದೆ. ಆದರೆ ದೆಹಲಿಯಲ್ಲಿ ಅವನ ಪ್ರಭಾವ ಕಂಡಿಲ್ಲ. ೨೦೧೩ರಲ್ಲಿ ೧೩ ರಾಜ್ಯಗಳ ಫಲಿತಾಂಶಗಳನ್ನು ತುಲನೆ ಮಾಡಿದಲ್ಲಿ ಬಿ.ಜೆ.ಪಿ.ಯ ಸಾಧನೆ ಕಳಪೆಯೆ. ಹೀಗಿರುವಾಗ ಬಿ.ಜೆ.ಪಿ. ಏಕಾಂಗಿಯಾಗಿ ಅಥವಾ ಅಕಾಲಿದಳ ಮತ್ತು ಶಿವಸೇನೆಯೊಡಗೂಡಿ ೨೭೨ಕ್ಕೂ ಹೆಚ್ಚು ಸ್ಥಾನಗಳನ್ನು ಪಡೆಯಬಹುದೆಂಬುದು ಅನುಮಾನದ ಸಂಗತಿ. ಆದರೆ ಮುಂಬರುವ ಲೋಕಸಭಾ ಚುನಾವಣೆಯಲ್ಲಿ ಬಿ.ಜೆ.ಪಿ. ಎಲ್ಲ ಪಕ್ಷಗಳಿಗಿಂತ ಹೆಚ್ಚು ಸ್ಥಾನ ಗಳಿಸುವ ಸೂಚನೆಗಳಿವೆ.

## ಆಮ್ ಆದ್ಮಿ ಪಕ್ಷ – ಹೊಸ ದಿಕ್ಸೂಚಿ

ಅರವಿಂದ್ ಕೇಜ್ರಿವಾಲ್‌ನ ಆಮ್ ಆದ್ಮಿ ಪಕ್ಷವನ್ನು ಚಿಲ್ಲರೆ ಪಕ್ಷವೆಂದು ಮೂದಲಿಸಿದ ನಿತಿನ್ ಗಡ್ಕರಿ ಈಗ ಚಿಲ್ಲರೆ ರಾಜಕಾರಣಿಯಾಗಿಬಿಟ್ಟಿದ್ದಾನೆ. ಆಮ್ ಆದ್ಮಿ ಪಕ್ಷದ ಅಸಾಧಾರಣ ವಿಜಯ ರಾಜಕೀಯಕ್ಕೆ ಹೊಸ ತಿರುವು ಕೊಡುವುದಂತೂ ನಿಜ. ೨೦೧೨–೨೦೧೩ರಲ್ಲಿ ದೆಹಲಿ ಅನೇಕ ಹೋರಾಟಗಳನ್ನು ಕಂಡ ನಗರ. ಕೇಂದ್ರ ಸರ್ಕಾರ ಮತ್ತು ದೆಹಲಿ ಸರ್ಕಾರಗಳ ನಿತ್ಯ ಹಗರಣ ಕಂಡು ಕೇಳಿ ಬೇಸತ್ತ ಜನ ಪರ್ಯಾಯದ ಅನ್ವೇಷಣೆಯಲ್ಲಿ ಕಂಡದ್ದು ಆಮ್ ಆದ್ಮಿ ಪಕ್ಷ. ಇದು ಇಡೀ ದೇಶದ ಜನತೆಯ ಮನಃಸ್ಥಿತಿ. ಭ್ರಷ್ಟಾಚಾರ ಮುಕ್ತ ಉತ್ತಮ, ಸಾಮಾನ್ಯರ ಆಕಾಂಕ್ಷೆಗಳಿಗೆ ಸ್ಪಂದಿಸುವ ಸರ್ಕಾರವೇ ಇಂದಿನ ಯುವಪೀಳಿಗೆಯ ಆಶಯ. ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷಗಳು ಜನಗಳ ನಂಬಿಕೆ ಕಳೆದುಕೊಂಡಿವೆ. ಎಡಪಕ್ಷಗಳು ಈ ದೇಶದ ಪರ್ಯಾಯ ರಾಜಕೀಯ ಶಕ್ತಿಯಾಗಬಹುದೆಂಬ ನಂಬಿಕೆ ಈ ಪಕ್ಷಗಳ ನೇತಾರರಿಗೆ ಮತ್ತು ಕಾರ್ಯಕರ್ತರ ಅರಿವಿಗೆ ಬರಬೇಕು. ಈ ದೇಶದ ರಾಜಕೀಯಕ್ಕೊಂದು ಹೊಸ ತಿರುವು ಕೊಡಬೇಕಾದ ಚಾರಿತ್ರಿಕ ಕರ್ತವ್ಯ ಎಡಪಕ್ಷಗಳ ಮೇಲಿದೆ. ಉದಯೋನ್ಮುಖ ರಾಜಕೀಯ ಶಕ್ತಿಗಳನ್ನು ಒಂದುಗೂಡಿಸಬೇಕಾಗಿದೆ. ಹಾಗಾದಲ್ಲಿ ೨೦೧೪ರಲ್ಲಿ ಕೇಂದ್ರದಲ್ಲಿ ಕಾಂಗ್ರೆಸ್ ಮತ್ತು ಬಿ.ಜೆ.ಪಿ. ರಹಿತ ಸರ್ಕಾರ ಸ್ಥಾಪಿತಗೊಳ್ಳಬಹುದು.




## ಹೋರಾಟವೇ ದಾರಿ

೨೦೧೩ ಅನೇಕಾನೇಕ ಹೋರಾಟಗಳನ್ನು ಕಂಡ ವರ್ಷ. ಭ್ರಷ್ಟಾಚಾರದ ಬೇರು ಆಳಕ್ಕಿಳಿದಿದೆ. ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗದಲ್ಲಿ ಭ್ರಷ್ಟಾಚಾರ ವ್ಯಾಪಕವಾಗಿ ಹಬ್ಬಿದೆ. ಹಾಗಾಗಿ ಭ್ರಷ್ಟಾಚಾರದ ವಿರುದ್ಧ ಹೋರಾಟವೂ ನಿರಂತರವಾಗಬೇಕಿದೆ. ಸುರೇಶ್ ಕಲ್ಮಾಡಿ, ರಾಜಾ, ಕನಿಮೋಳಿ, ಲಾಲೂಪ್ರಸಾದ್ ಯಾದವ್, ಜನಾರ್ಧನ ರೆಡ್ಡಿ, ಯಡಿಯೂರಪ್ಪ ಹೀಗೆ ಹಲವರು ಅಧಿಕಾರದಲ್ಲಿದ್ದಾಗಲೇ ಸೆರೆಮನೆಗೆ ಹೋಗಬೇಕಾಗಿ ಬಂದದ್ದು ಭ್ರಷ್ಟಾಚಾರದ ವಿರುದ್ಧ ನಡೆದ ಪ್ರತಿಭಟನೆಗಳ ಪ್ರತಿಫಲವೆಂಬುದು ಖಚಿತ. ಈ ಹೋರಾಟಗಳು ಅನೇಕ ಪ್ರಾಮಾಣಿಕ ನ್ಯಾಯಾಧೀಶರುಗಳಿಗೆ ಹೊಸ ಧೈರ್ಯ ಮತ್ತು ಚೈತನ್ಯ ಕೊಟ್ಟ ಕಾರಣವೇ ದೇಶದ ಸರ್ವೋಚ್ಚ ನ್ಯಾಯಾಲಯ ಹಲವಾರು ಜನಪರ ತೀರ್ಪುಗಳನ್ನು ಕೊಡಲು ಸಾಧ್ಯವಾದದ್ದು. ದೆಹಲಿಯಲ್ಲಿ ಲೈಂಗಿಕ ಅತ್ಯಾಚಾರಕ್ಕೊಳಗಾಗಿ ಸಾವನ್ನಪ್ಪಿದ ನಿರ್ಭಯ ತನ್ನ ಸಾವಿನ ಹಿಂದೆಯೇ ಹೋರಾಟದ ಪ್ರವಾಹವನ್ನು ಹುಟ್ಟಿಸಿದ್ದು, ಮಹಿಳೆಯರ ಪ್ರಜ್ಞೆಯನ್ನು ಜಾಗೃತಗೊಳಿಸಿದ್ದು, ಮತ್ತು ಅವರನ್ನು ದೇಶದಾದ್ಯಂತ ಬೀದಿಗಿಳಿಸಿ, ಪ್ರತಿಭಟಿಸುವಂತೆ ಮಾಡಿದ್ದು ಈ ದೇಶದ ಚರಿತ್ರೆಯ ಹೊಸ ಅಧ್ಯಾಯ ವೆಂದರೆ ಅತಿಶಯೋಕ್ತಿಯಲ್ಲ. ಅತ್ಯಲ್ಪ ಸಮಯದಲ್ಲೇ ಲೈಂಗಿಕ ಅತ್ಯಾಚಾರಗಳನ್ನು ತಡೆಯಲು ಅವಶ್ಯಕವಾದ ಕಾಯ್ದೆಗಳ ತಿದ್ದುಪಡಿಗಳ ಬಗ್ಗೆ ನ್ಯಾಯಮೂರ್ತಿ ಜೆ. ಎಸ್. ವರ್ಮ ಸಮಿತಿ ಕೊಟ್ಟ ವರದಿ ಈ ಹೋರಾಟಕ್ಕೆ ಸಂದ ಜಯ. ಆರ್ಥಿಕ ಶೋಷಣೆ ಗೊಳಗಾಗಿರುವ ಮತ್ತು ಸಂಘಟನೆಯ ಹಕ್ಕಿನಿಂದ ಚ್ಯುತಿಗೊಂಡ ಕಾರ್ಮಿಕ ವರ್ಗ ದೇಶದಾದ್ಯಂತ ಹೋರಾಟಕ್ಕಿಳಿದಿರುವುದು, ಭೂಮಿಗಾಗಿ ಹೋರಾಡುತ್ತಿರುವ ಭೂಹೀನರು, ತಮ್ಮಲ್ಲಿರುವ ಭೂಮಿಯನ್ನು ಕಸಿಯುತ್ತಿರುವ ಸರ್ಕಾರ ಮತ್ತು ಕಾರ್ಪೊರೇಟ್‌ಗಳ ವಿರುದ್ಧ ಹೋರಾಟಕ್ಕಿಳಿದಿರುವ ರೈತರು, ಚಿಲ್ಲರೆ ವ್ಯಾಪಾರ ಕ್ಷೇತ್ರದಲ್ಲಿ ವಿದೇಶಿ ಬಂಡವಾಳವನ್ನು ವಿರೋಧಿಸುತ್ತಿರುವ ಸಣ್ಣ ಪ್ರಮಾಣದ ವ್ಯಾಪಾರಸ್ಥರು, ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣ ನೀತಿಗಳ ವಿರುದ್ಧ ಅವಿರತ ಹೋರಾಟ ನಡೆಸುತ್ತಿರುವ ಎಡಪಕ್ಷಗಳು, ಇಡೀ ಭಾರತ ದೇಶವನ್ನು ಕುದಿಯುತ್ತಿರುವ ಹಂಡೆಯನ್ನಾಗಿಸಿವೆ. ೨೦೧೩ ಇತಿಹಾಸಕ್ಕೆ ತನ್ನ ಕಾಣಿಕೆ ಸಲ್ಲಿಸಿ ಮರೆಯಾಗಿದೆ.

**ಮುರಳಿಧರ ಚಿಕ್ಕಮಗಳೂರು**
ವಕೀಲರು, ನಂ. ೮೩, ಮಲ್ಲೇಶ್ವರಂ ವೃತ್ತ, ಬೆಂಗಳೂರು – ೫೬೦ ೦೦೩

## ಹೊಸ ಭರವಸೆಯ, ಹೊಸತನದ 'ಹೊಸತು' ಪತ್ರಿಕೆಗೆ
## ಶುಭಾಶಯಗಳು



ಎಸ್. ಪ್ರಸನ್ನಕುಮಾರ್
ಅಧ್ಯಕ್ಷರು

ಟಿ. ಶಿವಶಂಕರ್
ಮೊದಲನೇ ಉಪಾಧ್ಯಕ್ಷರು

ಆರ್. ಎಲ್. ಮೋಹನ್‌ಕುಮಾರ್
ಎರಡನೇ ಉಪಾಧ್ಯಕ್ಷರು

ವಿಜಯಭಾಸ್ಕರ್ ಡಿ.ಎ.
ಪ್ರಧಾನ ಕಾರ್ಯದರ್ಶಿ

ರಾಘವೇಂದ್ರ ರಾವ್ ಆರ್.
ಸಂಘಟನಾ ಕಾರ್ಯದರ್ಶಿ

ರಾಜು ಕೆ. ಕುಲ್ಕರ್ಣಿ
ಸಹ ಕಾರ್ಯದರ್ಶಿ

ಕೃಷ್ಣ ಕೆ.
ಖಜಾಂಚಿ

# ಮೈಕೊ ಎಂಪ್ಲಾಯೀಸ್ ಅಸೋಸಿಯೇಷನ್

(ರಿ.ನಂ. 147)

# 33, ಶ್ರಮಜೀವಿ ಭವನ, ಬನ್ನೇರುಘಟ್ಟ ರಸ್ತೆ

ಬೆಂಗಳೂರು – 560 030

ನಮ್ಮ ದೇಶದ ಮೊದಲ ಪ್ರಧಾನಿ ನೆಹರು ಅವರಿಗೆ ಪ್ರತಿಯಾಗಿ ಪಟೇಲರು ಪ್ರಧಾನಿಯಾಗಿದ್ದಿದ್ದರೆ ದೇಶದ ಸ್ಥಿತಿಯು ಬೇರೆಯಾಗುತ್ತಿತ್ತು ಎಂದು ಹೇಳಲಾಗುತ್ತಿದೆ. ಇಂತಹ ಊಹಾಪೋಹಗಳಿಂದ ಏನನ್ನೂ ಸಾಧಿಸಿಕೊಳ್ಳುವುದು ಸಾಧ್ಯವಿಲ್ಲ. ಗತದ ವೈಭವೀಕರಣದಿಂದ ಉಂಟಾಗಬಹುದಾದ ಅಪಾಯ ಇದಾಗಿದೆ. ಇಲ್ಲಿರುವ ಸೂಕ್ಷ್ಮವನ್ನು ನಾವು ಅರ್ಥ ಮಾಡಿಕೊಳ್ಳಬೇಕು. ಇಂದು ಅಧಿಕಾರದಲ್ಲಿರುವ ಕಾಂಗ್ರೆಸ್ ಪಕ್ಷವನ್ನು ಸೋಲಿಸಬೇಕೆಂಬ ಏಕೈಕ ಉದ್ದೇಶದಿಂದ ನೆಹರೂ ಮನೆತನವನ್ನು ಗುರಿಯಾಗಿಟ್ಟುಕೊಂಡು ಇವರು ಸರದಾರ್ ಪಟೇಲರನ್ನು ತಮ್ಮ ಆಯುಧವನ್ನಾಗಿ ಮಾಡಿಕೊಂಡಿದ್ದಾರೆ. ಈ ಹಿಂದೆ ಇವರ ಪಕ್ಷವು ಕೇಂದ್ರದಲ್ಲಿ ಅಧಿಕಾರದಲ್ಲಿದ್ದಾಗ ನೆನಪಿಗೆ ಬಾರದ ಪಟೇಲರು ಇಂದು ಇವರ ಕಣ್ಮಣಿಯಾಗಿದ್ದಾರೆ. ಇದು ಅವರು ನಡೆಸುತ್ತಿರುವ ಚುನಾವಣಾ ರಾಜಕಾರಣವಲ್ಲದೆ ಮತ್ತೇನೂ ಅಲ್ಲ.

# ಗುಜರಾತ್ ಅಭಿವೃದ್ಧಿ ಮಾದರಿ V/s ಮಾನವ ಅಭಿವೃದ್ಧಿ ಮಾದರಿ

– ಕಳೆದ ಸಂಚಿಕೆಯಿಂದ ಮುಂದುವರೆದುದು...

ಭಾಗ–೫

**ರಾಜಕೀಯ ಏಕತೆ V/s ಸಾಮಾಜಿಕ ಏಕತೆ**

ನಮ್ಮ ದೇಶದಲ್ಲಿ ಮುಂದಿನ ೨೦೧೪ರ ಸಾರ್ವಜನಿಕ ಚುನಾವಣೆಯನ್ನು ಗುರಿಯಾಗಿಟ್ಟು ಕೊಂಡು ಅನೇಕ ರಾಜಕೀಯ ಪಕ್ಷಗಳು ಇನ್ನಿಲ್ಲದಂತೆ ವಿವಿಧ ರಾಜಕೀಯ ಮತ್ತು ಸಾಮಾಜಿಕ ವಿವಾದ ಗಳನ್ನು ಹುಟ್ಟುಹಾಕುತ್ತಿವೆ. ಈ ಬಗೆಯ ವಿವಾದಗಳನ್ನು ಹುಟ್ಟುಹಾಕುವುದರಲ್ಲಿ ತನ್ನ ೨೦೧೪ರ ಚುನಾವಣೆಗೆ ಪ್ರಧಾನಿ ಅಭ್ಯರ್ಥಿಯನ್ನು ಘೋಷಿಸಿರುವ ರಾಜಕೀಯ ಪಕ್ಷವು ಮುಂಚೂಣಿಯಲ್ಲಿದೆ. ಈಗಾಗಲೆ ಆ ಪಕ್ಷದ ಪ್ರಧಾನಿ ಅಭ್ಯರ್ಥಿಯಾಗಿರುವವರು ದೇಶದ ತುಂಬ ಚುನಾವಣಾ ಪ್ರಚಾರವನ್ನು ದಂಡಯಾತ್ರೆಯ ರೀತಿಯಲ್ಲಿ ಆರಂಭಿಸಿದ್ದಾರೆ (ಯಾತ್ರೆ ನಡೆಸುವುದರಲ್ಲಿ ಅವರ ಪಕ್ಷವು ಹೆಸರುವಾಸಿ ತಾನೆ!). ಈ ಸಮಾವೇಶಗಳಲ್ಲಿ ಅವರು 'ತೊಡೆ ತಟ್ಟಿ–ತೋಳೇರಿಸಿ' ತಮ್ಮ ಉಮೇದುವಾರಿಕೆಯನ್ನು ಉಗ್ರ ರೀತಿಯಲ್ಲಿ ಪ್ರತಿಪಾದಿಸುತ್ತಿದ್ದಾರೆ. ಅವರದ್ದು ಮೂಲಭೂತವಾಗಿ 'ವೀರಾವೇಶ'ದ ಪರಿಭಾಷೆಯಾಗಿದೆ (ಅವರು ಸಂಘಟಿಸುತ್ತಿರುವ ಸಮಾವೇಶಗಳನ್ನು 'ಹೂಂಕಾರ ರ‍್ಯಾಲಿ' ಎಂದು ಕರೆಯಲಾಗುತ್ತಿದೆ). ಜನರ ಭಾವನೆಯನ್ನು ಕೆರಳಿಸುವ ರೀತಿಯಲ್ಲಿ ಉಗ್ರ ಭಾಷಣವನ್ನು ಮಾಡುತ್ತಾ ಅವರು ತಮ್ಮ ಪ್ರಚಾರದ ಕಾರ್ಯವನ್ನು ನಡೆಸುತ್ತಿದ್ದಾರೆ. ಈ ಸಮಾವೇಶಗಳಲ್ಲಿ ಅವರು ತಮ್ಮ ಅಭಿವೃದ್ಧಿ ಸಿದ್ಧಾಂತದ ಬಗ್ಗೆ ಜನರಿಗೆ ಮನವರಿಕೆ ಮಾಡಿಕೊಡುವುದಕ್ಕೆ ಪ್ರತಿಯಾಗಿ ಜನರ ಭಾವನೆಯನ್ನು ಪ್ರಚೋದಿಸುವ ಕೆಲಸವನ್ನು ಮಾಡುತ್ತಿದ್ದಾರೆ. ಕಾಂಗ್ರೆಸ್ಸಿನಿಂದಾಗಿಯೇ ನಮ್ಮ ದೇಶ ದುಸ್ಥಿತಿಗೆ ಒಳಗಾಗಿದೆ ಎಂಬ ಬಾಲಿಶತನದ ಮಾತು ಗಳನ್ನು ಅವರು ಆಡುತ್ತಿದ್ದಾರೆ. ಈ ಸಮಾವೇಶಗಳಲ್ಲಿ ಅವರು ಕೇವಲ 'ಕಾಂಗ್ರೆಸ್ ಹಟಾವೋ' ಎಂಬ ಒಂದಂಶದ ಒತ್ತಾಯವನ್ನು ಮಾಡುತ್ತಿದ್ದಾರೆ. ಕಾಂಗ್ರೆಸ್ ಪಕ್ಷವನ್ನು ಅಧಿಕಾರದಿಂದ ಇಳಿಸಿಬಿಟ್ಟರೆ ದೇಶದಲ್ಲಿ ಎಲ್ಲವೂ ಸರಿಯಾಗಿಬಿಡುತ್ತದೆ ಎಂಬ ರೀತಿಯಲ್ಲಿ ಅವರು ನಡೆದುಕೊಳ್ಳುತ್ತಿದ್ದಾರೆ. ಹಿಂದೆ ಕಾಂಗ್ರೆಸ್ ಪಕ್ಷವು ಗರೀಬಿ ಹಟಾವೋ ಘೋಷಣೆಯ ಮೇಲೆ ಚುನಾವಣೆಯನ್ನು ಗೆದ್ದಿತ್ತು. ಗೆದ್ದ ಮೇಲೆ ಅದು ಬಡತನವನ್ನೇನೂ ಕಡಿಮೆ ಮಾಡಲಿಲ್ಲ. ನಮ್ಮ ದೇಶದಲ್ಲಿ ಇಂದು ಬಡತನವೇನೂ ನಿವಾರಣೆ ಯಾಗಿಲ್ಲ. ಬಡತನ, ಹಸಿವು, ಅಪೌಷ್ಟಿಕತೆ ಮುಂತಾದವು ತೀವ್ರ ಸ್ವರೂಪದಲ್ಲಿ ಮುಂದುವರಿದಿವೆ. 'ಕಾಂಗ್ರೆಸ್ ಹಟಾವೋ' ಘೋಷಣೆಯ ಮೇಲೆ ಅಧಿಕಾರಕ್ಕೆ ಬಂದ ಮೇಲೆ ಈಗ ಪ್ರಧಾನ ಮಂತ್ರಿ ಅಭ್ಯರ್ಥಿಯಾದವರು ಕಾಂಗ್ರೆಸ್ಸಿನ ಹಾದಿ ಹಿಡಿಯು ವುದಿಲ್ಲ ಎಂಬುದಕ್ಕೆ ಖಾತ್ರಿಯೇನು?

**ಗತದ ವೈಭವೀಕರಣ: ಸರದಾರ್ ಪಟೇಲರ ನಿದರ್ಶನ**

ನಮ್ಮ ದೇಶಕ್ಕೆ ಸ್ವಾತಂತ್ರ್ಯ ಪ್ರಾಪ್ತವಾದ ಸಂದರ್ಭದಲ್ಲಿ ದೇಶದ ವಿವಿಧ ಭಾಗಗಳಲ್ಲಿದ್ದ ರಾಜ ಸಂಸ್ಥಾನಗಳನ್ನು ಭಾರತ ಗಣರಾಜ್ಯದಲ್ಲಿ ವಿಲೀನ ಗೊಳಿಸಿ ರಾಜಕೀಯ ಏಕತೆಯನ್ನು ಸಾಧಿಸಿಕೊಟ್ಟ ಸರದಾರ್ ಪಟೇಲರ ಕಾಣಿಕೆಯನ್ನು ನಾವು

**ಟಿ. ಆರ್. ಚಂದ್ರಶೇಖರ**

ಮರೆಯುವುದು ಸಾಧ್ಯವಿಲ್ಲ. ಅವರನ್ನು 'ಉಕ್ಕಿನ ಮನುಷ್ಯ' ಎಂದು ಕರೆಯುವುದಕ್ಕಿಂತ ದೇಶದ 'ರಾಜಕೀಯ ಏಕತೆಯ ರೂವಾರಿ' ಎಂದು ಕರೆಯುವುದು ಸೂಕ್ತ. ರಾಜಕೀಯ ಏಕತೆಯನ್ನು ಸಾಧಿಸುವ ಸಲುವಾಗಿ ಅವರು ಮಿಲಿಟರಿ ಮತ್ತು ಪೊಲೀಸು ಪಡೆಗಳನ್ನು ಉಪಯೋಗಿಸುವುದಕ್ಕೆ ಹಿಂಜರಿಯಲಿಲ್ಲ. ಅಂದಿನ ಸಚಿವ ಸಂಪುಟದ ಅನುಮೋದನೆಯಿಲ್ಲದೆ ಸರದಾರರು 'ನೇರ ಕ್ರಮ'ವನ್ನು ನಡೆಸುವುದು ಸಾಧ್ಯವಿರಲಿಲ್ಲ ಮತ್ತು ಅವರ ಈ ಎಲ್ಲ ಕ್ರಮಗಳಿಗೆ ಅಂದಿನ ಪ್ರಧಾನಿ ನೆಹರೂ ಅವರು ಸಂಪೂರ್ಣ ಬೆಂಬಲ ನೀಡಿದ್ದರು ಎಂಬುದು ಅಷ್ಟೇ ಸತ್ಯವಾದ ಸಂಗತಿ. ಅವರಿಬ್ಬರಲ್ಲಿ ಸೈದ್ಧಾಂತಿಕವಾದ ಭಿನ್ನಾಭಿಪ್ರಾಯಗಳಿದ್ದವು. ಸರದಾರ್ ವಲ್ಲಭಭಾಯ್ ಪಟೇಲರ ಕಾಣಿಕೆಯ ವೈಭವೀಕರಣದಲ್ಲಿ ೨೦೧೪ರ ಚುನಾವಣೆಯ ಪ್ರಧಾನಿ ಅಭ್ಯರ್ಥಿಯು ನಿರತರಾಗಿದ್ದಾರೆ. ಸರದಾರ್ ವಲ್ಲಭಭಾಯ್ ಪಟೇಲರ ೧೮೨ ಮೀಟರು (ಸರಿ ಸುಮಾರು ೪೫೦ ಅಡಿಗಳಿಗೂ ಮೀರಿದ ಎತ್ತರದ) ಎತ್ತರದ ಪ್ರತಿಮೆಯನ್ನು ಅಹಮದಾಬಾದಿನಲ್ಲಿ ಪ್ರತಿಷ್ಠಾಪಿಸುವ ಕಾರ್ಯವನ್ನು ಅವರು ಕೈಗೊಂಡಿದ್ದಾರೆ. 'ಏಕತೆಯ ಪ್ರತಿಮೆ' ಎಂದು ಅದನ್ನು ಕರೆಯುತ್ತಿದ್ದಾರೆ. ಸರದಾರರ ಪ್ರತಿಮೆಯು ರಾಜಕೀಯ ಏಕತೆಯನ್ನು ಪ್ರತಿನಿಧಿಸಬಲ್ಲುದೆ ವಿನಾ ಅದು ಸಾಮಾಜಿಕ ಏಕತೆ ಮತ್ತು ಜನರನ್ನು ಒಳಗೊಳ್ಳುವ ಮೌಲ್ಯವನ್ನು ಪ್ರತಿನಿಧಿಸುವುದಿಲ್ಲ. ಈ ಬಗ್ಗೆ ಈಗ ಏಕೆ ಅವರಿಗೆ ಮತ್ತು ಅವರ ಪಕ್ಷಕ್ಕೆ ಪಟೇಲರ ಜ್ಞಾಪಕ ಬಂದಿದೆ ? ಕಾಂಗ್ರೆಸ್ ಪಕ್ಷದ ಧೋರಣೆಯನ್ನು ಮತ ಬ್ಯಾಂಕಿನ ರಾಜಕಾರಣವೆಂದು ಮಾತುಮಾತಿಗೆ ಟೀಕಿಸುವ ಇವರು ಮಾಡುತ್ತಿರುವುದು ಏನು ? ಇವರ ಕ್ರಮವನ್ನು 'ಚುನಾವಣಾ ರಾಜಕಾರಣ' ಎಂದು ಏಕೆ ಕರೆಯಬಾರದು ? ತನ್ನ ೨೦೧೪ರ ಚುನಾವಣೆಗೆ ಪ್ರಧಾನಿ ಅಭ್ಯರ್ಥಿಯನ್ನು ಘೋಷಿಸಿರುವ ಪಕ್ಷವು ಲಾಗಾಯ್ತಿನಿಂದ ಗತವನ್ನು ವೈಭವೀಕರಿಸುವ ಕೆಲಸ ಮಾಡುತ್ತಿದೆ. ನಮ್ಮ ದೇಶದಲ್ಲಿ ಹಿಂದೆ ಎಲ್ಲವೂ ಸರಿಯಿತ್ತು. ಈಗ ಎಲ್ಲವೂ ಕೆಟ್ಟುಹೋಗಿದೆ ಎಂಬ ಮಾತನ್ನು ಅದು ಮತ್ತೆ ಮತ್ತೆ ಪುನರುಚ್ಚರಿಸುತ್ತಿದೆ. ಹೀಗೆ ಗತದ ವೈಭವೀಕರಣವನ್ನು ಅದು ಉಗ್ರವಾದವನ್ನು ಎದುರಿಸುವ ಒಂದು ಸಾಧನವನ್ನಾಗಿ ಬಳಸುತ್ತಿದೆ. ನಮ್ಮ ದೇಶದ ಇತಿಹಾಸದ ಸಾಮಾನ್ಯ ವಿದ್ಯಾರ್ಥಿಗೂ ತಿಳಿದಿರುವಂತೆ ನಮ್ಮ ಚರಿತ್ರೆಯೇನೂ ಸದ್ಗುಣಗಳ ಗಣಿಯಾಗಿರಲಿಲ್ಲ. ನಮ್ಮ ದೇಶದಲ್ಲಿ ಚಾರಿತ್ರಿಕ ಅವಮಾನಕ್ಕೆ ಒಳಗಾಗಿದ್ದ ಸಮುದಾಯಗಳು ಬಹಳಷ್ಟಿವೆ. ಗತವನ್ನು ವೈಭವೀಕರಿಸುವವರು ಚಾರಿತ್ರಿಕ ಅವಮಾನವನ್ನು ಅನುಭವಿಸುತ್ತಿರುವ ಸಮುದಾಯಗಳ ಸ್ಥಿತಿಗತಿಯ ಬಗ್ಗೆ ಉತ್ತರ ನೀಡಬೇಕಾಗುತ್ತದೆ. ಇದು ಅವರಿಗೆ ಆದ್ಯತೆಯ ಸಂಗತಿಯಾಗಿಲ್ಲ.



**ವಿಗ್ರಹಾರಾಧನೆ ಮತ್ತು ವಿಗ್ರಹಭಂಜನೆ**

ತಾತ್ವಿಕವಾಗಿ ಸರದಾರ್ ಅವರು ವಿಗ್ರಹಾರಾಧಕರಾಗಿದ್ದರೆ ಡಾ॥ ಬಿ. ಆರ್. ಅಂಬೇಡ್ಕರ್ ಅವರು ವಿಗ್ರಹ ಭಂಜಕರಾಗಿದ್ದರು. ಸಂಪ್ರದಾಯಗಳಲ್ಲಿ ಪಟೇಲರಿಗೆ ಆಳವಾದ ನಂಬಿಕೆಯಿತ್ತು. ಸಂಪ್ರದಾಯದಿಂದ ಬಂದ ನಂಬಿಕೆಗಳು, ಆಚರಣೆಗಳು, ಧೋರಣೆಗಳು ಮುಂತಾದವುಗಳನ್ನು ಮುಂದುವರಿಸುವುದರ ಬಗ್ಗೆ ಅವರಿಗೆ ಸಹಮತವಿತ್ತು. ಆದರೆ ಇದಕ್ಕೆ ಬಾಬಾ ಸಾಹೇಬರ ವಿಚಾರಗಳು ತದ್ವಿರುದ್ಧ ವಾಗಿದ್ದವು. ಇಷ್ಟಾದರೂ ರಾಜ್ ಮೋಹನ್ ಗಾಂಧಿ ಹೇಳಿರುವಂತೆ ಪಟೇಲರು ಗಾಂಧೀಜಿ ಮೌಲ್ಯಗಳಲ್ಲಿ ನಂಬಿಕೆಯಿಟ್ಟುಕೊಂಡಿದ್ದರು. ಸರದಾರ್ ಪಟೇಲರ ರಾಜಕೀಯ ಏಕತೆಯು ಒಂದು ನಿರ್ದಿಷ್ಟ ಸಂದರ್ಭದ ಸಂಗತಿಯಾಗಿದೆ. ಅದೊಂದು ಸಾರಾಸಗಟಾಗಿ ಆಡಳಿತಾತ್ಮಕ ಕ್ರಮವಾಗಿತ್ತು. ಆದರೆ ಸಾಮಾಜಿಕ ಏಕತೆ ಅನ್ನುವುದನ್ನು ದೇಶ ನಿರಂತರವಾಗಿ ನಿರ್ವಹಿಸಿಕೊಂಡು ಹೋಗಬೇಕಾದ ಕಾರ್ಯವಾಗಿದೆ. ನಮ್ಮ ಚರಿತ್ರೆಯಲ್ಲಿನ ಇತಿಮಿತಿಗಳ ಬಗ್ಗೆ ಸದರಿ ಪಕ್ಷವಾಗಲಿ ಅಥವಾ ಅದರ ಪ್ರಧಾನಿ ಅಭ್ಯರ್ಥಿಯಾಗಲಿ ಮಾತನಾಡುತ್ತಿಲ್ಲ. ಚರಿತ್ರೆಯ ಇತಿಮಿತಿಗಳ ಅರಿವಿಲ್ಲದವರು ದೇಶದ ಚರಿತ್ರೆಯನ್ನು ಕಟ್ಟಲಾರರು. ಈಗ ೨೦೧೪ರ ಚುನಾವಣೆಯಲ್ಲಿ ಪ್ರಧಾನ ಮಂತ್ರಿ ಅಭ್ಯರ್ಥಿಯಾಗಿರುವವರಿಗೆ ಸಾಮಾಜಿಕ ಏಕತೆಯನ್ನು ಸಾಧಿಸಿಕೊಟ್ಟವರ ಪ್ರತಿಮೆಯನ್ನು ಪ್ರತಿಷ್ಠಾಪಿಸು ವುದಿರಲಿ, ಅವರ ಬಗ್ಗೆ ಮಾತನಾಡುವುದಕ್ಕೂ ಆಸಕ್ತಿಯಿಲ್ಲ. ಅದರ ಬಗ್ಗೆ ಅವರು ಮಾತನಾಡಲು ಸಿದ್ಧರಿಲ್ಲ. ಸಾಮಾಜಿಕ ಏಕತೆಯನ್ನು ಸಾಧಿಸಿಕೊಟ್ಟವರನ್ನು ಮತ್ತು ಅವರ ಕಾಣಿಕೆಯನ್ನು ಸ್ಮರಿಸುವುದು ಅವರಿಗೆ ಆಗುತ್ತಿಲ್ಲ. ಇದಕ್ಕೆ ಮುಖ್ಯ ಕಾರಣವೆಂದರೆ ಈಗ ಪ್ರಧಾನಿಯಾಗಲು ಹೊರಟಿರುವವರು ಮೂಲತಃ ಯಥಾಸ್ಥಿತಿವಾದಿಗಳು ಮತ್ತು ಗತದಲ್ಲಿ ನಂಬಿಕೆಯಿರುವವರು. ಅವರಿಗೆ ವ್ಯಕ್ತಿಪೂಜೆಯಲ್ಲಿ ಇರುವಷ್ಟು ನಂಬಿಕೆಯು ವ್ಯವಸ್ಥೆಯ ಕಾರ್ಯಾಚರಣೆಯ ಬಗ್ಗೆ ಇಲ್ಲ. ಜಾನ್ ರಾಲ್ಸ್‌ನ ಸಾಮಾಜಿಕ ನ್ಯಾಯ ಸಿದ್ಧಾಂತದ ಎರಡನೆಯ 'ಭಿನ್ನತೆ ಸೂತ್ರದ' ಪ್ರಕಾರ ಸಮಾಜದಲ್ಲಿ ಹೊರಗಣತನವನ್ನು ಅನುಭವಿಸುತ್ತಿರುವವರಿಗೆ, ಸಮಾಜದ ಅಂಚಿನಲ್ಲಿರುವವರಿಗೆ ಮತ್ತು ಅಭಿವೃದ್ಧಿಯಿಂದ ವಂಚಿತರಾದವರಿಗೆ ಆದ್ಯತೆಯನ್ನು ನೀಡಬೇಕಾಗುತ್ತದೆ. ಇಲ್ಲಿ ಸಾಮಾಜಿಕ ನ್ಯಾಯ ಅನ್ನುವುದನ್ನು 'ಮೀಸಲಾತಿ' ಎಂಬ ಸೀಮಿತ ನೆಲೆಯಲ್ಲಿ ಪರಿಭಾವಿಸಿಕೊಳ್ಳುವುದಕ್ಕೆ ಪ್ರತಿಯಾಗಿ ಅದನ್ನು ಜಾನ್ ರಾಲ್ಸ್ ಪ್ರತಿಪಾದಿಸಿದ ಸಾಮಾಜಿಕ ನ್ಯಾಯ ಸಿದ್ಧಾಂತದ ನೆಲೆಯಲ್ಲಿ ಪರಿಭಾವಿಸಿಕೊಳ್ಳಲಾಗಿದೆ. ಅದರ ಪ್ರಕಾರ ಸಮಾಜದಲ್ಲಿ ಯಾರು ಅಂಚಿನಲ್ಲಿರುತ್ತಾರೋ, ವಂಚಿತರಾಗಿರುತ್ತಾರೋ ಅವರಿಗೆ ಅಭಿವೃದ್ಧಿಯಲ್ಲಿ ಹೆಚ್ಚು ಹೆಚ್ಚು ಮನ್ನಣೆ ಮತ್ತು ಆದ್ಯತೆಯು ದೊರೆಯಬೇಕು. ಈ ಕ್ರಮದ ಮೂಲಕ ಮಾತ್ರ ಅಸಮಾನತೆಯನ್ನು ತೊಡೆದುಹಾಕುವುದು ಸಾಧ್ಯ. ನಮ್ಮದು ಮೂಲಭೂತವಾಗಿ ಅಸಮಾನತೆಯಿಂದ ಕೂಡಿರುವ ಶ್ರೇಣೀಕೃತ ಸಮಾಜವಾಗಿದೆ. ಅದನ್ನು ತೊಡೆದು ಹಾಕಲು ಸಮಾಜದ ಧುರೀಣರು ವಂಚಿತರಿಗೆ ಮತ್ತು ಅಂಚಿನಲ್ಲಿರುವವರಿಗೆ ಹಾಗೂ ಮುಖ್ಯವಾಗಿ ಚಾರಿತ್ರಿಕ ತಾರತಮ್ಯಕ್ಕೆ ಒಳಗಾಗಿರುವ ಸಮುದಾಯಗಳಿಗೆ ಅಭಿವೃದ್ಧಿಯಲ್ಲಿ ಆದ್ಯತೆ ನೀಡಬೇಕಾಗುತ್ತದೆ. ಈ ನಿಯಮದ ನೆಲೆಯಲ್ಲಿ ನೋಡಿದಾಗ ನಮಗೆ ರಾಜಕೀಯ ಏಕತೆಯನ್ನು ಸಾಧಿಸಿದವರ ಪ್ರತಿಮೆಗಿಂತ ಸಾಮಾಜಿಕ ಏಕತೆಯನ್ನು ಸಾಧಿಸಿದವರ ಪ್ರತಿಮೆಯ ಅಗತ್ಯವಿದೆ. ಈಗ ಸರದಾರರ ಪ್ರತಿಮೆಯನ್ನು ಪ್ರತಿಷ್ಠಾಪಿಸುವುದರ ಮೂಲಕ ಇವರು ಯಾವ ಸಂದೇಶವನ್ನು ಸಮಾಜಕ್ಕೆ ನೀಡುತ್ತಿದ್ದಾರೆ ? ಈ ಕಾರ್ಯ ಯಾರ ಹಿತಾಸಕ್ತಿಯನ್ನು ಆದ್ಯತೆಯನ್ನಾಗಿ ಇಟ್ಟುಕೊಂಡಿದೆ ? ಸದ್ಯದ ನಮ್ಮ ಸಂದರ್ಭದಲ್ಲಿ ರಾಜಕೀಯ ಏಕತೆಯು ಮುಖ್ಯವೋ ಅಥವಾ ಸಾಮಾಜಿಕ ಏಕತೆಯು ಮುಖ್ಯವೋ ? ಅಭಿವೃದ್ಧಿಯ ದೃಷ್ಟಿಯಿಂದ ನಮಗೆ ಇಂದು ಸಾಮಾಜಿಕ ಸ್ವಾಸ್ಥ್ಯವನ್ನು ಕಾಯ್ದುಕೊಳ್ಳುವುದು ಆದ್ಯತೆಯ ಸಂಗತಿಯಾಗಬೇಕು. ಈ ಸಂಗತಿಯನ್ನು ಕಲಿಸಿಕೊಟ್ಟ ಧೀಮಂತ ಎಂದರೆ ಭಾರತರತ್ನ ಡಾ॥ ಬಿ. ಆರ್. ಅಂಬೇಡ್ಕರ್.

## ಶ್ರೀ ನರೇಂದ್ರ ಮೋದಿ ಮತ್ತು ಸರದಾರ್ ವಲ್ಲಭ್‌ಭಾಯ್ ಪಟೇಲರು : ಒಂದು ತುಲನಾತ್ಮಕ ವಿಶ್ಲೇಷಣೆ

ನಮ್ಮ ದೇಶದಲ್ಲಿ ಸ್ವಾತಂತ್ರ್ಯ ಹೋರಾಟವನ್ನು ಕಟ್ಟಿ ಬೆಳೆಸಿದ ಮಹಾನ್ ನಾಯಕರುಗಳಲ್ಲಿ ಪ್ರಮುಖವಾದ ಎರಡು ಹೆಸರುಗಳೆಂದರೆ ಮಹಾತ್ಮ ಗಾಂಧಿ ಮತ್ತು ಚಕ್ರವರ್ತಿ ರಾಜಗೋಪಾಲಾಚಾರಿ. ಇವರಿಬ್ಬರ ಮೊಮ್ಮಗನಾದ ರಾಜ್‌ಮೋಹನಗಾಂಧಿ ಅವರು ಸರದಾರ್ ಪಟೇಲರ ಜೀವನಚರಿತ್ರೆಯನ್ನು ಬರೆದಿದ್ದಾರೆ. ಪಶ್ಚಿಮ ಬಂಗಾಳದ ರಾಜ್ಯಪಾಲರಾಗಿ ಅವರು ಸೇವೆ ಸಲ್ಲಿಸಿದ್ದಾರೆ. ಇತ್ತೀಚೆಗೆ ಅವರು ದೂರದರ್ಶನವೊಂದಕ್ಕೆ ನೀಡಿದ ಸಂದರ್ಶನದಲ್ಲಿ ಸರದಾರ್ ಪಟೇಲರು ಮತ್ತು ನರೇಂದ್ರ ಮೋದಿ ಅವರ ನಡುವಿನ ಒಂದು ತುಲನಾತ್ಮಕ ವಿಶ್ಲೇಷಣೆ ಮಾಡಿ ಮುಂದಿನ ೨೦೧೪ರ ಚುನಾವಣೆಯಲ್ಲಿನ ತನ್ನ ಪ್ರಧಾನಮಂತ್ರಿ ಅಭ್ಯರ್ಥಿಯನ್ನು ಆಯ್ಕೆ ಮಾಡಿರುವ ರಾಜಕೀಯ ಪಕ್ಷ ಮತ್ತು ಅದರ ಪ್ರಧಾನಿ ಅಭ್ಯರ್ಥಿಗಳು ನಡೆಸಿರುವ ಸರದಾರ್ ವಲ್ಲಭ್‌ಭಾಯ್ ಪಟೇಲರ ವೈಭವೀಕರಣದ ಬಗ್ಗೆ ತಮ್ಮ (ಟೀಕೆ) ಅಭಿಪ್ರಾಯವನ್ನು ಮಂಡಿಸಿದ್ದಾರೆ.

ಗುಜರಾತಿನ ಮುಖ್ಯಮಂತ್ರಿಯಾಗಿ ನರೇಂದ್ರ ಮೋದಿ ಅವರು ೨೦೦೨ರ ಹತ್ಯಾಕಾಂಡದಲ್ಲಿ ಮುಸ್ಲಿಮರ ಬಗ್ಗೆ ನಡೆದುಕೊಂಡ ರೀತಿಯ ಹಿನ್ನೆಲೆಯಲ್ಲಿ ಸರದಾರ್ ಪಟೇಲರು ಇವರನ್ನು ಯಾವ ಕಾರಣಕ್ಕೂ ತಮ್ಮ ಸೈದ್ಧಾಂತಿಕ ಉತ್ತರಾಧಿಕಾರಿ ಎಂದು ಮನ್ನಿಸುತ್ತಿರಲಿಲ್ಲ ಎಂದು ರಾಜ್‌ಮೋಹನ್‌ಗಾಂಧಿ ಹೇಳಿದ್ದಾರೆ. ಅಂದು ಅವರು ಗುಜರಾತಿನಲ್ಲಿ 'ರಾಜಧರ್ಮ'ವನ್ನು ಪಾಲಿಸಲಿಲ್ಲ ಎಂದು ಟೀಕಿಸಿದ್ದಾರೆ (ಶ್ರೀ ನರೇಂದ್ರ ಮೋದಿ ಅವರ ೨೦೦೨ರ ಹತ್ಯಾಕಾಂಡದಲ್ಲಿನ 'ರಾಜಧರ್ಮ'ದ ವೈಫಲ್ಯದ ಬಗ್ಗೆ ಅಂದಿನ ಪ್ರಧಾನಮಂತ್ರಿ ಅಟಲ್ ಬಿಹಾರಿ ವಾಜಪೇಯಿ ಅವರೂ ಮಾತನಾಡಿದ್ದರು).

ಗುಜರಾತಿನಲ್ಲಿ ೨೦೦೨ರಲ್ಲಿ ಏನು ನಡೆಯಬಾರದ್ದು ನಡೆದಿತ್ತೋ ಮತ್ತು ಅದನ್ನು ತಡೆಯುವುದರಲ್ಲಿ ಮೋದಿ ಅವರು ಮುಖ್ಯಮಂತ್ರಿಯಾಗಿ ವಿಫಲರಾಗಿದ್ದರೋ ಆ ವಿಷಯಕ್ಕೆ ಸಂಬಂಧಿಸಿದಂತೆ ಸರದಾರ್ ಪಟೇಲರು ಒಬ್ಬ ರಾಜಕಾರಣಿಯಾಗಿ ಮಾತ್ರವಲ್ಲ, ಗುಜರಾತಿನ ಮೂಲದವರಾಗಿ ಕೂಡ ತೀವ್ರ ನೊಂದುಕೊಳ್ಳುತ್ತಿದ್ದರು.

ನರೇಂದ್ರ ಮೋದಿ ಅವರನ್ನು ಸರದಾರ್ ಪಟೇಲರ ಉತ್ತರಾಧಿಕಾರಿ ಎಂದು ಒಪ್ಪಿಕೊಂಡರೆ ಅದರಿಂದ ಪಟೇಲರನ್ನು ನಾವು ತಪ್ಪಾಗಿ ಅರ್ಥಮಾಡಿಕೊಂಡಂತಾಗುತ್ತದೆ ಇಲ್ಲವೇ ತಪ್ಪಾಗಿ ಅವರನ್ನು ಪ್ರತಿಬಿಂಬಿಸಿದಂತಾಗುತ್ತದೆ ಎಂಬುದು ರಾಜ್‌ಮೋಹನ್ ಗಾಂಧಿ ಅವರ ಸ್ಪಷ್ಟ ಅಭಿಪ್ರಾಯವಾಗಿದೆ. ಮುಂದುವರಿದು ಅವರು ಸರದಾರ್ ಪಟೇಲರು ಯಾವ ಮೌಲ್ಯಗಳಿಗಾಗಿ ಹೋರಾಟ ನಡೆಸಿದ್ದರೋ ಅವುಗಳನ್ನು ಮೋದಿ ಅವರು ಅನುಸರಿಸುವುದಾದರೆ ಅವರನ್ನು ಮೆಚ್ಚಬಹುದು. ಆದರೆ ಇದು ಎರಡು ಕಾರಣಗಳಿಂದಾಗಿ ಅವರಿಂದ ಸಾಧ್ಯವಿಲ್ಲ.

ಮೊದಲನೆಯದಾಗಿ, ಪಟೇಲರು ಮಹಾತ್ಮ ಗಾಂಧಿ ಅವರ ಅನುಯಾಯಿಯಾಗಿ ಮತ್ತು ರಾಷ್ಟ್ರೀಯ ಕಾಂಗ್ರೆಸ್ಸಿನ ನಾಯಕರಾಗಿ ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಂಡಿದ್ದರು. ಆದರೆ ಮೋದಿ ಅವರು ಆರ್.ಎಸ್.ಎಸ್.ನ ಗರಡಿಯಲ್ಲಿ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡವರು.

ಎರಡನೆಯದಾಗಿ, ಸರದಾರ್ ಪಟೇಲರು ಸದಾ ತಂಡದ ನಾಯಕರಾಗಿದ್ದರು ಮತ್ತು ತಮ್ಮ ಕೈಕೆಳಗಿನ ಕಾರ್ಯಕರ್ತರನ್ನು ಬೆಳೆಯುವಂತೆ ನೋಡಿಕೊಳ್ಳುತ್ತಿದ್ದರು. ಮೋದಿ ಅವರಿಂದ ಇದನ್ನು ನಿರೀಕ್ಷಿಸುವುದು ಸಾಧ್ಯವಿಲ್ಲ.

*ಮೂಲ : 'ದಿ ಹಿಂದು'. ನವೆಂಬರ್ ೦೫, ೨೦೧೩. ಮಂಗಳವಾರ, ಪುಟ : ೧೨.*

**ಗತವನ್ನು ಪರಿಭಾವಿಸಿಕೊಳ್ಳುವ ಕ್ರಮ**

ನಾವು ಇಂದು ಸರದಾರ್ ಪಟೇಲರ ಕೊಡುಗೆಯ ಬಗ್ಗೆ ಮಾತನಾಡುತ್ತಿದ್ದೇವೆ. ಅವರನ್ನು ಪರಿಭಾವಿಸಿಕೊಳ್ಳುವ ಕ್ರಮದಲ್ಲಿ ಸಮಸ್ಯೆಯಿದೆ. ಪ್ರತಿಯೊಬ್ಬರೂ ಅವರನ್ನು ಅವರವರ ಭಾವಕ್ಕೆ, ಅವರವರ ಅರಿವಿನ ಮಿತಿಯೊಳಗೆ ಪರಿಭಾವಿಸಿಕೊಳ್ಳುತ್ತಿದ್ದಾರೆ. ನಮ್ಮ ದೇಶದ ಮೊದಲ ಪ್ರಧಾನಿ ನೆಹರು ಅವರಿಗೆ ಪ್ರತಿಯಾಗಿ ಪಟೇಲರು ಪ್ರಧಾನಿಯಾಗಿದ್ದಿದ್ದರೆ ದೇಶದ ಸ್ಥಿತಿಯು ಬೇರೆಯಾಗುತ್ತಿತ್ತು ಎಂದು ಹೇಳಲಾಗುತ್ತಿದೆ. ಇಂತಹ ಊಹಾಪೋಹಗಳಿಂದ ಏನನ್ನೂ ಸಾಧಿಸಿಕೊಳ್ಳುವುದು ಸಾಧ್ಯವಿಲ್ಲ. ಗತದ ವೈಭವೀಕರಣದಿಂದ ಉಂಟಾಗಬಹುದಾದ ಅಪಾಯ ಇದಾಗಿದೆ. ಇಲ್ಲಿರುವ ಸೂಕ್ಷ್ಮವನ್ನು ನಾವು ಅರ್ಥ ಮಾಡಿಕೊಳ್ಳಬೇಕು. ಇಂದು ಅಧಿಕಾರದಲ್ಲಿರುವ ಕಾಂಗ್ರೆಸ್ ಪಕ್ಷವನ್ನು ಸೋಲಿಸಬೇಕೆಂಬ ಏಕೈಕ ಉದ್ದೇಶದಿಂದ ನೆಹರೂ ಮನೆತನವನ್ನು ಗುರಿಯಾಗಿಟ್ಟುಕೊಂಡು ಇವರು ಸರದಾರ್ ಪಟೇಲರನ್ನು ತಮ್ಮ ಆಯುಧವನ್ನಾಗಿ ಮಾಡಿಕೊಂಡಿದ್ದಾರೆ. ಈ ಹಿಂದೆ ಇವರ ಪಕ್ಷವು ಕೇಂದ್ರದಲ್ಲಿ ಅಧಿಕಾರದಲ್ಲಿದ್ದಾಗ ನೆನಪಿಗೆ ಬಾರದ ಪಟೇಲರು ಇಂದು ಇವರ ಕಣ್ಮಣಿಯಾಗಿದ್ದಾರೆ. ಇದು ಅವರು ನಡೆಸುತ್ತಿರುವ ಚುನಾವಣಾ ರಾಜಕಾರಣವಲ್ಲದೆ ಮತ್ತೇನೂ ಅಲ್ಲ. ತಮ್ಮ ಅನುಕೂಲಕ್ಕೆ ತಕ್ಕಂತೆ ಮತ್ತು ತಮ್ಮ ಅರಿವಿನ ಮಿತಿಯೊಳಗೆ ಪಟೇಲರ ವ್ಯಕ್ತಿತ್ವವನ್ನು ಮತ್ತು ಅವರ ಆದರ್ಶವನ್ನು ಇವರು ಪರಿಭಾವಿಸಿಕೊಳ್ಳುತ್ತಿದ್ದಾರೆ. ಆದರೆ ನಿಜ ಸಂಗತಿಯೇನೆಂದರೆ ಚರಿತ್ರೆಯಲ್ಲಿ ಆಗಿಹೋದ ಒಬ್ಬ ವ್ಯಕ್ತಿಯನ್ನು ಇಂದು ನಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುವುದು ಆ ವ್ಯಕ್ತಿಗೆ ಮತ್ತು ಚರಿತ್ರೆಗೆ ಮಾಡಿದ ಅವಮಾನವಾಗುತ್ತದೆ. ಅವರನ್ನು ಅಂದಿನ ಸಂದರ್ಭದಲ್ಲಿಟ್ಟು ನೋಡುವುದು ಸರಿಯಾದ ಕ್ರಮವಾದೀತು. ರೆಟರಿಕ್ಕಿನಿಂದ ದೇಶ ಕಟ್ಟುವುದು ಸಾಧ್ಯವಿಲ್ಲ. ನಾವೇನು ಗತದಲ್ಲಿ ಬದುಕುತ್ತಿಲ್ಲ. ಗತದಿಂದ ನಾವು ಪಾಠ ಕಲಿಯಬೇಕೇ ವಿನಾ ಅದರ ವೈಭವೀಕರಣದಲ್ಲಿ ತೊಡಗುವುದರಲ್ಲಿ ಅರ್ಥವಿಲ್ಲ. ನಮ್ಮ ಇಂದಿನ ಸಂದರ್ಭದಲ್ಲಿ ಅನೇಕ ರಾಜಕೀಯ ಮತ್ತು ಸಾಮಾಜಿಕ ಕಾರಣಗಳಿಂದಾಗಿ ನೆಹರೂ ಅವರಾಗಲಿ ಅಥವಾ ಪಟೇಲರಾಗಲಿ ಪ್ರಸ್ತುತವಾಗಲಾರರು. ಅದೇ ಸಮಯದಲ್ಲಿ ಅವರು ಅಪ್ರಸ್ತುತರು ಎಂದರೂ ತಪ್ಪಾಗುತ್ತದೆ. ಇಲ್ಲಿ ನಾವು ಸದಸದ್ವಿವೇಚನೆಯನ್ನು ಬಳಸಬೇಕಾಗುತ್ತದೆ. ಅವರ ಕಾರ್ಯ ಮತ್ತು ಕಾಣಿಕೆಯಿಂದ ನಾವು ಸ್ಫೂರ್ತಿ ಪಡೆಯಬಹುದೇ ವಿನಾ ಅವುಗಳನ್ನು ಇಂದು ಅನುಸರಿಸುವುದು ಸಾಧ್ಯವಿಲ್ಲ. ವ್ಯಕ್ತಿಪೂಜೆಯಂತಹ ಕ್ರಮದಿಂದ ನಾವು ದೇಶವನ್ನು ಕಟ್ಟುವುದು ಸಾಧ್ಯವಿಲ್ಲ ಮತ್ತು ಅವರ ಅನುಕರಣೆಯಲ್ಲಿ ತೊಡಗುವುದು ಬಾಲಿಶತನವಾದೀತು. ಎನ್. ರಾಮ್ ಹೇಳಿರುವಂತೆ ವ್ಯಕ್ತಿ ಪೂಜೆಯು ಪ್ರಜಾತಂತ್ರಕ್ಕೆ ಅಪಾಯಕಾರಿ ಸಂಗತಿ.

**(ಮುಗಿಯಿತು)**

**ಟಿ. ಆರ್. ಚಂದ್ರಶೇಖರ**
ನಂ. ೩೪೦/೧, 'ವಚನ', ಸೊಸೈಟಿ ರಸ್ತೆ, ಅಮರಾವತಿ, ಹೊಸಪೇಟೆ – ೫೮೩ ೨೦೧

# ಬಿಎಂಟಿಸಿ

## ನಗರ ಸಾರಿಗೆಯ ಅನ್ವೇಷಣೆಗಳ ರೂವಾರಿ



ಶ್ರೀ ಸಿದ್ದರಾಮಯ್ಯ
ಸನ್ಮಾನ್ಯ ಮುಖ್ಯಮಂತ್ರಿಗಳು

ದೇಶದ ಮುಂಚೂಣಿ ನಗರ ಸಾರಿಗೆ ಸಂಸ್ಥೆ ಎನಿಸಿರುವ ಬಿಎಂಟಿಸಿಯು ಪ್ರಯಾಣಿಕರಿಗೆ ಸುಗಮ ಸಂಚಾರವನ್ನು ಕಲ್ಪಿಸುವ ಸಲುವಾಗಿ ಅಂದಿನಿಂದಲೂ ಪ್ರಯಾಣಿಕ ಸ್ನೇಹಿ ಉಪಕ್ರಮಗಳನ್ನು ಪರಿಚಯಿಸುತ್ತಾ ಬಂದಿದೆ. ವಲಯವಾರು ಮಾಸಿಕ, ದಿನದ ಪಾಸುಗಳು, ಬ್ರಾಂಡ್ ಸೇವೆಗಳು, ಕಾರ್ಖಾನೆಗಳು, ಶಾಲಾ-ಕಾಲೇಜುಗಳಿಗೆ ಒಪ್ಪಂದದ ಸೇವೆ, ವಿಶ್ವದರ್ಜೆಯ ವೋಲ್ವೊ ಬಸ್ ಸೇವೆಗಳು ಇವೇ ಇನ್ನೂ ಮೊದಲಾದ ಉಪಕ್ರಮಗಳನ್ನು ಅನುಷ್ಠಾನಗೊಳಿಸಿದೆ.



ಶ್ರೀ ರಾಮಲಿಂಗಾರೆಡ್ಡಿ
ಸನ್ಮಾನ್ಯ ಸಾರಿಗೆ ಸಚಿವರು ಮತ್ತು
ಜಿಲ್ಲಾ ಉಸ್ತುವಾರಿ ಸಚಿವರು, ಬೆಂಗಳೂರು
ಹಾಗೂ ಅಧ್ಯಕ್ಷರು, ಕೆಎಸ್ಆರ್‌ಟಿಸಿ
ಮತ್ತು ಬಿಎಂಟಿಸಿ



ಯಶವಂತಪುರ ಟಿಟಿಎಂಸಿ



ಶಾಂತಿನಗರ ಟಿಟಿಎಂಸಿ

### ಬಿಎಂಟಿಸಿಯ ಪ್ರಥಮಗಳು

- ಲೋ ಫ್ಲೋರ್ ಬಸ್‌ಗಳ ಪರಿಚಯ
- ನಗರಕ್ಕೆ ವಿಶ್ವದರ್ಜೆಯ ಹವಾನಿಯಂತ್ರಿತ ವೋಲ್ವೊ ಬಸ್‌ಗಳು
- ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ವೋಲ್ವೊ ಬಸ್ ಸೇವೆ
- ಪ್ರಯಾಣಿಕರು ತಮ್ಮ ಸ್ವಂತ ವಾಹನಗಳ ಬಳಕೆಯನ್ನು ನಿಲ್ಲಿಸಿ, ಸಾರ್ವಜನಿಕ ವಾಹನದಲ್ಲಿ ಸಂಚರಿಸುವಂತೆ ಉತ್ತೇಜಿಸಲು ಬಸ್ ದಿನವನ್ನು ಆಚರಣೆಗೆ ತರಲಾಗಿದೆ. ಇದರಿಂದ ಇಂಧನ ಉಳಿತಾಯ, ಮಾಲಿನ್ಯ ನಿಯಂತ್ರಣ ಮತ್ತು ಸಂಚಾರ ದಟ್ಟಣೆಗೆ ಕಡಿವಾಣ ಸಾಧ್ಯವಾಗಿದೆ
- ಸಾಗಣೆ ನಿರ್ವಹಣಾ ಕೇಂದ್ರಗಳ ನಿರ್ಮಾಣ ಮತ್ತು ಬಸ್‌ಗಳ ಖರೀದಿಗಾಗಿ ರಾಷ್ಟ್ರೀಯ ಪ್ರಾಯೋಗಿಕ ಯೋಜನೆಗೆ ಜೆಎನ್ ನರ್ಮ್ ಆರ್ಥಿಕ ನೆರವು ನೀಡಿದೆ
- ಮಾಹಿತಿ, ಸಂವಹನ ಮತ್ತು ಮನರಂಜನೆಯ ಪರಿಚಯ

### ಪ್ರಶಸ್ತಿಗಳು ಮತ್ತು ಪ್ರಶಂಸೆಗಳು

ಕಳೆದ 4 ವರ್ಷಗಳಲ್ಲಿ ಬಿಎಂಟಿಸಿ 20ಕ್ಕೂ ಹೆಚ್ಚು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಪ್ರಶಸ್ತಿಗಳನ್ನು ತನ್ನ ಮುಡಿಗೇರಿಸಿಕೊಂಡಿದೆ. ಅದರಲ್ಲಿ ಪ್ರಮುಖವಾದವು :

- ಹುಡ್ಕೋ ನ್ಯಾಷನಲ್ ಪ್ರಶಸ್ತಿ - 2012
- ಇಂಡಿಯಾ ರೋಡ್ ಟ್ರಾನ್ಸ್‌ಪೋರ್ಟ್ ಪ್ರಶಸ್ತಿ - 2012
- ಬಸ್ ಸಾರಿಗೆಯಲ್ಲಿ ಶ್ರೇಷ್ಠ ಕಾರ್ಯಾಚರಣೆಯ ಸಲುವಾಗಿ ಮೊದಲ ದಕ್ಷಿಣ ವಲಯ ಪ್ರಶಸ್ತಿ - 2012



ಸಾರ್ವಜನಿಕ ಸಾರಿಗೆಯಲ್ಲಿ ಸೇವಾ ಸುಧಾರಣೆಗೆ ಯುಐಟಿಪಿ 2010-2011 ಮೊದಲ ಏಷ್ಯಾ ಪೆಸಿಫಿಕ್ ರೀಜನ್ ಅವಾರ್ಡ್

ಅತ್ಯುತ್ತಮ ಕಾರ್ಯಾಚರಣೆ : ಪಾಸ್ ಪದ್ಧತಿಯ ಪರಿಚಯಕ್ಕೆ ಸಿಎಂಎಕೆ ಪ್ರಶಸ್ತಿ 2010-11

ಅತ್ಯಂತ ಕಡಿಮೆ ಅಪಘಾತ ಸಾಧನೆಗೆ ಎಎಸ್‌ಆರ್‌ಟಿಯು 2010-11 ಇವರಿಂದ ಭಾರತ ಸರ್ಕಾರದ ಸಾರಿಗೆ ಸಚಿವಾಲಯದ ಪದಕ

ಪಿ. ರವಿಕುಮಾರ್, ಭಾ.ಆ.ಸೇ
ಪ್ರಧಾನ ಕಾರ್ಯದರ್ಶಿಗಳು, ಸಾರಿಗೆ ಇಲಾಖೆ

ಅಂಜುಮ್ ಪರ್ವೇಜ್, ಭಾ.ಆ.ಸೇ
ವ್ಯವಸ್ಥಾಪಕ ನಿರ್ದೇಶಕರು, ಬಿಎಂಟಿಸಿ



**ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ**

ಕೇಂದ್ರ ಕಚೇರಿ, ಕೆ.ಹೆಚ್. ರಸ್ತೆ, ಶಾಂತಿನಗರ, ಬೆಂಗಳೂರು – 560 027
ದೂ : **080-2295 2422, 2253 7522**
ಕಾಲ್ ಸೆಂಟರ್ ಉಚಿತ ಕರೆ : **18004251663** ವೆಬ್‌ಸೈಟ್ : **www.mybmtc.com**



**ಬಿಎಂಟಿಸಿ - ನಮ್ಮ ಸಾರಿಗೆ ನಿಮ್ಮ ಮನೆ ಬಾಗಿಲಿಗೆ**

ನಾವು ಸಿರಿಯದ ಮೇಲೆ ಸೀಮಿತ ದಾಳಿ ನಡೆಸುತ್ತೇವೆಂದು ಒಬಾಮ ಹೇಳಿದಾಗ ಅಮೆರಿಕಕ್ಕಿದ್ದ ಯುದ್ಧದ ತೀಟೆ ಜಗತ್ತಿಗೆ ಜಾಹೀರಾಯಿತು. ಚೀನ ಮತ್ತು ಇರಾನ್ ಮೌನವಹಿಸಿದವು. ರಷ್ಯದ ಪುಟಿನ್ ಮಾತ್ರ ಪುಟಿದೆದ್ದರು. ಹಾಗೆ ಯುದ್ಧ ಹೂಡುವುದಾದರೆ ಭಾರಿ ದಂಡ ತೆರಲೇಬೇಕಾಗುತ್ತದೆ ಎಂದು ಅಮೆರಿಕಕ್ಕೆ ಎಚ್ಚರಿಸಿದರು. ತಾನೇ ಸಂಧಾನಕ್ಕೆ ಮುಂದಾಗುವುದಾಗಿ ಹೇಳಿದರು. ವಿಶ್ವಸಂಸ್ಥೆಯ ತಂಡ ನಿಜಸ್ಥಿತಿಯನ್ನು ಸಿರಿಯದಲ್ಲಿ ಪರಿಶೀಲಿಸಲೂ ಬಿಡದೆ ಆ ತಂಡದ ಮೇಲೂ ಆಕ್ರಮಣವಾಯಿತು. ಅಂತಿಮವಾಗಿ ಪುಟಿನ್ ಸಿರಿಯದ ಅಧ್ಯಕ್ಷ ಬಷಾರ್ ಅವರನ್ನು ಒಪ್ಪಿಸಿ, ಆ ದೇಶದಲ್ಲಿನ ರಾಸಾಯನಿಕ ಅಸ್ತ್ರದ ತಾಣಗಳನ್ನು ವಿಶ್ವಸಂಸ್ಥೆಯ ತಂಡ ಪರಿಶೀಲಿಸಲು ಅನುಕೂಲಕರ ಪರಿಸ್ಥಿತಿ ನಿರ್ಮಿಸಿದರು. ಈಗ ಎಲ್ಲವೂ ಸ್ಪಷ್ಟ. ಹನ್ನೆರಡು ಜಾಗಗಳಲ್ಲಿ ಸಿರಿಯ ತನ್ನ ರಾಸಾಯನಿಕ ಅಸ್ತ್ರಗಳನ್ನು ಸಂಗ್ರಹಿಸಿರುವ ಜಾಗಗಳು ಪತ್ತೆಯಾಗಿವೆ. ಅಮೆರಿಕ, ರಷ್ಯಗಳ ನಂತರ ರಾಸಾಯನಿಕ ಅಸ್ತ್ರಗಳನ್ನು ಅತಿ ದೊಡ್ಡ ಪ್ರಮಾಣದಲ್ಲಿ ದಾಸ್ತಾನು ಮಾಡಿಕೊಂಡಿರುವುದು ಸಿರಿಯ ದೇಶವೇ. ಆ ದೇಶದಲ್ಲೇ ರಾಸಾಯನಿಕ ಅಸ್ತ್ರಗಳ ತಯಾರಿಕೆ ನಡೆದಿದೆ. ಇರಾನ್ ಮತ್ತು ರಷ್ಯ ಇದಕ್ಕೆ ಕುಮ್ಮಕ್ಕು ಕೊಟ್ಟಿವೆ ಎನ್ನುವ ಅಸಮಾಧಾನವೂ ಬೇರೆ ದೇಶಗಳಿಗಿದೆ. ಎರಡನೇ ಬಾರಿ ಯುದ್ಧವಾದಾಗ ಇರಾಕಿನಿಂದ ದೊಡ್ಡ ಪ್ರಮಾಣದ ರಾಸಾಯನಿಕ ಅಸ್ತ್ರಗಳನ್ನು ಕಳ್ಳಸಾಗಣೆ ಮಾಡಿ ಸಿರಿಯ ತನ್ನ ಅಸ್ತ್ರ ಭಂಡಾರವನ್ನು ಬೆಳೆಸಿದೆ ಎಂಬ ಸುದ್ದಿಯೂ ಚಾಲ್ತಿಯಲ್ಲಿದೆ.



# ಸಿರಿಯದ ರಾಸಾಯನಿಕ ಅಸ್ತ್ರಗಳ ಹಿಂದೆ

**ಟಿ. ಆರ್. ಅನಂತರಾಮು**

ವಿಶ್ವಸಂಸ್ಥೆ ನಿಯೋಜಿಸಿರುವ ರಾಸಾಯನಿಕ ಅಸ್ತ್ರಗಳ ಮೇಲೆ ನಿಗಾ ಇಡುವ ತಂಡಕ್ಕೆ ಸ್ವತಃ ಸಿರಿಯ ಸಲ್ಲಿಸಿರುವ ಮನವಿ ಇದು :

"ನಮ್ಮಲ್ಲಿರುವ ರಾಸಾಯನಿಕ ಅಸ್ತ್ರಗಳನ್ನು ವಿಶ್ವಸಂಸ್ಥೆ ಬಯಸಿದೆಡೆಗೆ ಒಯ್ಯಲು ಇಲ್ಲವೇ ನಾಶಮಾಡಲು ೩೫ ಸೈನಿಕರಿರುವ ಕನಿಷ್ಠ ಎಂಟು ತಂಡಗಳ ನೆರವು ಬೇಕು. ಡಮಾಸ್ಕಸ್‌ನಿಂದ ಲತಾಕಿಯ ಬಂದರಿಗೆ ಸಾಗಿಸಬೇಕಾದ ರಸ್ತೆಯಲ್ಲಿ ಅಗತ್ಯ ಸುರಕ್ಷತೆ ಒದಗಿಸಬೇಕು. ಇದಕ್ಕಾಗಿ ಸಿರಿಯಕ್ಕೆ ದೊಡ್ಡ ಪ್ರಮಾಣದ ಸಾಧನಗಳು ಬೇಕು. ಅಂಥ ಸಾಧನಗಳು ಮಿಲಿಯನ್‌ಗಟ್ಟಲೆ ಡಾಲರ್ ಬೇಡುತ್ತವೆ. ಹದಿನೈದು ಟನ್ ಸರಕು ಸಾಗಿಸುವ, ಶಸ್ತ್ರಸಜ್ಜಿತ ನಲವತ್ತು ಟ್ರಕ್ಕುಗಳ ಅವಶ್ಯಕತೆ ಇದೆ. ಇದರ ಜೊತೆಗೆ ಆಧುನಿಕ ಕ್ಯಾಮೆರಾಗಳು ಬೇಕು. ಕಂಪ್ಯೂಟರ್‌ಗಳ ಸವಲತ್ತುಗಳು ಬೇಕು. ಹದಿಮೂರು ಜನರೇಟರ್‌ಗಳು ಬೇಕು, ಕನಿಷ್ಠ ಐದು ಕ್ರೇನುಗಳ ಅವಶ್ಯಕತೆ ಇದೆ. ಎರಡು ಸಾವಿರ ಲೀಟರ್ ಸಾಮರ್ಥ್ಯವಿರುವ, ಟೆಫ್ಲಾನ್ ಒಳಾವರಣವಿರುವ ನಿಯಂತ್ರಿತ ರಾಸಾಯನಿಕಗಳನ್ನು ತುಂಬಲು ಇಪ್ಪತ್ತು ಟ್ಯಾಂಕುಗಳು ಬೇಕು (ಈ ರಾಸಾಯನಿಕಗಳೆಂದರೆ ಸರೀನ್ ಮತ್ತು ಟಾಬಮ್ ರಾಸಾಯನಿಕ ಅಸ್ತ್ರ ತಯಾರಿಸಲು ಬಳಸುವ ಪಾಸ್ಫೋಲಿನ್ ಕ್ಲೋರೈಡ್ ಮತ್ತು ಟ್ರೈ ಕ್ಲೋರೈಡ್)."

ಪಟ್ಟಿ ಇಲ್ಲಿಗೇ ಮುಗಿಯುವುದಿಲ್ಲ. ರಾಸಾಯನಿಕ ಅಸ್ತ್ರಗಳ ನಿರೋಧ ಸಂಸ್ಥೆಗೆ ಸಿರಿಯ ಮನವಿ ಮಾಡಿಕೊಂಡು ಹತ್ತು ಆಂಬುಲೆನ್ಸ್ ವಾಹನಗಳನ್ನು ಕೇಳಿದೆ. ಹತ್ತು ಅಗ್ನಿಶಾಮಕ ದಳದ ನೆರವನ್ನು ಬೇಡಿದೆ. ಹತ್ತು ಸಾವಿರ ಲೀಟರು ನೀರು ಹಿಡಿಯುವ ಹತ್ತು ಟ್ಯಾಂಕರ್‌ಗಳನ್ನು ಪೂರೈಸಿ ಎಂದು ಕೋರಿದೆ. ಏಕೆಂದರೆ ಸಾಗಿಸುವಾಗ ರಾಸಾಯನಿಕಗಳು ಒಂದು ವೇಳೆ ಮಾಲಿನ್ಯಕ್ಕೊಳಗಾಗಿ ಫಜೀತಿ ತರಬಾರದು ಎಂದು ಅದರ ಸಾರ ಕುಗ್ಗಿಸಲು. ಇನ್ನು ಇದರ ನಿರ್ವಹಣೆ ಹೊತ್ತು ಸಾಗಿಸುವ ಮಂದಿಗೆ ಚಲಿಸುವ ಅಡುಗೆಮನೆ ಬೇಕಂತೆ. ಪೂರ್ವವಿನ್ಯಾಸಗೊಳಿಸಿದ ಇಪ್ಪತ್ತು ಮಲಗುವ ಮನೆಗಳನ್ನು ಕೊಡಿ ಎಂದಿದೆ. ಇಷ್ಟೆಲ್ಲ ಬೇಡಿಕೆಗಳನ್ನು ಸಿರಿಯ ಸಲ್ಲಿಸಿದ್ದು ೨೦೧೩ರ ನವೆಂಬರ್ ತಿಂಗಳಲ್ಲಿ.

ಬಹುಶಃ ರಷ್ಯದ ಅಧ್ಯಕ್ಷ ಪುಟಿನ್ ಅವರು ಮಧ್ಯಪ್ರವೇಶ ಮಾಡದಿದ್ದರೆ ಸಿರಿಯದ ಮೇಲೆ ತ್ವರಿತ ಆಕ್ರಮಣ ಮಾಡಲು ಅಮೆರಿಕದ ಅಧ್ಯಕ್ಷ ಒಬಾಮ ಸೈನ್ಯವನ್ನು ಸಜ್ಜುಗೊಳಿಸಿದ್ದರು. ಈ ಆಕ್ರಮಣಕ್ಕೆ ಫ್ರಾನ್ಸ್ ಮತ್ತು ಇಂಗ್ಲೆಂಡುಗಳ ಬೆಂಬಲವಿತ್ತು. ವಿಶ್ವಸಂಸ್ಥೆಯನ್ನು ಧಿಕ್ಕರಿಸಿ ಈ ಸಾಹಸಕ್ಕಿಳಿಯಲು ಅಮೆರಿಕ ಮುಂದಾಗಿತ್ತು. ಮಧ್ಯ ಪ್ರಾಚ್ಯವನ್ನು ನಿಯಂತ್ರಿಸುವ ಅಮೆರಿಕದ ಬಯಕೆಗೆ

ಪುಟಿನ್ ಉಲಿದ ಶಾಂತಿಮಂತ್ರ ತಣ್ಣೀರೆರಚಿತು. ಭಾರಿ ಅವಘಡ ತಪ್ಪಿದ್ದಂತೂ ನಿಜ. ಸಿರಿಯದ ಮೇಲೇಕೆ ಅಮೆರಿಕದ ಕಣ್ಣು? ಸಿರಿಯ ಏಕೆ ಇಷ್ಟೊಂದು ರಾಸಾಯನಿಕ ದಾಸ್ತಾನು ಇಟ್ಟಿತ್ತು? ಈ ಪ್ರಶ್ನೆಗಳಿಗೆ ಉತ್ತರಿಸಲು ಸಿರಿಯದ ರಾಜಕೀಯ ಬೆಳವಣಿಗೆಗಳ ಕೆಲವು ಅಂಶಗಳಾದರೂ ಪ್ರಸ್ತಾವನಯೋಗ್ಯ.

ಸಿರಿಯ, ಅಮೆರಿಕಕ್ಕೆ ಸೆಡ್ಡು ಹೊಡೆಯುತ್ತಿದೆ ಎಂದೇ ಅಮೆರಿಕ ಮೊದಲಿನಿಂದಲೂ ಭಾವಿಸಿದೆ. ಇಸ್ರೇಲ್ ಮತ್ತು ಪ್ಯಾಲೆಸ್ಟೈನ್ ಘರ್ಷಣೆಯಲ್ಲಿ ಸಿರಿಯ ಯಾವಾಗ ಬೇಕಾದರೂ ಇಸ್ರೇಲ್ ಮೇಲೆ ಆಕ್ರಮಣ ಮಾಡಬಹುದೆಂಬ ಗುಮಾನಿ ಅಮೆರಿಕಕ್ಕೆ ಇದ್ದೇ ಇದೆ. ಬಹುತೇಕ ಅರಬ್ ರಾಷ್ಟ್ರಗಳು ಇಸ್ರೇಲ್ ಸರ್ಕಾರದೊಡನೆ ಶಾಂತಿಸಂಧಾನಗಳ ಮಾತುಕತೆಗೆ ಮುಂದಾದರೂ ಸಿರಿಯ ಮಾತ್ರ ಸೊಪ್ಪು ಹಾಕದೆ ಸೆಟೆದು ನಿಂತಿದೆ ಎಂಬುದೇ ಅಮೆರಿಕಕ್ಕಿರುವ ಕೋಪ. ೧೯೪೬ರಲ್ಲಿ ಸಿರಿಯ ಸ್ವತಂತ್ರ ದೇಶವಾಗಿ ಅಸ್ತಿತ್ವಕ್ಕೆ ಬಂದಾಗ, ಅಮೆರಿಕ ಮತ್ತು ಸಿರಿಯದ ಸಂಬಂಧ ಚೆನ್ನಾಗಿಯೇ ಇತ್ತು. ಟ್ರೂಮನ್ ಅಧಿಕಾರಕ್ಕೆ ಬಂದಾಗ ಇಸ್ರೇಲಿನ ಬೆಂಬಲಕ್ಕೆ ನಿಂತರು. ಸಿರಿಯಕ್ಕೆ ಅಮೆರಿಕದ ಮೇಲೆ ಸಹಜವಾಗಿಯೇ ದ್ವೇಷ ಹುಟ್ಟಿತ್ತು. ಸಿರಿಯ ಒಂದೇ ಅಲ್ಲ, ಅದರ ನೆರೆಯ ಇಸ್ಲಾಮಿಕ್ ದೇಶಗಳು ತಮ್ಮ ಮಿಲಿಟರಿ ವರ್ಧನೆಗೆ ರಷ್ಯದ ನೆರವನ್ನೇ ಬಯಸಿದ್ದವು. ಅರಬರು ಇಸ್ರೇಲನ್ನು ಬೆಂಬಲಿಸದಿರುವಂತೆ ಈಜಿಪ್ಟ್ ಮುಂದೆ ನಿಂತಾಗ ಸಿರಿಯ ಕುಮ್ಮಕ್ಕು ಕೊಟ್ಟಿತ್ತು. ಒಟ್ಟಿಗೇ ಸೇರಿ ಅರಬ್ ಗಣರಾಜ್ಯ ಸ್ಥಾಪಿಸಿಕೊಂಡಿತ್ತು, ಅದು ಊರ್ಜಿತವಾದ್ದು ಮೂರೇ ವರ್ಷ. ೧೯೬೭ರಲ್ಲಿ ಇಸ್ರೇಲ್ ಕೈಯಲ್ಲಿ ಸಿರಿಯ ದಯನೀಯ ಸೋಲನ್ನು ಅನುಭವಿಸಬೇಕಾಯಿತು. ಹಳೆಯ ದ್ವೇಷ ಹೊಗೆಯಾಡುತ್ತಲೇ ಹೋಯಿತು. ಅಮೆರಿಕ ಶಾಶ್ವತ ಶತ್ರುವಾಗಿ ಕಂಡಿತು. ಕ್ಲಿಂಟನ್, ಸಿರಿಯದ ಮನ ಒಲಿಸಿ, ಇಸ್ರೇಲ್–ಪ್ಯಾಲೆಸ್ಟೈನ್ ಸಂಘರ್ಷ ಕುಗ್ಗಿಸಿದರೂ ಅದೇನೂ ಫಲ ಕೊಡಲಿಲ್ಲ.

ಭೌಗೋಳಿಕವಾಗಿ ಸಿರಿಯ ಅಂಥ ದೊಡ್ಡ ದೇಶವೇನೂ ಅಲ್ಲ. ೧,೮೫,೪೭೫ ಚ.ಕಿ.ಮೀ. ವಿಸ್ತೀರ್ಣದ ಈ ದೇಶ ಕರ್ನಾಟಕಕ್ಕಿಂತ ಚಿಕ್ಕದು. ಆದರೆ ಅಂತಾರಾಷ್ಟ್ರೀಯ ರಾಜಕೀಯದಲ್ಲಿ ದೊಡ್ಡ ಸುದ್ದಿ ಮಾಡಿರುವ ದೇಶ. ಅಧ್ಯಕ್ಷೀಯ ವ್ಯವಸ್ಥೆಯ ಆಡಳಿತವಿದ್ದರೂ ಆಗಾಗ ಸಂಘರ್ಷ ಮಾತ್ರ ನಡೆಯುತ್ತಲೇ ಇರುತ್ತದೆ. ಅಧಿಕಾರದ ಚುಕ್ಕಾಣಿ ಹಿಡಿದಿರುವುದು ಮುಸ್ಲಿಂ ಪಂಗಡದಲ್ಲಿ ಅಷ್ಟೇನೂ ಎದ್ದುಕಾಣದ ಅಲವೈಟ್ ಪಂಗಡದವರು. ಇವರು ಅಷ್ಟೇನೂ ಸಂಪ್ರದಾಯಸ್ಥ ಮುಸ್ಲಿಮರಲ್ಲ. ೧೯೭೦ರಲ್ಲೇ ಹಫೀಜ್–ಅಲ್ ಅಸ್ಸಾದ್ ಆಡಳಿತ ವಹಿಸಿಕೊಂಡು ೨೦೦೦ದವರೆಗೆ ಅಧ್ಯಕ್ಷರಾಗಿದ್ದರು. ಅವರ ನಂತರದ ಸರದಿ ಅವರ ಮಗ ಬಷಾರ್–ಅಲ್ ಅಸ್ಸಾದ್ ಅವರದು. ಈ ಅವಧಿಯಲ್ಲಿ ಸಿರಿಯ ಅನೇಕ ಆಂತರಿಕ ಸಂಘರ್ಷಗಳಿಗೆ ತುತ್ತಾಗಿದೆ. ಕಟ್ಟಾ ಮುಸ್ಲಿಂ ಸಂಪ್ರದಾಯಸ್ಥರಲ್ಲದ ಅಲವೈಟ್‌ರ ವಿರುದ್ಧ ಬಹುಸಂಖ್ಯಾತರಾದ ಸುನ್ನಿ ಮುಸ್ಲಿಮರಿಗೆ ಮೊದಲಿನಿಂದಲೂ ಅಸಮಾಧಾನವಿತ್ತು. ದೇಶದ ಆರ್ಥಿಕ, ಸಾಮಾಜಿಕ ಏಳಿಗೆಯನ್ನು ಸರ್ಕಾರ ನಿರ್ಲಕ್ಷಿಸಿದೆ ಎಂಬ ಕಾರಣ ಒಡ್ಡಿ ದಂಗೆ ಎದ್ದಾಗ ಹಫೀಜ್–ಅಲ್ ಅಸ್ಸಾದ್, ಹಮಾ ಎಂಬ ಪ್ರಾಂತ್ಯದಲ್ಲಿ ಸಯನೈಡ್ ವಿಷವಾಯುವನ್ನು ತೂರಿಸಿ ೧೯೭೨ರಲ್ಲಿ ೧೮,೦೦೦ ಸುನ್ನಿ ಮುಸ್ಲಿಮರನ್ನು ಕೊಲ್ಲಿಸಿದ್ದ ಎಂಬ ಅಪಖ್ಯಾತಿ ಇತ್ತು. ಮಗನ ಕಾಲದಲ್ಲಿ ಇನ್ನೊಂದು ಸಂಘರ್ಷ. ಇದಾದದ್ದು ಮಾರ್ಚ್ ೨೦೧೧ರಲ್ಲಿ. ಆದದ್ದಿಷ್ಟು: ಶಾಲಾ ಮಕ್ಕಳು ಗೋಡೆಯ ಮೇಲೆ ಆಳುವ ಸರ್ಕಾರದ ವಿರುದ್ಧ ಭಿತ್ತಿ ಚಿತ್ರಗಳನ್ನು ಬರೆದರೆಂಬ ಕಾರಣಕ್ಕೆ ಸೆರೆ ಹಿಡಿದು ಕೆಲವು ಮಕ್ಕಳನ್ನು ಕೊಲ್ಲಿಸಿದ ಎಂಬ ಆಪಾದನೆ ಬಷಾರ್–ಅಲ್ ಅಸ್ಸಾದ್ ಅವರ ಮೇಲಿದೆ. ಇದರ ಹಿಂದೆಯೇ ಜನ ದಂಗೆ ಎದ್ದರು. ಏಪ್ರಿಲ್ ತಿಂಗಳಲ್ಲಿ ಸಿರಿಯ ಮಿಲಿಟರಿ ಪಡೆಗಳು ದಂಗೆಕೋರರ ಮೇಲೆ ಗುಂಡಿನ ದಾಳಿ ಮಾಡಿದವು. ಇವೆಲ್ಲದರ ಪರಿಣಾಮವೆಂದರೆ 'ಫ್ರೀ ಸಿರಿಯನ್ ಆರ್ಮಿ' ಎಂಬ ದೊಡ್ಡ ಪಡೆ ರಚನೆಯಾದದ್ದು. ಆದರೆ ನಿರ್ದಿಷ್ಟ ಸೂತ್ರವಿಲ್ಲದೆ ಅದು ದಿಕ್ಕುಗೆಟ್ಟಿತ್ತು. ಅಲ್ಲಿದ್ದವರು ಸ್ಥಳೀಯ ಬುಡಕಟ್ಟಿನವರು, ಸರ್ಕಾರದ ವಿರುದ್ಧ ಸಿಡಿದೆದ್ದ ಕೆಲವು ಪ್ರಜೆಗಳು, ಮಿಲಿಟರಿಯಿಂದ ಓಡಿಬಂದ ಸೈನಿಕರು. ಇವರೊಂದಿಗೆ ಜಿಹಾದಿಗಳೂ ಸೇರಿಕೊಂಡರು. ಕಕೇಷಿಯಸ್ ಪರ್ವತ ಪ್ರದೇಶದಿಂದ ಉಗ್ರವಾದಿಗಳು ಸೇರಿಕೊಂಡ ಮೇಲೆ ಪರಿಸ್ಥಿತಿ ಬಿಗಡಾಯಿಸಿತು. ಲತಾಕಿಯದಲ್ಲಿ ಅಲವೈಟರ ಏಳು ಹಳ್ಳಿಗಳನ್ನು ದಂಗೆಕೋರರು ಸರ್ವನಾಶ ಮಾಡಿದ್ದರು. ಸರ್ಕಾರವನ್ನು ಉರುಳಿಸುವ ನೆವದಲ್ಲಿ ದಂಗೆಕೋರರು ಅಮಾಯಕ ಸಾರ್ವಜನಿಕರನ್ನು ಕಾರ್‌ನಲ್ಲಿ ಬಾಂಬ್‌ಗಳನ್ನಿಟ್ಟು ಸ್ಫೋಟಿಸಿ ಕೊಂದರು. ಸರ್ಕಾರ ಮಿಲಿಟರಿ ದಾಳಿ ಮಾಡಿತು. ಸತ್ತವರಲ್ಲಿ ಈ ಎಲ್ಲ ಪ್ರತಿನಿಧಿಗಳೂ ಇದ್ದರು. ಈ ಅಂತರ್ಯುದ್ಧದಲ್ಲಿ ಒಂದು ಲಕ್ಷ ಜನ ಸಾವಿಗೀಡಾದರೆಂದು ಅಂದಾಜು. ಸಿರಿಯ ತೊರೆದು ಲೆಬನಾನ್‌ಗೆ ಹದಿನೈದು ಲಕ್ಷ ಮಂದಿ ಪಲಾಯನ ಮಾಡಿದರು. ಇಲ್ಲಿಯೇ ಸಿರಿಯದ ಈ ಯುದ್ಧ ಪರ್ವ ಮತ್ತೊಂದು ಅಧ್ಯಾಯ ತೆರೆದಿರುವುದು.

ದಂಗೆಯನ್ನು ಅಡಗಿಸಲು ಸರ್ಕಾರ ರಾಸಾಯನಿಕ ಅಸ್ತ್ರಗಳನ್ನು ಬಳಸಿರುವುದಕ್ಕೆ ಪುರಾವೆಗಳು ದೊರೆತಿವೆ. ಡಮಾಸ್ಕಸ್ ನಗರವೊಂದರಲ್ಲೇ ೨೦೧೩ರ ಆಗಸ್ಟ್ ತಿಂಗಳಲ್ಲಿ ೩೦೦ ಜನ ಸತ್ತರು. ಸಾಯುವ ಮೊದಲು ಬಾಯಲ್ಲಿ ನೊರೆ ಮೂಡಿತ್ತು, ನರಕೋಶಗಳ ಉರಿಯೂತವಾಗಿತ್ತು. ಪುಪ್ಪುಸದಲ್ಲಿ ಗುಳ್ಳೆಗಳೆದ್ದಿದ್ದವು. ಹಂತಹಂತವಾಗಿ ಉಸಿರು ಸಿಕ್ಕಿಹೋಗಿತ್ತು. ನರವೇದನೆಯ ಅನಿಲದಿಂದ ಸತ್ತಿರುವುದನ್ನು ವೈದ್ಯಕೀಯ ಪುರಾವೆಗಳು ಖಚಿತಪಡಿಸಿದವು. ಸರ್ಕಾರ ಅಲ್ಲಗಳೆಯುತ್ತ ಹೋಯಿತು, ಇದು ದಂಗೆಕೋರರ ಕೃತ್ಯವೆಂದು ಅವರತ್ತ ಬೊಟ್ಟುಮಾಡಿತು. ಹೊರಗಡೆಯವರು ಸಿರಿಯದ ಆಂತರಿಕ ಸಂಘರ್ಷದಲ್ಲಿ ತಲೆಹಾಕಿದರೆ ರಾಸಾಯನಿಕ ಯುದ್ಧ ಮಾಡಲೂ ಹಿಂಜರಿಯುವುದಿಲ್ಲ ಎಂದಿತು. ಅಮೆರಿಕ ತನ್ನ ತೋಳ್ಬಲ ತೋರಿಸಲು ಮುಂದಾಯಿತು. ಅಮೆರಿಕದ ಪ್ರವೇಶಕ್ಕೆ ಅಂತಾರಾಷ್ಟ್ರೀಯ ಮಟ್ಟದಲ್ಲೂ ಟೀಕೆಗಳಾದವು. ಈಗಲೂ ಚರ್ಚೆಗಳಾಗುತ್ತಿವೆ. ಅಮೆರಿಕ ರಾಜಕೀಯವಾಗಿ ಸ್ವತಂತ್ರ ರಾಷ್ಟ್ರವಾಗಿ ಅಸ್ತಿತ್ವಕ್ಕೆ ಬಂದಂದಿನಿಂದ ಈವರೆಗೆ ೭೦ ಯುದ್ಧಗಳನ್ನು ಮಾಡಿದೆ. ಅವುಗಳಲ್ಲಿ ಹತ್ತು ದೊಡ್ಡ ಪ್ರಮಾಣದವು. 'ಯುದ್ಧ ಎನ್ನುವುದು ನಮ್ಮ ರಕ್ತದಲ್ಲೇ ಇದೆ' ಎಂದು ಯುದ್ಧ ವಿಶ್ಲೇಷಕ ಪೌಲ್ ಪೆರೇರ್, ಇರಾಕ್ ಯುದ್ಧಾನಂತರ ನುಡಿದದ್ದನ್ನು ಈಗಲೂ ಉಲ್ಲೇಖಿಸುವವರಿದ್ದಾರೆ.

ನಾವು ಸಿರಿಯದ ಮೇಲೆ ಸೀಮಿತ ದಾಳಿ ನಡೆಸುತ್ತೇವೆಂದು ಒಬಾಮ ಹೇಳಿದಾಗ ಅಮೆರಿಕಕ್ಕಿದ್ದ ಯುದ್ಧದ ತೀಟೆ ಜಗತ್ತಿಗೆ ಜಾಹೀರಾಯಿತು. ಚೀನ

ಮತ್ತು ಇರಾನ್ ಮೌನವಹಿಸಿದವು. ರಷ್ಯದ ಪುಟಿನ್ ಮಾತ್ರ ಪುಟಿದೆದ್ದರು. ಹಾಗೆ ಯುದ್ಧ ಹೂಡುವುದಾದರೆ ಭಾರಿ ದಂಡ ತೆರಲೇಬೇಕಾಗುತ್ತದೆ ಎಂದು ಅಮೆರಿಕಕ್ಕೆ ಎಚ್ಚರಿಸಿದರು. ತಾನೇ ಸಂಧಾನಕ್ಕೆ ಮುಂದಾಗುವುದಾಗಿ ಹೇಳಿದರು. ವಿಶ್ವಸಂಸ್ಥೆಯ ತಂಡ ನಿಜಸ್ಥಿತಿಯನ್ನು ಸಿರಿಯದಲ್ಲಿ ಪರಿಶೀಲಿಸಲೂ ಬಿಡದೆ ಆ ತಂಡದ ಮೇಲೂ ಆಕ್ರಮಣವಾಯಿತು. ಅಂತಿಮವಾಗಿ ಪುಟಿನ್ ಸಿರಿಯದ ಅಧ್ಯಕ್ಷ ಬಷಾರ್ ಅವರನ್ನು ಒಪ್ಪಿಸಿ, ಆ ದೇಶದಲ್ಲಿನ ರಾಸಾಯನಿಕ ಅಸ್ತ್ರದ ತಾಣಗಳನ್ನು ವಿಶ್ವಸಂಸ್ಥೆಯ ತಂಡ ಪರಿಶೀಲಿಸಲು ಅನುಕೂಲಕರ ಪರಿಸ್ಥಿತಿ ನಿರ್ಮಿಸಿದರು. ಈಗ ಎಲ್ಲವೂ ಸ್ಪಷ್ಟ. ಹನ್ನೆರಡು ಜಾಗಗಳಲ್ಲಿ ಸಿರಿಯ ತನ್ನ ರಾಸಾಯನಿಕ ಅಸ್ತ್ರಗಳನ್ನು ಸಂಗ್ರಹಿಸಿರುವ ಜಾಗಗಳು ಪತ್ತೆಯಾಗಿವೆ. ಅಮೆರಿಕ, ರಷ್ಯಗಳ ನಂತರ ರಾಸಾಯನಿಕ ಅಸ್ತ್ರಗಳನ್ನು ಅತಿ ದೊಡ್ಡ ಪ್ರಮಾಣದಲ್ಲಿ ದಾಸ್ತಾನು ಮಾಡಿ ಕೊಂಡಿರುವುದು ಸಿರಿಯ ದೇಶವೇ. ಆ ದೇಶದಲ್ಲೇ ರಾಸಾಯನಿಕ ಅಸ್ತ್ರಗಳ ತಯಾರಿಕೆ ನಡೆದಿದೆ. ಇರಾನ್ ಮತ್ತು ರಷ್ಯ ಇದಕ್ಕೆ ಕುಮ್ಮಕ್ಕು ಕೊಟ್ಟಿವೆ ಎನ್ನುವ ಅಸಮಾಧಾನವೂ ಬೇರೆ ದೇಶಗಳಿಗಿದೆ. ಎರಡನೇ ಬಾರಿ ಯುದ್ಧವಾದಾಗ ಇರಾಕಿನಿಂದ ದೊಡ್ಡ ಪ್ರಮಾಣದ ರಾಸಾಯನಿಕ ಅಸ್ತ್ರಗಳನ್ನು ಕಳ್ಳಸಾಗಣೆ ಮಾಡಿ ಸಿರಿಯ ತನ್ನ ಅಸ್ತ್ರ ಭಂಡಾರವನ್ನು ಬೆಳೆಸಿದೆ ಎಂಬ ಸುದ್ದಿಯೂ ಚಾಲ್ತಿಯಲ್ಲಿದೆ.

ಹಾಗಿದ್ದಲ್ಲಿ ಸಿರಿಯದ ಯುದ್ಧಾಸ್ತ್ರ ಸಾಮರ್ಥ್ಯ ಎಷ್ಟು? ಬಯಲಾಗಿರುವ ಸತ್ಯ ಇದು : ಸಿರಿಯದ ರಾಸಾಯನಿಕ ಅಸ್ತ್ರವೆಂದರೆ ಬಹುತೇಕ ಅದು ಅನಿಲ ರೂಪದ್ದು. ಇಸ್ರೇಲ್, ಪರಮಾಣು ಬಾಂಬು ಹಾಕಿದರೆ, ಸಿರಿಯ ರಾಸಾಯನಿಕ ದಾಳಿ ಮಾಡಲು ಉದ್ದೇಶಿಸಿದೆ ಎಂಬ ವಿಶ್ಲೇಷಣೆಯೂ ನಡೆಯುತ್ತಿದೆ. ರಾಸಾಯನಿಕ ಅಸ್ತ್ರ ತಯಾರಿಸಲು ಇದೇ ಪ್ರೇರಣೆ ಅಥವಾ ಭಯ. ಆಕಾಶದ ಮೂಲಕ ಅಸ್ತ್ರವನ್ನು ಪ್ರಯೋಗಿಸಲು ಸಾವಿರಾರು ವಾಯುವಿಕ ಬಾಂಬುಗಳನ್ನು ಸಿರಿಯ ಉತ್ಪಾದಿಸಿದೆ. ರಾಸಾಯನಿಕಗಳನ್ನು ಉದ್ದಿಷ್ಟ ಗುರಿಗೆ ತಲುಪಿಸುವಲ್ಲಿ ಅತಿ ಸಾಮರ್ಥ್ಯದ ವಿವಿಧ ಬಗೆಯ ಕ್ಷಿಪಣಿಗಳಿವೆ. ಸರಿನ್ ಎಂಬ ರಾಸಾಯನಿಕದಷ್ಟೇ ನರವೇದನಕಾರಿಯೆಂದು ಕುಖ್ಯಾತಿ ಗಳಿಸಿರುವ ವಿಎಕ್ಸ್ ಎಂಬ ರಾಸಾಯನಿಕವನ್ನು ಸಾಕಷ್ಟು ದಾಸ್ತಾನಿಟ್ಟಿದೆ. ಯುದ್ಧ ತಂತ್ರದ ಇನ್ನೊಂದು ಯೋಜನೆಯಾಗಿ ಸಾಸಿವೆಯಿಂದ ತಯಾರಿಸುವ ಅನಿಲದಿಂದ (ಮಸ್ಟರ್ಡ್ ಗ್ಯಾಸ್) ತುಂಬಿದ ರಾಕೆಟ್ ಉಡಾವಣೆಯ ತಂತ್ರವನ್ನು ಸಿರಿಯ ಸಾಧಿಸಿದೆ. ಇದರ ಜೊತೆಗೆ ಜೈವಿಕಾಸ್ತ್ರ, ವಿಶೇಷವಾಗಿ ಆಂಥ್ರಾಕ್ಸ್ ಬೀಜಕಗಳು, ಜೈವಿಕ ನಂಜು ಎನ್ನಿಸಿರುವ ಬಾಟುಲಿನಮ್ ಮತ್ತು ರಿಸಿನ್‌ಅನ್ನು ಪ್ರಯೋಗಿಸುವ ಸಾಮರ್ಥ್ಯ, ಸಾಮಗ್ರಿ ಎರಡೂ ಈ ದೇಶಕ್ಕಿದೆ. ಜೊತೆಗೆ ಪರಮಾಣು ಅಸ್ತ್ರ ತಯಾರಿಕೆಗೆ ಅದು ಮಾಡಿರುವ ಸಿದ್ಧತೆಗಳೂ ಕೂಡ ಈಗ ಜಗತ್ತಿನ ಗಮನಕ್ಕೆ ಬಂದಿದೆ. ಇರಾನ್ ಮೊದಲಿನಿಂದಲೂ ಸಿರಿಯಕ್ಕೆ ಈ ನಿಟ್ಟಿನಲ್ಲಿ ನೆರವು ನೀಡುತ್ತಿರುವುದನ್ನು ಪಶ್ಚಿಮ ರಾಷ್ಟ್ರಗಳು ಬಲು ಸೂಕ್ಷ್ಮವಾಗಿ ಗಮನಿಸುತ್ತಿವೆ. ಸಿರಿಯದಲ್ಲಿ ಸದ್ಯ ೧೩೦೦ ಟನ್ನು ರಾಸಾಯನಿಕ ಅಸ್ತ್ರವಿರುವುದು ಖಚಿತವಾಗಿದೆ.

ಸಿರಿಯ, ರಾಸಾಯನಿಕ ಅಸ್ತ್ರಗಳನ್ನು ಪ್ರಯೋಗಿಸದಿರಲು, ರಾಜಕೀಯ ನಾಯಕರ ಮಾನಸಿಕ ಸ್ಥೈರ್ಯ ಕುಂದಿಸಲು ೨೦೧೨ರ ಮೇ ತಿಂಗಳಲ್ಲಿ

ಕಾವ್ಯಲೋಕ

# ಬೆಳಕಿನ ಕೂಲಿ



ಇಡೀ ನನ್ನ ಬದುಕಿನ
ದುಡಿತವೆಂದರೆ
ಒಂದಷ್ಟು ಬೆಳಕು

ಅದೇ ನನ್ನ ಹಾಸಿಗೆ
ಹೊದಿಕೆ ನನಗೆ
ಸೂರು ಮನೆಮಾರು

ನನ್ನ ಮಡದಿ ಮಕ್ಕಳು
ಬೆಳಕಿನ ಸಂಬಂಧಿಗಳು

ನಾವು ಉಣ್ಣುವುದು ಉಡುವುದು
ಬಾಯಾರಿದಾಗ ಗಟಗಟ
ಕುಡಿಯುವುದು ಬೆಳಕನ್ನೇ

ದಿನವೂ ಸೂರ್ಯನ
ಮಳಿಗೆಯಿಂದ
ಬೆಳಕಿನ ಮೂಟೆ ಹೊರುವುದು
ನನ್ನ ಕಾಯಕ
ಹೊತ್ತು ಮುಳುಗಿದಾಗ

ಚಂದ್ರನಿಂದ ಕಡಪಡೆದಾದರೂ
ತರುತ್ತೇನೆ
ನಾನು ಬೆಳಕಿನಂಗಡಿಯ ಸೇವಕ

ಅದನ್ನೇ ಅಳೆದು ಸುರಿದು
ಮಾರುತ್ತೇನೆ ಒಂದು
ಮಂದಹಾಸಕ್ಕೆ ಒಂದು
ಮುಗ್ಧ ನಗುವಿಗೆ
ದುಃಖಗಳನ್ನು ಮರಳಿ ಕಳಿಸಲಾರೆ
ಕಣ್ಣೀರಿಗೂ ಇದೆ ಬಡ್ಡಿರಹಿತ
ಬೆಳಕಿನ ಸಾಲ

ನನ್ನನ್ನು ಹೊತ್ತೊಯ್ಯುವಾಗ
ಶ್ವಾನನಿಷ್ಠೆ ತೋರುವ ಈ
ಬೆಳಕು ನನ್ನ ಹಿಂಬಾಲಿಸಿದರೆ
ಶಪಿಸದಿರಿ

ಎಲ್ಲಾದರೂ ಇರಲಿ
ಈರೇಳು ಲೋಕವಾದರೂ
ಕತ್ತಲಿದ್ದರೆ ಅಲ್ಲಿ ನಾನು
ಬೆಳಕಿನ ಕೂಲಿ

**ಮೂಡ್ನಾಕೂಡು ಚಿನ್ನಸ್ವಾಮಿ**
ಚೀಫ್ ಎಕೌಂಟ್ಸ್ ಆಫೀಸರ್
ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ
ಕೇಂದ್ರ ಕಚೇರಿ, ಬೆಂಗಳೂರು – ೫೬೦ ೦೨೭

ಜೋರ್ಡಾನ್ ಮತ್ತು ಅಮೆರಿಕ ಒಟ್ಟಾಗಿಯೇ ಮಿಲಿಟರಿ ತಾಲೀಮು ಮಾಡಿದ್ದೂ ಉಂಟು. ಇದರಲ್ಲಿ ಅಮೆರಿಕದ ಮಿಲಿಟರಿಯಿಂದ ೧೨,೦೦೦ ಮಂದಿ ಭಾಗವಹಿಸಿದ್ದರು. ಕೆಲವು ಅರಬ್ ರಾಷ್ಟ್ರಗಳೂ ಜೊತೆಜೊತೆಗೆ ಹೆಜ್ಜೆ ಹಾಕಿದ್ದವು. ವಿಶ್ವಸಂಸ್ಥೆಯ ಪಡೆಯನ್ನು ಸಿರಿಯದ ರಾಸಾಯನಿಕ ಅಸ್ತ್ರಗಳ ನೆಲೆ ಪರಿಶೀಲಿಸಲು ಅವಕಾಶ ಕೊಟ್ಟಮೇಲೆ ಈ ತಾಲೀಮುಗಳೆಲ್ಲ ತಣ್ಣಗಾದವು. ರಾಸಾಯನಿಕ ಅಸ್ತ್ರಗಳನ್ನು ಮೊದಲು ಬಳಕೆಗೆ ತಂದ ಕುಖ್ಯಾತಿ ಜರ್ಮನಿಗಿದೆ. ಮೊದಲ ಜಾಗತಿಕ ಸಮರದಲ್ಲಿ ರಾಸಾಯನಿಕಾಸ್ತ್ರಗಳಿಂದ ಸತ್ತವರ ಸಂಖ್ಯೆ ೯೦,೦೦೦. ಅದರಿಂದ ಊನವಾದವರ ಸಂಖ್ಯೆ ಹದಿಮೂರು ಲಕ್ಷ. ಇಲ್ಲೊಂದು ಸಂಗತಿ ಉಲ್ಲೇಖನಾರ್ಹ. ಮಿತ್ರ ರಾಷ್ಟ್ರ ಪಡೆಯನ್ನು ಎದುರಿಸಲು ಜರ್ಮನಿ ೧೯೧೫ರ ಏಪ್ರಿಲ್‌ನಲ್ಲಿ ಬೆಲ್ಜಿಯಂನ ವೈಪ್ರೆಸ್ ಬಳಿಯ ಲ್ಯಾಂಗ್‌ಮಾರ್ಕ್ ಎಂಬ ಪಟ್ಟಣದ ಬಳಿ ಟ್ರೆಂಚಿನಲ್ಲಿ ಅಡಗಿ ೬,೦೦೦ ಸಿಲಿಂಡರುಗಳ ಮುಚ್ಚಳ ತೆಗೆದು ಗಾಳಿ ಬಂದಾಗ ಶತ್ರು ಪಡೆಯತ್ತ ತೂರಿತ್ತು. ಅದರಲ್ಲಿದ್ದದ್ದು ದ್ರವರೂಪದ ಕ್ಲೋರಿನ್. ಬೆಲ್ಜಿಯಂಅನ್ನು ಆಕ್ರಮಿಸಿ ಮುಂದೆ ಫ್ರಾನ್ಸ್‌ಗೆ ನುಗ್ಗುವ ಜರ್ಮನ್ ಯೋಜನೆಯನ್ನು ವೈಪ್ರೆಸ್ ನಗರ ತಡೆದಿತ್ತು. ರಾಸಾಯನಿಕ ಮೋಡಗಳು ಮೆಲ್ಲಗಿಳಿದು ಐದು ಸಾವಿರ ಸೈನಿಕರ ಬಾಯಲ್ಲಿ ನೊರೆ ತಂದವು, ಏದುಸಿರುಬಿಡುತ್ತ ಬಹುತೇಕ ಸೈನಿಕರು ಇದ್ದಲ್ಲೇ ಸಾವನ್ನಪ್ಪಿದ್ದರು. ರಾಸಾಯನಿಕ ಅಸ್ತ್ರಗಳ ಬಳಕೆಗೆ ಇದು ಮೊದಲ "ಜಯ". ಆದರೆ ಮನುಕುಲದ ಅವನತಿಗೆ ಇದೊಂದು ಘೋರ ಪೀಠಿಕೆ. ಇದರ ಹಿಂದೆಯೇ ಪ್ರಾರಂಭ ರಾಸಾಯನಿಕ ವಿಷಗಳ ಮಹಾಪೂರದ ಉತ್ಪಾದನೆ. ಫಾಸ್‌ಜೀನ್, ಸಾಸಿವೆ ಅನಿಲ, ಸಯನೈಡ್ ಒಂದೊಂದೂ ಉದ್ದಿಷ್ಟ ಗುರಿ ಸಾಧಿಸಿದವು; ಅಗೋಚರ ಶತ್ರುಗಳಾಗಿ ಕಾಡಿದವು. ಬುಲೆಟ್‌ಗಿಂತ ತೀವ್ರವಾದ ಮಾರಕಾಸ್ತ್ರಗಳು ಲ್ಯಾಬ್‌ಗಳಿಂದ ಹೊರಬಂದವು. ಇಡೀ ಜಗತ್ತು ವಿಷಪ್ರಾಶನದಿಂದ ಭಾರಿ ಆಪತ್ತಿಗೆ ಗುರಿಯಾಗುತ್ತದೆನ್ನುವ ಸತ್ಯ ಮನದಟ್ಟಾಗುತ್ತಲೇ ೧೯೨೫ರ ಮೇ ತಿಂಗಳು ಜಿನಿವಾದಲ್ಲಿ ೩೮ ರಾಷ್ಟ್ರಗಳು, ಲೀಗ್ ಆಫ್ ನೇಷನ್ಸ್ ಅಡಿ ಸಮಾವೇಶಗೊಂಡು ಉತ್ಪಾದನೆಯನ್ನು ತಗ್ಗಿಸಲು ಒಮ್ಮತಕ್ಕೆ ಬಂದವು. ಆದರೆ ಜಪಾನ್ ಮತ್ತು ಅಮೆರಿಕ ಸಹಿ ಹಾಕಲು ಹಿಂದೆಗೆದವು. ಒಂದು ದೇಶದ ಮೇಲೆ ಇನ್ನೊಂದರ ಗುಮಾನಿ ಯೂರೋಪಿನಲ್ಲಿ ಸದ್ದಿಲ್ಲದೆ ಕೆಲಸ ಮಾಡಿತ್ತು. ಈ ಒಪ್ಪಂದದಲ್ಲಿ ರಾಸಾಯನಿಕ ಅಸ್ತ್ರಗಳ ಉತ್ಪಾದನೆಗೆ ಮಿತಿ ಹಾಕಿತ್ತೇ ವಿನಾ ಉತ್ಪಾದನೆಯ ಅವಕಾಶವನ್ನು ಕಿತ್ತುಕೊಂಡಿರಲಿಲ್ಲ. ಈ ಲಾಭ ಬಳಸಿಕೊಂಡು ೨೦ ದೇಶಗಳು ಮುಂದೆ 'ರಾಸಾಯನಿಕ ಕ್ಲಬ್'ಅನ್ನು ರೂಪಿಸಿಕೊಂಡವು. ಪರಿಣಾಮವೆಂದರೆ ೨೦ನೇ ಶತಮಾನದ ಕೊನೆಯ ಹೊತ್ತಿಗೆ ಜಗತ್ತಿನ ಎಲ್ಲ ದೇಶಗಳ ಒಟ್ಟಾರೆ ರಾಸಾಯನಿಕ ಅಸ್ತ್ರದ ಉತ್ಪಾದನೆ ೫೦ ಕೋಟಿ ಮೆಟ್ರಿಕ್ ಟನ್‌ಗೆ ಏರಿತ್ತು.

ಜಿನಿವಾ ಒಪ್ಪಂದ ತಾಕತ್ತು ಕಳೆದುಕೊಳ್ಳುತ್ತ ಬಂತು. ಅದು ಪರಿಪಾಲಿಸಲೇಬೇಕಾದ ಒಪ್ಪಂದವಲ್ಲವೆಂದು ಬಹಿರಂಗವಾಗಿ ಸಾರದಿದ್ದರೂ ಇಟಲಿ ೧೯೩೦ರಲ್ಲಿ ಲಿಬಿಯದ ಮೇಲೆ, ೧೯೩೫ರಲ್ಲಿ ಇಥಿಯೋಪಿಯದ ಮೇಲೆ ಧಾರಾಳವಾಗಿ ಈ ಅಸ್ತ್ರವನ್ನು ಬಳಸಿತ್ತು. ೧೯೩೭ರಿಂದ ೪೫ರವರೆಗೆ ಜಪಾನ್ ಚೀನದ ಮೇಲೂ ಇಂಥದೇ ದಾಳಿಯನ್ನು ಮಾಡಿತ್ತು. ೧೯೬೦ರ ದಶಕದಲ್ಲಿ ಈಜಿಪ್ಟ್, ಯೆಮನ್ ಮೇಲೆ ದಾಳಿ ಮಾಡಿದ್ದೂ ಈ ಅಸ್ತ್ರದಿಂದಲೇ. ಅಮೆರಿಕ, ವಿಯೆಟ್ನಾಂ ಮೇಲೆ ೭೬,೫೦೦,೦೦೦ ಲೀಟರ್ ಫಿನಾಕ್ಸಿಲ್ ಎಂಬ ಕಳೆನಾಶಕ ರಾಸಾಯನಿಕವನ್ನು ಸಿಂಚನಮಾಡಿ ನಾಗರಿಕತೆಯನ್ನೇ ನಾಚುವಂತೆ ಮಾಡಿತ್ತು. ಜಿನಿವಾ ಒಪ್ಪಂದಕ್ಕೆ ಸಿರಿಯ ಬದ್ಧವಾಗಿರಲೂ ಇಲ್ಲ, ೧೯೯೩ರ ರಾಸಾಯನಿಕ ಅಸ್ತ್ರ ಸಮ್ಮೇಳನದಲ್ಲಿ ತೆಗೆದುಕೊಂಡ ನಿರ್ಣಯಗಳಿಗೆ ಬದ್ಧವಾಗಬೇಕಾದ ಅನಿವಾರ್ಯತೆಯನ್ನೂ ಅದು ತೋರಲಿಲ್ಲ. ಇದರ ಪರಿಣಾಮವೇ ನೀವು ಈ ಲೇಖನದ ಆರಂಭದಲ್ಲಿ ಓದಿದ ಭಯಾನಕ ಸ್ಥಿತಿ ಎದುರಾಗಿರುವುದು. ಅಪನಂಬಿಕೆಯೇ ೨೧ನೇ ಶತಮಾನದ ಮಂತ್ರವೆಂದು ಯಾವ ದೇಶವೂ ಘೋಷಿಸಿಲ್ಲ, ಆದರೆ ಸದ್ದಿಲ್ಲದೆ ಒಪ್ಪಿಕೊಂಡಿವೆ.

**ಟಿ. ಆರ್. ಅನಂತರಾಮು**
ನಂ. ೫೩೪, ೭೦ನೇ ಅಡ್ಡರಸ್ತೆ, ೧೪ನೇ ಮುಖ್ಯರಸ್ತೆ
ಕುಮಾರಸ್ವಾಮಿ ಬಡಾವಣೆ ೧ನೇ ಹಂತ, ಬೆಂಗಳೂರು – ೫೬೦ ೦೭೮

ದಲಿತ ಮಹಿಳೆಯರು ರಾಷ್ಟ್ರಮಟ್ಟದಲ್ಲೂ ಪ್ರಾದೇಶಿಕ ನೆಲೆಗಳಲ್ಲೂ ತಮ್ಮದೇ ಆದ ಸ್ವಾಯತ್ತ ಸಂಘಟನೆಗಳನ್ನು ರೂಪಿಸಿಕೊಂಡಿರುವುದು, ಅವುಗಳ ಮೂಲಕ ಸ್ಥಳೀಯವಾದ ವಿವಿಧ ಸಮಸ್ಯಾತ್ಮಕ ಸನ್ನಿವೇಶಗಳಲ್ಲಿ ನಡೆಯುವ ಸ್ತ್ರೀವಾದಿ ಹೋರಾಟಗಳಲ್ಲಿ ತಮ್ಮ ಅಸ್ಮಿತೆಯ ಸಮರ್ಥನೆಯನ್ನು ಮಾರ್ದನಿಸುವುದು ಇವತ್ತಿನ ಗಮನಾರ್ಹ ವಿದ್ಯಮಾನವಾಗಿದೆ. ದಲಿತ ಮಹಿಳೆಯರು ತಮ್ಮದೇ ಆದ ಸಿದ್ಧಾಂತ ಹಾಗೂ ಹೋರಾಟದ ತಂತ್ರಗಳನ್ನು ಜೆಂಡರ್ ಪ್ರಶ್ನೆಗಳಿಗೆ ಹೊಂದಿಕೊಂಡಂತೆ ರೂಪಿಸಿಕೊಳ್ಳುವ ಬಗ್ಗೆ ದಲಿತ ಸ್ತ್ರೀವಾದಿಗಳು ಕರೆ ನೀಡುತ್ತಾರೆ. ಒಟ್ಟಾರೆಯಾಗಿ ಭಾರತದಲ್ಲಿ ಹೊಮ್ಮಿ, ಬೆಳೆದ ಸ್ತ್ರೀವಾದಿ ಚಳವಳಿಯು ಮಹಿಳೆಯರನ್ನೂ ಅವರ ಬದುಕುಗಳನ್ನೂ ಅರ್ಥಮಾಡಿಕೊಳ್ಳುತ್ತಾ ಬಂದಂಥ ಕ್ರಮವು ಕೆಲವೇ ಆಯ್ದ ಮಹಿಳಾ ವಲಯಗಳಿಗಷ್ಟೇ ಆದ್ಯತೆ ನೀಡಿದುದಾಗಿದೆ. ಈ ಚಿಂತನೆಯು ಮಹಿಳೆಯರ ಜೀವನದ ಸಂರಚನೆಗಳನ್ನು ಜಾತಿಯು  ಹೇಗೆ ಶೋಷಣೆಯ ಹೆಚ್ಚಳದತ್ತ ಉಬ್ಬಿಸಿರುತ್ತದೆ ಎಂಬ ಮಹತ್ತರವಾದ ವಾಸ್ತವಾಂಶವನ್ನು ತನ್ನೊಳಕ್ಕೆ ತೆಗೆದುಕೊಳ್ಳಲಿಲ್ಲ. ಭಾರತದ ಬಹು ಸಾಂಸ್ಕೃತಿಕ ಪರಿಸ್ಥಿತಿಗಳ ಸಂದರ್ಭದಲ್ಲಿ ಪಿತೃಪ್ರಾಧಾನ್ಯದ ಯಾಜಮಾನ್ಯವು ಕ್ರಿಯಾಶೀಲವಾಗಿರುವ ರೀತಿಯಲ್ಲಿ ಸ್ವರೂಪ ಮತ್ತು ಗುಣಾತ್ಮಕ ಅಂತರಗಳಿರುತ್ತವೆ.

# ಭಾರತದಲ್ಲಿ ಸ್ತ್ರೀವಾದಿ ಚಳವಳಿ ಮತ್ತು ದಲಿತ ಮಹಿಳಾ ಪ್ರಶ್ನೆ



**ಭಾ**ರತದ ಸ್ತ್ರೀವಾದಿ ಚಳವಳಿಯ ಬಗ್ಗೆ ಇರುವ ತುಂಬ ಗಂಭೀರವಾದ ಆರೋಪ ಎಂದರೆ ಅದು ಜಾತಿಪದ್ಧತಿಯನ್ನು, ಜೆಂಡರ್ ಜೊತೆಗಿನ ಜಾತಿಯ ಆಂತರಿಕ ಸಂಬಂಧವನ್ನು ಪರಿಗಣಿಸದೆ ಎಲ್ಲಾ ಮಹಿಳೆಯರ ಅಸ್ಮಿತೆ ಎಂಬುದನ್ನು ಏಕಶಿಲಾಕಾರದಲ್ಲಿ ಪ್ರತಿಪಾದಿಸುತ್ತದೆ ಎನ್ನುವುದು. ಎಲ್ಲಾ ಮಹಿಳೆಯರು ಎನ್ನುವಾಗ ಅಲ್ಲಿ ದಲಿತರು, ಬುಡಕಟ್ಟುಗಳು, ಕುಲಗಳು ಮುಂತಾದ ಕೆಳಸ್ತರೀಯರೂ ಧಾರ್ಮಿಕ ಅಲ್ಪಸಂಖ್ಯಾತರೂ ಸೇರಿರುತ್ತಾರೆ ಎಂಬ ಸಾಮಾನ್ಯ ಗ್ರಹಿಕೆ ಇರುತ್ತದೆ. ಆದರೆ ಈ ವಿವಿಧ ಸ್ತರಗಳ ಮಹಿಳೆಯರನ್ನು ಸ್ತ್ರೀವಾದಿ ಚಳವಳಿಯು ಸಂಬೋಧಿಸುತ್ತದೆ ಎಂಬುದು ಒಂದು ತೋರಿಕೆಯಷ್ಟೆ. ವಾಸ್ತವದಲ್ಲಿ ಅದು ಮೇಲುಜಾತಿಗಳ ಮಹಿಳೆಯರು ಬ್ರಾಹ್ಮಣವಾದಿ ಪಿತೃಪ್ರಾಧಾನ್ಯದ ವಿರುದ್ಧವಾಗಿ ಪ್ರತಿಭಟಿಸುವ ಚಳವಳಿಯಾಗಿದೆ. ಜೆಂಡರ್ ಎಂಬುದನ್ನು ತಳಹದಿಯಾಗಿಟ್ಟು ಪಿತೃಸಾಂಸ್ಕೃತಿಕ ಪುರುಷ ಪ್ರಾಬಲ್ಯ, ಬಂಡವಾಳಶಾಹಿ ತಾತ್ವಿಕತೆಯ ಅಡಿಯಲ್ಲಿ ಮಹಿಳೆಯರೆಲ್ಲರ ಮೇಲಿನ ಶೋಷಣೆ, ದಮನಗಳನ್ನು ಅದು ಪ್ರಶ್ನಿಸುತ್ತದೆ. ಆದರೆ ಶ್ರೇಣೀಕೃತ ಜಾತಿವ್ಯವಸ್ಥೆಯು ಮಹಿಳೆಯರ ಶೋಷಣೆಗಳ ಸ್ವರೂಪ ಹಾಗೂ ಪ್ರಮಾಣಗಳನ್ನು ಭಿನ್ನ ಭಿನ್ನವಾಗಿ ರೂಪಿಸುತ್ತಿರುತ್ತದೆ. ಆದುದರಿಂದ ಬಹುಬಗೆಯ ಸಾಂಸ್ಕೃತಿಕ ಸಮುದಾಯಗಳ ಬಹುರೂಪಿ ಪಿತೃಪ್ರಾಧಾನ್ಯಗಳ ಅಡಿಯಲ್ಲಿ ಮಹಿಳೆಯರೆಲ್ಲರ ಶೋಷಣೆಗಳ ಸಂಕೀರ್ಣವೂ ಜಟಿಲವೂ ಆದ ಸ್ವರೂಪವನ್ನು ಸ್ತ್ರೀವಾದಿ ಚಳವಳಿಯು ಲಕ್ಷ್ಯಕ್ಕೆ ತೆಗೆದುಕೊಳ್ಳಲೇಬೇಕು ಎನ್ನುವ ವಾದವು ಕಳೆದ ೧೦-೧೫ ವರ್ಷಗಳಲ್ಲಿ ಬಲಗೊಳ್ಳುತ್ತಾ ಬಂದಿದೆ. ಸ್ತ್ರೀವಾದಿ ಚಿಂತನೆಯಲ್ಲಿ ಈ ನಿಟ್ಟಿನಲ್ಲಿ ಸಾಕಷ್ಟು ಬದಲಾವಣೆಗಳನ್ನು ಉಂಟುಮಾಡಿರುವುದು ಈ ಜೆಂಡರ್-ಜಾತಿಗಳ ಅಂತರ್‌ಸಂಬಂಧದ ಪ್ರಶ್ನೆಯಾಗಿದೆ. ಈ ನಿಟ್ಟಿನಲ್ಲಿ ಹೆಚ್ಚಿನ ಸಂಶೋಧನೆಗಳನ್ನು ಅಕಾಡೆಮಿಕ್ ವಿದ್ವಾಂಸರೂ ಸಾಮಾಜಿಕ ಹೋರಾಟನಿರತರೂ ಕೈಗೊಳ್ಳುತ್ತಾ ಬಂದಿದ್ದಾರೆ. ಅದರ ಫಲವಾಗಿ ವಿಪುಲವಾದ ಮಾಹಿತಿ ಸಾಹಿತ್ಯವೂ ಹೊರ ಬಂದಿರುತ್ತದೆ. ಈ ಬಗೆಯ ಬದಲಾವಣೆ ಹಾಗೂ ಸಂಶೋಧನೆ, ಚರ್ಚೆಗಳಿಗೆ ಮೂಲ ಕಾರಣ ದಲಿತ ಮಹಿಳೆಯರ ಸ್ವಸಮರ್ಥನೆಯ ಚಳವಳಿಯ ಚರಿತ್ರೆ.

೧೯೯೦ರಲ್ಲಿ ವಿ. ಪಿ. ಸಿಂಗ್ ಸರ್ಕಾರವು ಮಂಡಲ್ ಆಯೋಗದ ವರದಿಯ ರೆಕಮೆಂಡೇಶನ್‌ಗಳನ್ನು ಜಾರಿಗೊಳಿಸಲು ಯತ್ನಿಸಿದಾಗ ಸಮಾಜದ ಬಲಿಷ್ಠ ಸಮುದಾಯಗಳು ಗುಂಪುಗಟ್ಟಿ ಪ್ರಬಲವಾಗಿ ಪ್ರತಿಭಟಿಸಿದವಷ್ಟೆ. ಆ ವಿರೋಧಕ್ಕೆ ಪ್ರತಿಯಾಗಿ ದಲಿತ ಸಂಘಟಿತ ಗುಂಪುಗಳು ಆತ್ಮಸಮರ್ಥನೆಯ ಹೋರಾಟಕ್ಕೆ ತೊಡಗಿದವು. ಆ ಸ್ವಸಮರ್ಥನೆಯ ಹೋರಾಟದ ಒತ್ತಡದಲ್ಲಿ ದಲಿತ ಮಹಿಳೆಯರೂ ಪ್ರತ್ಯೇಕವಾಗಿ ಸಂಘಟಿತರಾಗಿದ್ದರು. ರಾಷ್ಟ್ರಮಟ್ಟದಲ್ಲೂ ಪ್ರಾದೇಶಿಕ ಮಟ್ಟದಲ್ಲೂ ಅನೇಕ ದಲಿತ ಮಹಿಳಾ ಸಂಘಟನೆಗಳು ಹೊಮ್ಮಿಬಂದವು.

೧೯೯೪ರಲ್ಲಿ ಅಖಿಲ ಭಾರತ ದಲಿತ ಮಹಿಳಾ ವೇದಿಕೆ (ಎ.ಐ.ಡಿ.ಡಬ್ಲ್ಯು.ಎಫ್.) ೧೯೯೫ರಲ್ಲಿ ರಾಷ್ಟ್ರೀಯ ದಲಿತ ಮಹಿಳಾ ಫೆಡರೇಷನ್

**ಡಾ|| ಬಿ. ಎನ್. ಸುಮಿತ್ರಾಬಾಯಿ**

(ಎನ್.ಎಫ್.ಡಿ.ಡಬ್ಲ್ಯು.) ಮತ್ತು ಏಕತೆಗಾಗಿ ದಲಿತರು (Dalit Solidarity) ಎಂಬ ಸಂಘಟನೆಗಳು ಸ್ಥಾಪನೆಗೊಂಡವು.

ದಲಿತ ಮಹಿಳೆಯರು ರಾಷ್ಟ್ರಮಟ್ಟದಲ್ಲಿ ಸಂಘಟನೆಗೊಂಡದ್ದನ್ನು ಬೆಂಬಲಿಸಿ ರಾಜನೈತಿಕ ವಿಜ್ಞಾನಿ ಪ್ರೊ॥ ಗೋಪಾಲಗುರು ಅವರು 'Dalit Women Speak Differently' ಎಂಬ ಅಗ್ರಲೇಖನವನ್ನು ಬರೆದರು. ಅದು ಪ್ರಚಂಡವಾದ-ವಿವಾದಗಳ ಅಲೆಯನ್ನೆಬ್ಬಿಸಿದ ಲೇಖನವಾಯಿತು. ಮಹಿಳೆಯರ ಶೋಷಣೆಯಲ್ಲಿ ಜಾತಿಯ ತಳಹದಿ ಎಷ್ಟು ಇದೆ ಎಂಬುದನ್ನು ಸ್ತ್ರೀವಾದವು ಏಕೆ ಲೆಕ್ಕಕ್ಕೆ ತೆಗೆದು ಕೊಂಡಿಲ್ಲ ಎಂದು ದಲಿತ ಮಹಿಳೆಯರು ಪ್ರಶ್ನಿಸಿದ್ದು, ಕೇವಲ ಮೇಲುಜಾತಿಯ ಮಹಿಳೆಯರೇ ನಡೆಸುವ ಆ ಅಂಥ ಚಳವಳಿಗೆ ದಲಿತ ಮಹಿಳೆಯರನ್ನು ಕುರಿತು ಮಾತನಾಡಲು ಹಕ್ಕಿದೆಯೆ ಎಂಬ ಪ್ರಶ್ನೆ ಎತ್ತಿದರು. ಗೋಪಾಲಗುರು ಅವರು ದಲಿತ ಮಹಿಳೆಯರು ಎರಡು ರೀತಿಯ ಪಿತೃಪ್ರಾಧಾನ್ಯಗಳಿಗೆ ಅಧೀನರಾಗಿರುತ್ತಾರೆಂಬುದನ್ನು ಪ್ರತಿಪಾದಿಸಿದ್ದರು. ಮೊದಲನೆಯದು, ಜಾತಿ ಶುದ್ಧಿಯ ನಂಬಿಕೆಯನ್ನು ಆಧರಿಸಿದ ಬ್ರಾಹ್ಮಣೀಯ ಪಿತೃಪ್ರಾಧಾನ್ಯವಾದರೆ ಎರಡನೆಯದು, 'ತಮ್ಮ' ಹೆಂಗಸರೆಂದರೆ ಬರಿಯ ಲೈಂಗಿಕ ಆಸ್ತಿಗಳೆಂದು ನೋಡುವ ದಲಿತ ಪುರುಷರದೇ ಆದ ಪಿತೃಪ್ರಾಧಾನ್ಯ. ಇವೆರಡೂ ಕ್ರಿಯಾಶೀಲವಾಗಿ ದಲಿತ ಮಹಿಳೆಯರ ಶೋಷಣೆ ಹಾಗೂ ಅವರ ಲೈಂಗಿಕತೆಯ ಮೇಲಿನ ನಿಯಂತ್ರಣಗಳನ್ನು ದುಪ್ಪಟ್ಟುಗೊಳಿಸಿರುತ್ತವೆ. ಮುಖ್ಯವಾಹಿನಿ ಸ್ತ್ರೀವಾದಿ ಚಳವಳಿಯು ಜೆಂಡರ್ ಆಧಾರಿತ ಶೋಷಣೆ ದಮನಗಳ ಮೂಲಕ ಹೇಗೆ ಪಿತೃಪ್ರಾಧಾನ್ಯವು ತನ್ನ ಅಧಿಕಾರವನ್ನು ಶಾಶ್ವತವಾಗಿ ಕಾಯ್ದುಕೊಳ್ಳುತ್ತದೆ ಎಂಬುದನ್ನು ವಿಶ್ಲೇಷಿಸಿ, ವಿಮರ್ಶಿಸಿದೆ. ಆದರೆ ಜಾತಿಯ ಮೂಲದ್ದಾದ ಗೌರವಾರ್ಹತೆಗಳನ್ನು, ಜಾತಿ ಸವಲತ್ತುಗಳನ್ನು, ಅವು ಹೇಗೆ ಮಹಿಳೆಯರ ನಡುವೆಯೇ ತಾರತಮ್ಯಗಳನ್ನು ನಿರ್ಮಿಸುತ್ತವೆಂಬುದನ್ನೂ ಈ ಚಳವಳಿಯು ಸೈದ್ಧಾಂತೀಕರಿಸುವತ್ತ ಲಕ್ಷ್ಯಹರಿಸಲಿಲ್ಲ ಎಂಬುದು ಸ್ತ್ರೀವಾದಿ ಚಳವಳಿಯ ಒಂದು ಕೊರತೆಯೆನ್ನಿಸಿತು. ಈ ಕೊರತೆಯನ್ನು ವಿಮರ್ಶಾತ್ಮಕವಾಗಿ ತೋರಿಸಿಕೊಡಲು ದಲಿತ ಸ್ತ್ರೀವಾದಿಗಳು ಯತ್ನಿಸಿರುತ್ತಾರೆ.

ಅಖಿಲ ಭಾರತ ದಲಿತ ಮಹಿಳಾ ಸಂಘಟನೆಯ ದೊಡ್ಡ ಸಮಾವೇಶವೊಂದು ೧೯೯೮ರಲ್ಲಿ ನಡೆಯಿತು. ೨೦೦೧ರಲ್ಲಿ ದಕ್ಷಿಣ ಆಫ್ರಿಕಾದ ಡರ್ಬನ್‌ನಲ್ಲಿ ನಡೆದ ಅಂತರರಾಷ್ಟ್ರೀಯ ಮಹಿಳಾ ಸಮ್ಮೇಳನದಲ್ಲಿ (NFDW) ತಾವು ಜೆಂಡರ್ ಮತ್ತು ಜನಾಂಗವಾದದ ಬಗ್ಗೆ ಹಮ್ಮಿಕೊಂಡಿರುವ ಯೋಜನೆಯ ಬಗ್ಗೆ ಪ್ರಣಾಳಿಕೆ ಯೊಂದನ್ನು ಘೋಷಿಸಿಕೊಂಡರು. ಇದೇ ಸಂಘಟನೆಯವರು ಮುಂಬಯಿಯಲ್ಲಿ ಸ್ಥಾಪನೆಗೊಳ್ಳಲಿದ್ದ ಜಾಗತಿಕ-ಸಾಮಾಜಿಕ ವೇದಿಕೆ World Social Forum ಯಲ್ಲಿ ಜಾತಿಸಂಬಂಧಿತವಾದ ಪ್ರಶ್ನೆಗಳ ಬಗ್ಗೆ ಅಧಿಕೃತವಾದ ಹೇಳಿಕೆಗಳನ್ನು ನೀಡಿದ್ದು ತೀವ್ರರೂಪದ ಚರ್ಚೆಗೆ ಒಳಗಾಯಿತು. ೨೦೦೨ರಲ್ಲಿ ಒಂದು ವಿಶೇಷ ಅಂಕ 'Dalit Feminisms' ಎಂಬುದು ಪ್ರಕಟಿತವಾಯಿತು. ಇದರಲ್ಲಿ ಜಾತಿಯಿಂದ ನಿರ್ದೇಶಿತವಾದ ಪಿತೃಸಂಸ್ಕೃತಿಯ ತಳಸ್ಪರ್ಶಿಯಾದ ಶೋಧನೆಗೆ ತೊಡಗುವಂಥ ಲೇಖನಗಳನ್ನು ಸಂಕಲಿಸಲಾಯಿತು. ಜೆಂಡರ್ ಹಾಗೂ ಜಾತಿಗಳ ಒಳ ಸಂಬಂಧ ಗಳಿಂದಾಗಿ ದಲಿತ ಮಹಿಳೆಯರು ಮತ್ತು ಇತರ ಸಬಾಲ್ಟರ್ನ್ (ಬಡವರು, ಬುಡಕಟ್ಟಿನವರು, ಎಥ್ನಿಕ್ ಗುಂಪುಗಳ) ಮಹಿಳೆಯರು ಅತಿ ಹೆಚ್ಚು ದಾರುಣವಾದ ಶೋಷಣೆಗೆ ಒಳಗಾಗುತ್ತಾರೆ ಎಂಬುದನ್ನು ಆ ಲೇಖನಗಳು ಮುನ್ನೆಲೆಗೆ ತಂದಿರುತ್ತವೆ. ಜೆಂಡರ್ ಮತ್ತು ಲೈಂಗಿಕತೆಗಳ ಸ್ಥಾಪಿತಗ್ರಹಿಕೆಗಳನ್ನು ಜಾತಿ ವ್ಯವಸ್ಥೆ ಹೇಗೆ ಇನ್ನಷ್ಟು ಜಟಿಲವಾಗಿಸುತ್ತವೆ ಎಂಬುದನ್ನು ತೋರಿಸಲು ದಲಿತ ಸ್ತ್ರೀವಾದಿಗಳು ಅಮೆರಿಕದ ಕಪ್ಪು ಸ್ತ್ರೀವಾದಿಗಳು ಜನಾಂಗವಾದವನ್ನು ಸೈದ್ಧಾಂತೀ ಕರಿಸಿರುವ ಮಾದರಿಯನ್ನು ಮುಂದಿಟ್ಟುಕೊಂಡು ವಿಶ್ಲೇಷಿಸುತ್ತಾರೆ. ಬಿಳಿ ಜನಾಂಗದ ಸಾಮ್ರಾಜ್ಯವನ್ನು ಶಾಶ್ವತವಾಗಿಸಲು, ಆ ಜನಾಂಗದ ಶ್ರೇಷ್ಠತೆಯನ್ನು ಕಾಯ್ದುಕೊಳ್ಳಲು ಕರಿಯ ಮಹಿಳೆಯರ ಲೈಂಗಿಕ ದಮನ ಹಾಗೂ ಶೋಷಣೆಗಳು ಪ್ರಬಲ ಸಾಧನ ಗಳಾದವು - ಎಂಬುದನ್ನು ಆಫ್ರಿಕನ್-ಅಮೆರಿಕನ್ ಸ್ತ್ರೀವಾದಿಗಳು ಪ್ರತಿಪಾದಿಸಿರುತ್ತಾರೆ.

ಜೆಂಡರ್ ಮತ್ತು ಜನಾಂಗವಾದಗಳು ಪರಸ್ಪರ ಛೇದಿಸುವ ಅಂಶವನ್ನು ಸ್ತ್ರೀವಾದಿಗಳು 'Interesectionality' ಪರಿಕಲ್ಪನೆಯೆನ್ನುತ್ತಾರೆ. ಈ ಪರಿಕಲ್ಪನೆಯನ್ನು ಪರಿಚಯಿಸಿ ದವರು ಕಿಂಬರ್ಲೆ ವಿಲಿಯಮ್ಸ್ ಕ್ರೆನ್‌ಷಾ. ಜನಾಂಗ, ವರ್ಗ ಹಾಗೂ ಜೆಂಡರ್ ಈ ಮೂರೂ ಕಪ್ಪು ಮಹಿಳೆಯರ ಕಪ್ಪುತನ, ಹೆಣ್ತನ ಹಾಗೂ ಬಡತನಗಳನ್ನು ನಿರ್ಣಯಿಸುತ್ತಿದ್ದು, ಈ ಮೂರು ಬಗೆಯ ತಾರತಮ್ಯಗಳ ವಿರುದ್ಧ ಸೆಣಸಾಡಿಕೊಂಡೇ ಬದುಕಬೇಕಾದ ಸ್ಥಿತಿಯ ಪ್ರಾತ್ಯಕ್ಷಿಕೆಗಾಗಿ ಕ್ರೆನ್‌ಷಾ ಈ ಇಂಟರ್‌ಸೆಕ್ಷನಾಲಿಟಿಯ ಪರಿಕಲ್ಪನೆಯನ್ನು ಮುಂದಿಟ್ಟರು.

ಭಾರತದ ದಲಿತ ಸ್ತ್ರೀವಾದಿಗಳು ಆ ಮಾದರಿಯಲ್ಲೇ ಜಾತಿ, ವರ್ಗ ಮತ್ತು ಜೆಂಡರ್ ತಳಹದಿ ಮೇಲೆ ದಲಿತ ಮಹಿಳೆಯರು ಮೂರು ರೀತಿ ಶೋಷಿತರೆಂದು ಆ ಮೂರು ರೀತಿಗಳಲ್ಲಿ ಅವರು ಪರಕೀಯರಾಗಿಸಲ್ಪಟ್ಟಿದ್ದಾರೆನ್ನುತ್ತಾರೆ (ರೂತ್ ಮನೋರಮಾ). ವಾಸ್ತವದಲ್ಲಿ, ಚಾರಿತ್ರಿಕವಾಗಿ ಭಾರತದಲ್ಲಿ ಜೆಂಡರ್ ಆಧರಿಸಿದ ಶ್ರೇಣೀಕರಣದ ವಿರುದ್ಧ ಮೊದಲು ಜನಜಾಗೃತಿಗೆ ಶ್ರಮಿಸಿದ್ದು ದಲಿತ ಸಮಾಜ ಸುಧಾರಕ ಜ್ಯೋತಿಬಾ ಫುಲೆ ಹಾಗೂ ಕ್ರಾಂತಿಕಾರಿ ಡಾ॥ ಬಿ. ಆರ್. ಅಂಬೇಡ್ಕರ್ ಅವರಂಥ ಪುರುಷರೇ. ಜ್ಯೋತಿಬಾ ಫುಲೆಯವರು ಹತ್ತೊಂಬತ್ತನೆಯ ಶತಮಾನದಲ್ಲಿ ಮಹಾರಾಷ್ಟ್ರದಲ್ಲಿ ನಡೆಸಿದ ದಲಿತ ಸಮುದಾಯದ ಸುಧಾರಣೆಯ ಚಳವಳಿ, ಡಾ॥ ಅಂಬೇಡ್ಕರ್ ಅವರು ೨೦ನೆಯ ಶತಮಾನದಲ್ಲಿ ಜಾತಿವಿರೋಧಿ, ಅಸ್ಪೃಶ್ಯತಾ ವಿರೋಧಿ ಹೋರಾಟಗಳು ಜಾತಿಯನ್ನಾಗಲೀ ಜೆಂಡರನ್ನಾಗಲೀ ಈ ದೇಶದಲ್ಲಿ ಸಾಮಾನ್ಯೀಕರಿಸಿ ನೋಡುವುದು ಸಾಧ್ಯವೇ ಇಲ್ಲ ಎನ್ನುವುದನ್ನು ಸೂಚಿಸುತ್ತವೆ. ಬ್ರಾಹ್ಮಣವಾದ ಮತ್ತು ಬ್ರಾಹ್ಮಣೀಯ ಪಿತೃಪ್ರಾಧಾನ್ಯದ ವಿರುದ್ಧ ಫುಲೆಯವರ ಹೋರಾಟವನ್ನು ಕುರಿತು ಬರೆದಿರುವ ಡಾ॥ ಉಮಾ ಚಕ್ರವರ್ತಿಯವರು ಮೇಲ್ಜಾತಿಗಳು, ಅದರಲ್ಲೂ ಬ್ರಾಹ್ಮಣ ಸುಧಾರಣಾವಾದಿ ನಾಯಕರು ತಮ್ಮ ಜಾತಿಸವಲತ್ತುಗಳನ್ನು ಬಿಟ್ಟುಕೊಡಲಾರದೆ ಶಿಕ್ಷಣದ ಮೇಲೆ ಏಕಾಧಿಕಾರವನ್ನು ಹೊಂದಿದ್ದಾಗ ಫುಲೆ, ಅಂಬೇಡ್ಕರ್ ಮತ್ತು ರಾಮಸ್ವಾಮಿ ಪೆರಿಯಾರ್‌ರಂಥವರು ಈ ಬ್ರಾಹ್ಮಣವಾದಿ ಸುಧಾರಣಾವಾದಿಗಳೊಂದಿಗೆ ನಿರಂತರವಾಗಿ ಪ್ರಶ್ನೆಗಳನ್ನೆತ್ತಿ ಜೆಂಡರ್ ಅಸಮಾನತೆಯ ವಿರುದ್ಧವೂ ಹೋರಾಡಿದ ರೀತಿಗಳನ್ನು ಗುರುತಿಸುತ್ತಾರೆ. ಮೇಲುಜಾತಿಗಳವರು ವಸಾಹತುಶಾಹಿ ಸನ್ನಿವೇಶಗಳಿಗೆ ತಮ್ಮನ್ನು ಹೊಂದಾಣಿಕೆ ಮಾಡಿಕೊಂಡು, ಅದು ಒದಗಿಸಿದಂಥ ಅವಕಾಶಗಳನ್ನು ಬಳಸಿಕೊಂಡು ವೃತ್ತಿಪರ ಮಧ್ಯಮವರ್ಗವನ್ನು ಸೃಷ್ಟಿಸಿದರು. ಅದೇ ಹೊತ್ತಿನಲ್ಲಿ ಬ್ರಾಹ್ಮಣೇತರ ಜಾತಿಗಳೂ ಪ್ರತಿಭಟನಾತ್ಮಕವಾಗಿ ಈ ಪ್ರಕ್ರಿಯೆಯಲ್ಲಿ ತೊಡಗಿಕೊಂಡಾಗ ಮೇಲ್ಜಾತಿಗಳವರು ಸ್ವಜಾತಿ ಸವಲತ್ತನ್ನು ಶಿಕ್ಷಣದ ಮೇಲಿದ್ದ ತಮ್ಮ ಏಕಾಧಿಕಾರವನ್ನೂ ಬಿಡಲು ಒಪ್ಪರು ಎಂಬುದನ್ನು ಬಯಲಿಗೆಳೆದರು. ಬಾಲಕಿಯರಿಗಾಗಿ ಶಾಲೆಗಳನ್ನು ಆರಂಭಿಸಿ ಶೂದ್ರರು ಮತ್ತು ದಲಿತ ಹೆಣ್ಣುಮಕ್ಕಳಿಗಾಗಿ ಶಾಲೆಯ ಬಾಗಿಲನ್ನು ತೆರೆದಿಟ್ಟವರು ಜ್ಯೋತಿಬಾ ಫುಲೆ. ಮಾತ್ರವಲ್ಲ; ಮೇಲುಜಾತಿ ಹಿಂದೂ ವಿಧವೆಯರಿಗೂ ಅವರ 'ಅನೈತಿಕ' ಮಕ್ಕಳಿಗೂ ಆಶ್ರಮದ ಆಶ್ರಯವನ್ನು ನೀಡಿದ್ದೂ ಅವರೆ.

ಡಾ॥ ಬಿ. ಆರ್. ಅಂಬೇಡ್ಕರ್ ಅವರ ನೇತೃತ್ವದಲ್ಲಿ ನಡೆದ ದಲಿತರ ವಿಮೋಚನೆಯ ಚಳವಳಿಯಲ್ಲಿ ಜೆಂಡರ್ ಪ್ರಶ್ನೆಯೂ ಅತ್ಯಂತ ಮುಖ್ಯ ಕಾಳಜಿಯಾಗಿತ್ತು. ತಮ್ಮ ಚಳವಳಿಯಲ್ಲಿ ಮಹಿಳೆಯರು ಪಾಲ್ಗೊಳ್ಳಲೇಬೇಕೆಂದು



ಒತ್ತಾಯಿಸಿ, ದಲಿತ ಮಹಿಳೆಯರು ಸಾಮಾಜಿಕ ಕಾರ್ಯಕರ್ತೆಯರಾಗುವುದನ್ನು ಪ್ರೋತ್ಸಾಹಿಸಿದ್ದರು. ಅವರು ತಮ್ಮ ಕಾಲಕ್ಕಿಂತ ತುಂಬ ಮುಂದಿದ್ದ ಕ್ರಾಂತಿಕಾರಿಯಾಗಿದ್ದು, ಜಾತಿಪದ್ಧತಿಗೂ ಸ್ತ್ರೀಯರ ಸ್ಥಾನಮಾನಗಳಿಗೂ ನಿಕಟ ಸಂಬಂಧವಿರುವುದನ್ನು ಅಷ್ಟು ಮೊದಲೇ ಅವರು ಗುರುತಿಸಿದ್ದರು. ಜಾತಿವಿನಾಶಕ್ಕಾಗಿ ಅವರು ನಡೆಸಿದ್ದ ಹೋರಾಟದ ಚಾರಿತ್ರಿಕ ಪರಿಣಾಮವೇ ಇಂದಿನ ದಲಿತ ಮಹಿಳೆಯರ ಸ್ವಸಮರ್ಥನೆ ಹಾಗೂ ಅಸ್ಮಿತೆಯ ಹೋರಾಟದ ಮೂಲವಾಗಿರುತ್ತದೆ.

ಹತ್ತೊಂಬತ್ತನೆಯ ಶತಮಾನದ ಕೊನೆಯ ಹೊತ್ತಿಗೆ ಮಹಾರಾಷ್ಟ್ರವು ಹಲವಾರು ಕ್ರಾಂತಿಕಾರಿ, ಸಮಾಜ ಸುಧಾರಕರನ್ನು ಕಂಡಿತ್ತು. ಶ್ರೀರಾಮ್ ಜನೋಬ ಕಾಂಬ್ಳೆ ದೇವದಾಸಿ ಪದ್ಧತಿಯ ವಿರುದ್ಧ ಪ್ರಚಾರ ನಡೆಸಿದ್ದರು. ನಾರಾಯಣ ಮೇಘಜಿ ಲೋಖಂಡೆಯವರು ಟ್ರೇಡ್ ಯೂನಿಯನ್ ಹೋರಾಟ ಮುಂಬಯಿಯಲ್ಲಿ ಪ್ರಾರಂಭವಾದ ಕಾಲದಲ್ಲೇ ದಲಿತ ಕಾರ್ಮಿಕರ ಹಿತರಕ್ಷಣೆಗೆ ಪ್ರಯತ್ನ ಮಾಡಿದ್ದರು. ಈ ವಿಚಾರಗಳನ್ನು ಚರ್ಚಿಸಿರುವ ಮರಾಠಿ ಸ್ತ್ರೀವಾದಿ ಪ್ರತಿಮಾ ಪರದೇಶಿಯವರು ಹೀಗೆ ಹೇಳುತ್ತಾರೆ: "ಅಸ್ಮಿತೆಗಳು ರಾತ್ರೋರಾತ್ರಿ ಸೃಷ್ಟಿಯಾಗುವುದಿಲ್ಲ... ಅಸ್ಮಿತಾ ರಾಜಕಾರಣವು ತನ್ನ ತಿರುಳಿನಲ್ಲಿ ಪ್ರಗತಿಪರವಾಗಿರಬೇಕು. ಸ್ವಹಿತಾಸಕ್ತಿಗಳ ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಐಡೆಂಟಿಟಿಗಳನ್ನು ಕೊನೆಗೊಳಿಸುವಂಥ ಹೋರಾಟದಲ್ಲಿ ತನ್ನ ಬೇರನ್ನು ಹೊಂದಿದ್ದರೆ ಮಾತ್ರ ಅಸ್ಮಿತಾ ರಾಜಕಾರಣವು ನಿಜವಾಗಬಲ್ಲದು."

'ಪಿತೃಸಂಸ್ಕೃತಿಯ ತನಿಖೆ' ಮತ್ತು 'ದಲಿತ ಮಹಿಳೆಯರು ಭಿನ್ನವಾಗಿ ಮಾತನಾಡುತ್ತಾರೆ' ಎಂಬುದು ಗೇಬ್ರಿಯಲ್ ಡಯಿಟ್ರಿಚ್ ಅವರ ಲೇಖನಗಳು. ದಲಿತ ಮಹಿಳೆಯರ ಲೈಂಗಿಕತೆಯ ವಿಭಿನ್ನತೆ, ಅವರ ರಾಜಕೀಯ ಜಾಗೃತಿ, ಅವರ ಸ್ವ ಸಮರ್ಥನೆ, ಅವರ ದುಡಿಮೆಯ ಅನುಭವ, ಅವರು ಎದುರಿಸಿದ ಹಿಂಸಾಚಾರದ ಅನುಭವಗಳು, ತಮ್ಮ ಜಾತಿಯ ಜೊತೆಗೇ ಅವರು ಸೇರಿಹೋಗಿರುವ ಬಗೆ, ಆ ಸಮುದಾಯದ ಒಳಗೇ ಪಿತೃಪ್ರಾಧಾನ್ಯಕ್ಕೆ ಅವರು ಮುಖಾಮುಖಿಯಾಗುವ ರೀತಿಗಳು – ಇವೆಲ್ಲವನ್ನೂ ಕಟ್ಟಿಕೊಡುವ ಅವರ ಯತ್ನ ಸಮಗ್ರವಲ್ಲ. ಆದರೆ ದಲಿತ ಮಹಿಳೆಯರ ಮೇಲಿನ ಹಿಂಸಾಚಾರ ಹಾಗೂ ಅವರ ಲೈಂಗಿಕತೆಯ ಅಂಶಗಳನ್ನು ಕುರಿತು ಬೇರೆಯವರೂ ತುಂಬ ಮುಖ್ಯವಾಗಿ ಶೋಧನೆ ನಡೆಸಿರುತ್ತಾರೆ.

ತಮಿಳುನಾಡಿನ ಗ್ರಾಮೀಣ ಪ್ರದೇಶದಲ್ಲಿ ದಲಿತ ಮಹಿಳೆಯರ ವಿರುದ್ಧವಾಗಿ ನಡೆದ ಹಿಂಸಾಚಾರಗಳೆರಡರ ನಿದರ್ಶನವನ್ನು ನೀಡುವ ಗೇಬ್ರಿಯಲ್, ಈ ಎರಡೂ ಸಂದರ್ಭಗಳಲ್ಲಿ ದಲಿತ ಪುರುಷರು ವೈಯಕ್ತಿಕವಾಗಿ ಹಾಗೂ ಸಂಘಟಿತ ರೀತಿಯಿಂದ ಪರಿಹಾರಗಳನ್ನು ಕಂಡುಕೊಂಡ ರೀತಿಗಳನ್ನು ವಿವರಿಸಿ ಜೆಂಡರ್ ಮತ್ತು ಜಾತಿಗಳ ನಡುವೆ ಮೂಲಭೂತ ಅಸಮತೋಲವಿರುವುದನ್ನು ತೋರಿಸಿಕೊಡುತ್ತಾರೆ. ದಲಿತ ಮಹಿಳೆಯರ ಮೇಲೆ ನಡೆಸಲಾಗುವ ಹಿಂಸಾಚಾರಗಳು ಸರ್ವೇಸಾಮಾನ್ಯ ಎಂಬಂತೆ ಯಾಂತ್ರಿಕವಾಗಿ ಮರುಕಳಿಸುವ ರೀತಿಯದಾಗಿದ್ದು, ಜಾತಿಶ್ರೇಣೀಕರಣವನ್ನು ಬಲಪಡಿಸಲು ಅವು ಕೆಲಸ ಮಾಡುತ್ತವೆ. ಆದರೆ ದಲಿತ ಗಂಡಸು ಪ್ರತೀಕಾರ ಭಾವದಿಂದ ಮೇಲುಜಾತಿ ಹೆಂಗಸರ ಮಾನಭಂಗ ಮಾಡುವುದಾಗಿ ಬಾಯಿಮಾತಿಗೆ ಆಡುವ ಕಾಲ್ಪನಿಕ ಮಾತುಗಳನ್ನು ಕೂಡ ಅತ್ಯಂತ ನೀಚಕೃತ್ಯದ ರೀತಿ ಭಾವಿಸಲಾಗುತ್ತದೆ. ಆ ಮಾತಿನಿಂದಲೇ ಎಲ್ಲಿ ಜಾತಿ ಶ್ರೇಣಿ ಉರುಳಿಬಿದ್ದೀತೋ ಎಂಬಂತೆ ಹೆದರಲಾಗುತ್ತದೆ. ಇನ್ನೊಂದು ಕಡೆ ದಲಿತ ಗಂಡಸರು ತಮ್ಮದೇ ಸಮುದಾಯದ ಹೆಣ್ಣೊಬ್ಬಳ ಮೇಲೆ ಹಿಂಸಾಚಾರಕ್ಕಾಗಿ ನ್ಯಾಯ ಕೇಳುವಾಗ ಅವರು ತಮ್ಮದೇ ಪಿತೃಪ್ರಾಧಾನ್ಯದ ಬೈಗುಳಗಳ ಭಾಷೆಯನ್ನು ಬಳಸಲು ಪ್ರಚೋದಿತರಾಗುತ್ತಾರೆ. ಪಿತೃಪ್ರಾಧಾನ್ಯವು ಭಾಷೆಯಿಂದಲೂ ಹೆಣ್ಣನ್ನು ಮಾನಸಿಕವಾಗಿ ಲೈಂಗಿಕ ಹಿಂಸಾಚಾರದ ರೀತಿಯಲ್ಲೇ ಘಾಸಿಗೊಳಿಸಬಲ್ಲುದು ಎಂಬುದು ಅವರಿಗೆ ಗೊತ್ತೇ ಇರುತ್ತದೆ. ಈ ಬಗೆಯ ಅನ್ಯಾಯಕರ ಘಟನೆಗಳ ಬಗ್ಗೆ ಮಹಿಳೆಯರು ಸಾಮೂಹಿಕವಾಗಿ ಪ್ರತಿರೋಧಿಸುವಂತೆ ಅವರನ್ನು ಸಂಘಟಿಸುವುದು ಸುಲಭವಲ್ಲ. ಏಕೆಂದರೆ ಇವು ಪಿತೃಪ್ರಾಧಾನ್ಯದ ಜಾತಿವ್ಯವಸ್ಥೆಯ ತರ್ಕಕ್ಕೆ ಬಾಹಿರವಾದುವು.

ಸ್ವಾತಂತ್ರ್ಯೋತ್ತರ ಭಾರತದಲ್ಲಿ ದಲಿತರು ಕೆಲವು ಪ್ರಮಾಣದಲ್ಲಿ ಸಾಮಾಜಿಕವಾಗಿ ಮೇಲ್ಮುಖದ ಚಲನೆ ಹೊಂದಿದ್ದಾರೆ. ಶಿಕ್ಷಣ ಪಡೆದು ತಮ್ಮ ಜೀವನವನ್ನು, ವೇಷದ ಹಾಗೂ ಬದುಕಿನ ರೀತಿನೀತಿಗಳನ್ನು ಸುಧಾರಿಸಿಕೊಂಡಿರುತ್ತಾರೆ. ಹಳ್ಳಿಗಳಲ್ಲಿ

ಇಂಥ ಬೆಳವಣಿಗೆಗಳನ್ನು ಮೇಲುಜಾತಿ ಜನರು ಅಷ್ಟಾಗಿ ಸಹಿಸುವುದಿಲ್ಲ. ಹೀಗಾಗಿ ರೂಢಿಗತವಾದ ಕ್ರಮದಲ್ಲೇ ಜಾತಿ ಮತ್ತು ಜೆಂಡರ್ ಸಂಬಂಧಗಳನ್ನು ಕಾಯ್ದಿಟ್ಟುಕೊಳ್ಳುವ ಪ್ರಯತ್ನಗಳೇ ದಲಿತರ ಮೇಲಿನ ಹಿಂಸಾಚಾರಗಳು ಹೆಚ್ಚಾಗಲು ಕಾರಣವಾಗುತ್ತವೆ. ಮೇಲಿನವರಿಗೆ ಪರಮಾಧಿಕಾರವಿದ್ದು ಕೆಳಗಿನವರಿಗೆ ಬಾಯಿ ತೆರೆಯಲೂ ಅವಕಾಶ ಕೊಡದ ರೀತಿಯ ದಮನಕಾರಿ ವ್ಯವಸ್ಥೆಯಲ್ಲಿ ದಮನಿತ ಮಹಿಳೆಯರಿಗೆ ತಮ್ಮ ದುಃಖ, ಯಾತನೆಗಳ ಮೂಲ ಯಾವುದು, ಈ ಯಾತನೆಯ ಸ್ವರೂಪವೇನು ಎಂಬುದರ ಅರಿವಿಗೂ ಹಿಂದೆ ಆಸ್ಪದ ಇರುತ್ತಿರಲಿಲ್ಲ. ಈಗ ಆ ಸ್ಥಿತಿಗಳು ಸಡಿಲಗೊಳ್ಳುತ್ತಿದ್ದು ಬಹು ಎಚ್ಚರದಿಂದ ಕೆತ್ತಿಟ್ಟಂಥ ಜಾತಿಗಳ ಗಡಿರೇಖೆಗಳು ಮಸುಕಾಗುತ್ತಿವೆ. ಹಳ್ಳಿಗಳಲ್ಲಿ ಸ್ಥಾಪಿತ ಹಿತಾಸಕ್ತಿಗಳು ಹಿಂಸಾತ್ಮಕವಾಗಿ ದಲಿತರ ಮೇಲೆ, ವಿಶೇಷವಾಗಿ ದಲಿತ ಮಹಿಳೆಯರ ಮೇಲೆ ನಡೆಸುವ ಕ್ರೌರ್ಯ ಹಿಂಸಾಚಾರಗಳು ಈ ಅಧಿಕಾರ ಪಲ್ಲಟದ ಭೀತಿಮೂಲದ್ದಾಗಿರುತ್ತವೆ. ಮಹಿಳೆಯರನ್ನು ಬೆತ್ತಲಾಗಿಸಿ ಮೆರವಣಿಗೆ ಮಾಡಿಸುವುದು, ನೀರಿನ ಆಕರಗಳ ಬಳಿಗೆ ಅವರನ್ನು ಹೋಗಗೊಡದಿರುವುದು ಮುಂತಾದವು ಮೂಲತಃ ಚಿಕ್ಕಪುಟ್ಟ ಕ್ಷುಲ್ಲಕ ಕಾರಣಗಳಿಗಾಗಿ ಇಂದಿಗೂ ಗ್ರಾಮೀಣ ಭಾರತದಲ್ಲಿ ನಡೆಯುತ್ತಲೇ ಇರುತ್ತವೆ. ಸಂವಿಧಾನವೇನೋ 'ಅಸ್ಪೃಶ್ಯತೆ'ಯನ್ನು ನಿಷೇಧಿಸಿದ್ದು, ಅದರ ಆಚರಣೆಯನ್ನು ಕಾನೂನುಬಾಹಿರವೆಂದು ಸಾರಿರುತ್ತದೆ. ಆದರೆ 'ಅಸ್ಪೃಶ್ಯತೆ' ಎಂಬುದರ ಅರ್ಥವನ್ನು ಖಚಿತವಾಗಿ ಅಲ್ಲಿ ನಿರ್ವಚಿಸಿಲ್ಲ. ಜಾತಿಗಳ ಶ್ರೇಣೀಕರಣ ಹಾಗೂ ಅದರಿಂದ ನಿರ್ಣಯಗೊಳ್ಳುವ ಅಸ್ಪೃಶ್ಯತೆಯ ಆಚರಣೆಗಳು ಬೃಹದಾಕಾರದ ಸಂಕೀರ್ಣ ಜಾಲದಂತಿದ್ದರೂ ಕಾನೂನಿನ ಚೌಕಟ್ಟಿಗೆ ಅದನ್ನು ಹಿಡಿದಿಡಲು ಸಾಧ್ಯವಿಲ್ಲ. ದಲಿತರ ಮೇಲಿನ ದೌರ್ಜನ್ಯಗಳ ವಿರುದ್ಧ ಕಾನೂನು ಮಾಡಿರುವಷ್ಟರಿಂದಲೇ ಜಾತಿದ್ವೇಷದ ನಿವಾರಣೆ ಆಗಲಾರದು. ದಲಿತ ಮಹಿಳೆಯರ ಮೇಲೆ ಲೈಂಗಿಕ ಹಿಂಸೆ, ಅತ್ಯಾಚಾರಗಳು ನಡೆದರೆ ಅದನ್ನು ಗ್ರಾಮಸ್ಥರು, ಪೊಲೀಸರು, ನ್ಯಾಯಾಂಗಗಳು ಯಾವ ರೀತಿ ನೋಡುತ್ತಾರೆ ಎನ್ನುವುದಕ್ಕೆ ಭಾಂವ್ರಿ ದೇವಿಯಂಥವರ ಲೆಕ್ಕವಿಲ್ಲದಷ್ಟು ನಿದರ್ಶನಗಳಿವೆ. ಈ ಕಾನೂನಿನಲ್ಲಿರುವ ಕೊರತೆಯನ್ನು ನಿವಾರಿಸಲು ಸಂವಿಧಾನ ಸಮಿತಿಯಲ್ಲಿದ್ದಾಗಲೇ ಅಂಬೇಡ್ಕರರು ಪ್ರಯತ್ನ ಮಾಡಿದ್ದರು. ಅದಕ್ಕೆ ಬಲವಾದ ಪ್ರತಿರೋಧವುಂಟಾದಾಗ ಕಂಗೆಡದೆ ಹಿಂದೂ ಕೋಡ್ ಬಿಲ್ಲಿನ ಸಂದರ್ಭದಲ್ಲಿ ಮತ್ತೊಮ್ಮೆ ಯತ್ನಿಸಿದ್ದರು. ಅದೂ ಸಫಲವಾಗಲಿಲ್ಲ. ಹೀಗಾಗಿ ಜಾತಿಯನ್ನು ಜೆಂಡರ್ ಚರ್ಚೆಯೊಳಗೆ ಸೇರಿಸಬೇಕೆನ್ನುವ ಸಮಕಾಲೀನ ಹಕ್ಕೊತ್ತಾಯದ ಈ ಚಾರಿತ್ರಿಕ ಹಿನ್ನೆಲೆ ಆ ಬದಲಾವಣೆ ಎಷ್ಟು ಕಠಿಣವಾದದ್ದು ಎಂಬುದನ್ನು ಸೂಚಿಸುತ್ತದೆ.




ಗ್ರಾಮೀಣ ಪ್ರದೇಶಗಳ ಸ್ಥಳೀಯ ಆಡಳಿತಾತ್ಮಕ ಸಂಸ್ಥೆಗಳಲ್ಲಿ ಮೀಸಲಾತಿ ಕುರಿತಂತೆ ಸಂವಿಧಾನದ ಪರಿಷ್ಕೃತ ವರದಿ ೧೯೯೩ರಲ್ಲಿ ಜಾರಿಗೆ ಬಂದಮೇಲೆ ಮುನ್ಸಿಪಾಲಿಟಿಗಳಲ್ಲಿ, ಗ್ರಾಮಪಂಚಾಯತ್‌ಗಳಲ್ಲಿ ದಲಿತ ಮಹಿಳೆಯರಿಗೂ ಸ್ಥಾನ ಮೀಸಲಾತಿ ಏರ್ಪಟ್ಟಿದೆ. ಆದರೆ ಆರ್ಥಿಕ ರಾಜಕೀಯದಲ್ಲಿ ಬಲಿಷ್ಠರಾದ ಜನರು ಇಂಥ ಮೀಸಲಾತಿಗೆ ವಿರೋಧವೊಡ್ಡುವುದೇ ಹೆಚ್ಚು. ಅಧಿಕಾರ ಸ್ಥಾನದಲ್ಲಿ ಒಬ್ಬ ದಲಿತ ಮಹಿಳೆ ಬಂದು ಕೂರುವುದು ಎನ್ನುವುದು ಜಾತಿಸಂಸ್ಕೃತಿಯ ದೃಷ್ಟಿಯಿಂದ ವಿಶಿಷ್ಟ ಅಧಿಕಾರದ ಸೂಚಕವೇ ಆಗಿರುತ್ತದೆ. ಮಹಿಳೆಯರಿಗೆ ಸ್ಥಳೀಯ ಸಂಸ್ಥೆಗಳಲ್ಲಿ ಆಡಳಿತದ ೩೩% ಸ್ಥಾನ ಮೀಸಲಾತಿಯನ್ನು ಪ್ರಾದೇಶಿಕ ಅಸೆಂಬ್ಲಿ ಹಾಗೂ ರಾಷ್ಟ್ರೀಯ ಪಾರ್ಲಿಮೆಂಟುಗಳಿಗೂ ವಿಸ್ತರಿಸಲು ಹೊರಟಾಗ ಆ ಅಂಕಿಯ ಒಳಗೇ ಪರಿಶಿಷ್ಟ ಜಾತಿ, ಪರಿಶಿಷ್ಟ ಬುಡಕಟ್ಟುಗಳಿಗೆ ಅವಕಾಶ ಕಲ್ಪಿಸಲಾಯಿತು. ಆದರೆ ಈ ೩೩% ಮೀಸಲಾತಿಯ ಹಕ್ಕೊತ್ತಾಯವು ಹೇಗೆ ನೆನೆಗುದಿಗೆ ಬಿತ್ತು ಎಂಬುದು ಇದೀಗ ಚರಿತ್ರೆಯೇ ಆಗಿರುತ್ತದೆ.

ಮಾನವರ ಮಲವನ್ನು ದಲಿತರು ಹೊರುತ್ತಿದ್ದ ಪದ್ಧತಿಯ ರದ್ಧತಿಯಾದರೂ ಪೌರಕಾರ್ಮಿಕರಾಗಿ ಬೀದಿಗುಡಿಸುವ, ನಗರಗಳ ಕಸದ ರಾಶಿ ಸಂಗ್ರಹಿಸಿ ಶುದ್ಧೀಕರಿಸುವಂಥ ಸರ್ಕಾರ ಕೇಂದ್ರಿತ ಉದ್ಯೋಗಗಳಿಗೆಲ್ಲ ದಲಿತರೇ ಇಂದಿಗೂ ನೇಮಕಗೊಳ್ಳುವವರು. ಹೀಗೆ ಯಾವುದೇ ವಿಷಯವನ್ನು ನೋಡಿದರೂ ಕಡು ದಲಿತ ಮಹಿಳೆಯರು ಎದುರಿಸುತ್ತಿರುವ ಸಮಕಾಲೀನ ಸನ್ನಿವೇಶಗಳು, ಅವರ ನಿರಕ್ಷರತೆ, ನಿರ್ಗತಿಕತೆಗಳ ಕಾರಣದಿಂದ ಶತಶತಮಾನಗಳ ಸ್ಥಿತಿಗಳು ಮುಂದುವರಿದಂತೆಯೇ ತೋರುತ್ತದೆ. ದಲಿತ ಮಹಿಳೆಯರಷ್ಟೆ ಅಲ್ಲದೆ ಸಬಾಲ್ಟರ್ನ್ ಎಂದು ಗುರುತಿಸಲಾಗುವ ಆದಿವಾಸಿಗಳು, ಬುಡಕಟ್ಟುಗಳು, ಎಥ್ನಿಕ್ ಗುಂಪುಗಳ ನಿರಕ್ಷರಸ್ಥ ಬಡಮಹಿಳೆಯರೂ ಅಧಿಕಾರ ಕೇಂದ್ರದ ಅಂಚಿನಲ್ಲಿಯೇ ಬದುಕುವವರು. ಆದರೆ ನಮ್ಮ ದೇಶದ ಸಾಮಾಜಿಕ ವ್ಯವಸ್ಥೆಯಲ್ಲಿ ಈ ಸಬಾಲ್ಟರ್ನ್ ಕಕ್ಷೆಯ ಹೊರಗೂ ಬದುಕಿಗಾಗಿ ಹೋರಾಡುವವರ ಮಹಿಳಾ ಗುಂಪುಗಳೂ ಇದ್ದು ಅವರಿಗೆ ಒಂದು ಹೆಸರಿಡಲೂ ಸಮಾಜ ಗಮನಹರಿಸಲಾರದು. ಅವರು ಕೆಳಾತಿಕೆಳಸ್ತರದ ಸ್ತ್ರೀಜೀವಗಳು. ಜಾತಿಶ್ರೇಣೀಕರಣದ ಹಾಗೂ ಜೆಂಡರ್ ಸಂಬಂಧಗಳ ವಿಷಯದಲ್ಲಿ ಮಹಿಳೆಯರ ಹಿತಾಸಕ್ತಿಯಿಂದ ನಡೆಸುತ್ತಿರುವ ಚಿಂತನೆಗಳು ವಸಾಹತುಶಾಹಿ ಅವಧಿಯಲ್ಲಿ ನಡೆದಂಥ ಸುಧಾರಣಾ ಯತ್ನಗಳು ಮತ್ತು ಆ ಸುಧಾರಣೆಗಳ ಬೆನ್ನೆಲುಬಾಗಿದ್ದ ವಸಾಹತುಶಾಹಿ ಪ್ರಭಾವಗಳನ್ನು ಸಾಕಷ್ಟು ವ್ಯಾಪಕವಾಗಿ ಬೆಳಕಿಗೆ ತಂದಿರುತ್ತವೆ. ಕಾನೂನು ಮತ್ತು ಸಾಮಾಜಿಕ ಸುಧಾರಣೆಗಳು ಸೃಷ್ಟಿಸಿದ ಸವಲತ್ತುಗಳು ಮೇಲ್ಜಾತಿಗಳ ಮಹಿಳೆಯರಿಗೆ ಮಾತ್ರವೇ ಅನುಕೂಲವನ್ನು ಒದಗಿಸಿದ್ದವು. ಬಹುಸಂಖ್ಯಾತ ಶೂದ್ರ, ದಲಿತ ಸಮಾಜಗಳ ಮಹಿಳೆಯರ ಪ್ರಶ್ನೆಗಳು ಆ ಸುಧಾರಣೆಗಳ ಕೇಂದ್ರ ವಿಷಯವಾಗಲೇ ಇಲ್ಲ. ಇದರಿಂದಾಗಿ ಅನೇಕ ಕೆಳಜಾತಿ ಮಹಿಳೆಯರು ಮೊದಲಿಗಿಂತ ಹೆಚ್ಚು ನಿರ್ಬಂಧಗಳಿಗೆ ಬಲಿಯಾದರು ಎಂಬುದರ ಮೇಲೆ ಸಾಕಷ್ಟು ಸಂಶೋಧನಕಾರರೂ ಚಿಂತಕರೂ ಬೆಳಕು ಬೀರಿರುತ್ತಾರೆ.

ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ಒಳಗಿನಿಂದಲೇ ಕೆಳಜಾತಿ ಗುಂಪುಗಳ ಒಂದು ಹೊಸ ಕನೆ ಪದರವು ಹೊಮ್ಮಿರುತ್ತದೆ. ವರ್ಗಾಧಾರಿತವಾದ ಹೊಸ ಅಸ್ಮಿತೆಯೊಂದನ್ನು ಪ್ರಗತಿಪರ ಸುಧಾರಣೆಯ ತಾಣವೆಂದು ಪ್ರತಿಪಾದಿಸಿ, ಧನಾತ್ಮಕ ಕಾರ್ಯಕ್ಕಾಗಿ ಕರೆ ನೀಡಲಾಯಿತು. Other Backward Classes (OBC) ಎಂಬುದನ್ನು ತಾಂತ್ರಿಕವಾಗಿ ಒಂದು ಹೊಸ ಗುಂಪೆಂದು ನಿರ್ವಚಿಸಿದ್ದು ಮೊದಲಿಗೆ ಈ ಗುಂಪಿನಲ್ಲಿ ಮತಾಂತರಗೊಂಡ ದಲಿತ ಮುಸ್ಲಿಮರು, ದಲಿತ ಕ್ರೈಸ್ತರುಗಳಿಗೆ ಈ ಗುಂಪಿನಲ್ಲಿ ಅವಕಾಶ ಕಲ್ಪಿಸದೆ ಕೈಬಿಡಲಾಗಿದ್ದುದನ್ನು ಆಮೇಲೆ ಸೇರಿಸಲಾಯಿತು. 'ದೃಢೀಕರಣ ಕಾರ್ಯಾಚರಣೆ' (Affirmative Action) ಮೂಲಕ ವರ್ಗವನ್ನು ಒಂದು ಸುಧಾರಣೆಯ ಸ್ಥಾನವನ್ನಾಗಿ ಮಾಡಲಾಯಿತು. ವಿವಿಧ ವಲಯಗಳ ಬಹು ಬಗೆಯ ಗುಂಪುಗಳು ಈ ಮೀಸಲಾತಿಗಾಗಿ ಹಕ್ಕೊತ್ತಾಯ ಮಾಡಲಾರಂಭಿಸಿದವು. ಪ್ರಧಾನ ಹಿಂದೂ ಗುಂಪುಗಳು ಈ ಬೆಳವಣಿಗೆಗಳನ್ನು ತೀವ್ರವಾಗಿ ವಿರೋಧಿಸುತ್ತಿದ್ದರೂ ಜಾತಿ ಮತ್ತು ವರ್ಗಗಳ ಚಲನಾತ್ಮಕ ಪ್ರಕ್ರಿಯೆಗಳು ಸ್ತ್ರೀವಾದಿಗಳ ಮುಖ್ಯ ವಿಷಯವಾದ ಜೆಂಡರ್ ಅಧ್ಯಯನಗಳ ಮೇಲೆ ತೀವ್ರರೂಪದ ಗಮನಾರ್ಹ ಪ್ರಭಾವವನ್ನಂತೂ ಬೀರುತ್ತಿವೆ. ಬಡವರ್ಗದ ದಲಿತ ಮಹಿಳೆಯರು ನಿರ್ದಿಷ್ಟ ಸವಾಲುಗಳನ್ನು ಯಾವ ಬಗೆಗಳಲ್ಲಿ ಎದುರಿಸುತ್ತಿದ್ದಾರೆ ಎಂಬುದನ್ನು ಅಧ್ಯಯನ ಮಾಡುವ ಕಾರ್ಯವೂ ಮುಂದುವರಿದಿದೆ. ಅವರ ಅಂತಶ್ಚೇತನ, ಪ್ರತಿಭಟನಾ ಸಾಮರ್ಥ್ಯಗಳು ಅಧ್ಯಯನಕ್ಕೆ ಒಳಪಡುತ್ತಿದ್ದರೂ ಅತ್ಯಂತ ಬಡವರ್ಗದ ಮುಸ್ಲಿಂ ಮಹಿಳೆಯರ ಸ್ಥಾನ ಭಾರತದಲ್ಲಿ ಏನಾಗಿದೆ ಎಂಬುದನ್ನು ವೈಯಕ್ತಿಕ ಕಾನೂನು ಸುಧಾರಣೆಯ ಆಚೆಗೂ ಅವರ ಸ್ಥಿತಿಗತಿಗಳೇನು ಎಂಬುದನ್ನು ಚರ್ಚೆಗಾಗಲಿ ಅಧ್ಯಯನಕ್ಕಾಗಲಿ ಒಳಗುಮಾಡಿದ್ದು ಕಂಡುಬರುವುದಿಲ್ಲ.

ಭಾರತದಲ್ಲಿ ಸ್ತ್ರೀವಾದಿ ಅಕಾಡೆಮಿಕ್ ವಿದ್ವತ್ತಿನ ನೆಲೆಯಲ್ಲಿ ಜಾತಿ ಮತ್ತು ವರ್ಗಗಳ ಪ್ರಶ್ನೆಗಳನ್ನು ಜಾತಿ–ಜೆಂಡರ್ ಪ್ರಶ್ನೆಯೆಂದು ಅಥವಾ ವರ್ಗ–ಜೆಂಡರ್ ಪ್ರಶ್ನೆಯೆಂದು ಪರಿಗಣಿಸಿ ಸಾಕಷ್ಟು ವ್ಯಾಪಕವಾಗಿ ಚರ್ಚೆಗೆ ತರಲಾಗಿದೆ. ಆದರೆ ಈ

ಮೂರೂ ಘಟಕಗಳು ಪರಸ್ಪರ ಛೇದಿಸುವ ಸ್ಥಾನ-ವ್ಯಾಪ್ತಿ ಯಾವುದು, ಎಷ್ಟು ಎಂಬುದು ಮಾತ್ರ ಇನ್ನೂ ಗುರುತಿಸಲ್ಪಡಬೇಕಾದ ಕ್ಷೇತ್ರವಾಗಿರುತ್ತದೆ. ರಾಜಕೀಯ ಪ್ರಾತಿನಿಧ್ಯ ಹಾಗೂ ಸುಧಾರಣೆಗಳ ನಿರ್ದಿಷ್ಟ ಸಂದರ್ಭಗಳಲ್ಲಿಯೇ ಈ ಮೂರು ಬಗೆಯ ಅಸ್ಮಿತೆಗಳನ್ನೂ ಅನುಭವಿಸುವ ಜಾಗದ ಬಗ್ಗೆ ಸಿದ್ಧಾಂತವನ್ನು ವಿಸ್ತರಿಸ ಬೇಕಿದೆ. ಬಡವರ್ಗದ ಹಾಗೂ ಅಂಚಿನ ನೆಲೆಗೆ ತಳ್ಳಲ್ಪಟ್ಟಿರುವ ಮಹಿಳೆಯರ 'ತನ್ನತನ' ಎಂಬುದನ್ನು ಕಟ್ಟಿಕೊಳ್ಳಲು ಜಾತಿ, ವರ್ಗ ಹಾಗೂ ಜೆಂಡರ್‌ಗಳ ಅಂತಶ್ಛೇದನದ ಅಂಶವು ವಿಶಿಷ್ಟ ಸವಾಲುಗಳನ್ನು ಒಡ್ಡುತ್ತವೆ. ಒಂದಕ್ಕಿಂತ ಹೆಚ್ಚು ಅಸ್ಮಿತೆಗಳು ಇರುವ ಸಂದರ್ಭದಲ್ಲಿ 'ನಾವು' ಎನ್ನುವ ಒಂದು ಗುಂಪನ್ನು ಸೂಚಿಸುವ ಪದದಲ್ಲಿ ಮಹಿಳೆಯರ ಶೋಷಣೆಯ ತಳಹದಿಯನ್ನು ಕಲ್ಪಿಸುವುದು ಕ್ಲಿಷ್ಟವಾದದ್ದು. ಜಾತಿಮೂಲದ್ದಾದ 'ನಾವು', ವರ್ಗಮೂಲದ್ದಾದ 'ನಾವು' ಮುಂತಾಗಿ ಬಹು ಬಗೆಯಲ್ಲಿ 'ನಾವು' ಎಂಬುದರ ಅಂಕಿತವಿರುವಾಗ ಇವುಗಳಲ್ಲಿ ಯಾವುದು ಮತ್ತೊಂದಕ್ಕೆ ಸ್ಪರ್ಧಿ ಅಥವಾ ಯಾವುದು ಹೆಚ್ಚು ಮುಖ್ಯವಾಗಿರುತ್ತದೆ? ಇವು ಪರಸ್ಪರ ಸಂಘರ್ಷಕ್ಕೆ ಇಳಿದಲ್ಲಿ ಆ ಮಹಿಳೆಯರ ಅಸ್ಮಿತೆಯ ಸ್ವರೂಪವೇನು? ಎಂಬ ಪ್ರಶ್ನೆಗಳು ಎದುರಾಗುತ್ತವೆ. ಈ ಅಸ್ಮಿತೆಗಳ ಅಂತಶ್ಛೇದಕತೆಯ ಕಡೆಗೆ ಸ್ತ್ರೀವಾದಿಗಳು ಬೆರಳು ಮಾಡುವಾಗ ಒಂದು ಸಾಮೂಹಿಕ ಅಸ್ಮಿತೆಯನ್ನೇ ಬಲಪಡಿಸಿ ಮುಂದಿಡುತ್ತಾರೆ.

ಸಾಮೂಹಿಕವಾದ ಶೋಷಣೆ ತಳಹದಿ ಮೇಲೆ ಸೂತ್ರೀಕೃತವಾದ 'ನಾವು' ಎಂಬ ಶಬ್ದದ ಒಳಗೆ ಬೇರೆ ಬೇರೆ ಬಗೆಯ ಹಿತಾಸಕ್ತಿಗಳು ಸೇರಿರುತ್ತವೆ. ಬೇರೆ ಬೇರೆ ವರ್ಗಗಳೂ ಅದರಲ್ಲಿರುತ್ತವೆ. ಆದುದರಿಂದ ಏಕರೂಪದ ಶೋಷಣೆಯೆನ್ನುವ ನೆಲೆಗಟ್ಟಿನ ಮೇಲೆ ಈ ಪರಿಕಲ್ಪನೆ ಬೆಳೆದಿದ್ದಾಗಲೂ ಶೋಷಣೆಗಳ ಅನುಭವಗಳು ಬೇರೆಯಾಗಿರುತ್ತವೆ. ಎಲ್ಲ ಪ್ರಗತಿಗೆ, ಎಲ್ಲ ಸಬಲತೆಗೆ, ಎಲ್ಲಾ ಅಭಿವೃದ್ಧಿಗಳಿಗೆ ಪ್ರವೇಶಾವಕಾಶ ಸಮಾನವಾಗಲಿಕ್ಕೆ (Equity) ಒದಗುವಂಥ ಬಾಗಿಲುಗಳಾವುವು ಎಂದು ಅರ್ಥಮಾಡಿಕೊಳ್ಳಲು ಈ ಶೋಷಿತತೆಯ ವಿಭಿನ್ನ ಸ್ತರಗಳ ಅರಿವು ಅತ್ಯಂತ ಮಹತ್ವದ್ದಾಗಿರುತ್ತದೆ. ಹಾಗಾಗಿ ಸಮಾನತೆ (Equality) ಎಂಬುದು ಈ ಕಾಲಕ್ಕೆ ಉದಾರವಾದಿ ಚಿಂತನೆ ಸೂಚಿಸುವ 'ಸಮಾನರ ನಡುವೆ ಇರುವ ಸಮಾನತೆ' ಆಗಿರದೆ ಅದು ಸಮಾನ ಫಲದ ಹಂಚುವಿಕೆಯ ರೀತಿಯದೇ ಆಗಬೇಕಿರುತ್ತದೆ. ಈ ಪ್ರವೇಶಾವಕಾಶವನ್ನು ನಿರ್ಧರಿಸಲು ವರ್ಗವೊಂದೇ ಮುಖ್ಯ ಅಂಶವಾದಾಗ ಜಾತಿ ಆಧಾರಿತ ದೃಢೀಕರಣ ಕಾರ್ಯಾಚರಣೆ ಪ್ರಶ್ನಾರ್ಹವಾಗುತ್ತದೆ. ಏಕೆಂದರೆ ಕೆಳಜಾತಿಗೆ ಸೇರಿದವರು ಎಂಬುದು ಸದಾ ಕೆಳವರ್ಗವನ್ನೇ ಸೂಚಿಸುತ್ತಿರುವುದಿಲ್ಲ. ಇಂಥ ಸನ್ನಿವೇಶಗಳನ್ನು ಸ್ಥಳೀಯ ಪ್ರಧಾನ ಆಳುವ ಗುಂಪುಗಳು ತಮಗೆ ಅನುಕೂಲಕರ ಸಾಧನಗಳನ್ನಾಗಿ ಮಾಡಿಕೊಳ್ಳುತ್ತಾರೆ.

ದಲಿತ ಮಹಿಳೆಯರು ರಾಷ್ಟ್ರಮಟ್ಟದಲ್ಲೂ ಪ್ರಾದೇಶಿಕ ನೆಲೆಗಳಲ್ಲೂ ತಮ್ಮದೇ ಆದ ಸ್ವಾಯತ್ತ ಸಂಘಟನೆಗಳನ್ನು ರೂಪಿಸಿಕೊಂಡಿರುವುದು, ಅವುಗಳ ಮೂಲಕ ಸ್ಥಳೀಯವಾದ ವಿವಿಧ ಸಮಸ್ಯಾತ್ಮಕ ಸನ್ನಿವೇಶಗಳಲ್ಲಿ ನಡೆಯುವ ಸ್ತ್ರೀವಾದಿ ಹೋರಾಟಗಳಲ್ಲಿ ತಮ್ಮ ಅಸ್ಮಿತೆಯ ಸಮರ್ಥನೆಯನ್ನು ಮಾರ್ದನಿಸುವುದು ಇವತ್ತಿನ ಗಮನಾರ್ಹ ವಿದ್ಯಮಾನವಾಗಿದೆ. ದಲಿತ ಮಹಿಳೆಯರು ತಮ್ಮದೇ ಆದ ಸಿದ್ಧಾಂತ ಹಾಗೂ ಹೋರಾಟದ ತಂತ್ರಗಳನ್ನು ಜೆಂಡರ್ ಪ್ರಶ್ನೆಗಳಿಗೆ ಹೊಂದಿ ಕೊಂಡಂತೆ ರೂಪಿಸಿಕೊಳ್ಳುವ ಬಗ್ಗೆ ದಲಿತ ಸ್ತ್ರೀವಾದಿಗಳು ಕರೆ ನೀಡುತ್ತಾರೆ. ಒಟ್ಟಾರೆಯಾಗಿ ಭಾರತದಲ್ಲಿ ಹೊಮ್ಮಿ, ಬೆಳೆದ ಸ್ತ್ರೀವಾದಿ ಚಳವಳಿಯು ಮಹಿಳೆಯರನ್ನೂ ಅವರ ಬದುಕುಗಳನ್ನೂ ಅರ್ಥಮಾಡಿಕೊಳ್ಳುತ್ತಾ ಬಂದಂಥ ಕ್ರಮವು ಕೆಲವೇ ಆಯ್ದ ಮಹಿಳಾ ವಲಯಗಳಿಗಷ್ಟೇ ಆದ್ಯತೆ ನೀಡಿದುದಾಗಿದೆ. ಈ ಚಿಂತನೆಯು ಮಹಿಳೆಯರ ಜೀವನದ ಸಂರಚನೆಗಳನ್ನು ಜಾತಿಯು ಹೇಗೆ ಶೋಷಣೆಯ ಹೆಚ್ಚಳದತ್ತ ಉಬ್ಬಿಸಿರುತ್ತದೆ ಎಂಬ ಮಹತ್ತರವಾದ ವಾಸ್ತವಾಂಶವನ್ನು ತನ್ನೊಳಕ್ಕೆ ತೆಗೆದುಕೊಳ್ಳಲಿಲ್ಲ. ಭಾರತದ ಬಹು ಸಾಂಸ್ಕೃತಿಕ ಪರಿಸ್ಥಿತಿಗಳ ಸಂದರ್ಭದಲ್ಲಿ ಪಿತೃಪ್ರಾಧಾನ್ಯದ ಯಾಜಮಾನ್ಯವು ಕ್ರಿಯಾಶೀಲವಾಗಿರುವ ರೀತಿಯಲ್ಲಿ ಸ್ವರೂಪ ಮತ್ತು ಗುಣಾತ್ಮಕ ಅಂತರಗಳಿರುತ್ತವೆ. ಈ ವ್ಯತ್ಯಾಸಗಳು ಜಾತಿಕೇಂದ್ರಿತ ಪಿತೃಪ್ರಾಧಾನ್ಯದ ಭಾರಿ ಹೊರೆಯನ್ನು ಹೊರಬೇಕಾದಂಥ ದಲಿತ ಮಹಿಳೆಯರಿಗೆ ಮಾತ್ರವೇ ಮುಖ್ಯವಾಗಬೇಕಿಲ್ಲ. 'ಸ್ತ್ರೀವಾದಿ' ಎಂಬ ಶಬ್ದದ ಸಾಮಾನ್ಯೀಕೃತ ಆವರಣದಲ್ಲಿ ಜಾತಿ ಅಂಕಿತಗಳೆಲ್ಲವೂ ಕೊಚ್ಚಿಹೋಗಿರುವಂಥ ಸ್ತ್ರೀವಾದಿಗಳಿಗೂ ಮೇಲೆ ಹೇಳಿದ ತಾರತಮ್ಯ ಪ್ರಜ್ಞೆಗೆ ಬರಬೇಕಾಗಿದೆ. ಈ ದೃಷ್ಟಿಯಿಂದ ಜಾತಿಯ ಚೌಕಟ್ಟಿನ ಹೊರಗೆ ನಿಂತು ಮಹಿಳಾ ಸಮಸ್ಯೆಗೆ ಕಳಕಳಿ ಹೊಂದಿರುವಂಥ ಸ್ತ್ರೀವಾದವನ್ನು 'ಬ್ರಾಹ್ಮಣವಾದಿ ಸ್ತ್ರೀವಾದ' ಎಂದು ಗುರುತಿಸುತ್ತಾರೆ. ಏಕೆಂದರೆ ಈ ದೃಷ್ಟಿಯು ಜಾತಿ ಕೂಡ ಜೆಂಡರ್‌ಗೆ ಒಂದು ಸಮಸ್ಯೆ ಎಂಬ ಸಾಧ್ಯತೆಯನ್ನು ಒಪ್ಪಿರುವುದಿಲ್ಲ. ಈ ದೃಷ್ಟಿಗಿಂತ ಭಿನ್ನವಾಗಿ, ಇದಕ್ಕೆ ಒಂದು ಪರ್ಯಾಯ ಸಾಧ್ಯತೆಯ ಹುಡುಕುವಿಕೆಯಾಗಿ 'ದಲಿತ ಸ್ತ್ರೀವಾದಗಳೆ' ಪರಿಕಲ್ಪನೆಯನ್ನು ಬೆಳೆಸಲಾಗಿರುತ್ತದೆ. ಇವೆರಡೂ ಎರಡು ಭಿನ್ನಹಾದಿಗಳಂತಾಗದೆ ಎರಡೂ ಒಗ್ಗೂಡುವಂಥ ದಾರಿಯ ಹುಡುಕಾಟದ ಬಗ್ಗೆ ನಿಜವಾದ ಹುಡುಕಾಟ ನಡೆಯಬೇಕಾದದ್ದು ಸ್ತ್ರೀವಾದಿ ಚಳವಳಿಯ ವಿಸ್ತರಣೆಗೆ ಅವಶ್ಯಕವಿದೆ.

ಇತ್ತೀಚಿನ ದಿನಗಳಲ್ಲಿ, ಜಾಗತೀಕರಣ, ಉದಾರೀಕೃತ ಆರ್ಥಿಕ ನೀತಿಗಳು ಸೃಷ್ಟಿಸಿರುವ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಪಲ್ಲಟ, ಪರಿವರ್ತನೆಗಳ ನಡುವೆ ಜಾತಿ ರಾಜಕಾರಣಕ್ಕೆ ಇಂಡಿಯಾದಲ್ಲಿ ಹೆಚ್ಚಿನ ಬಲ ಒದಗಿರುತ್ತದೆ. ಜಾತಿ ರಾಜಕೀಯ ಪಕ್ಷಗಳಷ್ಟೇ ಅಲ್ಲದೆ ಟ್ರೇಡ್ ಯೂನಿಯನ್‌ಗಳಲ್ಲಿಯೂ ಜಾತಿ ಆಧಾರಿತ ಗುಂಪುಗಳಾಗುತ್ತಿವೆ. ಮಹಿಳಾ ಚಳವಳಿಯನ್ನೇ ವಿಭಜನಕಾರಿ ಎಂದು ಹಿಂದೆ ಆರೋಪಿಸುತ್ತಿದ್ದ ಎಡಪಂಥೀಯ ಚಳವಳಿಗಳು, ದಲಿತರೊಂದಿಗೆ ಸಹಾನುಭೂತಿ ಹೊಂದಿದ್ದರೂ ದಲಿತ ಮಹಿಳಾ ಚಳವಳಿಯನ್ನು ಅವಜ್ಞೆಯಿಂದಲೇ ನೋಡುವ ಪರಿಸರವಿದೆ. ವಾಸ್ತವದಲ್ಲಿ ಜಾತಿ ಮತ್ತು ಜೆಂಡರ್‌ಗಳ ಶಕ್ತಿಗಳು ದೇಶದ ಪ್ರಜಾಪ್ರಭುತ್ವ, ನಾಗರಿಕತ್ವ, ರಾಷ್ಟ್ರೀಯತೆಗಳೆಲ್ಲವನ್ನೂ ಬಲವಾಗಿ ಪ್ರಭಾವಿಸುತ್ತಿವೆ. ಕೆಳಜಾತಿಗಳ ಜನರ ಆತ್ಮಸಮರ್ಥನೆ ಹಾಗೂ ಅಸ್ಮಿತಾ ರಾಜಕೀಯದ ವೈಖರಿಗಳು ಇಂಡಿಯಾದ ಪ್ರಜಾಸತ್ತಾತ್ಮಕ ಸಂಸ್ಥೆಗಳಲ್ಲಿ ಹುಟ್ಟಿರುವ ಹೊಸತನದ ಬಿರುಕುಗಳಾಗಿವೆ. ಪ್ರಧಾನ ಗುಂಪುಗಳ ಪ್ರಾಬಲ್ಯಕ್ಕೆ ಅವು ಸವಾಲೊಡ್ಡುತ್ತಿವೆ. ಈ ಅಧಿಕಾರ ಪಲ್ಲಟದ ಭೀತಿಗಳೇ ಅನೇಕ ಸಲ ಪ್ರಾದೇಶಿಕ, ಧಾರ್ಮಿಕ ಹಾಗೂ ಜಾತೀಯ ಸಮೀಕರಣದ ಮೂಲಕ ಮಹಿಳೆಯರ ಮೇಲಿನ ಹಿಂಸಾಚಾರಗಳ ರೂಪ ತಳೆಯುತ್ತಿವೆ. ಮೂಲಭೂತವಾದದ, ಕೋಮುವಾದದ ಸುಸಂಘಟಿತ ಕ್ರೌರ್ಯ, ಸಶಸ್ತ್ರ ದೌರ್ಜನ್ಯಗಳು, ಸ್ತ್ರೀಯರ ಬದುಕಿನ ಪ್ರತಿಯೊಂದು ಅಂಶವನ್ನೂ Policing ಮಾಡುವ ಬಗೆಗಳು, ಅವರ ಮೇಲೆ ಹೆಚ್ಚುತ್ತಿರುವ ಅಮಾನುಷ ಅತ್ಯಾಚಾರ, ಸಾಮೂಹಿಕ ಹಾಗೂ ಖಾಸಗಿ ಹತ್ಯಾಕಾಂಡಗಳು ಇವೆಲ್ಲವೂ ಪಿತೃಸಾಂಸ್ಕೃತಿಕ ಅಧಿಕಾರವನ್ನು, ನಿಯಂತ್ರಣಗಳನ್ನು ಬಿಗಿಗೊಳಿಸುವ ನಿಟ್ಟಿನ ಪ್ರತಿಕ್ರಿಯಾತ್ಮಕ ರಾಜಕೀಯದ್ದೇ ಅಭಿವ್ಯಕ್ತಿಗಳಾಗಿರುತ್ತವೆ.

ದಲಿತ ಮಹಿಳೆಯರ ಸ್ವಸಮರ್ಥನೆ ಇನ್ನೂ ಪ್ರಾಯೋಗಿಕವಾಗಿ ಈಗಷ್ಟೆ ಮೊಳಕೆಯೊಡೆದ ಅವಸ್ಥೆಯಲ್ಲಿದೆ. ಹಾಗಾಗಿಯೇ ಆಸ್ಫೋಟನಕಾರಿ ಆಂತರಿಕ ಶಕ್ತಿ ಅದರೊಳಗೆ ಹುದುಗಿರುತ್ತದೆ. ಪಿತೃಪ್ರಾಧಾನ್ಯವೇ ವೈವಿಧ್ಯಮಯವಾಗಿರುವಾಗ ಅವುಗಳ ಸೈದ್ಧಾಂತಿಕ ಚೌಕಟ್ಟುಗಳನ್ನು ವಿರೋಧಿಸುವ ಸ್ತ್ರೀವಾದಗಳೂ ಅಷ್ಟೇ ಬಹುರೂಪಕ್ಕೆ ಬೆಳೆಯಬೇಕಾಗಿದೆ. ಜಾತಿ-ಜೆಂಡರ್‌ಗಳ ಒಳಗಿನ ಸಂಕೀರ್ಣ ಸಂಬಂಧಗಳ ಮಹತ್ವಪೂರ್ಣ ಅರಿವಿಗೆ ಭಾರತದ ಸ್ತ್ರೀವಾದಿಗಳೂ ಅಭಿಮುಖವಾಗಬೇಕಾದದ್ದು ಪ್ರಶ್ನಾತೀತವಾಗಿ ಮುಖ್ಯವಾಗಿರುತ್ತದೆ.

ಡಾ॥ ಬಿ. ಎನ್. ಸುಮಿತ್ರಾಬಾಯಿ
ನಂ. ೩೫, ೭ನೇ ಮುಖ್ಯರಸ್ತೆ, ಪ್ರಮೋದ ಬಡಾವಣೆ, ಬೆಂಗಳೂರು – ೫೬೦ ೦೮೫

## 'ಹೊಸತು' ಓದುಗರ – ಲೇಖಕರ ಸಂವಾದ ಕಾರ್ಯಕ್ರಮ

೨೦೧೪ ಫೆಬ್ರವರಿ ೧೬ರ ಭಾನುವಾರದಂದು ಬೆಳಗ್ಗೆ ೧೦ ಗಂಟೆಗೆ **ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್** (ಬಿ. ಪಿ. ವಾಡಿಯಾ ರಸ್ತೆ, ಬಸವನಗುಡಿ, ಬೆಂಗಳೂರು– ೪) ಇಲ್ಲಿ ಸಂವಾದ ಕಾರ್ಯಕ್ರಮವೊಂದನ್ನು ಏರ್ಪಡಿಸಲಾಗಿದೆ.

'ಹೊಸತು' ಲೇಖಕರು, ಓದುಗರು, ಹಿತೈಷಿಗಳು ಈ ಸಂವಾದ ಕಾರ್ಯಕ್ರಮದಲ್ಲಿ ಭಾಗವಹಿಸಬೇಕಾಗಿ ವಿನಂತಿ.

– ಸಂಪಾದಕ



ನಾ. ಡಿಸೋಜ ಕನ್ನಡದ ಮಹತ್ವದ ಬರಹಗಾರರು. ಯಾವ ಗುಂಪು, ಪಂಗಡ ಕಟ್ಟಿಕೊಳ್ಳದೆ ಗಂಭೀರವಾಗಿ ತಮ್ಮನ್ನು ತಾವು ಸಾಹಿತ್ಯ ಕೃಷಿಯಲ್ಲಿ ತೊಡಗಿಸಿ ಕೊಂಡವರು. ಅವರ ಕೃತಿಗಳು ಜನಪ್ರಿಯತೆ ಹಾಗೂ ಜನಪರತೆಯ ಪ್ರತೀಕವಾಗಿವೆ. ಸೌಮ್ಯ ಸ್ವಭಾವದ ಮಾನವತಾವಾದಿ ನಾ. ಡಿಸೋಜ ಅವರನ್ನು ಜನವರಿ ತಿಂಗಳಲ್ಲಿ ಕೊಡಗಿನಲ್ಲಿ ನಡೆಯಲಿರುವ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಗಿದೆ. 'ಹೊಸತು' ಬಳಗ ನಾ. ಡಿಸೋಜ ಅವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತದೆ. ಈ ಸಂದರ್ಭದಲ್ಲಿ ಸಾಗರದ ಶ್ರೀ ಬಿ. ಎಲ್. ರಾಜು ಹಾಗೂ ಶ್ರೀ ಎಚ್. ಬಿ. ರಾಘವೇಂದ್ರ ಅವರು ನಾ. ಡಿಸೋಜ ಅವರ ಸಂದರ್ಶನವನ್ನು 'ಹೊಸತು' ಪರವಾಗಿ ನಡೆಸಿಕೊಟ್ಟಿದ್ದಾರೆ. ಅವರಿಗೆ 'ಹೊಸತು'ವಿನಿಂದ ವಂದನೆಗಳು.

*– ಸಂಪಾದಕರು*

# ಮೂಢನಂಬಿಕೆ ಹಿಂದೆ ತುಂಬ ಅಪಾಯಗಳಿವೆ

## – ನಾ. ಡಿಸೋಜ

**ಹೊಸತು :** ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾಗಿದ್ದೀರಿ. 'ಹೊಸತು' ಪರವಾಗಿ ಶುಭಾಶಯಗಳು. ಈ ಸಂದರ್ಭದಲ್ಲಿ ನಿಮ್ಮ ಪ್ರತಿಕ್ರಿಯೆ ಏನು ?

**ನಾ. ಡಿಸೋಜ :** ನಿಜ ಹೇಳಬೇಕಂದ್ರೆ, ನನ್ನ ಬರಹ ಆರಂಭವಾಗಿದ್ದೇ ಪ್ರಜಾವಾಣಿಯ ವಾಚಕರ ವಾಣಿಗೆ ಬರೆಯುತ್ತಿದ್ದ ಪತ್ರಗಳಿಂದ. ಬರೀತಾ ಬರೀತಾ ನಾನು ಎಲ್ಲಾ ಪ್ರಕಾರಗಳ ಸಾಹಿತ್ಯಕೃತಿಗಳನ್ನು ಬರೆದೆ. ಇದು ನನ್ನನ್ನು ಹುಡುಕಿಕೊಂಡು ಬಂದಿರುವ ಗೌರವ ಅಂತ ನಾನು ಭಾವಿಸುತ್ತೇನೆ. ಬೇರೆಯವರು ಇದನ್ನು ದೊಡ್ಡಸ್ತಿಕೆ ಅಂದ್ಕೋಬಹುದು. ಆದರೆ ನಾನು ಇದನ್ನು ನನಗೆ ಸಿಕ್ಕಿರುವ ಗೌರವ ಅಂತಾನೆ ಅಂದ್ಕೋತೀನಿ. ಯಾಕೆಂದರೆ ನಾನು ಈ ಗೌರವಕ್ಕೆ ಯಾವ ಪ್ರಯತ್ನಾನೂ ಮಾಡಿದೋನು ಅಲ್ಲ. ಅದರ ನಿರೀಕ್ಷೆನೂ ಮಾಡಿರಲಿಲ್ಲ. ಯಾವತ್ತೂ ನನ್ನ ಪಾಡಿಗೆ ನಾನಿದ್ದವನು. ಸಣ್ಣ ಮಟ್ಟದಲ್ಲಿ ನಾನು ಬರೆದಿದ್ದೇನೆ. ಅದರ ಫಲ ಈ ರೀತಿ ಬಂದಿದೆ ಅಂತಾನೆ ನಾನು ಭಾವಿಸ್ತೇನೆ.

**ಹೊಸತು :** 'ಮುಳುಗಡೆ' ನಿಮಗೆ ಹೆಸರು ತಂದುಕೊಟ್ಟ ಕಾದಂಬರಿ. ಆದರೆ ಮುಳುಗಡೆ ಅನ್ನುವುದು ನಿಮ್ಮ ಒಟ್ಟೂ ಸಾಹಿತ್ಯದ ಧ್ವನಿಯೂ ಅನ್ನಿಸ್ತದೆ. ನಮ್ಮೆದುರಿನ ವಾಸ್ತವಗಳೂ ಹಾಗೆಯೇ ಇವೆ. ಈ ಸಂದರ್ಭದಲ್ಲಿ ಸಾಹಿತ್ಯ ಮತ್ತು ಲೇಖಕನ ಸಂಬಂಧ ಏನು ?

**ನಾ. ಡಿ. :** ಸಾಹಿತಿಗೆ ಸಾಮಾಜಿಕ ಜವಾಬ್ದಾರಿ ಇದೆ. ಸಾಹಿತಿಗೆ ಆ ಬದ್ಧತೆಯೂ ಇರ್ತದೆ. ಸಾಹಿತ್ಯ ಇರಬೇಕಾದ್ದೇ ಹಾಗೆ. ಅದು ನನ್ನ ಆಶಯ. ಸಮಾಜದ ಹೆಚ್ಚು ಸಮಸ್ಯೆಗಳು ಗಮನಕ್ಕೆ ಬರುವುದು ಸಾಹಿತಿಗೆ. ಆತ ತನ್ನಲ್ಲೇ ಕೊರಗುವುದು. ಹಲವಾರು ಸಾಮಾಜಿಕ ಅವ್ಯವಸ್ಥೆಗಳಿಂದಾಗಿ, ದೋಷಗಳಿಂದಾಗಿ ಬಹಳ ಆತಂಕಕ್ಕೊಳಗಾದೋನು ಮೊದಲನೆಯದಾಗಿ ಸಾಹಿತಿ. ಆ ಆತಂಕವನ್ನು ಮೊದಲು ಆತ ಹೊರಹಾಕಬೇಕು. ಕೊನೆಗೆ ಆ ಆತಂಕಕ್ಕೆ ಎಲ್ಲೋ ಒಂದು ಕಡೆ ಆತ ಜನರಿಗೆ ಧೈರ್ಯವನ್ನೋ ಸರಿಯಾದ ಮಾರ್ಗವನ್ನೋ ತೋರಿಸಿಕೊಡಬೇಕು. ಹಾಗಂತ ಸಾಹಿತ್ಯದ ಮೂಲಕ ನೀತಿಪಾಠ ಮಾಡೋದಲ್ಲ. ಬದಲಿಗೆ ಜನರು ಯಾವ ಹಂತದಲ್ಲಿ ಬದುಕಿದ್ದಾರೆ, ಯಾವ ಹಂತದಲ್ಲಿ ಇದ್ದಾರೆ ಅಂತ ಜನರಿಗೆ ಸಾಹಿತಿ ತಿಳಿಸಿಕೊಡಬೇಕು.

ಇನ್ನು 'ಮುಳುಗಡೆ' ಕಾದಂಬರಿ ಬರೆಯೋವಾಗ ಶರಾವತಿ ಒಂದೇ ನನ್ನ ಗಮನದಲ್ಲಿದ್ದಿದ್ದು. ಆದರೆ ಇವತ್ತು ಬೃಹತ್ ಕಾರ್ಖಾನೆಗಳು, ಕಾರು ಕಂಪನಿಗಳು...... ಹೀಗೆ ಹಲವಾರು ಬೇರೆ ಬೇರೆ ಮುಳುಗಡೆಗಳು ಆರಂಭವಾಗಿಬಿಟ್ಟಿವೆ. ನಮ್ಮ ರೈತರು ಜಮೀನುಗಳನ್ನು ಬಿಟ್ಟು ಪೇಟೆಗಳಿಗೆ ಬರ್ತಿದಾರೆ. ಇದೇ ಪರಿಸ್ಥಿತಿ ಮುಂದುವರಿದ್ರೆ ನಮ್ಮ ಗತಿ ಏನು ? ನಮಗೆ ಅನ್ನ ಬೆಳೆದು




**ಸಂದರ್ಶಕರು : ಬಿ. ಎಲ್. ರಾಜು ಹಾಗೂ ಎಚ್. ಬಿ. ರಾಘವೇಂದ್ರ**

ಕೊಡೋರು ಯಾರು ? ರೈತರಿಗೆ ಬಹಳ ದೊಡ್ಡ ಗೌರವ ಇತ್ತು ಒಂದು ಕಾಲದಲ್ಲಿ, ಇವತ್ತು ನಾವು ಆ ಗೌರವವನ್ನು ರೈತರಿಗೆ ಕೊಟ್ಟಿಲ್ಲ. ರೈತರೂ ಅದನ್ನು ಉಳಿಸಿಕೊಂಡಿಲ್ಲ. ಪರಿಸ್ಥಿತಿ ಹೀಗಿದೆ.

ಮುಳುಗಡೆ ಅನ್ನೋದು ನನ್ನ ದೃಷ್ಟಿಯಲ್ಲಿ ಅನ್ನ ಬೆಳೆಯೋ ಜಮೀನುಗಳು 'ಮುಳುಗಡೆ'ಯಾಗೋದು, ಕೊನೆಗೆ ಹಲವಾರು ಸಂಸ್ಕೃತಿ, ನಂಬಿಕೆಗಳ 'ಮುಳುಗಡೆ'. ನನ್ನ ಕಾದಂಬರಿಯಲ್ಲಿ ಅದನ್ನೇ ಪ್ರಧಾನವಾಗಿ ಡೀಲ್ ಮಾಡಿದ್ದೀನಿ. ಅಲ್ಲಿ ಶರಾವತಿ, ವಾರಾಹಿ ಒಂದು ನೆಪ ಮಾತ್ರ.

ಆದ್ರೂ ಕೂಡಾ ಸರ್ ಎಂ. ವಿಶ್ವೇಶ್ವರಯ್ಯನೋರು ಮಹಾತ್ಮಾಗಾಂಧಿ ವಿದ್ಯುತ್ ಯೋಜನೆ ಕಟ್ಟೋ ಸಂದರ್ಭದಲ್ಲಿ ಜೋಗದಲ್ಲಿ ಮುಳುಗಡೆಗೆ ಒಳಪಡೋರೆಲ್ಲರ ಸಭೆ ಕರೆದಿದ್ರಂತೆ. ಸಭೆ ಕರೆದು ಜನರನ್ನು ಕನ್ವಿನ್ಸ್ ಮಾಡಿದ್ದಾರೆ. "ನಾವು ಡ್ಯಾಂ ಕಟ್ಟುತ್ತಾ ಇದ್ದೀವಿ. ಇಷ್ಟು ಪ್ರದೇಶ ಮುಳುಗಡೆಯಾಗ್ತದೆ. ನೀವು ಮುಳುಗಡೆಗೆ ಒಳಗಾಗ್ತೀರ. ನೀವು ನಿಮ್ಮ ಜಮೀನನ್ನು ನಮಗೆ ಬಿಟ್ಟು ಕೊಡಬೇಕು" ಅಂತ ಕನ್ವಿನ್ಸ್ ಮಾಡಿದ್ದಾರೆ. ಜನ ಆ ಕನ್ವಿನ್ಸಿಂಗೇ ಮರುಳಾಗಿಬಿಟ್ಟರು.

ಆದರೆ ಇವತ್ತು ಮುಳುಗಡೆ ಮಾಡೋರು ಯಾರೂ ಕೂಡಾ ಇಂಥಾ ಒಂದು ಮಾನವೀಯ ಗುಣ ತೋರಿಸ್ತಾ ಇಲ್ಲ. "ನಾವು ಪರಿಹಾರ ಕೊಡ್ತೀವಿ, ಹಣ ಕೊಡ್ತೀವಿ. ನೀವು ಬಿಡದಿದ್ದರೆ ಪೊಲೀಸರಿಗೆ ಹೇಳ್ತೀವಿ. ನಿಮ್ಮನ್ನು ಒದ್ದು ಒಳಗ್ಹಾಕ್ತೀವಿ" – ಈ ರೀತಿ ಮಾತಾಡ್ತಾರೆಯೇ ಹೊರತು ಮಾನವೀಯವಾಗಿ ಜನರನ್ನು ಅಪ್ರೋಚ್ ಮಾಡ್ತಾ ಇಲ್ಲ. ಮುಳುಗಡೆಯಾಗುವ ಜನರಲ್ಲಿ ಆ ನೋವಿದೆ. ನಾನು ಅದೇ ಆಫೀಸಿನಲ್ಲಿ ಕೆಲಸ ಮಾಡಿದ್ದರಿಂದ ನಾನು ಅವರ ನೋವನ್ನು ಬಹಳ ಹತ್ತಿರದಿಂದ ಅರ್ಥಮಾಡಿಕೊಂಡಿದ್ದೀನಿ. ಇವತ್ತಿಗೂ ಬಹಳ ಜನ ನನ್ನತ್ರ ಬರ್ತಾರೆ. ನೀವೊಬ್ರೇ ನಮ್ಮನ್ನು ಅರ್ಥಮಾಡ್ಕೊಂಡೋರು ಅಂತ ಹೇಳ್ತಾರೆ.

ಮನುಷ್ಯನಿಗೆ ಬೇಕಿರೋದು ಇದೆ. ತನ್ನ ನೋವನ್ನು ಮತ್ತೊಬ್ಬ ಅರ್ಥ ಮಾಡಿಕೊಳ್ಳೋದು ಅಂದರೆ ಅವನಿಗೆ ಅನುಕಂಪ ತೋರ್ಸೋದು. ಆದರೆ ಆ ಅನುಕಂಪ ಮುಳುಗಡೆಯವರಿಗೆ ಇವತ್ತಿಗೂ ಸಿಕ್ತಾ ಇಲ್ಲ.

**ಹೊಸತು :** ರೈತನನ್ನ ನಾವು ಗೌರವದಿಂದ ನೋಡಲಿಲ್ಲ, ರೈತ ಕೂಡಾ ಅದನ್ನು ಉಳಿಸಿಕೊಳ್ಳಲಿಲ್ಲ ಅಂತ ಒಂದು ಮಾತು ಹೇಳಿದಿರಿ. ಅದರ ಅರ್ಥ ಏನು ?

**ನಾ. ಡಿ. :** ರೈತ ಯಾವತ್ತೂ ಪರಿಸರವನ್ನು ಅವಲಂಬಿಸಿದೋನು. ಮಳೆ ಬಂದರೆ ವ್ಯವಸಾಯ, ಇಲ್ಲದಿದ್ರೆ ಇಲ್ಲ. ಬಹಳ ಸಲ ಅವನ ಶ್ರಮ ಎಲ್ಲಾ ವ್ಯರ್ಥವಾಗೋ ಸಾಧ್ಯತೆ ಇದೆ. ಅಪರೂಪಕ್ಕೆ ಫಲ ಬರೋ ಸಾಧ್ಯತೆ ಇದೆ. ಯಾಕೆಂದರೆ ಅವನು ಆಕಾಶ ನೋಡ್ತಾ ಕುಳಿತುಕೊಳ್ಳೋನು. ಪುಟ್ಟಪ್ಪನವರು ರೈತನ ಬವಣೆಗಳನ್ನು ತುಂಬ ಚೆನ್ನಾಗಿ ಗಮನಿಸಿದ್ದು. ಸರ್ಕಾರ ರೈತಗೀತೆ ಅಂತ ವೈಭವೀಕರಣ ಮಾಡ್ತು, ಹೊರತು ರೈತರ ಬಗ್ಗೆ ಏನೂ ಮಾಡಲಿಲ್ಲ. ರೈತರಿಗೆ ಬರೀ ಮೋಸ ಆಗಿದೆ.

ಮಂಗಳೂರು ಹತ್ರ ಬರೀ ಕುಣಬಿಗಳು ಇರೋ ಹಳ್ಳಿಗೆ ಹೋಗಿದ್ದೆ ಒಂದ್ಸಲ. ಅಲ್ಲಿ ಅವರ ಬೆಳೆ ಬೆಳೆದಿದ್ದ ೨೦೦–೩೦೦ ಎಕರೆ ಜಮೀನನ್ನು ವಶಪಡಿಸಿಕೊಂಡು ಸರ್ಕಾರ ಫ್ರಾನ್ಸ್ ದೇಶದ ಒಂದು ಕೆಮಿಕಲ್ ಫ್ಯಾಕ್ಟರಿ ಸ್ಥಾಪನೆ ಮಾಡೋದಕ್ಕೆ ಪರ್ಮಿಶನ್ ಕೊಟ್ಟಿದೆ. ಅದಕ್ಕಿಂತ ಮುಂಚೆ ಜನಗಳ ಫಸಲು ಬೆಳೆದ ಭೂಮಿಗೆ ಲಾರಿಗಟ್ಟಲೆ ಕೆಮ್ಮಣ್ಣು ತಂದು ಸುರಿದು ಅದನ್ನು ಬಂಜರು ಭೂಮಿ ಅಂತ ಡಿಕ್ಲೇರ್ ಮಾಡಿದೆ ಸರ್ಕಾರ. ಎಂಥಾ ಮೋಸ ಮಾಡಿದೆ ನೋಡಿ ಸರ್ಕಾರ. ಮತ್ತೆ ನೀವು ರೈತಗೀತೆ ಹಾಡೋದು ಯಾಕೆ ? ಇವತ್ತು ಆ ಜನ ಕಣ್ಣೀರು ಸುರಿಸ್ತಿದ್ದಾರೆ. ಇದು ನಮ್ಮ ನೋವು.

**ಹೊಸತು :** ಹಾಗಾದರೆ ಸಾಹಿತ್ಯ ಯಾರ ಪರವಾಗಾದರೂ ಇರ್ಬೇಕಾ ? ಬೇಡವಾ ?

**ನಾ. ಡಿ. :** ಸಾಹಿತ್ಯ ಯಾವತ್ತೂ ಕೂಡಾ ಸಮಾಜದ ಒಳಿತಿನ ಪರವಾಗಿರಬೇಕು. ನೊಂದವರ ಪರವಾಗಿರಬೇಕು. ಕಲೆಗಾಗಿ ಕಲೆ ಅನ್ನುವುದರಲ್ಲಿ ನನಗೆ ನಂಬಿಕೆ ಇಲ್ಲ. ಜಾನಪದ ಸೇರಿದಂತೆ ಎಲ್ಲಾ ಸಾಹಿತ್ಯವೂ ಮನುಷ್ಯನ ಬದುಕಿನ ಪರವಾಗಿ ಇದೆ ಹೊರತು ಮನುಷ್ಯ ವಿರೋಧಿ ಆಗಿಲ್ಲ. ಪುಟ್ಟಪ್ಪ, ಕಾರಂತ ಮುಂತಾದವರು ಮನುಷ್ಯಪರ ಆಲೋಚನೆ ಮಾಡಿದ ದೊಡ್ಡ ಬರಹಗಾರರು.

**ಹೊಸತು :** ನಿಮ್ಮ ಸಾಹಿತ್ಯದ ಮೇಲೆ ಯಾವ ಪ್ರೇರಣೆಗಳು, ಪ್ರಭಾವಗಳು ಆಗಿವೆ ?



ನಾ. ಡಿಸೋಜ ದಂಪತಿಗಳೊಂದಿಗೆ ಸಂದರ್ಶಕರಾದ ಶ್ರೀ. ಬಿ. ಎಲ್. ರಾಜು ಹಾಗೂ ಶ್ರೀ. ಎಚ್. ಬಿ. ರಾಘವೇಂದ್ರ

**ನಾ. ಡಿ.:** ನಾನು ಬಹಳ ಓದಿದ್ದೇನೆ. ಕಾರಂತರು, ಪುಟ್ಟಪ್ಪನವರು, ತೇಜಸ್ವಿಯವರನ್ನು ಬಹಳ ಸಲ ಓದಿದ್ದೇನೆ. ಅದರಲ್ಲಿ ನನಗೆ ಮುಖ್ಯವಾದದ್ದು ಪರಿಸರ ಅಂತ ಅನ್ನಿಸ್ತು. ನನ್ನ ಪ್ರಿಯವಾದ ವಸ್ತು ಪರಿಸರ. ಪರಿಸರವನ್ನು ಅರ್ಥಮಾಡಿಕೊಳ್ಳದಿದ್ದರೆ, ಅದರ ತತ್ವಗಳನ್ನು ಗಮನಿಸದಿದ್ದರೆ ಪರಿಸರ ನಮ್ಮ ಮೇಲೆ ಒಂದು ದಿನ ತಿರುಗಿ ಬೀಳ್ತದೆ. ೧೨೦ ಇಂಚು ಮಳೆ ಬೀಳ್ತಿದ್ದ ಪರಿಸರದಲ್ಲಿ ಈಗ ೭೮ ಇಂಚು ಮಳೆ ಬೀಳ್ತಿದೆ. ಇದರ ಅರ್ಥ ಏನು ? ಪರಿಸರದ ಜೊತೆ ಹೊಂದಾಣಿಕೆ ಇಲ್ಲದೆ ಹೋದ್ರೆ ಅದು ನಮ್ಮ ಮೇಲೆ ಸೇಡು ತೀರಿಸಿಕೊಳ್ತದೆ.

**ಹೊಸತು :** ಸರ್ ನಿಮ್ಮ ಬರಹ ಸರ್ಕಾರದ ನಿಲುವಿನಲ್ಲಿ ಏನಾದರೂ ಬದಲಾವಣೆ ಮೂಡಿಸಿದೆಯಾ ?

**ನಾ. ಡಿ.:** ಸರ್ಕಾರಿ ಅಧಿಕಾರಿಗಳು ಮುಳುಗಡೆ ಸಂದರ್ಭದಲ್ಲಿ ಬಹಳ ಜಡವಾಗಿದ್ದರು. ನನ್ನ ಬರಹದಿಂದ ಅಧಿಕಾರಿಗಳ ದರ್ಪ ಸ್ವಲ್ಪ ಕಡಿಮೆಯಾಗಿದೆ ಅಂತ ಅನ್ನಿಸ್ತಿದೆ. ರೈತರ ಮನೆ ಬಾಗಿಲಿಗೆ ಅಧಿಕಾರಿಗಳು ಹೋಗೋ ಪ್ರಯತ್ನ ಮಾಡಿದರು.

ಸಾಹಿತ್ಯದಿಂದ ತಕ್ಷಣವೇ ದೊಡ್ಡ ಬದಲಾವಣೆ ಅಥವಾ ಪರಿಣಾಮ ಆಗಬೇಕು ಅಂತ ನಿರೀಕ್ಷೆ ಮಾಡೋಕಾಗಲ್ಲ.

**ಹೊಸತು :** ಸದ್ಯ ಸಾಹಿತ್ಯ ಮತ್ತು ಅಧಿಕಾರ ರಾಜಕಾರಣದ ನಡುವಿನ ಸಂಬಂಧದ ಬಗ್ಗೆ ಅತ್ಯಂತ ಆಕ್ಷೇಪಾರ್ಹವಾಗಿ ಚರ್ಚೆಯಾಗ್ತಿದೆ. ಏನಿದು ? ಯಾಕೆ ?

**ನಾ. ಡಿ.:** ಅದರಲ್ಲಿ ಸಾಹಿತಿಗಳದೂ ತಪ್ಪಿದೆ. ಸಾಹಿತಿಗಳಿಗೆ ಹೇಗೆ ಓಲೈಸಬೇಕು, ಹೇಗೆ ರಾಜಕಾರಣಿಗಳನ್ನು ಪಾಕೆಟ್ ಮಾಡ್ಕೋಬಹುದು ಅನ್ನೋದು ಚೆನ್ನಾಗಿ ಗೊತ್ತಿದೆ. ಹಿಂದೆ ಕಾರಂತರಂಥ ಸಾಹಿತಿಗಳು ಯಾವ ಹಂಗೂ ಇಲ್ಲದೆ ರಾಜಕಾರಣಿಗಳನ್ನು ಕೂರಿಸಿಕೊಂಡು ಮಾತಾಡ್ತಿದ್ದರು. ಆದರೆ ಈಗ ಯಾವುದೋ ಪ್ರಶಸ್ತಿಯ ಆಸೆಗೋ ಅಕಾಡೆಮಿಯ ಸ್ಥಾನಕ್ಕೋ ಆಸೆ ಪಟ್ಟಾಗ ಈ ಸ್ಥಿತಿ ಬರ್ತದೆ.

**ಹೊಸತು :** ನಿಮ್ಮನ್ನು ಜನಪರ ಸಾಹಿತಿಯಾಗಿ ನಾವು ಸಾಮಾನ್ಯವಾಗಿ ಎಡಪಂಥೀಯ ಚಳುವಳಿ, ಹೋರಾಟಗಳಲ್ಲಿ ಕಾಣ್ತೀವಿ. ಹಾಗೇನೇ ಬಲಪಂಥೀಯ ವೇದಿಕೆಗಳಲ್ಲೂ ಕಾಣಿಸಿಕೊಳ್ತೀರಿ. ನೀವು ಹಾಗೆ ಮಾಡಿದ್ರೆ ಬಲಪಂಥೀಯ ಆಲೋಚನೆಗಳನ್ನು ಮಾನ್ಯ ಮಾಡಿದಂತಾಗಲ್ಲವಾ ?

**ನಾ. ಡಿ.:** ನೀವು ಹೇಳ್ತಿರೋದು ಸರಿ ಇದೆ. ನಾವು ಹೋದರೆ ಆ ಆಲೋಚನೆಗಳನ್ನು ಮಾನ್ಯ ಮಾಡಿದಂತೆ ಆಗ್ತದೆ. ಆದರೆ ಅದರ ಜೊತೆಯಲ್ಲಿ ನನ್ನ ಉದ್ದೇಶ ಏನು ಅಂದ್ರೆ ನನಗೆ ಒಂದು ವೇದಿಕೆ ಸಿಕ್ಕಿದೆ. ಅಲ್ಲಿ ಹೋಗಿ ನನ್ನ ವಿಚಾರಗಳನ್ನು ಹೇಳಬಹುದಲ್ಲ; ಅಷ್ಟೇ ನನ್ನ ಉದ್ದೇಶ. ನಾನು ರಾಷ್ಟ್ರೋತ್ಥಾನದ ಎಲ್ಲಾ ವಿಚಾರಗಳನ್ನು ಒಪ್ಪುವುದಿಲ್ಲ. ಆದರೆ ರಾಷ್ಟ್ರೋತ್ಥಾನದವರು ತಂದಿರುವ ಮಕ್ಕಳ ಪುಸ್ತಕಗಳಲ್ಲಿ ನನ್ನ ಐದು ಪುಸ್ತಕಗಳಿವೆ. ಆದರೆ ಅವರು ನನ್ನ ಪುಸ್ತಕದಲ್ಲಿ ಒಂದು ಸಾಲನ್ನೂ ಬದಲಾಯಿಸಿಲ್ಲ, ತಿದ್ದಿಲ್ಲ.

**ಹೊಸತು :** ಆದರೆ ಒಂದು ಪೊಲಿಟಿಕಲ್ ಕರೆಕ್ಟ್‌ನೆಸ್ ಅಂತ ಒಂದು ಇದೆಯಲ್ಲ, ಅದರ ಹಿನ್ನೆಲೆಯಲ್ಲಿ ನಿಮ್ಮ ನಡಿಗೆ ಏನು ?

**ನಾ. ಡಿ.:** ನಾನು ಯಾವಾಗಲೂ ಹೋಗಲ್ಲ. ಶಿವಮೊಗ್ಗದಲ್ಲಿ 'ಭಾರತ ಮಾತಾ ಪೂಜನಾ' ಅಂತ ಒಂದು ಪ್ರೋಗ್ರಾಂ ಆಯ್ತು, ನನ್ನ ಹೆಸರು ಹಾಕಿ ಇನ್ವಿಟೇಶನ್ ಕೊಟ್ರು. ನಾನು ಕಾಗದ ಬರೆದೆ. "ನಾನು ಬರಲ್ಲ, ನಿಮ್ಮ ಭಾರತ ಮಾತಾ ಕಲ್ಪನೆಯಲ್ಲಿ ನನಗೆ ನಂಬಿಕೆ ಇಲ್ಲ" ಅಂತ. ಇಂಥದ್ದು ಹೊರಗೆ ಪ್ರಕಟವಾಗೋದಿಲ್ಲ.

ಮತ್ತೊಂದೇನೆಂದರೆ ಅಲ್ಲಿ ಕೆಲವರು ನನ್ನ ಸ್ನೇಹಿತರು ಇದ್ದಾರೆ. ಅವರಿಗೆ ನನ್ನ ವಿಷಯ ಗೊತ್ತಿದೆ. ಆದರೂ ನನ್ನ ಕರೀತಾರೆ. ನಾನು ಹೇಗೆ ಬೇಡಾ ಅಂತ ಅನ್ನಲಿ ?

**ಹೊಸತು :** ವರ್ತಮಾನದ ರಾಜಕಾರಣವನ್ನು ಅಭಿವೃದ್ಧಿ ರಾಜಕಾರಣ ಎಂದು ಕರೆಯಲಾಗ್ತಿದೆ. ಏನಿದು ಅಭಿವೃದ್ಧಿ ರಾಜಕಾರಣ ?

**ನಾ. ಡಿ.:** ರಾಜಕಾರಣಿಗಳ ಅಭಿವೃದ್ಧಿಯ ಕಲ್ಪನೆ ಬಹಳ ಮೋಸಮಾಡು ವಂಥದ್ದು. ನಿಜವಾಗಿಯೂ ಅಭಿವೃದ್ಧಿ ಅಂದ್ರೇನು ? ಜನಸಾಮಾನ್ಯರ ಏಳ್ಗೆಯೇ ಅಭಿವೃದ್ಧಿ. ಆದರೆ ಇವರು ಮಾಡುವ ಎಲ್ಲಾ ಯೋಜನೆಗಳು ಜನಸಾಮಾನ್ಯರನ್ನು ಎಲ್ಲಿ ಮುಟ್ಟಿವೆ ? ಜನಸಾಮಾನ್ಯರ ಬದುಕು ಏನಾದರೂ ಬದಲಾವಣೆ ಕಂಡಿದೆಯಾ ?

ನಮ್ಮ ದೇಶದ ಹಳ್ಳಿಗಳಲ್ಲಿನ ಗುಡಿಸಲುಗಳು ಸ್ವಲ್ಪ ಮಾಯವಾಗಿವೆ. ಇದು ಕಾಲದ ಪರಿವರ್ತನೆ. ಇದು ರಾಜಕಾರಣಿಗಳು ಮಾಡಿದ್ದು ಅಲ್ಲ. ಕಾಲ ಎಲ್ಲವನ್ನೂ ಬದಲಾವಣೆ ಮಾಡ್ತಾ ಹೋಗ್ತದೆ. ಆದರೆ ಹಳ್ಳಿಗಳಲ್ಲಿ ಇನ್ನೂ ಸಫರಿಂಗ್ ಇದೆ. ಶರಾವತಿ ಯೋಜನೆ ಮಾಡುವಾಗ ಉಚಿತವಾಗಿ ದೋಣಿ ಕೊಡ್ತೀವಿ ಅಂದಿದ್ರು. ಆದರೆ ಅಲ್ಲಿ ಪರಿಸ್ಥಿತಿ ಏನಾಗಿದೆ ? ಜನ ಬಹಳ ಕಷ್ಟದಲ್ಲಿದ್ದಾರೆ.

**ಹೊಸತು :** ಯಾಕೆ ಅಂದ್ರೆ ಇಡೀ ದೇಶದಾದ್ಯಂತ ಗುಜರಾತ್ ಮಾದರಿ ಅನ್ನೋದನ್ನು ತೇಲಿಬಿಟ್ಟು ಚರ್ಚೆ ಮಾಡಲಾಗ್ತಿದೆ ?

**ನಾ. ಡಿ.:** ಗೊತ್ತಿಲ್ಲ. ಯಾರೂ ಕೂಡಾ ಅಲ್ಲಿ ಏನಾಗಿದೆ ಅನ್ನೋದನ್ನು ಹೇಳ್ತಿಲ್ಲ. ನಮಗೆ ಸಿಕ್ಕಿರುವ ಮಾಹಿತಿ ಪ್ರಕಾರ ಬಂಡವಾಳಶಾಹಿಗಳಿಗೆ ಜಾಗ ಸಿಕ್ತಿದೆ. ಆದರೆ ಜನಸಾಮಾನ್ಯರಿಗೆ ಏನಾಗಿದೆ ? ಯಾರಿಗೆ ಗೊತ್ತು ?

**ಹೊಸತು :** ಆದರೆ ದೇವರಾಜ ಅರಸು ಮಾಡಿದ್ದು ಅಭಿವೃದ್ಧಿ ರಾಜಕಾರಣ ಅಲ್ಲವಾ ?

**ನಾ. ಡಿ.:** ಜನಸಾಮಾನ್ಯರು ಆವೇಶಕ್ಕೊಳಗಾದ್ರೆ ಯೋಚನೆ ಮಾಡಲ್ಲ. ಆದರೆ ಎಲ್ಲರೂ ಯೋಚನೆ ಮಾಡಬೇಕು. ಆವೇಶಕ್ಕೆ ಒಳಗಾದರೆ ವೈಚಾರಿಕ ಶಕ್ತಿ ಕಳೆದು ಹೋಗುತ್ತದೆ. ಆದರೆ ಮೋದಿ ಮರುಳು ಮಾಡುವ ವ್ಯಕ್ತಿ. ಆತ ಏನನ್ನೂ ಮಾಡಿ ಜನರನ್ನು ಮರುಳುಮಾಡಬಲ್ಲ ರಾಜಕಾರಣಿ. ಆದರೆ ಮೋದಿ ಚಳಕ ಹೀಗೇ ಇರಲ್ಲ. ಮೋದಿ ಭಾಷಣ ಕೇಳೋಕೆ ಹೋಗುವವರು ಎಲ್ಲರೂ ಓಟ್ ಹಾಕಲ್ಲ. ಬರೀ ತಮಾಷೆ ನೋಡೋಕೆ, ನಗಾಡ್ಲಿಕ್ಕೆ ಹೋಗ್ತಾರೆ. ನನಗೆ ಒಂದು ವಿಶ್ವಾಸ ಇದೆ, ಓಟ್ ಹಾಕೋವಾಗ ನಮ್ಮ ಜನ ಸರಿಯಾದ ನಿರ್ಣಯ ತಗೊಳ್ತಾರೆ.

**ಹೊಸತು :** ಶಾಲೆ ಮತ್ತು ಶಿಕ್ಷಣ ಮಾಧ್ಯಮಗಳ ವಿಷಯ ಕುರಿತು ಬಹಳ ಚರ್ಚೆಯಾಗ್ತಿದ್ದರೂ ಗೊಂದಲ ಮಾತ್ರ ಬಗೆಹರಿಯುವಂತೆ ಕಾಣ್ತಿಲ್ಲ, ಇದನ್ನು ಹೇಗೆ ನಿರ್ವಹಿಸುವುದು ?

**ನಾ. ಡಿ.:** ಈ ವಿಷಯದಲ್ಲಿ ಸರ್ಕಾರ ಸ್ವಲ್ಪ ಗಟ್ಟಿಯಾಗಿ ನಿಲ್ಲಬೇಕು. ನಮ್ಮ ಮನೆಯಲ್ಲಿ ಮಕ್ಕಳ ಅನ್ನದ ವಿಷಯ ಕಾಡ್ತಾ ಇದೆ. ಇಂಗ್ಲಿಷ್ ಕಲಿಯದಿದ್ದರೆ

ಕೆಲಸ ಸಿಗೋದಿಲ್ಲ ಅನ್ನುವ ಪರಿಕಲ್ಪನೆ ಇದೆ. ಅದು ಸರಿಯಲ್ಲ, ಯಾವ ಕನ್ನಡ ಸಾಹಿತಿಯೂ ಇಂಗ್ಲಿಷ್ ದ್ವೇಷಿಯಲ್ಲ. ಇಂಗ್ಲಿಷ್‌ನಿಂದ ಆಗಿರುವ ಪ್ರಯೋಜನ, ಬದಲಾವಣೆಗಳು ಕನ್ನಡ ಸಾಹಿತ್ಯಕ್ಕೆ ಬಹಳ ದೊಡ್ಡದು. ನಮ್ಮ ಅಭಿಪ್ರಾಯ ಇಷ್ಟೆ: ನೀವು ಕನ್ನಡವನ್ನು ಬಲಿಕೊಟ್ಟು ಇಂಗ್ಲಿಷ್ ಕಲಿಸಬೇಡಿ. ನಮ್ಮ ಮಕ್ಕಳಿಗೆ ಕನ್ನಡ ಕಲಿಸಿ. ಚಿಕ್ಕಂದಿನಿಂದ ಮಕ್ಕಳು ಬೆಳೆಯುವುದು ಕನ್ನಡ ಭಾಷೆಯಲ್ಲಿ. ಹಾಲು ಹಾಕೋನು, ತರಕಾರಿ ಮಾರೋನು, ಕೆಲಸ ಮಾಡೋನು ಹೀಗೆ ಎಲ್ಲಾ ಮಾತಾಡೋದು ಕನ್ನಡದಲ್ಲಿ. ಅನುಭವವನ್ನು ವ್ಯಕ್ತಪಡಿಸೋಕೆ ಸಾಧ್ಯವಾಗೋದು ಕನ್ನಡದಲ್ಲಿ. ವಿಶ್ವದ ಎಲ್ಲಾ ಶಿಕ್ಷಣತಜ್ಞರು ಇದನ್ನೇ ಹೇಳುತ್ತಿದ್ದಾರೆ.

ಭಾರತೀಯರು ಅನುಕರಣಶೀಲರು. ಬ್ರಿಟಿಷರು ಇದ್ದಾಗ ಅವರ ಸಂಸ್ಕೃತಿ, ಭಾಷೆ ಕಲಿತು ಅನುಕರಿಸಿದಿವಿ. ಈಗ ಅಮೇರಿಕಾ ಸಂಸ್ಕೃತಿ, ಭಾಷೆಗಳ ಅನುಕರಣೆ ಮಾಡ್ತಾ ಇದ್ದೀವಿ. ಅವರು ಏನು ಮಾಡಿದರೂ ನಾವು ಅನುಕರಣೆ ಮಾಡ್ತಾ ಇದ್ದೀವಿ.

**ಹೊಸತು :** ಜಾಗತೀಕರಣದ ಹಿನ್ನೆಲೆಯಲ್ಲಿ ನಮ್ಮ ಭಾಷೆಗಳ ಒತ್ತಡಗಳನ್ನು ನಿರ್ವಹಿಸುವ ಕ್ರಮಗಳು ಯಾವುವು? ನಮ್ಮ ಮೂಲ ಬೇರುಗಳನ್ನು ಉಳಿಸಿಕೊಳ್ಳುವುದು ಹೇಗೆ?

**ನಾ. ಡಿ. :** ವ್ಯವಹಾರದ ಭಾಷೆಯಾಗಿ, ಜಗತ್ತನ್ನು ಅರ್ಥಮಾಡಿಕೊಳ್ಳುವ ಭಾಷೆಯಾಗಿ ಇಂಗ್ಲಿಷ್‌ಅನ್ನು ಇಟ್ಟುಕೊಳ್ಳೋಣ. ಕನ್ನಡವನ್ನು ಮನೆಯ ಭಾಷೆಯಾಗಿ ಇಟ್ಟುಕೊಳ್ಳೋಣ. ನಮ್ಮ ಮೊಮ್ಮಗ ಐದು ಭಾಷೆಗಳನ್ನು ಮಾತಾಡ್ತಾನೆ. ಅವನಿಗೆ ಈಗ ೮ ವರ್ಷ. ನಮ್ಮ ಮಕ್ಕಳ ಬಗ್ಗೆ ಚಿಂತೆ ಮಾಡೋದು ಬ್ಯಾಡ. ಸಹಜವಾಗಿ ಯಾವ ಭಾಷೆಯನ್ನಾದರೂ ಕಲೀತಾವೆ. ತಂದೆ ತಾಯಂದಿರಲ್ಲೇ ಕನ್ನಡ ಕಲಿಸುವ ಮನೋಭಾವ ಇಲ್ಲ.

ವಿಧಾನಸೌಧದಲ್ಲಿ ನಮ್ಮ ಸಮಸ್ಯೆ ಇರೋದು. ಅಧಿಕಾರಿಗಳದು ತಪ್ಪು. ಅವರದು ಇಂಗ್ಲಿಷ್ ಮನೋಭಾವ. ಇಂಗ್ಲಿಷ್ ಭಾಷೆ ಬಗ್ಗೆ ಅವರಿಗೆ ದೊಡ್ಡ ವ್ಯಾಮೋಹ ಇದೆ. ತಮಿಳುನಾಡಿನಲ್ಲಿ, ಮಹಾರಾಷ್ಟ್ರದಲ್ಲಿ ತಮಿಳು ಇಲ್ಲದಿದ್ದರೆ, ಮರಾಠಿ ಇಲ್ಲದಿದ್ದರೆ ಏನೂ ಮಾಡೋಕಾಗಲ್ಲ. ಮಹಾರಾಷ್ಟ್ರದಲ್ಲಿ ನಮ್ಮ ಅಣ್ಣನ ಮಗ ಬೆಳಗ್ಗೆ ಐದು ಗಂಟೆಗೆ ಎದ್ದು ಮರಾಠಿ ಕ್ಲಾಸಿಗೆ ಹೋಗ್ತಾನೆ, ಯಾಕೆ ಅವನಿಗೆ ತೊಂದರೆ ಕೊಡ್ತಿಯಾ ಅಂತ ನಮ್ಮ ಅಣ್ಣನನ್ನ ಕೇಳಿದರೆ ನಾಳೆ ನನ್ನ ಮಗ ಮಹಾರಾಷ್ಟ್ರದಲ್ಲಿ ಬದುಕಬೇಕಲ್ಲಾ, ಅದಕ್ಕೆ ಮರಾಠಿ ಕಲಿಸ್ತಿದ್ದೀನಿ ಅಂತಾನೆ. ಅಂತಹ ಪರಿಸ್ಥಿತಿ ಇಲ್ಲಿ ಇದೆಯಾ? ಬೆಂಗಳೂರಿನಲ್ಲಿ ಐವತ್ತು ವರ್ಷ ಬದುಕಿರುವ ಒಬ್ಬನಿಗೆ ಒಂದು ಅಕ್ಷರಾನೂ ಕನ್ನಡ ಬರೋದಿಲ್ಲ. ಆ ತರಹ ನಾವೇನು ಮಾಡಿದ್ದೀವಿ ಇಲ್ಲಿ?

**ಹೊಸತು :** ಶಾಸ್ತ್ರೀಯ ಭಾಷೆ ಸ್ಥಾನಮಾನ ಕನ್ನಡಕ್ಕೆ ಸಿಕ್ತು. ಆದರೆ ಅದರಿಂದ ನಮ್ಮ ಭಾಷೆಯ ಅಭಿವೃದ್ಧಿಗೆ ಯಾವ ಪ್ರಯೋಜನ ಆಗಿದೆ?

**ನಾ. ಡಿ. :** ತಮಿಳುನಾಡಿನವರು ಬಹಳ ಗ್ರ್ಯಾಂಟ್ಸ್ ತಗೊಂಡಿದ್ದಾರೆ. ವರದಿ ಬಂದಿದೆ. ಕರ್ನಾಟಕದಲ್ಲಿ ಗ್ರ್ಯಾಂಟ್ಸ್‌ಗೆ ಯಾವ ಪ್ರಯತ್ನ ಕೂಡಾ ನಡೆದಿಲ್ಲ. ನಮ್ಮಲ್ಲಿ ತುಂಬಾ ಕೆಲಸ ಆಗಬೇಕಿದೆ. ನಮ್ಮ ಮೂಲ ಗ್ರಂಥಗಳನ್ನು ಹುಡುಕಬೇಕಿದೆ. ಅವುಗಳನ್ನು ಪ್ರಕಟಿಸಬೇಕಿದೆ. ಅಧ್ಯಯನ ಆಗಬೇಕಿದೆ.

ನೃಪತುಂಗ ಒಂದು ಕಡೆ 'ಕನ್ನಡಂಗಳ್' ಅನ್ನುವ ಮಾತು ಬಳಸುತ್ತಾನೆ. ಕನ್ನಡ ಅಲ್ಲ, 'ಕನ್ನಡಂಗಳ್'. ಅದರರ್ಥ ಇಲ್ಲಿ ಹಲವು ಕನ್ನಡಗಳಿವೆ. ಅವು ಆಡುಭಾಷೆಗಳು. ಅದರ ಬಗ್ಗೆ ಅಧ್ಯಯನ ಆಗಬೇಕಿದೆ.

ಈಗ, ಬೇಂದ್ರೆಯವರು ಧಾರವಾಡದ ಭಾಷೆಯ ಮೂಲಕ ಬರೆದರು, ತಮ್ಮ ಕಾವ್ಯದ ಮೂಲಕ ಇಡೀ ಕರ್ನಾಟಕಕ್ಕೆ ಧಾರವಾಡ ಭಾಷೆಯನ್ನು ಹಂಚಿದರು. ಕಾರಂತರು ದಕ್ಷಿಣ ಕನ್ನಡ ಭಾಷೆಯನ್ನು ಪ್ರಚಾರ ಮಾಡಿದರು. ಮಿರ್ಜಿ ಅಣ್ಣಾರಾಯರು ಬೆಳಗಾವಿಯ ಭಾಷೆಯಲ್ಲಿ ಬರೆದರು. ಈ ತರಹದ ವೈವಿಧ್ಯಮಯ ಆಡುಭಾಷೆಗಳಿವೆ ಇಲ್ಲಿ. ಅದರ ಬಗ್ಗೆ ನಾವು ಯಾಕೆ ಅಧ್ಯಯನ ಮಾಡೋದಿಲ್ಲ?

ನಮ್ಮ ಜನಕ್ಕೆ ನಾವು ನಮ್ಮ ಭಾಷೆಯ ಬಗ್ಗೆ ಅಭಿಮಾನ ಹುಟ್ಟಿಸಬೇಕು. ತಮಿಳುನಾಡಿನವರು ಏನು ಹೇಳ್ತಾರೆ ಅಂದರೆ ಶಿವ ಡಮರುಗ ಬಾರಿಸಿದಾಗ ಒಂದು ಕಡೆಯಿಂದ ಸಂಸ್ಕೃತ ಹುಟ್ಟಿಕೊಳ್ತು, ಮತ್ತೊಂದು ಕಡೆಯಿಂದ ತಮಿಳು ಹುಟ್ಟಿಕೊಳ್ತು ಅಂತಾರೆ. ತಮಿಳು ಭಾಷೆಗೆ ಎಂತಹ ದೊಡ್ಡ ಘನತೆ ತಂದುಕೊಂಡಿದ್ದಾರೆ ನೋಡಿ. ಆ ತರದ ಕಲ್ಪನೆ ಕನ್ನಡಕ್ಕೆ ಸಿಕ್ಕಿಲ್ಲ.

**ಹೊಸತು :** ನೀವು 'ಕನ್ನಡಂಗಳ್' ಅನ್ನುವ ಮಾತು ಬಳಸಿದಿರಿ. ಹಾಗೇನೆ ನಾವು ಈಗ 'ಸಂಸ್ಕೃತಿಗಳು' ಅಂತ ಮಾತಾಡುವ ಈ ಹೊತ್ತಿನಲ್ಲಿ ಈ ಬಹುತ್ವವನ್ನು ನಾಶಮಾಡಿ ಏಕರೂಪಿ ಸಂಸ್ಕೃತಿಯನ್ನು ಹೇರುವ ಪ್ರಯತ್ನ ನಡೀತಿದೆ. ನಾವು ನಮ್ಮ ಬಹುತ್ವಗಳನ್ನು ಉಳಿಸಿಕೊಳ್ಳೋಕೆ ಏನು ಮಾಡಬೇಕು?

**ನಾ. ಡಿ. :** ನಾವು ನಮ್ಮತನ ಉಳಿಸಿಕೊಳ್ಳಬೇಕು. ನಮ್ಮತನ ಬಿಡಬಾರದು. ನಮ್ಮ ಜೀವನಾಧಾರಗಳೇ ನಾಶವಾಗ್ತಿವೆ. ಜಾಗತೀಕರಣ ನಮ್ಮನ್ನು ಒಂದೇ ರೀತಿ ಯೋಚನೆ ಮಾಡುವಂತೆ, ಒಂದೇ ರೀತಿ ಬದುಕೋ ಹಾಗೆ, ಒಂದೇ ವೇಷಭೂಷಣ ತೊಡೋ ಹಾಗೆ ಮಾಡ್ತಿದೆ. ಇದು ಭಾರತದಂತಹ ದೇಶಕ್ಕೆ ಬಹಳ ದೊಡ್ಡ ಅಪಾಯ. ಇಲ್ಲಿ ಭಿನ್ನ ಸಂಸ್ಕೃತಿಗಳಿದ್ದರೂ ಜನ ಒಂದು ಕಾಲದಲ್ಲಿ ನೆಮ್ಮದಿಯಿಂದ ಇದ್ದರು.

ಉತ್ತರ ಕರ್ನಾಟಕಕ್ಕೆ ಹೋದರೆ ಅಲ್ಲಿ ಸಾಬ್ರು ಯಾರು, ಹಿಂದುಗಳು ಯಾರು ಅಂತ ಕಂಡುಹಿಡಿಯೋಕ್ಕಾಗಲ್ಲ. ಆ ತರಹದ ಸಂಸ್ಕೃತಿ ಇದೆ ಅಲ್ಲಿ. ಭಿನ್ನತೆಯಲ್ಲೂ ಏಕತೆ ಉಳಿದುಕೊಂಡಿದೆ.

ಆದರೆ ಇವತ್ತು ಇದಕ್ಕೆ ತದ್ವಿರುದ್ಧವಾದ ಪ್ರಯತ್ನಗಳು ನಡೀತಿದ್ದಾವೆ. ಈಗ 'ಮೋರ್'ಗಳು, ಫುಡ್‌ವರ್ಲ್ಡ್‌ಗಳು ಬಂದು ಏನಾಗಿದೆ ಅಂದರೆ ಸಾಮಾನು ತಗೊಂಡು ಗಾಡಿಯಲ್ಲಿ ಹಾಕ್ಕೊಂಡು ತಳ್ಳಿಕೊಂಡು ಹೋಗ್ತೀವಿ. ಅಮೆರಿಕಾದ ಫಿಲಂಗಳನ್ನು ನೋಡಿ ಅದನ್ನು ಇಲ್ಲಿ ಮಾಡ್ತೀವಿ. ಇಂಡಿಯಾದಲ್ಲಿ ಬಹುಭಾಷೆಗಳು, ಬಹುಸಂಸ್ಕೃತಿಗಳು ಆತ್ಮಹತ್ಯೆಯ ದಾರಿ ಹಿಡಿದಿವೆ.

**ಹೊಸತು :** ಕರ್ನಾಟಕದಲ್ಲಿ ಜಾಗತೀಕರಣದ ಪ್ರಭಾವದಿಂದಾಗಿ ಸ್ಥಳೀಯ ಕೈಗಾರಿಕೆಗಳು ನಾಶವಾಗ್ತಿವೆ. ಆದರೆ ಸರೋಜಿನಿ ಮಹಿಷಿ ವರದಿ ಈಗ ಅಪ್ರಸ್ತುತವಾಗಿ ಬಿಡ್ತು. ಇಲ್ಲಿ ಉದ್ಯೋಗಾವಕಾಶಗಳನ್ನು ಸೃಷ್ಟಿಸುವ ದಿಕ್ಕು, ಸಾಧ್ಯತೆಗಳು ಯಾವ್ಯಾವುವು?

**ನಾ. ಡಿ. :** ನಾವು ಕನ್ನಡಿಗರಾಗಿ ಯೋಚಿಸಬೇಕು, ನಮ್ಮದು ಕನ್ನಡ ಸರ್ಕಾರ ಆಗಬೇಕು. ಆ ಪ್ರಜ್ಞೆ ಇರಬೇಕು. ಕನ್ನಡ ಕಾವಲು ಸಮಿತಿ, ಅಭಿವೃದ್ಧಿ ಸಮಿತಿ ಇವೆಲ್ಲ ನಾಚಿಕೆಗೇಡು. ಇದೆಲ್ಲ ಜನರ ಕಣ್ಣೊರೆಸುವ ತಂತ್ರ.

ನಾನು ಪೂನಾಕ್ಕೆ ಹೋಗಿದ್ದಾಗ ಅಲ್ಲಿನ ಕೆನರಾ ಬ್ಯಾಂಕ್‌ಗೆ ಹೋಗಿದ್ದೆ. ಒಬ್ಬ

ಸರದಾರ್‌ಜಿ 'ಟ್ರಾನ್ಸ್‌ಲೇಟರ್' ಅಂತ ಬೋರ್ಡ್ ಹಾಕ್ಕೊಂಡು ಕೂತಿದ್ದ. "ಏನು ಕೆಲಸ ಮಾಡ್ತೀರಾ?" ಅಂತ ನಾನು ಕೇಳಿದೆ. ಅದಕ್ಕೆ ಅವನು, "ಇಲ್ಲಿ ಇಂಗ್ಲಿಷ್ ಫಾರಂಗಳು ಬರ್ತವೆ, ನಾನು ಅವನ್ನೆಲ್ಲ ಮರಾಠಿಗೆ ಟ್ರಾನ್ಸ್‌ಲೇಟ್ ಮಾಡಿ ಕೊಡ್ತೀನಿ" ಅಂದ. 'ಚೆಕ್'ಗೆ ಏನಂತ ಟ್ರಾನ್ಸ್‌ಲೇಟ್ ಮಾಡ್ತೀರಾ ಅಂದೆ. ಅವನು 'ಧನಾದೇಶ್' ಅಂತ ಮಾಡ್ತೀನಿ ಅಂದ. ಅದನ್ನು ಜನ ಬಳಸ್ತಾರೆ. ಅಂತಹ ಪ್ರಯತ್ನ ನಡೆದಿದೆಯಾ ಇಲ್ಲಿ?

ಮೊನ್ನೆ ಬೆಳಗಾವಿಯಲ್ಲಿ ಒಬ್ಬ ಮರಾಠಿಗ, "ನಾಲ್ಕು ಜನ ಇದ್ದರೆ ಕನ್ನಡ ಸರ್ಕಾರದ ಹೆಣ ಹೊರುತ್ತಿದ್ವಿ, ಐದು ಜನ ಬಂದಿದ್ರೆ ಕನ್ನಡದ ತಿಥಿ ಮಾಡ್ತಿದ್ವಿ" ಅಂತ ಹೇಳಿದ. ನಾವು ಅದನ್ನು ಕೇಳಿದ್ವಿ, ನಾವು ಇಷ್ಟೊಂದು ಹೇಡಿಗಳಾದರೆ, ನಿಸ್ತೇಜರಾದರೆ ಏನು ಮಾಡೋದು? ಕನ್ನಡ ಹೇಗೆ ಬೆಳೆಯೋದು. ಬೆಳಗಾವಿ ಅಧಿವೇಶನದಲ್ಲಿ ಕೂಡಾ ದೊಡ್ಡ ಚರ್ಚೆ, ವಿರೋಧ ಬರ್ಲಿಲ್ಲ. ಅದಕ್ಕೇ ನಮ್ಮ ಸರ್ಕಾರ ಕನ್ನಡ ಸರ್ಕಾರ ಆಗಬೇಕು ಅನ್ನೋದು. ಇದೇ ಘಟನೆ ಮಹಾರಾಷ್ಟ್ರದಲ್ಲಿ ಆಗಿದ್ದರೆ ಬಹಳ ದೊಡ್ಡ ಗಲಾಟೆ ಆಗ್ತಿತ್ತು.

**ಹೊಸತು :** ನಮ್ಮ ನಾಡಿನಲ್ಲಿ ಭೂಮಿ, ನೀರು, ವಿದ್ಯುತ್ ಕೊಟ್ರೂ ಬಹುರಾಷ್ಟ್ರೀಯ ಕಂಪನಿಗಳು ಕನ್ನಡಿಗರಿಗೆ ಉದ್ಯೋಗ ನೀಡ್ತಾ ಇಲ್ಲ. ಕನ್ನಡಿಗರಿಗೆ ಮೀಸಲಾತಿ ಕೇಳೋ ಪರಿಸ್ಥಿತಿ ಬಂದಿದೆಯಲ್ಲಾ...?

**ನಾ. ಡಿ. :** ಎಂಎನ್‌ಸಿಗಳು ಕನ್ನಡಿಗರಿಗೆ ಕೊಡ್ತಾ ಇರೋದು ವಾಚ್‌ಮನ್ ಕೆಲಸ ಮಾತ್ರ. ಅದೂ ಕೆಲವರಿಗೆ ಮಾತ್ರ. ಈ ಪರಿಸ್ಥಿತಿ ಬೇರೆಲ್ಲೂ ಇಲ್ಲ. ಅವರೆಲ್ಲಾ ಎಂಎನ್‌ಸಿಗಳು ಬರೋವಾಗಲೆ ಕಂಡೀಶನ್ ಹಾಕ್ತಾರೆ. ನಾವು ಕಂಡೀಶನ್ ಹಾಕಿ ಕಡ್ಡಾಯವಾಗಿ ಜಾರಿಗೆ ಬರೋತರ ಮಾಡೋದಿಲ್ಲ. ಮಹಾರಾಷ್ಟ್ರದಲ್ಲಿ ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್‌ನಲ್ಲಿ 'ನೋ ವೇಕೆನ್ಸಿ ಫಾರ್ ನಾನ್ ಮಹಾರಾಷ್ಟ್ರಿಯನ್ಸ್' ಅಂತ ಬೋರ್ಡ್ ಹಾಕಿದ್ದಾರೆ. ನಾವು ಹಾಕಿದ್ದೀವಾ?

**ಹೊಸತು :** ಮೂಢನಂಬಿಕೆ ವಿರೋಧಿ ಕಾಯ್ದೆ ಜಾರಿಗೆ ಬರುವ ಅಗತ್ಯ ಇದೆಯಾ? ಇಲ್ಲವಾ?

**ನಾ. ಡಿ. :** ಖಂಡಿತಾ ಅಗತ್ಯ ಇದೆ. ಟಿ.ವಿ.ಗಳೆಲ್ಲಾ ಮೂಢನಂಬಿಕೆಗಳ ಪರವಾಗಿ ನಿಂತುಬಿಟ್ಟಿವೆ. ಮೂಢನಂಬಿಕೆಗಳ ಹಿಂದೆ ತುಂಬಾ ಅನಿಷ್ಟಗಳಿವೆ, ಅಪಾಯಗಳಿವೆ.

ಆದರೆ ಈ ಮೂಢನಂಬಿಕೆಗಳನ್ನು ಕಾನೂನಿನ ಮೂಲಕ ತಡೆಯೋಕೆ ಸಾಧ್ಯಾನಾ? ಚಂದ್ರಗುತ್ತಿಯಲ್ಲಿ ಬೆತ್ತಲೆ ಸೇವೆಯನ್ನು ಕಾನೂನಿನಿಂದ ತಡೆದರು. ಆದರೆ ಈಗ ಗುಟ್ಟಾಗಿ ಬಂದು ಬಹಳ ಜನ ಬೆತ್ತಲೆ ಸೇವೆ ಮಾಡ್ತಿದ್ದಾರೆ ಅಂತ ನನಗೆ ಸುದ್ದಿ ಬಂತು. ನಮ್ಮ ಜನಕ್ಕೆ ಎಜುಕೇಶನ್ ಕೊಡ್ಬೇಕು. ಮಡೆಸ್ನಾನ ಮಾಡಿದವರು ಚರ್ಮರೋಗ ಬಂದಿದ್ದಕ್ಕೆ ಮಡೆಸ್ನಾನ ಮಾಡಿದೀವಿ, ವಾಸಿಯಾಯ್ತು ಅಂತಾರೆ.

ಕೇರಳದಲ್ಲಿ ನಾರಾಯಣ ಗುರುಗಳು ಆರಂಭದಲ್ಲಿ ದೇವಸ್ಥಾನ ಕಟ್ಟಿದರು. ಆಮೇಲೆ ಅದರಿಂದ ಏನೂ ಪ್ರಯೋಜನ ಇಲ್ಲ ಅನ್ನಿಸ್ತು, ಶಾಲೆಗಳನ್ನು ಆರಂಭಿಸಿದರು. ಅದಕ್ಕೇ ಇವತ್ತು ದೇಶದಲ್ಲೆ ಅತಿ ಹೆಚ್ಚು ವಿದ್ಯಾವಂತರು ಕೇರಳದಲ್ಲಿರುವುದು. ಅದು ಆಗಿದ್ದು ನಾರಾಯಣ ಗುರುಗಳಿಂದಾಗಿ. ಈ ರೀತಿ ಪ್ರಯತ್ನ ಮಾಡ್ಬೇಕು. ವೈಚಾರಿಕ ಶಿಕ್ಷಣ ನೀಡಬೇಕು. ಅಧಿಕಾರದಲ್ಲಿರುವವರು ರಾಹುಕಾಲ, ಗುಳಿಕಕಾಲ ನೋಡೋದು, ವಾಸ್ತು ಬದಲಾಯಿಸೋದು, ಜಾತಕ ನೋಡೋದು ಬಿಡಬೇಕು. ಮಠಾಧಿಪತಿಗಳ ಕಾಲಿಗೆ ಬೀಳೋದನ್ನು ಬಿಡಬೇಕು. ಬ್ರಾಹ್ಮಣರು ಬಹಿರಂಗವಾಗಿ ಊಟ ಮಾಡೋದನ್ನು ಬಿಟ್ಟರೆ ಬಹಳ ಸುಲಭವಾಗಿ ಮಡೆಸ್ನಾನ ನಿರ್ಮೂಲನೆ ಮಾಡಬಹುದು. ಆ ಮನಸ್ಸು ಅಲ್ಲಿ ಊಟ ಮಾಡುವವರಿಗೆ ಇರಬೇಕಲ್ಲ? ಇದೆಲ್ಲ ಅಸಹ್ಯ.

**ಹೊಸತು :** ಕನ್ನಡ ಸಾಹಿತ್ಯ ಸಮ್ಮೇಳನದ ಬಗ್ಗೆ 'ಜಾತ್ರೆ' ಅನ್ನುವ ಆರೋಪವಿದೆಯಲ್ಲ...?



*೧೯೮೪ರಲ್ಲಿ ದಾವಣಗೆರೆಯಲ್ಲಿ 'ಕ್ರಾಂತಿದೂತ ಪತ್ರಿಕೆ'ಯ ವಿಶೇಷ ಸಂಚಿಕೆ ಬಿಡುಗಡೆ ಸಮಾರಂಭದಲ್ಲಿ ಮಾತನಾಡುತ್ತಿರುವ ನಾ. ಡಿಸೋಜ. ವೇದಿಕೆಯಲ್ಲಿ : ಅಂದಿನ ಸಿ.ಪಿ.ಐ. ಶಾಸಕ ಕಾಂ॥ ಪಂಪಾಪತಿ, ಡಾ॥ ಸಿದ್ದನಗೌಡ ಪಾಟೀಲ, ಕಾಂ॥ ರಾಮಚಂದ್ರಪ್ಪ*

**ನಾ. ಡಿ. :** ನಾನು ಆ ಮಾತು ಒಪ್ಕೋತೀನಿ. ಜಾತ್ರೆ ಅಂತ ನಾನು ಕರೆದಿದ್ದೀನಿ. ನಾನು ಗಮನಿಸಿರುವ ಹಾಗೆ ತುಂಬ ಜನ, ಅಂದರೆ ಸುಮಾರು ಐವತ್ತು ಸಾವಿರ ಜನರಲ್ಲಿ ಮೂವತ್ತು ಸಾವಿರ ಜನ ಮಜಾ ಮಾಡೋಕೆ ಬಂದ್ರೂ ಇನ್ನುಳಿದ ಇಪ್ಪತ್ತು ಸಾವಿರ ಜನ ಶಿಕ್ಷಕರು ಬರ್ತಾರೆ. ಅವರೆಲ್ಲ ಕೂತ್ಕೊಂಡು ಅಲ್ಲಿ ನಡೀತಿರೋ ವಿಚಾರಗೋಷ್ಠಿಯ ಮಾತುಗಳನ್ನು ಬರೆದುಕೊಳ್ಳುತ್ತಾರೆ.

ಶಿವಮೊಗ್ಗ ಸಾಹಿತ್ಯ ಸಮ್ಮೇಳನದಲ್ಲಿ ಐದು ಕೋಟಿ ರೂಪಾಯಿ ಪುಸ್ತಕ ವ್ಯಾಪಾರ ಆಯ್ತು, ಬೆಂಗಳೂರು ಸಮ್ಮೇಳನದಲ್ಲಿ ಇಪ್ಪತ್ಮೂರು ಕೋಟಿ ರೂಪಾಯಿ ಪುಸ್ತಕ ವ್ಯಾಪಾರ ಆಯ್ತು. ಜನ ಇಲ್ಲಿ ಬಂದು ಒಳ್ಳೊಳ್ಳೆ ಪುಸ್ತಕ ಕೊಂಡ್ಕೋತಾರೆ. ಬಹಳ ಜನಕ್ಕೆ ಮೆಚ್ಚಿನ ಲೇಖಕರನ್ನು ನೋಡುವ ಅವಕಾಶಕ್ಕಾಗಿ ಕೂಡಾ ಬರ್ತಾರೆ. ಪರ್ಯಾಯ ಸಮ್ಮೇಳನಗಳೂ ಕೂಡಾ ಅದೇ ರೀತಿ ಆಗ್ತವೆ. ವಿಚಾರ ಸಂಕಿರಣಗಳಿಗೆ ಎಷ್ಟು ಜನ ಬರ್ತಾರೆ? ಮಹಾರಾಷ್ಟ್ರದಲ್ಲಿ ಕೂಡಾ ಹೀಗೆ ಆಗ್ತದೆ. ಊಟದಲ್ಲಿ ತೊಂದರೆ, ಗಲಾಟೆ ಆದರೂ ಜನ ಸಾಹಿತ್ಯ ಸಮ್ಮೇಳನಗಳಿಗೆ ಬರೋದನ್ನು ನಿಲ್ಲಿಸಿಲ್ಲ.

ಆದರೆ ಸಾಹಿತ್ಯ ಸಮ್ಮೇಳನದ ನಿರ್ಣಯಗಳು ಸರ್ಕಾರಕ್ಕೆ ತಲುಪಬೇಕು, ಅವುಗಳ ಅನುಷ್ಠಾನಕ್ಕಾಗಿ ಸರ್ಕಾರ ಒಬ್ಬ ಸ್ಪೆಷಲ್ ಆಫೀಸರ್‌ನನ್ನ ನೇಮಕ ಮಾಡಬೇಕು. ಆತ ಸಮ್ಮೇಳನದ ನಿರ್ಣಯಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನ ಮಾಡಬೇಕು.

**ಹೊಸತು :** ನಿಮಗೆ ಯಾವತ್ತಾದರೂ ನೀವೊಬ್ಬ ಅಲ್ಪಸಂಖ್ಯಾತ ಅನ್ನಿಸಿದೆಯಾ?

**ನಾ. ಡಿ. :** ನನಗೆ ಯಾವತ್ತೂ ಹಾಗನ್ನಿಸಿಲ್ಲ, ಆದರೆ ಕೆಲವು ಸಂದರ್ಭಗಳಲ್ಲಿ, ಕೆಲವು ಸಮಾರಂಭಗಳಲ್ಲಿ ಸ್ಮರಣಿಕೆಗಳನ್ನು ಕೊಡ್ತಾರಲ್ಲ, ಆಗ ಏಸುಕ್ರಿಸ್ತನ ಮೆಮೆಂಟೋ ಕೊಟ್ಟುಬಿಡ್ತಾರೆ. ಆಗ ಸ್ವಲ್ಪ ಬೇಜಾರು ಆಗ್ತದೆ. ಎಲ್ಲೋ ಪ್ರತ್ಯೇಕವಾಗಿ ನನ್ನನ್ನು ಗುರ್ತಿಸಿದ್ದಾರೆ ಅನ್ನಿಸ್ತದೆ. ನನ್ನನ್ನು ಪ್ರತ್ಯೇಕವಾಗಿ ಗುರುತಿಸಬಾರದು.

**ಹೊಸತು :** ಅಭಿವೃದ್ಧಿ – ಅನಾಹುತಗಳ ಬಗ್ಗೆ, ಕ್ರಿಶ್ಚಿಯನ್ ಧರ್ಮದ ಸುತ್ತ ವ್ಯಾಪಕವಾಗಿ ಬರೆದಿದ್ದೀರಿ. ಆದರೆ ಪುರೋಹಿತಶಾಹಿ ಕೇವಲ ಹಿಂದೂ ಧರ್ಮದಲ್ಲಿ ಮಾತ್ರ ಇಲ್ಲ ಅನ್ನಿಸಲ್ಲವಾ?

**ನಾ. ಡಿ. :** ಹೌದು ಎಲ್ಲಾ ಧರ್ಮದಲ್ಲೂ ಇದೆ. ಪುರೋಹಿತಶಾಹಿ ಧರ್ಮ ಮತ್ತು ದೇವರ ನಡುವೆ ಹುಟ್ಟಿಕೊಂಡುಬಿಡುತ್ತದೆ. ನಾನು ಶಿವಶರಣರನ್ನು ಮೆಚ್ಚಿಕೊಳ್ತೇನೆ. ನಾನು ಮಾಡುವ ಪೂಜೆ ನಾನೇ ಮಾಡಬೇಕು. ಮತ್ತೊಬ್ಬರು ಮಾಡಬಾರದು.

ಬೇಡರ ಕಣ್ಣಪ್ಪ ಕಣ್ಣು ಕಿತ್ತು ಕೊಡುವಾಗ ಯಾವ ಪೂಜಾರೀನೂ ಬರ್ಲಿಲ್ಲ. ಹಾಗಾಗಿ ಪುರೋಹಿತಶಾಹಿನೂ ಬೇಕಿಲ್ಲ. ನಾನೇ ದೇವರನ್ನು ಸಂಪರ್ಕಿಸಬೇಕು. ಭಕ್ತಿ ಅಂದರೆ ಹಾಗೆ, ಇದನ್ನು ಜನ ಅರ್ಥಮಾಡ್ಕೋಬೇಕು.

---

ಸಂದರ್ಶನಕಾರರು : **ಬಿ. ಎಲ್. ರಾಜು**
ಇಂಗ್ಲಿಷ್ ಪ್ರಾಧ್ಯಾಪಕರು, ಇಂದಿರಾ ಗಾಂಧಿ ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು, ಸಾಗರ–೫೭೭ ೪೦೧
**ಎಚ್. ಬಿ. ರಾಘವೇಂದ್ರ**, ಸಂಪಾದಕರು, 'ಚಾರ್ವಾಕ' ವಾರಪತ್ರಿಕೆ, ಸಾಗರ – ೫೭೭ ೪೦೧

# ರಾಷ್ಟ್ರೀಯ ಸ್ವಯಂಸೇವಕ ಸಂಘ ಮತ್ತು ಸಂವಿಧಾನ ಬದ್ಧತೆ

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**

ಈ ಲೇಖನದಲ್ಲಿ ಎರಡು ಸಂವಿಧಾನಗಳನ್ನು ಪ್ರಸ್ತಾಪಿಸಲು ಉದ್ದೇಶಿಸಲಾಗಿದೆ. ಮೊದಲನೆಯದು ಎಲ್ಲರಿಗೂ ಗೊತ್ತಿರುವ, ೧೯೫೦ನೇ ಜನವರಿ ೨೬ರಿಂದ ಜಾರಿಗೆ ಬಂದ 'ಭಾರತೀಯ ಸಂವಿಧಾನ.' ಮತ್ತೊಂದು, ಜನರಿಗೆ ಅಷ್ಟೊಂದು ಪರಿಚಯವಿಲ್ಲದ ೧೯೪೯ರಲ್ಲಿ ರಾಷ್ಟ್ರೀಯ ಸ್ವಯಂಸೇವಕ ಸಂಘ (ಆರ್.ಎಸ್.ಎಸ್.) ರಚಿಸಿಕೊಂಡ 'ಸಂಘದ ಸಂವಿಧಾನ.'

ಭಾರತೀಯ ಸಂವಿಧಾನದಲ್ಲಿ ರಾಷ್ಟ್ರಧ್ವಜ, ರಾಷ್ಟ್ರಗೀತೆಗಳಿಗೆ ಗೌರವ ಸಲ್ಲಿಕೆ ಮೊದಲಾದವುಗಳ ಜೊತೆಗೆ 'ಮತಧರ್ಮ ನಿರಪೇಕ್ಷ ರಾಜನೀತಿ'ಯ ಪಾಲನೆಯನ್ನೂ ಒತ್ತಿ ಹೇಳಲಾಗಿದೆ. ಸಂವಿಧಾನದ ೩೫೬ನೇ ವಿಧಿಯನ್ನು ವ್ಯಾಖ್ಯಾನಿಸುವುದು ಹೀಗೆ: "...ಯಾವುದೇ ರಾಜಕೀಯ ಪಕ್ಷವು ಮತಧಾರ್ಮಿಕ ಆಯಾಮದಲ್ಲಿ ಸಂಘಟನೆಯಾಗುವುದು ಸಾಧ್ಯವಿಲ್ಲ. ರಾಜಕೀಯ ಮತ್ತು ಮತಧರ್ಮಗಳನ್ನು ಬೆರೆಸುವಂತಿಲ್ಲ. ಮತಧರ್ಮ ಪರವಾದ ನೀತಿಗಳನ್ನು ಅಥವಾ ಮತಧಾರ್ಮಿಕ ಆಚರಣೆಗಳನ್ನು ಅನುಸರಿಸುವ ಸರ್ಕಾರವು ಸಂವಿಧಾನದ ಆಶಯಗಳಿಗೆ ವಿರುದ್ಧವಾಗಿ ನಡೆದಂತೆ ಆಗಿ, ಸಂವಿಧಾನದ ೩೫೬ನೇ ವಿಧಿಯ ಪ್ರಕಾರ ಕ್ರಮ ಕೈಗೊಳ್ಳಲು ಅವಕಾಶ ಮಾಡಿಕೊಡುತ್ತದೆ."

– ನ್ಯಾಯಮೂರ್ತಿ ಬಿ. ಪಿ. ಜೀವನರೆಡ್ಡಿ

(ಡಾ॥ ಕೆ. ಬದರಿನಾಥ್ ಅವರ 'ಧರ್ಮನಿರಪೇಕ್ಷತೆ ಮತ್ತು ಅಲ್ಪಸಂಖ್ಯಾತರು' – ಸಂಗ್ರಹಾನುವಾದ: ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ, ನವಕರ್ನಾಟಕ ಪ್ರಕಾಶನ, ಬೆಂಗಳೂರು.)

ಆರ್.ಎಸ್.ಎಸ್. ಸಂಘಟನೆಯು ಭಾರತೀಯ ಸಂವಿಧಾನಕ್ಕೆ – ಅದರಲ್ಲೂ 'ಮತಧರ್ಮ ನಿರಪೇಕ್ಷ ರಾಜನೀತಿಗೆ' ಎಂದೂ ಬದ್ಧವಾಗಿಲ್ಲವೆಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ.

೧೯೨೫ರಲ್ಲಿ 'ರಾಷ್ಟ್ರೀಯ ಸ್ವಯಂಸೇವಕ ಸಂಘವು' (ಆರ್.ಎಸ್.ಎಸ್. ಅಥವಾ ಸಂಕ್ಷೇಪದಲ್ಲಿ 'ಸಂಘ' ಎಂದು ಈ ಲೇಖನದಲ್ಲಿ ಬಳಸಲಾಗುವುದು) ಸ್ಥಾಪನೆಯಾದ ಹಿನ್ನೆಲೆಯು ಕುತೂಹಲಕಾರಿಯಾಗಿದೆ.

೧೯೨೦ರ ದಶಕದ ಮಧ್ಯಭಾಗದಲ್ಲಿ 'ದ್ವಿಜ'ರ (ಉಪನಯನ ಸಂಸ್ಕಾರ, ಜನಿವಾರ ಧಾರಣೆ ಮೊದಲಾದ ಆಚರಣೆಗಳನ್ನು ರೂಢಿಸಿಕೊಂಡಿದ್ದ, ಬ್ರಾಹ್ಮಣ ಪ್ರಣೀತ ಹಿಂದೂ ಧರ್ಮದ ಮೇಲಿನ ಮೂರು ಜಾತಿಗಳು – ಸವರ್ಣೀಯ ಹಿಂದೂಗಳು) ವಿರೋಧಿ ಚಳುವಳಿಗಳು ಪರಾಕಾಷ್ಠೆಯಲ್ಲಿದ್ದವು. ಮಹಾರಾಷ್ಟ್ರದಲ್ಲಿ ಜ್ಯೋತಿಬಾ ಫುಲೆ ಮತ್ತು ಡಾ॥ ಬಿ. ಆರ್. ಅಂಬೇಡ್ಕರ್ ಅವರು ಬ್ರಾಹ್ಮಣ ಪ್ರಣೀತ ಹಿಂದೂಧರ್ಮದ ಮೂಲಭೂತ ಆಶಯಗಳನ್ನು ಖಂಡತುಂಡವಾಗಿ ಪ್ರಶ್ನಿಸಿದರು. ಮತ್ತೊಂದು ಕಡೆ ತಮಿಳುನಾಡಿನಲ್ಲಿ 'ಪೆರಿಯಾರ್' ಎಂಬ ಗೌರವಕ್ಕೆ ಪಾತ್ರರಾಗಿದ್ದ ಇ. ವಿ. ರಾಮಸ್ವಾಮಿ ನಾಯ್ಕರ್ ಅವರು 'ದ್ರಾವಿಡ ಕಳಗಂ' (ಡಿ. ಕೆ. – ಇದು ಮುಂದೆ ಡಿ. ಎಂ. ಕೆ. ಆಗಿ ಅನಂತರ ಎ. ಡಿ. ಎಂ. ಕೆ., ಎ. ಐ. ಡಿ. ಎಂ. ಕೆ.ಗಳಾಗಿ ಕವಲೊಡೆಯಿತು) ಎಂಬ ಸಂಸ್ಥೆಯನ್ನು ಸ್ಥಾಪಿಸಿ ಬ್ರಾಹ್ಮಣ ಆಚರಣೆಗಳು, ಆರ್ಯ ದೇವತೆಗಳು, ರಾಮಾಯಣ ಮೊದಲಾದ 'ಪವಿತ್ರ' ಗ್ರಂಥಗಳು ಮತ್ತು ಸಂಸ್ಕೃತ ಭಾಷೆ ಇವುಗಳ ವಿರುದ್ಧ ಪ್ರತಿಭಟನೆ ನಡೆಸಿದರು. ಈ ಹಿನ್ನೆಲೆಯಲ್ಲಿ ಮಹಾರಾಷ್ಟ್ರದ ಬ್ರಾಹ್ಮಣರು ನಾಗಪುರದಲ್ಲಿ ಸಭೆ ಸೇರಿ 'ರಾಷ್ಟ್ರೀಯ ಸ್ವಯಂಸೇವಕ ಸಂಘ'ವನ್ನು ಸ್ಥಾಪಿಸಿದರು. ಹೀಗೆ 'ಸಂಘ' (ಆರ್.ಎಸ್.ಎಸ್.) ಸ್ಥಾಪನೆಯ ಕಾಲ ಮತ್ತು ಸ್ಥಳಗಳೆರಡೂ ವಿಶಿಷ್ಟವಾಗಿವೆ.

ಬ್ರಿಟಿಷ್ ವಸಾಹತುಶಾಹಿಯಿಂದ ಭಾರತದ ಬಿಡುಗಡೆಯು ಇನ್ನೂ ದಿಗಂತದಲ್ಲಿ ಗೋಚರಿಸುತ್ತಿರುವಾಗಲೆ ಆರ್.ಎಸ್.ಎಸ್.ನವರು ಅಖಂಡ ಭಾರತವು ತಮ್ಮ ಕೈವಶವಾಗುವುದೆಂದೂ ತಾವು ಹಿಂದೂ ಸಾಮ್ರಾಜ್ಯ ಸ್ಥಾಪಿಸಬಹುದೆಂದೂ





ಕನಸು ಕಾಣುತ್ತಿದ್ದರು. ಸ್ವತಂತ್ರ ಭಾರತದಲ್ಲಿ ಆಡಳಿತಾಧಿಕಾರವನ್ನು ಪಡೆದುಕೊಳ್ಳಬೇಕಾದರೆ ಹಿಂದೂಧರ್ಮದ ತಳಹದಿಯನ್ನು ವಿಸ್ತರಿಸುವುದು ಅಗತ್ಯವೆಂಬುದು ಸಂಘದವರಿಗೆ ತಿಳಿದಿತ್ತು. ಈ ಹಿಂದೆ ಪಂಡಿತ ದಯಾನಂದ ಸರಸ್ವತಿಯವರು 'ಆರ್ಯಸಮಾಜ' ಸ್ಥಾಪನೆ (ವಿಗ್ರಹಾರಾಧನೆ, ಶ್ರಾದ್ಧಕರ್ಮ ಮೊದಲಾದವುಗಳಿಗೆ ವಿರೋಧ, ವೇದೋಪನಿಷತ್ತುಗಳ ಕಾಲದ ಸಂಸ್ಕೃತಿಯ ಪುನರುತ್ಥಾನ ಮೊದಲಾದವುಗಳನ್ನು ಒಳಗೊಂಡ ಸುಧಾರಣೆ)ಯಿಂದ ಹೆಚ್ಚೇನೂ ಸಾಧಿಸಲಾಗಿರಲಿಲ್ಲ. ಇನ್ನು ಲೋಕಮಾನ್ಯ ಬಾಲಗಂಗಾಧರ ತಿಲಕರು ಪ್ರತಿಪಾದಿಸಿದ ಮೇಲುಜಾತಿಯ ಹಿಂದೂಗಳು ಆರ್ಯಮೂಲದವರೆಂದು ಒತ್ತಿ ಹೇಳುವುದರಿಂದ ರಾಜಕೀಯವಾಗಿ ಲಾಭಕ್ಕಿಂತ ನಷ್ಟವೇ ಹೆಚ್ಚೆಂದು ಸಂಘದವರು ಭಾವಿಸಿದರು. ಆದ್ದರಿಂದ ಹಿಂದೂ ಧರ್ಮದ ನೆಲೆಯನ್ನು ವಿಸ್ತರಿಸುವ ಸಲುವಾಗಿ ಹೊಸ ಉಪಾಯಗಳನ್ನು ಯೋಜಿಸತೊಡಗಿದರು. ಮೇಲುಜಾತಿಗಳ ಮಡಿವಂತಿಕೆಯನ್ನು ಬದಿಗೆ ಸರಿಸಿ ಕೆಳಜಾತಿಗಳನ್ನೂ ದಲಿತರನ್ನೂ ಒಲಿಸಿಕೊಳ್ಳುವುದು; ಮತಾಂತರ ಹೊಂದಿದ ದಲಿತರು, ಬುಡಕಟ್ಟುಗಳ ಮತ್ತು ಗುಡ್ಡಗಾಡಿನ ಜನರನ್ನು 'ಪುನರ್ಮತಾಂತರ'ಗೊಳಿಸಿ ಹಿಂದೂ ಧರ್ಮಕ್ಕೆ ಸೇರಿಸಿಕೊಳ್ಳುವುದು ಮೊದಲಾದ ತಂತ್ರಗಳನ್ನು ಬಳಸತೊಡಗಿದರು. ಈಗ ಡಾ॥ ಬಿ. ಆರ್. ಅಂಬೇಡ್ಕರ್ ಅವರಲ್ಲಿಯೂ ಕೆಲವು ಉತ್ತಮ ಗುಣಗಳನ್ನು ಕಂಡುಕೊಂಡಿದ್ದಾರೆ. ಈಚೆಗೆ ಕಟ್ಟಾ ನಾಸ್ತಿಕವಾದಿಯೂ ಮಾರ್ಕ್ಸ್‌ವಾದಿಯೂ ಆಗಿದ್ದ ಹುತಾತ್ಮ ಭಗತ್ ಸಿಂಗ್‌ನನ್ನು ಕೂಡ ತಮ್ಮವನೆಂದು ಹೇಳಿಕೊಂಡು ಸಂಭ್ರಮಿಸುತ್ತಿದ್ದಾರೆ.

ಈ ನಡುವೆ ಹಿಂದೂಧರ್ಮಕ್ಕೆ ಒಂದು ಸೈನಿಕ ಮೆರುಗನ್ನು ಕೊಡಲು ಬಯಸಿದ ಸಾವರ್ಕರ್ ಅವರು ದೇಶದ ಹಲವು ಭಾಗಗಳಲ್ಲಿ ಸಂಘದ (ಆರ್.ಎಸ್.ಎಸ್.) ಶಾಖೆಗಳನ್ನು ಸ್ಥಾಪಿಸಿ, ಅಲ್ಲಿ ತರುಣರಿಗೆ ಭಗವಾಧ್ವಜವಂದನೆ, ಲಾಠಿ (ದಂಡ) ತಿರುಗಿಸುವುದು, ಕವಾಯತು ಮೊದಲಾದ ಕಸರತ್ತುಗಳಲ್ಲಿ ತರಬೇತು ಕೊಡತೊಡಗಿದರು. ಬೈಠಕ್‌ಗಳಲ್ಲಿ ಹಿಂದೂಧರ್ಮದ ಹಿರಿಮೆಯನ್ನು ವೈಭವೀಕರಿಸಿ ವರ್ಣಿಸುವುದರ ಜೊತೆಗೆ, ದೇಶದ ಐಕ್ಯತೆಯನ್ನು ಭಂಗ ಮಾಡುತ್ತಾರೆಂದು ಆಕ್ಷೇಪ ಎತ್ತಿ ಹಿಂದೂಸ್ತಾನ್ ಸೋಷಿಯಲಿಸ್ಟ್ ರಿಪಬ್ಲಿಕನ್ ಅಸೋಸಿಯೇಷನ್‌ನ ಸ್ಥಾಪಕರಲ್ಲೊಬ್ಬನಾದ ಚಂದ್ರಶೇಖರ ಆಜ್ಞಾದ್‌ಗೆ ಜನಿವಾರ ತೊಡಿಸಿ, ಅವನನ್ನು 'ನಮ್ಮವನು' ಎಂಬುದು ಆರ್.ಎಸ್.ಎಸ್.ನ ಪದ್ಧತಿ. ಅನ್ಯಧರ್ಮೀಯರನ್ನು – ಮುಖ್ಯವಾಗಿ ಮುಸಲ್ಮಾನರನ್ನು – (ಬ್ರಿಟಿಷರ ಆಡಳಿತಾವಧಿಯಲ್ಲಿ ಕ್ರೈಸ್ತರನ್ನು ವಿರೋಧಿಸುವುದು ಸಾಧ್ಯವಿರಲಿಲ್ಲ) ವಿರೋಧಿಸುವ ಪಾಠಗಳನ್ನು ಕಲಿಸಲಾರಂಭಿಸಿದರು.

ಇತ್ತ ಸ್ವಾತಂತ್ರ್ಯ ಚಳುವಳಿಯ ದಿನಗಳಲ್ಲಿ ಗಾಂಧೀಜಿ ಹಿಂದೂಧರ್ಮದಲ್ಲಿ ಪರಂಪರಾಗತವಾಗಿ ಬೆಳೆದುಬಂದಿದ್ದ ಅಸ್ಪೃಶ್ಯತೆಯನ್ನು ತೀವ್ರವಾಗಿ ಖಂಡಿಸಿ, ಅಸ್ಪೃಶ್ಯರಿಗೆ 'ಹರಿಜನ'ರೆಂದು ನಾಮಕರಣ ಮಾಡಿ ಅವರಿಗೆ ದೇವಾಲಯ ಪ್ರವೇಶದ ಅವಕಾಶವನ್ನೂ ಒದಗಿಸಿ, ಮೇಲುಜಾತಿಗಳು ಅಸ್ಪೃಶ್ಯರನ್ನೂ ತಮ್ಮ ಸರಿಸಮಾನರಂತೆ ಕಾಣುವ ಹಾಗೆ ಮಾಡಲು ಸತತವಾಗಿ ಪ್ರಯತ್ನಿಸಿದರು. ಹಿಂದೂಧರ್ಮದಲ್ಲಿ ಅಪಾರ ಶ್ರದ್ಧೆಯಿಟ್ಟಿದ್ದ ಗಾಂಧೀಜಿ ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ಹಿಂದೂಧರ್ಮದ ಪ್ರತಿಮೆಗಳಾದ ರಾಮನಾಮ ಭಜನೆ, ಭಗವದ್ಗೀತೆಯ ಪ್ರವಚನ, ಗೋಮಾತೆಯ ಹಿರಿಮೆ ಮೊದಲಾದುವನ್ನು ವ್ಯಾಪಕವಾಗಿ ಬಳಸಿದರು. ವಸಾಹತುಶಾಹಿ ವಿರುದ್ಧದ ಹೋರಾಟದಲ್ಲಿ ಮೌಲಾನಾ ಅಬುಲ್ ಕಲಾಂ ಆಜ್ಞಾದ್‌ರಂಥ ಮುಸಲ್ಮಾನ ಸಮುದಾಯದ ನಾಯಕರನ್ನೂ ತಮ್ಮ ಜೊತೆಜೊತೆಯಲ್ಲಿ ಕೊಂಡೊಯ್ಯುವ ಪ್ರಯತ್ನ ಮಾಡಿದರು; ಸ್ವತಂತ್ರ ಭಾರತದಲ್ಲಿ, ಮುಂದೆಯೂ ಹಿಂದೂಗಳು ಮತ್ತು ಮುಸಲ್ಮಾನರು ಜೊತೆಗೂಡಿ ಬಾಳಬೇಕೆಂಬುದು ಗಾಂಧೀಜಿಯ ಕನಸಾಗಿತ್ತು.

ಆದರೆ ತಮ್ಮ ಆಡಳಿತಾವಧಿಯ ಉದ್ದಕ್ಕೂ ಹಿಂದೂ ಮತ್ತು ಮುಸ್ಲಿಂ ಸಮುದಾಯಗಳನ್ನು ಪ್ರತ್ಯೇಕಿಸುವ 'ಒಡೆದು ಆಳುವ ನೀತಿ'ಯನ್ನು ಬ್ರಿಟಿಷರು ಅನುಸರಿಸುತ್ತಲೇ ಇದ್ದರು. ಇದರ ಜೊತೆಗೆ ಆರ್. ಎಸ್. ಎಸ್.ನವರ ಚಿಂತನಾಕ್ರಮ, ಸಂಘದ ಚಟುವಟಿಕೆಗಳು ಮತ್ತು ಆರ್. ಎಸ್. ಎಸ್. ನಾಯಕರ ಪ್ರಚೋದನಾತ್ಮಕ ಮಾತುಗಳು ಕೂಡ ಮುಸ್ಲಿಂ ಸಮುದಾಯವನ್ನು ಕೆರಳಿಸಿರುವುದು ಸಾಧ್ಯ. ಬ್ರಿಟಿಷರು ಭಾರತವನ್ನು ಬಿಟ್ಟುಹೋದ ಮೇಲೆ ಬಹುಸಂಖ್ಯಾತರಾದ ಹಿಂದೂಗಳೊಡನೆ ತಾವು ತಮ್ಮ ಮತಧಾರ್ಮಿಕ ನಂಬಿಕೆಗಳು, ಆಚರಣೆಗಳನ್ನು ಉಳಿಸಿಕೊಂಡು, ಸ್ವಾಭಿಮಾನದಿಂದ ನೆಮ್ಮದಿಯಲ್ಲಿ ಬದುಕುವುದು ಅಸಾಧ್ಯವೆಂಬ ಭಾವನೆ ಮುಸಲ್ಮಾನರಲ್ಲಿ ಮೂಡಿದುದು ಆಶ್ಚರ್ಯವಲ್ಲ. ಇದೆಲ್ಲದರ ಪರಿಣಾಮವಾಗಿ ಮುಸಲ್ಮಾನರು ತಮಗೆ ಪ್ರಿಯವಾದ 'ಮುಸ್ಲಿಂ ಲೀಗ್' ನಾಯಕತ್ವದಲ್ಲಿ, ತಮ್ಮದೇ ಆದ ಪ್ರತ್ಯೇಕ ರಾಷ್ಟ್ರವು ಬೇಕೆಂಬ ಬೇಡಿಕೆಯನ್ನು ಮುಂದಿಟ್ಟು ಒತ್ತಾಯಿಸತೊಡಗಿದರು. ಹಿಂದೂ–ಮುಸಲ್ಮಾನರನ್ನು ಒಗ್ಗೂಡಿಸಿ, ದೇಶ ವಿಭಜನೆಯನ್ನು ತಡೆಯಬೇಕೆಂದು ಗಾಂಧೀಜಿ, ನೆಹರೂ, ಸರ್ದಾರ್ ಪಟೇಲ್ ಮತ್ತು ಕೆಲವು ಮುಸಲ್ಮಾನ್ ನಾಯಕರೂ ಮಾಡಿದ ಎಲ್ಲ ಪ್ರಯತ್ನಗಳೂ ವಿಫಲವಾಗಿ ಕಡೆಗೆ ಗಾಂಧೀಜಿ ಕೂಡ ದೇಶವಿಭಜನೆಗೆ ಒಪ್ಪಲೇ ಬೇಕಾಯಿತು. ಜಿನ್ನಾರ ಸ್ವಾರ್ಥಸಾಧನೆಯೂ ಅದಕ್ಕೆ ಬಲವಾದ ಇಂಬು ನೀಡಿತು.

ಭಾರತಕ್ಕೆ ಬ್ರಿಟಿಷ್ ವಸಾಹತುಶಾಹಿಯಿಂದ ಸ್ವಾತಂತ್ರ್ಯವು ದೊರೆಯುವ ಕ್ಷಣದಲ್ಲೇ ದೇಶವು ಇಬ್ಭಾಗವಾಗಿ ಭಾರತ ಮತ್ತು ಪಾಕಿಸ್ತಾನಗಳು ಅಸ್ತಿತ್ವಕ್ಕೆ ಬಂದವು, ದೇಶವಿಭಜನೆಯ ಕಾಲದಲ್ಲಿ ಎರಡೂ ಸಮುದಾಯಗಳಲ್ಲಿ ಅಪಾರ ಹಿಂಸಾಚಾರ, ಕೊಲೆ, ಸುಲಿಗೆ, ಅಗ್ನಿದುರಂತ, ಭಯೋತ್ಪಾದನೆ ಮೊದಲಾದ ಬುಡಮೇಲು ಕೃತ್ಯಗಳು ಊಹಾತೀತವಾಗಿ ನಡೆದವು. ಗಾಂಧೀಜಿ ಎರಡೂ ಸಮುದಾಯಗಳನ್ನು ಸಂತೈಸಲು, ಪರಸ್ಪರ ದ್ವೇಷವನ್ನು ಶಮನಗೊಳಿಸಲು ತಮ್ಮ ಪ್ರಾಣವನ್ನೇ ಪಣವಿಟ್ಟು ಶ್ರಮಿಸಿದರು. ಆದರೂ ನಿಷ್ಠಾವಂತ ಹಿಂದೂಧರ್ಮಿಯಾಗಿದ್ದ ಗಾಂಧೀಜಿ ಮುಸಲ್ಮಾನರ ಪರವಾಗಿದ್ದಾರೆ, ಮುಸಲ್ಮಾನರನ್ನು ಓಲೈಸುತ್ತಿದ್ದಾರೆ, ಎಂಬ ತಪ್ಪು ಭಾವನೆ ಅದು ಹೇಗೋ ಕೆಲವು ಹಿಂದುತ್ವವಾದಿಗಳಲ್ಲಿ ಮೂಡಿದುದು ವಿಪರ್ಯಾಸ. ಅಂತಿಮವಾಗಿ ಒಬ್ಬ ಉಗ್ರ ಹಿಂದೂವಾದಿ ನಾಥೂರಾಮ್ ಗೋಡ್ಸೆಯಿಂದ ಗಾಂಧೀಜಿಯ ಕೊಲೆಯಾದುದು ದೇಶವು ಕಂಡ ಮಹಾ ದುರಂತ.

ಗಾಂಧೀಜಿ ಕೊಲೆ (೩೦ನೇ ಜನವರಿ, ೧೯೪೮) ಯಾದ ಮೇಲೆ ಕೆಲವು ಕಾಲ ಆರ್. ಎಸ್. ಎಸ್. ಸಂಘಟನೆಯನ್ನು ನಿಷೇಧಿಸಲಾಗಿತ್ತು. ಆದರೆ

ಗಾಂಧಿಯ ಕೊಲೆಯಲ್ಲಿ ತಮ್ಮ ಪಾತ್ರವಿಲ್ಲವೆಂದೂ ಸಂಘದ ಮೇಲಿನ ನಿಷೇಧವನ್ನು ತೆರವುಗೊಳಿಸ ಬೇಕೆಂದೂ ಆರ್. ಎಸ್. ಎಸ್. ಸರ್ಕಾರದ ಮೇಲೆ ಒತ್ತಾಯ ಹೇರತೊಡಗಿತು. ಇದರಿಂದ, ೧೯೪೯ರಲ್ಲಿ ಅಂದಿನ ಗೃಹ ಸಚಿವರಾಗಿದ್ದ ಸರ್ದಾರ್ ವಲ್ಲಭ ಭಾಯ್ ಪಟೇಲರು "ಸಂಘವು ದೇಶದ ರಾಜಕೀಯ ದಲ್ಲಿ ಪ್ರವೇಶಿಸುವುದಿಲ್ಲವೆಂದೂ ಶುದ್ಧ ಸಾಂಸ್ಕೃತಿಕ ಉದ್ದೇಶಗಳಿಗೆ ಬದ್ಧವಾದ ಸಂಘಟನೆಯಾಗಿ ಉಳಿಯುವುದೆಂದೂ" ಮುಚ್ಚಳಿಕೆ ಬರೆದುಕೊಡುವಂತೆ ಷರತ್ತು ಹಾಕಿದರು. ಅಲ್ಲದೆ ಆರ್.ಎಸ್.ಎಸ್. ಈ ಕೆಳಗಿನ ವಿಧಿಗಳನ್ನು ಒಳಗೊಂಡಂತೆ ಲಿಖಿತ ಸಂವಿಧಾನವನ್ನು ರಚಿಸಿಕೊಳ್ಳಬೇಕೆಂದು ಸಲಹೆ ಮಾಡಿದರು.

ಇತರ ವಿಚಾರಗಳ ಜೊತೆಗೆ (೧) ಸಂಘವು ರಾಜಕೀಯವನ್ನು ಪ್ರವೇಶಿಸದೆ, ಕೇವಲ ಸಾಂಸ್ಕೃತಿಕ ಸಂಘಟನೆಯಾಗಿ ಉಳಿಯುತ್ತದೆ. [೪(ಬಿ) ವಿಧಿ, ಆರ್. ಎಸ್. ಎಸ್. ಸಂವಿಧಾನ ಡಿ. ಆರ್. ಗೋಯಲ್ (೧೯೭೯)].

೨) ಭಾರತದ ರಾಷ್ಟ್ರಧ್ವಜಕ್ಕೆ ಗೌರವ ಕೊಡುವುದು (ಆರ್. ಎಸ್. ಎಸ್. ನವರು ತಮ್ಮದೇ ಆದ ಭಗವಾಧ್ವಜಕ್ಕೆ ವಂದನೆ ಸಲ್ಲಿಸುತ್ತಾರೆ; ಭಗವಾಧ್ವಜದ ಮೇಲೆ ಪ್ರಮಾಣ ಮಾಡುತ್ತಾರೆ. ರಾಷ್ಟ್ರಧ್ವಜವನ್ನೆಂದೂ ಅವರು ಹಾರಿಸಿ ಧ್ವಜವಂದನೆ ಮಾಡುವುದಿಲ್ಲ.)

೩) ಶಾಂತಿಯುತ ಸಂಘಟನೆಯಾಗಿ, ಮುಚ್ಚುಮರೆ – ಗುಪ್ತ ಕಾರ್ಯಸೂಚಿಗಳು – ಇಲ್ಲದೆ ಕಾರ್ಯ ನಿರ್ವಹಿಸುವುದು ಮತ್ತು ಭಾರತವನ್ನು 'ಮತ ಧರ್ಮಾತೀತ' ರಾಷ್ಟ್ರವೆಂದು ಒಪ್ಪಿಕೊಳ್ಳುವುದು.

೪) ದೇಶದ ರಾಜಕೀಯ ರಂಗದಿಂದ ದೂರ ಉಳಿಯುವುದು – ಈ ಮೊದಲಾದುವುಗಳು ಆರ್. ಎಸ್. ಎಸ್. ಮೇಲೆ ಸರ್ದಾರ್ ಪಟೇಲರು ಹಾಕಿದ ಕೆಲವು ಪೂರ್ವಭಾವೀ ಷರತ್ತುಗಳು.

ಮೇಲಿನ ಷರತ್ತುಗಳನ್ನು ಅನಿವಾರ್ಯವಾಗಿ ಒಪ್ಪಿಕೊಂಡ ಆರ್. ಎಸ್. ಎಸ್.ನ ಸಂವಿಧಾನದ ಕರಡು ಪ್ರತಿಯನ್ನು ಸಿದ್ಧಪಡಿಸಿ, ೧೯೪೯ರ ಏಪ್ರಿಲ್ ತಿಂಗಳಿನಲ್ಲಿ ಸರ್ಕಾರಕ್ಕೆ ಒಪ್ಪಿಸಲಾಯಿತು. ಸಂವಿಧಾನದ ಕರಡನ್ನು ಸಿದ್ಧಪಡಿಸುವುದರಲ್ಲಿ ತಾತ್ಕಾಲಿಕ ನಾಯಕರಾಗಿದ್ದ (ಆಗ ಸರಸಂಘ ಚಾಲಕರಾಗಿದ್ದ ಗೋಲ್ವಾಲ್ಕರ್ ಅವರು ಬಂಧನದಲ್ಲಿದ್ದುದರಿಂದ) ಶ್ರೀ. ಆರ್. ಆರ್. ವೆಂಕಟರಾಮಶಾಸ್ತ್ರೀ ಮತ್ತು ಹಿಂದೂ ಮಹಾಸಭಾದ ಉಪಾಧ್ಯಕ್ಷರಾಗಿದ್ದ ಶ್ರೀ ಕಪರ್ದೆ – ಇವರು ಪ್ರಮುಖ ಪಾತ್ರ ವಹಿಸಿದ್ದರು. ಸಂವಿಧಾನದ ಈ ಕರಡು ಪ್ರತಿಯು ತಲುಪಿದ ಮೇಲೆಯೇ ಸರ್ಕಾರವು ಆರ್. ಎಸ್. ಎಸ್. ಮೇಲಿನ ನಿಷೇಧವನ್ನು ತೆರವುಗೊಳಿಸಿತು, ನಂತರ ಬಂಧನದಲ್ಲಿದ್ದ ಸರಸಂಘಚಾಲಕ ಗೋಲ್ವಾಲ್ಕರ್ ಅವರನ್ನು ಬಿಡುಗಡೆ ಮಾಡಲಾಯಿತು.

ಇದೊಂದು ದೀರ್ಘಕಾಲ ನಡೆದ ಸಂಘರ್ಷ. ಅಂದಿನ ಸರಸಂಘಚಾಲಕರಾಗಿದ್ದ ಎಂ. ಎಸ್. ಗೋಲ್ವಾಲ್ಕರ್ (ಮಾಧವ್ ರಾವ್ ಸದಾಶಿವ ರಾವ್ ಗೋಲ್ವಾಲ್ಕರ್) ಅವರು ಗಾಂಧಿ ಕೊಲೆಯಲ್ಲಿ



**ಪರಿಣಾಮ**

ಓ ಮರವೇ
ಭೂಮಿಯ ಸ್ವರವೇ
ನಿನ್ನ ಕತ್ತರಿಸಿದಾಗ
ಮೂಕವಾದ
ಪ್ರಾಣಿ ಪಕ್ಷಿಗಳ
ಮೈಯೆಲ್ಲ ಜ್ವರವೇ

**ರವಿಶಂಕರ ಒಡ್ಡಂಬೆಟ್ಟು**
ಕಾವೂರು ಮಂಗಳೂರು – ೫೭೫ ೦೧೫

ಆರ್. ಎಸ್. ಎಸ್.ನ ಪಾತ್ರವಿಲ್ಲವೆಂದು ಉದ್ದಕ್ಕೂ ಪಟ್ಟು ಹಿಡಿದು ವಾದಿಸುತ್ತಲೇ ಇದ್ದರು. ಸರ್ದಾರ್ ಪಟೇಲರಿಗೆ ಕೂಡ ಈ ವೇಳೆಗೆ ಗಾಂಧೀಜಿ ಕೊಲೆಯಲ್ಲಿ ಆರ್. ಎಸ್. ಎಸ್. ನೇರವಾಗಿ ಭಾಗಿಯಾಗಿಲ್ಲ ವೆಂಬುದು ಮನವರಿಕೆಯಾಗಿತ್ತು. ಆದರೆ ಸಂಘದ 'ಹಿಂಸಾತ್ಮಕ' ಕೃತ್ಯಗಳು, ಬುಡಮೇಲು ಚಟುವಟಿಕೆಗಳು 'ಗಾಂಧೀಜಿಯನ್ನು ಕೊಲೆಮಾಡುವಂತಹ ನೀಚ ಕೃತ್ಯಕ್ಕೆ' ಪ್ರೇರಕವಾದವು ಎಂಬ ಬಗೆಗೆ ಪಟೇಲರಿಗೆ ಯಾವ ಸಂದೇಹವೂ ಉಳಿದಿರಲಿಲ್ಲ. "ಗಾಂಧಿ ಕೊಲೆಯಾದುದು ತಮಗೆ ಆಘಾತ ಉಂಟುಮಾಡಿದೆ" – ಎಂದು ತಮ್ಮ ವಿಷಾದವನ್ನು ಸೂಚಿಸಿ ಗೋಲ್ವಾಲ್ಕರ್ ಕಳಿಸಿದ ತಂತಿ ಸಂದೇಶದಿಂದ ಯಾವ ಪ್ರಯೋಜನವೂ ಆಗಲಿಲ್ಲ.

ವಾಸ್ತವವಾಗಿ ಗಾಂಧೀಜಿಯ ಕೊಲೆಯ ಅನಂತರ ಆರ್. ಎಸ್. ಎಸ್.ಅನ್ನು ನಿಷೇಧಿಸಿದ್ದು ಕೊಲೆಯ ನೇರ ಆರೋಪದ ಮೇಲಲ್ಲ. ಆರೋಪ ಪಟ್ಟಿಯಲ್ಲಿ ಕೊಲೆಯ ಪ್ರಸ್ತಾಪವಿಲ್ಲ. ಆಪಾದನೆಯ ಪಟ್ಟಿಯಲ್ಲಿರುವುದು ಆರ್. ಎಸ್. ಎಸ್.ನ ಹಿಂಸಾತ್ಮಕ ಚಟುವಟಿಕೆಗಳು ಮತ್ತು ಬುಡಮೇಲು ಕೃತ್ಯಗಳ ಪ್ರಸ್ತಾಪ. ರಾಷ್ಟ್ರೀಯ ಸ್ವಯಂಸೇವಕ ಸಂಘದವರು ತಾವೇ ಘೋಷಿಸಿಕೊಂಡ "ಭ್ರಾತೃತ್ವ ಭಾವದ ಪೋಷಣೆ, ಹಿಂದೂಗಳಲ್ಲಿ ಸೇವಾ ಮನೋಭಾವ, ಮಾನವ ಪ್ರೇಮ, ಮಾನವೀಯತೆಗಳಿಗೆ ಪ್ರೋತ್ಸಾಹ, ಮೊದಲಾದ ಸದ್ಗುಣಗಳಿಗೆ ಬದ್ಧರಾಗದೆ, ಅನಪೇಕ್ಷಿತವೂ ದೇಶದ ಐಕ್ಯತೆಗೆ ಅಪಾಯಕಾರಿಯೂ ಆದ ಕೃತ್ಯಗಳನ್ನು ನಡೆಸುತ್ತಲೇ ಇದ್ದಾರೆ; ಸಂಘದ ಹಲವು ಸ್ವಯಂಸೇವಕರು ವೈಯಕ್ತಿಕವಾಗಿ ಹಿಂಸಾಕೃತ್ಯಗಳಲ್ಲಿ ತೊಡಗಿದ್ದಾರೆ. ನಾಥೂರಾಮ್ ಗೋಡ್ಸೆ ಮತ್ತು ಅವನ ಸಹಚರರು ಸೇರಿ ಹಿಂಸಾಚಾರವನ್ನು ನಡೆಸಿದ್ದಾರೆ" – ಎಂಬುದು.

೧೯೪೮ರ ನವೆಂಬರ್, ೧೪ರಂದು ಸರ್ದಾರ್ ಪಟೇಲರ ಗೃಹ ಸಚಿವಾಲಯವು ನೀಡಿದ ಪತ್ರಿಕಾ ಪ್ರಕಟಣೆಯಲ್ಲಿ "ಆರ್. ಎಸ್. ಎಸ್. ತನ್ನ ಧೋರಣೆಯನ್ನು ಸುಧಾರಿಸಿಕೊಳ್ಳಬೇಕಾಗಿದೆಯೆಂಬ ಸರ್ಕಾರದ ನಿಲುವನ್ನು ಒಪ್ಪದೆ ಗೋಲ್ವಾಲ್ಕರ್ ಸಂಘದ ಮೇಲಿನ ಬಹಿಷ್ಕಾರವನ್ನು ರದ್ದುಪಡಿಸುವಂತೆ ಒತ್ತಾಯ ಮಾಡುತ್ತಿದ್ದಾರೆ" – ಎಂದು ತಿಳಿಸಲಾಗಿತ್ತು. ಅಷ್ಟೇ ಅಲ್ಲದೆ, "ಪ್ರಾದೇಶಿಕ ಸರ್ಕಾರಗಳಿಂದ ಪಡೆದ ವರದಿಗಳಲ್ಲಿ ಆರ್. ಎಸ್. ಎಸ್.ನೊಡನೆ ಸಂಬಂಧವಿಟ್ಟುಕೊಂಡ ಜನರು ವಿವಿಧ ಮಾರ್ಗಗಳನ್ನು ಅನುಸರಿಸಿ ರಾಷ್ಟ್ರ ವಿರೋಧಿಯೂ ಹಿಂಸಾತ್ಮಕವೂ ಆದ ಕೃತ್ಯಗಳಲ್ಲಿ ತೊಡಗಿದ್ದಾರೆ; ಈ ಹಿಂದೆ ದೇಶದಲ್ಲಿ ನಡೆದಂತಹ ವಿನಾಶಕಾರೀ ಸನ್ನಿವೇಶವನ್ನು ಮತ್ತೊಮ್ಮೆ ಸೃಷ್ಟಿಸಲು ಆರ್. ಎಸ್. ಎಸ್. ಸತತವಾಗಿ ಪ್ರಯತ್ನಿಸುತ್ತಿದೆ..." ಎಂದು ಹೇಳಿದ ಮಾತುಗಳನ್ನು ಉದ್ಧರಿಸಲಾಗಿತ್ತು.

ಈ ನಡುವೆ ಸರ್ದಾರ್ ಪಟೇಲ್ – ಪ್ರಧಾನಿ ಪಂಡಿತ್ ನೆಹರು, ಪಟೇಲ್ – ಗೋಲ್ವಾಲ್ಕರ್, ಪಟೇಲ್ ಮತ್ತು ಆರ್. ಎಸ್. ಎಸ್. ಪರವಾಗಿ ವಾದಿಸುತ್ತಿದ್ದ ಶ್ಯಾಮಪ್ರಸಾದ್ ಮುಖರ್ಜಿ ಇವರ ನಡುವೆ ಸಾಕಷ್ಟು ಪತ್ರಗಳ ವಿನಿಮಯವು ನಡೆಯಿತು.

೧೯೪೮ನೇ ಸೆಪ್ಟೆಂಬರ್ ೧೧ರಂದು ಸರ್ದಾರ್ ಪಟೇಲ್ ಗೋಲ್ವಾಲ್ಕರ್ ಅವರಿಗೆ ಬರೆದ ಪತ್ರದಲ್ಲಿ, ಆರ್. ಎಸ್. ಎಸ್. ಹಿಂದೂ ಸಮಾಜಕ್ಕೆ ಸಲ್ಲಿಸುತ್ತಿರುವ ಸೇವೆಯನ್ನು ಶ್ಲಾಘಿಸಿದ್ದರಾದರೂ ಅದರೊಂದಿಗೆ "...ಪ್ರತೀಕಾರ ಭಾವನೆಯಿಂದ ಕುದಿಯುತ್ತಿರುವ ಆರ್. ಎಸ್. ಎಸ್. ಮುಸಲ್ಮಾನರ ಮೇಲೆ ನಡೆಸುತ್ತಿರುವ ದಾಳಿಯನ್ನು" ತೀವ್ರವಾಗಿ ಖಂಡಿಸಿದ್ದರು. ಮುಂದುವರಿದು "ಇದೆಲ್ಲದರ ಪರಿಣಾಮವಾಗಿ ದೇಶವು ಅತ್ಯಮೂಲ್ಯವಾದ ಗಾಂಧೀಜಿಯ ಪ್ರಾಣವನ್ನು ಬಲಿಕೊಡಬೇಕಾಯಿತು" ಎಂದಿದ್ದರು... "ಗಾಂಧೀಜಿ ಕೊಲೆಯಾದ ನಂತರ ಆರ್. ಎಸ್. ಎಸ್. ನವರು ಸಂತೋಷದಿಂದ ಕುಣಿದಾಡುತ್ತ, ಸಿಹಿ ಹಂಚಿದುದರಿಂದ ಆರ್. ಎಸ್. ಎಸ್. ವಿರುದ್ಧ ಜನರ ಆಕ್ರೋಶವು ತೀವ್ರಗೊಂಡಿತು" – ಎಂದು ಕೂಡ ಆಪಾದಿಸಿದ್ದರು (ನೋಡಿ : ಈ ಪತ್ರ ವ್ಯವಹಾರಗಳ ಉದ್ಧರಣ – 'ದಿ ಹಿಂದು' ದಿನಪತ್ರಿಕೆ, ಅಕ್ಟೋಬರ್ ೮, ೨೦೧೩).

– ಇಷ್ಟಾದ ಮೇಲೆ ಸರ್ದಾರ್ ಪಟೇಲರು ವಿಧಿಸಿದ ಷರತ್ತುಗಳನ್ನು ಅಳವಡಿಸಿಕೊಂಡು ಆರ್. ಎಸ್. ಎಸ್. ತನ್ನ ಲಿಖಿತ ಸಂವಿಧಾನವನ್ನು ರಚಿಸಿಕೊಳ್ಳಲೇ ಬೇಕಾಯಿತು.

ಆರ್. ಎಸ್. ಎಸ್. ಸಂವಿಧಾನವನ್ನೇನೋ ರಚಿಸಿಕೊಂಡಿತು; ಆದರೆ ಅದಕ್ಕೆ ಬದ್ಧವಾಗಿ, ಕೇವಲ ಸಾಂಸ್ಕೃತಿಕ ಸಂಘಟನೆಯಾಗಿ ಮುಂದುವರಿಯುವುದರಿಂದ ಸಂಸದೀಯ ಪ್ರಜಾಪ್ರಭುತ್ವದಲ್ಲಿ ತನ್ನ ಆಶೋತ್ತರಗಳನ್ನು ಈಡೇರಿಸಿಕೊಳ್ಳಲು ಸಾಧ್ಯವಾಗಿರುವುದಿಲ್ಲವೆಂಬುದೂ ಸಂಘಕ್ಕೆ ತಿಳಿದಿತ್ತು. ಇದರ

ಪರಿಣಾಮವಾಗಿ ೧೯೫೧ರಲ್ಲಿ ಜನ್ಮ ತಾಳಿದ ಭಾರತೀಯ ಜನಸಂಘ ಅಥವಾ ಸಂಕ್ಷೇಪದಲ್ಲಿ ಜನಸಂಘವು ಅಂದಿನ ಸಂದರ್ಭಕ್ಕನುಗುಣವಾಗಿ ಭಾರತೀಯ ಜನತಾ ಪಕ್ಷ ಅಥವಾ ಬಿ. ಜೆ. ಪಿ. ಎಂದು ರೂಪಾಂತರಗೊಂಡು ಇದೀಗ ದೇಶದ ರಾಜಕೀಯದಲ್ಲಿ ಕ್ಷೇತ್ರದಲ್ಲಿ ತನ್ನ ಚಟುವಟಿಕೆಗಳನ್ನು ನಿರ್ವಹಿಸುತ್ತಿದೆ. ಅಂದರೆ ಬಿ.ಜೆ.ಪಿ. ಎಂಬುದು ಆರ್. ಎಸ್. ಎಸ್.ನ ರಾಜಕೀಯ ಹಾಗೂ ಸಂಸದೀಯ ಮುಖವಾಡ. ಬಿ. ಜೆ. ಪಿ. ಎಂಬ ಮುಖವಾಡ ವನ್ನು ಧರಿಸಿ ಆರ್. ಎಸ್. ಎಸ್. ಎಂದಿನಿಂದಲೂ ಹಿಂದುತ್ವ ಪರವಾದ ರಾಜಕೀಯವನ್ನು ನಡೆಸುತ್ತಲೇ ಬಂದಿದೆ. ಈಚಿನ ವರ್ಷಗಳಲ್ಲಿ ಆ ಮುಖವಾಡವೂ ಕಳಚಿ ಬೀಳುವ ಸಂದರ್ಭಗಳು ಒದಗಿಬಂದಿವೆ.




ಬಾಬರಿ ಮಸೀದಿ ಧ್ವಂಸ ಮತ್ತು ೧೯೭೭–೧೯೭೯ ಹಾಗೂ ೧೯೯೮–೨೦೦೪ರಲ್ಲಿ ಕೇಂದ್ರ ಸರ್ಕಾರದಲ್ಲಿ ಪ್ರಭುತ್ವ ನಡೆಸಲು ಸಾಧ್ಯವಾದುದು ಈ ಮುಖವಾಡದ ನೆರವಿನಿಂದಲೇ. ಗುಜರಾತಿನಲ್ಲಿ ನರಮೇಧವು ನಡೆದ ಮೇಲೆ ಅಂದಿನ ಪ್ರಧಾನಿ ಮಾನ್ಯ ವಾಜಪೇಯಿ ಯವರನ್ನು 'ನೀವು ಇನ್ನೂ ಆರ್. ಎಸ್. ಎಸ್. ಸದಸ್ಯರೇ ?' – ಎಂದು ಪ್ರಶ್ನಿಸಿದ್ದಕ್ಕೆ "ಸದಾ ನಾನೊಬ್ಬ ಸ್ವಯಂಸೇವಕ" ಎಂದು ಮುಗುಂ ಆಗಿ ಉತ್ತರ ಕೊಟ್ಟಿದ್ದರು. (ಸ್ವಯಂಸೇವಕ= ಸ್ವಇಚ್ಛೆಯಿಂದ ಜನಸೇವೆ ಮಾಡುವವನು. ಹಾಗೆ ನೋಡಿದರೆ ನಮ್ಮ ಎಲ್ಲ ರಾಜಕೀಯ ಧುರೀಣರೂ "ಸ್ವಯಂಸೇವಕರೇ" ತಾನೆ!) ಗುಜರಾತಿನ ಮುಖ್ಯಮಂತ್ರಿ ನರೇಂದ್ರ ಮೋದಿಗೆ 'ರಾಜಧರ್ಮವನ್ನು ಪಾಲಿಸುವಂತೆ' ಉಪದೇಶ ಮಾಡಿ ತಮ್ಮ ಜವಾಬ್ದಾರಿಯ ಕೈ ತೊಳೆದುಕೊಂಡವರೂ ಈ ಮಹಾನುಭಾವರೇ.

೨೦೦೫ರ ಅನಂತರದ ವಿದ್ಯಮಾನಗಳು, ಸರಸಂಘ ಚಾಲಕರು ಪಕ್ಷದ ಆಗುಹೋಗುಗಳ ಮೇಲೆ ಹೆಚ್ಚಿನ ಹಿಡಿತ ಪಡೆಯುತ್ತಿರುವುದನ್ನು ಖಚಿತ ಪಡಿಸುತ್ತಾ ಬಂದಿವೆ. ಮಾನ್ಯ ಎಲ್. ಕೆ. ಅದ್ವಾನಿಯವರು ಪಾಕಿಸ್ತಾನಕ್ಕೆ ಭೇಟಿ ಕೊಟ್ಟು ಕರಾಚಿಯ ಸಮಾಧಿ ಭವನದಲ್ಲಿ, ಮಹಮ್ಮದಾಲಿ ಜಿನ್ನಾ ಅವರು ಒಬ್ಬ 'ಮತಧರ್ಮನಿರಪೇಕ್ಷ ರಾಜಕಾರಣಿ' (secularist) ಎಂದು ಪ್ರಶಂಸಿಸಿದುದು ಸಂಘವು ಅದ್ವಾನೀಜಿ ಮೇಲೆ ಕೋಪಗೊಳ್ಳಲು ಕಾರಣವಾಯಿತು. ಆರ್. ಎಸ್. ಎಸ್.ನವರು ಎಷ್ಟು ಕ್ರುದ್ಧರಾದರೆಂದರೆ ಅದ್ವಾನಿಯವರನ್ನು ಬಿ. ಜೆ. ಪಿ. ಅಧ್ಯಕ್ಷ ಸ್ಥಾನದಿಂದ ಕೈಬಿಡುವಂತೆ ಸರಸಂಘ ಚಾಲಕರಾದ ಮೋಹನ್ ಭಾಗವತ್ ಅವರು ಸೂಚನೆ/ಆಜ್ಞೆ ನೀಡಿದರು. ೨೦೦೯ರಲ್ಲಿ ಪ್ರಧಾನಮಂತ್ರಿಯ ಸ್ಪರ್ಧಿಯಾಗಿದ್ದು, ಅದ್ವಾನೀಜಿ ಅವರ ಅದ್ವಿತೀಯ ಸ್ಥಾನವು ಸದಾಕಾಲಕ್ಕೂ ನಷ್ಟವಾಯಿತು. ಅದ್ವಾನಿಯವರಂಥ ನೀತಿ ನಿರೂಪಕರನ್ನು ಅಗತ್ಯವಿದ್ದರೆ ಪಕ್ಕಕ್ಕೆ ತಳ್ಳುವ ಪ್ರಕ್ರಿಯೆಯು ಇಲ್ಲಿಂದ ಆರಂಭವಾಗಿ ಈಗ ಅದ್ವಾನಿಯನ್ನು ಪಕ್ಷದಲ್ಲಿ ಏಕಾಂಗಿಯಾಗಿಸುವ ಹಂತ ತಲುಪಿದೆ.

ಸಂಘ ಮತ್ತು ಪಕ್ಷದೊಳಗಿನ ಮಹಾ ಸಂಘರ್ಷದಲ್ಲಿ ಸಂಘದ ಮೇಲ್ವಿಚಾರಕರು ತಮ್ಮನ್ನು ಹೀಗೆ ಬಹಿರಂಗವಾಗಿ ಪದಚ್ಯುತಿಗೊಳಿಸಿದ ಬಗೆಗೆ ಅದ್ವಾನಿಯವರ ಕೋಪವು ಅವರ ಮಾತುಗಳಲ್ಲಿಯೇ ಸ್ಫುಟವಾಗಿ ವ್ಯಕ್ತವಾಗಿದೆ. ೨೦೦೫ರ ಸೆಪ್ಟೆಂಬರ್‌ನಲ್ಲಿ ಚೆನ್ನೈಯಲ್ಲಿ ನಡೆದ ಸಂಘದ ರಾಷ್ಟ್ರೀಯ ಕಾರ್ಯಕಾರಿಣಿ ಸಮಾವೇಶದ ಕೊನೆಯ ದಿನದಂದು ಅದ್ವಾನೀಜಿ ಹೇಳಿದ್ದು ಹೀಗೆ: "ಈ ಘಟನೆ (ತಮ್ಮನ್ನು ಪಕ್ಷದ ಅಧ್ಯಕ್ಷ ಸ್ಥಾನದಿಂದ ತೆಗೆದುಹಾಕುವ ವಿಚಾರ)ಯಿಂದಾಗಿ ಸಂಘದ ಒಪ್ಪಿಗೆಯಿಲ್ಲದೆ ಪಕ್ಷವು ಯಾವುದೇ ನಿರ್ಧಾರ ಕೈಗೊಳ್ಳುವಂತಿಲ್ಲ ಎಂಬ ಅಭಿಪ್ರಾಯವು ಸಾರ್ವಜನಿಕರಲ್ಲಿ ಮೂಡಿದೆ; ಇಂತಹ ಗ್ರಹಿಕೆಯಿಂದ ಸಂಘಕ್ಕಾಗಲಿ ಪಕ್ಷಕ್ಕಾಗಲಿ ಒಳ್ಳೆಯದಾಗುವುದಿಲ್ಲ. ಪಕ್ಷವನ್ನು ಬೆಳೆಸುವ, ರಾಷ್ಟ್ರ ಕಟ್ಟುವ ಘನ ಉದ್ದೇಶವನ್ನು ಇದು ಕುಬ್ಜಗೊಳಿಸುತ್ತದೆ ಎಂಬುದನ್ನು ಕುರಿತು ಸಂಘವು ಪರ್ಯಾಲೋಚಿಸಬೇಕು. ಸಾರ್ವಜನಿಕರಲ್ಲಿ ಮೂಡಿರಬಹುದಾದ ಭಾವನೆಯನ್ನು ನಿವಾರಿಸಲು ಸಂಘ ಮತ್ತು ಪಕ್ಷಗಳೆರಡೂ ಪ್ರಜ್ಞಾಪೂರ್ವಕವಾಗಿ ಶ್ರಮಿಸಬೇಕು."

ಈ ಮೊದಲು ಅಷ್ಟೊಂದು ಪ್ರಭಾವಶಾಲಿಗಳಲ್ಲದ ಸ್ವಯಂಸೇವಕರು ಆರ್. ಎಸ್. ಎಸ್. ನೊಡನೆ ಸಂಘರ್ಷ ಕ್ಕಿಳಿದಿದ್ದರೆಂಬುದೂ ಅದಕ್ಕಾಗಿ ಅವರು ಸೂಕ್ತ ಬೆಲೆ ತೆತ್ತಿದ್ದರೆಂಬುದೂ ನಿಜ. ಆದರೆ ಅದ್ವಾನೀಜಿ ಆರ್.ಎಸ್.ಎಸ್.ಗೆ ಅತ್ಯಂತ ಆಪ್ತರಾದವರು ಮತ್ತು ಬಹು ಹಿಂದೆಯೇ ಆರ್. ಎಸ್. ಎಸ್.ನಿಂದ ಆಗಿನ ಜನಸಂಘಕ್ಕೆ ಕಳಿಸಲ್ಪಟ್ಟ ಪ್ರಚಾರಕರಲ್ಲಿ ಒಬ್ಬರು. ಪಕ್ಷದಲ್ಲಿ ದೀರ್ಘಕಾಲ ನುರಿತ ಹಿರಿಯರು. ಅದ್ವಾನೀಜಿ ಆರ್. ಎಸ್. ಎಸ್.ಅನ್ನು 'ಅಧಿಕಪ್ರಸಂಗಿ' (busy body) ಎಂದು ನಿರ್ದಾಕ್ಷಿಣ್ಯವಾಗಿಯೇ ಜರಿದರು. ಅದು (ಸಂಘವು) ಯಾವಾಗಲೂ ಇರುವುದೇ ಹಾಗೆ. ಏನಿದ್ದರೂ ಅದ್ವಾನಿಯವರಂಥ ಉನ್ನತಮಟ್ಟದ ನಾಯಕರನ್ನು ಪಕ್ಷದ ಅಧ್ಯಕ್ಷ ಸ್ಥಾನದಿಂದ ಪಲ್ಲಟ ಗೊಳಿಸುವಂಥ ಘಟನೆಯು ಈ ಹಿಂದೆ ನಡೆದಿರಲಿಲ್ಲ.

ಏಳು ವರ್ಷ ಕಳೆಯಿತು. ಈ ಬಾರಿ ಗುಜರಾತಿನ ಮುಖ್ಯಮಂತ್ರಿ ನರೇಂದ್ರ ಮೋದಿಗೆ ಎರಡು ಹಂತಗಳಲ್ಲಿ, ಎರಡು ಬಡ್ತಿ ಕೊಡುವ ಮೂಲಕ ಆರ್. ಎಸ್. ಎಸ್. ವಿಶೇಷ ಸುದ್ದಿ ಮಾಡಿದೆ. ೨೦೧೩ರ ಜೂನ್‌ನಲ್ಲಿ ಪಕ್ಷದ ಪ್ರಚಾರ ಸಮಿತಿಯ ಮುಖ್ಯಸ್ಥನಾಗಿ ಬಡ್ತಿ ಪಡೆದ ನರೇಂದ್ರ ಮೋದಿ ಆ ಸ್ಥಾನವನ್ನು ತ್ಯಜಿಸಿದ ಮೇಲೆ ಇದೇ ಸೆಪ್ಟೆಂಬರ್‌ನಲ್ಲಿ ಆತನನ್ನು ೨೦೧೪ರಲ್ಲಿ ನಡೆಯಲಿರುವ ಲೋಕಸಭಾ ಚುನಾವಣೆಯಲ್ಲಿ ರಾಷ್ಟ್ರದ ಪ್ರಧಾನಮಂತ್ರಿ ಸ್ಥಾನದ ಅಭ್ಯರ್ಥಿಯೆಂದು ಬಿಂಬಿಸಲಾಗುತ್ತಿದೆ. ಅದ್ವಾನಿಯವರು ೨೦೧೩ರಲ್ಲೇ ನರೇಂದ್ರ ಮೋದಿಯನ್ನು ಪ್ರಚಾರ ಸಮಿತಿಯ ಮುಖ್ಯಸ್ಥನಾಗಿ ನೇಮಿಸುವುದು ಬೇಡವೆಂದಿದ್ದರು. ಈಗ ಅದಕ್ಕಿಂತಲೂ ಮುಖ್ಯವಾದ ಸ್ಥಾನ ನರೇಂದ್ರ ಮೋದಿಗೆ ದೊರೆತಿದೆ. ಅಂದರೆ, ಪ್ರಚಾರ ಸಮಿತಿಯ ಮುಖ್ಯಸ್ಥನಾಗಿ ನೇಮಿಸಿದ್ದು ನೆಪ ಮಾತ್ರ; ಅದು ಗುಜರಾತಿನ ಮುಖ್ಯಮಂತ್ರಿಯನ್ನು ಪ್ರಧಾನಿ ಹುದ್ದೆಯ ಅಭ್ಯರ್ಥಿಯನ್ನಾಗಿ ಬಿಂಬಿಸುವುದರ ವಿರುದ್ಧ ಪಕ್ಷದ ಒಳಗೇ ಇದ್ದ ವಿರೋಧವನ್ನು ಶಮನಗೊಳಿಸುವ ಸಲುವಾಗಿ ರಚಿಸಿದ ನಾಟಕದ ಮೊದಲ ಅಂಕವೆಂಬುದು ಸ್ಪಷ್ಟವಾಗಿದೆ.

ಸದ್ಯದ ಪರಿಸ್ಥಿತಿಯಲ್ಲಿ ಆರ್. ಎಸ್. ಎಸ್.ನ ಸರಸಂಘ ಚಾಲಕರು ಭಾವೀ ಪ್ರಧಾನಮಂತ್ರಿ ಸ್ಥಾನದ ಅಭ್ಯರ್ಥಿಯನ್ನು ನೇಮಿಸುವುದು ಮಾತ್ರವಲ್ಲದೆ, ತೀವ್ರ ಹಿಂದುತ್ವವಾದಿಯಾದ ಗುಜರಾತಿನ ಮುಖ್ಯಮಂತ್ರಿಯನ್ನು ಆ ಸ್ಥಾನಕ್ಕೆ ಹೆಸರಿಸು ವುದರೊಂದಿಗೆ ಆರ್.ಎಸ್.ಎಸ್. ತಾನೇ ರಚಿಸಿಕೊಂಡ ಸಂವಿಧಾನ ಮತ್ತು ಭಾರತೀಯ (ರಾಷ್ಟ್ರ) ಸಂವಿಧಾನಗಳೆರಡನ್ನೂ ಒಮ್ಮೆಗೇ ಉಲ್ಲಂಘಿಸಿದೆ. ಇದರಿಂದ ರಾಷ್ಟ್ರೀಯ ಸ್ವಯಂಸೇವಕ ಸಂಘವು ಸಂವಿಧಾನಗಳಿಗೆ ಕಿಂಚಿತ್ತೂ ಬೆಲೆ ಕೊಡುವುದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ತಾನು 'ಸಂಸ್ಕೃತಿ'ಯ ಪಾಲಕನೆಂದು ಹೇಳಿಕೊಳ್ಳುವ ಆರ್. ಎಸ್. ಎಸ್. ಎಂದೂ ಸಂಸ್ಕೃತಿಯೆಂದರೆ ಏನೆಂಬುದರ ಬಗ್ಗೆ ಸ್ಪಷ್ಟ ವ್ಯಾಖ್ಯಾನ ನೀಡಿಲ್ಲ; ಬದಲಾಗಿ ಭಾರತದ ಪ್ರಜೆಗಳಾಗುವ ಹಕ್ಕು ಯಾರಿಗಿದೆ ಮತ್ತು ಯಾರಿಗಿಲ್ಲ ಎಂಬುದರ ಅಧಿಕೃತ ವಕ್ತಾರ ತಾನು ಎಂಬ ಅಹಂಕಾರ ಮತ್ತು ಭ್ರಮೆಗಳನ್ನು ಮೈಗೂಡಿಸಿಕೊಂಡಿದೆ. ಭಾರತೀಯ ಸಂಸ್ಕೃತಿಯೆಂದರೆ ಒಂದು ಏಕಶಿಲಾರೂಪದ ಘಟಕವಲ್ಲ ಎಂಬ ತಿಳಿವಳಿಕೆ ಆರ್. ಎಸ್. ಎಸ್.ಗೆ ಅಪಥ್ಯ. ಮುಸಲ್ಮಾನರು ಬೇಕಾದರೆ ಪಾಕಿಸ್ತಾನಕ್ಕೋ ಕಬರಿಸ್ತಾನಕ್ಕೋ (ಅಂದರೆ ಸ್ಮಶಾನ) ಹೋಗಲಿ ಎಂದು ರೊಚ್ಚಿನಿಂದ ಅರಚುವುದು ಭಾರತೀಯ ಸಂಸ್ಕೃತಿಯ ಲಕ್ಷಣವಲ್ಲವೆಂಬುದು ಆರ್.ಎಸ್.ಎಸ್.ಗೂ ಗೊತ್ತಿರುತ್ತದೆ, ಆದರೆ ಸಂಸ್ಕೃತಿಯ ಮುಸುಕಿನಲ್ಲಿ ರಾಜಕೀಯ ಮಾಡುತ್ತಿರುವ ಈ ಸಂಸ್ಥೆ ತಾನೇ ನೀಡಿದ್ದ ಮಾತನ್ನು ಎಗ್ಗಿಲ್ಲದೆ ಉಲ್ಲಂಘಿಸಿದೆ. ಅದೇ ಅದರ ಸಂಸ್ಕೃತಿ.

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು – ೫೬೦ ೦೭೦



# ಶಾಲಾ ಶಿಕ್ಷಣದ ಸಮಸ್ಯೆಗಳು, ಪರಿಹಾರೋಪಾಯ ಮಾರ್ಗಗಳು – ಒಂದು ಚಿಂತನೆ

ಪ್ರೊ|| ಸಂಪಿಗೆ ತೋಂಟದಾರ್ಯ

ಭಾಗ – ೧

ಇತ್ತೀಚಿನ ದಿನಗಳಲ್ಲಿ ರಾಜಕೀಯ ನಾಯಕರು, ಖ್ಯಾತ ಸಾಹಿತಿಗಳು, ಶಿಕ್ಷಣ ತಜ್ಞರು ನಮ್ಮ ಶಿಕ್ಷಣ ವ್ಯವಸ್ಥೆ ಕುರಿತು ಅತೃಪ್ತಿ, ಅಸಮಾಧಾನಗಳನ್ನು ಹೊರಹಾಕುತ್ತಾ ಇದ್ದಾರೆ. ಶಿಕ್ಷಣದಲ್ಲಿ ಏಕರೂಪತೆ, ಸಮಾನತೆ ಬರಬೇಕು ಎಂದು ಆಗ್ರಹ ಪಡಿಸುತ್ತಿದ್ದಾರೆ. ಶಾಲಾ ಶಿಕ್ಷಣ, ಅಂದರೆ ಪ್ರಾಥಮಿಕ ಒಂದನೇ ತರಗತಿಯಿಂದ ಹಿಡಿದು ಎಸ್.ಎಸ್.ಎಲ್.ಸಿ.ವರೆಗಿನ ಶಿಕ್ಷಣ, ರಾಜ್ಯದ ಭಾಷಾ ಮಾಧ್ಯಮದಲ್ಲೆ ಇರಬೇಕೆಂದೂ ಆಗ್ರಹಿಸುತ್ತಿದ್ದಾರೆ. ಕರ್ನಾಟಕದಲ್ಲಿ ಶಾಲಾ ಶಿಕ್ಷಣದಲ್ಲಿ ಕನ್ನಡ ಮಾಧ್ಯಮವನ್ನು ಜಾರಿಗೊಳಿಸುವ ವಿಷಯವು ಸುಪ್ರೀಂ ಕೋರ್ಟಿನಲ್ಲಿ ಕೊಳೆಯುತ್ತಾ ಬಿದ್ದಿದೆ.

ಶಿಕ್ಷಣ ಕ್ಷೇತ್ರದಲ್ಲಿ ಅಸಮಾನತೆ, ವರ್ಗಭೇದ, ಕೀಳರಿಮೆಗಳು ಹೆಚ್ಚುತ್ತಾ ಕಳವಳಕ್ಕೆ ಕಾರಣವಾಗಿವೆ. ಶಾಲೆಗಳಲ್ಲಿ ವಿವಿಧ ವರ್ಗಗಳ, ವಿವಿಧ ಮಟ್ಟಗಳ ಶಾಲೆಗಳಿವೆ. ಹಳ್ಳಿಯ ಸರಕಾರಿ ಶಾಲೆಗಳಿಂದ ಹಿಡಿದು ನಗರದ 'ಇಂಟರ್‌ನ್ಯಾಷನಲ್ ಸ್ಕೂಲ್'ಗಳವರೆಗೆ ಹತ್ತಾರು ದರ್ಜೆಗಳ ಶಾಲೆಗಳಿವೆ. "ಊಟ, ಬಟ್ಟೆಗಾಗಿ" ಶಾಲೆ ಸೇರುವ ಬಡವರ ಮಕ್ಕಳಿಂದ ಹಿಡಿದು ಲಕ್ಷಾಂತರ ರೂಪಾಯಿ ದೇಣಿಗೆ ಕೊಟ್ಟು ಸಾವಿರಾರು ರೂಪಾಯಿ ಫೀಸು ಕೊಟ್ಟು ಶಿಕ್ಷಣ ಪಡೆಯುತ್ತಿರುವ ಶ್ರೀಮಂತರ ಮಕ್ಕಳಿವೆ. ಬರೆಯಲು ಕಪ್ಪುಹಲಗೆಗಳೇ ಇಲ್ಲದ ಏಕೋಪಾಧ್ಯಾಯ ಶಾಲೆಗಳಿಂದ ಹಿಡಿದು ಆಡಿಯೊ ವಿಷ್ಯುಯಲ್ ಉಪಕರಣಗಳಿಂದ, ಪ್ರಯೋಗ ಶಾಲೆಗಳಿಂದ ಕೂಡಿದ ಉತ್ತಮ ಸೌಲಭ್ಯಗಳನ್ನು ಹೊಂದಿರುವ ಶಾಲೆಗಳಿವೆ. ರಾಜ್ಯ ಭಾಷಾ ಮಾಧ್ಯಮಗಳ ಮತ್ತು ಇಂಗ್ಲಿಷ್ ಭಾಷಾ ಮಾಧ್ಯಮ ಶಾಲೆಗಳಿವೆ. ಹಳ್ಳಿಗರ, ಬಡವರ ಮಕ್ಕಳಿಗೆ ಕಬ್ಬಿಣದ ಕಡಲೆಯಾಗಿರುವ ಇಂಗ್ಲಿಷ್ ಮಾಧ್ಯಮವು ವರ್ಗಭೇದ ಸೃಷ್ಟಿಸುತ್ತಾ ಕನ್ನಡ ಮಾಧ್ಯಮದಲ್ಲಿ ಕಲಿತ ಹಳ್ಳಿಗರ ಬಡವರ ಮಕ್ಕಳಲ್ಲಿ ಕೀಳರಿಮೆ ಹೆಚ್ಚಿಸುತ್ತಾ ಇದೆ. ಜೊತೆಗೆ ಶಿಕ್ಷಣವು ಏಕೋಮುಖವಾಗಿ ಕೇವಲ ಹೆಚ್ಚಿನ ಸಂಬಳ ತರಬಲ್ಲ ಹುದ್ದೆ ಹಿಡಿವ ಉದ್ದೇಶ ಹೊಂದಿ ಅತಿ ಸ್ಪರ್ಧಾತ್ಮಕ ಕ್ಷೇತ್ರವಾಗಿ ಹೊಮ್ಮುತ್ತಿದೆ. ಇದರಿಂದಾಗಿ ಮಕ್ಕಳು ಒತ್ತಡಕ್ಕೆ ಸಿಲುಕುತ್ತಿವೆ. ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಯುತ್ತಿರುವ ನಗರದ ಬಡವ, ಮಧ್ಯಮ ವರ್ಗಗಳ ಮಕ್ಕಳ ಮಿದುಳಿನ ಶಕ್ತಿ ಕೇವಲ ನೆನಪಿನ ಶಕ್ತಿಗೆ ಸೀಮಿತವಾಗಿ, ಅನುಕರಣ ಶಕ್ತಿ ಮಾತ್ರ

> ಸರ್ಕಾರಿ ಶಾಲೆಗಳಲ್ಲಿನ ಶಿಕ್ಷಣದ ಗುಣಮಟ್ಟ ಹೆಚ್ಚಾಗುವುದರಿಂದ, ಜನ ತಮ್ಮ ಮಕ್ಕಳನ್ನು ಉತ್ಸುಕರಾಗಿ ಸರ್ಕಾರಿ ಶಾಲೆಗಳಿಗೆ ಸೇರಿಸಲು ಹಿಂದೆ ಮುಂದೆ ನೋಡಲಾರರು. ಇದರಿಂದಾಗಿ ಖಾಸಗೀ ಶಾಲೆಗಳ ಪ್ರಭಾವ, ಆಕರ್ಷಣೆ ಕುಂಠಿತಗೊಳ್ಳುವುದು, ಶಿಕ್ಷಣ ವ್ಯಾಪಾರದ ಬದಲಾಗಿ ನೈಜ ವ್ಯಕ್ತಿತ್ವ ರೂಪಿಸುವ ಸಾಧನವಾಗುವುದು. ಈಗ ಜನರ ಮೇಲೆ ಸರ್ಕಾರ ತನ್ನ ಅಭಿಪ್ರಾಯ ಹೇರುತ್ತಿಲ್ಲವಾಗಿ ಕೋರ್ಟುಗಳು ಮೂಗು ತೂರಿಸಲಾರವು. ಹೀಗಾದರೆ ಕೆಲವೇ ವರ್ಷಗಳಲ್ಲಿ ದೇಶದ ತುಂಬೆಲ್ಲಾ ಸರ್ಕಾರಿ ಶಾಲೆಗಳೇ ವಿಜೃಂಭಿಸತೊಡಗುವುವು. ಖಾಸಗೀ ಶಾಲೆಗಳು ತಂತಾನೆ ಮುಚ್ಚುವುವು. ನೈಜ ರಾಷ್ಟ್ರೀಕರಣ ತನಗೆ ತಾನೆ ಆಗಿರುತ್ತದೆ. ಕನ್ನಡ ಮಾಧ್ಯಮವೂ ನೆಲೆಗೊಳ್ಳುತ್ತದೆ. ದೇಶದ ಎಲ್ಲಾ ಮಕ್ಕಳೂ ಪ್ರತಿಭಾವಂತರಾಗುತ್ತಾರೆ. ಕೋಟಿ ಕೋಟಿ ಮಕ್ಕಳು ರಾಷ್ಟ್ರಜೀವನದಲ್ಲಿ ಪ್ರಭಾವಯುತರಾಗಿ ತಮ್ಮ ಕೊಡುಗೆ ಸಲ್ಲಿಸುವಂತಾಗುತ್ತದೆ. ಮಾನವ ಸಂಪನ್ಮೂಲದ ಪೂರ್ಣ ಉಪಯೋಗ ರಾಷ್ಟ್ರಕ್ಕೆ ಲಭಿಸಿ ರಾಷ್ಟ್ರ ಪ್ರಗತಿ ಪಥದಲ್ಲಿ ಮುನ್ನಡೆಯುತ್ತದೆ.

ವೃದ್ಧಿಗೊಳ್ಳುತ್ತಿದೆ. ಆತ್ಮವಿಶ್ವಾಸ, ಮಾನವೀಯ ಭಾವನೆಗಳು ಬೇರೂರದೆ ಮಕ್ಕಳು ತೇಜೋಹೀನರಾಗಿ ಬರಿ ದುಡಿಯುವ ಯಂತ್ರಗಳಾಗುತ್ತಿದ್ದಾರೆ. ದೊಡ್ಡ ಸಂಖ್ಯೆಯಲ್ಲಿ ಮಕ್ಕಳು ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸುತ್ತಿದ್ದಾರೆ. ಒತ್ತಡದಿಂದಾಗಿ ಆತ್ಮಹತ್ಯೆಯ ಮಾರ್ಗ ಹಿಡಿಯುವ ಮಕ್ಕಳ ಸಂಖ್ಯೆ ಜಾಸ್ತಿಯಾಗುತ್ತಿದೆ. ಇದೆಲ್ಲದರಿಂದಾಗಿ ನಮ್ಮ ದೇಶದಲ್ಲಿ ಕೋಟಿ ಕೋಟಿ ಮಕ್ಕಳು ಅರೆ ಶಿಕ್ಷಣವಂತರಾಗಿ ಸಮಾಜದಲ್ಲಿ ಉಪಯೋಗಕ್ಕೆ ಬಾರದಂಥವರಾಗುತ್ತಿದ್ದಾರೆ. ಈ ಎಲ್ಲ ಬೆಳವಣಿಗೆಗಳಿಂದಾಗಿ ಎಷ್ಟೊಂದು ಮಾನವ ಸಂಪನ್ಮೂಲ ಹಾಳಾಗುತ್ತಿದೆ! ಎಷ್ಟೊಂದು ಅನಾಹುತಗಳಾಗುತ್ತಿವೆ!

ಇದಕ್ಕೆಲ್ಲಾ ಮೂಲ ಕಾರಣ ಶಿಕ್ಷಣ ವ್ಯವಸ್ಥೆಯ ವೈಫಲ್ಯ. ಇದನ್ನು ಪರಿಹರಿಸುವ ನಿಟ್ಟಿನಲ್ಲಿ ಅನೇಕರು ಪ್ರಯತ್ನಿಸುತ್ತಿದ್ದಾರೆ. ಸಲಹೆ ಸೂಚನೆಗಳನ್ನು ಕೊಡುತ್ತಿದ್ದಾರೆ. ಆದರೆ ಇವರ ಆವೇಶದ, ಅಭಿಮಾನದ ಭಾಷಣಗಳಾಗಲೀ ಸಲಹೆ ಸೂಚನೆಗಳಾಗಲೀ ಜನರನ್ನು ಪ್ರಭಾವಿಸಲು ಶಕ್ತವಾಗಿಲ್ಲ. ಜನರಿಗೆ ಪ್ರಾಥಮಿಕ ಶಿಕ್ಷಣದ ಮಹತ್ವವನ್ನು ಸರಿಯಾಗಿ ಅರ್ಥಮಾಡಿಸಲೂ ವಿಫಲವಾಗಿವೆ. ಕೆಲವರು ಇದೆಲ್ಲದರಿಂದ ರೋಸಿಹೋಗಿ ಪ್ರಾಥಮಿಕ ಶಿಕ್ಷಣವನ್ನು ರಾಷ್ಟ್ರೀಕರಣ ಮಾಡಿದರೆ ಮಾತ್ರ ಏಕರೂಪತೆ, ಸಮಾನತೆ ತರಲು ಸಾಧ್ಯ ಎಂದು ಪ್ರತಿಪಾದಿಸುತ್ತಿದ್ದಾರೆ. ಆದರೆ ಅವರಾರೂ ರಾಷ್ಟ್ರೀಕರಣದ ಸಾಧಕ, ಬಾಧಕಗಳ ಬಗ್ಗೆಯಾಗಲೀ, ಸಾಧಿಸುವ ರೀತಿ ನೀತಿಗಳ ಬಗ್ಗೆಯಾಗಲೀ ಗಂಭೀರ ಚಿಂತನೆ ನಡೆಸಿರುವ ಹಾಗೆ ಕಾಣಿಸುವುದಿಲ್ಲ. ಅವರ ಅಭಿಪ್ರಾಯವು ಕೇವಲ ಮಕ್ಕಳ ಶಿಕ್ಷಣದ ಬಗೆಗಿನ ಕಳಕಳಿ ವ್ಯಕ್ತಪಡಿಸುವುದರ ದ್ಯೋತಕವಾಗಿದೆ, ಅಷ್ಟೆ.

ಸದ್ಯದ ಪರಿಸ್ಥಿತಿಯಲ್ಲಿ ರಾಷ್ಟ್ರೀಕರಣ, ಶಿಕ್ಷಣ ವ್ಯವಸ್ಥೆಯ ಸಮಸ್ಯೆಗೆ ಪರಿಹಾರ ನೀಡುವ ಬದಲು ಸಮಸ್ಯೆಗಳನ್ನು ಉಲ್ಬಣಗೊಳಿಸುವ ಸಾಧ್ಯತೆಯೇ ಹೆಚ್ಚು. ಅಲ್ಲದೆ ಈಗಿನ ಸರ್ಕಾರಿ ಶಾಲೆಗಳ ಸ್ಥಿತಿಗತಿ ನೋಡಿದರೆ, ಅಲ್ಲಿ ಕಲಿತ ಮಕ್ಕಳ ಶಿಕ್ಷಣದ ಗುಣಮಟ್ಟ ನೋಡಿದರೆ ಖಂಡಿತ ಜನ ರಾಷ್ಟ್ರೀಕರಣವನ್ನು ಶತಾಯಗತಾಯ ವಿರೋಧಿಸುವುದರಲ್ಲಿ ಸಂಶಯವೇ ಇಲ್ಲ. ಇತ್ತೀಚಿನ ಸಮೀಕ್ಷೆಯೊಂದರ ಪ್ರಕಾರ ಕನ್ನಡ ಮಾಧ್ಯಮದ ಸರ್ಕಾರಿ ಶಾಲೆಗಳಲ್ಲಿನ ಎಂಟನೇ ತರಗತಿಯ ಬಹುಪಾಲು ಮಕ್ಕಳಿಗೆ ಕನ್ನಡವನ್ನೇ ಸರಿಯಾಗಿ ಓದಲು, ಬರೆಯಲು ಬರುವುದಿಲ್ಲ. ನಾಲ್ಕನೇ, ಐದನೇ ತರಗತಿಯ ಮಕ್ಕಳಿಗೆ ಕನ್ನಡ ವರ್ಣಮಾಲೆಯನ್ನು, ಸರಳ ಕನ್ನಡ ಪದಗಳನ್ನು ಸಹ ಬರೆಯಲು ಬರುವುದಿಲ್ಲ ಎಂದು ತಿಳಿದು ಬಂದಿದೆ. ಊಟ, ಬಟ್ಟೆ, ಪುಸ್ತಕಗಳನ್ನು ಉಚಿತವಾಗಿ ಕೊಡುತ್ತಿದ್ದರೂ ಸರ್ಕಾರಿ ಶಾಲೆಗಳಿಗೆ ಸೇರುವ ಮಕ್ಕಳ ಸಂಖ್ಯೆ ಕಡಿಮೆ ಆಗುತ್ತಲೇ ಸಾಗಿದೆ. ಕೆಲವು ಶಾಲೆಗಳಲ್ಲಿ ಬೆರಳೆಣಿಕೆಯಷ್ಟು ಮಕ್ಕಳೂ ಇಲ್ಲದೆ ಅವನ್ನು ಮುಚ್ಚುವ ಸ್ಥಿತಿ ಉಂಟಾಗಿದೆ.

ಇದಕ್ಕೆ ಜನರ ಭಾವನೆಗಳೂ ಕೂಡ ಕಾರಣವಾಗಿವೆ. "ಖಾಸಗಿ ಶಾಲೆಗಳಲ್ಲಿ ಸರ್ಕಾರಿ ಶಾಲೆಗಳಿಗಿಂತ ಚೆನ್ನಾಗಿ ಕಲಿಸುತ್ತಾರೆ. ಕನ್ನಡ ಮಾಧ್ಯಮದಲ್ಲಿ ಕಲಿತರೆ ಕೆಲಸ ಸಿಗುವುದಿಲ್ಲ. ಇಂಗ್ಲಿಷ್ ಮಾಧ್ಯಮದಲ್ಲಿ ಓದಿದರೆ ಮಕ್ಕಳು ಬುದ್ಧಿವಂತರಾಗುತ್ತಾರೆ ಮತ್ತು ಪ್ರಪಂಚದಲ್ಲಿ ಎಲ್ಲಿ ಬೇಕಾದರೂ ಒಳ್ಳೆ ಉದ್ಯೋಗ ಸಿಗುತ್ತದೆ. ಆದ್ದರಿಂದಲೇ ನಗರದ ಉದ್ಯೋಗಸ್ಥರು ತಮ್ಮ ಮಕ್ಕಳನ್ನು ಖಾಸಗಿ ಆಂಗ್ಲ ಶಾಲೆಗಳಿಗೆ ಸೇರಿಸುತ್ತಾರೆ. ಅವರ ಮಕ್ಕಳು ಕೈತುಂಬಾ ಸಂಬಳ ಬರುವ ಉದ್ಯೋಗ ಪಡೆಯುತ್ತಾರೆ. ಹೀಗಿರುವಾಗ ನಾವೂ ಯಾಕೆ ಹಾಗೇ ಮಾಡಬಾರದು ?" – ಹೀಗೆ ಅನೇಕ ಅಭಿಪ್ರಾಯಗಳನ್ನೂ ಭಾವನೆಗಳನ್ನೂ ನಂಬಿಕೆಗಳನ್ನೂ ಹಳ್ಳಿಯವರು, ಬಡವರು, ಕೆಳವರ್ಗದವರು ಹೊಂದಿದ್ದಾರೆ. ಇದರಿಂದಾಗಿ ಈಗ ಹಳ್ಳಿಯವರೂ ಕೂಡ ತಮ್ಮ ಮಕ್ಕಳನ್ನು ಹತ್ತಿರದ ನಗರದ ಆಂಗ್ಲ ಶಾಲೆಗಳಿಗೆ ಸೇರಿಸುತ್ತಿದ್ದಾರೆ. ಕೆಲವು ದೊಡ್ಡ ಹಳ್ಳಿಗಳಲ್ಲಿ ಖಾಸಗೀ ಆಂಗ್ಲ ಶಾಲೆಗಳೂ ತಲೆ ಎತ್ತಿವೆ. ಎಲ್ಲಿಗೂ ಕಳಿಸಲಾಗದವರು, ನಿರ್ಗತಿಕರು ಮಾತ್ರ ತಮ್ಮ ಮಕ್ಕಳನ್ನು ಗತ್ಯಂತರವಿಲ್ಲದೆ ಸರ್ಕಾರಿ ಶಾಲೆಗಳಿಗೆ ಸೇರಿಸುತ್ತಿದ್ದಾರೆ, ಅಷ್ಟೆ.

ಇದರ ಜೊತೆಗೆ ಉನ್ನತ ಶಿಕ್ಷಣ, ಅದರಲ್ಲೂ ವೃತ್ತಿಪರ ಕೋರ್ಸುಗಳು



ಇಂಗ್ಲಿಷ್ ಮಾಧ್ಯಮದಲ್ಲಿ ಇರುವುದರಿಂದ ಪ್ರಾಥಮಿಕ ಹಂತದಿಂದಲೇ ಇಂಗ್ಲಿಷ್ ಮಾಧ್ಯಮದಲ್ಲಿ ಓದಬೇಕೆಂಬ ಅಭಿಪ್ರಾಯವೂ ಬಲವಾಗಿದೆ. ಇಂಗ್ಲಿಷ್ ಭಾಷೆಯಲ್ಲಿ ಓದುವುದರಿಂದ, ಇಂಗ್ಲಿಷ್‌ನಲ್ಲಿ ಪರಿಣತಿ ಹೊಂದುವುದರಿಂದ ಮಾತ್ರ ಮಕ್ಕಳು ಬುದ್ಧಿವಂತರಾಗುತ್ತಾರೆ ಎನ್ನುವ ನಂಬಿಕೆಯೂ ಬಲವಾಗಿದೆ. ಇದು ಎಷ್ಟು ಬಲವಾಗಿದೆ ಎಂದರೆ ನಗರಗಳಲ್ಲಿ ಈಗ ಯಾರೂ ಮಕ್ಕಳನ್ನು ಕನ್ನಡ ಮಾಧ್ಯಮ ಶಾಲೆಗೆ ಸೇರಿಸುವುದಿಲ್ಲ. ಒಬ್ಬ ಎಷ್ಟೇ ಉಗ್ರ ಕನ್ನಡ ಅಭಿಮಾನಿಯಾಗಿದ್ದರೂ ಸಹ, ಅವನ ಮನೆಯ ಮಕ್ಕಳನ್ನು ಕನ್ನಡ ಮಾಧ್ಯಮ ಶಾಲೆಗೆ ಸೇರಿಸಲು ಸಾಧ್ಯವಿಲ್ಲ. ಏಕೆಂದರೆ ಒಂದು, ಕನ್ನಡ ಮಾಧ್ಯಮ ಶಾಲೆಗಳು ದುಸ್ಥಿತಿಯಲ್ಲಿವೆ. ಬಹಳ ಕಡಿಮೆ ಸಂಖ್ಯೆಯಲ್ಲಿವೆ. ಎರಡು, ಸಾಮಾಜಿಕ ಒತ್ತಡವು ಕನ್ನಡ ಮಾಧ್ಯಮಕ್ಕೆ ಸೇರುವುದರ ವಿರುದ್ಧವಾಗಿದೆ. ಇಷ್ಟಾದರೂ ಒಂದು ಪಕ್ಷ ಆ ಕನ್ನಡಾಭಿಮಾನಿ ಮಗುವನ್ನು ಕನ್ನಡ ಮಾಧ್ಯಮ ಶಾಲೆಗೇ ಸೇರಿಸಲು ಪ್ರಯತ್ನಿಸಿದರೆ ಮನೆಯಲ್ಲೇ ವಿರೋಧ ಎದುರಿಸ ಬೇಕಾಗುತ್ತದೆ. ಮನೆಯಲ್ಲೇ ಖಳನಾಯಕನಾಗಿ ಬಿಡುತ್ತಾನೆ. ಮನಶ್ಶಾಂತಿ ಕಳೆದುಕೊಳ್ಳಬೇಕಾಗುತ್ತದೆ. ಬೆಂಗಳೂರಿನಂತಹ ನಗರಗಳಲ್ಲಿ ಮಕ್ಕಳಿಗೆ ಇಂಗ್ಲಿಷ್‌ಅನ್ನು ಪರಿಸರ ಭಾಷೆಯನ್ನಾಗಿ ಮಾಡಲು "ಮನೆಮಾತಾಗಿ" ಅದನ್ನು ಮಾಡಿಕೊಳ್ಳುತ್ತಿದ್ದಾರೆ. ಇಂಗ್ಲಿಷ್ ಶಾಲೆಗಳಲ್ಲಿ ಕನ್ನಡ ಮಾತಾಡಿದರೆ ದಂಡ ತೆರಬೇಕಾಗುತ್ತದೆ. ಮಕ್ಕಳು ಶಿಕ್ಷೆಗೆ ಒಳಗಾಗಬೇಕಾಗುತ್ತದೆ. ಪೋಷಕರಿಗೆ ಬೆದರಿಕೆ ಬರುತ್ತದೆ. ಇಂತಹ ದುಸ್ಥಿತಿ ಬೇರೆ ಯಾವ ದೇಶದಲ್ಲೂ ಇರಲು ಸಾಧ್ಯವಿಲ್ಲ.

ಎಲ್ಲರೂ ಹೀಗೆ ಹಣದ ಹುಚ್ಚನ್ನು ಹತ್ತಿಸಿಕೊಂಡು ಇಂಗ್ಲಿಷ್‌ನ ಹಿಂದೆ ಬಿದ್ದಿರುವುದರಿಂದ, ಸರ್ಕಾರವೂ ಅದೇ ದಾರಿಯಲ್ಲಿದೆ. ಒಂದನೇ ತರಗತಿ ಯಿಂದಲೇ ಇಂಗ್ಲಿಷನ್ನು ಕಲಿಸುವುದನ್ನು ಮತ್ತು ಆರನೇ ತರಗತಿಯಿಂದ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಸುವುದನ್ನು ಪ್ರಾರಂಭಿಸುತ್ತಿದೆ. ಹೀಗೆಲ್ಲಾ ಮಾಡಿದರೂ ಕೂಡ ಜನರೇನೂ ಸರ್ಕಾರಿ ಶಾಲೆಗಳಿಗೆ ತಮ್ಮ ಮಕ್ಕಳನ್ನು ಸೇರಿಸುವುದಿಲ್ಲ. ಏಕೆಂದರೆ ಕನ್ನಡ ಮಾಧ್ಯಮದಲ್ಲೇ ಕಲಿಸಲಾಗದವರು ಇನ್ನು ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಸುವುದು ಸಾಧ್ಯವೆ? ಎಂದು ಯೋಚಿಸುತ್ತಾರೆ. ಆದ್ದರಿಂದ ಯಾರು ಏನೇ ಹೇಳಲಿ ಜನ ಕೇಳುವ ಸ್ಥಿತಿಯಲ್ಲಿ ಇಲ್ಲ. ಸುಪ್ರೀಂ ಕೋರ್ಟೇ, "ಮಕ್ಕಳು ಯಾವ ಭಾಷೆಯಲ್ಲಿ ಓದಬೇಕು, ಯಾವ ಸ್ಕೂಲಿಗೆ ಸೇರಬೇಕು ಎಂಬುದನ್ನು ತೀರ್ಮಾನಿಸುವುದು ಪೋಷಕರಿಗೆ ಬಿಟ್ಟ ವಿಚಾರ, ಅವರ ಮೇಲೆ ಸರ್ಕಾರ ತನ್ನ ಅಭಿಪ್ರಾಯ ಹೇರಬಾರದು" ಎಂದು ಅಭಿಪ್ರಾಯಪಟ್ಟಿದೆ. ದೊಡ್ಡ ಐ.ಟಿ. ಉದ್ಯಮಿಗಳೂ ಒಂದನೇ ತರಗತಿಯಿಂದಲೇ ಇಂಗ್ಲಿಷ್ ಮಾಧ್ಯಮ ತಂದರೆ ಒಳ್ಳೆಯದು ಎಂದು ಪ್ರತಿಪಾದಿಸಿದ್ದಾರೆ. ಸಾವಿರಾರು ಕೋಟಿ ರೂಪಾಯಿ ಸಂಪಾದಿಸುವವರ ಮಾತನ್ನು ತಿರಸ್ಕರಿಸಲಾದೀತೆ? ಹೀಗಿದೆ ಪರಿಸ್ಥಿತಿ. ಈಗೇನು ಮಾಡುವುದು?

ಈ ಪರಿಸ್ಥಿತಿಯಲ್ಲಿ ಶಿಕ್ಷಣವನ್ನು ರಾಷ್ಟ್ರೀಕರಿಸಿ ಕನ್ನಡ ಮಾಧ್ಯಮವನ್ನು ಜಾರಿಗೆ ತರಲು ಸಾಧ್ಯವೆ? ನಮ್ಮದೇನು ಸರ್ವಾಧಿಕಾರ ವ್ಯವಸ್ಥೆಯ ಸರ್ಕಾರವಲ್ಲ. ಪ್ರಜಾಪ್ರಭುತ್ವದ ಸರ್ಕಾರ. ಪ್ರಜೆಗಳ ಅಭಿಪ್ರಾಯದಂತೆ ಸರ್ಕಾರ ನಡೆಯಬೇಕೇ ವಿನಾ ತನಗೆ ತಿಳಿದಂತೆ ಅಲ್ಲ. ಆದ್ದರಿಂದ ರಾಷ್ಟ್ರೀಕರಣ ಶಾಲಾ ಶಿಕ್ಷಣದ ಸಮಸ್ಯೆಗಳಿಗೆ ಪರಿಹಾರವೂ ಅಲ್ಲ ಮತ್ತು ಅದು ಸಾಧ್ಯವೂ ಆಗುವುದಿಲ್ಲ.

ಆದರೆ ಪರಿಸ್ಥಿತಿಯನ್ನು ಹೀಗೇ ಬಿಡುವುದೇ? ಕೋಟಿ ಕೋಟಿ ಮಕ್ಕಳು ಈ ಭಾಷೆಯ ಹೊರೆಯಲ್ಲಿ ಹೈರಾಣಾಗಿ ಶಿಕ್ಷಣವನ್ನು ಅರ್ಧದಲ್ಲೇ ತ್ಯಜಿಸುವುದನ್ನು ತಪ್ಪಿಸುವುದು ಹೇಗೆ? ಈ ಕೋಟಿ ಮಕ್ಕಳ ಪ್ರತಿಭೆ ಕುಂಠಿತವಾಗದಂತೆ ಮಾಡುವುದು ಹೇಗೆ? ಅವರೂ ಬೆಳೆದು ರಾಷ್ಟ್ರದ ಪ್ರಗತಿಗೆ, ಮಾನವ ಸಮಾಜಕ್ಕೆ ಕೊಡುಗೆ ಸಲ್ಲಿಸುವಂತೆ ಮಾಡುವುದು ಹೇಗೆ? ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಮಾನವ ಸಂಪನ್ಮೂಲ ಹಾಳಾಗದಂತೆ ತಡೆಯುವುದು ಹೇಗೆ? ಗಂಭೀರವಾಗಿ ಚಿಂತಿಸಬೇಕಾದ ವಿಷಯ.

ಜನರ ಮನದಲ್ಲಿ ಪ್ರಬಲವಾಗಿ ಹೊಕ್ಕಿರುವ ಶಿಕ್ಷಣದ ಬಗೆಗಿನ ನಂಬಿಕೆ ಗಳನ್ನು ಬದಲಿಸಿ ಅವರು ತಮ್ಮ ಮಕ್ಕಳನ್ನು ಸರ್ಕಾರಿ ಶಾಲೆಗಳಲ್ಲಿ, ಕನ್ನಡ ಮಾಧ್ಯಮದಲ್ಲಿ ಓದಲು ಸೇರಿಸುವಂತೆ ಅವರ ಮನ ಪರಿವರ್ತನೆ ಮಾಡುವುದು ಸಾಧ್ಯವೇ? ಇದಕ್ಕೇನಾದರೂ ಮಾರ್ಗಗಳಿವೆಯೇ? ಈ ಬಗ್ಗೆ ತಜ್ಞರು ಗಂಭೀರ ಚಿಂತನೆಯಲ್ಲಿ ತೊಡಗಬೇಕು. ಕನಿಷ್ಠ ಮೇಲ್ನೋಟಕ್ಕಾದರೂ, "ಹೌದು, ಇದು ಒಂದು ಪರಿಹಾರ ನೀಡಬಹುದಾದ ಪರ್ಯಾಯ ಮಾರ್ಗ" ಎಂಬಂತಹ ಪರ್ಯಾಯ ಪದ್ಧತಿಯನ್ನು ರೂಪಿಸಬೇಕು. ಈ ದಿಸೆಯಲ್ಲಿ ನನ್ನ ಚಿಂತನೆಗೆ ಹೊಳೆದ ಮಾರ್ಗವನ್ನು ವಿವರಿಸುವ ಪ್ರಯತ್ನವನ್ನಿಲ್ಲಿ ಮಾಡುತ್ತಿದ್ದೇನೆ. ಇದರ ಸಾಧಕ, ಬಾಧಕಗಳನ್ನು ಶಿಕ್ಷಣ ತಜ್ಞರು ಪರಿಶೀಲಿಸಬೇಕೆಂದು ವಿನಂತಿಸುತ್ತೇನೆ.

**ಭಾಗ –೨**

ಶಿಕ್ಷಣ ಕ್ಷೇತ್ರದ ಸಮಸ್ಯೆಗಳಿಗೆ ಪರಿಹಾರ ಮಾರ್ಗಗಳ ಬಗ್ಗೆ ಯೋಚಿಸಿದಾಗ ಇದನ್ನು ಸಾಧಿಸಲು ಎರಡು ಮಾರ್ಗಗಳು ನನಗೆ ಕಾಣುತ್ತಿವೆ. ಒಂದು, ಶಾಲಾ ಶಿಕ್ಷಣದಲ್ಲಿ ಇಂಗ್ಲಿಷ್ ಮಾಧ್ಯಮಕ್ಕಿಂತ ಕನ್ನಡ ಮಾಧ್ಯಮದಲ್ಲಿ ಓದಿದರೆ ಯಾವ ರೀತಿ ನಮ್ಮ ಮಕ್ಕಳಿಗೆ ಹೆಚ್ಚಿನ ಉಪಯೋಗವಾಗುತ್ತದೆ ಎಂಬುದನ್ನು ಜನರಿಗೆ ಮನದಟ್ಟು ಮಾಡುವ ಸಾಮಾಜಿಕ ಜಾಗೃತಿ ಚಳುವಳಿಯ ಮಾರ್ಗ. ಎರಡು, ಸರ್ಕಾರಿ ಶಾಲೆಗಳಲ್ಲಿನ ಬೋಧನೆಯ ಗುಣಮಟ್ಟವನ್ನು ಯಾವುದೇ ಖಾಸಗೀ ಶಾಲೆಗಿಂತ ಕಡಿಮೆ ಇಲ್ಲದಷ್ಟು ಹೆಚ್ಚಿಸುವುದು, ಅಂದರೆ ಉತ್ತಮ ಶೈಕ್ಷಣಿಕ ವ್ಯವಸ್ಥೆ ರೂಪಿಸುವ ಮಾರ್ಗ.

ಈಗ ಮೊದಲ ಮಾರ್ಗವನ್ನು ಕುರಿತು ವಿಚಾರ ಮಾಡೋಣ. ಭಾಷಾ ಮಾಧ್ಯಮದ ವಿಚಾರದಲ್ಲಿ ಈಗಾಗಲೇ ಪ್ರಪಂಚದಾದ್ಯಂತ ಶಿಕ್ಷಣ ತಜ್ಞರೆಲ್ಲರೂ ಒಕ್ಕೊರಲಿನಿಂದ ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ದಾಖಲೆ ಸಮೇತ ಜನರಿಗೆ ತಿಳಿಸಬೇಕು. ಅಂದರೆ ತಜ್ಞರೆಲ್ಲರೂ "ಶಾಲಾ ಶಿಕ್ಷಣವನ್ನು ಮಕ್ಕಳ ಪರಿಸರದ ಭಾಷೆಯಲ್ಲಿ, ಅಂದರೆ ಮಾತೃಭಾಷೆ / ರಾಜ್ಯ ಭಾಷೆಯಲ್ಲಿ, ನೀಡಿದರೆ ಮಕ್ಕಳು ಬೇಗ, ಚೆನ್ನಾಗಿ ಕಲಿತುಕೊಳ್ಳುತ್ತಾರೆ. ಇದರಿಂದ ಹೆಚ್ಚು ವಿಷಯಗಳನ್ನು ಮಕ್ಕಳು ಕಲಿತುಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಇದಕ್ಕಿಂತಲೂ ಮುಖ್ಯವಾಗಿ ಮಕ್ಕಳ ಮೆದುಳಿನ ಶಕ್ತಿಗಳಾದ ಕಲ್ಪನಾಶಕ್ತಿ, ವಿವೇಚನಾಶಕ್ತಿ, ಸೃಜನಶೀಲಶಕ್ತಿಗಳು ಚೆನ್ನಾಗಿ ವಿಕಸನಗೊಂಡು ವೃದ್ಧಿಯಾಗುತ್ತವೆ" ಎಂದು ಹೇಳಿರುವುದನ್ನು ಮನದಟ್ಟಾಗುವ ರೀತಿಯಲ್ಲಿ ಜನರಿಗೆ ತಿಳಿಸಬೇಕು. "ಬಾಲ್ಯದ ಅವಧಿಯಲ್ಲೆ, ಅಂದರೆ ಮೊದಲ ಹದಿನೈದು ವರ್ಷಗಳ ಅವಧಿಯಲ್ಲೇ ಮೆದುಳಿನ ಈ ಶಕ್ತಿಗಳು ವಿಕಾಸಗೊಳ್ಳುವುದು. ನಂತರ ಏನಿದ್ದರೂ ಇವುಗಳನ್ನು ಉಪಯೋಗಿಸಿಕೊಂಡು ವ್ಯಕ್ತಿತ್ವವನ್ನು ರೂಪುಗೊಳಿಸಿಕೊಂಡು ತನ್ನ ಧ್ಯೇಯ ಗುರಿಗಳನ್ನು ತಲುಪಲು ವ್ಯಕ್ತಿ ಪ್ರಯತ್ನಿಸುತ್ತಾನೆ" ಎಂಬ ಅಂಶವನ್ನು ಮನಗಾಣಿಸಬೇಕು. ಇವನ್ನು ವೈಜ್ಞಾನಿಕ, ವೈಚಾರಿಕ ಹಿನ್ನೆಲೆಗಳಲ್ಲಿ ಜನರಿಗೆ ಮನದಟ್ಟು ಮಾಡಲು ಚಳುವಳಿಯನ್ನೇ ಹಮ್ಮಿಕೊಳ್ಳಬೇಕು. ಇದರಲ್ಲಿ ಅಭಿಮಾನಕ್ಕಿಂತ ಮುಖ್ಯವಾಗಿ ಮಕ್ಕಳ ಶ್ರೇಯೋಭಿವೃದ್ಧಿಯೇ ಹೆಚ್ಚು ಬಿಂಬಿತವಾಗಬೇಕು. ಇದಕ್ಕೆ ಸಂಬಂಧಿಸಿದಂತೆ ಸರಳ ಭಾಷೆಯಲ್ಲಿ ತಜ್ಞರ ಅಭಿಪ್ರಾಯಗಳನ್ನು ತಿಳಿಸುವ ಹೊತ್ತಿಗೆಗಳು ಸುಲಭ ಬೆಲೆಯಲ್ಲಿ ಅಥವಾ ಉಚಿತವಾಗಿ ಜನರಿಗೆ ಸಿಗುವಂತೆ ಮಾಡಬೇಕು.

ಶಾಲಾ ಶಿಕ್ಷಣದಲ್ಲಿ ಬರೀ ಕಲಿಕೆ ಅಷ್ಟೇ ಅಲ್ಲದೆ, ಮೆದುಳಿನ ಶಕ್ತಿಗಳನ್ನು ವೃದ್ಧಿಸಿಕೊಳ್ಳುವುದೂ ಆಗುವುದರಿಂದ ಮುಂದೆ ಅವುಗಳನ್ನು ಬಳಸಿಕೊಂಡು

ಬೇಕಾದ ಭಾಷೆ, ವಿಷಯ ಕಲಿತುಕೊಳ್ಳಬಹುದು ಎಂಬುದಕ್ಕೆ ಉದಾಹರಣೆ ನೀಡಬಹುದು. ವಿದೇಶಗಳಿಂದ ನಮ್ಮ ದೇಶಕ್ಕೆ ಬಂದ ವಯಸ್ಕ ಪಂಡಿತರು, ನಮ್ಮ ಭಾಷೆ ಕಲಿತು, ಕಾವ್ಯ, ಇತಿಹಾಸ, ಪುರಾಣ, ಶಾಸ್ತ್ರಗಳನ್ನೆಲ್ಲಾ ಅರಗಿಸಿಕೊಂಡು ಅವುಗಳ ಮೇಲೆ ಭಾಷ್ಯವನ್ನೇ ಬರೆದಿದ್ದಾರೆ. ನಮ್ಮ ಪಂಡಿತರೇ ಬೆರಗಾಗುವಂತೆ ಬರೆದಿದ್ದಾರೆ. ಇಂಗ್ಲಿಷಿಗೆ, ಜರ್ಮನ್ ಮತ್ತಿತರ ಭಾಷೆಗಳಿಗೆ ತರ್ಜುಮೆ ಮಾಡಿದ್ದಾರೆ. ನಮ್ಮ ಕನ್ನಡದಲ್ಲೇ ರೆವೆರೆಂಡ್ ಕಿಟೆಲ್ ಅವರು ನಮಗೆ ನಿಘಂಟನ್ನೇ ಸೃಷ್ಟಿಸಿಕೊಟ್ಟಿದ್ದಾರೆ. ಮ್ಯಾಕ್ಸ್ ಮುಲರ್ ಅವರು ಸಂಸ್ಕೃತ ಸಾಹಿತ್ಯವನ್ನು ಪ್ರಪಂಚಕ್ಕೇ ಪರಿಚಯಿಸಿಕೊಟ್ಟಿದ್ದಾರೆ. ಇನ್ನೂ ಹೀಗೆ ಹಲವಾರು ವಿದೇಶೀ ವಿದ್ವಾಂಸರು ಇಲ್ಲಿಗೆ ಬಂದು ಭಾಷೆ ಕಲಿತು, ಓದಿ ತಮ್ಮ ವಿದ್ವತ್ತಿನ ಮೂಲಕ ನಮ್ಮನ್ನೇ ಬೆರಗುಗೊಳಿಸಿದ್ದಾರೆ. ಅದು ಹೇಗೆ ಇವರಿಗೆ ಇದೆಲ್ಲಾ ಸಾಧ್ಯವಾಯಿತು ? ಹೇಗೆಂದರೆ, ಅವರ ಮನಸ್ಸಿನ ಶಕ್ತಿಗಳೆಲ್ಲಾ ಆಗಲೇ ವಿಕಾಸ ಗೊಂಡಿದ್ದವು. ಅವರು ಬಾಲ್ಯದಲ್ಲಿ ತಮ್ಮ ಮಾತೃಭಾಷೆಯಲ್ಲಿ ಶಿಕ್ಷಣ ಪಡೆದಿದ್ದರು. ಅದರಿಂದ ಅವರ ಮೆದುಳಿನ ಕ್ರಿಯಾಶಕ್ತಿಗಳೆಲ್ಲಾ ವೃದ್ಧಿಗೊಂಡಿದ್ದವು. ಅದರಿಂದಾಗಿ ಅವರು ಜಗತ್ತಿನ ಯಾವುದೇ ಹೊಸ ಭಾಷೆ ಕಲಿತು ಅದರಲ್ಲಿರುವ ಸಾಹಿತ್ಯದ ಅರ್ಥಗಳನ್ನು ಗ್ರಹಿಸುವುದು ಸುಲಭವಾಯಿತು.

ಆದರೆ ಮಕ್ಕಳಾಗಿದ್ದಾಗ ಅಪರಿಚಿತ ಭಾಷೆಯಲ್ಲಿ ಶಿಕ್ಷಣ ಪಡೆಯಲು ಹೋದರೆ ಪಾಠ ಅರ್ಥವಾಗದೆ ಕಷ್ಟವಾಗಿ, ಸರಿಯಾಗಿ ಹೇಳಲು ಬಾಯಿಪಾಠ ಮಾಡುವುದಕ್ಕೆ, ನೆನಪಿನಿಂದ ಅನುಕರಣ ಮಾಡುವುದಕ್ಕೆ ಸಮಯ ವ್ಯರ್ಥವಾಗಿ ಬರೀ ಅನುಕರಣೆ, ನೆನಪಿನ ಶಕ್ತಿಗಳಷ್ಟೇ ವೃದ್ಧಿಯಾಗುತ್ತವೆ. ಮೆದುಳಿನ ಮುಖ್ಯಶಕ್ತಿಗಳಾದ ಕಲ್ಪನಾಶಕ್ತಿ, ವಿಮೋಚನಾಶಕ್ತಿ, ಸೃಜನಶೀಲಶಕ್ತಿಗಳು ವೃದ್ಧಿಸದೆ ಕುಂಠಿತವಾಗುತ್ತವೆ. ಬರೀ ಯಾಂತ್ರಿಕ ಬುದ್ಧಿ ಬರುತ್ತದೆ. ಹೀಗಾಗಿ ನಾವು ಮಕ್ಕಳಿಗೆ ಅಪರಿಚಿತವಾದ ಇಂಗ್ಲಿಷ್ ಭಾಷೆಯಲ್ಲಿ ಶಿಕ್ಷಣ ಕೊಡಿಸುವ ಹುಚ್ಚಿಗೆ ಬಿದ್ದು ನಾವೇ ಕೈಯಾರೆ ನಮ್ಮ ಮಕ್ಕಳ ಭವಿತವ್ಯವನ್ನೂ ಪ್ರತಿಭೆಯನ್ನೂ ಸೃಜನಶೀಲತೆಯನ್ನೂ ಹಾಳುಮಾಡಿದಂತಾಗುತ್ತದೆ. ಮಕ್ಕಳು ವಿವಿಧ ವಿಷಯ ಗಳನ್ನು ಕಲಿಯಲು ಸಮಯ ಸಿಗದಂತಾಗುತ್ತದೆ. ಹೀಗಾಗಿ ಮಕ್ಕಳ ಸಮಗ್ರ ವ್ಯಕ್ತಿತ್ವ ರೂಪುಗೊಳ್ಳದಂತಾಗುತ್ತದೆ. ಆತ್ಮವಿಶ್ವಾಸ, ಸಂಕಲ್ಪ, ಧೈರ್ಯ, ಆದರ್ಶ, ಮೌಲ್ಯ ಇತ್ಯಾದಿ ಭಾವನೆಗಳೂ ವೃದ್ಧಿಗೊಳ್ಳುವುದಿಲ್ಲ. ಮುಂದೆ ಇವರು ಎಷ್ಟೇ ದೊಡ್ಡ ಹುದ್ದೆಯಲ್ಲಿದ್ದರೂ ಒಂದು ಸಣ್ಣ ಕಷ್ಟ ಬಂದರೆ ಧೃತಿಗೆಡುತ್ತಾರೆ. ಕೆಲವರು ಆತ್ಮಹತ್ಯೆಗೂ ಮುಂದಾಗುತ್ತಾರೆ. ಇಂತಹ ಪರಿಸ್ಥಿತಿಗೆ ನಮ್ಮ ಮಕ್ಕಳನ್ನು ನಾವೇ ದೂಡುವುದು ಬೇಡ ಎಂದರೆ, ನಾವು ಶಾಲಾ ಶಿಕ್ಷಣವನ್ನು ನಮ್ಮ ಪರಿಚಿತ ಭಾಷೆ, ಪರಿಸರದ ಭಾಷೆ, ಕನ್ನಡದಲ್ಲೇ ಕೊಡಿಸುವುದು ಉತ್ತಮ ಮಾರ್ಗ. ಹೀಗೆ ಜನರ ಮನಸ್ಸಿಗೆ ತಾಗುವ ಹಾಗೆ ಮಾಡಬೇಕು. ಹಾಗಾದರೆ ಇಂಗ್ಲಿಷ್‌ಅನ್ನು ಬಿಟ್ಟುಬಿಡಬೇಕೆ ? ಮುಂದಿನ ಓದಿಗೆ ಗತಿಯೇನು ? ಎಂಬ ಪ್ರಶ್ನೆಗಳು ಏಳುವುದು ಸಹಜ. ಅದಕ್ಕೂ ಪರಿಹಾರವಿದೆ.

ಶಾಲಾ ಅವಧಿಯಲ್ಲಿ ಇಂಗ್ಲಿಷ್‌ಅನ್ನು ಭಾಷೆಯಾಗಿ ಚೆನ್ನಾಗಿ ಕಲಿತರೆ, ಮುಂದೆ ಉನ್ನತ ಶಿಕ್ಷಣದಲ್ಲಿ ಇಂಗ್ಲಿಷ್ ಮಾಧ್ಯಮ ಅನುಸರಿಸುವುದು ಕಷ್ಟವಾಗುವುದಿಲ್ಲ ಮತ್ತು ಉದ್ಯೋಗ ಪಡೆಯುವುದೂ ಕಷ್ಟವಾಗುವುದಿಲ್ಲ. ಇದಕ್ಕಾಗಿ ಕನ್ನಡ ಮಾಧ್ಯಮದಲ್ಲಿ ವಿಜ್ಞಾನ, ಗಣಿತ, ಆರೋಗ್ಯ ವಿಷಯಗಳಲ್ಲಿರುವ ಪಾರಿಭಾಷಿಕ ಶಬ್ದಗಳನ್ನು ಭಾಷಾಂತರ ಮಾಡದೆ ಕನ್ನಡೀಕರಿಸಿಕೊಂಡು ಕಲಿಸುವ ವ್ಯವಸ್ಥೆ ಮಾಡಿಕೊಳ್ಳಬೇಕು. ಇದರಿಂದಾಗಿ ಉನ್ನತ ಶಿಕ್ಷಣದಲ್ಲಿ ಇಂಗ್ಲಿಷ್ ಮಾಧ್ಯಮ ಅನುಸರಿಸುವುದು ಕಷ್ಟವಾಗುವುದಿಲ್ಲ. ಹೀಗೆ ಕನ್ನಡವನ್ನು ಬಳಸಿಕೊಂಡು ಮೆದುಳಿನ ಶಕ್ತಿಗಳನ್ನು ವೃದ್ಧಿಸಿಕೊಂಡು ಶಾಲಾ ಶಿಕ್ಷಣ ಮುಗಿಸಿದರೆ, ಉನ್ನತ ಶಿಕ್ಷಣದಲ್ಲೂ ಮಕ್ಕಳು ಮುಂದುವರಿಯುವುದು ಸುಲಭ. ಅಷ್ಟೇ ಅಲ್ಲ, ಹೆಚ್ಚಿನ ಪ್ರತಿಭೆಯನ್ನು ಗಳಿಸಲು ಸಾಧ್ಯವಾಗುತ್ತದೆ. ಆತ್ಮವಿಶ್ವಾಸ, ಕಷ್ಟ ಎದುರಿಸುವ ಮನೋಭಾವಗಳೂ ವೃದ್ಧಿಸಿರುವುದರಿಂದ ಜೀವನವನ್ನೂ ಯಶಸ್ವಿಯಾಗಿ ನಡೆಸಿಕೊಂಡು ಹೋಗುತ್ತಾರೆ.

ಇಂಗ್ಲಿಷ್ ಮಾತನಾಡದ ಎಷ್ಟೋ ಮುಂದುವರಿದ ದೇಶಗಳಿವೆ. ರಷ್ಯಾ, ಜರ್ಮನಿ, ಜಪಾನ್, ಚೈನಾ, ಫ್ರಾನ್ಸ್ ಮುಂತಾದ ದೇಶಗಳಿವೆ. ಅಲ್ಲೆಲ್ಲಾ ಅವರವರ ಮಾತೃಭಾಷೆ (ರಾಜ್ಯ ಭಾಷೆಯಲ್ಲೇ) ಶಿಕ್ಷಣ ಪಡೆಯುತ್ತಾರೆ. ಕೇವಲ ಶಾಲಾ ಶಿಕ್ಷಣ ಅಷ್ಟೇ ಅಲ್ಲ ಉನ್ನತ ಶಿಕ್ಷಣ, ಸಂಶೋಧನೆಗಳಲ್ಲೂ ಅವರ

ಭಾಷೆಯನ್ನೇ ಬಳಸುತ್ತಾರೆ. ಸಂಶೋಧನಾ ಲೇಖನಗಳನ್ನು ಅವರ ಭಾಷೆಯಲ್ಲೇ ಬರೆದು ಪ್ರಕಟಿಸುತ್ತಾರೆ. ನಂತರ ಅವನ್ನು ಇತರ ದೇಶಗಳ ಗಮನಕ್ಕೆ ತರಲು ಇಂಗ್ಲಿಷ್‌ಗೆ, ಬೇರೆ ಭಾಷೆಗಳಿಗೆ, ತರ್ಜುಮೆ ಮಾಡಿ ಪ್ರಕಟಿಸುವ ವ್ಯವಸ್ಥೆ ಮಾಡಿದ್ದಾರೆ. ಇಂತಹ ದೇಶಗಳ ವಿವಿಧ ವಿಷಯಗಳ ತಜ್ಞರನ್ನು ಕರೆಸಿ ಅವರಿಂದ ಅಲ್ಲಿಯ ಮಾತೃಭಾಷಾ ಶಿಕ್ಷಣ ಪದ್ಧತಿಯ ಬಗ್ಗೆ ತಿಳಿಹೇಳಿಸಬೇಕು. ಇದು ಪರಿಣಾಮಕಾರಿಯೂ ಆಗಬಹುದು.

ನಮ್ಮ ದೇಶದ ಇತಿಹಾಸದಲ್ಲಿ ನಾವು ಇಂಗ್ಲಿಷರ ಗುಲಾಮರಾಗಿದ್ದರಿಂದ ಮತ್ತು ನಮ್ಮ ಭಾಷೆಗಳು ವಿಜ್ಞಾನಕ್ಕೆ ತೆರೆದುಕೊಳ್ಳದೇ ಹೋಗಿದ್ದರಿಂದ ಆ ವಿಷಯಗಳಲ್ಲಿ ಬೋಧನೆ ಕಷ್ಟವಾಗಿದೆ. ಆದರೆ ಆ ವಿಷಯಗಳ ಪಾರಿಭಾಷಿಕ ಶಬ್ದಗಳನ್ನು ಕನ್ನಡೀಕರಿಸಿ ಬಳಸಿದರೆ ಬೋಧನೆ ಕಷ್ಟವಾಗಲಾರದು ಅಥವಾ ಉನ್ನತ ಶಿಕ್ಷಣದಲ್ಲಿ ಇಂಗ್ಲಿಷ್ ಮಾಧ್ಯಮಕ್ಕೆ ಹೊಂದಿಕೊಳ್ಳುವುದು ಕಷ್ಟವಾಗುವುದಿಲ್ಲ.

ಆದ್ದರಿಂದ ನಮ್ಮ ಜನ ನಮ್ಮ ಭಾಷೆಯನ್ನು ಶಾಲಾ ಶಿಕ್ಷಣದಲ್ಲಿ ಬಳಸಿಕೊಳ್ಳಲು ಹಿಂದೇಟು ಹಾಕಬಾರದು. ನಮ್ಮ ಮಕ್ಕಳೂ ಪ್ರಪಂಚದ ಮಟ್ಟದಲ್ಲಿ ಬೆಳಗಬೇಕು. ಅದಕ್ಕೆ ಅವರು ಪ್ರತಿಭಾವಂತರಾಗಬೇಕು. ಸೃಜನಶೀಲ ರಾಗಬೇಕು. ಸ್ವಾಭಿಮಾನಿಗಳಾಗಬೇಕು. ಆತ್ಮವಿಶ್ವಾಸ ಉಳ್ಳವರಾಗಬೇಕು. ಮಾನವಕುಲಕ್ಕೆ ಕೊಡುಗೆ ನೀಡುವಂತಹವರಾಗಬೇಕು. ಹಾಗೆ ಅವರ ಮೆದುಳಿನ ಶಕ್ತಿಗಳು, ವ್ಯಕ್ತಿತ್ವ ರೂಪುಗೊಳ್ಳಬೇಕು. ಅದಕ್ಕಾಗಿ ಅವರು ಎಳೆಯರಾಗಿದ್ದಾಗಲೇ ನಮ್ಮ ಭಾಷೆಯಲ್ಲೇ ಶಿಕ್ಷಣ ಪಡೆಯುವುದು ಅವಶ್ಯ. ಇದನ್ನು ಜನ ಅರಿತುಕೊಳ್ಳಬೇಕು.

ಹೀಗೆ ನೈಜ ಸ್ಥಿತಿಯನ್ನು ಜನರಲ್ಲಿ ಬಿಂಬಿಸಿ, ಜನರಿಗೆ ನಮ್ಮ ಭಾಷೆಯ ಶಕ್ತಿಯ ಬಗ್ಗೆ ನಂಬಿಕೆ ಮೂಡುವಂತೆ ಮಾಡಬೇಕು. ಅರಿವು ಮೂಡಿಸಬೇಕು. ಈ ದಿಸೆಯಲ್ಲಿ ಸರ್ಕಾರ, ಅಕಾಡೆಮಿಗಳು, ಪ್ರಾಧಿಕಾರ, ವಿದ್ವಾಂಸರು, ಕನ್ನಡಪ್ರೇಮಿಗಳು, ಹೃತ್ಪೂರ್ವಕವಾಗಿ ತೊಡಗಿಕೊಳ್ಳಬೇಕು. ಅಂತೆಯೇ ಪತ್ರಿಕೆಗಳೂ, ಟಿ.ವಿ. ಮಾಧ್ಯಮಗಳೂ ತೊಡಗಿಕೊಳ್ಳಬೇಕು. ಇಷ್ಟೆಲ್ಲಾ ಮಾಡಿದರೆ ಜನರ ಮನದಲ್ಲಿ ನಮ್ಮ ಭಾಷೆ ಬಗ್ಗೆ ಬೇರೂರಿರುವ ಅಪನಂಬಿಕೆಗಳನ್ನು ಬದಲಾಯಿಸಬಹುದು.

ಆದರೆ ಕೇವಲ ಭಾಷಾ ಮಾಧ್ಯಮದ ಬಗ್ಗೆ ಅರಿವು ಬಂದರಷ್ಟೇ ಸಾಲದು. ಶಾಲೆಗಳಲ್ಲಿ ಕಲಿಕಾ ಮಟ್ಟ, ಬೋಧನಾ ಮಟ್ಟಗಳೂ ಶ್ರೇಷ್ಠವಾಗಬೇಕು. ಹಾಗಿದ್ದರೆ ಮಾತ್ರ ಮೊದಲ ಕಾರ್ಯಕ್ರಮ ಯಶಸ್ಸು ಕಾಣುತ್ತದೆ. ಇಲ್ಲವಾದರೆ ಇಲ್ಲ.

ಆದ್ದರಿಂದ ಈಗ ಬೋಧನಾ ಗುಣಮಟ್ಟ, ಸಮಾನತೆ, ಏಕರೂಪಗಳ ಬಗ್ಗೆ ವಿಚಾರ ಮಾಡೋಣ. ಸದ್ಯದ ಪರಿಸ್ಥಿತಿಯಲ್ಲಿ ಇದನ್ನು ಸಾಧಿಸಲು ಇರುವ ಒಂದು ಉತ್ತಮ ಮಾರ್ಗವೆಂದರೆ "ಉಪಗ್ರಹ ಆಧಾರಿತ ಶಿಕ್ಷಣ ವ್ಯವಸ್ಥೆ." ಇದರ ಬಗ್ಗೆ ಕೆಲವು ಅಪಸ್ವರಗಳಿವೆ. ಸಂಶಯಗಳಿವೆ. ಇವುಗಳಲ್ಲಿ ಮುಖ್ಯವಾದುದು ಶಾಲೆಗಳಲ್ಲಿ ಶಿಕ್ಷಕ ಮಕ್ಕಳ ನಡುವೆ ನೇರ, ಮುಖಾಮುಖಿ ಬೋಧನಾ ಪದ್ಧತಿಯೇ ಹೆಚ್ಚು ಪರಿಣಾಮಕಾರಿ ಹಾಗೂ ಮಕ್ಕಳ ಆಸಕ್ತಿಯನ್ನು ಹಿಡಿದಿಟ್ಟುಕೊಳ್ಳುವಂತಹುದಾಗಿದೆ ಎಂಬುದು. ಇದರ ಜೊತೆಗೇ ಪ್ರಸ್ತುತ ಜಾರಿಯಲ್ಲಿರುವ ಶೈಕ್ಷಣಿಕ ಟಿ.ವಿ. ಚಾನೆಲ್‌ಗಳು ಹೇಳಿಕೊಳ್ಳುವಂತಹ ಪ್ರಭಾವ ಬೀರಿಲ್ಲದೇ ಇರುವುದನ್ನು ಪರಿಗಣಿಸಬೇಕಾಗುತ್ತದೆ. ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು, ಇವುಗಳಿಗೆ ಆಸ್ಪದವಿಲ್ಲದಂತೆ "ಉಪಗ್ರಹ ಆಧಾರಿತ ಶಿಕ್ಷಣ"ವನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಸಮಗ್ರವಾಗಿ ಅಧ್ಯಯನ ಮಾಡಿ ವಿವರವಾದ, ಶಿಸ್ತುಬದ್ಧವಾದ, ವೈಜ್ಞಾನಿಕವಾದ ವ್ಯವಸ್ಥೆಯನ್ನು ರೂಪಿಸಬೇಕಾಗಿದೆ. ನನ್ನ ಕಲ್ಪನೆಯಲ್ಲಿರುವ ಅದರ ರೂಪರೇಷೆಗಳನ್ನು 'ಸ್ಥೂಲವಾಗಿ' ಇಲ್ಲಿ ಪ್ರಸ್ತಾಪಿಸುತ್ತೇನೆ :

೧. ಶಿಕ್ಷಣ ತಜ್ಞರ ತಂಡವೊಂದು ಬೇರೆ ಬೇರೆ ದೇಶಗಳಲ್ಲಿ ಪ್ರಚಲಿತವಿರುವ ಉತ್ತಮ ಶಾಲಾ ಶಿಕ್ಷಣ ಪದ್ಧತಿಗಳನ್ನು ಅಧ್ಯಯನ ಮಾಡಿ ನಮ್ಮ ಪರಿಸರಕ್ಕೆ, ನಮ್ಮ ಮಕ್ಕಳಿಗೆ ಹೊಂದಿಕೊಳ್ಳುವಂತಹ ಅತ್ಯುತ್ತಮ ಪಠ್ಯಕ್ರಮವನ್ನೂ ಮತ್ತು ಬೋಧನಾ ಪದ್ಧತಿಯನ್ನೂ ಸಿದ್ಧಪಡಿಸಬೇಕು. ಇದು ಸಾರ್ವಜನಿಕ ಚರ್ಚೆ, ವಿಚಾರ ಸಂಕಿರಣಗಳ ಮೂಲಕ ನಿಶ್ಚಿತ ರೂಪ ಪಡೆಯಬೇಕು. ಇದರಲ್ಲಿ ಶಿಕ್ಷಕರ ಶಿಕ್ಷಣ ತಜ್ಞರ ಅಭಿಪ್ರಾಯಗಳಿಗೆ ಮನ್ನಣೆ ಇರಬೇಕು. ಪೋಷಕರ ಆಶಯಗಳಿಗೆ ಪೂರಕವಾದ ಅಂಶಗಳಿರಬೇಕು.
೨. ಇದನ್ನು ಬೋಧಿಸಲು ದೇಶದ ಅತ್ಯುತ್ತಮ ಶಿಕ್ಷಕರನ್ನು ಪಾರದರ್ಶಕವಾಗಿ, ನಿಷ್ಪಕ್ಷಪಾತವಾಗಿ ಆಯ್ಕೆಮಾಡಬೇಕು. ಇವರಿಗೆ ಪ್ರಸಾರ ಮಾಧ್ಯಮದಲ್ಲಿ ಬೋಧಿಸಲು ವಿಶೇಷ ತರಬೇತಿ ನೀಡಬೇಕು.
೩. ಇದರ ಚಿತ್ರೀಕರಣ ಕೂಡ ವಿಶೇಷವಾಗಿ ಮಕ್ಕಳ ಆಸಕ್ತಿ ಸೆಳೆಯು ವಂತಹ ರೀತಿಯಲ್ಲಿ ಇರಬೇಕು. ಚಿತ್ರಿಕೆಗಳು ಗಾಢವಾಗಿ ಮನಸ್ಸಿಗೆ ಅಚ್ಚೊತ್ತುವಂತಿರಬೇಕು (ಇಂಪೊಸಿಂಗ್ ಇಮೇಜ್‌ಗಳು, ಕ್ಲೋಸ್ ಅಪ್‌ಗಳು ಇತ್ಯಾದಿಗಳನ್ನು ಬಳಸಬೇಕು).
೪. ಈ ಶಿಕ್ಷಕರ ಬೋಧನೆಯನ್ನು ಉಪಗ್ರಹದ ಮೂಲಕ ಒಂದು ನಿಶ್ಚಿತ ಅವಧಿಯಲ್ಲಿ ದೇಶಾದ್ಯಂತ ಪ್ರಸಾರ ಮಾಡಬೇಕು. ಇದು ಪ್ರತಿ ಶಾಲೆಗಳನ್ನೂ ಮೂಲೆಮೂಲೆಯಲ್ಲಿರುವ ಶಾಲೆಗಳನ್ನೂ ತಲುಪಬೇಕು.
೫. ಇದು ಮಕ್ಕಳಿಗೆ ಪರಿಣಾಮಕಾರಿ ರೀತಿಯಲ್ಲಿ ತಲುಪುವಂತೆ ತಕ್ಕ, ಸೂಕ್ತ ದೃಶ್ಯ-ಶ್ರವ್ಯ ಉಪಕರಣಗಳಿಂದ ಸಜ್ಜುಗೊಂಡು ಕೊಠಡಿ ವ್ಯವಸ್ಥೆ





ಇರಬೇಕು. ವಿದ್ಯುತ್ ವ್ಯತ್ಯಯವಾಗದೆ ಪ್ರಸಾರ ನಿರಂತರವಾಗಿ ತಲುಪಲು ಸೌರವಿದ್ಯುತ್ ಉಪಕರಣವನ್ನು ಅಳವಡಿಸಿ ವಿದ್ಯುತ್ ಸರಬರಾಜು ಮಾಡಬೇಕು. ದೊಡ್ಡ ತೆರೆಯ ಮೇಲೆ ಬೋಧನಾ ದೃಶ್ಯ ಮೂಡಬೇಕು.

೬. ಇಂತಹ ಶಾಲೆಗಳಲ್ಲಿರುವ ಶಿಕ್ಷಕರು ಯಾವ ರೀತಿ ಕೆಲಸ ಮಾಡಬೇಕು, ಅವರ ಜವಾಬ್ದಾರಿ, ಕರ್ತವ್ಯಗಳೇನು ಎಂಬುದನ್ನೂ ಪರೀಕ್ಷಾ ಪದ್ಧತಿಯ ಬಗ್ಗೆ ಕೂಡ ವಿವರವಾಗಿ, ಶಿಸ್ತುಬದ್ಧವಾಗಿ ನಿಗದಿ ಪಡಿಸಿರಬೇಕು. ಈ ಶಿಕ್ಷಕರು ಪ್ರಸಾರಗೊಂಡ ಪಠ್ಯವನ್ನು ಮಕ್ಕಳಿಗೆ ಗಟ್ಟಿಮಾಡುವ ಕಾರ್ಯದ ಬಗ್ಗೆ ವಿಶೇಷ ತರಬೇತಿ ಪಡೆದಿರಬೇಕು.

೭. ಇಂಗ್ಲಿಷ್ ಭಾಷೆಯನ್ನು ಚೆನ್ನಾಗಿ ಕಲಿಸಲು ವಿಶೇಷ ವ್ಯವಸ್ಥೆ ಮಾಡಿರಬೇಕು. ಇದಕ್ಕಾಗಿ ವಿಶೇಷ ಪ್ರಸಾರವನ್ನು ಶನಿವಾರ, ಭಾನುವಾರ ಗಳಂದು ಬೇಕಾದರೆ ಏರ್ಪಡಿಸಬೇಕು. ಭಾಷಾ ಉಚ್ಚಾರ, ವ್ಯಾವಹಾರಿಕ ಬಳಕೆಗೆ ಕಲಿಯಲು ತಕ್ಕ ಡಿ.ವಿ.ಡಿ.ಗಳನ್ನು ಒದಗಿಸಬೇಕು. ಶಿಕ್ಷಕರಿಗೂ ತರಬೇತಿ ನೀಡಿರಬೇಕು.

೮. ಶಾಲೆಯಲ್ಲಿ ಬೋಧನಾ ವಿಷಯಗಳ ಜೊತೆಗೆ ವಿವಿಧ ರೀತಿಯ ಚಟುವಟಿಕೆಗಳಿಗೂ ಸಮಯ ಒದಗಿಸಬೇಕು. ಕ್ರೀಡೆ, ತೋಟಗಾರಿಕೆ, ಸಾಂಸ್ಕೃತಿಕ ಚಟುವಟಿಕೆಗಳು, ಪರಿಸರ ಅಧ್ಯಯನ, ಸ್ವಚ್ಛತೆ, ನೈರ್ಮಲ್ಯಗಳ ಜಾಗೃತಿ ಬಗ್ಗೆಯೂ ಚಟುವಟಿಕೆಗಳು ಹದವಾಗಿ ಬೆರೆತುಕೊಂಡಿರಬೇಕು. ಊರಿನ ಪರಿಸರದಲ್ಲಿರುವ ಮರ, ಗಿಡ, ಪಶು, ಪಕ್ಷಿ ಪ್ರಾಣಿಗಳ ದಾಖಲೆ ಮಾಡುವುದು, ಊರಿನಲ್ಲಿ ನೈರ್ಮಲ್ಯಕ್ಕಾಗಿ ಮೆರವಣಿಗೆ, ಸೇವೆ ಮಾಡುವುದು ಇತ್ಯಾದಿಗಳು ಮಕ್ಕಳಿಗೂ ಊರಿಗೂ ಜನರ ನಡುವೆಯೂ ಉತ್ತಮ ಸಂಬಂಧಗಳನ್ನು ರೂಪಿಸುತ್ತದೆ. ಹುಟ್ಟಿದೂರಿನ ಬಗ್ಗೆ, ಜನರ ಬಗ್ಗೆ ಪ್ರೀತಿ, ಅಭಿಮಾನ ತಾಳಲು ಅನುವು ಮಾಡಿಕೊಡುತ್ತದೆ.

೯. ಪ್ರತಿ ಶಾಲೆಯೂ ಈ ಪದ್ಧತಿಗೆ ಅನುಕೂಲಕರವಾಗಿರುವಂತೆ ನಿರ್ಮಿತ ವಾಗಿರಬೇಕು. ಅಥವಾ ಹೊಸ ಶಾಲಾಕಟ್ಟಡವನ್ನೇ ನಿರ್ಮಿಸಬೇಕು.

೧೦. ಪ್ರತಿ ಮೂರು ತಿಂಗಳಿಗೊಮ್ಮೆ ಪೋಷಕರು ಶಾಲೆಯಲ್ಲಿ ಸಭೆ ಸೇರಬೇಕು. ಅಲ್ಲಿ ಶಿಕ್ಷಕರು ಅವರ ಮಕ್ಕಳ ಕಲಿಕಾ ಅಭಿವೃದ್ಧಿ ಹಾಗೂ ಇತರೆ ವಿಷಯಗಳ ಬಗ್ಗೆ ಮಾಹಿತಿ, ಸಲಹೆ ಸೂಚನೆಗಳನ್ನು ನೀಡಬೇಕು.

೧೧. ಪೋಷಕರು – ಶಿಕ್ಷಕರ ನಡುವೆ ಸೌಹಾರ್ದ ಸಂಬಂಧ ಇರುವಂತೆ ಪೋಷಕರಿಗೆ ಪ್ರೇರಣೆ ನೀಡುವ ಕಾರ್ಯಕ್ರಮಗಳನ್ನು ಶಿಕ್ಷಣ ಇಲಾಖೆ ಹಮ್ಮಿಕೊಳ್ಳಬೇಕು. ಇದರಿಂದ ಶಿಕ್ಷಕರು ಮತ್ತು ಮಕ್ಕಳ ನಡುವೆ ಸುಮಧುರ ಸಂಬಂಧ ಮೂಡಲು ಸಹಾಯಕವಾಗುತ್ತದೆ. ಶಿಕ್ಷಕರೂ ಆಸಕ್ತಿಯಿಂದ ಕೆಲಸ ಮಾಡಲು ಸಹಕಾರಿಯಾಗುತ್ತದೆ.

೧೨. ಪೋಷಕರು ತಮ್ಮ ಮಕ್ಕಳ ಕಲಿಕಾ ಪ್ರಗತಿ ಕಡೆ ಹೆಚ್ಚಿನ ನಿಗಾ ವಹಿಸಲು ಪ್ರೇರಣೆ ನೀಡಲು ಶಿಕ್ಷಣ ಇಲಾಖೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. "ನಮ್ಮ ಮಕ್ಕಳನ್ನು ನಾವೇ ನೋಡಿಕೊಳ್ಳಬೇಕು. ಚೆನ್ನಾಗಿ ನೋಡಿಕೊಳ್ಳಬೇಕು. ಅದು ನಮ್ಮ ಕರ್ತವ್ಯ" ಎಂದು ಅವರ ಮನದಲ್ಲಿ ಮೂಡಿಸಬೇಕು.

೧೩. ಶಾಲೆಗಳ ಮೇಲುಸ್ತುವಾರಿ, ಆಡಳಿತ ವ್ಯವಸ್ಥೆ ಇತ್ಯಾದಿಗಳ ಬಗ್ಗೆ ನಿಗದಿಪಡಿಸಬೇಕು.

೧೪. ಶಾಲೆಗಳಲ್ಲಿನ ಉಪಕರಣಗಳ ತುರ್ತು ದುರಸ್ತಿಗೆ, ಮೇಲುಸ್ತುವಾರಿಗೆ, ನಿರ್ವಹಣೆಗೆ ಒಂದು ತಾಲ್ಲೂಕಿಗೆ ಒಂದು ತಾಂತ್ರಿಕ ತಂಡವನ್ನು ನೇಮಿಸಬೇಕು.

೧೫. ಶಾಲೆಯಲ್ಲಿ ಮಕ್ಕಳ ಊಟಕ್ಕೆ ಪ್ರತ್ಯೇಕ ವ್ಯವಸ್ಥೆ ಮಾಡಬೇಕು. ಇದಕ್ಕೆ ಶಿಕ್ಷಕರನ್ನು ನೇಮಿಸಬಾರದು. ಅದಕ್ಕೆ ಪೋಷಕರ ಮತ್ತು ಊರಿನ ಪಂಚಾಯಿತಿ ಗಣ್ಯರ ಸಮಿತಿ ಇರಬೇಕು.

೧೬. ಶಿಕ್ಷಣದ ವಿವಿಧ ಹಂತಗಳಲ್ಲಿ ಪಬ್ಲಿಕ್ ಪರೀಕ್ಷೆ ಇರಬೇಕು. ಇದನ್ನು ನಡೆಸುವ, ಮೌಲ್ಯಮಾಪನ ಮಾಡುವ, ಫಲಿತಾಂಶ ನೀಡುವ ಕೆಲಸಗಳನ್ನು ಅಚ್ಚುಕಟ್ಟಾಗಿ ನಡೆಸಲು ಅನುವಾಗುವಂತೆ ಆಡಳಿತ ವ್ಯವಸ್ಥೆಯನ್ನು ರೂಪಿಸಬೇಕು.

೧೭. ಶಾಲೆಗಳಲ್ಲಿ ಉತ್ತಮ ಕಾರ್ಯನಿರ್ವಹಿಸಿರುವ ಶಿಕ್ಷಕರಿಗೆ ಸನ್ಮಾನ, ಬಹುಮಾನ, ಸಂಬಳದಲ್ಲಿ ಬಡ್ತಿ ಇತ್ಯಾದಿಗಳನ್ನು ನೀಡುವ ವ್ಯವಸ್ಥೆ ಇರಬೇಕು. ಹಾಗೆ ಮೈಗಳ್ಳ ಶಿಕ್ಷಕರಿಗೆ, ಕೆಲಸದಲ್ಲಿ ವಿಫಲರಾದವರಿಗೆ ಅವರು ಮಾಡುವ ತಪ್ಪಿಗೆ ತಕ್ಕಂತೆ ಬಡ್ತಿ ಕಡಿತಗೊಳಿಸುವಂಥ ಕಾನೂನೂ ಇರಬೇಕು.

೧೮. ಶಾಲೆಗಳಲ್ಲಿ ಮೌಲ್ಯಮಾಪನಕ್ಕೆ ಕೇವಲ ಪರೀಕ್ಷೆಯ ಫಲಿತಾಂಶವೇ ಅಲ್ಲದೆ ಬೇರೆ ವಿಧಾನಗಳನ್ನು ರೂಪಿಸಿರಬೇಕು.

೧೯. ಶಿಕ್ಷಕರ ತರಬೇತಿ ಕಾರ್ಯಕ್ರಮ, ಪುನರ್ ತರಬೇತಿಗಳ ಶಿಬಿರ ಇತ್ಯಾದಿಗಳ ಬಗ್ಗೆಯೂ ನಿಗದಿಪಡಿಸಿರಬೇಕು.

೨೦. ಬೋಧನೆ, ಪ್ರಸಾರ ಕೇಂದ್ರಗಳಲ್ಲಿಯೂ ಒಂದೊಂದು ಪರಿಣತರ, ತಂತ್ರಜ್ಞರ ತಂಡ ಇರಬೇಕು.

೨೧. ಪ್ರಸಾರ ಬೋಧನೆಯ ಶಿಕ್ಷಕರ ಮೌಲ್ಯಮಾಪನ, ಮತ್ತು ಹೊಸ ಹೊಸ ಶಿಕ್ಷಕರ ಆಯ್ಕೆ ಪ್ರಕ್ರಿಯೆಗಳು ನಡೆಯುವ ಮಾರ್ಗಸೂಚಿಗಳನ್ನೂ ನಿಗದಿಪಡಿಸಬೇಕು.

೨೨. ಬೋಧನಾ ಕೇಂದ್ರದಲ್ಲಿ ಉತ್ತಮ ಗ್ರಂಥಾಲಯ, ಕಂಪ್ಯೂಟರ್‌ಗಳ ವ್ಯವಸ್ಥೆ, ಪ್ರಯೋಗಾಲಯಗಳು, ಮಾದರಿಗಳು ಇರಬೇಕು.

೨೩. ಚಿತ್ರೀಕರಣಕ್ಕೆ ಮುನ್ನ ಬೋಧನೆಯ ರೀತಿಯ "ಚಿತ್ರ ಕಥೆ"ಯನ್ನು ತಜ್ಞರು ಪರಿಶೀಲಿಸಬೇಕು. ಇದರಲ್ಲಿ ಶೈಕ್ಷಣಿಕ ಭಾಗವನ್ನು ಶಿಕ್ಷಣತಜ್ಞರೂ ಚಿತ್ರೀಕರಣ ಭಾಗವನ್ನು ಚಿತ್ರ ನಿರ್ದೇಶಕರೂ ಪರಿಶೀಲಿಸುವ ವ್ಯವಸ್ಥೆ ಇರಬೇಕು.

೨೪. ಚಿತ್ರೀಕರಣಕ್ಕೆ ಬೇಕಾದ ಸುಸಜ್ಜಿತ ಸ್ಟುಡಿಯೊ, ಹೊರಾಂಗಣ ಚಿತ್ರೀಕರಣ ಘಟಕ, ಸಂಸ್ಕರಣಾ / ಸಂಕಲನಾ ಘಟಕ, ಇತ್ಯಾದಿಗಳ ಏರ್ಪಾಡು ಮಾಡಬೇಕು.

೨೫. ಹೀಗೇ ಬೇರೆ ಇನ್ನೇನಾದರೂ ಅಂಶಗಳಿದ್ದಲ್ಲಿ ಅವನ್ನು ಪರಿಗಣನೆಗೆ ತೆಗೆದುಕೊಂಡು ವಿವರವಾದ, ಸಮಗ್ರವಾದ ಶಿಕ್ಷಣ ವ್ಯವಸ್ಥೆಯ ವರದಿಯನ್ನು ವಿವಿಧ ತಜ್ಞರ ತಂಡಗಳು ತಯಾರಿಸಿ, ಸಮಾಲೋಚಿಸಿ ಪೂರ್ಣ ಪ್ರಮಾಣದ ವರದಿಯನ್ನು ಸಿದ್ಧಪಡಿಸಬೇಕು.

೨೬. ಸರ್ಕಾರ ಇದನ್ನು ಆದ್ಯತೆ ಮೇರೆಗೆ ಜಾರಿಗೆ ತರಬೇಕು.

೨೭. ಇದಕ್ಕೆಲ್ಲಾ ಬೇಕಾಗುವ ಹಣಕಾಸಿನ ವೆಚ್ಚವನ್ನು ಲೆಕ್ಕ ಹಾಕಿ, ಸರ್ಕಾರ ಒದಗಿಸಬೇಕು. ಈಗಿನ ಖರ್ಚನ್ನು ಲೆಕ್ಕಕ್ಕೆ ತೆಗೆದುಕೊಂಡರೆ, ಪರ್ಯಾಯ ವ್ಯವಸ್ಥೆಗೆ ಅಂತಹ ಹೆಚ್ಚಿನ ಹಣವೇನೂ ಬೇಕಾಗಲಾರದು. ಹಾಗೊಮ್ಮೆ ಬೇಕಾದರೂ ಒದಗಿಸಬೇಕು. ಏಕೆಂದರೆ ಶಾಲಾ ಶಿಕ್ಷಣವೂ ಆಹಾರದಷ್ಟೇ ಮುಖ್ಯವಾದುದಲ್ಲವೆ ?

ಹೀಗೆ ಮಾಡಿದರೆ ಸರ್ಕಾರಿ ಶಾಲೆಗಳಲ್ಲಿನ ಶಿಕ್ಷಣದ ಗುಣಮಟ್ಟ ಹೆಚ್ಚಾಗುವುದರಿಂದ, ಜನ ತಮ್ಮ ಮಕ್ಕಳನ್ನು ಉತ್ಸುಕರಾಗಿ ಸರ್ಕಾರಿ ಶಾಲೆಗಳಿಗೆ ಸೇರಿಸಲು ಹಿಂದೆ ಮುಂದೆ ನೋಡಲಾರರು. ಇದರಿಂದಾಗಿ ಖಾಸಗೀ ಶಾಲೆಗಳ ಪ್ರಭಾವ, ಆಕರ್ಷಣೆ ಕುಂಠಿತಗೊಳ್ಳುವುದು, ಶಿಕ್ಷಣ ವ್ಯಾಪಾರದ ಬದಲಾಗಿ ನೈಜ ವ್ಯಕ್ತಿತ್ವ ರೂಪಿಸುವ ಸಾಧನವಾಗುವುದು. ಈಗ ಜನರ ಮೇಲೆ ಸರ್ಕಾರ ತನ್ನ ಅಭಿಪ್ರಾಯ ಹೇರುತ್ತಿಲ್ಲವಾಗಿ ಕೋರ್ಟುಗಳು ಮೂಗು ತೂರಿಸಲಾರವು. ಹೀಗಾದರೆ ಕೆಲವೇ ವರ್ಷಗಳಲ್ಲಿ ದೇಶದ ತುಂಬೆಲ್ಲಾ ಸರ್ಕಾರಿ ಶಾಲೆಗಳೇ ವಿಜೃಂಭಿಸತೊಡಗುವುವು. ಖಾಸಗೀ ಶಾಲೆಗಳು ತಂತಾನೆ ಮುಚ್ಚುವುವು. ನೈಜ ರಾಷ್ಟ್ರೀಕರಣ ತನಗೆ ತಾನೆ ಆಗಿರುತ್ತದೆ. ಕನ್ನಡ ಮಾಧ್ಯಮವೂ ನೆಲೆಗೊಳ್ಳುತ್ತದೆ. ದೇಶದ ಎಲ್ಲಾ ಮಕ್ಕಳೂ ಪ್ರತಿಭಾವಂತರಾಗುತ್ತಾರೆ. ಕೋಟಿ ಕೋಟಿ ಮಕ್ಕಳು ರಾಷ್ಟ್ರಜೀವನದಲ್ಲಿ ಪ್ರಭಾವಯುತರಾಗಿ ತಮ್ಮ ಕೊಡುಗೆ ಸಲ್ಲಿಸುವಂತಾಗುತ್ತದೆ. ಮಾನವ ಸಂಪನ್ಮೂಲದ ಪೂರ್ಣ ಉಪಯೋಗ ರಾಷ್ಟ್ರಕ್ಕೆ ಲಭಿಸಿ ರಾಷ್ಟ್ರ ಪ್ರಗತಿ ಪಥದಲ್ಲಿ ಮುನ್ನಡೆಯುತ್ತದೆ.

ಹೀಗೆ ಎರಡೂ ಮಾರ್ಗಗಳಿಂದ ಶಿಕ್ಷಣವನ್ನು ಪ್ರಬಲಗೊಳಿಸಲು ಸರ್ಕಾರ, ಪೋಷಕರು, ಆಡಳಿತ ವರ್ಗ, ಜನಪ್ರತಿನಿಧಿಗಳು, ಬುದ್ಧಿಜೀವಿಗಳು, ಮಾಧ್ಯಮದವರು, ಮಕ್ಕಳ ಬಗ್ಗೆ ಕಳಕಳಿಯಿಂದ ಈ ದಿಸೆಯಲ್ಲಿ ಕಾರ್ಯಪ್ರವೃತ್ತರಾಗಲಿ ಎಂದು ಆಶಿಸುತ್ತೇನೆ.

**ಪ್ರೊ॥ ಸಂಪಿಗೆ ತೋಂಟದಾರ್ಯ**
ನಂ. ೩೪, 'ಸಂಪಿಗೆ', ೫ನೇ ಅಡ್ಡರಸ್ತೆ, ೬ನೇ ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು–೫೬೦೧೦೪

# ಮೌನ ನುಂಗಿದ ಶಬ್ದ




**ರೋ**ಸಿ ಹೋದ ಜೀವಕ್ಕೆ
ಹುರಪಿಟ್ಟು ಹೋದ ಜೀವ ನೀನು

ಸಿಕ್ಕಿತೆಂದು ಹಿಡಿಯುವಷ್ಟರಲಿ
ಮಾಯವಾದ ಜಿಂಕೆ ನೀನು

ಕನಸುಗಳ ಕಂತೆ ಕಟ್ಟಿ
ಕಂತೆ ಸುಟ್ಟ ಜ್ವಾಲೆ ನೀನು

ಮನದಾಕಾಶದಲಿ ಚಿತ್ರ ಬಿಡಿಸಿ
ಮರೆಯಾದ ಚಿತ್ರ ನೀನು

ಕಂಗಳಲಿ ಕಾಂತಿ ತುಂಬಿ
ಮನವ ಘಾಸಿಗೊಳಿಸಿದ್ದೇ ನೀನು

ಮಿಂಚಿನಂತೆ ಬಂದು ನನ್ನ ಚುಮ್ಮಿ
ಮಾಯವಾದ ಸಿಡಿಲು ನೀನು

ಮನದ ಮೋಹಕೆ ಮಾಯದ
ಮೌನ ನುಂಗಿದ ಶಬ್ದವಾದೆ ನೀನು

ಬದುಕೇ ಹೇಳು
ನೀನು ಹೀಗೇ ಏಕೆ ?

**ಶಿವಲಿಂಗಪ್ಪ ಸಿ. ಬಸವಣ್ಣೋರ್**
ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ
ಗುಲಬರ್ಗಾ – ೫೮೫ ೧೦೬



# ನವ ಚಳವಳಿಗಳ ಪಥವೂ ಎಡಪಕ್ಷಗಳ ಸ್ಪಂದನವೂ

ಭಾರತದ ಸಾರ್ವಜನಿಕ ರಂಗದಲ್ಲಿ (ರಾಜಕೀಯ ಕ್ಷೇತ್ರದಲ್ಲಿ) ಎಡಪಕ್ಷಗಳು ತಮ್ಮದೇ ಆದ ಛಾಪನ್ನು ಮೂಡಿಸಿವೆ. ಸ್ವಾತಂತ್ರ್ಯಪೂರ್ವದಲ್ಲಿ ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ಶಕ್ತಿಗಳ ವಿರುದ್ಧ ಸೆಣಸಾಡಿದ ಎಡಪಕ್ಷಗಳು ಪ್ರಸ್ತುತ ನವರೂಪದ ವಸಾಹತುಶಾಹಿ/ ಸಾಮ್ರಾಜ್ಯಶಾಹಿ ಮೂಸೆಯಲ್ಲಿ ಮೂಡಿರುವಂತಹ ನವ ಉದಾರ ನೀತಿಗಳ ವಿರುದ್ಧ ದೊಡ್ಡ ಮಟ್ಟದ ಹೋರಾಟಗಳನ್ನು ನಡೆಸುತ್ತಿವೆ. ನಗರ ಮತ್ತು ಗ್ರಾಮೀಣ ಪ್ರದೇಶಗಳ ಬಡವರ / ಕಾರ್ಮಿಕರ ಪರವಾಗಿ ದನಿ ಎತ್ತುತ್ತ ಬಂದಿವೆ. ಕೋಮುವಾದದ ವಿರುದ್ಧ ಧೀರೋದಾತ್ತ ಹೋರಾಟವನ್ನು ನಡೆಸಿವೆ. ಎಲ್ಲ ಬಗೆಯ ಭಯೋತ್ಪಾದನೆಗಳ ವಿರುದ್ಧವೂ ಸೊಲ್ಲೆತ್ತಿವೆ. ಗ್ರಾಮೀಣ ಪ್ರದೇಶಗಳ ಬಡವರಿಗಾಗಿ ಅನುಷ್ಠಾನದಲ್ಲಿರುವ ಮಹಾತ್ಮಗಾಂಧಿ ಉದ್ಯೋಗ ಖಾತ್ರಿ ಯೋಜನೆಯನ್ನು ರೂಪಿಸುವುದರ ಹಿಂದೆ ಎಡಪಕ್ಷಗಳ ದೊಡ್ಡ ಕೊಡುಗೆಯಿದೆ.

**ಮ. ಶ್ರೀ. ಮುರಳಿ ಕೃಷ್ಣ**

ಇತ್ತೀಚಿನ ದಶಕಗಳಲ್ಲಿ ನಮ್ಮ ರಾಷ್ಟ್ರದಲ್ಲಿ, ಅನೇಕ ನವ ಚಳವಳಿಗಳು ಜನ್ಮ ತಳೆದದ್ದನ್ನು ಕಂಡಿದ್ದೇವೆ. ನಮ್ಮ ನಡುವೆ ವಿವಿಧ ರಾಜಕೀಯ ಪಕ್ಷಗಳ ಜೊತೆ ಸಂಬಂಧ ಹೊಂದಿರುವ ಅನೇಕ ಸಾಮೂಹಿಕ ಸಂಘಟನೆಗಳಿವೆ. ಅವು ತಮ್ಮ ಕಾರ್ಯಸೂಚಿಗಳಿಗೆ ಅನುಗುಣವಾಗಿ ಕಾರ್ಯ ನಿರ್ವಹಿಸುತ್ತಿವೆ. ಆದರೆ ಇಲ್ಲಿ ೧೯೮೦ರ ತರುವಾಯ ನಮ್ಮ ಸಾರ್ವಜನಿಕ ರಂಗದಲ್ಲಿ ಕಾಣಿಸಿಕೊಂಡ ಚಳವಳಿಗಳ ಬಗೆಗೆ ಪ್ರಸ್ತಾಪಿಸಲಾಗಿದೆ. ಒಂದರ್ಥದಲ್ಲಿ ಇವನ್ನು ಪಕ್ಷೇತರ (ರಾಜಕೀಯ) ಚಳವಳಿಗಳು ಎಂದು ವರ್ಗೀಕರಿಸಬಹುದು. ಆದರೆ ಅವು ಎತ್ತಿರುವ ಗಹನವಾದ ಪ್ರಶ್ನೆಗಳಿಗೆ / ವಿಷಯಗಳಿಗೆ ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಆಯಾಮಗಳಿವೆ. ಇಲ್ಲಿ 'ಚಳವಳಿ' ಎಂಬ ಪದವನ್ನು ಸಂಖ್ಯಾತ್ಮಕ ದೃಷ್ಟಿಯಲ್ಲಿ ಬಳಸಿಲ್ಲ.

೧೯೮೦ರ ತರುವಾಯ, ಹಲವು ನಾಗರಿಕ ಗುಂಪುಗಳ (ನಾಗರಿಕರ) ಮಧ್ಯಪ್ರವೇಶದಿಂದ ಒಂದು ನವ ಬಗೆಯ ರಾಜಕೀಯ ಮತ್ತು ಸಾಮಾಜಿಕ ಕ್ರಿಯಾಶೀಲತೆ ಅಸ್ತಿತ್ವಕ್ಕೆ ಬಂದಿತು. ಮುಖ್ಯವಾಹಿನಿಯಲ್ಲಿದ್ದ ರಾಜಕೀಯ ಪಕ್ಷಗಳು, ಪ್ರಜಾಪ್ರಭುತ್ವ, ಸ್ವಾತಂತ್ರ್ಯ, ನಾಗರಿಕ ಹಕ್ಕುಗಳು ಇತ್ಯಾದಿ ವಿಷಯಗಳ ಬಗೆಗೆ ಬೀರಬೇಕಾದಷ್ಟು ಪ್ರಭಾವ ಬೀರುವುದರಲ್ಲಿ ವಿಫಲವಾದ್ದರಿಂದ ಈ ತೆರನಾದ ಪಕ್ಷೇತರ ವೇದಿಕೆಗಳು ಹುಟ್ಟಿಕೊಂಡವು. ಇಂತಹ ನಾಗರಿಕರ ಉಪಕ್ರಮಗಳು ಕಾವಲು ನಾಯಿ(ವಾಚ್‌ಡಾಗ್)ಯಂತಹ ಚಟುವಟಿಕೆಗಳಲ್ಲಿ ತೊಡಗಿದವು.



ಸಾಮಾನ್ಯವಾಗಿ ಇವುಗಳಿಗೆ ದೊಡ್ಡ ಮಟ್ಟದ ಜನಬೆಂಬಲವಿರುವುದಿಲ್ಲ. ಹಲವು ಗಾತ್ರದಲ್ಲಿ ಚಿಕ್ಕದಾಗಿದ್ದರೂ ಸುಸ್ಥಿರವಾಗಿ ತಮ್ಮ ಚಟುವಟಿಕೆಗಳನ್ನು ನಡೆಸುತ್ತ ಬಂದಿವೆ. ಕೆಲವು ತಮ್ಮದೇ ಆದ ರೀತಿಯಲ್ಲಿ ಹಣವನ್ನು ಸಂಗ್ರಹಿಸಿ ಕಾರ್ಯಪ್ರವೃತ್ತವಾಗಿವೆ. ಇನ್ನು ಕೆಲವಕ್ಕೆ ಸರ್ಕಾರೇತರ ಸಂಸ್ಥೆಗಳು ಹಣವನ್ನು ಒದಗಿಸುತ್ತವೆ. ಕೆಲವು ನಿರ್ದಿಷ್ಟ ವಿಷಯಗಳನ್ನು ಇಟ್ಟುಕೊಂಡು, ಒಂದು ವಿಶಾಲ ಸಮ್ಮಿಶ್ರ (ಕೋಅಲಿಷನ್) ವೇದಿಕೆ ರಚಿಸಿಕೊಂಡು ಚಳವಳಿಯನ್ನು ಹೂಡುತ್ತಿವೆ. ಇದರಲ್ಲಿ ಗಾಂಧೀವಾದಿ, ದಲಿತ, ಮಹಿಳಾ ಇತ್ಯಾದಿ ಗುಂಪುಗಳು ಮತ್ತು ಕೆಲವು ಕಾರ್ಮಿಕ ಸಂಘಟನೆಗಳೂ ಭಾಗವಹಿಸುತ್ತವೆ. ವೈಯಕ್ತಿಕ ಮಟ್ಟದಲ್ಲಿ, ಹಲವು ನಾಗರಿಕರೂ ಕೈಜೋಡಿಸುತ್ತಿದ್ದಾರೆ. ಇಂತಹ ಸಮ್ಮಿಶ್ರ ವೇದಿಕೆಗಳು ಸಾಮಾನ್ಯ ಕನಿಷ್ಠ ಕಾರ್ಯಕ್ರಮವನ್ನು ರೂಪಿಸುತ್ತವೆ. ಇದಕ್ಕೆ ವೇದಿಕೆಯ ಎಲ್ಲ ಅಂಗಗಳೂ ಬದ್ಧವಾಗಿರುತ್ತವೆ. ಈ ಅಂಗಗಳ ಕಾರ್ಯಸೂಚಿಗಳು ಸಮ್ಮಿಶ್ರ ವೇದಿಕೆಯ ಚಟುವಟಿಕೆಗಳನ್ನು ಪ್ರಭಾವಿಸುವುದಿಲ್ಲ. ಇದು ಈ ಸಮ್ಮಿಶ್ರ ವೇದಿಕೆಗಳ ವಿಶಿಷ್ಟ ಲಕ್ಷಣ. ಆದರೆ ಇಂತಹ ವೇದಿಕೆಗಳ ಅಂಗಗಳ ಭಿನ್ನ ಕಾರ್ಯಸೂಚಿಗಳು, ಧ್ಯೇಯೋದ್ದೇಶಗಳು, ಕಾರ್ಯತಂತ್ರಗಳಿಂದಲೇ ಭಿನ್ನಾಭಿಪ್ರಾಯಗಳು ತಲೆದೋರಿ, ವೇದಿಕೆಗಳು ಅಲ್ಪಾವಧಿ ಅಸ್ತಿತ್ವವನ್ನು ಹೊಂದುತ್ತವೆ. ಹೀಗೆಂದಾಕ್ಷಣ, ಇವುಗಳ ಮಧ್ಯಪ್ರವೇಶ ಪರಿಣಾಮಕಾರಿಯಾಗಿರಲಿಲ್ಲ ಅಥವಾ ಪ್ರಭಾವಶಾಲಿಯಾಗಿರಲಿಲ್ಲ ಎಂಬ ತೀರ್ಮಾನಕ್ಕೆ ಬರುವುದು ಅಸಾಧುವಾಗುತ್ತದೆ.

ನಮ್ಮ ರಾಷ್ಟ್ರದಲ್ಲಿ ತುರ್ತು ಪರಿಸ್ಥಿತಿಯನ್ನು ಹೇರಿದ ತರುವಾಯ, ನಾಗರಿಕ ಸ್ವಾತಂತ್ರ್ಯ ಮತ್ತು ಪ್ರಜಾಸತ್ತಾತ್ಮಕ ಹಕ್ಕುಗಳ ವಿಷಯಗಳು ವ್ಯಾಪಕ ನೆಲೆಯಲ್ಲಿ ಹಲವು ವೇದಿಕೆಗಳಲ್ಲಿ ಚರ್ಚೆಗಳಿಗೆ ಒಳಗಾದವು. ರಾಷ್ಟ್ರಾದ್ಯಂತ ಹಲವು ನಾಗರಿಕರು ಒಂದುಗೂಡಿ, ಈ ವಿಷಯಗಳಿಗೆ ಸಂಬಂಧಿಸಿದಂತೆ ಪ್ರಭುತ್ವದ ಪಾತ್ರ, ಅದರಿಂದಾಗುವ ಹರಣ ಇತ್ಯಾದಿ ವಿಚಾರಗಳ ಬಗೆಗೆ ಸೂಕ್ತ ನಿಲುವುಗಳನ್ನು ತೆಗೆದುಕೊಳ್ಳಲು, ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಸಮಾನ ಮನಸ್ಕರ ವೇದಿಕೆಗಳನ್ನು ಹುಟ್ಟುಹಾಕಲು ಮುಂದಾದರು. ತುರ್ತುಪರಿಸ್ಥಿತಿಯ ಸಮಯದಲ್ಲೇ 'ಪೀಪಲ್ಸ್ ಯೂನಿಯನ್ ಫಾರ್ ಸಿವಿಲ್ ಲಿಬರ್ಟೀಸ್ ಆ್ಯಂಡ್ ಡೆಮೊಕ್ರಟಿಕ್ ರೈಟ್ಸ್' (ಪಿಯುಸಿಎಲ್‌ಡಿಆರ್) ಅಸ್ತಿತ್ವಕ್ಕೆ ಬಂದಿತು. ನಂತರ ಇದು ಭಂಜನಗೊಂಡು, 'ಪೀಪಲ್ಸ್ ಯೂನಿಯನ್ ಫಾರ್ ಡೆಮೊಕ್ರಟಿಕ್ ರೈಟ್ಸ್' (ಪಿಯುಡಿಆರ್) ಮತ್ತು 'ಪೀಪಲ್ಸ್ ಯೂನಿಯನ್ ಫಾರ್ ಸಿವಿಲ್ ಲಿಬರ್‌ಟೀಸ್' (ಪಿಯುಸಿಎಲ್) ಎಂಬ ವೇದಿಕೆಗಳು ಹುಟ್ಟಿದವು. ಆರ್ಥಿಕ ಹಕ್ಕುಗಳನ್ನು ಒಳಗೊಂಡು ಎಲ್ಲ ಹಕ್ಕುಗಳ ಬಗೆಗೆ ಎಡಪಂಥೀಯ ವಿಶ್ಲೇಷಣೆಯ ಆಧಾರದ ಮೇಲೆ ಕಾರ್ಯಕ್ರಮಗಳನ್ನು ಪಿಯುಡಿಆರ್ ರೂಪಿಸಿದರೆ, ಪಿಯುಸಿಲ್ ನಾಗರಿಕ ಸ್ವಾತಂತ್ರ್ಯಗಳ ಬಗೆಗೆ ತನ್ನ ಗಮನವನ್ನು ಕೇಂದ್ರೀಕರಿಸಿತು. ಇವುಗಳ ಜೊತೆ ಹಲವು ಮಾನವ ಹಕ್ಕುಗಳ ಸಂಸ್ಥೆಗಳೂ ತಲೆಯೆತ್ತಿದವು. ಇವುಗಳಲ್ಲಿ ಅನೇಕ ವಿದೇಶ ಪ್ರಶ್ನಾರ್ಹ ಮೂಲಗಳಿಂದ ಧನಸಹಾಯವನ್ನು ಪಡೆದ

ಸಂಸ್ಥೆಗಳಾಗಿದ್ದವು. ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಬದಲಾಗುವ ಕಾರ್ಯಸೂಚಿಗಳಿಗೆ ತಕ್ಕಂತೆ ಕಾರ್ಯವನ್ನು ನಿರ್ವಹಿಸುತ್ತಿದ್ದವು. ಇವುಗಳನ್ನು ಸರ್ಕಾರೇತರ ಸಂಸ್ಥೆಗಳ ಪರಿಧಿಯಲ್ಲಿ ಸೇರಿಸಬಹುದು.

ಅನೇಕ ವರ್ಷಗಳಿಂದ ಇಂತಹ ಗುಂಪುಗಳು, ನಾಗರಿಕ ಸ್ವಾತಂತ್ರ್ಯಗಳ ಮತ್ತು ಪ್ರಜಾಸತ್ತಾತ್ಮಕ ಹಕ್ಕುಗಳ ದಮನದ ಪ್ರಕರಣಗಳನ್ನು ಬಹಳ ಪ್ರಯಾಸದಿಂದ ದಾಖಲಿಸುತ್ತ ಬಂದಿವೆ. ಮೊದಲು ಇವು, ಪ್ರಭುತ್ವದಿಂದ ಜರುಗುವ ಅಭಿವ್ಯಕ್ತಿ ಸ್ವಾತಂತ್ರ್ಯಹರಣದಂತಹ ವಿಷಯಗಳ ವಿರುದ್ಧ ದನಿ ಎತ್ತಿದವು. ತರುವಾಯ, ಕಳೆದ ಸುಮಾರು ಎರಡೂವರೆ ದಶಕಗಳಿಂದ ಇವು ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿ, ಜಾತಿ, ಲಿಂಗ, ಧರ್ಮ, ಸಮುದಾಯಗಳಿಗೆ ಸಂಬಂಧಿಸಿದಂತೆ ಪ್ರಭುತ್ವೇತರ ಶಕ್ತಿಗಳಿಂದ ಜರುಗುವ ಸ್ವಾತಂತ್ರ್ಯಹರಣದ ಪ್ರಕರಣಗಳನ್ನು ಕೈಗೆತ್ತಿಕೊಂಡು ಹೋರಾಟ ನಡೆಸುತ್ತ ಬಂದಿವೆ. ಇತ್ತೀಚಿನ ವರ್ಷಗಳಲ್ಲಿ ಮರಣದಂಡನೆಯ ವಿರುದ್ಧವೂ ಪ್ರಚಾರ ಮಾಡುತ್ತಿವೆ. ಕಾರ್ಮಿಕರ ಅತೀವ ಶೋಷಣೆ ಹಾಗೂ ಅವರ ಹಕ್ಕುಗಳ ದಮನದ ಕೆಲವು ಪ್ರಕರಣಗಳಿಗೂ ಇವು ಸಕಾರಾತ್ಮಕವಾಗಿ ಸ್ಪಂದಿಸಿವೆ.

ಡಿಸೆಂಬರ್ ೧೩, ೨೦೦೧ರಂದು ನಮ್ಮ ಸಂಸತ್ ಭವನದ ಮೇಲೆ ಭಯೋತ್ಪಾದಕರ ದಾಳಿ ನಡೆಯಿತು. ಈ ದಾಳಿಗೆ ಸಂಬಂಧಿಸಿದಂತೆ ದೆಹಲಿಯ ಕಾಲೇಜೊಂದರ ಅರೇಬಿಕ್ ಭಾಷೆಯ ಅಧ್ಯಾಪಕ ಸೈಯದ್ ಅಬ್ದುಲ್ ರೆಹಮಾನ್ ಗಿಲಾನಿ ಅವರನ್ನು ಪ್ರಮುಖ ಆರೋಪಿಗಳಲ್ಲಿ ಒಬ್ಬರೆಂದು ಘೋಷಿಸಲಾಗಿತ್ತು. ಆ ಕಾಲಘಟ್ಟದಲ್ಲೇ ವಿಶ್ವದ ದೊಡ್ಡಣ್ಣ ಅಮೆರಿಕದ ಅಧ್ಯಕ್ಷ ಬುಶ್ ಭಯೋತ್ಪಾದನೆಯ ಮೇಲೆ ಸಮರವನ್ನು ಸಾರಿದ್ದ. ಆಗ ಕೇಂದ್ರದಲ್ಲಿ ಇದ್ದದ್ದು ಎನ್.ಡಿ.ಎ. ಸರ್ಕಾರ. ೨೦೦೨ರಲ್ಲಿ ಗುಜರಾತಿನಲ್ಲಿ ರಾಜ್ಯ ಆಯೋಜಿಸಿದ ಜನಾಂಗೀಯ ನರಹತ್ಯೆ ಸಂಭವಿಸಿತು. ಇವೆಲ್ಲ ಸಂಗತಿಗಳು ಗಿಲಾನಿ ವಿಚಾರವನ್ನು ಒಂದು ಕರ್ಕಶ, ಉಗ್ರ ರಾಷ್ಟ್ರವಾದಿ ಸಂವಾದದ ಭಾಗವನ್ನಾಗಿಸಿತು. ಮಾಧ್ಯಮಗಳೂ ಕೋರ್ಟಿನ ತೀರ್ಪು ಹೊರಬೀಳುವ ಮುನ್ನವೇ ವಿಚಾರಣೆಯನ್ನು ನಡೆಸಿದವು. ಪೋಟಾ ಕೋರ್ಟ್ (ಪೋಟಾ ಪ್ರಿವೆನ್‌ಷನ್ ಆಫ್ ಟೆರರಿಸ್ಟ್ ಆ್ಯಕ್ಟಿವಿಟೀಸ್ ಆ್ಯಕ್ಟ್) ಗಿಲಾನಿಗೆ ಮರಣ ದಂಡನೆಯ ಶಿಕ್ಷೆಯನ್ನು ವಿಧಿಸಿತು. ಆದರೆ ಈ ಪ್ರಕರಣದಲ್ಲಿ ದೆಹಲಿ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರ ಒಂದು ಗುಂಪು ಗಿಲಾನಿಯವರಿಗೆ ಒಂದು ನ್ಯಾಯಯುತ ವಿಚಾರಣೆಯ ಅವಕಾಶ ದೊರಕಬೇಕೆಂದು ಸತತವಾಗಿ ಶ್ರಮಿಸಿತು. ತರುವಾಯ ಒಂದು ರಾಷ್ಟ್ರಮಟ್ಟದ ಸಮಿತಿಯನ್ನು ರಚಿಸಲಾಯಿತು. ಅದರಲ್ಲಿ ಗೌರವಾನ್ವಿತ ಆ್ಯಕಡೆಮಿಕ್‌ಗಳಾದ ರಜನಿ ಕೋಠಾರಿ ಯಂತಹವರು, ಬರಹಗಾರ್ತಿ ಅರುಂಧತಿ ರಾಯ್ ಮುಂತಾದವರು ಇದ್ದರು. ನಂದಿತ ಹಕ್ಸರ್‌ರಂತಹ ವಕೀಲರು ಗಿಲಾನಿ ಪರವಾಗಿ ಕೋರ್ಟುಗಳಲ್ಲಿ ವಾದಿಸಿದರು. ಕೊನೆಗೆ, ಗಿಲಾನಿಗೆ ಸಂಬಂಧಿಸಿದಂತಹ ಪ್ರಕರಣ ಪಿತೂರಿಯೆಂದು ಸಾಬೀತಾಗಿ, ಅವರನ್ನು ಆಪಾದನೆಯಿಂದ ಖುಲಾಸೆಗೊಳಿಸಲಾಯಿತು. 'ರಾಷ್ಟ್ರೀಯ ಭದ್ರತೆಯ' ನೆಪದಲ್ಲಿ ಪ್ರಜಾಪ್ರಭುತ್ವವನ್ನು ಹೇಗೆ ವಿಧ್ವಂಸ ಮಾಡಲಾಗುತ್ತದೆ ಎಂಬುದಕ್ಕೆ ಈ ಮೊಕದ್ದಮೆಯೇ ಒಂದು ಸಾಕ್ಷಿ. ಹಾಗೆಯೇ ಪ್ರಜಾಸತ್ತಾತ್ಮಕ ಮಧ್ಯಪ್ರವೇಶಕ್ಕೆ ಅವಕಾಶಗಳ ಕದ ಮುಚ್ಚಿಲ್ಲ ಎಂಬುದು ಕೂಡ ವೇದ್ಯವಾಗುತ್ತದೆ.

ಇಂದಿರಾ ಗಾಂಧಿಯ ಹತ್ಯೆಯ ತರುವಾಯ ದೆಹಲಿಯಲ್ಲಿ ಸಿಖ್ಖರ ನರಮೇಧವಾಯಿತು. ಈ ಘಟನೆ ಜರುಗಿದ ತರುವಾಯ ರಾಷ್ಟ್ರಾದ್ಯಂತ ಅನೇಕ ಕೋಮುವಾದ ವಿರೋಧಿ ಗುಂಪುಗಳು ರಚಿಸಲ್ಪಟ್ಟವು. ೧೯೮೪ರಲ್ಲಿ ಪ್ರಥಮವಾಗಿ ಶುರುವಾದ ಇಂತಹ ಗುಂಪುಗಳಲ್ಲಿ 'ನಾಗರಿಕ್ ಏಕತಾ ಮಂಚ್' ಕೂಡ ಒಂದು. ಬೇರೆ ಬೇರೆ ಹಿನ್ನೆಲೆಯ ಮತ್ತು ಕೆಲಸಗಳಲ್ಲಿ ನಿರತರಾಗಿರುವ ಜನರು ಈ ಮಂಚ್ ಮೂಲಕ ಪರಿಹಾರ ಶಿಬಿರಗಳಲ್ಲಿ ಅನೇಕ ಕಾರ್ಯಗಳನ್ನು ಮಾಡಿದರು. ಸುಮಾರು ಇದೇ ಸಮಯದಲ್ಲಿ, ದೆಹಲಿಯಲ್ಲಿ, 'ಸಾಂಪ್ರದಾಯಿಕ್ತಾ ವಿರೋಧಿ ಆಂದೋಳನ್' ಎಂಬ ಗುಂಪು ಅಸ್ತಿತ್ವಕ್ಕೆ ಬಂದಿತು. ರಾಮಜನ್ಮಭೂಮಿ – ಬಾಬ್ರಿ ಮಸೀದಿ ವಿವಾದದ ಬೆಂಕಿ ಹತ್ತಿಕೊಂಡಾಗ, ಈ ಗುಂಪು ಆವರೆಗೂ ಬಳಸುತ್ತಿದ್ದ ಧರ್ಮನಿರಪೇಕ್ಷಕ ಕಾರ್ಯತಂತ್ರಕ್ಕಿಂತಲೂ

ಭಿನ್ನವಾಗಿ ಹಿಂದೂ ಧರ್ಮೀಯರನ್ನು ಉದ್ದೇಶಿಸಿ "ಪ್ರತಿಯೊಂದು ಪರಮಾಣುವಿನಲ್ಲಿ ರಾಮನಿದ್ದಾನೆ – ಆತನ ಹೆಸರನ್ನು ಹಿಂಸೆಯ ಉತ್ತೇಜನಕ್ಕಾಗಿ ಬಳಸುವುದು ಸಲ್ಲದು" ಎಂಬ ಘೋಷಣೆಯ ಮೂಲಕ ಅರಿವಿನ ಬೆಳಕನ್ನು ಚೆಲ್ಲಲು ಪ್ರಯತ್ನಿಸಿತು.




ಪ್ರೀತಿ ಮಳೆ
ನೆನಸಿ ಸುರಿಯಿತು
ತೇವಗೊಂಡಿತು
ಹೆಣ್ಣು ಇಳೆ
ದುಡುಕಿ ಕದಡಿತು
ಗಂಡು ಹೊಳೆ !

**ಸಂಪತ್ ಬೆಟ್ಟಗೆರೆ**
ಕನ್ನಡ ಉಪನ್ಯಾಸಕರು, ಬೆಟ್ಟಗೆರೆ ಗ್ರಾಮ,
ಬಣಕಲ್ ಹೋಬಳಿ, ಮೂಡಿಗೆರೆ

ಗುಜರಾತಿನಲ್ಲಿ ೨೦೦೨ರಲ್ಲಿ ಜರುಗಿದ ಬರ್ಬರ ಜನಾಂಗೀಯ ಹತ್ಯಾಕಾಂಡ, ಪ್ರಜಾಸತ್ತಾತ್ಮಕ ಮೌಲ್ಯಗಳಿಗೆ ದೊಡ್ಡ ಪ್ರಹಾರವನ್ನು ನೀಡಿತು. ಅಟಲ್ ಬಿಹಾರಿ ವಾಜಪೇಯಿ, ಮೋದಿ "ರಾಜಧರ್ಮ" ಪಾಲಿಸಲಿಲ್ಲ ಎಂದು ತಿಪ್ಪೆ ಸಾರಿಸಿದರು. ಬಿಜೆಪಿ, ಕಾಂಗ್ರೆಸ್‌ಗೆ ೧೯೮೪ರ ಸಿಖ್ ನರಮೇಧವನ್ನು ನೆನಪಿಸಿತು. ಈ ಗೊಂದಲದಲ್ಲಿ ಅಲ್ಲಿನ ಸಂತ್ರಸ್ತರಿಗೆ ಸಹಾಯಹಸ್ತ ಚಾಚಿದ್ದು ನಾಗರಿಕ ಗುಂಪುಗಳು ಮತ್ತು ಕೆಲವು ಸರ್ಕಾರೇತರ ಸಂಸ್ಥೆಗಳು. ಸಮ್ಮಿಶ್ರ ವೇದಿಕೆಗಳ ಮೂಲಕವೂ ಸಂತ್ರಸ್ತರಿಗೆ ನ್ಯಾಯವನ್ನು ಒದಗಿಸುವ ನಿಟ್ಟಿನಲ್ಲಿ ಹೋರಾಟವನ್ನು ಮಾಡಲಾಯಿತು. ಈ ವಿಷಯದಲ್ಲಿ ತೀಸ್ತಾ ಸೆಟಲ್‌ವಾಡ್ ಮಾಡಿದ/ ಮಾಡುತ್ತಿರುವ ಹೋರಾಟ ಅಭೂತಪೂರ್ವವಾದುದು.

ಅಭಿವೃದ್ಧಿ ಎಂಬುದು ಬಹು ಆಯಾಮಗಳ ಸಂಕೀರ್ಣ ವಿಷಯ. ಇತ್ತೀಚಿನ ದಶಕಗಳಲ್ಲಿ 'ಅಭಿವೃದ್ಧಿ ಯಾರಿಗಾಗಿ ?' ಎಂಬ ಪ್ರಶ್ನೆಯನ್ನು ತಳಸಮುದಾಯದ ಜನರು ಹಲವು ಚಳವಳಿಗಳ ಮೂಲಕ ಎತ್ತುತ್ತಿದ್ದಾರೆ. ಭಾರಿ ಯೋಜನೆಗಳಿಂದ ನಿರ್ವಸಿತರಾಗಿರುವ ಮಂದಿಯ ಪೈಕಿ ಆದಿವಾಸಿಗಳು, ದಲಿತರು ಮತ್ತು ಸಮಾಜದ ತಳಸ್ತರದವರೇ ಜಾಸ್ತಿ ಎಂಬುದನ್ನು ಹಲವು ಅಧ್ಯಯನಗಳೂ ತಿಳಿಸಿವೆ. ಸರ್ದಾರ್ ಸರೋವರ್ ಅಣೆಕಟ್ಟಿಗೆ ಸಂಬಂಧಿಸಿದಂತಹ ಹೋರಾಟದಲ್ಲಿ ಮೇಧಾ ಪಾಟ್ಕರ್ ನೇತೃತ್ವದ 'ನರ್ಮದಾ ಬಚಾವ್ ಆಂದೋಳನ' ವಹಿಸಿದ ಪಾತ್ರ ಚರಿತ್ರಾರ್ಹವಾದದ್ದು. ಒಂದು ಹಂತದಲ್ಲಿ, ವಿಶ್ವಬ್ಯಾಂಕ್ ಈ ಯೋಜನೆಯಿಂದ ಹಿಮ್ಮೆಟ್ಟುವಂತೆ ಮಾಡಿದ್ದು ಈ ಆಂದೋಳನದ ಹೆಗ್ಗಳಿಕೆ. ಜಯ, ಅಪಜಯಗಳೇನೇ ಇರಲಿ. ಪರಿಸರ ಮತ್ತು ಬೃಹತ್ ಯೋಜನೆಗಳಿಗೆ ಸಂಬಂಧಿಸಿದಂತೆ ಹಲವು ವಿಷಯಗಳನ್ನು / ಪ್ರಶ್ನೆಗಳನ್ನು ಮುನ್ನೆಲೆಗೆ ತಂದಿದ್ದು ಈ ಚಳವಳಿಯ ಅನನ್ಯ ಕೊಡುಗೆ.

ಪರಮಾಣು ಶಕ್ತಿ, ಪರಮಾಣು ರಿಯಾಕ್ಟರ್, ಪರಮಾಣು ಶಸ್ತ್ರಾಸ್ತ್ರಗಳ ವಿರುದ್ಧ ರಾಷ್ಟ್ರಾದ್ಯಂತ ಹಲವು ನಾಗರಿಕ ಗುಂಪುಗಳು, ಸರ್ಕಾರೇತರ ಸಂಸ್ಥೆಗಳು ಚಳವಳಿಗಳನ್ನು ಸಂಘಟಿಸುತ್ತಲೇ ಬಂದಿವೆ. ಜೈಪುರದಿಂದ ಕೂಡಾಂಕುಲಂವರೆಗೆ ಅವು ವಹಿಸುತ್ತ ಬಂದಿರುವ ಪಾತ್ರ ಉಲ್ಲೇಖನೀಯ. ನಮ್ಮ ರಾಜ್ಯದಲ್ಲೂ ಇಂತಹ ಹಲವು ಗುಂಪುಗಳು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದನ್ನು ಇಲ್ಲಿ ಸ್ಮರಿಸಬಹುದು.

ಕರ್ನಾಟಕದಲ್ಲಿ, ಪರಿಸರನಾಶವನ್ನು ಅರಣ್ಯಗಳ / ಮರಗಳ ಮಾರಣ ಹೋಮದ ವಿರುದ್ಧ ಜರುಗಿದ 'ಅಪ್ಪಿಕೊ' ಚಳವಳಿ ೧೯೮೦ರ ದಶಕದಲ್ಲಿ ಸಂಚಲನ ಉಂಟುಮಾಡಿತು. ಇದಕ್ಕೆ ಪ್ರೇರಕಶಕ್ತಿಯಾಗಿದ್ದದ್ದು ಪರಿಸರಪ್ರೇಮಿ / ಹೋರಾಟಗಾರ ಸುಂದರಲಾಲ್ ಬಹುಗುಣ ನೇತೃತ್ವದ 'ಚಿಪ್ಕೊ' ಆಂದೋಳನ. ತುಂಗಾ ಮೂಲ ಉಳಿಸಿ ಚಳವಳಿ, ಪಶ್ಚಿಮಘಟ್ಟ ಉಳಿಸಿ ಚಳವಳಿ, ನೀಲಗಿರಿ ವಿರೋಧಿ ಚಳವಳಿ, ಕುದುರೆಮುಖ ಯೋಜನೆ ಮತ್ತು ರಾಷ್ಟ್ರೀಯ ಉದ್ಯಾನ ವಿರುದ್ಧ ನಡೆದ ಚಳವಳಿಗಳು, ನಾಗರಹೊಳೆ – ಬಂಡೀಪುರ ಅಭಯಾರಣ್ಯಕ್ಕೆ ಸಂಬಂಧಿಸಿದ ಚಳವಳಿಗಳು, ಕಾಳಿ ಜಲವಿದ್ಯುತ್ ಯೋಜನೆ ವಿರುದ್ಧದ ಚಳವಳಿ, ಬೇಡ್ತಿ ಚಳವಳಿ, ಕೈಗಾ ಅಣುಸ್ಥಾವರ ವಿರುದ್ಧದ ಚಳವಳಿ, ಶರಾವತಿ ಟೇಲ್‌ರೇಸ್ ಯೋಜನೆಯ ವಿರುದ್ಧದ ಚಳವಳಿ, ಸೀಬರ್ಡ್ ನೌಕಾನೆಲೆ, ನಂದಿಕೂರು, ಎಂ.ಆರ್.ಪಿ.ಎಲ್., ಕೊಜೆಂಟ್ರಿಕ್ಸ್ ಉಷ್ಣ ವಿದ್ಯುತ್ ಸ್ಥಾವರ, ನಾಗಾರ್ಜುನ ಉಷ್ಣ ವಿದ್ಯುತ್ ಸ್ಥಾವರ, ಬಿಎಸ್‌ಎಫ್, ಯುಪಿಸಿಎಲ್, ನಿಡ್ಡೋಡಿ ಉಷ್ಣಸ್ಥಾವರ (ಪ್ರಸ್ತುತ ದಕ್ಷಿಣ ಕನ್ನಡದಲ್ಲಿ ಹೋರಾಟ ನಡೆಯುತ್ತಿದೆ)ಗಳ ವಿರುದ್ಧದ ಚಳವಳಿಗಳು ಮುಂತಾದವುಗಳಲ್ಲಿ ನಾಗರಿಕ ಗುಂಪುಗಳು, ಸರ್ಕಾರೇತರ ಸಂಸ್ಥೆಗಳು, ನಾಗರಿಕರು, ರಾಜಕೀಯ ಕಾರ್ಯಕರ್ತರು (ಹೆಚ್ಚಿನ ಸಂದರ್ಭಗಳಲ್ಲಿ ವೈಯಕ್ತಿಕ ಮಟ್ಟದಲ್ಲಿ) ಸಕ್ರಿಯವಾಗಿ ಭಾಗವಹಿಸಿವೆ / ಭಾಗವಹಿಸಿದ್ದಾರೆ.

ಇವಲ್ಲದೆ, ವಿಶೇಷ ಆರ್ಥಿಕ ವಲಯಗಳ ಸ್ಥಾಪನೆಗಾಗಿ ಭೂಸ್ವಾಧೀನ ಪ್ರಕ್ರಿಯೆಗಳ ವಿರುದ್ಧವೂ ಹೋರಾಟಗಳು ಜರುಗಿವೆ. ಗದಗ ಜಿಲ್ಲೆಯಲ್ಲಿ ಸ್ಥಾಪಿಸಲು ಉದ್ದೇಶಿಸಿದ್ದ ಪೋಸ್ಕೋ ಯೋಜನೆಗೆ ಸಂಬಂಧಿಸಿದಂತೆ ಭೂಸ್ವಾಧೀನ ಕ್ರಮದ ವಿರುದ್ಧ ಜರುಗಿದ ಚಳವಳಿಯಲ್ಲಿ ರೈತರ ಜೊತೆ ಸಮಾಜದ ಇತರ ವಿಭಾಗಗಳ ಜನರು ಒಗ್ಗಟ್ಟಿನಿಂದ ಹೋರಾಡಿದ್ದು ಒಂದು ಸ್ವಾಗತಾರ್ಹ ಚಳವಳಿಯೇ ಸರಿ. ಈ ಹೋರಾಟದ ಪರಿಣಾಮದಿಂದ ಬಿಜೆಪಿ ನೇತೃತ್ವದ ರಾಜ್ಯ ಸರ್ಕಾರ ಗದಗ ಜಿಲ್ಲೆಯಲ್ಲಿ ಈ ಯೋಜನೆಯನ್ನೇ ಕೈಬಿಡಬೇಕಾಯಿತು.

ಇತ್ತೀಚಿನ ದಶಕಗಳಲ್ಲಿ ಖಾಸಗೀಕರಣದ ಗುಲ್ಲು ಎಲ್ಲೆಲ್ಲೂ ಕೇಳಿ ಬರುತ್ತಿದೆ. ಇದಕ್ಕೆ ನೈಸರ್ಗಿಕ ಸಂಪನ್ಮೂಲಗಳೂ ಹೊರತಾಗಿಲ್ಲ. ಕರ್ನಾಟಕದಲ್ಲೂ ನೀರಿನ ಖಾಸಗೀಕರಣದ ವಿಷಯದಲ್ಲಿ ಆಳುವ ಸರ್ಕಾರಗಳು ವಿಶೇಷ ಆಸಕ್ತಿ ತೋರಿಸುತ್ತಿವೆ. ಈಗಾಗಲೇ, ಮೈಸೂರು ಮತ್ತು ಹುಬ್ಬಳ್ಳಿ ನಗರಗಳಲ್ಲಿ ನೀರಿನ ಖಾಸಗೀಕರಣ ದೊಡ್ಡ ಮಟ್ಟದಲ್ಲಿ ಜರುಗಿದೆ. ಇದರ ವಿರುದ್ಧದ ಚಳವಳಿಯಲ್ಲಿ ಸಣ್ಣ, ಸಣ್ಣ ನಾಗರಿಕ ಗುಂಪುಗಳು, ಇತರ ಗುಂಪುಗಳು ಮತ್ತು ಎಡ ಪಕ್ಷಗಳು ಭಾಗವಹಿಸಿವೆ.

ಕಳೆದ ಕೆಲವು ದಶಕಗಳಲ್ಲಿ, ಅತ್ಯಧಿಕ ಸಂಖ್ಯೆಯಲ್ಲಿ ಜನರನ್ನು ಸಂಘಟಿಸಿದ್ದು ಭ್ರಷ್ಟಾಚಾರ ವಿರುದ್ಧ ಭಾರತ ಆಂದೋಳನ. ಇದು 'ಅಣ್ಣಾ ಚಳವಳಿ'ಯೆಂದೇ ಜನಪ್ರಿಯವಾಯಿತು. ಇದರಲ್ಲಿ ಹೆಚ್ಚಾಗಿ ಭಾಗವಹಿಸಿದ್ದು ನಗರ ಪ್ರದೇಶಗಳ ಮಧ್ಯಮ ವರ್ಗದ ಯುವಕರು ಎಂಬುದು ಒಪ್ಪಬೇಕಾದ ಅಂಶವಾದರೂ ಸಮಾಜದ ಇತರ ಸ್ತರಗಳ ಜನರೂ ಪಾಲ್ಗೊಂಡಿದ್ದರು ಎಂಬ ವಿಷಯ ನಗಣ್ಯವಲ್ಲ. ನಿಜ, ಈ ಆಂದೋಳನ ಜನಲೋಕಪಾಲ ಮಸೂದೆಯ ಬಗೆಗೆ ಹೆಚ್ಚು ಕೇಂದ್ರೀಕೃತವಾಗಿತ್ತು. ಇದು ರಾಜಕೀಯ ಭ್ರಷ್ಟಾಚಾರಕ್ಕೆ ಮಾತ್ರ ಪ್ರಾಶಸ್ತ್ಯ ನೀಡಿತು. ಕಾರ್ಪೊರೇಟ್, ಸರ್ಕಾರೇತರ ಸಂಸ್ಥೆಗಳು, ನಾಗರಿಕ ಗುಂಪುಗಳಲ್ಲಿರುವ ಭ್ರಷ್ಟಾಚಾರವನ್ನು ಉಪೇಕ್ಷಿಸಿತು. ದಲಿತರು, ಅಲ್ಪಸಂಖ್ಯಾತರು ಮತ್ತು ಸಮಾಜದ ಅಂಚಿನಲ್ಲಿರುವ ಅನೇಕರು ಈ ಆಂದೋಳನದಲ್ಲಿ ಹೆಚ್ಚಾಗಿ ಭಾಗವಹಿಸಲಿಲ್ಲ ಎಂಬುದೂ ವಾಸ್ತವ ಸಂಗತಿ. ಚಳವಳಿಯ ರೂಪ ಹೊಂದಿದ್ದರೂ ಒಬ್ಬ ಜನಪ್ರಿಯ ಹೋರಾಟಗಾರನ ಸುತ್ತ ಗಿರಕಿ ಹೊಡೆದದ್ದು ಅಚ್ಚರಿಯ ವಿಷಯವೇ ಸರಿ. ಪ್ರಶಾಂತ್ ಭೂಷಣ್, ಅರವಿಂದ್ ಕೇಜ್ರಿವಾಲ್, ಯೋಗೇಂದ್ರ ಯಾದವ್‌ರಂತಹ ಸಂವೇದನಾಶೀಲ ಜನಪರ ಚಳವಳಿಗಾರರಿದ್ದರೂ ಈ ಚಳವಳಿ ಪ್ರಸ್ತುತ ತನ್ನ ಕಾವನ್ನು ಕಳೆದುಕೊಂಡಿದೆ. ಆದರೂ, ಸಮಾಜದ ಎಲ್ಲ ಸ್ತರಗಳಲ್ಲೂ ಹಾಸುಹೊಕ್ಕಾಗಿರುವ ಭ್ರಷ್ಟಾಚಾರವನ್ನು ಪ್ರಧಾನ ಭೂಮಿಕೆಗೆ ತಂದದ್ದು ಈ ಚಳವಳಿಯ ಪ್ಲಸ್‌ಪಾಯಿಂಟ್ !

ಭಾರತದ ಸಾರ್ವಜನಿಕ ರಂಗದಲ್ಲಿ (ರಾಜಕೀಯ ಕ್ಷೇತ್ರದಲ್ಲಿ) ಎಡಪಕ್ಷಗಳು ತಮ್ಮದೇ ಆದ ಛಾಪನ್ನು ಮೂಡಿಸಿವೆ. ಸ್ವಾತಂತ್ರ್ಯಪೂರ್ವದಲ್ಲಿ ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ಶಕ್ತಿಗಳ ವಿರುದ್ಧ ಸೆಣಸಾಡಿದ ಎಡಪಕ್ಷಗಳು ಪ್ರಸ್ತುತ ನವರೂಪದ ವಸಾಹತುಶಾಹಿ / ಸಾಮ್ರಾಜ್ಯಶಾಹಿ ಮೂಸೆಯಲ್ಲಿ ಮೂಡಿರುವಂತಹ ನವ ಉದಾರ ನೀತಿಗಳ ವಿರುದ್ಧ ದೊಡ್ಡ ಮಟ್ಟದ ಹೋರಾಟಗಳನ್ನು ನಡೆಸುತ್ತಿವೆ. ನಗರ ಮತ್ತು ಗ್ರಾಮೀಣ ಪ್ರದೇಶಗಳ ಬಡವರ / ಕಾರ್ಮಿಕರ ಪರವಾಗಿ ದನಿ ಎತ್ತುತ್ತ ಬಂದಿವೆ. ಕೋಮುವಾದದ ವಿರುದ್ಧ ಧೀರೋದಾತ್ತ ಹೋರಾಟವನ್ನು ನಡೆಸಿವೆ.

ಎಲ್ಲ ಬಗೆಯ ಭಯೋತ್ಪಾದನೆಗಳ ವಿರುದ್ಧವೂ ಸೊಲ್ಲೆತ್ತಿವೆ. ಗ್ರಾಮೀಣ ಪ್ರದೇಶಗಳ ಬಡವರಿಗಾಗಿ ಅನುಷ್ಠಾನದಲ್ಲಿರುವ ಮಹಾತ್ಮಗಾಂಧಿ ಉದ್ಯೋಗ ಖಾತ್ರಿ ಯೋಜನೆಯನ್ನು ರೂಪಿಸುವುದರ ಹಿಂದೆ ಎಡಪಕ್ಷಗಳ ದೊಡ್ಡ ಕೊಡುಗೆಯಿದೆ.

೧೯೪೨ರಲ್ಲಿ ಜರುಗಿದ 'ಚಲೇ ಜಾವ್' (ಬ್ರಿಟಿಷರೇ, ಭಾರತ ಬಿಟ್ಟು ತೊಲಗಿರಿ) ಚಳವಳಿಯಲ್ಲಿ ಕಮ್ಯುನಿಸ್ಟರು ಭಾಗವಹಿಸಲಿಲ್ಲ ಎಂಬ ವಿಷಯದ ಬಗೆಗೆ ಸಂಘ ಪರಿವಾರ ಆಗಾಗ್ಗೆ ಬೊಬ್ಬೆ ಹಾಕಿ, ಅವರು ರಾಷ್ಟ್ರೀಯವಾದಿಗಳಲ್ಲ ಎಂದು ಅಪಪ್ರಚಾರ ಮಾಡುತ್ತದೆ. 'ಅಂತರರಾಷ್ಟ್ರೀಯತೆ'ಯ ದೃಷ್ಟಿಕೋನದ ಹಿನ್ನೆಲೆಯಲ್ಲಿ ಭಾರತದ ಕಮ್ಯುನಿಸ್ಟರು ನಾಜ಼ಿ ಮತ್ತು ಫ್ಯಾಸಿಸ್ಟ್ ಶಕ್ತಿಗಳಿಗೆ ತಡೆವೊಡ್ಡುವ ನಿಟ್ಟಿನಲ್ಲಿ ಒಕ್ಕೂಟದ ರಾಷ್ಟ್ರಗಳಿಗೆ ಬೆಂಬಲವನ್ನು ವ್ಯಕ್ತಪಡಿಸಿದವು. ಆದರೆ ಭಾರತ ಕಮ್ಯುನಿಸ್ಟ್ ಪಕ್ಷ, ಈ ಚಳವಳಿಯಲ್ಲಿ ಭಾಗವಹಿಸದೆ ಇರಲು ತನ್ನ ಕಾರ್ಯಕರ್ತರಿಗೆ ಯಾವುದೇ ಅಧಿಕೃತ ಕರೆಯನ್ನು ನೀಡಲಿಲ್ಲ ಎಂಬುದು ಮನನೀಯ ಸಂಗತಿ. ಇವೆಲ್ಲದರ ಹೊರತಾಗಿಯೂ ಅನೇಕ ಕಮ್ಯುನಿಸ್ಟ್ ಕಾರ್ಯಕರ್ತರು ಈ ಚಳವಳಿಯಲ್ಲಿ ಪಾಲ್ಗೊಂಡಿದ್ದು ಗಮನಾರ್ಹ ವಿಷಯ. ಖಾಲಿಸ್ತಾನ ವಿರುದ್ಧದ ಚಳವಳಿಯಲ್ಲಿ ಪ್ರಾಣ ಕಳೆದುಕೊಂಡವರಲ್ಲಿ ಹೆಚ್ಚಿನ ಸಂಖ್ಯೆಯ ಕಮ್ಯುನಿಸ್ಟರಿದ್ದರು ಎಂಬುದನ್ನು ಪಂಜಾಬಿನ ಅಂದಿನ ರಾಜ್ಯಪಾಲರಾಗಿದ್ದ ಸಿದ್ಧಾರ್ಥ ಶಂಕರ್ ರಾಯ್ ಮತ್ತು ಪೊಲೀಸ್ ವರಿಷ್ಠಾಧಿಕಾರಿ ರಿಬೇರೊ ದಾಖಲಿಸಿದ್ದಾರೆ. ಇವರು ಕಮ್ಯುನಿಸ್ಟ್ ಪಕ್ಷಗಳ ಪಕ್ಷಪಾತಿಗಳೇನೂ ಆಗಿರಲಿಲ್ಲ. ಸ್ವಲ್ಪ ವಿಷಯಾಂತರ ವಾದರೂ ಭಾರತದ ಕಮ್ಯುನಿಸ್ಟರು ರಾಷ್ಟ್ರದ ಸ್ವಾತಂತ್ರ್ಯ ಮತ್ತು ಸ್ವಾಯತ್ತತೆ ಬಗೆಗೆ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ ಎಂಬುದನ್ನು ಪ್ರಸ್ತಾಪಿಸುವ ನಿಟ್ಟಿನಲ್ಲಿ ಮೇಲಿನ ಉದಾಹರಣೆಗಳನ್ನು ನೀಡಲಾಗಿದೆ, ಅಷ್ಟೆ.

ಇರಲಿ... ಆದರೆ ಇತ್ತೀಚಿನ ದಶಕಗಳಲ್ಲಿ ಹುಟ್ಟಿರುವ ಈ ನವ ಚಳವಳಿಗಳ ಬಗೆಗೆ ನಮ್ಮ ರಾಷ್ಟ್ರದ ಎಡಪಕ್ಷಗಳು ಯಾವ ನಿಲುವನ್ನು ತಳೆದಿವೆ ? ಸಮಷ್ಟಿಯ ಹಿತದಲ್ಲಿ ಜರುಗುವ ಹೋರಾಟಗಳಲ್ಲಿ ಇಂತಹ ಚಳವಳಿಗಳಿಗೂ ಒಂದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸ್ಪೇಸ್ ಇದೆ ಎಂಬುದನ್ನು ಅವು ಗಂಭೀರವಾಗಿ ಪರಿಗಣಿಸಿವೆಯೇ ? ಯಾವುದೇ ಒಂದು ಸಾಮೂಹಿಕ ಚಳವಳಿಯಲ್ಲಿ ಸಾದೃಶ್ಯ ಇಲ್ಲದ ಮತ್ತು ಸ್ಪಷ್ಟವಾದ ವ್ಯತಿರಿಕ್ತ ಪ್ರವೃತ್ತಿಗಳು ಜೊತೆಜೊತೆಯಲ್ಲಿರುತ್ತವೆ. ಉದಾಹರಣೆಗಾಗಿ, ನಾವು ನಮ್ಮ ವಿಮೋಚನಾ ಹೋರಾಟದತ್ತ ಗಮನ ಹರಿಸಬಹುದು. ಬೂರ್ಷ್ವಾಸಿ ವರ್ಗವೂ ಅದರಲ್ಲಿ ಭಾಗವಹಿಸಿತ್ತು. ಹಾಗೆಯೇ, ಧಾರ್ಮಿಕ, ಮತೀಯ ಮತ್ತು ಜಾತೀಯ ಶಕ್ತಿಗಳ ಪಾತ್ರವೂ ಇತ್ತು. ಕ್ರಾಂತಿಕಾರಿಗಳೂ ಇದ್ದರು. ಅಹಿಂಸಾ ಪ್ರತಿಪಾದಕರ ಕೊಡುಗೆಯೂ ಇತ್ತು. ಆ ಸಮಗ್ರ ಹೋರಾಟವನ್ನು ಒಂದು ಕಲೈಡೋಸ್ಕೋಪ್ (Kaleidoscope)ಗೆ ಹೋಲಿಸಬಹುದು. ಒಂದು ಚಳವಳಿಯಲ್ಲಿ ಇಂತಹ ಶಕ್ತಿಗಳು ಇದ್ದೇ ಇರುತ್ತವೆ. ನಾವು ಬೆಂಬಲ ನೀಡುವ ವಿಷಯಗಳು / ಬೇಡಿಕೆಗಳ ಬಗೆಗೆ ಆ ಚಳವಳಿ ಪೂರಕವಾದ ನಿಲುವನ್ನು ಹೊಂದಿದೆಯೇ ಎಂಬ ವಿಷಯ ಪ್ರಮುಖವಾಗುತ್ತದೆ. ಹಾಗಿದ್ದಾಗ, ಅಂತಹ ಚಳವಳಿಗೆ/ಗಳಿಗೆ ಸಾಥ್ ನೀಡುವುದು ಪ್ರಮಾದವಾಗುತ್ತದೆಯೇ ? ಈ ವಿಷಯ ದಲ್ಲಿ ಎಡಪಕ್ಷಗಳ ವಿಶ್ಲೇಷಣೆ ಸರಿಯಾಗಿದೆಯೇ ? ಅವುಗಳ ನಿಲುಮೆಗಳು ಸಮರ್ಥನೀಯವೇ ?

ಈಗ ಎರಡು ವಿಚಾರಗಳತ್ತ ಗಮನ ಹರಿಸೋಣ. ಮೊದಲನೆಯದು, ಭೂಸ್ವಾಧೀನಕ್ಕೆ ಸಂಬಂಧಿಸಿದ ವಿಚಾರ. ಇದರ ಬಗೆಗೆ ರಾಷ್ಟ್ರಾದ್ಯಂತ ವ್ಯಾಪಕ ನೆಲೆಯಲ್ಲಿ ಚಳವಳಿಗಳು ಜರುಗುತ್ತಿವೆ. ಎಡಶಕ್ತಿಗಳನ್ನು ಒಳಗೊಂಡು ಅನೇಕ ಶಕ್ತಿಗಳು ಇವುಗಳಲ್ಲಿ ಭಾಗವಹಿಸಿವೆ. ಮಾನವ ಇತಿಹಾಸದಲ್ಲಿ, ಒಂದು ತೆರನಾದ ಕೈಗಾರಿಕೀಕರಣ ಮತ್ತು ಆರ್ಥಿಕ ಅಭಿವೃದ್ಧಿ ಸ್ವಾಭಾವಿಕ ಘಟ್ಟಗಳು ಎಂಬ ವ್ಯಾಖ್ಯಾನವನ್ನು ಬಲಪಂಥೀಯ ಮತ್ತು ಎಡಪಂಥೀಯ ಪಕ್ಷಗಳು ಮುಂದುವರಿಸುತ್ತಿವೆಯೇನೋ ಎಂದೆನಿಸುತ್ತಿದೆ. ನಮ್ಮ ಭೂಮಿ ಎದುರಿಸುತ್ತಿರುವ ಪರ್ಯಾವರಣದ ಭೀಕರ ಬಿಕ್ಕಟ್ಟನ್ನು ಗಮನದಲ್ಲಿಟ್ಟುಕೊಂಡು, (ಅಸಾಧ್ಯವಾದ) ಕೊನೆಯಿರದ ಬೆಳವಣಿಗೆಯ ಕಲ್ಪನೆಯ ಬಗೆಗೆ ಪುನರ್ವಿಮರ್ಶೆ ನಡೆಸಬೇಕಾದದ್ದು ಇಂದಿನ ತುರ್ತು. ಈ ದಿಶೆಯಲ್ಲಿ, ಎಡಪಕ್ಷಗಳು ಎತ್ತ ಸಾಗಿವೆ ?



ನೀನು ಅಕ್ಕಿ ಮಾರಿಕೊಂಡರೆ ತಪ್ಪೇನುಇಲ್ಲಾ, ಆದರೆ ಓಟು ಮಾತ್ರ ನಮಗೇ ಹಾಕಿಸಬೇಕು ಕಣಯ್ಯ

ಎರಡನೇ ವಿಚಾರ ಪರಮಾಣು ಶಕ್ತಿಗೆ ಸಂಬಂಧಿಸಿದ್ದು. ಒಂದು ಪ್ರಬಲ ರಾಷ್ಟ್ರ ಪ್ರಭುತ್ವದಲ್ಲಿ ಪರಮಾಣು ಶಕ್ತಿ ಕೇಂದ್ರಸ್ಥವಾಗಿರಬೇಕೆಂಬ ಕಲ್ಪನೆ, ಎಡಪಕ್ಷಗಳ ಗ್ರಹಿಕೆಯಲ್ಲಿ ಮುಂದುವರಿಯುತ್ತಿದೆಯೇನೋ ಎಂದು ಭಾಸವಾಗುತ್ತಿದೆ. ಕೇಂದ್ರ ಸರ್ಕಾರ ಪಶ್ಚಿಮ ಬಂಗಾಳದ ಹರಿಪುರದಲ್ಲಿ ಒಂದು ಬೃಹತ್ ಪರಮಾಣು ಶಕ್ತಿ ಕೇಂದ್ರವನ್ನು ಸ್ಥಾಪಿಸಲು ಉದ್ದೇಶಿಸಿದೆ. ಇದಿರುವುದು ಜನನಿಬಿಡ ಗಂಗಾ ನದೀ ಮುಖಜ ಭೂಮಿ (ಡೆಲ್ಟಾ) ಪ್ರದೇಶದಲ್ಲಿ. ಈ ಯೋಜನೆಯಿಂದ ಸಂಭವಿಸ ಬಹುದಾದ ಪರಿಸರ ಮತ್ತು ಸಾಮಾಜಿಕ ಪರಿಣಾಮಗಳನ್ನು ಊಹಿಸಿಕೊಂಡರೇ ಸಾಕು, ಹೆದರಿಕೆಯಾಗುತ್ತದೆ. ಆದರೆ ಇಂತಹ ಯೋಜನೆಗೆ ಎಡರಂಗದ ಬೆಂಬಲವಿರುವುದು ಅಚ್ಚರಿಯ ಮತ್ತು ಸಂಕಟದ ವಿಷಯವೇ ಸರಿ. ಹಿಂದೆ, ಕರ್ನಾಟಕದಲ್ಲಿ, ಕೈಗಾ ಅಣುಸ್ಥಾವರ ವಿಷಯದಲ್ಲೂ ಮುಖ್ಯವಾಹಿನಿಯಲ್ಲಿರುವ ಎರಡು ಎಡಪಕ್ಷಗಳು ಬೆಂಬಲ ನೀಡಿದ್ದನ್ನು ಸ್ಮರಿಸಬಹುದು. ಈ ನಿಟ್ಟಿನಲ್ಲಿ, ಎಡಪಕ್ಷಗಳ ನಿಲುವು ಸರಿಯಾಗಿದೆಯೇ ? ಎಂಬ ಪ್ರಶ್ನೆ ಉದ್ಭವಿಸುತ್ತದೆ.

ಚಳವಳಿಗಳು ಮತ್ತು ಎಡಪಕ್ಷಗಳ ಬಗೆಗೆ ವಿಚಾರ ಮಾಡುತ್ತಿರುವಾಗ, ೧೯೦೫ರಲ್ಲಿ ರಷ್ಯಾದಲ್ಲಿ ಜರುಗಿದ ವಿಫಲಕ್ರಾಂತಿಯ ಬಗೆಗೆ ಲೆನಿನ್ ೧೯೧೬ರಲ್ಲಿ ಆಡಿದ ಮಾತುಗಳು ಜ್ಞಾಪಕಕ್ಕೆ ಬರುತ್ತವೆ. "ಯಾರಾದರೂ ಒಂದು ಶುದ್ಧ ಸಾಮಾಜಿಕ ಕ್ರಾಂತಿಯನ್ನು ನಿರೀಕ್ಷಿಸಿದರೆ; ಅದು ಅವನ ಜೀವಿತಾವಧಿಯಲ್ಲಿ ಕಾಣಲು ಸಾಧ್ಯವಿಲ್ಲ (ಸಂಭವನೀಯವಲ್ಲ). ಅಂತಹ ವ್ಯಕ್ತಿ ಕ್ರಾಂತಿಯನ್ನು ಸರಿಯಾಗಿ ಗ್ರಹಿಸದೆ ಅದಕ್ಕೆ ನುಡಿಗಳ ಸೇವೆಯನ್ನು ಮಾತ್ರ ನೀಡುತ್ತಾನೆ. ೧೯೦೫ರಲ್ಲಿ ಜರುಗಿದ ರಷ್ಯಾದ ಕ್ರಾಂತಿ ಒಂದು ಬೂರ್ಷ್ವಾ – ಪ್ರಜಾಸತ್ತಾತ್ಮಕ ಕ್ರಾಂತಿಯಾಗಿತ್ತು. ಅದರಲ್ಲಿ, ಅತೃಪ್ತ ಜನರ ವರ್ಗಗಳು, ಗುಂಪುಗಳು ಮತ್ತು ವ್ಯಕ್ತಿಗಳು ಸರಣಿ ಹೋರಾಟಗಳಲ್ಲಿ ತೊಡಗಿದ್ದರು. ಅವರಲ್ಲಿ ಅತ್ಯಂತ ಅಸಂಸ್ಕೃತ, ಪೂರ್ವಗ್ರಹ ವಿರುವ ಜನರಿದ್ದರು; ಜಪಾನಿ ಹಣ ಸ್ವೀಕರಿಸುವ ಸಣ್ಣ ಗುಂಪುಗಳು, ಸಟ್ಟಾ ವ್ಯಾಪಾರಿಗಳು, ಕುಟಿಲ ಜೀವಿಗಳು ಮುಂತಾದವರು ಇದ್ದರು. ಆದರೆ ವಸ್ತುನಿಷ್ಠವಾಗಿ, ಈ ಸಾಮೂಹಿಕ ಆಂದೋಳನ ಝಾರ್‌ವಾದವನ್ನು ಬಗ್ಗು ಬಡಿಯುತ್ತಿತ್ತು ಮತ್ತು ಪ್ರಜಾಪ್ರಭುತ್ವ ವ್ಯವಸ್ಥೆಯತ್ತ ಚಲಿಸುತ್ತಿತ್ತು" ಎಂಬ ಆತನ ನುಡಿಗಳು ಮನನಯೋಗ್ಯ.

ಅಲ್ಲದೆ, ಅತ್ಯಂತ ಅಧಿಕ ಸಂಖ್ಯೆಯ ಜನರನ್ನು ಬಾಧಿಸುವ ವಿಷಯಗಳ ಸುತ್ತ ದೊಡ್ಡ ಮಟ್ಟದ ಸಾಮೂಹಿಕ ಚಳವಳಿಗಳು ಜನ್ಮ ತಳೆಯುತ್ತವೆ. ಇದು ಪ್ರಪಂಚದಾದ್ಯಂತ ಜರುಗಿರುವ/ಜರುಗುತ್ತಿರುವ ಸಾಮೂಹಿಕ ಚಳವಳಿಗಳ ಪ್ರಧಾನ ಲಕ್ಷಣ. ಅವು ಒಂದು ಸಾಮಾನ್ಯೀಕೃತ, ಆದರೆ ವ್ಯಾಪಕ ಕಾಳಜಿಯ ವಿಚಾರಕ್ಕೆ ಸ್ಪಂದಿಸುವ ಸಾಧ್ಯತೆಗಳೂ ಇರುತ್ತವೆ. ವಿಭಾಗಗಳು ಎಷ್ಟೇ ದೊಡ್ಡದಿದ್ದರೂ ವಿಭಾಗೀಯ ವಿಷಯಗಳ ಸುತ್ತ ಚಳವಳಿಗಳು ಬೆಳೆಯುವುದಿಲ್ಲ. ಇಲ್ಲಿ, ಚಳವಳಿಗಳು ಎಷ್ಟು ಶಕ್ತಿಯುತವಾಗಿರುತ್ತವೆ ? ಎಷ್ಟು ಪರಿಣಾಮಗಳನ್ನು ಬೀರುತ್ತವೆ ? ಎಂಬುದು ಮುಖ್ಯ ಪ್ರಶ್ನೆಗಳಾಗುತ್ತವೆ.

ಈ ನಿಟ್ಟಿನಲ್ಲಿ ಮುಂಬರುವ ದಿನಗಳಲ್ಲಿ, ನಮ್ಮ ನಾಡನ್ನು ಬಾಧಿಸುತ್ತಿರುವ ಕೆಲವು ಜ್ವಲಂತ ಸಮಸ್ಯೆಗಳ ವಿಷಯದಲ್ಲಾದರೂ ಎಡಪಕ್ಷಗಳು ಮತ್ತು ನವ ಸಾಮೂಹಿಕ ಚಳವಳಿಗಳ ನಡುವೆ, ಒಂದು ಸಾಮಾನ್ಯ ಕನಿಷ್ಠ ಕಾರ್ಯಕ್ರಮದಡಿ, ಬಾಂಧವ್ಯ / ಸಾಂಗತ್ಯ ನೆಲೆ ಗೊಳ್ಳುವುದೇ ? ಕಾಲವೇ ಇದಕ್ಕೆ ಉತ್ತರ ನೀಡುತ್ತದೆ. ಅಲ್ಲವೇ ?

ಆಧಾರ : **ಹಲವು ಮೂಲಗಳು**

**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೪, ೩ನೇ ಅಡ್ಡರಸ್ತೆ, ರಾಜ್ ಗಾರ್ಡನಿಯಾ ಲೇಔಟ್
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧

**ವಿ. ಚಂದ್ರಶೇಖರ ನಂಗಲಿ**





# ಕುವೆಂಪು ಮತ್ತು ನೋಮ್‌ಚಾಮ್‌ಸ್ಕಿ

ಆಧುನಿಕ ಕನ್ನಡ ಸಾಹಿತ್ಯದಲ್ಲಿ 'ವಿಚಾರ ಸಾಹಿತ್ಯ'ವನ್ನು ಒಂದು ಸಾಹಿತ್ಯ ಪ್ರಕಾರವನ್ನಾಗಿ ಗ್ರಹಿಸಿ ನಿರೂಪಿಸಿದ ಶ್ರೇಯಸ್ಸು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿದ್ದ ಡಾ॥ ಜಿ. ಎಸ್. ಶಿವರುದ್ರಪ್ಪ ಅವರಿಗೆ ಸಲ್ಲುತ್ತದೆ. ೧೯೭೭ರಲ್ಲಿ ಮೊದಲ ಬಾರಿಗೆ ಪದವಿ ಮಟ್ಟದಲ್ಲಿ ಕನ್ನಡ ಸಾಹಿತ್ಯವನ್ನು ಅಭ್ಯಸಿಸುವ ವಿದ್ಯಾರ್ಥಿಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು 'ವಿಚಾರ ಸಾಹಿತ್ಯ'ವೆಂಬ ಸಾಹಿತ್ಯ ಪ್ರಕಾರದ ಅಗತ್ಯವನ್ನು ಅನುಷ್ಠಾನಗೊಳಿಸಿದವರು ಡಾ॥ ಜಿ. ಎಸ್. ಶಿವರುದ್ರಪ್ಪ. ಆಗ ನಮ್ಮ ದೇಶವು ಎದುರಿಸುತ್ತಿದ್ದ 'ತುರ್ತು ಪರಿಸ್ಥಿತಿ'ಯೆಂಬ ರಾಜಕೀಯ ಘೋಷಣೆಯನ್ನು ಗಮನಿಸಿದಲ್ಲಿ, 'ವಿಚಾರ ಸಾಹಿತ್ಯ'ದ ಅನಿವಾರ್ಯತೆ ಏನೆಂಬುದು ಯಾರಿಗಾದರೂ ಮನದಟ್ಟಾಗುತ್ತದೆ. ಪ್ರಜಾಪ್ರಭುತ್ವಕ್ಕೆ ಒದಗಿದ ಗಂಡಾಂತರ, ಉನ್ನತ ಶಿಕ್ಷಣಕ್ಷೇತ್ರದ ಪಠ್ಯಪುಸ್ತಕ ನಿರ್ಮಾಣ, ಕನ್ನಡಕ್ಕೆ ಅಪರಿಚಿತವಾದ ಹೊಸಬಗೆಯ ಸಾಹಿತ್ಯ ಪ್ರಕಾರ – ಈ ಮೂರು ನೆಲೆಗಳ ಅಪೂರ್ವ ಸಾಂಗತ್ಯವನ್ನಿಲ್ಲಿ ಮನಗಾಣಬೇಕು. 'ವಿಚಾರ ಸಾಹಿತ್ಯ-೧' ಎಂಬ ಈ ಕೃತಿಯ ಮುನ್ನುಡಿಯಲ್ಲಿ ಡಾ॥ ಜಿ. ಎಸ್. ಶಿವರುದ್ರಪ್ಪನವರ ನುಡಿಗಳಿವು :

"...ವಿಚಾರವಂತಿಕೆ ಎಂಬುದು ಮನುಷ್ಯನನ್ನು ಇತರ ಪ್ರಾಣಿವರ್ಗದಿಂದ ಪ್ರತ್ಯೇಕಿಸುವ ಒಂದು ಪ್ರಮುಖ ಲಕ್ಷಣವಾಗಿದೆ. ಆದರೂ ನಿಜವಾಗಿಯೂ ವಿಚಾರವಂತರಾದವರು ಎಲ್ಲೋ ಕೆಲವೇ ಕೆಲವರು ಮಾತ್ರ! ಇನ್ನೂ ಬಹುಸಂಖ್ಯಾತರು ಏನನ್ನೂ ಪ್ರಶ್ನಿಸದೆ, ವಿಚಾರ ಮಾಡದೆ ಅಥವಾ ಅವರಿವರ ವಿಚಾರಗಳ ಮೇಲೆ ಬದುಕುತ್ತಾ ಕಾಲ ತಳ್ಳುತ್ತಾರೆ. ಬಹುಸಂಖ್ಯಾತರ ಬುದ್ಧಿಶಕ್ತಿಯನ್ನು ಸದಾ ನಿಯಂತ್ರಣಗೊಳಿಸುತ್ತಾ ಅವರು ಎಂದೂ ವಿಚಾರ ಮಾಡಲು ಅವಕಾಶವನ್ನು ಕೊಡದಂತೆ ತಡೆಹಿಡಿಯುವ, ಪರಂಪರಾಗತವಾದ ಅನೇಕ ಶೋಷಕ ತಂತ್ರಗಳೇ ಇದಕ್ಕೆ ಮುಖ್ಯ ಕಾರಣಗಳೆನ್ನಬಹುದು. ಇಂಥ ಶಕ್ತಿಗಳ ಎದುರು ಪ್ರತಿಭಟಿಸುವ ವಿಚಾರವಂತಿಕೆ ಇಂದು ಅತ್ಯಂತ ಅಗತ್ಯವಾಗಿದೆ..."

ಮೇಲ್ಕಂಡಂತೆ, 'ವಿಚಾರ ಸಾಹಿತ್ಯ'ವೆಂಬ ಸಾಹಿತ್ಯ ಪ್ರಕಾರದ ನಾಮಕರಣಕ್ಕೂ ಮುಂಚೆಯೇ ಮತ್ತು ನಮ್ಮ ದೇಶದ ಸ್ವಾತಂತ್ರ್ಯಪ್ರಾಪ್ತಿಗೂ ಮೊದಲೇ ಈ ಬಗೆಯ ಸಾಹಿತ್ಯದ ಅಗತ್ಯವನ್ನು ಮನಗಂಡು ರೂಪಿಸಿದ ಶ್ರೇಯಸ್ಸು ಕಾಡಿನ ಕವಿ ಕುವೆಂಪು ಅವರಿಗೆ ಸಲ್ಲುತ್ತದೆ. ೧೯೪೪ರಲ್ಲಿ ಪ್ರಕಟವಾದ ಕುವೆಂಪು ಅವರ 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ' – ಎಂಬ ಪುಸ್ತಕ ಮತ್ತು ೧೯೪೭ರಲ್ಲಿ ಪ್ರಕಟವಾದ ಶಿವರಾಮ ಕಾರಂತರ 'ಬಾಳ್ವೆಯೇ ಬೆಳಕು' ಎಂಬ ಪುಸ್ತಕ – ಇವೆರಡು ಕೃತಿಗಳನ್ನು ಕನ್ನಡ ವಿಚಾರ ಸಾಹಿತ್ಯದ 'ಮುಂದಿನ ನೇಗಿಲು'

'ನಿರಂಕುಶ' ಎಂಬ ಶಬ್ದವನ್ನು ಪಾಸಿಟಿವ್ ಮತ್ತು ನೆಗೆಟಿವ್ ಎರಡೂ ನೆಲೆಗಳಲ್ಲಿ ಬಳಸುತ್ತಿದ್ದಾರೆ. ಸಾರ್ವಜನಿಕರ ವ್ಯಕ್ತಿತ್ವ ವಿಕಾಸವನ್ನು ಲಕ್ಷ್ಯದಲ್ಲಿ ಇಟ್ಟುಕೊಂಡು 'ನಿರಂಕುಶಮತಿತ್ವ' ಎಂದು ಹೇಳಿದರೆ, ಸಾರ್ವಜನಿಕರನ್ನು ಹಿಡಿತದಲ್ಲಿ ಇಟ್ಟುಕೊಂಡಿರುವ ಪಟ್ಟಭದ್ರ ಹಿತಾಸಕ್ತಿಗಳನ್ನು 'ನಿರಂಕುಶ ಪ್ರಭುತ್ವ' ಎಂದು ಗುರುತಿಸುತ್ತಿದ್ದಾರೆ. ಪ್ರಜಾಪ್ರಭುತ್ವಕ್ಕೆ ಸಂಬಂಧಪಟ್ಟಂತೆ ಜನಪ್ರಿಯವಾದ ವಿವರಣೆಯೆಂದರೆ, ಪ್ರಜೆಗಳಿಂದ ಪ್ರಜೆಗಳಿಗಾಗಿ ಪ್ರಜೆಗಳೇ ನಡೆಸುವ ಸರ್ಕಾರ. ಆದರೆ, ಭಾರತವೂ ಸೇರಿದಂತೆ ಪ್ರಪಂಚದ ಅನೇಕ ದೇಶಗಳಲ್ಲಿ ಪ್ರಜಾಪ್ರಭುತ್ವದ ಹೆಸರಿನಲ್ಲಿ ನಿರಂಕುಶ ಪ್ರಭುತ್ವಗಳೇ ಮೆರೆಯುತ್ತಿರುವುದು ಯಥಾರ್ಥ ಸತ್ಯ. ಈ ದಿಸೆಯಲ್ಲಿ ಅಮೆರಿಕ ದೇಶವು ಜಗತ್ತಿಗೆ ದೊಡ್ಡಣ್ಣನಾಗಿ ಮೆರೆಯುತ್ತಿದೆ. ಇದನ್ನು 'ಅಮೆರಿಕನಿಸಂ' (ಪುಟ ೨೪–೨೫) ಎಂದು ಚಾಮ್‌ಸ್ಕಿ ಕರೆದಿದ್ದಾರೆ. ಈ ಬಗೆಯ ನಿರಂಕುಶ ಪ್ರಭುತ್ವಗಳ 'ಹಿಡನ್ ಅಜೆಂಡ' (= ಗುಪ್ತ ಉದ್ದೇಶ)ವನ್ನು ಚಾಮ್‌ಸ್ಕಿ ಹೀಗೆ ವಿವರಿಸಿದ್ದಾರೆ : ಡಿವೈಡ್ ದಿ ಪೀಪಲ್, ಡಿಸ್‌ಟ್ರ್ಯಾಕ್ಟ್ ದಿ ಪೀಪಲ್, ಡೈರೆಕ್ಟ್ ದಿ ಪೀಪಲ್ (= ಪ್ರಜೆಗಳನ್ನು ವಿಭಜಿಸು, ದಿಕ್ಕು ತಪ್ಪಿಸು, ನಿರ್ದೇಶಿಸು). ಇದೇ ನಾವಿಂದು ಅನುಭವಿಸುತ್ತಿರುವ ಪ್ರಜಾಪ್ರಭುತ್ವಗಳ ನೈಜ ವ್ಯಾಖ್ಯಾನ.

(= ಕೋಲಾರದ 'ಮುಂದರ ಮಡಕ' ಎಂಬ ತೆಲುಗು ನುಡಿಗಟ್ಟಿನ ಕನ್ನಡ ಅನುವಾದ) ಎಂದೇ ಕರೆಯಬೇಕಾಗಿದೆ. ಆಧುನಿಕ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಪ್ರಬಂಧ ಸಾಹಿತ್ಯ, ವಿಮರ್ಶಾ ಸಾಹಿತ್ಯ, ಪ್ರವಾಸ ಸಾಹಿತ್ಯ, ಆತ್ಮಚರಿತ್ರೆ, ಜೀವನಚರಿತ್ರೆ ಮುಂತಾದ ಬಗೆ ಬಗೆಯ ಗದ್ಯ ಪ್ರಕಾರಗಳು ಪಡೆದಿರುವ ಮನ್ನಣೆಯನ್ನು ಗಮನಿಸಿದರೆ – 'ವಿಚಾರ ಸಾಹಿತ್ಯ' ಪ್ರಕಾರವು ಮೂಲೆಗುಂಪಾಗಿರುವುದು ಸ್ಪಷ್ಟವಾಗುತ್ತದೆ. ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯು ಪ್ರತಿವರ್ಷ ಕೊಡುತ್ತಿರುವ ಪುಸ್ತಕ ಬಹುಮಾನಗಳ 'ಪ್ರಕಾರ ಪಟ್ಟಿ'ಯಲ್ಲಿ 'ವಿಚಾರ ಸಾಹಿತ್ಯ'ಕ್ಕೆ ಎಡೆಯಿಲ್ಲ. ಕುವೆಂಪು ಮತ್ತು ಕಾರಂತರ ನಂತರ 'ವಿಚಾರ ಸಾಹಿತ್ಯ'ವನ್ನು ಕೈ ಹಿಡಿದು ನಡೆಸಿದವರು ಯಾರ‍್ಯಾರು ? ಕನ್ನಡದ ವಿಚಾರ ಸಾಹಿತ್ಯದ ಪ್ರಮುಖ ಕೃತಿಗಳು ಯಾವುವು ? ಎಂಬುದನ್ನು ಮರುಚಿಂತನೆ ಮಾಡಬೇಕಾಗಿದೆ. ಈ ದಿಸೆಯಲ್ಲಿ ಯಾರಾದರೂ 'ಕನ್ನಡದಲ್ಲಿ ವಿಚಾರ ಸಾಹಿತ್ಯ' – ಒಂದು ಸಾಂಸ್ಕೃತಿಕ ಅಧ್ಯಯನವೆಂಬ ಪಿಎಚ್.ಡಿ. ಮಹಾ ಪ್ರಬಂಧವನ್ನೇ ರೂಪಿಸಬಹುದು. ಈ ಸಂದರ್ಭದಲ್ಲಿ 'ಕವಿರಾಜಮಾರ್ಗ'ದಿಂದ ಹಿಡಿದು ಪ್ರಸ್ತುತಕಾಲದವರೆಗೆ ಕನ್ನಡದ ವಾಙ್ಮಯ ಪರಂಪರೆಯಲ್ಲಿ, ವಿಶೇಷವಾಗಿ ಸಾಹಿತ್ಯಕೃತಿಗಳಲ್ಲಿರುವ ಸುವಿಚಾರ ಸೋಪಾನ ಸರಣಿಯು 'ವಿಚಾರ ಸಾಹಿತ್ಯ'ವೆಂಬ ಸಾಹಿತ್ಯ ಪ್ರಕಾರದ ವ್ಯಾಪ್ತಿಗೊಳಪಡುವುದಿಲ್ಲವೆಂಬುದನ್ನು ಮರೆಯಬಾರದು.

ಪ್ರಸ್ತುತ, ಸ್ಥಳೀಯ ಭೂಗೋಳದ ನೆಲೆಯಲ್ಲಿ ಕನ್ನಡದ ಮೂಲಕ ಕುವೆಂಪು ಮತ್ತು ವಿಶ್ವಾತ್ಮಕ ನೆಲೆಯಲ್ಲಿ ಇಂಗ್ಲಿಷ್ ಮೂಲಕ ನೋಮ್‌ಚಾಮ್‌ಸ್ಕಿ ಉದ್ದೇಶಿಸಿದ ವೈಚಾರಿಕ ಜಾಗ್ರತಿಯನ್ನು ತೌಲನಿಕ ದೃಷ್ಟಿಯಿಂದ ವಿವೇಚಿಸಬಹುದು. 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ' (೧೯೪೪) ಎಂಬ ಪುಸ್ತಕ ಮತ್ತು 'ಮೀಡಿಯಾ ಕಂಟ್ರೋಲ್' (ಭಾರತೀಯ ಆವೃತ್ತಿ : ೨೦೦೩) ಎಂಬ ಪುಸ್ತಕ – ಇವುಗಳ ಭಾಷೆ ಮತ್ತು ಸಂವಿಧಾನ ಬೇರೆ ಬೇರೆಯಾದರೂ ಗುರಿ ಒಂದೇ ಆಗಿದೆ. ಸಾರ್ವಜನಿಕರ ಮತಿಯನ್ನು ಅಂಕುಶಗಳಿಂದ ಮುಕ್ತಗೊಳಿಸುವುದು ಹೇಗೆ ? ಎಂಬುದನ್ನೇ ಕುವೆಂಪು ಮತ್ತು ನೋಮ್‌ಚಾಮ್‌ಸ್ಕಿ ಇಲ್ಲಿ ಚರ್ಚಿಸುತ್ತಿದ್ದಾರೆ. ಚಾಮ್‌ಸ್ಕಿಯ ಕಾಲಮಾನ ಮತ್ತು ಕುವೆಂಪು ಕಾಲಮಾನಗಳು ಬೇರೆ ಬೇರೆಯಾದರೂ ವ್ಯಕ್ತಿ ಮತ್ತು ಸಮಾಜಗಳ ಸಂಬಂಧದಲ್ಲಿ ತಳೆಯಬೇಕಾದ ಒಲವು–ನಿಲುವುಗಳ ಆಂತರಿಕ ಸತ್ವದಲ್ಲಿ ವ್ಯತ್ಯಾಸಗಳಿಲ್ಲ... ಸಾರ್ವಜನಿಕರ ಮತಿಯನ್ನು ಅಪಹರಣ ಮಾಡುತ್ತಿರುವ ಮೀಡಿಯಾ ಕಂಟ್ರೋಲುಗಳಿಂದ ಹೇಗೆ ಪಾರಾಗಬೇಕೆಂಬುದನ್ನು ಕುವೆಂಪು ಹೇಳಿದರೆ, ಸಾರ್ವಜನಿಕರು ತಮ್ಮ ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಬೇಕಾದ ಅನಿವಾರ್ಯತೆಯನ್ನು ಚಾಮ್‌ಸ್ಕಿ ಹೇಳುತ್ತಿದ್ದಾರೆ. ಆದ್ದರಿಂದ, ಇವೆರಡು ಪುಸ್ತಕಗಳ ಶೀರ್ಷಿಕೆಯನ್ನು ಅದಲು–ಬದಲು ಮಾಡಿದಲ್ಲಿ ಉದ್ದೇಶ ಭಂಗ ವಾಗುವುದಿಲ್ಲ. ಗುರಿಸಾಧನೆಯ ದೃಷ್ಟಿಯಲ್ಲಿ ಕುವೆಂಪು ಮತ್ತು ಚಾಮ್‌ಸ್ಕಿ ಅವರ ಸಮಾನ ಧರ್ಮವನ್ನಿಲ್ಲಿ ಮನಗಾಣಬೇಕು. ಕನ್ನಡದಲ್ಲಿ ಹೇಳಿದ್ದು ಕೀಳು, ಇಂಗ್ಲಿಷ್‌ನಲ್ಲಿ ಹೇಳಿದ್ದು ಮೇಲು ಎಂಬ ಪೂರ್ವಗ್ರಹ ಬುದ್ಧಿಯುಳ್ಳವರಿಗೆ ಈ ತೌಲನಿಕ ದೃಷ್ಟಿ ಅಪಥ್ಯವೆನಿಸಬಹುದು.

ಆಹ್ವಾನ ಮತ್ತು ವಿಸರ್ಜನ ತತ್ವದ ನೆಲೆಯಲ್ಲಿ ನಿಂತು ಕುವೆಂಪು ವಿಚಾರ ಮಂಡನೆ ಮಾಡುತ್ತಾ 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ' ಎಂಬ ಭಾಷಣವನ್ನು ಪ್ರಸ್ತುತಪಡಿಸಿದ್ದಾರೆ :

**ಆಹ್ವಾನಕ್ಕೆ :** ನಾನು ಹೇಳಲಿರುವ ಅಭಿಪ್ರಾಯಗಳು ಅಲ್ಪಾಲೋಚನೆಯಿಂದಾಗಲಿ, ಉದ್ರೇಕದ ಬುದ್ಧಿಯಿಂದಲಾಗಲಿ, ಅನುದಾರತೆಯಿಂದಾಗಲಿ, ಪ್ರತಿಹಿಂಸಾಭಾವ ದಿಂದಾಗಲಿ ಬಂದುವಲ್ಲ; ಬಹುಕಾಲದ ದೀರ್ಘಮಂಥನದಿಂದ, ಪ್ರಶಾಂತ ಧ್ಯಾನದಿಂದ, ಅನ್ಯಾಯಗಳನ್ನೂ ಅವಿವೇಕಗಳನ್ನೂ ಅಜ್ಞಾನ ಜನ್ಯವಾದ ಕ್ರೂರವರ್ತನೆಗಳನ್ನೂ ಕಂಡಾಗ ಮೂಡಿದ ಸಾತ್ವಿಕ ಕ್ರೋಧದಿಂದ, ನಮ್ಮ ದೇಶ ನಮ್ಮ ನಾಡು ನಮ್ಮ ಭಾಷೆ ನಮ್ಮ ಸಂಸ್ಕೃತಿ ನಮ್ಮ ಸ್ಥಿತಿಗತಿಗಳು ಉಚ್ಛ್ರಾಯ ವಾಗಬೇಕೆಂಬ ಹಂಬಲದಿಂದ ಮೂಡಿದುವಾಗಿವೆ.

**ವಿಸರ್ಜನಕ್ಕೆ :** ಆದ್ದರಿಂದ ಯಾರೊಬ್ಬರೂ ನನ್ನ ಮಾತುಗಳನ್ನು ಪಚನಮಾಡದೆ ನುಂಗದಿರಲಿ; ಮತಿಯ ಒರೆಗಲ್ಲಿಗೆ ಹಚ್ಚದೆ ಸ್ವೀಕರಿಸದಿರಲಿ; ಧೀರವಾಗಿ ವಿಮರ್ಶಿಸದೆ ಒಪ್ಪದಿರಲಿ; ಆದರೆ ಪಕ್ಷಪಾತವಿಲ್ಲದೆ ಕಿವಿಗೊಟ್ಟು ಮಾತ್ರ ಕೇಳಿ.

ಇಲ್ಲಿ ಕುವೆಂಪು ಅವರು ವಿಚಾರ ಕಾಂತಿಯ ಆಸ್ವಾದನೆಗೆ ಕರೆಕೊಡುತ್ತಿರು ವಾಗಲೇ ತನ್ನ ಅಭಿಪ್ರಾಯಗಳನ್ನು ಕುರುಡಾಗಿ ಒಪ್ಪಬಾರದೆಂದೂ

ವಿಜ್ಞಾಪಿಸಿಕೊಳ್ಳುತ್ತಿದ್ದಾರೆ. ಇದನ್ನೇ ಆಹ್ವಾನ ಮತ್ತು ವಿಸರ್ಜನ ತತ್ವವೆಂದು ಸೂಚಿಸಲಾಗಿದೆ.

**೧. ನಿರಂಕುಶ ಮತಿತ್ವ V/s ನಿರಂಕುಶ ಪ್ರಭುತ್ವ**

*ಯುವಕರು 'ನಿರಂಕುಶಮತಿ'ಗಳಾಗಬೇಕು. ನಿರಂಕುಶ ಮತಿತ್ವ ಎಂದರೆ ನಿರಂಕುಶ ಪ್ರಭುತ್ವದಂತೆ ಎಂದು ತಿಳಿಯ ಬಾರದು. ನಿರಂಕುಶ ಪ್ರಭುತ್ವದ ಲಕ್ಷಣವೆಂದರೆ ವಿವೇಕ ಹೀನವಾದ ಸ್ವಚ್ಛಂದ ವರ್ತನೆ. ಸಂಯಮಪೂರ್ಣವಾದ ಬುದ್ಧಿ ಸ್ವಾತಂತ್ರ್ಯವೆ ನಿರಂಕುಶಮತಿ...*

ಇಲ್ಲಿ ಕುವೆಂಪು 'ನಿರಂಕುಶ' ಎಂಬ ಶಬ್ದವನ್ನು ಪಾಸಿಟಿವ್ ಮತ್ತು ನೆಗೆಟಿವ್ ಎರಡೂ ನೆಲೆಗಳಲ್ಲಿ ಬಳಸು ತ್ತಿದ್ದಾರೆ. ಸಾರ್ವಜನಿಕರ ವ್ಯಕ್ತಿತ್ವ ವಿಕಾಸವನ್ನು ಲಕ್ಷ್ಯದಲ್ಲಿ ಇಟ್ಟುಕೊಂಡು 'ನಿರಂಕುಶಮತಿತ್ವ' ಎಂದು ಹೇಳಿದರೆ, ಸಾರ್ವಜನಿಕರನ್ನು ಹಿಡಿತದಲ್ಲಿಟ್ಟುಕೊಂಡಿರುವ ಪಟ್ಟಭದ್ರ ಹಿತಾಸಕ್ತಿಗಳನ್ನು 'ನಿರಂಕುಶ ಪ್ರಭುತ್ವ' ಎಂದು ಗುರುತಿಸು ತ್ತಿದ್ದಾರೆ. ಪ್ರಜಾಪ್ರಭುತ್ವಕ್ಕೆ ಸಂಬಂಧಪಟ್ಟಂತೆ ಜನಪ್ರಿಯವಾದ ವಿವರಣೆಯೆಂದರೆ, ಪ್ರಜೆಗಳಿಂದ ಪ್ರಜೆಗಳಿಗಾಗಿ ಪ್ರಜೆಗಳೇ ನಡೆಸುವ ಸರ್ಕಾರ. ಆದರೆ, ಭಾರತವೂ ಸೇರಿದಂತೆ ಪ್ರಪಂಚದ ಅನೇಕ ದೇಶ ಗಳಲ್ಲಿ ಪ್ರಜಾಪ್ರಭುತ್ವದ ಹೆಸರಿನಲ್ಲಿ ನಿರಂಕುಶ ಪ್ರಭುತ್ವಗಳೇ ಮೆರೆಯುತ್ತಿರುವುದು ಯಥಾರ್ಥ ಸತ್ಯ. ಈ ದಿಸೆಯಲ್ಲಿ ಅಮೆರಿಕ ದೇಶವು ಜಗತ್ತಿಗೆ ದೊಡ್ಡಣ್ಣನಾಗಿ ಮೆರೆಯುತ್ತಿದೆ. ಇದನ್ನು 'ಅಮೆರಿಕನಿಸಂ' (ಪುಟ ೨೪–೨೫) ಎಂದು ಚಾಮ್‌ಸ್ಕಿ ಕರೆದಿದ್ದಾರೆ. ಈ ಬಗೆಯ ನಿರಂಕುಶ ಪ್ರಭುತ್ವಗಳ 'ಹಿಡನ್ ಅಜೆಂಡ' (= ಗುಪ್ತ ಉದ್ದೇಶ)ವನ್ನು ಚಾಮ್‌ಸ್ಕಿ ಹೀಗೆ ವಿವರಿಸಿದ್ದಾರೆ : ಡಿವೈಡ್ ದಿ ಪೀಪಲ್, ಡಿಸ್‌ಟ್ರ್ಯಾಕ್ಟ್ ದಿ ಪೀಪಲ್, ಡೈರೆಕ್ಟ್ ದಿ ಪೀಪಲ್ (= ಪ್ರಜೆಗಳನ್ನು ವಿಭಜಿಸು, ದಿಕ್ಕು ತಪ್ಪಿಸು, ನಿರ್ದೇಶಿಸು). ಇದೇ ನಾವಿಂದು ಅನುಭವಿಸುತ್ತಿರುವ ಪ್ರಜಾಪ್ರಭುತ್ವಗಳ ನೈಜ ವ್ಯಾಖ್ಯಾನ. ಸಂಘಟನಾ ಶಕ್ತಿಯಿಂದ ಅಪಾಯಕಾರಿಗಳಾಗಿಬಿಡುವ ಜನಸಮುದಾಯಗಳನ್ನು ವಿಭಜಿಸುತ್ತಾ ವಾಸ್ತವ ಪರಿಸ್ಥಿತಿಗಳನ್ನು ಸರಿಯಾಗಿ ಗ್ರಹಿಸಲಾಗದಂತೆ ದಿಕ್ಕು ತಪ್ಪಿಸುತ್ತಾ ಸದಾ ತನ್ನ ಹಿಡಿತದಲ್ಲಿಟ್ಟುಕೊಂಡು ನಿರ್ದೇಶಿಸುತ್ತಿರುವ ಬಗೆಯನ್ನಿಲ್ಲಿ ಮನಗಾಣಬೇಕು. ಇಂಥ ನಿರಂಕುಶ ಪ್ರಭುತ್ವಗಳ ಪ್ರಭಾವಲಯದಲ್ಲಿರುವವರು ವ್ಯಕ್ತಿತ್ವ ವಿಕಾಸವನ್ನು ಸಾಧ್ಯ ಮಾಡಿಕೊಳ್ಳಬೇಕಾದರೆ 'ನಿರಂಕುಶ ಮತಿತ್ವ'ವನ್ನು ಗಳಿಸಬೇಕೆಂಬ ಪ್ರತಿಪಾದನೆ ಕುವೆಂಪು ಮತ್ತು ಚಾಮ್‌ಸ್ಕಿ ಇಬ್ಬರಲ್ಲೂ ಇದೆ. "ಅಧೋಗತಿಗಿಳಿದಿರುವ ನಮ್ಮ ಮತಿಯನ್ನು ಮತ್ತೆ ಆಕಾಶಕ್ಕೆತ್ತಬೇಕು" – ಎಂದು ಕುವೆಂಪು ಹೇಳಿದರೆ, "ಯು ಕುಡ್ ಮೇಕ್ ದೆಮ್ ಅಪ್ ಅಸ್ ಯು ಗೋ ಅಲಾಂಗ್" – ಎಂದು ಚಾಮ್‌ಸ್ಕಿ ಹೇಳಿದ್ದಾರೆ.




**೨. ಮತಭ್ರಾಂತಿ V/s ಮತಿಗೌರವ**

'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ' – ಪುಸ್ತಕದ ಮುನ್ನುಡಿಯಲ್ಲಿ ಕುವೆಂಪು ಅವರು ಆತ್ಮಶ್ರೀಯನ್ನು ಕಲುಷಿತಗೊಳಿಸುವ ಮತಭ್ರಾಂತಿಯ ಬಗ್ಗೆ ಮತ್ತೆ ಮತ್ತೆ ಪ್ರಸ್ತಾಪಿಸಿದ್ದಾರೆ : ಮತೀಯ ಮತ್ತು ಸಾಮಾಜಿಕ ಅಂಧಶ್ರದ್ಧೆ ಮತ್ತು ಅಂಧಾಚಾರ,... ಮತಧರ್ಮಗಳ ಮತ್ತು ಸಾಮಾಜಿಕ ಕಟ್ಟುಕಟ್ಟಳೆಗಳ ಹೀನಬುದ್ಧಿಯನ್ನೂ ನಿಷ್ಠುರತೆಯನ್ನೂ ಕಿತ್ತೊಗೆದು,... ಮತಾಂಧತೆಯ ಶೋಣಿತ ಹಸ್ತ,... ಮತಮೂರ್ಖನಾಗಿದ್ದರೆ,... ಮುಂತಾದ ಪದಪುಂಜಗಳ ಪ್ರಯೋಗ ಇಲ್ಲಿದೆ. ಮತಭ್ರಾಂತಿಯಿಂದ ಪಾರಾಗದಿದ್ದರೆ ನಮಗೆ ಮತಿಗೌರವ ದಕ್ಕುವುದಿಲ್ಲವೆಂಬ ಅಭಿಪ್ರಾಯ ಕುವೆಂಪು ಅವರಿಗಿದೆ :

*ಮತ ನಮಗೊಂದು ದೊಡ್ಡ ಬಂಧನವಾಗಿದೆ; ನಾಡಿನ ಏಳ್ಗೆಯ ಕುತ್ತಿಗೆಗೆ ಉರುಳಾಗಿದೆ... ಸರ್ವಮತಗಳಿಗಿಂತಲೂ ಶುದ್ಧ ಹೃದಯದ ಮತ್ತು ಸನ್ಮತಿಯ ಮತವೇ ಮಹೋನ್ನತವಾದುದು... ಮತಭ್ರಾಂತಿಯೂ ಮೌಢ್ಯವೂ ವೈಜ್ಞಾನಿಕ ಪ್ರಗತಿಗೆ ಹೇಗೆ ಮಹಾಕಂಟಕಗಳಾದುವು ಎಂಬುದಕ್ಕೆ ಪಾಶ್ಚಾತ್ಯ ದೇಶಗಳ ಕ್ರೈಸ್ತಧರ್ಮ ಚರಿತ್ರೆಯಲ್ಲಿ ಬೇಕಾದಷ್ಟು ನಿದರ್ಶನಗಳಿವೆ...*

ಮತ ಸಂಸ್ಥೆಗಳಲ್ಲಿರುವ ಪ್ರತ್ಯೇಕತೆಯ ಮನೋಧರ್ಮ ಹೃದಯದಲ್ಲಿ ಸಂಕುಚಿತ ಭಾವವನ್ನೇ ಬೆಳೆಸುತ್ತದೆ. ನಮ್ಮ ದೇಶದ ಯುವಶಕ್ತಿ ತನ್ನ ವ್ಯಕ್ತಿತ್ವ ಬಿರಿಯದಂತೆ ನೋಡಿಕೊಳ್ಳಬೇಕಾದರೆ ಮೊದಲಿಗೆ ಮತಸಂಸ್ಥೆಗಳನ್ನು ತಿರಸ್ಕರಿಸಬೇಕೆಂದು ಕುವೆಂಪು ನಿರೂಪಿಸಿದ್ದಾರೆ. ಮತಸಂಸ್ಥೆಗಳ ಬಗ್ಗೆ ಚಾಮ್‌ಸ್ಕಿ ಅವರ ನಿಲುವು ಇದನ್ನೇ ಹೋಲುತ್ತದೆ :

*ದೇರ್ ಆರ್ ಇನ್‌ಸ್ಟಿಟ್ಯೂಷನ್ಸ್ ವಿಚ್ ಇಟ್ ಹ್ಯಾಸ್ ಅಸ್ ಯೆಟ್ ಬೀನ್ ಇಂಪಾಸಿಬಲ್ ಟು ಡೆಸ್ಟ್ರಾಯ್. ದಿ ಚರ್ಚಸ್, ಫಾರ್ ಎಕ್ಸಾಂಪಲ್, ಸ್ಟಿಲ್ ಎಕ್ಸಿಸ್ಟ್...*

(ಪುಟ ೩೨)

ನಮ್ಮ ಮತಿಗೆ ಅಂಕುಶಗಳು ಅತಿಯಾಗಿ ಹೋಗಿ ಜೀವವೆ ನಿಸ್ತೇಜವಾಗಿದೆ ಎಂದು ಹೇಳುವ ಕುವೆಂಪು ಅವರು ನಿರಂಕುಶಮತಿಯನ್ನು ಮಾನವನ ಸರ್ವೋತ್ಕೃಷ್ಟ ವಾದ ಆಯುಧವನ್ನಾಗಿ ಗುರುತಿಸಿದ್ದಾರೆ. ಆಯುಧ ಗಳನ್ನು ಕೈ ಹಿಡಿದು ಹೋರಾಡುವುದಕ್ಕಿಂತಲೂ ನಮ್ಮ ವ್ಯಕ್ತಿತ್ವವೇ ಉತ್ಕೃಷ್ಟವಾದ ಆಯುಧವಾಗಿ ಪರಿವರ್ತನೆ ಗೊಳ್ಳಬೇಕೆಂಬ ಆಶಯವಿಲ್ಲಿದೆ.

**೩. ಅಭಿಮತಗಳ ಉತ್ಪಾದನೆ ಮತ್ತು ಅಭಿಪ್ರಾಯಗಳ ಇಂಜಿನಿಯರಿಂಗ್**

ಅಭಿಮತಗಳ ಉತ್ಪಾದನೆ (= ಮ್ಯಾನುಫ್ಯಾಕ್ಚರಿಂಗ್ ಕನ್‌ಸೆಂಟ್) ಮತ್ತು ಅಭಿಪ್ರಾಯಗಳ ಇಂಜಿನಿಯರಿಂಗ್ (= ಇಂಜಿನಿಯರಿಂಗ್ ಒಪಿನಿಯನ್) – ಎಂಬ ಅಜೆಂಡದೊಂದಿಗೆ ಕಾರ್ಯಾ ಚರಣೆ ಮಾಡುತ್ತಿರುವ ಜಾಗತಿಕ ಬುದ್ಧಿ ಸಂಸ್ಥೆಗಳು (= ವಿಶ್ವವಿದ್ಯಾಲಯಗಳು) ಮತ್ತು ಜಾಗತಿಕ ಸುದ್ದಿ ಸಂಸ್ಥೆಗಳನ್ನು (= ಪ್ರಿಂಟ್ ಮೀಡಿಯ, ವಿಷುಅಲ್ ಮೀಡಿಯ) ಒಂದಾಗಿ ಮಾಡಿ ಡಿಜಿಟಲ್ ತಂತ್ರಜ್ಞಾನದ ನೆರವು ಪಡೆದು ಜಾಗತೀಕರಣದ ನೆಟ್‌ವರ್ಕ್ ರೂಪಿಸಿ 'ವಿಶ್ವ ಸಾಮ್ರಾಜ್ಯಶಾಹಿ'ಗಳಾಗಿ ಮೆರೆಯುತ್ತಿರುವ 'ಅಮೆರಿಕನಿಸಂ' ಬಗ್ಗೆ ಚಾಮ್‌ಸ್ಕಿ ಎಳೆ ಎಳೆಯಾಗಿ ಬಿಡಿಸಿ ತೋರಿಸಿದ್ದಾರೆ. ಅತ್ಯಂತ ಸೂಕ್ಷ್ಮವಾದ ಮತ್ತು ಪರಿಣಾಮಕಾರಿಯಾದ ವಿಧಾನ ಗಳಿಂದ ನಿರಂತರ ಪ್ರಚಾರ ಮಾಡುತ್ತಾ ಅಭಿಮತಗಳನ್ನು ಉತ್ಪಾದಿಸುತ್ತಿರಬೇಕು; ಜೆನೆಟಿಕ್ ಇಂಜಿನಿಯರಿಂಗ್ ರೀತಿಯಲ್ಲಿ ಅಭಿಪ್ರಾಯಗಳನ್ನು ರಿ–ಇಂಜಿನಿಯರಿಂಗ್ ಮಾಡುತ್ತಿರಬೇಕು. ಇದರಿಂದಾಗಿ ಇಡೀ ಜಗತ್ತು ತನ್ನ ಆಲೋಚನೆಯ ನಿರ್ದೇಶನಕ್ಕೆ ಒಳಪಟ್ಟು ತನ್ನ ಅಧೀನದಲ್ಲಿ ಇರುತ್ತದೆಯೆಂಬ ವ್ಯವಸ್ಥಿತ ಹುನ್ನಾರ ಅಮೆರಿಕ ದೇಶಕ್ಕೆ ಇದೆಯಷ್ಟೆ. ಇದರಿಂದ ಪಾರಾಗಲು ನಿರಂಕುಶಮತಿ ಅತ್ಯಗತ್ಯ.

ನಮ್ಮ ದೇಶದಲ್ಲಿರುವ ಪರಂಪರಾಗತವಾದ ಶೋಷಕ ತಂತ್ರಗಳನ್ನು ಕುವೆಂಪು ಬಹು ಎಚ್ಚರದಿಂದ ಅನಾವರಣಗೊಳಿಸಿದ್ದಾರೆ : "...ಯಾವ ಕಾಲದಲ್ಲಿಯೋ ಯಾವ ಸಮಾಜಕ್ಕಾಗಿಯೋ ಮನು ಬರೆದಿಟ್ಟ ಕಟ್ಟಳೆಗಳು ಇಂದಿಗೂ ನಮ್ಮನ್ನಾಳ ಬೇಕೆಂದು ಹೇಳಿದರೆ ತಲೆದೂಗಿಬಿಡಬೇಡಿ. ...ಯಾವ ಒಂದು ಸಂಪ್ರದಾಯದ ಸಂಕೋಚಕ್ಕೂ ಸಿಕ್ಕಿಕೊಳ್ಳಬಾರದು. ಯಾವ ಒಂದು ಪಂಥದ ಇಕ್ಕಟ್ಟಿಗೂ ಒಳಗಾಗಬಾರದು... ಜಾತಿ ಮತ, ದೇಶ ಕಾಲಗಳ ಭೇದವಿಲ್ಲದೆ ಎಲ್ಲ ಮಹಾಪುರುಷರ ಜ್ಞಾನಗಂಗೆಗಳ ಮಂಗಳ ಸಂಗಮದಲ್ಲಿ ತೀರ್ಥಸ್ನಾನ ಮಾಡಿ ಪೂರ್ಣ ಜೀವನವನ್ನು ಪೂರ್ಣವಾಗಿ ಅನುಭವಿಸಬೇಕು... ನಿರಂಕುಶಮತಿ ಗಳಾಗಬೇಕಾದರೆ ದಾಸ್ಯಬುದ್ಧಿ ತೊಲಗಬೇಕು; ದಾಸ್ಯಬುದ್ಧಿ ತೊಲಗಬೇಕಾದರೆ ಸ್ವತಂತ್ರವಾಗಿ ಜೀವಿಸಲು ಪ್ರಯತ್ನಿಸಬೇಕು; ಎಂದರೆ ಸ್ವಾವಲಂಬನ ಬೇಕು..." ಈ ಮಾತುಗಳಲ್ಲಿ ಕುವೆಂಪು ಅವರು ಸಾರ್ವಜನಿಕರ ವಿವೇಚನಾಧಿಕಾರಕ್ಕೆ ಕೊಡುತ್ತಿರುವ ಪ್ರಾಶಸ್ತ್ಯ ಸುಸ್ಪಷ್ಟ. ಇದನ್ನು ಬೆಂಬಲಿಸಲು ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನನ್ನು ಕುರಿತು ಹೇಳಿದಂತೆ : "ಗುಟ್ಟಿಗಿಂತಲೂ ದೊಡ್ಡ ಗುಟ್ಟಾಗಿರುವ ಈ ಜ್ಞಾನವನ್ನು ನಾನು ನಿನಗೆ ಹೇಳಿದ್ದೇನೆ. ಅದನ್ನೆಲ್ಲಾ ಚೆನ್ನಾಗಿ ವಿಚಾರಮಾಡಿ ನಿನಗೆ ವಿಹಿತ ತೋರಿದಂತೆ ಮಾಡು..." ಎಂಬ ಮಾತುಗಳನ್ನು ಉಲ್ಲೇಖಿಸಿದ್ದಾರೆ. ನಾವು ವಿಮರ್ಶೆ ಮಾಡಲೇಬೇಕು. ವಿಮರ್ಶಿಸಲು ಹಿಂಜರಿಯಬಾರದು. ವಿಚಾರ ಶಕ್ತಿಯ ವಿವೇಚನಾಧಿಕಾರವನ್ನು ಒಳಗೊಳ್ಳದೆ ವ್ಯಕ್ತಿತ್ವ ಪೂರ್ಣವಾಗುವುದಿಲ್ಲ. ಇದೇ ಅರ್ಥದಲ್ಲಿ ಚಾಮ್‌ಸ್ಕಿ "...ದಿ ಆನ್ಸರ್ ಟು ದೋಸ್ ಕ್ವೆಶ್ಚನ್ಸ್ ಈಸ್ ವೆರಿ ಮಚ್ ಇನ್ ದಿ ಹ್ಯಾಂಡ್ಸ್ ಆಫ್ ಪೀಪಲ್ ಲೈಕ್ ಯು ಅಂಡ್ ಮಿ" (ಪುಟ ೬೫) ಎಂದು ಹೇಳಿದ್ದಾರೆ.

**೪. ಊರೆಗೋಲಾಗುವ ಅಲ್ಲಮ ಪ್ರಭು ಮತ್ತು ಫಿಡೆಲ್ ಕ್ಯಾಸ್ಟ್ರೊ**

ವಿಶ್ವ ಸಾಮ್ರಾಜ್ಯಶಾಹಿಯ ಸಾರ್ವಭೌಮ ದೇಶವಾಗಿ ಮೆರೆಯುತ್ತಿರುವ

'ಅಮೆರಿಕನಿಸಂ' ಬಗ್ಗೆ ಬರೆಯುವಾಗ ಚಾಮ್‌ಸ್ಕಿ ಅವರು ಅಮೆರಿಕಾ ಪಾಲಿಗೆ ಸೆರಗಿನ ಕೆಂಡವಾಗಿರುವ ಕ್ಯೂಬಾ ದೇಶದ ಫಿಡೆಲ್ ಕ್ಯಾಸ್ಟ್ರೊ ವಿಚಾರಗಳನ್ನು ಊರೆಗೋಲು ಮಾಡಿಕೊಂಡು ಮಾತನಾಡುತ್ತಾರೆ. ವಿಶ್ವಸಂಸ್ಥೆ ಸ್ಥಾಪನೆಯಾದ ಕಾಲದಿಂದ ಹಿಡಿದು ಇಲ್ಲಿಯವರೆಗೆ ಅಮೆರಿಕಾ ನಡೆಸಿದ ನಿರಂತರ ಬಾಂಬ್ ದಾಳಿಗಳು – ನೇರ ಯುದ್ಧಗಳು – ಮಾನವ ಹಕ್ಕುಗಳ ಉಲ್ಲಂಘನೆಗಳ ಬಗ್ಗೆ ಫಿಡೆಲ್ ಕ್ಯಾಸ್ಟ್ರೊ ತಮ್ಮ ಭಾಷಣಗಳು ಮತ್ತು ಬರಹಗಳಲ್ಲಿ ವಿಶೇಷವಾಗಿ ಚರ್ಚಿಸಿದ್ದಾರೆ. ಇದನ್ನು ಉಲ್ಲೇಖಿಸುವ ಚಾಮ್‌ಸ್ಕಿ ಅವರು ಜಾಗತಿಕ ಸುದ್ದಿಸಂಸ್ಥೆಗಳ ಪಕ್ಷಪಾತ ಬುದ್ಧಿಯನ್ನು ಬಯಲಿಗೆಳೆದಿದ್ದಾರೆ (ಪುಟ : ೪೬–೫೨). ಇದನ್ನು 'ಮಾಧ್ಯಮ ವಿಶ್ವ ವಸಾಹತುಶಾಹಿ' – ಎಂದು ಕರೆಯಬಹುದು. ಇದೆಲ್ಲ ಮೀಡಿಯಾ ಕಂಟ್ರೋಲುಗಳ ಪರಿಣಾಮ ಫಲ.

ಕುವೆಂಪು ಅವರು ಮತಸಂಸ್ಥೆಗಳ ಬಗ್ಗೆ ಬರೆಯುವಾಗ ಕನ್ನಡ ಸಂಸ್ಕೃತಿಯ ಶ್ರೀಗುರು ಅಲ್ಲಮಪ್ರಭುವನ್ನು ಊರೆಗೋಲು ಮಾಡಿಕೊಂಡಿದ್ದಾರೆ. ಅಸ್ಪೃಶ್ಯರ ದೇವಾಲಯ ಪ್ರವೇಶದ ಬಗ್ಗೆ ಚರ್ಚಿಸುವಾಗ "ಗುಡಿಯ ಕಲ್ಲಿನಲ್ಲಿ ದೇವರಿದ್ದಾನೆ ಎಂಬ ಭ್ರಾಂತಿ ನಿಮಗೇಕೆ ? ಪ್ರಭುಲಿಂಗ ಲೀಲೆಯಲ್ಲಿ ಸತ್ಯ ಸಾಕ್ಷಾತ್ಕಾರದ ಕಾರ್ಯವನ್ನು ಬಿಟ್ಟು ಕೀರ್ತಿ ಪೂಜಾ ಲಾಭದಾಶೆಗೆ ದೇವಸ್ಥಾನವನ್ನು ಕಟ್ಟಿಸುತ್ತಿದ್ದ ಸಿದ್ಧರಾಮನನ್ನು ಕುರಿತು ಅಲ್ಲಮನು –

*ಸಕಲ ಕಲ್ಲನು ಕಡಿದು, ಕಲ್ಲಿಗೆ*
*ಶಿಖರ ದೇಗುಲವೆಂದು ಮಾಡಿಸಿ*
*ಮಕರಿಸುವರಿವರೊಡ್ಡರಲ್ಲದೆ ಸಿದ್ಧರಲ್ಲ* – ಎಂದಿದ್ದಾನೆ.

ಒಡ್ಡತನದ ಕೆಲಸವನ್ನು ನಾವೇಕೆ ಮಾಡಬೇಕು ? ಗುಡಿಯೊಳಗೆ ಹೋಗಿ ಮತದ ಮೌಢ್ಯಕ್ಕೂ ಪುರೋಹಿತರ ಸುಲಿಗೆಗೂ ಒಳಗಾಗುವುದಕ್ಕಿಂತ ದೂರವಾಗಿದ್ದುಕೊಂಡು ಎದೆಯ ದೇಗುಲದಲ್ಲಿಯೆ ಈಶ್ವರನನ್ನು ಇನ್ನಷ್ಟು ಅತಿಶಯವಾದ ಭಾವಭಕ್ತಿಯಿಂದ ಪೂಜಿಸಬಾರದೆ ?..." ಈ ಲೇಖನದಲ್ಲಿ ಕುವೆಂಪು ಹಿಡಿದಿರುವ ಅಲ್ಲಮನ ಊರೆಗೋಲು ಬಹುಮುಖ್ಯವಾದುದು. ಏಕೆಂದರೆ, ೧೯೪೪ರಲ್ಲಿ ಯಾವೊಂದು ಅಲ್ಲಮನ ವಚನಗ್ರಂಥವೂ ಪ್ರಕಟವಾಗಿರಲಿಲ್ಲ. ಡಾ॥ ಎಲ್. ಬಸವರಾಜು ಅವರು ೧೯೬೦ರ ದಶಕದಲ್ಲಿ ಪ್ರಕಟಿಸಿದ ಅಲ್ಲಮನ ವಚನ ಗ್ರಂಥಗಳೇ ಅಧಿಕೃತವಾಗಿ ಪ್ರಪ್ರಥಮವಾದುವು. ಅಲ್ಲಮನ ವಚನಗಳು ಲಭ್ಯ ಇಲ್ಲದ ಕಾಲದಲ್ಲಿ ಕುವೆಂಪು ಅವರು ಚಾಮರಸನ 'ಪ್ರಭುಲಿಂಗಲೀಲೆ'ಯ ಪದ್ಯವೊಂದನ್ನು (= ಇದು ಅಲ್ಲಮನ ವಚನದ ಪರಿವರ್ತಿತ ರೂಪದ ಷಟ್ಪದಿ) ಉದಾಹರಿಸಿ, ಬಹು ಹಿಂದೆಯೇ ಕನ್ನಡ ಸಂಸ್ಕೃತಿಗೆ ಅಗತ್ಯವಾದ 'ಅಲ್ಲಮನ ಊರೆಗೋಲು' ಕೈ ಹಿಡಿದು ಮಾನವನಿರ್ಮಿತವಾದ ಭವಬಂಧನಗಳಿಂದ, ಸ್ವಾರ್ಥ ಸಾಧನೆಯ ಕಪಟವ್ಯೂಹಗಳಿಂದ ಪಾರಾಗುವುದು ಹೇಗೆ ? ಎಂಬುದನ್ನು ತೋರಿಸಿದ್ದಾರೆ.

**೫. ಕಲಿಸು ನನಗೆ ಮೊದಲು ಕೊನೆಗೆ ನೆಲ ಬಾನ್ಗಳ ಪಡೆವುದಂ**

'ನೆಲ' ಮತ್ತು 'ಬಾನು'ಗಳೆರಡನ್ನೂ ಒಟ್ಟಿಗೆ ಪಡೆಯುವುದನ್ನು ಕಲಿಸು ನನಗೆ ಎಂದು 'ತೇನೆ ಹಕ್ಕಿ'ಯನ್ನು ಕೇಳಿಕೊಳ್ಳುತ್ತಿರುವ ಕುವೆಂಪು ಅವರಲ್ಲಿ 'ಊರ್ಧ್ವ ಗಮನ' ಮತ್ತು 'ನೆಲ ಮುಟ್ಟುವ ಪ್ರೀತಿ'ಗಳಿವೆ. ಇದನ್ನು 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ' ಪುಸ್ತಕದಲ್ಲೂ ಮನಗಾಣಬಹುದು :

**ಊರ್ಧ್ವ ಗಮನಕ್ಕೆ :** ಪ್ರತಿಭಾಶಾಲಿಯಾದ ವಿದ್ಯಾರ್ಥಿಯ ಲಕ್ಷ್ಯ ಅಂತರಿಕ್ಷೋನ್ನತವಾಗಿರಬೇಕು; ವಿಶ್ವವ್ಯಾಪಿಯಾಗುವ ಅನಂತ ಸಾಹಸದಲ್ಲಿ ನಿರಂತರ ನಿರತವಾಗಿರಬೇಕು. ಅವನ ಮತಿ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದುವ ಮತ್ತು ಪಾರಿತೋಷಕಗಳನ್ನು ಪಡೆಯುವ ಅಲ್ಪತೃಪ್ತಿಯ ಉಸುಬಿನಲ್ಲಿ ಹೂತು ನಡೆಗೆಡಬಾರದು.

**ನೆಲಮುಟ್ಟುವ ಪ್ರೀತಿಗೆ :** ಪ್ರಾಚೀನ ಕಾಲದ ಅರಣ್ಯಾ ಶ್ರಮಗಳ ವಿದ್ಯಾರ್ಥಿಯು ಎಷ್ಟು ಸಾರಿ ಆ ದಟ್ಟವಾದ ಕಾಡುಗಳಲ್ಲಿ ಗೋವು ಕಾಯುತ್ತಾ ಅಲೆದಿರಬಹುದು ! ಮತ್ತೆಷ್ಟು ತೊರೆಗಳಲ್ಲಿ ಈಜಾಡಿ ಮಿಂದಿರಬಹುದು ! ಮತ್ತೆಷ್ಟು ಕೆರೆಗಳಲ್ಲಿ ತಾವರೆ ನೈದಿಲೆಗಳನ್ನು ತಿರಿದಿರಬಹುದು ! ಎಂತೆಂತಹ ಗಿಡ ಬಳ್ಳಿಗಳಲ್ಲಿ ಹೂವು ಕೊಯ್ದಿರಬಹುದು ! ಯಾವ ಯಾವ ಜಾತಿಯ ಮರಗಳಲ್ಲಿ ಏನೇನು ಸಾಹಸ ಮಾಡಿ ಹಣ್ಣು ಉದುರಿಸಿರಬಹುದು ! ಎಷ್ಟು ಸೂರ್ಯೋದಯಾಸ್ತಗಳನ್ನು ಮಲೆನೆತ್ತಿಗಳಿಂದ ರಸಾವಿಷ್ಟನಾಗಿ ಈಕ್ಷಿಸಿರಬಹುದು ! ಆತನ ಕಾಲಿಗೆ ಹೊಳೆಯ ನುಣ್ಣನೆಯ ಬಿಳಿಮಳಲಿನ ಸ್ಪರ್ಶವೂ ತಾಯಿಯ ಮುತ್ತಿನಂತೆ ಕಣ್ಮುಚ್ಚುವ ಸುಖವನ್ನು ಕೊಡುತ್ತಿತ್ತೆಂದು ತೋರುತ್ತದೆ. ಇಲ್ಲದಿದ್ದರೆ 'ನೆಲದ ಧೂಳು ನಮಗೆ ಮಧುವೀಯಲಿ' – ಎಂಬ ಪ್ರಾರ್ಥನೆ ಅಸಾಧ್ಯವಾಗುತ್ತಿತ್ತು...

ಕುವೆಂಪು ಅವರಲ್ಲಿ ಏಕಪಕ್ಷೀಯವಾದ ವಿಚಾರ ಸರಣಿ ಎಂಬುದಿಲ್ಲ. ವಸ್ತು ವಿಷಯವೊಂದನ್ನು ಹಲವು ದಿಕ್ಕುಗಳಿಂದ ಒಳಹೊಕ್ಕು ನೋಡುವ ರೊಶೊಮಾನ್ ಶೈಲಿ (= ಅಕಿರೊ ಕುರೋಸಾವ ಅವರ ಸುಪ್ರಸಿದ್ಧ ಸಿನೆಮಾ) ಇರುವುದರಿಂದಲೇ ಅವರೊಬ್ಬ ಪೂರ್ಣದೃಷ್ಟಿಯ ಲೇಖಕನಾಗಿ ಚಿರಾಯುವಾಗಿದ್ದಾರೆ.

**೬. ಕರ್ಮಯೋಗಿ ಯಾರು ? ಮಹಾತಪಸ್ವಿ ಯಾರು ?**

ಕರ್ಮಯೋಗಿ, ಮಹಾತಪಸ್ವಿ – ಎಂಬ ಸಾಂಪ್ರದಾಯಿಕ ಶಬ್ದಗಳಿಗೆ ಕುವೆಂಪು ಕೊಟ್ಟಿರುವ ಗತಿಶೀಲತೆಯ ಅರ್ಥ ಚೇತೋಹಾರಿಯಾಗಿದೆ :

**ಕರ್ಮಯೋಗಿ :** ಮಂದಿಯ ಕೈ ಚಪ್ಪಾಳೆ, ವೃತ್ತಪತ್ರಿಕೆಗಳ ಅಗ್ಗದ ಸ್ತುತಿ, ಬಿರುದು ಬಾವಲಿಗಳ ವ್ಯಾಮೋಹ ಇವುಗಳಿಗೆ ವಶನಾಗದೆ ತಾನು ಹಿಡಿದ ಕೆಲಸವನ್ನು ಪಟ್ಟುಹಿಡಿದು ನಿಃಶಬ್ದವಾಗಿ ಮಾಡುವಾತನೇ ನಿಜವಾದ ಕರ್ಮಯೋಗಿ.

**ಮಹಾತಪಸ್ವಿ :** ಕೀರ್ತಿಯ ಕಿರಣ ಮಾತ್ರವೂ ಪ್ರಕಾಶಿಸದಿರುವಾಗ, ಪ್ರಶಂಸೆ ಮಾಡುವವರಾಗಲಿ ಹುರಿದುಂಬಿಸುವವರಾಗಲಿ ಒಬ್ಬರೂ ಇಲ್ಲದಿರುವಾಗ, ಬಹುಕಾಲದ ಪ್ರಯತ್ನದಿಂದಲೂ ಕಾರ್ಯಸಿದ್ಧಿಯಾಗದಿರುವಾಗ, ದೃಢಚಿತ್ತನಾಗಿ, ಶ್ರದ್ಧಾನ್ವಿತನಾಗಿ, ಮೌನಿಯಾಗಿ ಹಲ್ಲು ಕಚ್ಚಿಕೊಂಡು, ಹಣೆ ಸುಕ್ಕಿಕೊಂಡು, ಬೆವರು ಸುರಿಸುತ್ತಾ ನಸುಬಾಗಿ, ಕಟ್ಟಕಡೆಯ ಕಲ್ಯಾಣದಲ್ಲಿ ನೆಚ್ಚಿಟ್ಟುಕೊಂಡು ಈಶ್ವರನನ್ನು ನೆನೆದು ಕರ್ಮಪರ್ವತವನ್ನೇರುವವನೇ ಮಹಾತಪಸ್ವಿ.

ಈ ಸಿಡಿಲ ನುಡಿಗಳಿಂದ ಪ್ರಭಾವಿತನಾದ ನಾನು ಬಾಳ ಕಣಿವೆಗಳಲ್ಲಿ ಅಲೆದಾಡುವಾಗ ಇದನ್ನೇ ಸ್ಮರಿಸುತ್ತಾ ಸ್ಫೂರ್ತಿಶಕ್ತಿಯನ್ನು ಪಡೆದಿದ್ದೇನೆ. ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರು ತಮ್ಮ ತನಿಖಾ ವರದಿಯಲ್ಲಿ ಹೇಳಿರುವಂತೆ "...ನನ್ನ ಮಗನಿಗೆ ನಾನು ಬುದ್ಧಿ ಹೇಳಬೇಕಾದರೆ ಇದಕ್ಕಿಂತಲೂ ಉತ್ತಮವಾಗಿ ಮತ್ತು ಸಮರ್ಥವಾಗಿ ನಾನು ಏನನ್ನೂ ಹೇಳಲಾರೆ..." ಎಂಬ ಸಂದೇಶವನ್ನು ಮನಸಾರೆ ಒಪ್ಪಿಕೊಳ್ಳುತ್ತಾ ಮುಂಬರುವ ತಲೆಮಾರುಗಳಿಗೆ ಈ ಪುಸ್ತಕ ವಿಚಾರ ಕಾಂತಿಯ ಚೈತನ್ಯಶಕ್ತಿಯಾಗಲೆಂದು ಹೃದಯಪೂರ್ವಕ ಹಾರೈಸುತ್ತೇನೆ.

ಇದುವರೆಗೆ ವಿವೇಚಿಸಿದ ಆರು ಉಪಶೀರ್ಷಿಕೆಗಳ ಪೈಕಿ, ಕೊನೆಯ ಎರಡು ಕುವೆಂಪು ಅವರ ಅನನ್ಯತೆಗೆ ಸಂಬಂಧಪಟ್ಟಿದ್ದು, ಇಲ್ಲಿ ಚಾಮ್‌ಸ್ಕಿ ಅವರ ಪ್ರಸ್ತಾಪ ಇಲ್ಲದಿರುವುದು ಉದ್ದೇಶಪೂರ್ವಕವಾಗಿದೆ. ಕೊನೆಯದಾಗಿ, ಕುವೆಂಪು ಅವರ 'ನನ್ನ ಮನೆ' ಮತ್ತು 'ಅನಿಕೇತನ' ಕವಿತೆಗಳ ಬಗ್ಗೆ ಒಂದು ಸ್ಪಷ್ಟನೆ. 'ಮ್ಯಾಟರ್', 'ಮೈಂಡ್' ಎಂಬ ಅದ್ವಯದ ನೆಲೆಗಳಲ್ಲಿ 'ನನ್ನ ಮನೆ' ಎಂಬ ಕವಿತೆಯು 'ಮ್ಯಾಟರ್' ಎನ್ನಬಹುದಾದ ಮನೋಭಾವದ ರೂಪಕವಾಗಿದ್ದರೆ, 'ಅನಿಕೇತನ' ಎಂಬ ಕವಿತೆಯು 'ಮೈಂಡ್' ಎಂಬುದರ ನಿಸ್ಸೀಮಭಾವದ ರೂಪಕವಾಗಿದೆ. 'ಓ ನನ್ನ ಚೇತನ ! ಆಗು ನೀ ಅನಿಕೇತನ' ಎಂದರೆ ಮಾನವನಿರ್ಮಿತವಾದ ಎಲ್ಲ ಬಗೆಯ ಮೀಡಿಯಾ ಕಂಟ್ರೋಲುಗಳಿಂದ ಪಾರಾಗಿ 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ' ಎಂದೇ ಅರ್ಥ.

**ವಿ. ಚಂದ್ರಶೇಖರ ನಂಗಲಿ**
೧೬, ಶ್ರೀಗೌರಿ, ೪ನೇ ಕ್ರಾಸ್, ಕನಕನಗರ, ಹೊಸಕೋಟೆ
ಬೆಂಗಳೂರು ಗ್ರಾ. ಜಿಲ್ಲೆ – ೫೬೨೧೧೪

# ಅತ್ಯಂತ ವಿಶ್ವಾಸಾರ್ಹ ದಿನಪತ್ರಿಕೆ

1948 ಕನ್ನಡ ದಿನಪತ್ರಿಕೆಗಳ ಇತಿಹಾಸದಲ್ಲಿ ಹೊಸ ಮೈಲಿಗಲ್ಲನ್ನು ಕಂಡ ವರ್ಷ, ಕನ್ನಡ ಪ್ರಜೆಗಳವಾಣಿ  ಪ್ರಜಾವಾಣಿ ಸಂಸ್ಥೆ, ದಿ ಪ್ರಿಂಟರ್ಸ್ (ಮೈಸೂರು) ಪ್ರೈವೇಟ್ ಲಿಮಿಟೆಡ್ ಉದಯಿಸಿದ ವರ್ಷ. ಅಂದಿನಿಂದ ಇಂದಿನವರೆಗೆ ಸಂಸ್ಥೆ ಬರೇ ಪತ್ರಿಕೆಗಳನ್ನು ಪ್ರಕಟಿಸುವ ಸಂಸ್ಥೆಯಾಗಿರದೆ ಕರ್ನಾಟಕದ ಜನರ ಮನೆ ಮನಗಳಲ್ಲಿ ಹಾಸುಹೊಕ್ಕಾಗಿ ಅವರ ಜೀವನದ ಒಂದು ಭಾಗವಾಗಿ ಬೆಳೆದಿದೆ.

ಸಂಸ್ಥೆಯ ಮುಖ್ಯ ಪ್ರಕಟಣೆಗಳಲ್ಲಿ ಇಂಗ್ಲಿಷ್ ದಿನಪತ್ರಿಕೆ ಡೆಕ್ಕನ್ ಹೆರಾಲ್ಡ್, ಕನ್ನಡ ದಿನಪತ್ರಿಕೆ ಪ್ರಜಾವಾಣಿ ಕರ್ನಾಟಕದ ಜನರ ಅತ್ಯಂತ ವಿಶ್ವಾಸಾರ್ಹ ಪತ್ರಿಕೆಗಳಾಗಿ ಜನಮನದಲ್ಲಿ ನೆಲೆಸಿದ್ದು ಅವರ ಜೀವನ ಶೈಲಿಯನ್ನೇ ಬದಲಿಸುವಷ್ಟು ಶಕ್ತಿಶಾಲಿಯಾಗಿ ಬೆಳೆದಿವೆ. ವಾರ ಪತ್ರಿಕೆ ಸುಧಾ ಪ್ರಕಟಣೆಯ ದಿನಕ್ಕಾಗಿ ಇಡೀ ಕುಟುಂಬ ತುದಿಗಾಲಲ್ಲಿ ಕಾದಿರುತ್ತದೆ. ಕನ್ನಡ ಸಾಹಿತ್ಯಾಸಕ್ತರ ಮೆಚ್ಚಿನ ಮಾಸ ಪತ್ರಿಕೆ ಮಯೂರ ಕೂಡ ನಮ್ಮ ಸಂಸ್ಥೆಯ ಹೆಮ್ಮೆಯ ಕಾಣಿಕೆ.

ನಮ್ಮ ನಾಲ್ಕೂ ಪ್ರಕಟಣೆಗಳು ಹಿಂದೆಂದಿಗಿಂತಲೂ ಅತಿ ಶೀಘ್ರವಾಗಿ ಕರ್ನಾಟಕ ರಾಜ್ಯಾದ್ಯಂತ ಓದುಗರಿಗೆ ತಲುಪುತ್ತಿವೆ. ವಿಶ್ವದ, ದೇಶದ, ರಾಜ್ಯದ ಸುದ್ದಿಗಳನ್ನಷ್ಟೇ ಅಲ್ಲದೆ ಓದುಗರ ಜ್ಞಾನ ಭಂಡಾರವನ್ನು ಹೆಚ್ಚಿಸುವ ಲೇಖನಗಳನ್ನೂ  ಹೊಂದಿರುತ್ತವೆ. ಆರು ದಶಕಗಳಿಗೂ ಮೀರಿ ಓದುಗರು ನಮ್ಮ ಪ್ರಕಟಣೆಗಳ ಮೇಲಿಟ್ಟಿರುವ ವಿಶ್ವಾಸ ಮತ್ತು ನಂಬಿಕೆಗಳಿಗೆ ಸ್ವಲ್ಪವೂ ಕುಂದುಬಾರದಂತೆ ಮುನ್ನಡೆಯುತ್ತಿವೆ.






**The Printers (Mysore) Private Limited**

ಪ್ರಜಾವಾಣಿ

DECCAN HERALD

ಸುಧಾ

ಮಯೂರ

No. 75, M.G. Road, Bangalore-560 001 Phone: 2588 0000
Fax: 2588 0205 E-mail: Circulation-Blore@deccanherald.co.in




ಶ್ರೀಸುಮಿತ್ರಾಸುತ ಅಗಸಬಾಳ

# ತೃಷೆಯಾದೊಡೆ

ಕರಿ ನೀರ ಕನಡಿ ಇದ್ದಂಗಿತ್ತು. ಸಂಜೀ ಮುಂದಲ ಕೆಂಪ ಸೂರ್ಯಾ. ನೀಲಿ ಮುಗಲಾ ಎರಡೂ ನೀರಾಗ ಕಾಣತಿದ್ದು. ಎಷ್ಟು ಚಂದ ಕಾಣಸ್ತಿತ್ತಂದ್ರ ಕೆರಿ ಯಾವದೋ ಮುಗಲ ಯಾವದೋ ತಿಳೀತಿದ್ದಿಲ್ಲ. ಆಟಾ ಆಡೂ ಮೀನಗಳು ಟುಂಯಿ ಅಂತ ಮ್ಯಾಲ ಜಿಗದು ಮತ್ತ ಒಳಗ ಹೊಕ್ಕಿದ್ದು. ನಸಗ ಆಗಾಕಬಂತು. ಆವಾಗ ಯಾರೋ ಹೆಣಮಗಳು ಧಪ್ ಧಪ್ ಅಂತ ಅರಿವಿ ಒಗ್ಯಾಕತ್ತಿದ್ಲು. ಕೆರಿಕಟ್ಟಿಮ್ಯಾಲ ಕುಂತ ಶಿವಲಿಂಗುಗ ಆ ಅರಿವಿ ಒಗಿಯೂ ಶಬ್ದ ಒಂಥರಾ ಕೇಳತಿತ್ತು. ತಂಪನ ಗಾಳಿ ಗಿಡದ ಮ್ಯಾಲ ಬೀಸಿ ಸುಯ್ ಅಂತ ಸಪ್ಪಳಾ ಮಾಡುತ್ತಿತ್ತು. ಅದರ ಹಿನ್ನೆಲೆ ತಾಳ ಇದ್ದಂಗ ದುಪ್... ದುಪ್ ಅಂತ ಅರಿವಿ ಒಗಿಯೋ ಸಪ್ಪಳ. 'ಪಾಪ ಯಾರ ಕೂಲಿ ಹೆಣ ಮಗಳ ಇರಬೇಕು. ಇಷ್ಟೊತ್ತನಾ ಕೂಲಿ ಮಾಡಿ ಈಗ ಬಂದು ಅರಿವಿ ಒಗ್ಯಾಕತ್ತಾಳ' ಅನಕೊಂಡ ಶಿವಲಿಂಗು. ಕಾ... ಕಾ.. ಅಂತ ಕಾಗಿಗೋಳು ತಮ್ಮ ಗೂಡ ಕಡೆ ಹಾರಿ ಹೊಂಟಿದ್ದು. ಶಿವಲಿಂಗು ಮಾತ್ರ ಮಗ್ಗಲಾ ಬದಲಿಸಿ ಮತ್ತ ಕೆರಿ ಕಟ್ಟಿಗಿ ಆನಿಸಿ ತಾಯಿ ತೋಡಿಮ್ಯಾಲ ಮಲಿಗಿದಂಗ ಅಲ್ಲೇ ಅಡ್ಡ ಆದ.

ಶಿವಲಿಂಗುಗ ಈ ಕೆರಿ ಅಂದ್ರ ಜೀವ ಇದ್ದಂಗ. ಇಲ್ಲಿ ಬಂದ ಕುಂತ್ನಂದ್ರ ಎಲ್ಲಾ ಮರೀತಾನ. ಅವಾ ಸಣ್ಣಾವ ಇದ್ದಾಗನ ಹಳ್ಳಕ್ಕ ಅಡ್ಡ ಒಡ್ಡಕಟ್ಟಿ ಈ ಕೆರಿ ಮಾಡಿದ್ದು. ಈ ಊರ ಅಂದ್ರ ಊರ. ರಸ್ತಾ, ಬಸ್, ಪೋಸ್ಟ್, ದವಾಖಾನಿ, ಏನೂ ಇದ್ದಿಲ್ಲ ಅವಾಗ. ಹೋಗಲಿ ಹಿಟ್ಟ ಬೀಸಾಕ ಒಂದ ಗಿರಣೆರ ಇತ್ತ ಅಂತೀರೇನು, ಅದೂ ಇಲ್ಲ. ಈ ಊರ ಕಂಡ ಮಟ್ಟ ಮದಲನೆ ಯಂತ್ರಾ ಅಂದ್ರ ನೇಗಲಿ. ನೇಗಲಿ ಮುಂದಿನ ಸಣ್ಣ ಗಾಲಿ ತಿರಗಸಕೊಂತ ದೊಡ್ಡ ಯಂತ್ರಾ ನಡಿಸೀದ ಖುಷೀಲೆ ಆಡತಿದ್ದಾ ಶಿವಲಿಂಗು ಸಣ್ಣಾವಿದ್ದಾಗ. ಒಂದಿನಾ



# ಡುಂಡುಭ ವಿಲಾಪ




ಹೆಂಡತಿಯನ್ನು ಕಚ್ಚಿದ ಹಾವುಗಳ ವಿರುದ್ಧ
ದಂಡ ಹಿಡಿದು ನಿಂತಿದ್ದ ರುರು
ಎತ್ತಿದ ದೊಣ್ಣೆ ಅಪ್ಪಳಿಸುವ ಮುನ್ನ
ತೇಲಿ ಬಂತು ಕ್ಷೀಣವಾಗಿ ಡುಂಡುಭನ ಗೋಳು

ನಾವು ಕಚ್ಚುವವರಲ್ಲ
ಕಚ್ಚಿದರೂ ವಿಷವಿಲ್ಲ
ಒಳ್ಳೆಗೆ ವಿಷವಿದ್ದರೇನು ?
ಮಾತು ಕೇಳಿಯೇ ಇರುತ್ತೀ ನೀನು
ನೀರ ಅಲೆಯಲ್ಲಿ ಅಲೆಯಾಗಿ ಚರಿಸುವ
ಹಾವುಗಳು ನಾವು, ಬಿಲ ಉಂಟು
ಎಲ್ಲ ಹಾವುಗಳ ಕಷ್ಟವೂ

ಸತ್ತ ಹಾವನ್ನೂ ಹೊಡೆವವರ ಮಧ್ಯೆ
ಬಿಡುವುದುಂಟೆ ನಮ್ಮನ್ನು ಹಾಗೆಯೇ ?
ನಮಗೆಲ್ಲಿ ನಿರ್ಭಯದ ನೆಲೆ ? ನಂಬುವುದಿಲ್ಲ ನೀವು !

ಹನ್ನೆರಡು ವರ್ಷದ ಸೇಡು
ಸಾಕುವವನ ಕುಲಬಾಂಧವರಲ್ಲ ನಾವು
ನೋಡುವುದಕ್ಕೆ ಹಾಗಿದ್ದೇವೆ–ಅಷ್ಟೆ

ಬಣ್ಣ ಹಾಗಿದೆ– ಚರ್ಮವೂ ಹಾಗೆಯೇ
ನಾನೆಂದೂ ಹೆದರಿಸಿಲ್ಲ ಯಾರನ್ನೂ
ಕಂಡವರು ನನ್ನ ದಿರಿಸಿಗೆ ಹೆದರಿದರೆ
ನಾನೇನು ಮಾಡಲಿ ಹೇಳು ?
ದಿರಿಸಿನ ಒಳಗಿನ ಹೃದಯ ಕಾಣಬಾರದೆ ನೀನು ?

ನಿಧಿಕಾಯುವವರುಂಟಂತೆ
'ದಶ' ಎಂದು ಹೇಳಿಸಿ ಕಾರ್ಕೋಟಕ
ವಿಷ ಇಳಿಸುವವರೂ
ಭೂಪತಿಯ ಶಯನಕ್ಕೆ ಪಲ್ಲಂಗವಾದವರು
ಹಣ್ಣಿನಲ್ಲಿ ಸಣ್ಣ ಹುಳುವಿನಂತೆ ವೇಷ ಮರೆಸಿ
ನೀರಿನ ಕೋಟೆ ದಾಟಿ
ಆಹುತಿ ತೆಗೆದುಕೊಂಡವರೂ–ಎಲ್ಲವೂ ಪುರಾಣ–ಪಳಮೆಯಯ್ಯಾ
ಇಂಥ ವಿದ್ಯೆ ಬಲ್ಲವರಲ್ಲ ನಾವು

ನಂಬುವುದಿಲ್ಲ ನೀವು !
ನಮ್ಮನ್ನು ಅಟ್ಟಿಸುತ್ತೀರಿ
ಬಿಲದಿಂದ ಬಿಲಕ್ಕೆ ಓಡಿಸುತ್ತೀರಿ
ನಿಧಿ ಕಾಯುವವನನ್ನು ಕಾಯಲು ಹಚ್ಚುತ್ತೀರಿ
ಖಾಯಮ್ಮಾಗಿ ಪಟ್ಟಗಟ್ಟುತ್ತೀರಿ ಅದೇ ಹುದ್ದೆಯಲ್ಲಿ

ನನ್ನಂತಹವನ್ಯಾರೋ ನಿನ್ನಿನಿಯಳ ಕಚ್ಚಿದನೆಂದು
ದಂಡಿಸಲು ನಿಂತಿದ್ದಿಯಲ್ಲಾ
ಮಾನವ ಹಕ್ಕುಗಳ ದಂಡ ಹಿಡಿದು ನಿಂತ ಮಹಾರಾಯ
ಯೋಚಿಸು
ನಿಮ್ಮವರಲ್ಲಿ ಮೈ ತುಂಬ ವಿಷವಿರುವವರು ಎಷ್ಟು ಜನ ?
ನಾನೋ ಬರೀ ನೀರು ಹಾವು

**ಡಾ॥ ಧರಣೀದೇವಿ ಮಾಲಗತ್ತಿ**
ಎಂ. ಐ. ಜಿ. ೨೯, ೧ನೇ ಮಹಡಿ, ಮಾರುತಿ ದೇವಸ್ಥಾನದ ರಸ್ತೆ
ಗಂಗೋತ್ರಿ ಲೇಔಟ್, ಮೈಸೂರು – ೫೭೦ ೦೦೯

ಊರ ಮುಂದಿನ ಹಳ್ಳಕ್ಕ ಕೆರಿ ಕಟ್ಟತಾರಾ ಅಂತ ಸುದ್ದಿ ಬಂತು. ಇದನ್ನ ಕೇಳಿ ಶಿವಲಿಂಗು ಗಾಬರಿ ಆಗಿದ್ದಾ. ಮಳಿಗಾಲ ಬಂತಂದ್ರ ಬೆಸ್... ಅಂತ ಹರೀತಿತ್ತು ಆ ಹಳ್ಳಾ. ಹಳ್ಳ ತುಂಬಿ ಹರೀತಿತ್ತಂದ್ರ ಅಚ್ಚೀಕಡಿ ಮಂದಿ ಅಚ್ಚೀಕ ಇಚ್ಚೀ ಕಡೀ ಮಂದಿ ಇಚ್ಚೀಕ. ಒಂದೊಂದ ಸಲಾ ಆ ಹಳ್ಳದಾಗ ದನಾ ತೇಲಕೊಂಡು ಹೋಗಿದ್ದು, ಗಿಡಾ ತೇಲಕೊಂಡ ಹೋಗಿದ್ದು ಅಷ್ಟ ಯಾಕ ಹಿಂದಿನ ತ್ವಾಟದಾಗಿನ ಗುಡಸಲಾನ ಹರಕೊಂಡ ಹೋಗದ್ದನ್ನ ಶಿವಲಿಂಗು ಕಣ್ಣಾರೆ ನೋಡಿದ್ದ. ಹಿಂಥಾ ಭಯಂಕರ ಹಳ್ಳಕ್ಕ ಒಂದ ಮಣ್ಣಿನ ಒಡ್ಡ ಹಾಕಿ ಕೆರಿ ಕಟ್ಟತಾರಂತ. ಈ ಸುದ್ದಿ ಕೇಳಿ ಶಿವಲಿಂಗು ಖರೇನ ಗಾಬರಿ ಆಗಿದ್ದ. ಅಂಥಾ ಹಳ್ಳಕ್ಕ ಒಂದು ಮಣ್ಣ ಒಡ್ಡ ಹೆಂಗ ಕಟ್ಟತಾರಾ ಅಂತ ತಲಿಕೆಡಸಗೊಂಡಿದ್ದ.

ಶಿವಲಿಂಗುನ ಬ್ಯಾಸಿಗಿ ಸೂಟಿ ಬಂದಿದ್ದ ತಡ ಊರ ಮುಂದಿನ ಹಳ್ಳದ ದಂಡ್ಯಾಗ ಏಳೆಂಟ ಟ್ಯಾಕ್ಟರ್ ಹಳದಿಹಳದಿ ಡೆಂಪರಗಳು, ದೆವ್ವಿನಂತಾ ಯಂತ್ರಗೋಳು. ಸುತ್ತಲ ಹಳ್ಳೀಲಿದ್ದ ಬಂದ ನೂರಾರು ಜನಾ ಕೂಲಿ ಮಂದಿ. ಕೆರಿಕಟ್ಟು ಕೆಲಸ ಯುದ್ಧ ನಡದಾಂಗ ನಡೀತು. ಇದನ್ನೆಲ್ಲ ನೋಡಿದ ಶಿವಲಿಂಗುಗ ಹಳ್ಳದ ಶಕ್ತಿಗಿಂತ ಈ ಯಂತ್ರಗೋಳ ಶಕ್ತಿ ದ್ವಾಡದು ಅನಿಸ್ತು. ಯಾಕೋ ಹರಿಯೂ ಹಳ್ಳದ ಬಗ್ಗೆ ಪಾಪ ಅನ್ನಿಸ್ತು. ಇನ್ನ ಮುಂದ ಹಂಥಾ ಹಳ್ಳಾ ನೋಡಾಕ ಆಗೂದಿಲ್ಲಲಾ ಅಂತ ಕೆಟ್ಟ ಅನಿಸ್ತು. ಶಿವಲಿಂಗು ಏಳನೆತ್ತೆ ಮುಗಿಸೂದರಾಗ ದೆವ್ವಿನಂತಾ ಯಂತ್ರಗೋಳು, ಇರಿವಿಗತೆ ಹರದಾಡು ನೂರಾರು ಮಾನವ ಕುನ್ನಿಗೋಳು ಸೇರಿ ದೊಡ್ಡ ಒಡ್ಡ ಕಟ್ಟಿ ಕೆರಿ ಮುಗಿಸೇಬಿಟ್ಟಿದ್ರು.

ಒಂದು ರಾತ್ರಿ ಲೋಕಾನ ಹರಕೊಂಡ ಹೋಗಂಥಾ ಮಳಿ ಹೊಡೀತು. ಮಲಗಿದ್ದ ಶಿವಲಿಂಗು ತೆಲಿ ಮ್ಯಾಲ ಯಾರೋ ಕೈ ಇಟ್ಟಂಗ ಆತು. ಕಣ್ಣ ತೆಗದಾ ಅವ್ವ ತೊಡೀ ಮ್ಯಾಲ ಮಲಗಸಕೊಂಡಿದ್ಲು. ಮಾನ್ಯಾಗ ಎಲ್ಲಾರೂ ಎದ್ದು ಕುಂತಿದ್ರು. ಚಿಮಣಾದ ಬೆಳಕಿನ್ಯಾಗ ಏನೂ ತಿಳೀಲಿಲ್ಲ. ಹೆದರಿ ಶಿವಲಿಂಗು ಅವ್ವನ ಎದೀಹೊಕ್ಕ. ಮಳೀ ಹೊಡತಕ್ಕ ದೇವರ ಕೋಣಿ ಬಿತ್ತು ಅಂತ ಅವ್ವ ಶಿವಲಿಂಗುನ ಇನ್ನಿಟ ಬಿಗಿ ಹಿಡದ್ಲು. ನಿದ್ದಿ ಗಣ್ಣಾಗಿದ್ದ ಶಿವಲಿಂಗೂಗ ಥಟ್ಟನ ಕೆರಿ ನೆಣಪಾಗಿ ನಿದ್ದಿನ ಕಿತ್ತಿಹೋತು. ಹಿಂಥಾ ಮಳೀಗಿ ಕೆರಿ ಒಡ್ಡ ಕಿತಗೊಂಡ ಹೋಗಿರಬೇಕು ಅನಕೊಂಡ. ಸಂಜೀಕಡೆನ ನೀರಿಲ್ಲದ ಕೆರಿ ಒಡ್ಡಿನ ತೆಳಗ ಲಗೋರಿ ಆಡಿ ಬಂದಿದ್ದಾ. ಈಗ ಅವಗ ಕೆರಿ ಬೇಕೋ ಹಳ್ಳಬೇಕೋ ತಿಳೀಲಾರದಂಗ ಆತು. ಮನಿಯವರೆಲ್ಲಾ ಮನಿ ಬಿದ್ದ ಚಿಂತ್ಯಾಗಿದ್ರ ಶಿವಲಿಂಗು

ಸೂರ್ಯಾ ಹೊಂಡೂ ದಾರಿ ಕಾಯಾಕತ್ತಿದ್ದಾ. ಕೋಳಿ ಕೂಗಿದ್ದ ತಡಾ ಶಿವಲಿಂಗು ಎದ್ದು ಯಾರಿಗೂ ಹೇಳಲಾರದ ಹೊರಗ ಜಿಗದ. ಊರ ಮುಂದ ಹಣಮಂತ ದೇವರಗುಡಿ ಕಟ್ಟಿಗಿ ಬಂದ. ಜನಾ ಅಲ್ಲೊಬ್ರ ಇಲ್ಲೊಬ್ರ ಮಾತಾಡ್ತಿದ್ರು. ಸಣ್ಣಾಗಿ ಬೆಳಕ ಮೂಡಿತು. ಶಿವಲಿಂಗು ಕಟ್ಟಿ ಏರಿ ಕೆರಿ ಒಂಡಿ ಕಡೆ ನೋಡ್ತಾನ ಒಮ್ಮೆಲೆ ಎದಿ ಧಸಕ್ ಅಂದಂಗ ಆತು. ನಿನ್ನೆರ ಖಾಲಿ ಇದ್ದ ಕೆರಿತುಂಬಾ ನೀರ ನಿಂತೈತಿ. ಊರ ಸನೇದಾಗ ನೀರಬಂದ್ಯೆತಿ. ಸೂರ್ಯಾ ಮ್ಯಾಲ ಬಂದಂಗ ಬಂದಂಗ ನೀರಾ ಮಿರಿಮಿರಿ ಮಿಂಚತೈತಿ. ಊರಾಗಿನ ಜನಾ ಕೆರಿ ಕಡೆ ಹೊಂಟ್ರು. ಶಿವಲಿಂಗುನ ದೋಸ್ತರೂ ಬಂದ್ರು. ಎಲ್ಲಾರೂ ಓಡಿ ಕೆರಿಕಡೆ ಹ್ವಾದರು. ಇಡೀ ಕೆರಿ ತುಂಬಾ ತೊಡಿಮಟಾನೀರ. ಹುಡಗರು ಹೆದರಕೊಂತ ನೀರಾಗ ಇಳದರು. ದೊಡ್ಡೊರು ಆಗಲೇ ಅಂಗಿಮ್ಯಾಕ ಹಿಡಕೊಂಡ ನಡು ಕೆರೀಗಿ ಹೋಗಿದ್ರು. ಶಿವಲಿಂಗು ಅಂತೂ ನೀರ ಮೂಗಿನ ತುದಿ ಮಟಾ ಬರೂತನಾ ಹ್ವಾದಾ. ಕುಣದು ಕುಣದು ಕುಪ್ಪಳಿಸಿದರು. ಹಸಿವಾ ಮನಿ ಎಲ್ಲಾ ಮರತು ಕೆರಿ ನೀರಾಗ ಆಡಿದರು. ಆಗ ಶಿವಲಿಂಗು ಎರಡ ವರ್ಷದ ಹಿಂದ ಕಾಳಿಂಗ ಸರ್ಪದಗತೆ ಬೆಸ್ಸಂತ ಹರೀತಿದ್ದ ಹಳ್ಳ ನೆನಪಸಗೊಂಡಾ. ಈಗ ಹಾವಾಡಿಗನ ಕೈಯ್ಯಾಗ ಹಲ್ಲ ಕಿತ್ತಿದ ಹಾವಿನ ಗತೆ ಮೈ ಚೆಲ್ಲಿ ಮಲಗಿತ್ತು ಆ ಹಳ್ಳಾ ಕೆರಿ ರೂಪದಾಗ.

ಕೆರಿ ಒಂಡಿ ಮ್ಯಾಲ ಹೊಂಟಾವರು ಶಿವಲಿಂಗು ಇನ್ನಾ ಕುಂತಿದ್ದ ನೋಡಿ 'ಶಿವಲಿಂಗು ಮನೀಗಿ ಬಾ ನಸಗ ಆತು' ಅಂತ ಕರದ್ರು. 'ಹೂಂ ಇನೀಟ ಕುಂತ ಬರತೀನಿ ನಡೀ ಕಾಕಾ' ಅಂತ ಕಾಲ ಚಾಚಿ ಎರಡೂ ಕೈ ಹಿಂದಿಟ್ಟು ಮುಖಾ ಮ್ಯಾಕೆತ್ತಿ ಗಾಳಿಗಿ ಹಿಡದಾ. ನಸಗಾದರ ಏನಾತು ಶಿವಲಿಂಗುನ ಎದಿ ಸೂರ್ಯಾ ಯಾವತ್ತು ನಿಗಿ ನಿಗಿ ಉರೀತಿದ್ದ. ತನ್ನ ಹಳ್ಳಿ ಹೊಲ, ತ್ವಾಟಾ ಕೆರಿ ಪ್ರತಿಯೊಂದು ಇಂಚ ಇಂಚಾಗಿ ಅವನ ಕಣ್ಣ ಮುಂದ ಇತ್ತು. ಬಾಲ್ಯದ ನೆನಪ ಮಾಡಕೊಳ್ಳೂದು ಅಂದ್ರ ಅವಾ ಜಗತ್ತನ ಮರೀತಿದ್ದಾ. ಏನೋ ನೆನಪಾಗಿ ಅವನ ಕಣ್ಣ ತ್ಯಾವಾತು.

ಶಿವಲಿಂಗು ಮ್ಯಾಟ್ರಿಕ್ಕಿ ಮುಗಿಸಿ ಒಂದ್ಯಾಡ್ಡ ವರ್ಷ ಆಗಿದ್ದು. ಕಬ್ಬಿನಂಥಾ ಹುಡಗಾ. ಹೊಲಾ ಮನಿ ಎತ್ತ ದನಾ ಅಂತ ಬ್ಯಾಸರಿಲ್ದ ದುಡೀತಿದ್ದಾ. ಆದರ ಮುಂದಿನ ದಿನಗೋಳು ಮಾತ್ರ ಮಿಂಚಿನಂಗ ಬಂದ ಹ್ವಾದು. ಮೂರ ಜನಾ ಅಣ್ಣಗೋಳು ಇದ್ದ ನಾಕೆಕರೆ ಜಮೀನಿನ ಸಲಾಗಿ ಹೊಡದಾಡಿದ್ರು. ಮನಿ ಪಾಲಾಗ್ಲಿ ಅಂತ ಗುದ್ದಾಡಿದ್ರು. ಅವ್ವಗ ಸಣ್ಣ ಮಗಾ ಶಿವಲಿಂಗುಂದ ಚಿಂತಿ. ಒಂದ ಸಲಾ ಪ್ಯಾಟಿ ಕಾರಖಾನ್ಯಾಗ ಕೆಲಸಾ ಮಾಡತಿದ್ದ ಸೋಮನಗೌಡರು ಊರಿಗಿ ಬಂದಿದ್ರು. ಅವ್ವ ಶಿವಲಿಂಗುನ ಅವರ ಹತ್ರ ಕರಕೊಂಡು ಹೋಗಿ ತನ್ನ ಕಿವ್ಯಾಗಿನ ಬಂಗಾರ ಸಾಮಾನ ತಗದ ಅವರ ಕೈಯ್ಯಾಗ ಹಾಕಿ 'ನಮ್ಮ ಶಿವಲಿಂಗುನ ನಿಮ್ಮ ಉಡೇದಾಗ ಹಾಕತೀನಿ ಅವನ್ನ ಪ್ಯಾಟಿಗಿ ಕರಕೊಂಡ ಹೋಗಿ ಒಂದ ಕೆಲಸಾ ಹಚ್ಚಿರಿ' ಅಂತ ಕಾಲಹಿಡದ್ಲು. ಸೋಮನ ಗೌಡರ ಜೋಡಿ ಪ್ಯಾಟಿ ಸೇರಿದ ಶಿವಲಿಂಗು ಅವರ ಜೋಡೀನ ಫ್ಯಾಕ್ಟರಿ ಕೆಲಸಕ್ಕೆ ಸೇರಿದಾ. ಅವ್ವಾ ಹಿರಿಹಿರಿ ಹಿಗ್ಗಿದ್ಲು. ಅಕಿ ಹಿಗ್ಗ ಅಲೀಗೆ ಮುಗೀಲಿಲ್ಲ. ಚಲೋ ಮನಿತನಾ ನೋಡಿ ವರ್ಷ ತುಂಬೂದರಾಗ ಶಿವಲಿಂಗನ ಮದಿವೀನೂ ಮುಗಿಸೇ ಬಿಟ್ಲು. ಶಿವಲಿಂಗುನ ಸಂಸಾರ ದಂಡಿಗಿ ಹಚ್ಚಿದ ಸಂತೋಷ ಆ ತಾಯಿಗಿದ್ದರೂ, ದಿನ್ನಾ ದೊಡ್ಡ ಮಕ್ಕಳ ಹೊಡದಾಟ ನೋಡಲಾರದ ಚಿಂತಿ ಹತ್ತಿ ದಿನಾ ದಿನಾ ಕೊರಿಗಿ ಒಂದಿನಾ ಕಣ್ಣ ಮುಚ್ಚಿದ್ಲು. ಶಿವಲಿಂಗುಗ ತಾಯಿ ಕಳಕೊಂಡಿದ್ದು ಊರ ಜೋಡಿ ಕಳ್ಳಬಳ್ಳೀನ ಹರದಂಗ ಆತು.

ಒಂದಿನಾ ಫ್ಯಾಕ್ಟರಿ ಕೆಲಸಾ ಮುಗಿಸಿ ಬರಾಗ ವಿಪರೀತ ಮಳಿ. ಶಿವಲಿಂಗು ಸೈಕಲ ಹಿಡಕೊಂಡು ಮನೀಗಿ ಹೊಂಡಾಕ ನಿಂತಿದ್ದಾ. ಮಳಿ ಕಡಿಮೇನ ಆಗಲಿಲ್ಲ. ಮನ್ಯಾಗ ಹೆಂಡ್ತಿ ಲಕ್ಷ್ಮಿ ಒಬ್ಬಾಕೆ ಇದ್ದಳು. ತೊಯ್ಸಿಗೊಂಡ್ರೂ ಚಿಂತಿಲ್ಲಂತ ಸೈಕಲ್ ಏರಿ ಹೊಂಟಬಿಟ್ಟಾ. ದಾರಿ ತುಂಬಾ ಮಳಿನೀರ, ಕತ್ತಲದಾಗ ದಾರಿ ಸರಿ ಕಾಣದನ ಶಿವಲಿಂಗುನ ಸೈಕಲ ಹಿಡಿತಾ ತಪ್ಪಿತು. ಏನಾಗಾಕತ್ತೈತಿ ಅಂತ ಗೊತ್ತ ಆಗೂದ್ರಾಗ ಸೈಕಲ್ ಸಮೇತ ಶಿವಲಿಂಗು ದೊಡ್ಡ ತಗ್ಗನ್ಯಾಗ ಬಿದ್ದಿದ್ದಾ.

ದವಾಖಾನಿ ನಾತಾ, ಗುಜು ಗುಜು ಮಾತು. ಕಣ್ಣಮ್ಯಾಲ ಯಾರೋ ಕೈ



ಬುಡಕ್ಕೆ
ಕೊಡಲಿ ಏಟು ಬಿದ್ದಾಗ
ಮರದ ಆರ್ತನಾದ
ಹಕ್ಕಿ ಕೊರಳಲ್ಲಿ
ಹೊರಬಂತು

ರವಿಶಂಕರ ಒಡ್ಡಂಬೆಟ್ಟು
ಕಾವೂರು, ಮಂಗಳೂರು – ೧೫

ಇಟ್ಟಂಗ ಆಗೇತಿ. ತೆಲಿ ಒಜ್ಜಿ ಆಗಿ ಮೈಯಲ್ಲಾ ಬ್ಯಾನಿ.

'ಕಣ್ಣಿಗಿ ಹಣೀಗಿ ಪೆಟ್ಟಾಗೇದಂತ. ತಲಿಗೀ ಏಟ ಬಿದ್ದಿದ್ರ ಉಳೀದ ಒಜ್ಜಿ ಇತ್ತಂತ'

'ಕಣ್ಣ ಹ್ವಾದ ಮ್ಯಾಲ ಏನ ಜೀವನಾ, ಪಾಪ ಒಳ್ಳೇ ಹುಡುಗ ಹಿಂಗಾಗಬಾರದಿತ್ತು.'

ಯಾರ್‍ಯಾರುವೋ ಮಾತಗಳು. ಯಾರ ಬಗ್ಗೆ ಮಾತಾಡತಿರಬಹುದು ಅಂತ ಶಿವಲಿಂಗು ಯೋಚಿಸುದರಾಗ ಅಳುವ ಧ್ವನಿ. ಅದೇ ಲಕ್ಷ್ಮೀದು.

'ಸಮಾಧಾನ ಮಾಡಕೋ ಲಕ್ಷ್ಮೀ ಜೀವಕ್ಕ ಏನೂ ಧಕ್ಕಿ ಇಲ್ಲಂತ. ಕಣ್ಣ ಹ್ವಾದರ ಏನಾತು. ನೀ ಅದೀಯಲ್ಲ' ಶಿವಲಿಂಗುಗ ಮಲಿಗಿದಲ್ಲೇ ಎಲ್ಲಾ ಅರ್ಥ ಆತು. ಸಂಕಟ ಆದಂಗ ಆಗಿ ಅವ್ವ ನೆನಪಾಗಿ ಯವ್ವಾ... ಅಂತ ನರಳಿದಾ.

ಕನಸ ಹೊತಗೊಂಡು ನಗರಕ ಹೋಗಿದ್ದ ಶಿವಲಿಂಗು ಕಣ್ಣ ಕಳಕೊಂಡು ಹಳ್ಳೀ ಸೇರಿದ್ದ. ಹೋಗಾಗ ಅವ್ವ ಇದ್ದಳು. ಅಣ್ಣಗೋಳು ಒಂದೇ ಬಾಗಲ ಮನ್ಯಾಗ ಇದ್ದರು. ಈಗ ಮೂರು ಬಾಗಲಾ. ಕೋಳಿಗೂಡಿನಂಥಾ ಮನಿ. ಒಬ್ಬರ ಮಾರಿ ಒಬ್ಬರ ನೋಡಲಾರದ ಅಣ್ಣಂದಿರು. ಶಿವಲಿಂಗು ಕಣ್ಣ ಕಳಕೊಂಡು ಊರಿಗಿ ಬಂದಾಗ ಊರಿಗಿ ಊರ ಲೊಚಗುಟ್ಟಿತು. ಮರುಗಿತು. ಜನರ ಪ್ರೀತಿ ನೋಡಿ ಶಿವಲಿಂಗುಗ ಧೈರ್‍ಯಾ ಬಂದ್ರೂ ಅದ ಧೈರ್‍ಯ ಮನ್ಯಾಗ ಬಾಳದಿನಾ ಉಳೀಲಿಲ್ಲ. ಫ್ಯಾಕ್ಟರಿಯವರು ದವಾಖಾನಿ ಖರ್ಚಕೊಟ್ಟು ಕೈ ತೊಳಕೊಂಡಿದ್ರು. ಸಂಘದವರು ಪರಿಹಾರಾ ಅದೂ ಇದೂ ಅಂತ ಮಾತಾಡಿದ್ರೂ ಕೆಲಸ ಆಗಲಿಲ್ಲ. ಶಿವಲಿಂಗು ಬರೀಕೈಲಿ ಊರಿಗಿ ಬಂದಿದ್ದಾ. ಸಣ್ಣಪುಟ್ಟ ಔಷಧಿಗಿ ಅಣ್ಣಗೋಳನ ಕೇಳಿ 'ಇಲ್ಲಾ' ಅನಸಗೊಂಡಿದ್ದಾ. ಹೆಂಡತಿ ಲಕ್ಷ್ಮೀಗೂ ಅತ್ತಿಗೆಯರಿಗೂ ದೊಡ್ಡ ಯುದ್ಧಾನ ಆಗಿ ಲಕ್ಷ್ಮೀ ಹೇಳದ ಕೇಳದ ಹೋಗಿ ತವರಮನಿ ಸೇರಿದಳು. ಶಿವಲಿಂಗು ಎದಿರಿಗಿ ಸಿಕ್ಕಿರ ಸಾಕು ಜನಾ ಮರಗತಿದ್ರು. ಶಿವಲಿಂಗುಗ ಜನರ ಕರುಣಾ ಬ್ಯಾಡ ಅನಿಸ್ತು ಹಿಂಗಾಗಿ ಒಬ್ನೇ ಹೋಗಿ ಕೆರೀ ದಂಡೀಗಿ ಕುಂದರತಿದ್ದಾ. ಭಾಳ ದುಃಖ ಆದಾಗ ಕೆರೀ ಒಂಡೀಗೆ ತೆಲಿಕೊಟ್ಟು ಮಲಗತಿದ್ದಾ.

***ಒಂದಿನಾ ಹಿಂಗ ಕೆರಿ ದಂಡಿಮ್ಯಾಲ ಕುಂತ ಶಿವಲಿಂಗುನ ಎದಿ ಹೊತ್ತಿ ಉರೀತಿತ್ತು. ಒಂದು ತುತ್ತ ಊಟಾ ಹಾಕೂ ಸಲವಾಗಿ ಅಣ್ಣಂದಿರ ಒಳಗ ಜಗಳಾಗಿತ್ತು. ಅತ್ತಿಗೇರು ಖಡಾಖಂಡಿತ ಹೇಳಿ ಬಿಟ್ಟಿದ್ರು. ಆಗೂದಿಲ್ಲಾಂತ. ಮೂಲಿಮನಿ ಬಸಪ್ಪಜ್ಜ ಬ್ಯಾರೆ 'ಲಕ್ಷ್ಮೀಗಿ ಉಡಿಕಿ ಮಾಡಿಕೊಡು ತಯಾರಿ ನಡಿಸ್ಯಾರಾ' ಅಂತ ಸುದ್ದಿ ತಂದಿದ್ದಾ. ಎಲ್ಲಾ ಸುದ್ದಿ ಕೇಳಿ ಯಾಕರ ಬದುಕಬೇಕು ಅನ್ನೂದ ಶಿವಲಿಂಗುನ್ನ ಕಾಡತಿತ್ತು. ನಿಧಾನಕ ಹೋಗಿ ಕೆರಿ ನೀರ ಬಗಸ್ಯಾಗ ತೊಗೊಂಡು ಮಾರಿಗಿ, ತೆಲಿಮ್ಯಾಲಿ ಹಾಕೊಂಡ. ಎದೀಗಿ ಸವರಕೊಂಡ. ಸ್ವಲ್ಪ ತಂಪಾದಂಗ ಆತು.*** ಬಂದ ಮ್ಯಾಲ ಕುಂತಾ. ಕತ್ತಲ ಆಗಿ ತಂಪಗಾಳಿ ಬೀಸಿದರೂ ಎದ್ದ ಹೋಗಬೇಕೂ ಅನಸ್ಲಿಲ್ಲಾ. ಎಷ್ಟೊತ್ತಿನ ಮ್ಯಾಲ ಹಿರಿಯಣ್ಣನ ಮಗನ ಧ್ವನಿ ಬಂತು. 'ಕಾಕಾ ಯಾರ ಬಂದಾರಾ ಬರಬೇಕಂತ' ನನ್ನ ನೋಡಾಕ ಯಾರ ಬರತಾರ ಲಕ್ಷ್ಮೀ ಅಪ್ಪನ ಬಂದಿರಬೇಕು. ಅದ ಡೈವರ್ಸ್ ವಿಷಯ ಮಾತಾಡಾಕ ಅಂತ ನಿಧಾನಕ ಎದ್ದು ಶಿವಲಿಂಗು ಮನೀ ಕಡೆ ಹೊಂಟಾ.

ಮನೀ ಮುಂದ ಬರೂದರೊಳಗ ಮೂರ ಜನ ಅಣ್ಣಂದಿರ ಧ್ವನಿ 'ಬಾ ಶಿವಲಿಂಗು' 'ಇಷ್ಟೊತ್ತೇನೆ ಹೋಗೂದು' 'ಎಲ್ಲೆರಬಿದ್ರ ಏನ ಗತಿ' 'ಹುಡಗಿತ್ತು ಬೇಸ್ಯಾತು' ಶಿವಲಿಂಗುಗ ದಿಕ್ಕ ತಪ್ಪಿ ಹೋತು. ಒಮ್ಮಿದೊಮ್ಮೆ ಅಣ್ಣಂದಿರ ಪ್ರೀತಿ ಉಕ್ಕಿ ಹರೀತಿತ್ತು. ಎಲ್ಲಾರು ಬಂದು ಕೈಹಿಡಿದು ಕರಕೊಂಡು ಹ್ವಾದರು. 'ನಮಸ್ಕಾರ ಶಿವಲಿಂಗ ಹೆಂಗ ಅದೀರಿ' ಎಲ್ಲೋ ಕೇಳಿದ ಧ್ವನಿ. ಶಿವಲಿಂಗು ಗೊಂದಲಕ ಬಿದ್ದ. 'ಯಾಕ ದನಿ ಗುರ್ತಹತ್ತಲಿಲ್ಲ ?' ಮತ್ತೆ ಅದೇ ಆತ್ಮೀಯ ಧ್ವನಿ. ಎಲ್ಲೋ ಹತ್ತಿರದಿಂದ ಕೇಳಿದಂತಿತ್ತು. ಓ ನೆನಪಾಯ್ತು. 'ಛ್ಲಂ ಯೂನಿಯನ್ ಲೀಡರು ಬಾಬಣ್ಣಾರು.' ಶಿವಲಿಂಗು ಉದ್ವೇಗಕ್ಕೊಳಗಾದ. 'ಹ್ಞಾಂ ನೆನಪಿಟ್ಟೀರೆಲಾ... ಅಡ್ಡೀಯಿಲ್ಲ' ಶಿವಲಿಂಗುಗ ದುಃಖ ಉಕ್ಕಿಬಂದು 'ಹೆಂಗ ಮರೀಲ್ರಿ... ನೀವಿರಲಿಕ ದವಾಖಾನಿ ಕಾಣಲಾರದ ಸತ್ತು ಹೊಕ್ಕಿದ್ದ್ಯಾ' ಅಂತ ಬಾಬಣ್ಣನ ತೆಕ್ಕೀ ಬಡದಾ. ಸಮಾಧಾನ ಮಾಡಿದ ಮ್ಯಾಲ ಬಾಬಣ್ಣ ಹೇಳಿದ 'ಯೂನಿಯನ್‌ದಿಂದ ಹೋರಾಟ ಮುಂದವರಿಸಿದ್ವಿ. ಕೊನಿಗೂ ಜಯಾ ಸಿಕ್ತು. ನಿನಗೆ ಐವತ್ತು ಸಾವಿರ ಪರಿಹಾರ ಸಿಕ್ಕದ ಇಗಾ. ಇದು ಐವತ್ತ ಸಾವಿರದ್ದು ಡಿ.ಡಿ. ಅದ. ನಿಮ್ಮೂರ ಸನೇದ ಬ್ಯಾಂಕ್‌ನ್ಯಾಗ ಒಂದು ಅಕೌಂಟ್ ನಿನ್ನ ಹೆಸರ್ಲೆ ತೆಗದು ಈ ಡಿ.ಡಿ. ಅದಕ ಹಾಕು. ಎಲ್ಲಾ ದುಡ್ಡ ನಿನ್ನ ಹೆಸರಿಗಿ ಜಮಾ ಆಗತದ.' ಅಂತ ಬಾಬಣ್ಣ ಶಿವಲಿಂಗುಗ ಡಿ. ಡಿ. ಕೊಟ್ಟ. ಶಿವಲಿಂಗು ದುಃಖ ಉಕ್ಕಿ 'ಈ ಪಾಪಿ ಸಲಾಗಿ ಚಿಂತಿಮಾಡವರು ಇನ್ನಾ ಅದೀರೆಲ್ರಿ ಈ ಭೂಮಿ ಮ್ಯಾಲ' ಅಂತ ಅಳಾಕತ್ತಿದಾ. ಬಾಬಣ್ಣ 'ಮತ್ತೇನರ ತೊಂದ್ರಿ ಇದ್ರ ಹೇಳ' ಅಂತ ಸಮಾಧಾನಪಡಿಸಿ ಹೋದ.

ಐವತ್ತು ಸಾವಿರ ಡಿ.ಡಿ. ಶಿವಲಿಂಗು ಕೈ ಸೇರಿದ್ದೇ ತಡಾ ಆ ಕ್ಷಣದಿಂದನ ರಾಜಾತಿಥ್ಯ ಚಾಲು ಆತು. ಅಣ್ಣಂದಿರು ಶಿವಲಿಂಗು ಎಲ್ಲಿ ಮಲಗಬೇಕು ಅನ್ನೊದಕ ಜಗಳಾ ಚಾಲೂ ಮಾಡಿದರು. ಅತ್ತಿಗೇರು ಅವಾ ಏನು ಉಣಬೇಕು. ಯಾರು ಉಣಸಬೇಕು ಅಂತ ಕಿತ್ತಾಡಾಕತ್ತಿದರು. ಮರದಿನಾ ಮುಂಜಾನೆ ನಾಷ್ಟಾ ಎಲ್ಲಿ ಮಾಡಬೇಕು ಅನ್ನೂದರಿಂದನ ಜಗಳ ಚಾಲೂ ಆತು. ಮಧ್ಯಾಹ್ನ ಅನೂದರೊಳಗ ಮಾವ ಬಂದಿದ್ದ ಲಕ್ಷ್ಮೀ ಕರೆಕೊಂಡು 'ಏನ್ರೀ ಅಳ್ಯಾದೇವ್ರ ಹೆಂಗದೀರಿ. ಲಕ್ಷ್ಮೀ ಬಂದಮ್ಯಾಲ ಆ ಕಡೆ ಬರಬಾರದನು. ಏನs ದಡ್ಡ ಹುಡಗಿ. ಮಳ್ಳ, ತಿಳೀಲಾರ್ದ ತಪ್ಪ ಮಾಡಿ ತವರ ಮನೀಗಿ ಬಂತು. ನೀವು ಹಂಗ ಬಿಟ್ಟ ಬಿಡೂದನ. ಇಗಾ ಕರಕೊಂಬಂದೀನಿ ಕರಕೋರಿ ನಿಮ್ಮ ಒಡವಿ ನೀವು' ಅಂದು ಲಕ್ಷ್ಮೀ ಕೈ ಶಿವಲಿಂಗು ಕೈಯಾಗ ಇಟ್ಟ. ಲಕ್ಷ್ಮೀ ಶಿವಲಿಂಗುನ ಕಾಲ ಹಿಡಕೊಂಡು 'ನನ್ನ ತಪ್ಪಾತ್ರೀ...' ಅಂತ ಅಳಾಕತ್ತಿದ್ಲು. ಮುದಡಿ ಆಗಿ ಕುಂತ ಶಿವಲಿಂಗುಗ ಹುಚ್ಚ ಹಿಡೀದೊಂದ ಬಾಕಿ.

ಮಧ್ಯರಾತ್ರಿ ಇಡೀ ಊರ ಮಲಗಿತ್ತು. ಸಾವಕಾಶ ಸಪ್ಪಳಾ ಮಾಡಲಾರದ ಶಿವಲಿಂಗು ಎದ್ದು ಹೊರಗ ಬಂದ. ಒಂದ ಸಲ ಮನಿ ಬಾಗಲ ಕೈಯಾಡಿಸಿ ನಿಟ್ಟುಸಿರು ಬಿಟ್ಟ. ಅಂಗಳದಾಗ ಹೆಜ್ಜೆ ಇಟ್ಟು ಸ್ವಲ್ಪ ಹೊತ್ತು ನಿಂತು ತನ್ನ ಹಿಂದ ಯಾರೂ ಬಂದಿಲ್ಲವನ್ನೂದು ಖಾತ್ರಿ ಮಾಡಕೊಂಡ ಮ್ಯಾಲ ಅವಸರಲೆ ನಡದಾ. ಕಣ್ಣಿದ್ದವರು ಜಕ್ಕಸಬೇಕು ಹಂಥಾ ಭರಾಟೀಲೆ ಕೆರಿ ದಂಡೀತನಾ ಬಂದ. ಕುಂತು ದಣವಾರಸಗೊಂಡ. ನಿಧಾನಕ ಇಳಿದು, ನೀರ ದಂಡಿಗಿ ಹೋಗಿ ಮಳಕಾಲ ಮಟಾ ನೀರಿಗಿಳಿದಾ. ಸಾವಕಾಶ ಬೊಗಸೀಲೆ ನೀರ ತಗೊಂಡು ಮಾರೀಗಿ ಸಿಡಿಸಿಕೊಂಡ. ಸಮಾಧಾನ ಆದಂಗಾತು. ಎಷ್ಟೊತ್ತ ಹಂಗ ನಿಂತು ಕಿಸೇದಾಗ ಕೈ ಹಾಕಿ ಐವತ್ತು ಸಾವಿರದ ಡಿ. ಡಿ. ತೆಗೆದು ಹರಿಲಾಕ ಹತ್ತಿದಾ. ಡಿ. ಡಿ. ಹರದು ಚೂರಚೂರಾಯಿತು. ಎಲ್ಲ ಚೂರನೂ ಕೆರೀಗಿ ಹಾಕಿದಾ. ತಾನೂ ನಿಧಾನಕ ಕುಂತು ಪೂರ್ತಿ ಮುಳುಗಿ ಎದ್ದ. ಮೈ ಮನಸ್ಸು ತಂಪ ಆತು. ಮತ್ತ ಮತ್ತ ಮುಳುಗಿ ಎದ್ದ. ಆಮ್ಯಾಲ ದಂಡೀಗಿ ಬಂದು ಇಷ್ಟ ದಿನಾ ತನಗ ಆಸರಾ ಕೊಟ್ಟ ಕೆರೀ ಒಂಡೀಗಿ ಒಂದು ನಮಸ್ಕಾರ ಹೊಡೆದು ಊರಕಡೆ ಬೆನ್ನ ಮಾಡಿ ಹೊರಟ. ಎಷ್ಟೊತ್ತು ಹೋದ ಮ್ಯಾಲ ಡಾಂಬರ ರಸ್ತೆ ಬಂತು. ಶಿವಲಿಂಗೂ ನಡಿಯೋ ರಭಸಕ್ಕ ರೋಡ ಮಗ್ಗಲದಾಗಿನ ಗಿಡದಾನ ಹಕ್ಕಿ ಪಕ್ಷಿ ಬೆದರಿ ಹಾರಿದು. ಲೋಕಕ್ಕ ಕತ್ತಲಾಗಿದ್ದರ ಕತ್ತಲು ಅನೋದನ್ನ ಮರತ ಹೋಗಿದ್ದ ಶಿವಲಿಂಗೂನ ಒಳಗಿನ ಬೆಳಕು ಪ್ರಕಾಶಮಾನವಾಗಿತ್ತು.

**ಶ್ರೀಸುಮಿತ್ರಾಸುತ ಅಗಸಬಾಳ**
ಕೇರಾಫ್ : ಡಾ|| ಎಸ್. ಎಸ್. ಕಾಶಿನಕುಂಟಿ, ಅಗಸಬಾಳ
ತಾ|| ಮುದ್ದೇಬಿಹಾಳ, ಜಿ|| ವಿಜಾಪೂರ




**ಬೆಂ**ಗಳೂರು ವಿಶ್ವವಿದ್ಯಾನಿಲಯದ ಮಾಜಿ ಉಪಕುಲಪತಿಗಳಾದ ಡಾ॥ ಎಂ. ಎಸ್. ತಿಮ್ಮಪ್ಪ ಅವರು ಮನೋವಿಜ್ಞಾನದ ಖ್ಯಾತ ಪ್ರಾಧ್ಯಾಪಕರು ಮತ್ತು ವೈದ್ಯಕೀಯ ಮನೋವಿಜ್ಞಾನಿಗಳಾಗಿ ಹಲವು ದುಡಿಮೆಗಾರರಿಗೆ ಮಾರ್ಗದರ್ಶನ ನೀಡಿರುವಂಥವರು. ಅವರ ಬಹುಮುಖ ಪ್ರತಿಭೆ, ಕ್ರಿಯಾಶೀಲತೆ ಮತ್ತು ಪಾಂಡಿತ್ಯ ಅನನ್ಯವಾದ್ದು. ಈಚಿನ ದಶಕಗಳಲ್ಲಿ ವಿಶ್ವವಿದ್ಯಾನಿಲಯಗಳು ಅವರಂತಹ ವಿದ್ವಾಂಸರನ್ನು, ಮಾನವತೆಯ ಪ್ರತೀಕಗಳನ್ನು, ಅಷ್ಟಾಗಿ ಕಾಣದಂತಹ ಸನ್ನಿವೇಶ ಉಂಟಾಗಿರುವುದು ನಮ್ಮ ಶಿಕ್ಷಣಕ್ಷೇತ್ರದ ದುರವಸ್ಥೆಯ ಒಂದು ಮುಖ. ಅವರ ಮಾನಸಿಕ ಸ್ಥೈರ್ಯ ಮತ್ತು ಸಹನಶೀಲತೆ ಅನುಕರಣೀಯ. ಒಬ್ಬೊಂಟಿಯಾಗಿರುವ ಪ್ರೊ॥ ತಿಮ್ಮಪ್ಪನವರಿಗೆ ಇತ್ತೀಚೆಗಷ್ಟೆ ಒಂದು ಶಸ್ತ್ರಚಿಕಿತ್ಸೆಯ ಅಗತ್ಯವುಂಟಾಯಿತು. ಅಂಥದರಲ್ಲೂ ಅವರು 'ಹೊಸತು'ಗೆ ಸಂದರ್ಶನ ನೀಡಿ ಹತ್ತಾರು ವಿಷಯಗಳನ್ನು ಕುರಿತಂತೆ ತಮ್ಮ ಅಭಿಪ್ರಾಯಗಳನ್ನು ಹಂಚಿಕೊಂಡಿದ್ದಾರೆ. ಆರಂಭದ ದಿನಗಳಿಂದಲೂ ಶ್ರೀಯುತರು 'ಹೊಸತು' ಪತ್ರಿಕೆಯ ಓದುಗರು ಮತ್ತು ಬೆಂಬಲಿಗರು. ಪತ್ರಿಕೆಯ ಪರವಾಗಿ ಡಾ॥ ಜಿ. ರಾಮಕೃಷ್ಣ ಮತ್ತು ಶ್ರೀ. ಗಿರಿಧರ ಖಾಸನೀಸ್ ಮಾನ್ಯ ಡಾ॥ ತಿಮ್ಮಪ್ಪ ಅವರನ್ನು ಅವರ ಮನೆಯಲ್ಲಿ ೧೨.೧೧.೨೦೧೩ರಂದು ಭೇಟಿಯಾಗಿ, ಆತಿಥ್ಯ ಸ್ವೀಕರಿಸಿ, ಸಂದರ್ಶಿಸಿದ್ದಾರೆ. ಸಂದರ್ಶನ ಲೇಖನವನ್ನು ಸಿದ್ಧಗೊಳಿಸಿರುವವರು ಡಾ॥ ಜಿ. ರಾಮಕೃಷ್ಣ.

ಮೊದಲಿಗೆ ಲೋಕಾಭಿರಾಮವಾಗಿ ಮಾತನಾಡುತ್ತಾ ಈ ವರ್ಷದ ರಾಜ್ಯೋತ್ಸವ ಪ್ರಶಸ್ತಿಗಳ ಬಗ್ಗೆ ಪ್ರಸ್ತಾಪಿಸಲಾಯಿತು. ಪ್ರಶಸ್ತಿಗಾಗಿ ಅರ್ಜಿ ಹಾಕಿಕೊಳ್ಳಬೇಕಾದ ಪದ್ಧತಿ ಒಳ್ಳೆಯದಲ್ಲವೆಂದು ಹೇಳುವಾಗ ಹಿಂದೊಮ್ಮೆ ಕಾಲೇಜುಗಳಲ್ಲಿ ಅತ್ಯುತ್ತಮ ಸೇವೆ ಸಲ್ಲಿಸಿದ ಅಧ್ಯಾಪಕರೊಬ್ಬರಿಗೆ ಪ್ರಶಸ್ತಿ ನೀಡಲು ಅರ್ಜಿಗಳನ್ನು ಕರೆಯಲಾಗಿದ್ದಿತೆಂದೂ, ಅಧ್ಯಾಪಕ ಸಂಘಗಳು ಅದನ್ನು ತಿರಸ್ಕರಿಸಿ ಹಿಂತೆಗೆದುಕೊಳ್ಳುವಂತೆ ಆಗ್ರಹಿಸಿದ್ದುದಾಗಿಯೂ ಡಾ॥ ಜಿ. ಆರ್. ತಿಳಿಸಲಾಗಿ "ಎಂಥದೇ ಯೋಜನೆಯನ್ನು ಸಿದ್ಧಗೊಳಿಸಿಕೊಡಿ, ಅದರ ಫಲವನ್ನು ಲಪಟಾಯಿಸಲು ಕೆಲವರು ಕಾದು ಕುಳಿತಿರುತ್ತಾರೆ ಮತ್ತು ಹೇಗೋ ಅದರಲ್ಲಿ ಯಶಸ್ವಿಯಾಗುತ್ತಾರೆ; ಅದು ಒಳ್ಳೆಯ ಸೂಚನೆಯಲ್ಲ" ಎಂದು ಡಾ॥ ತಿಮ್ಮಪ್ಪ ಪ್ರತಿಕ್ರಿಯಿಸಿದರು. ನಂತರ ಔಪಚಾರಿಕ ಮಿಶ್ರಿತ ಅನೌಪಚಾರಿಕ ಸಂದರ್ಶನ ಸುಮಾರು ಒಂದೂವರೆ ಗಂಟೆಗಳ ಕಾಲ ನಡೆಯಿತು.

# ಶಿಕ್ಷಣ ಕ್ಷೇತ್ರದಲ್ಲಿ ಕ್ರಾಂತಿಯ ಹೆಸರೇ ಇಲ್ಲವಾಗಿದೆ

**ಡಾ॥ ಎಂ. ಎಸ್. ತಿಮ್ಮಪ್ಪ**



*ಸಂದರ್ಶಕರು :*

**ಜಿ. ರಾಮಕೃಷ್ಣ**

**ಗಿರಿಧರ ಖಾಸನೀಸ್**

**ಗಿರಿಧರ ಖಾಸನೀಸ್ :** ಮೊದಲಿಗೆ ನಿಮ್ಮ ಸಂಕ್ಷಿಪ್ತ ಜೀವನ ವೃತ್ತಾಂತ ಕೇಳಬಹುದೆ? ನೀವು ಮನೋವಿಜ್ಞಾನದ ಕ್ಷೇತ್ರವನ್ನು ಆಯ್ಕೆ ಮಾಡಿ ಕೊಂಡುದಕ್ಕೆ ಏನಾದರೂ ವಿಶೇಷ ಕಾರಣವಿದೆಯೆ?

**ಡಾ॥ ಎಂ. ಎಸ್. ತಿಮ್ಮಪ್ಪ :** ನಾನು ೧೯೪೨ರ ನವಂಬರ್ ೧೪ರಂದು ಜನಿಸಿದವನು. ಆದ್ದರಿಂದ ನನ್ನ ಜನ್ಮದಿನವನ್ನು ಇಡೀ ರಾಷ್ಟ್ರವು ಆಚರಿಸುತ್ತದೆ! ಅದು ನೆಹರು ಜನ್ಮದಿನವೂ ಆಗಿರುವುದರಿಂದ. ನನ್ನೂರು ಶಿವಮೊಗ್ಗ ಜಿಲ್ಲೆಯ ಸಾಗರದ ಬಳಿಯ ಮಂಚಾಲೆ. ಅಲ್ಲೇ ಪ್ರಾಥಮಿಕ ಶಿಕ್ಷಣ. ಬೇರೊಂದು ಮಂಚಾಲೆಯೂ ಇದೆ, ಅದು ಸಾಗರದ ಬಳಿ ಇಲ್ಲ. ಪ್ರೌಢಶಾಲಾ ಶಿಕ್ಷಣ ಸಾಗರದಲ್ಲಿ. ಆ ಊರಿನಲ್ಲಿ ವಾರಾನ್ನದಿಂದ ವಿದ್ಯಾಭ್ಯಾಸ ಮಾಡಿದ್ದು. ಅಂದರೆ, ವಾರದ ಒಂದೊಂದು ದಿನ ಒಬ್ಬೊಬ್ಬರ ಮನೆಯ ಊಟ. ಓದಿದ್ದು ಕನ್ನಡ ಮಾಧ್ಯಮದಲ್ಲಿ. ಇಂಗ್ಲಿಷ್ ಮಾತನಾಡುವಷ್ಟು ಕಲಿಯಬೇಕೆಂಬುದು ನಮ್ಮ ತಂದೆಯವರ ಆಶಯ. ಆಮೇಲೆ ಮುಂದಕ್ಕೆ ಓದುವುದು ಅನಗತ್ಯ, ತೋಟ ಸಂಭಾಳಿಸಿಕೊಂಡಿದ್ದರೆ ಸಾಕು, ಎಂಬುದು ಅವರ ಇರಾದೆ. ಆದರೆ ನಾನು ಶಿವಮೊಗ್ಗದ ಸರ್ಕಾರಿ ಕಾಲೇಜಿಗೆ ಅರ್ಜಿ ಹಾಕಿದೆ. ನಾನು ಹಿರಿ ಮಗ, ಓದುವುದಾದರೆ ಡಾಕ್ಟರಾಗಬೇಕೆಂದು ತಂದೆ ಇಚ್ಛಿಸಿದ್ದರು. ನಾನು ವಿಜ್ಞಾನ ವಿಭಾಗಕ್ಕೆ ಅರ್ಜಿ ಹಾಕಿದೆ, ಆದರೆ ಮೊದಲ ಪಟ್ಟಿಯಲ್ಲಿ ನನ್ನ ಹೆಸರಿರಲಿಲ್ಲ. ಎರಡನೆಯ ಪಟ್ಟಿ ಪ್ರಕಟವಾಗುವ ಮೊದಲೇ ನಾನು ಆರ್ಟ್ಸ್ ತರಗತಿಗೆ ಸೇರಿಬಿಟ್ಟೆ: ಇತಿಹಾಸ, ಅರ್ಥಶಾಸ್ತ್ರ, ತರ್ಕಶಾಸ್ತ್ರ. ಇವು ಆರ್ಟ್ಸ್ ವಿಭಾಗದಲ್ಲಿ ಜನಪ್ರಿಯ ಆಯ್ಕೆ.

**ಜಿ. ಆರ್. :** ಹಾಗೇಕೆ ಅವಸರ ಮಾಡಿ ಆರ್ಟ್ಸ್‌ಗೆ ಸೇರಿದಿರಿ?

**ಡಾ॥ ಎಂ. ಎಸ್. ತಿ. :** ಅದೇ ನನ್ನ ಆಯ್ಕೆಯಾಗಿದ್ದುದು. ನಾನು ಶಾಲೆಯಲ್ಲಿದ್ದಾಗ ಒಂದು ಪುಟ್ಟ ಪುಸ್ತಕ ಓದಿದ್ದೆ. ಮೈಸೂರು ವಿಶ್ವವಿದ್ಯಾಲಯದ ಪ್ರಕಟಣೆ: ಮೂರಾಣೆ ಪುಸ್ತಕ. ಶ್ರೀ. ನಾರಾಯಣ ಶಾಸ್ತ್ರಿ ಅವರ "ಮನೋ ವಿಶ್ಲೇಷಣ ಶಾಸ್ತ್ರವು" ಎಂಬುದು. ಸತತ ಮೂರು ಗಂಟೆ ಅದನ್ನು ಓದಿ ಮುಗಿಸಿದ್ದೆ. ಅದನ್ನು ಓದಿದಾಗಲೇ ನಾನು ಮನೋವಿಜ್ಞಾನದ ಅಧ್ಯಯನ ಮಾಡಬೇಕೆಂದು ತೀರ್ಮಾನಿಸಿದ್ದೆ.

**ಹೊಸತು :** ಅಂತಹ ವಿಶೇಷವೇನಿತ್ತು ಅದರಲ್ಲಿ?

**ಡಾ॥ ಎಂ. ಎಸ್. ತಿ. :** ಹಳ್ಳಿಯಲ್ಲಿ ನಮ್ಮ ಪಕ್ಕದ ಮನೆಯ ಒಡತಿಗೆ **"ಮೈಮೇಲೆ"** ಬರುತ್ತಿತ್ತು. ದೆವ್ವ ಬರುವ ಹೆಂಗಸೆಂದು ಎಲ್ಲರೂ ಆಡಿ ಕೊಳ್ಳುತ್ತಿದ್ದರು. ರಾತ್ರಿ ಹೊತ್ತು ಆಕೆ ಕಿರುಚುತ್ತಿದ್ದರೆ ನನಗೆ ಭಯ. ನಿದ್ರೆಯಿಲ್ಲ. ಶಾಸ್ತ್ರಿಗಳ ಪುಸ್ತಕ ಸಿಕ್ಕಿದ್ದು ಆ ಕಾಲದಲ್ಲಿ. ಅದನ್ನು ಓದಿದ ನಂತರ ನಾನೆಂದೂ ಭಯಪಡಲಿಲ್ಲ. ಆಕೆಗೆ 'ಹಿಸ್ಟೀರಿಯಾ' ಇತ್ತೆಂದು ತಿಳಿದೆ, ದೆವ್ವ-ಭೂತ ಎಲ್ಲ ಓಡಿಹೋದವು. ಮನೋವಿಜ್ಞಾನ ತಿಳಿಯಬೇಕೆಂಬ ಇಚ್ಛೆ ಆಗ ಬಲವಾಯಿತು.

**ಹೊಸತು :** ನಿಮ್ಮ ಕಾಲೇಜು ದಿನಗಳು ಹೇಗಿದ್ದವು?

**ಎಂ. ಎಸ್. ತಿ. :** ಬಹಳ ಚೆನ್ನಾಗಿತ್ತು. ೧೯೫೭ರಲ್ಲಿ ಪ್ರೀ-ಯೂನಿವರ್ಸಿಟಿ: ಶ್ರೀ. ಶಿವಪ್ಪ ಇತಿಹಾಸದ ಪಾಠ ಹೇಳಿದರು, ಪ್ರೊ॥ ಟಿ. ಶಿವಣ್ಣ ಅರ್ಥಶಾಸ್ತ್ರ ಬೋಧಕರು. ಆಗ್ಗೆ ಆಗಲೆ ನಾನು ನೆಹರು ಬರೆದಿದ್ದ **"ಡಿಸ್ಕವರಿ ಆಫ್ ಇಂಡಿಯ"** ಓದಿದ್ದೆ. ನಂತರ ಮೈಸೂರು ಮಹಾರಾಜ ಕಾಲೇಜಿನಲ್ಲಿ ಮನೋವಿಜ್ಞಾನದ ವಿದ್ಯಾರ್ಥಿಯಾದೆ. ಬಿ.ಎ. ಮತ್ತು ಎಂ.ಎ. ಅಲ್ಲೇ. ಡಾ॥ ಬಿ. ಕೃಷ್ಣನ್ ನಮ್ಮ ಪ್ರಾಧ್ಯಾಪಕರು. ಶಿಷ್ಯ ವಾತ್ಸಲ್ಯಕ್ಕೆ ಹೆಸರಾದ ಶ್ರೇಷ್ಠ ಅಧ್ಯಾಪಕರು ಅವರು. ೧೯೬೨ರಲ್ಲಿ ಎಂ.ಎ. ಆಯಿತು. ಮನೋವಿಶ್ಲೇಷಣಾ ಶಾಸ್ತ್ರಕ್ಕೆ ಕಾಲಿಟ್ಟಂತಾಯಿತು. ನಂತರ ಬೆಂಗಳೂರಿನ ನಿಮ್ಹಾನ್ಸ್‌ನಲ್ಲಿ ವೈದ್ಯಕೀಯ ಮನೋವಿಜ್ಞಾನದಲ್ಲಿ ಡಿಪ್ಲೊಮಾ ಪಡೆದೆ, ಆಮೇಲೆ ಪಿಎಚ್.ಡಿ. ಪದವಿ ಪಡೆದೆ. ಸರ್ಕಾರಿ ಕೆಲಸವೊಂದು ಸಿಕ್ಕಿತ್ತು, ಆದರೆ ಪಿಎಚ್.ಡಿ. ಓದಲು ಹೋದೆ.

**ಹೊಸತು :** ನಿಮ್ಹಾನ್ಸ್ ಹೇಗಿತ್ತು ನಿಮ್ಮ ಕಾಲದಲ್ಲಿ?

**ಎಂ. ಎಸ್. ತಿ. :** ಚೆನ್ನಾಗಿತ್ತು, ಈಗಲೂ ಚೆನ್ನಾಗಿದೆ. ಆಗ್ಗೆ ಭಾರತೀಯ ಮನೋವಿಜ್ಞಾನವನ್ನು ಶುದ್ಧವಾಗಿ ಕಲಿಸುವ ಅಧ್ಯಾಪಕರಿದ್ದರು. ಡಾ॥ ಎಚ್. ಎನ್. ಮೂರ್ತಿ, ಪ್ರೊ॥ ಎಸ್. ಕೆ. ರಾಮಚಂದ್ರರಾವ್, ಇತ್ಯಾದಿ. ನಿಮಗೆ ಆಶ್ಚರ್ಯ ಎನಿಸಬಹುದು: ನಮಗೆ ಮಾನವಶಾಸ್ತ್ರ ಸಹ ಪಠ್ಯವಾಗಿತ್ತು. ಈಗ ಅದಿಲ್ಲವೇನೊ! ಪ್ರೊ॥ ಗೋಪಾಲಸ್ವಾಮಿಯವರದು ಬಹಳ ಅಚ್ಚುಕಟ್ಟು ವಿಧಾನ. ಮನೋವಿಜ್ಞಾನಕ್ಕೆ ಮಾನವಶಾಸ್ತ್ರ ಬಹಳ ಪ್ರಯೋಜಕವೆಂದು ಅವರು ತಿಳಿದಿದ್ದರು.

**ಹೊಸತು :** ಆಮೇಲೆ ಮೊದಲು ನೀವು ಕೆಲಸಕ್ಕೆ ಸೇರಿದ್ದೆಲ್ಲಿ?

**ಎಂ. ಎಸ್. ತಿ. :** ಕಾರ್ಖಾನೆಗಳ ಕೆಲಸಗಾರರ ಸಮಸ್ಯೆಗಳನ್ನು ಅರಿತು ಪರಿಹರಿಸಲು ವೈದ್ಯಕೀಯ ಮನೋವಿಜ್ಞಾನವನ್ನು ಅನ್ವಯಿಸುವ ಕೆಲಸದಲ್ಲಿದ್ದೆ. ಅದೊಂದು ಚಿಕ್ಕ ಸಂಸ್ಥೆ. ಕೇಂದ್ರ ಸರ್ಕಾರದ ವೈಜ್ಞಾನಿಕ ಮತ್ತು ಔದ್ಯಮಿಕ ಸಂಶೋಧನಾ ಸಂಸ್ಥೆಯ ಪ್ರಯೋಗಾಲಯ ಅದು (ಸಿ.ಎಸ್.ಐ.ಆರ್.): ಜವಳಿ ತಯಾರಿಕೆಗೆ ಸಂಬಂಧಿಸಿದ ಸಂಶೋಧನಾ ಸಂಸ್ಥೆ; ಅಹಮದಾಬಾದ್‌ನಲ್ಲಿ. (ATIRA ಎಂಬ ಹೆಸರಿತ್ತು. ಈಗ ಅದಕ್ಕೆ ಬೇರೆ ಹೆಸರಿದೆ). ವಿಜಯ ಪದಕಿ ಎಂಬುವವರು ಅದರ ನಿರ್ದೇಶಕರು. ಈಗಿನ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಪಕ್ಕದಲ್ಲಿತ್ತು ಆ ಪ್ರಯೋಗಶಾಲೆ. ನನ್ನ ಕೆಲಸ ಕಾರ್ಖಾನೆಗಳಿಗೆ ಹೋಗಿ ಅಲ್ಲಿಯ ಕಾರ್ಮಿಕರ ಕೆಲಸ, ಮಾನಸಿಕ ಆರೋಗ್ಯದ ತಪಾಸಣೆ, ಅವರ ಒತ್ತಡಗಳ ಪರಿಹಾರ, ಮುಂತಾದುವಕ್ಕೆ ಗಮನ ನೀಡುವುದು. ಆಗ ಮತ್ತು ನಂತರ ಸುಮಾರು ಹತ್ತು ವರ್ಷ ಆ ಕೆಲಸ ಮಾಡಿ ನನ್ನ ಕ್ಷೇತ್ರದ ಪರಿಣತಿಯನ್ನು ವಿಸ್ತರಿಸಿಕೊಂಡೆ.

**ಹೊಸತು :** ಉದ್ಯಮಗಳ ಪ್ರತಿಕ್ರಿಯೆ ಹೇಗಿತ್ತು?

**ಎಂ. ಎಸ್. ತಿ. :** ಚೆನ್ನಾಗಿತ್ತು. ಸಾರ್ವಜನಿಕ ಮತ್ತು ಖಾಸಗಿ ವಲಯಗಳ ಕಾರ್ಖಾನೆಗಳೆರಡರಲ್ಲೂ ಕೆಲಸ ಮಾಡಿದೆ. ಕಾರ್ಮಿಕರ ಒಡನಾಟದಿಂದ ನನ್ನ ಅಧ್ಯಯನವು ಉನ್ನತ ಮಟ್ಟಕ್ಕೇರಲು ಸಹಾಯವಾಯಿತು. ಆದರೆ ಪದಕಿ ಅವರ ಪ್ರಯೋಗಾಲಯದಲ್ಲಿ ನಾನಿದ್ದದ್ದು ಒಂದು ವರ್ಷ ಮಾತ್ರ. ಆಮೇಲೆ ನಾನು ನಿಮ್ಹಾನ್ಸ್‌ಗೆ ಹಿಂದಿರುಗಿ ಅಲ್ಲೇ ಕೆಲಸ ಮಾಡುತ್ತಿದ್ದೆ. ಡಾ॥ ಬೋಪಯ್ಯ, ಡಾ॥ ಬೆನಕಪ್ಪ, ಮುಂತಾದವರ ಪರಿಚಯವಾಗಿತ್ತು. 'ನಿಮ್ಹಾನ್ಸ್‌ನಲ್ಲಿ ನೀವು ಬೆಳೆಯಲಾಗುವುದಿಲ್ಲ'ವೆಂದು ಅವರು ಹೇಳುತ್ತಿದ್ದರು.

**ಹೊಸತು :** ಮತ್ತೆ ನೀವು ಮೈಸೂರು ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರಾಗಿದ್ದು ಯಾವಾಗ ?

**ಎಂ. ಎಸ್. ತಿ. :** ನನಗೆ ನನ್ನ ಕ್ಷೇತ್ರದಲ್ಲಿ ಸಂಶೋಧನೆ ಮುಂದುವರಿಸಬೇಕೆಂಬ ಆಸೆ ಇತ್ತು. ಶರೀರ ಮತ್ತು ಮನಸ್ಸಿನ ಪರಸ್ಪರ ಸಂಬಂಧದ ಬಗೆಗಿನ ಅಧ್ಯಯನ ನನಗೆ ಕುತೂಹಲ ಕೆರಳಿಸಿತ್ತು. ನನ್ನ ಪ್ರಾಧ್ಯಾಪಕರಾಗಿದ್ದ ಡಾ॥ ಬಿ. ಕೃಷ್ಣನ್ ಅವರು ಹೇಳಿದರು, ವಿಶ್ವವಿದ್ಯಾಲಯದಲ್ಲಿ ಒಂದು ಸ್ಥಾನವಿದೆ, ಆದರೆ ಹಂಗಾಮಿಯಾದ್ದು ; ಕ್ರಮೇಣ ಆ ಸ್ಥಾನವು ಭರ್ತಿಯಾಗುವ ಸಮಯ ಬಂದಾಗ ನೀನೂ ಅಭ್ಯರ್ಥಿಯಾಗಬಹುದು, ಎಂದು. ೧೯೭೩ರಿಂದ ೭೭ರವರೆಗೆ ಅಲ್ಲಿದ್ದೆ. ಅಧ್ಯಾಪನ ಮತ್ತು ಸಂಶೋಧನೆ ಎರಡರಲ್ಲೂ ಆಸಕ್ತಿ ಹೆಚ್ಚುತ್ತಾ ಬಂತು, ಕೆಲಸದಲ್ಲಿ ತೃಪ್ತಿ ಇತ್ತು.

**ಹೊಸತು :** ಆಮೇಲೆ ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಬಂದಿರಿ.

**ಎಂ. ಎಸ್. ತಿ. :** ಹೌದು. ಡಾ॥ ಎಚ್. ನರಸಿಂಹಯ್ಯನವರು ಆಗ ಉಪಕುಲಪತಿ. ಮನೋವಿಜ್ಞಾನ ವಿಭಾಗವು ಇರಲೇಬೇಕೆಂದು ಬಯಸಿದ್ದವರು ಅವರು. ನಾನು ರೀಡರ್ ಮತ್ತು ವಿಭಾಗದ ಮುಖ್ಯಸ್ಥನಾಗಿ ಕೆಲಸ ಆರಂಭಿಸಿ ವಿಭಾಗದ ಬೆಳವಣಿಗೆಗೆ ಮನಸ್ಸು ಕೊಟ್ಟೆ. ಆರಂಭದಲ್ಲಿ ಮೂವತ್ತು ವಿದ್ಯಾರ್ಥಿಗಳು. ಬಹಳ ಒಳ್ಳೆಯ ಸಹೋದ್ಯೋಗಿಗಳು ದೊರೆತರು : ಇಂದಿರಾ, ಸುಧಾ ಭೋಗಲೆ, ಮುಂತಾದವರು. ಡಾ॥ ವಿನೋದ ಮೂರ್ತಿಯವರು ನಂತರ ಪ್ರಾಧ್ಯಾಪಕರಾಗಿ ನೇಮಕಗೊಂಡು ಬಂದರು, ವಿಭಾಗದ ಮುಖ್ಯಸ್ಥರಾದರು. ಅದು ೧೯೮೦ರಲ್ಲಿ ಆದದ್ದು.

**ಹೊಸತು :** ಉದ್ಯಮಗಳ ಸಂಪರ್ಕ ಮುಂದುವರಿಯಿತೆ ?

**ಎಂ. ಎಸ್. ತಿ. :** ಹೌದು, ಆದರೆ ಬೇರೆ ರೀತಿಯಲ್ಲಿ. ಆಡಳಿತಾತ್ಮಕ ಜವಾಬ್ದಾರಿ ಹೊಂದಿರುವವರಿಗೆ ಸಲಹೆ ಕೊಡುವ ರೀತಿಯಲ್ಲಿ. ಅದು ಉಪನ್ಯಾಸ ನೀಡುವ ಮಾದರಿಯದಲ್ಲ, ಪರಸ್ಪರ ಸಂಭಾಷಣೆ ಮೂಲಕ ಸಮಸ್ಯೆಗಳನ್ನು ಬಿಡಿಸುವ ವಿಧಾನ ಅದು. ಕಾರ್ಖಾನೆಗಳ ಹಾಗೂ ವೈಯಕ್ತಿಕ ಸಮಸ್ಯೆಗಳೆರಡನ್ನೂ ಬಗೆಹರಿಸುವಂತಹ ಕೆಲಸ. ೧೯೮೦ರ ಸುಮಾರಿಗೆ ನಮ್ಮ ವಿಭಾಗದಲ್ಲಿ ಪ್ರಾಧ್ಯಾಪಕ ಹುದ್ದೆಗೆ ಅರ್ಜಿ ಕರೆಯಲಾಯಿತು. ಶ್ರೀ. ಟಿ. ಆರ್. ಜಯರಾಮನ್ ಆಗ ಉಪಕುಲಪತಿ. ನಿಮ್ಹಾನ್ಸ್‌ನಲ್ಲಿ ನನ್ನ ಅಧ್ಯಾಪಕರಾಗಿದ್ದ ವಿನೋದ ಮೂರ್ತಿ ಸಹ ಒಬ್ಬ ಅಭ್ಯರ್ಥಿ. ಅವರ ಪಿಎಚ್.ಡಿ. ಲಂಡನ್ನಿನದು. ನಿಮ್ಹಾನ್ಸ್ ಬಿಟ್ಟು ಬರಲಾರರೆಂಬ ಭಾವನೆ ಇತ್ತು. ಆದರೆ ಅವರು ಬಂದರು. ನಮ್ಮಲ್ಲಿ ಅಂತರ್ಯುದ್ಧ ಆರಂಭವಾಗುತ್ತದೆಂದು ಕೆಲವರು ನಿರೀಕ್ಷಿಸಿದ್ದರು. ಅಂಥದೇನೂ ಆಗುವ ಸಂಭವವಿರಲಿಲ್ಲ. ಆಯ್ಕೆ ಪಟ್ಟಿಯಲ್ಲಿ ಅವರು ಮೊದಲು, ಆಮೇಲೆ ನಾನು ಇದ್ದೆವು. ವಿಭಾಗಕ್ಕೆ ಅವರನ್ನು ಸಂತೋಷದಿಂದ ಸ್ವಾಗತಿಸಿ ಒಳ್ಳೆಯ ಸಂಬಂಧ ಬೆಳೆಸಿಕೊಂಡೆವು. ಅದರಿಂದ ವಿಭಾಗವೂ ಬೆಳೆಯಿತು.

**ಹೊಸತು :** ಹಾಗಾದರೆ ನೀವು ಪ್ರಾಧ್ಯಾಪಕರಾಗಿದ್ದು ಯಾವಾಗ ?

**ಎಂ. ಎಸ್. ತಿ. :** ನಿಮಗೆ ಗೊತ್ತಲ್ಲ, ೧೯೮೩ರಲ್ಲಿ ವಿಶೇಷಾರ್ಹತೆಯ ಆಧಾರದ ಮೇಲೆ ಬಡ್ತಿ ನೀಡುವ ಯೋಜನೆ ಬಂತು. ನನ್ನನ್ನು ಪ್ರಾಧ್ಯಾಪಕನನ್ನಾಗಿ ನೇಮಿಸಬೇಕೆಂದು ಸಮಿತಿ ಶಿಫಾರಸು ಮಾಡಿತ್ತು. ಆದರೆ ನಮ್ಮ ವಿಶ್ವವಿದ್ಯಾನಿಲಯದಲ್ಲಿ ಏನೇನೋ ನಡೆಯುತ್ತದೆ ! ಬೇರೆ ವಿಭಾಗದವರೊಬ್ಬರಿಗೆ ಬಡ್ತಿ ಇನ್ನೂ ಬಂದಿರಲಿಲ್ಲ. ನನಗೆ ಬಡ್ತಿ ಸಿಕ್ಕಿದರೆ ನಾನು ಅವರಿಗಿಂತ ಹಿರಿಯನಾಗಿ ಬಿಡುತ್ತೇನಲ್ಲ. ಆದ್ದರಿಂದ ಶಿಫಾರಸು ಇನ್ನೂ ಬಂದಿಲ್ಲವೆಂದು ಮೂರು ವರ್ಷ ತಡೆಹಿಡಿಸಿದ್ದರು.

**ಹೊಸತು :** ಎಲ್ಲಾದರೂ ಉಂಟೆ ! ಅದನ್ನು ಸರಿಪಡಿಸಲು ನೀವು ಆಗ್ರಹಿಸಬೇಕಾಗಿತ್ತು.

**ಎಂ. ಎಸ್. ತಿ. :** ಇರಬಹುದು, ಆದರೆ ಅದು ನನ್ನ ಸ್ವಭಾವವಲ್ಲ. ನನ್ನ ಪಾಡಿಗೆ ನಾನು ಕೆಲಸ ಮಾಡಿಕೊಂಡಿದ್ದೆ. ೧೯೮೬ರಲ್ಲಿ ಆಗ ಉಪಕುಲಪತಿಗಳಾಗಿದ್ದವರು ಶಿಫಾರಸು ಇನ್ನೂ ಏಕೆ ಬರಲಿಲ್ಲವೆಂದು ತನಿಖೆ ಮಾಡಿ ಹೈದರಾಬಾದಿನ ಪ್ರಾಧ್ಯಾಪಕರಿಗೆ ಪತ್ರ ಬರೆದರಂತೆ. ಅವರು ಸಮಿತಿಯಲ್ಲಿದ್ದ ಪರಿಣತರು. "ಮೂರು ವರ್ಷದ ಹಿಂದೆಯೇ ನನ್ನ ಅಭಿಪ್ರಾಯ ತಿಳಿಸಿದ್ದೆ; ಶ್ರೀಯುತರನ್ನು ಇನ್ನೂ ಪ್ರಾಧ್ಯಾಪಕರನ್ನಾಗಿ ನೇಮಿಸದಿರುವುದು ತೀರಾ ಅಕ್ರಮ", ಎಂದು ಖಾರವಾಗಿ ಉತ್ತರ ಬಂತು. ಆಗ ಕಚೇರಿಯ ಅಧಿಕಾರಿಗಳು ಮೂರು ವರ್ಷದ ಹಿಂದಿನ ಪತ್ರವನ್ನು ಪತ್ತೇಹಚ್ಚುವ ನಾಟಕ ಮಾಡಿ ಅದನ್ನು ಹೊರತೆಗೆದರು. ಇದು ನಮ್ಮ ವಿಶ್ವವಿದ್ಯಾನಿಲಯಗಳ ವೈಖರಿ, ಕೆಲವು ಹಿರಿಯ ಅಧ್ಯಾಪಕರ ನೈತಿಕತೆ ! ಆಗಿದ್ದು ಆಯಿತು ಬಿಡಿ. ನಾನು ೧೯೮೬ರಲ್ಲಿ ಪ್ರಾಧ್ಯಾಪಕನಾಗಿ ಬಡ್ತಿ ಪಡೆದೆ.



*ಡಾ॥ ಎಂ. ತಿಮ್ಮಪ್ಪ ಮತ್ತು ಡಾ॥ ಜಿ. ರಾಮಕೃಷ್ಣ*

**ಹೊಸತು :** ಮ್ಯಾನೇಜ್‌ಮೆಂಟ್‌ಗಳಿಗೆ ಸಲಹೆ, ತರಬೇತಿ, ಏನಾಯಿತು ?

**ಎಂ. ಎಸ್. ತಿ. :** ಅದು ಬಹುಕಾಲ ಹಾಗೆಯೇ ಮುಂದುವರಿಯಿತು – ಆದರೆ ವಿಶ್ವವಿದ್ಯಾನಿಲಯದ ಕೆಲಸಕ್ಕೆ ಕೊಂಚವೂ ಲೋಪ ಬರದಂತೆ. ಒಮ್ಮೆಯೂ ನನ್ನ ತರಗತಿಯ ಅಧ್ಯಾಪನ ಮತ್ತು ಸಂಶೋಧನೆಯ ಜವಾಬ್ದಾರಿಗೆ ಊನ ಉಂಟಾಗುವ ಸಂದರ್ಭ ಬರಲಿಲ್ಲ.

**ಹೊಸತು :** ಆಗಲೇ ನೀವು ಕುಲಸಚಿವರಾಗಿದ್ದು, ಅಲ್ಲವೆ ?

**ಎಂ. ಎಸ್. ತಿ. :** ಹೌದು, ೧೯೯೬ರಲ್ಲಿ. ಆಗಿನ ಉಪಕುಲಪತಿಗಳಾಗಿದ್ದ ಡಾ॥ ಎನ್. ಆರ್. ಶೆಟ್ಟಿಯವರ ಬಲವಂತದಿಂದ ಅದನ್ನು ಒಪ್ಪಿಕೊಳ್ಳಬೇಕಾಯಿತು. ನನ್ನ ಮುಂಚೆ ಆ ಸ್ಥಾನದಲ್ಲಿದ್ದವರು ಹೊರಹೋಗಿದ್ದರಿಂದ ನಾನು ಆ ಸ್ಥಾನಕ್ಕೆ ಬರಬೇಕಾಯಿತು. ನಾಲ್ಕು ವರ್ಷ ಆ ಸ್ಥಾನದಲ್ಲಿದ್ದು ನಂತರ ವಿಭಾಗಕ್ಕೆ ಹಿಂದಿರುಗಿದೆ.

**ಹೊಸತು :** ನಿಮ್ಮ ಮಗಳ ಅನಾರೋಗ್ಯದ ಸಂದರ್ಭ ಅದು.

**ಎಂ. ಎಸ್. ತಿ. :** ಹೌದು, ಅವಳಿಗಿನ್ನೂ ೩೦ರ ಹರೆಯ, ಆಗಲೆ ಅದಿತಿ ಟೆಕ್ನಾಲಜೀಸ್‌ನಲ್ಲಿ ಸಹಾಯಕ ವ್ಯವಸ್ಥಾಪಕ ಹುದ್ದೆಗೇರಿದ್ದಳು. ಕೆಲವೇ ದಿನ ಅನಾರೋಗ್ಯದಿಂದಿದ್ದು ಹಠಾತ್ತನೆ ತೀರಿಹೋದಳು. ಅದೊಂದು ಅತಿ ವಿಷಣ್ಣ ಸನ್ನಿವೇಶ. ಆ ಆಘಾತವನ್ನು ನನ್ನ ಪತ್ನಿ ಕೊನೆಯವರೆಗೂ ತಟ್ಟಿಕೊಳ್ಳಲಾರದಾದರು. ಆ ವ್ಯಥೆಯಲ್ಲೇ ಅವರೂ ತೀರಿಕೊಂಡರು. ನಾನು ಒಬ್ಬೊಂಟಿಯಾದೆ. ನನ್ನ ಮನೋವಿಜ್ಞಾನದ ತಿಳಿವಳಿಕೆಯು ಸವಾಲೆದುರಿಸಲು ಸಹಾಯ ಮಾಡಿತೇನೊ !

**ಹೊಸತು :** ನೀವು ಉಪಕುಲಪತಿಗಳಾದದ್ದು ಆಗಲೇ ಏನು ?

**ಎಂ. ಎಸ್. ತಿ. :** ಹೌದು, ೨೦೦೨ರಿಂದ ೨೦೦೬ರವರೆಗೆ. ನಾನು ಆ ಸ್ಥಾನ ಒಪ್ಪಿಕೊಳ್ಳುವುದು ನನ್ನ ಪತ್ನಿಗೆ ಸುತರಾಂ ಇಚ್ಛೆಯಿರಲಿಲ್ಲ. ಅವರು ಒಬ್ಬರೇ ಆಗಿಬಿಡುವ ಆತಂಕ. ಆದರೆ ನಾನೆಂದೂ

ಅನಗತ್ಯವಾಗಿ ವಿಶ್ವವಿದ್ಯಾಲಯದ ಕಚೇರಿಯಲ್ಲಿ ಸಂಜೆ ಆರರ ನಂತರ ಇರುತ್ತಿರಲಿಲ್ಲ. ನೇಮವಾಗಿ ದಿನವಿಡೀ ಕೆಲಸ ಮಾಡಿದರೆ ಅದು ಅಗತ್ಯವಲ್ಲ. ಏನಾದರೂ ಸಭೆ ಇದ್ದರೆ ಮಾತ್ರ ಸಂಜೆ ೮ರವರೆಗೆ ಇರಬೇಕಾಗುತ್ತಿತ್ತು, ಅಷ್ಟೆ.

**ಹೊಸತು :** ಹಿಂದೆ ಅಧ್ಯಾಪಕ ಸಂಘದ ಅಧ್ಯಕ್ಷರಾಗಿದ್ದ ನೀವು ಉಪಕುಲಪತಿಗಳಾದಿರಿ, ನಮಗೆಲ್ಲಾ ಅದು ಬಹಳ ಸಂತೋಷದ ಸಂಗತಿಯಾಗಿತ್ತು.

**ಎಂ. ಎಸ್. ತಿ. :** ವಿಶ್ವವಿದ್ಯಾನಿಲಯದಲ್ಲಿ ನಾನು ಯಾವ ಬಣಕ್ಕೂ ಸೇರದಿದ್ದವನು, ಎಲ್ಲ ಬಣಗಳಿಗೂ ಒಪ್ಪಿಗೆಯಾಗಿದ್ದವನು. ಹೀಗಾಗಿ ನಾಲ್ಕು ವರ್ಷ ನನ್ನ ಕೈಲಾದಷ್ಟು ಮಟ್ಟಿಗೆ ತೃಪ್ತಿಕರವಾಗಿ ಕೆಲಸ ಮಾಡಿದೆ. ಯಾವ ಒತ್ತಡಗಳಿಗೂ ಮಣಿಯಲಿಲ್ಲವಾದ್ದರಿಂದ ಕ್ರಮೇಣ ಒತ್ತಡ ಹಾಕುತ್ತಿದ್ದವರೂ ತಣ್ಣಗಾದರು. ನನ್ನ ಒಂದು ನಿಯಮವನ್ನು ಸದಾ ಪಾಲಿಸುತ್ತಿದ್ದೆ : ಯಾರೇ ಬಂದರೂ ನನ್ನನ್ನು ಭೇಟಿಯಾಗಬಹುದಿತ್ತು. ಅವರ ಕೆಲಸ ಆಗುವಂತಿದ್ದರೆ ಮಾಡಿಸಿಕೊಡುತ್ತಿದ್ದೆ; ಆಗದಿರಲು ಕಾರಣಗಳಿದ್ದರೆ ಅವನ್ನು ಅವರಿಗೆ ವಿವರಿಸಿ ಹೇಳುತ್ತಿದ್ದೆ. ನನಗೆ ವೈಯಕ್ತಿಕ ಕಾರ್ಯಸೂಚಿ ಏನೂ ಇರಲಿಲ್ಲವಾದ್ದರಿಂದ ಮತ್ತು ಇನ್ನೂ ಎತ್ತರಕ್ಕೇರಿ ಯು.ಜಿ.ಸಿ.ಗೋ ಮತ್ತೆಲ್ಲಿಗೋ ಹೋಗಬೇಕೆಂಬ ಆಸೆಯೇನೂ ಇಲ್ಲದಿದ್ದುದರಿಂದ ನನ್ನ ಕೆಲಸ ನಿರ್ವಹಿಸುವುದು ಸಾಕಷ್ಟು ಸುಲಭವಾಯಿತು.

**ಹೊಸತು :** ವಿಶ್ವವಿದ್ಯಾನಿಲಯದಲ್ಲಿ ಯಾವ ಹೊಸ ಕಾರ್ಯಕ್ರಮಗಳನ್ನು ಜಾರಿಗೆ ತಂದಿರಿ ?

**ಎಂ. ಎಸ್. ತಿ. :** ನಾನಿದ್ದುದು ಒಂದು ಸಂಧಿಕಾಲದಲ್ಲಿ. ಇದ್ದ ಪ್ರಾಧ್ಯಾಪಕರು ನಿವೃತ್ತಿ ಹೊಂದಿದ್ದರು, ಅವರ ಜಾಗಗಳಿಗೆ ಹೊಸಬರನ್ನು ನೇಮಿಸುವಂತಿರಲಿಲ್ಲ. ಆರ್ಥಿಕ ಮುಗ್ಗಟ್ಟಿನ ಹೆಸರಿನಲ್ಲಿ ಸರ್ಕಾರವು ನೇಮಕಾತಿಗಳಿಗೆ ನಿರ್ಬಂಧ ಹೇರಿತ್ತು. ವಿಭಾಗಗಳ ಕೆಲಸ ನಡೆಯುವುದು ಹೇಗೆ ? ಸ್ನಾತಕೋತ್ತರ ಶಿಕ್ಷಣಕ್ಕೆ ಹೊಡೆತ ಬೀಳುವ ಪರಿಸ್ಥಿತಿ. ಸರ್ಕಾರಕ್ಕೆ ಅದನ್ನು ತಿಳಿಸಿ ಹೇಳಿದೆ. ಹಿಂದಿನ ನೇಮಕಾತಿಗಳಲ್ಲಿ ಹಿಂದುಳಿದ ವರ್ಗಗಳಿಗೆ ಕಾದಿರಿಸಬೇಕಾಗಿದ್ದ ಸ್ಥಾನಗಳನ್ನು ನಿಗದಿತವಾಗಿ ತುಂಬಿರಲಿಲ್ಲ. ಅಂತಹ ವರ್ಗಗಳಿಗೆ ಮೀಸಲಿರಿಸಿ ಕೆಲವು ನೇಮಕಾತಿಗಳಿಗೆ ಸರ್ಕಾರ ಅನುಮತಿ ನೀಡಿತು. ಅದರಲ್ಲಿ ಪರಿಶಿಷ್ಟರು, ಹಿಂದುಳಿದವರು, ಹೀಗೆ ನೇಮಕಗೊಳ್ಳಲು ಸಾಧ್ಯವಾಯಿತು. ಇಂತಹ ಸಂದರ್ಭಗಳಲ್ಲಿ ಸಾಮಾನ್ಯವಾಗಿ ಕೇಳಿಬರುವ ಮಾತೊಂದಿದೆ : ಆಯ್ಕೆಯಲ್ಲಿ ಒಳ್ಳೆಯ ಪರಿಣತ ಅಭ್ಯರ್ಥಿಗಳು ದೊರಕುವುದಿಲ್ಲ, ಎಂದು. ಅದರ ಸತ್ಯಾಸತ್ಯತೆಯನ್ನು ಪರಾಮರ್ಶಿಸಿಕೊಳ್ಳಬೇಕು.

**ಹೊಸತು :** ಹಾಗೆಂದರೇನು ? ಒಳ್ಳೆಯ ಅಭ್ಯರ್ಥಿಗಳಿಲ್ಲದಿದ್ದರೂ ಆಯ್ಕೆ ಮಾಡಿಕೊಳ್ಳಬೇಕೆಂದೆ ?

**ಎಂ. ಎಸ್. ತಿ. :** ಈ ವಿಷಯದಲ್ಲಿ ನಾವು ವಸ್ತುನಿಷ್ಠವಾಗಿರಬೇಕು. ಎಲ್ಲರೂ ಸ್ಪರ್ಧಿಸಿ ವಿಜಯ ಸಾಧಿಸಬೇಕೆಂಬುದು ಸರಿ. ಅವಕಾಶವಂಚಿತರು ಸದಾ ಹಾಗೆಯೇ ಉಳಿಯುವಂತಾಗಕೂಡದು. ಅವಕಾಶ ಕಲ್ಪಿಸಿಕೊಟ್ಟು ಆಮೇಲೆ ಸ್ಪರ್ಧೆಗೆ ಸನ್ನದ್ಧರಾಗುವಂತೆ ಆಯೋಜಿಸಬೇಕು. ಪ್ರೋತ್ಸಾಹ ಕೊಡಿ, ಏನೋ ಬರೆದು ಪ್ರಕಟಿಸಲಿ, ಸಂಶೋಧನೆ ಮಾಡಲಿ, ಉತ್ತೇಜನ ನೀಡಲು ಎರಡು ಇಂಕ್ರಿಮೆಂಟ್ ಕೊಡಿ. ಅದು ದಾಕ್ಷಿಣ್ಯ ಅಥವಾ ದಾನವಲ್ಲ. ಹಿಂದುಳಿದಿದ್ದು ಈಗಷ್ಟೆ ಮುಂದಕ್ಕೆ ಬರುತ್ತಿರುವವರ ಹಿನ್ನೆಲೆ ನೋಡಿ : ಇಲ್ಲಿ ಸಂಶೋಧನಾ ವಿದ್ಯಾರ್ಥಿ, ಊರಿಗೆ ಹೋದರೆ ಕೇರಿಯಲ್ಲಿ ಮಲಗುವ ಸಂದರ್ಭ, ಝೋಪಡಿಯಲ್ಲಿ ವಾಸಿಸುವ ಸಂದರ್ಭ, ಗಾಳಿ–ಬೆಳಕು ಇಲ್ಲದಿರುವ ಸಂದರ್ಭ. ಅಲ್ಲಿ ಅಧ್ಯಯನ ಹೇಗೆ ನಡೆದೀತು ? ಪರಿಸರ ಅನಾನುಕೂಲವಾದ್ದರಿಂದ ಅವರು ಹಾಗೇ ಉಳಿದುಬಿಡಬೇಕೆ ? ನಾನೊಂದು ನಿಯಮ ಜಾರಿಗೆ ತಂದೆ : ಇಂತಹ ಹಿನ್ನೆಲೆಯಿಂದ ಬಂದಿರುವ ವಿದ್ಯಾರ್ಥಿಗಳನ್ನು ರಜಾ ದಿನಗಳಲ್ಲಿ ವಸತಿ ನಿಲಯದಿಂದ ಹೊರಹಾಕಕೂಡದು, ಎಂದು. ಅವರೆಲ್ಲಿಗೆ ಹೋಗಬೇಕು ? ಸಾಮಾಜಿಕ ಕೈಕೋಳ ತೊಡಿಸಿದ್ದೇವೆ, ಅವರಿಗೆ ಅವಕಾಶ ಕೊಡಿ, ಕೆಲಸ ಕೊಡಿ, ವಿಶೇಷ ತರಬೇತಿ ನೀಡಿ. ಅಧಿಕಾರ ಗಳಿಸುವಂತೆ ಮಾಡಿ. ಈ ನಿಟ್ಟಿನಲ್ಲಿ, ಹಿಂದೆ ಭರ್ತಿಯಾಗಿರದಿದ್ದ ಮೀಸಲಾತಿ ಸ್ಥಾನಗಳನ್ನು ತುಂಬುವುದರಲ್ಲಿ

ನಾನು ಸ್ವಲ್ಪ ಯಶಸ್ಸು ಗಳಿಸಿದೆನೆಂಬುದು ಸಮಾಧಾನದ ಸಂಗತಿ. ಅದೊಂದು ಸಾಧನೆಯೆಂದು ಬಗೆಯುತ್ತೇನೆ. ನೂರಕ್ಕೂ ಹೆಚ್ಚು ಸ್ಥಾನಗಳನ್ನು ತುಂಬಲಾಯಿತು; ಶಿಕ್ಷಕ ಮತ್ತು ಶಿಕ್ಷಕೇತರ ಎಂಬ ಎರಡೂ ಹುದ್ದೆಗಳಿಗೆ.

**ಹೊಸತು :** ಆ ಸಂದರ್ಭದಲ್ಲಿ ಒತ್ತಡಗಳಿರಲಿಲ್ಲವೆ ?

**ಎಂ. ಎಸ್. ತಿ. :** ಹೇಳಿದೆನಲ್ಲ, ಯಾರೋ ಒತ್ತಡ ಹೇರಿದರೆಂದು ಅದಕ್ಕೆ ಬಗ್ಗದೆ ಒಂದೆರಡು ಬಾರಿ ಪ್ರತಿರೋಧ ಒಡ್ಡಿದರೆ ಒತ್ತಡ ಹೇರುವವರು ಸುಮ್ಮನಾಗುತ್ತಾರೆ. ಬಂದವರಲ್ಲಿ ಹೇಗೂ ಉತ್ತಮರನ್ನು ತಾನೆ ಆಯ್ಕೆ ಮಾಡಿಕೊಳ್ಳುತ್ತೇವೆ, ಮಾತು ನಡೆಯಲಿಲ್ಲವೆಂದು ಮೊದಲಿಗೆ ಬೇಸರಿಸಿಕೊಳ್ಳುತ್ತಾರೆ, ಆದರೆ ಆಮೇಲೆ ಒಪ್ಪಿಕೊಳ್ಳುತ್ತಾರೆ. ಅಂಥವರ ಅಭ್ಯರ್ಥಿ ಆಯ್ಕೆಗೊಂಡಾಗ ನಾನೇ ಅವರಿಗೆ ತಿಳಿಸಿಬಿಡುತ್ತಿದ್ದೆ; ಅವರ ಮಾತಿನಿಂದಲೇ ಆಯ್ಕೆ ಆಯಿತೆಂದು ಅವರಿಗೇನೋ ಸಂತಸ! ಆಗ ಆಯ್ಕೆಗೊಂಡವರನ್ನು ಈಗ ನೋಡಿ, ಹೇಗೆ ಬೆಳೆದಿದ್ದಾರೆಂಬುದು ತಿಳಿಯುತ್ತದೆ.

**ಹೊಸತು :** ಸಿಂಡಿಕೇಟ್‌ಗೆ ನಾಮಕರಣಗೊಂಡವರದ್ದು ಏನೋ ತಕರಾರಿತ್ತಲ್ಲವೆ ?

**ಎಂ. ಎಸ್. ತಿ. :** ನಾನು ಅಧಿಕಾರ ವಹಿಸಿಕೊಂಡ ವರ್ಷದಲ್ಲಿ ನಾಮಕರಣಗೊಂಡವರೆಲ್ಲಾ ಶಿಕ್ಷಣ ಕ್ಷೇತ್ರದಲ್ಲಿ ನುರಿತಿದ್ದವರೇ. ನನ್ನ ಅವಧಿ ಇನ್ನೂ ಎರಡು ವರ್ಷಗಳಿದ್ದಾಗ ಬೇರೊಂದು ಪಟ್ಟಿ ಬಂತು. ಅದರಲ್ಲಿದ್ದವರು ರಾಜಕೀಯ ನಾಯಕರ ಶಿಷ್ಯರು, ಮುಂದಿನ ರಾಜಕಾರಣಿಗಳು. ವಿಶ್ವವಿದ್ಯಾಲಯದ ಸಂವಿಧಾನದ ಪ್ರಕಾರ ಶಿಕ್ಷಣ ಕ್ಷೇತ್ರದಲ್ಲಿ ಹತ್ತು ವರ್ಷವಾದರೂ ಸೇವೆ ಸಲ್ಲಿಸಿರುವ ಮತ್ತು ಪರಿಣತರಾಗಿರುವವರ ನೇಮಕವಾಗಬೇಕೆಂದಿದೆ. ಆದ್ದರಿಂದ ಆ ಪಟ್ಟಿಯನ್ನು ತಿರಸ್ಕರಿಸಿದೆ, ಸರ್ಕಾರಕ್ಕೆ ಪತ್ರ ಬರೆದೆ. ಆಗ ಒತ್ತಡಗಳೇನೋ ಬಂದವು, ಆದರೆ ನಾನು ಹಿಂದೆಗೆಯಲಿಲ್ಲ. ನನ್ನ ಜವಾಬ್ದಾರಿ ನಿರ್ವಹಿಸಲು ನಾಮಕರಣವು ಸಂವಿಧಾನಕ್ಕೆ ಬದ್ಧವಾಗಿರಬೇಕೆಂದು ಹೇಳಿದೆ, ಅಷ್ಟೆ. ಕೆಲವರು ನ್ಯಾಯಾಲಯಕ್ಕೆ ಹೋಗುವ ತರಾತುರಿಯಲ್ಲಿದ್ದರು, ಆದರೆ ಕಾನೂನು ಸಲಹೆಗಾರರು ಅದು ಸರಿಯಲ್ಲವೆಂದು ಸರ್ಕಾರಕ್ಕೆ ಮನದಟ್ಟು ಮಾಡಿಕೊಟ್ಟರು.

**ಹೊಸತು :** ಈಗಿನ ಪರಿಸ್ಥಿತಿ ಹೇಗಿದೆ ?

**ಎಂ. ಎಸ್. ತಿ. :** ಮತ್ತೆ ಹಿಂದಿನ ಪರಿಸ್ಥಿತಿ ಮರುಕಳಿಸಿರುವಂತೆ ತೋರುತ್ತದೆ. ಅದು ವಿಶ್ವವಿದ್ಯಾನಿಲಯಗಳಿಗೆ ಮಾರಕವಾದ್ದು. ವಿದ್ಯಾಸಂಸ್ಥೆಗಳಿಗೆ ಮಾನ್ಯತೆ ನೀಡುವ ವಿಷಯ ಬಂದಾಗ ಅನಾಹುತಗಳಾಗಿಬಿಡುತ್ತವೆ. ದುಃಖದ ವಿಷಯವೆಂದರೆ ಅಧ್ಯಾಪಕ ವೃತ್ತಿಯಲ್ಲಿರುವವರು ಕೂಡ ದುರ್ಮಾರ್ಗಗಳಿಗೆ ಇಳಿದುಬಿಡುತ್ತಾರೆ. ಅದು ಉನ್ನತ ಶಿಕ್ಷಣಕ್ಕೆ ಆರೋಗ್ಯಕರವಲ್ಲ.

**ಹೊಸತು :** ನಮ್ಮ ರಾಜ್ಯದಲ್ಲಿ ಉನ್ನತ ಶಿಕ್ಷಣವು ಯಾವ ಸ್ಥಿತಿಯಲ್ಲಿದೆ ?

**ಎಂ. ಎಸ್. ತಿ. :** ವ್ಯಾಕುಲ ಉಂಟುಮಾಡುವ ಸ್ಥಿತಿಯಲ್ಲಿದೆ ಎನ್ನೋಣವೆ ? ಕಾರಣಗಳನ್ನು ವಿಶ್ಲೇಷಿಸಿ ನೋಡಿ : ಕಾಲೇಜುಗಳಿಗೆ ಬೇಡಿಕೆ ಇದೆ, ಏಕೆಂದರೆ ಹೆಚ್ಚಿನ ಮಂದಿ ಪ್ರವೇಶ ಬಯಸುವ ಹಂತಕ್ಕೆ ಬಂದಿದ್ದಾರೆ. ಅವರ ಆಶಯಗಳನ್ನು ಹೊಸಕಿಹಾಕಬಾರದು. ಡಿಗ್ರಿ ಪಡೆಯುತ್ತಾರೆ, ಸ್ನಾತಕೋತ್ತರ ತರಗತಿಗಳಿಗೆ ಬರುತ್ತಾರೆ, ಪಿಎಚ್.ಡಿ.ಗೆ ಬರುತ್ತಾರೆ. ಬರಲಿ, ಅವರನ್ನು ಸ್ವಾಗತಿಸಬೇಕು. ನಮ್ಮ ರಾಜ್ಯದ ಮತ್ತು ದೇಶದ ಸನ್ನಿವೇಶ ಹೇಗಿದೆ ? ಮೇಲಿನ ಸ್ತರಗಳಿಗೆ ಹೋಗುತ್ತಿದ್ದಂತೆ ಪ್ರವೇಶ ಪಡೆಯುವವರು ಕಡಿಮೆಯಾಗುತ್ತಾರೆ. ಪದವಿ ಪಡೆದವರಲ್ಲಿ ಶೇ. ೧೧ರಿಂದ ೧೩ಕ್ಕಿಂತಲೂ ಜಾಸ್ತಿ ಸ್ನಾತಕೋತ್ತರ ತರಗತಿಗಳಿಗೆ ಬರುವುದಿಲ್ಲವೆನಿಸುತ್ತದೆ.

**ಹೊಸತು :** ಗುಣಮಟ್ಟದ ಬಗ್ಗೆ ಹೇಳಿ.

**ಎಂ. ಎಸ್. ತಿ. :** ಕೆಲವರಿಗೆ ಹಿಡಿಸದಿರಬಹುದು, ಆದರೆ ನನಗೆ ಖಚಿತ ಅಭಿಪ್ರಾಯವಿದೆ : ಯಾವುದೇ ಹಂತದಲ್ಲೇ ಆಗಲಿ ಕಳಪೆ ಶಿಕ್ಷಣ ಮಟ್ಟವು ಶಿಕ್ಷಣ ಕೊಡದಿರುವುದಕ್ಕಿಂತಲೂ ಹೆಚ್ಚು ಪ್ರತಿಕೂಲ ಉಂಟುಮಾಡುತ್ತದೆ. ನಮ್ಮ ಶಿಕ್ಷಣ ಪದ್ಧತಿ ಏನು ಮಾಡಿದೆ, ನೋಡಿ : ಮಾನವತೆಗೆ ಆದ್ಯತೆ ನೀಡಿಲ್ಲ, ಪೆಟ್ಟು ಕೊಟ್ಟಿದೆ; ನಮಗೆ ಸಹಜವಾಗಿರುವ ತಿಳಿವಳಿಕೆಯನ್ನು ಮೆಟ್ಟಿ ನಿಂತಿದೆ. ಶ್ರಮದಿಂದ ಜ್ಞಾನ ಪಡೆಯುತ್ತಿದ್ದ ಜನರ ಹಾದಿಗೆ ಮುಳ್ಳು ತುಂಬಿದೆ ಮತ್ತು ಬೇರೊಂದು ಸ್ವಚ್ಛವಾದ ಹಾದಿಯನ್ನು ನಿರ್ಮಿಸಿಲ್ಲ. ಕಳಪೆ



*ಡಾ॥ ಎಂ. ಎಸ್. ತಿಮ್ಮಪ್ಪ ಮತ್ತು ಶ್ರೀ. ಗಿರಿಧರ ಖಾಸನೀಸ*

ವಿದ್ಯಾಭ್ಯಾಸವು ವ್ಯಕ್ತಿತ್ವದ ವಿಕಾಸಕ್ಕೆ ಅಡ್ಡಿಯುಂಟುಮಾಡಿದೆ. ವಿಪುಲ ಅವಕಾಶಗಳಿಗೆ ಹಾತೊರೆಯುವ ಮಂದಿ ಇದ್ದಾರೆ, ಉನ್ನತ ಶಿಕ್ಷಣ ಸಂಸ್ಥೆಗಳು ಹೆಚ್ಚಿವೆ; ಆದರೆ ಗುಣಮಟ್ಟ ಕಾಪಾಡಿಲ್ಲ. ಸಮಸ್ಯೆ ಇರುವುದು ವಿಶ್ವವಿದ್ಯಾನಿಲಯಗಳು ಮತ್ತು ವಿದ್ಯಾರ್ಥಿಗಳು ಹೆಚ್ಚಾಗಿರುವುದರಲ್ಲಿ ಅಲ್ಲ; ಗುಣಮಟ್ಟ ಕಾಪಾಡಿಕೊಂಡಿಲ್ಲದಿರುವುದು ಸಮಸ್ಯೆ.

**ಹೊಸತು :** ಅದಕ್ಕೆ ಏನು ಮಾಡಬೇಕೆನ್ನುತ್ತೀರಿ ?

**ಎಂ. ಎಸ್. ತಿ. :** ಚಿಟಿಕೆ ಹೊಡೆಯುವಂತಹ ಪರಿಹಾರ ಖಂಡಿತ ಇಲ್ಲ. ನಮ್ಮ ದೇಶದಲ್ಲಿ ಸುಮಾರು ಶೇ. ೧೦ರಷ್ಟು ಉತ್ತಮ ಮಟ್ಟದ ವಿಶ್ವವಿದ್ಯಾನಿಲಯಗಳಿವೆ ಎನ್ನಿ; ಆದರೆ ದೇಶಕ್ಕೆ ಅಷ್ಟು ಸಾಕೆ ? ಗಮನಹರಿಸಬೇಕಾದ್ದು ಆ ದಿಕ್ಕಿನಲ್ಲಿ. ವ್ಯಾಸಂಗ ಮಾಡಲು ಬರುವವರಲ್ಲಿ ಹೇಗೂ ಶೇ. ೧೦ರಷ್ಟು ಮಂದಿ ಉತ್ತಮ ದರ್ಜೆಗೆ ಏರುತ್ತಾರೆ. ನಾವು ಕೆಟ್ಟ ಪದ್ಧತಿಗೆ ನೂಕಿದರೂ ಅವರು ಪರಿಣತಿ ಗಳಿಸಿಕೊಳ್ಳುತ್ತಾರೆ. ಅದರಿಂದ ತೃಪ್ತರಾಗೋಣವೆ ? ಪರ್ಯಾಯ ವ್ಯವಸ್ಥೆಯನ್ನು ಕೊಡುವ ಯೋಚನೆ ಮಾಡೋಣ, ಅನ್ಯಮಾರ್ಗವಿಲ್ಲ.

**ಹೊಸತು :** ವಿದೇಶಿ ವಿಶ್ವವಿದ್ಯಾನಿಲಯಗಳು ಬರುತ್ತವಂತಲ್ಲ !

**ಎಂ. ಎಸ್. ತಿ. :** ಅದು ಪರಿಹಾರ ಅಲ್ಲವೇ ಅಲ್ಲ. ಜವಾಬ್ದಾರಿಯು ನಮ್ಮ ಸ್ವಂತದ ವಿಶ್ವವಿದ್ಯಾನಿಲಯಗಳದ್ದೇ ಆಗಿರಬೇಕು. ಬೇರೆ ಯಾರೋ ಓಡಿಬರುತ್ತಾರೆ, ವಿಶ್ವವಿದ್ಯಾಲಯ ಸ್ಥಾಪಿಸುತ್ತಾರೆ. ನಮ್ಮ ಬಹುಮಂದಿ ಆಸಕ್ತ ವಿದ್ಯಾರ್ಥಿಗಳು ಅಲ್ಲಿ ಪ್ರವೇಶ ಪಡೆಯುವ ಚೈತನ್ಯ ಹೊಂದಿದ್ದಾರೆಯೆ ? ನಾನು ಆರ್ಥಿಕ ಚೈತನ್ಯವನ್ನೂ ಗಮನದಲ್ಲಿ ಇರಿಸಿಕೊಂಡು ಹೇಳುತ್ತಿದ್ದೇನೆ. ಈಗಲೂ ಕೆಲವು ಖಾಸಗಿ ವಿಶ್ವವಿದ್ಯಾನಿಲಯಗಳಿವೆ. ನಮ್ಮ ಸಾಮಾನ್ಯ ಕುಟುಂಬಗಳ ವಿದ್ಯಾರ್ಥಿಗಳಿಗೆ ಅಲ್ಲಿಗೆ ಹೋಗಲಾಗುತ್ತದೆಯೆ ? ಅದು 'ಬುದ್ಧಿ'ಯ ಮಟ್ಟದ ಪ್ರಶ್ನೆಯಲ್ಲ, ಜೇಬಿನ ಸಾಮಗ್ರಿಯ ಪ್ರಶ್ನೆ. ಸರ್ಕಾರವು ನಡೆಸುವ ಶಾಲೆಗಳು ಮತ್ತು ವಿಶ್ವವಿದ್ಯಾನಿಲಯಗಳು ಉತ್ತಮ ಮಟ್ಟಕ್ಕೇರಲು ಸಾಧ್ಯವಿಲ್ಲವೆಂದೇನೂ ಇಲ್ಲ. ನಮ್ಮ ಐ.ಐ.ಟಿ.ಗಳು, ಐ.ಐ.ಎಂ.ಗಳು, ಐ.ಐ.ಎಸ್.ಸಿ., ಮೆಡಿಕಲ್ ಕಾಲೇಜುಗಳು ಇಲ್ಲವೆ ? ಅವುಗಳ ಮಟ್ಟವು ವಿಶ್ವವಿದ್ಯಾ ನಿಲಯಗಳದ್ದೂ ಆಗಬೇಕು. ನಮ್ಮ ಜಯದೇವ ಆಸ್ಪತ್ರೆ ನೋಡಿ, ಜಾಗತಿಕಮಟ್ಟದಲ್ಲಿ ಅದು ಸ್ಪರ್ಧಿಸಲು ಸಮರ್ಥವಾಗಿದೆ. ನಮ್ಮ ಇಂಜಿನಿಯರಿಂಗ್ ಕಾಲೇಜುಗಳು, ವಿಶ್ವವಿದ್ಯಾನಿಲಯಗಳು, ಅಂತಹ ಹಂತಕ್ಕೆ ಏರಲು ನಾವೆಲ್ಲಾ ಶ್ರಮ ವಹಿಸಬೇಕು.

**ಹೊಸತು :** ಸಾಮಾನ್ಯ ಪದವಿ ಶಿಕ್ಷಣದ ಬಗೆಗೆ ದಯವಿಟ್ಟು ಹೇಳಿ.

**ಎಂ. ಎಸ್. ತಿ. :** ಶೇಕಡ ೧೦–೧೨ರಷ್ಟು ವಿದ್ಯಾರ್ಥಿಗಳು ವೃತ್ತಿಪರ ಶಿಕ್ಷಣಕ್ಕೆ ಹೋಗುತ್ತಿರಬಹುದು; ಮಿಕ್ಕವರೆಲ್ಲಾ ಬಿ.ಎ., ಬಿ.ಎಸ್ಸಿ., ಬಿ.ಕಾಂ., ಮುಂತಾದುವಕ್ಕೇ ಬರುತ್ತಾರೆ. ಆದ್ದರಿಂದ ಶಿಕ್ಷಣ ಮಟ್ಟವನ್ನು ಕಾಯ್ದುಕೊಳ್ಳಬೇಕಾದ್ದು ಅಲ್ಲೇ. ಆದರೆ

ಅದನ್ನು ಉಪೇಕ್ಷಿಸಲಾಗಿದೆ. ಉತ್ತಮವಾಗಿರುವುದಕ್ಕೇ ಎಲ್ಲ ವಿದ್ಯಾರ್ಥಿಗಳೂ ಹೋಗಲು ಹೇಗೆ ಸಾಧ್ಯ? ಪ್ರವೇಶ ದೊರೆಯುವುದಿಲ್ಲ, ದೊರೆಯುವಂತಿದ್ದರೂ ಆರ್ಥಿಕವಾಗಿ ಚೈತನ್ಯವಿರುವುದಿಲ್ಲ. ಸರ್ಕಾರಿ ಕಾಲೇಜುಗಳೆಲ್ಲಾ ಕೆಟ್ಟಿವೆಯೆನ್ನುವುದು ಸುಳ್ಳು. ಬೆಂಗಳೂರಿನ ಆರ್. ಸಿ. ಕಾಮರ್ಸ್, ಹೋಂ ಸೈನ್ಸ್, ಮಹಾರಾಣಿ, ಮುಂತಾದುವೆಲ್ಲಾ ಹಿಂದಿಗಿಂತಲೂ ಬಹಳ ಸುಧಾರಿಸಿವೆ. ಅಲ್ಲಿ ಶಿಕ್ಷಕರ ನೇಮಕಾತಿ ಪೂರ್ತಿಯಾಗಿ ನಡೆದಿಲ್ಲ. ಅದನ್ನು ಮಾಡಲು ಸರ್ಕಾರಕ್ಕೆ ಅಡ್ಡಿಯೇನಿದೆ? ಎಲ್ಲ ಸರ್ಕಾರಿ ಕಾಲೇಜುಗಳನ್ನೂ ಉತ್ತಮವಾಗಿ ನಡೆಸಲು ಕೆಲವು ತೊಂದರೆಗಳಿವೆ. ಯಾರೋ ತಮ್ಮ ಘನತೆ ಹೆಚ್ಚಿಸಿಕೊಳ್ಳಲು ಕಾಲೇಜು ಸ್ಥಾಪಿಸಿಕೊಳ್ಳುತ್ತಾರೆ, ಅದರ ಏಳಿಗೆಗೆ ಗಮನ ನೀಡುವುದಿಲ್ಲ.

**ಹೊಸತು :** ಆಧುನಿಕ ಪರಿಣತಿ ಅಷ್ಟಕ್ಕೆ ಸೀಮಿತವಾಗಿರುವುದಿಲ್ಲ, ಅಲ್ಲವೆ?

**ಎಂ. ಎಸ್. ತಿ. :** ಹೌದು, ಉದಾಹರಣೆಗೆ ಗಣಕಯಂತ್ರ ನೋಡಿ. ಖಾಸಗಿಯವರಲ್ಲಿಗೆ ಹೋಗಿ ಕಲಿಯಲು ಮತ್ತೆ ಆರ್ಥಿಕ ಚೈತನ್ಯದ ಅಡಚಣೆ ಇದೆ. ಖಾಸಗಿತನದ ಭರಾಟೆ ಹೆಚ್ಚಿ ಸರ್ಕಾರಕ್ಕೆ ಈ ಕೆಲಸಗಳಿಲ್ಲ ಎಂಬಂತಾಗಿದೆ. ಹಾಗಿರುವಾಗ ಪರಿಣತಿ ಹೇಗೆ ಪಡೆಯುತ್ತಾರೆ? ಖಾಸಗಿಯವರಿಗೆ ಬಾಗಿಲು ತೆರೆದರೆ ಸಂಸ್ಥೆ ಸ್ಥಾಪಿಸಲು ಓಡಿ ಬರುತ್ತಾರೆ, ಆದರೆ ಕೆಳಹಂತದವರಿಗೆ ಅಲ್ಲಿ ಪ್ರವೇಶ ಸಾಧ್ಯವಿಲ್ಲ. ಕೇವಲ ನಗರಗಳನ್ನು, ದೊಡ್ಡ ಪಟ್ಟಣಗಳನ್ನು ನೋಡಬೇಡಿ. ಒಂದು ತಾಲ್ಲೂಕು ಕೇಂದ್ರ, ಹೋಬಳಿ ಮಟ್ಟಕ್ಕೆ ಹೋಗಿ ನೋಡಿ. ತೋರಿಕೆ ಮತ್ತು ವಾಸ್ತವ ಆಗ ತಿಳಿಯುತ್ತದೆ. ಒಂದು ಉದಾಹರಣೆ ಕೊಡಬಲ್ಲೆ : ಡಾ॥ ಎಚ್. ನರಸಿಂಹಯ್ಯನವರಲ್ಲಿ ವಿನಂತಿಸಿಕೊಂಡೆ, ಎಲ್ಲರೂ ಬಯೋಟೆಕ್ನಾಲಜಿ ಮುಂತಾದುವನ್ನು ತೆರೆಯುತ್ತಿದ್ದಾರೆ; ನೀವೂ ನಿಮ್ಮ ಕಾಲೇಜಿನಲ್ಲಿ ತೆರೆಯಿರಿ, ಎಂದು. ಏನು ಹೇಳಿದರು ಗೊತ್ತೆ: "ಬೇಡ, ಅದನ್ನು ನಡೆಸಲಾಗುವುದಿಲ್ಲ. ಅದಕ್ಕೆ ಸರ್ಕಾರದಿಂದ ಸಹಾಯಧನ ದೊರೆಯುವುದಿಲ್ಲ. ವಿದ್ಯಾರ್ಥಿಗಳ ಶೋಷಣೆ ಅನಿವಾರ್ಯವಾಗುತ್ತದೆ. ಅದು ಕೂಡದು," ಎಂದರು.

**ಹೊಸತು :** ಹಾಗಿದ್ದರೆ ಮುಂದಿನ ಹಾದಿಯೇನು?

**ಎಂ. ಎಸ್. ತಿ. :** ಬೇಡಿಕೆ ಜಾಸ್ತಿ ಇದೆಯೆಂಬ ಕಾರಣಕ್ಕೆ ಗುಣಮಟ್ಟ ಕುಸಿಯಬೇಕಾಗಿಲ್ಲ. ನಮ್ಮಂತಹ ದೇಶದಲ್ಲಿ ಎಲ್ಲರಿಗೂ ಪ್ರವೇಶ ಪಡೆಯಲು ಸಾಮರ್ಥ್ಯವಿರುವಂತಾಗಬೇಕು. ಕೆಲವರು ಮಾತ್ರ ಪಡೆದರೆ ನಮ್ಮ ಹಳೆಯ ಏರುಪೇರು, ಶ್ರೇಷ್ಠ–ಕನಿಷ್ಠ, ಎಂಬ ಕತೆ ಹಾಗೇ ಉಳಿದುಬಿಡುತ್ತದೆ. ಖಾಸಗಿ ಮತ್ತು ಸರ್ಕಾರದ ಜಂಟಿ ಕ್ರಿಯೆಯಿರಲಿ, ಪ್ರತ್ಯೇಕವಿರಲಿ, ಪ್ರವೇಶವು ಎಟಕುವಂತಿರಬೇಕು. ಇಲ್ಲದಿದ್ದರೆ ಉದ್ದೇಶವನ್ನು ಮರೆತಂತಾಗುತ್ತದೆ.

**ಹೊಸತು :** ವ್ಯಾವಹಾರಿಕವಾಗಿ ಏನು ಮಾಡ ಬಹುದೆನ್ನುತ್ತೀರಿ?

**ಎಂ. ಎಸ್. ತಿ. :** ಅನೇಕ ವಿಷಯಗಳಿವೆ. ಮೊದಲು ಸಾಮಾಜಿಕ ಗುರಿ ಎಂಬುದನ್ನು ಸ್ಪಷ್ಟಪಡಿಸಿಕೊಳ್ಳೋಣ. ಶಿಕ್ಷಣಕ್ಕೆ ಹೆಚ್ಚು ಹಣ ತೊಡಗಿಸಿ. ಅದು ವ್ಯರ್ಥವಲ್ಲ. ಎಲ್ಲದಕ್ಕೂ ಅಮೆರಿಕಾ, ಅಮೆರಿಕಾ, ಎನ್ನುತ್ತಾರೆ. ಅಲ್ಲಿ ಸಾಮಾಜಿಕ ಗುರಿಸಾಧನೆಗಾಗಿ ಶಿಕ್ಷಣಕ್ಕೆ ಸರ್ಕಾರವು ಹೇರಳವಾಗಿ ಹಣ ಖರ್ಚು ಮಾಡುವುದಿಲ್ಲವೆ? ಅದನ್ನೇಕೆ ಅನುಕರಿಸುವುದಿಲ್ಲ? ಜೊತೆಗೆ, ಇರುವ ಸ್ವಲ್ಪವನ್ನೂ ಪೂರ್ತಿಯಾಗಿ ತೊಡಗಿಸುವುದಿಲ್ಲ, ಅದು ನಾಚಿಕೆಗೇಡು. ಮಧ್ಯದಲ್ಲಿ ದುಡ್ಡು ನುಂಗಿಹಾಕಿಬಿಡುತ್ತಾರಲ್ಲ ಏನು ಹೇಳುತ್ತೀರಿ?

**ಹೊಸತು :** ಖಾಸಗಿ ಸಂಸ್ಥೆಗಳು ಬೇಡವೆನ್ನುತ್ತೀರಾ?

**ಎಂ. ಎಸ್. ತಿ. :** ಇಲ್ಲ, ನನ್ನ ಆಕ್ಷೇಪವೇನೂ ಇಲ್ಲ. ಆದರೆ ಸರ್ಕಾರಿ ಶಾಲೆಗಳನ್ನು ಹಾಳುಗೆಡವಿದ್ದೇವಲ್ಲ, ಅದು ದುರಂತ.

**ಹೊಸತು :** ವಿದೇಶಿ ವಿಶ್ವವಿದ್ಯಾನಿಲಯಗಳು ಬಂದರೆ?

**ಎಂ. ಎಸ್. ತಿ. :** ಹೇಳಿಕೊಳ್ಳಬಹುದಾದ ಪರ್ಯಾಯವೇನೂ ಸೃಷ್ಟಿ ಯಾಗುವುದಿಲ್ಲ. ವಿದೇಶದ ವಿಶ್ವವಿದ್ಯಾನಿಲಯಗಳ ಅವುಗಳ ಪರಿಸ್ಥಿತಿ ಏನು? ಬೆಳವಣಿಗೆ ಎಷ್ಟು ಸಾಧ್ಯವೋ ಅಷ್ಟು ಆಗಿಹೋಗಿದೆ. ಅವುಗಳ ಮೂಲ ಸೌಲಭ್ಯಕ್ಕೆ ತಕ್ಕಂತೆ ವಿದ್ಯಾರ್ಥಿ ಸಂಖ್ಯೆ ಹೆಚ್ಚಿಲ್ಲ. ಅವರ ಜನಸಂಖ್ಯೆಯ ಪ್ರಮಾಣವೂ ಒಂದು ಕಾರಣ. ಆದ್ದರಿಂದ ಅವಕ್ಕೆ ಹೊರದೇಶದ ವಿದ್ಯಾರ್ಥಿಗಳು ಬೇಕು, ಇಲ್ಲವೆ ಅವೇ ಹೊರದೇಶಗಳಿಗೆ ಹೋಗಬೇಕು. ಅವರಲ್ಲಿ ಪರಿಣತಿ ಇದೆ,

ಬಳಕೆ ಸಾಧ್ಯವಾಗುತ್ತಿಲ್ಲ. ಆದ್ದರಿಂದ ವಿದೇಶಗಳಿಗೆ ಹೋಗಬಯಸುತ್ತವೆ. ನಾವು ಅವನ್ನು ಬಳಸಿಕೊಳ್ಳಲು ಸಾಧ್ಯ. ಆದರೆ ನಮಗೆ ವೈಯಕ್ತಿಕ ಲಾಭವೇನು, ಸರ್ಕಾರಕ್ಕೆ ಲಾಭವೇನು ? ಇವೇ ಮೂಲ ಪ್ರಶ್ನೆಗಳಾಗಿ ಹೋಗುತ್ತವೆ. ನಿಜವಾದ ಪರಿಹಾರವೆಂದರೆ ಸರ್ಕಾರದ ಶಿಕ್ಷಣ ಸಂಸ್ಥೆಗಳನ್ನು ಉತ್ತಮಪಡಿಸುವುದು ಮತ್ತು ಬಲಗೊಳಿಸುವುದು. ಸರ್ಕಾರಕ್ಕೆ ಆ ದೃಷ್ಟಿ ಇಲ್ಲವಾಗಿದೆ. ಕಾಲೇಜುಗಳ ನಿಯಂತ್ರಣದ ಮಾತು ಸಾಕು; ಸ್ವಾಯತ್ತತೆ ನೀಡಿ ಬೆಳೆಸಿ. ಪಾರದರ್ಶಕತ್ವ ಇರುವಂತೆ ಮಾಡಿ. ಎಲ್ಲ ಕಾಲೇಜುಗಳೂ ಸಾರ್ವಜನಿಕರಿಗೆ ಉತ್ತರ ನೀಡುವ ಬಾಧ್ಯತೆ ಇರುವಂತೆ ಮಾಡಿ. ನಿರೀಕ್ಷಿತ ಫಲ ಬರದೆ ಎಲ್ಲಿ ಹೋಗುತ್ತದೆ ?

**ಹೊಸತು :** ರಾಷ್ಟ್ರೀಯ ಮಾನ್ಯತೆ (ನ್ಯಾಕ್) ವ್ಯವಸ್ಥೆ ಇದಕ್ಕೆ ಪೂರಕವೆ ?

**ಎಂ. ಎಸ್. ತಿ. :** ಆರಂಭವಾದ್ದು ಒಳ್ಳೆಯ ಉದ್ದೇಶ ದಿಂದಲೇ. ಗುಣಮಟ್ಟ ಸುಧಾರಿಸಲು ಅಂತಹ ವ್ಯವಸ್ಥೆ ಬೇಕು. ಮಾಪನ ಮಾಡಿ ಒಂದು ಸಂಸ್ಥೆಯನ್ನು ಉತ್ತಮವೆಂದು ಘೋಷಿಸಿದರೆ ಒಳ್ಳೆಯದೇ. ಕಲೆಯ, ಸಾಹಿತ್ಯದ, ಮಾಪನ ಮಾಡುವುದಿಲ್ಲವೆ ? ಆದರೆ ಯಥಾಪ್ರಕಾರ ಭ್ರಷ್ಟಾಚಾರವೆಂಬ ಜಂತು ಅದನ್ನೂ ಹಾಳು ಮಾಡುತ್ತಿದೆ. ಆ ಪ್ರತಿನಿಧಿಗಳು ಬರುತ್ತಾರಲ್ಲ, ಅವರಿಗೆ ಭವ್ಯ ವ್ಯವಸ್ಥೆ, ಉಪಚಾರ, ಕಡೆಗೆ ಸೂಟ್‌ಕೇಸ್, ಎಲ್ಲಾ ಬೇಕಾಗಿಬಿಟ್ಟರೆ ಎಂತಹ ಮಾಪನ ನಡೆಯುತ್ತದೆ ? ಅದೆಲ್ಲಾ ನಡೆಸಿಕೊಟ್ಟವರಿಗೆ ಗ್ರೇಡ್ ದೊರೆಯುತ್ತದೆ ! ಯಾವುದೇ ಯೋಜನೆಯನ್ನೂ ತಿರುಗುಮುರುಗು ಮಾಡಿಬಿಡುತ್ತೇವಲ್ಲ !! ಉದ್ಯಮಗಳಿಗೆ ಐ.ಎಸ್.ಓ. ಎಂಬ ಮಾಪಕವಿದೆ, ಅದು ಫಲಕಾರಿಯಾಗಿದೆ. ನಾವು 'ನ್ಯಾಕ್' ಎಂದರೆ ಯಾರಿಗೋ ಉಪದ್ರವ ನೀಡಲು ಸಾಧನ ಎಂದು ಬಗೆದುಬಿಟ್ಟಿದ್ದೇವೆ.

**ಹೊಸತು :** ಶಿಕ್ಷಣ ಹಕ್ಕಿನ ಕಾಯಿದೆ ಬಂದಿದೆಯಲ್ಲ, ಅದನ್ನು ಕುರಿತು ಹೇಳಿ.

**ಎಂ. ಎಸ್. ತಿ. :** ಚೆನ್ನಾಗಿ ಶಿಕ್ಷಣ ದೊರೆಯುವೆಡೆ ಮಕ್ಕಳು ಕಲಿಯುವುದು ಸ್ವಾಗತಾರ್ಹ. ಪೋಷಕರಿಗೆ ಖಾಸಗಿಯೆಂದರೆ ವಿರೋಧವಿಲ್ಲ. ಆದ್ದರಿಂದ ಪ್ರಯೋಗ ನಡೆಯಲಿ. ಮಕ್ಕಳಿಗೆ ಸಮಾಜದ ವೈಪರೀತ್ಯಗಳು ಅರಿವಿಗೆ ಬರುತ್ತವೆ. ಶ್ರೀಮಂತ ಮತ್ತು ಬಡವ ಕುಟುಂಬಗಳ ಮಕ್ಕಳು ಕಲೆಯುವುದು, ಜೊತೆಯಲ್ಲಿ ಆಡುವುದು, ಎಲ್ಲಾ ಒಳ್ಳೆಯದು; ಆದರೆ ಬಡಕುಟುಂಬದ ಮಕ್ಕಳಿಗೆ ಮಾನಸಿಕ ಕಿರುಕುಳ ಉಂಟಾಗದಂತೆ ಎಚ್ಚರಿಕೆ ವಹಿಸಬೇಕು. ಇದು ಕಷ್ಟದ ಕೆಲಸ. ಖಾಸಗಿ ಶಾಲೆಗಳು ತಮ್ಮ ಸ್ಥಾಪಿತ ಹಿತಾಸಕ್ತಿಗಳನ್ನು ಕಾಯ್ದುಕೊಳ್ಳಲು ಬಿಗಿಯಾಗಿ ಪಟ್ಟು ಹಿಡಿಯುತ್ತವೆ. ಸರ್ಕಾರಿ ಅಧಿಕಾರಿಗಳು ಅವುಗಳ ಪರ ನಿಂತುಬಿಡುತ್ತಾರೆ. ಹಣ ಹೇಗೆ ಸಂಪಾದಿಸಿಕೊಳ್ಳಬಹುದೆಂದು ಸಚಿವರಿಗೆ ಹೇಳಿಕೊಡಲು ಸಹ ಅವರು ಸಮರ್ಥರು. ಇದಕ್ಕೆ ಅಪವಾದಗಳೂ ಇರುತ್ತವೆ; ಬಹುಶಃ ಶೇ. ೧೦ ಇರಬಹುದು. ಒಟ್ಟಿನಲ್ಲಿ ಈ ಯೋಜನೆ ಹೇಗೆ ಅನುಷ್ಠಾನಕ್ಕೆ ಬರುತ್ತದೆ



ಎಂಬುದನ್ನು ನಿಗಾವಹಿಸಿ ನೋಡಬೇಕು.

**ಹೊಸತು :** ಅದರ ಮಾಪನ ಹೇಗೆ ?

**ಎಂ. ಎಸ್. ತಿ. :** ತಕ್ಷಣ ಮತ್ತು ನಿರಂತರವಾಗಿ ನಡೆಯುತ್ತಿರಬೇಕು. ನಿಯಮಗಳನ್ನು ಪಾಲಿಸದಿದ್ದಲ್ಲಿ ಶಾಲೆಗಳಿಗೆ ಮಾನ್ಯತೆ ರದ್ದುಮಾಡಲು ಸಹ ಅಂಜಕೂಡದು. ಆದರೆ ಶಿಕ್ಷಣ ಮಂತ್ರಿಗಳೇ ಭ್ರಷ್ಟರಾದರೆ ಪರಿಹಾರವು ದೂರವೇ ಉಳಿಯುತ್ತದೆ.

**ಹೊಸತು :** ಹೊಸ ಮುಖ್ಯಮಂತ್ರಿಗಳು ಹೇಗೆ ?

**ಎಂ. ಎಸ್. ತಿ. :** ಆತ ಬೇರೆಯವರಂತಲ್ಲವೆಂದು ಊಹಿಸುತ್ತೇನೆ. ಅವರನ್ನು ನಾನು ಸ್ವಾಗತಿಸಿದ್ದೇನೆ, ಆದರೆ ಅವರ ಹಾದಿ ಸುಗಮವಲ್ಲ. ನನಗೆ ಅವರು ಪರಿಚಿತರಲ್ಲ. ಆದರೆ ಒಮ್ಮೆ ಅವರ ಸನ್ಮಾನ ಸಮಾರಂಭದಲ್ಲಿ ಎರಡು ಅನುಭವಗಳನ್ನು ಹಂಚಿಕೊಂಡಿದ್ದೆ. ಎರಡೂ ನಾನು ರಿಜಿಸ್ಟ್ರಾರ್ ಆಗಿದ್ದಾಗಿನ ಸಮಯದವು: ಒಮ್ಮೆ ವಿದ್ಯಾರ್ಥಿನಿಯರ ವಸತಿಗೃಹ ಬಿದ್ದುಹೋಯಿತು. ಐವತ್ತಕ್ಕೂ ಹೆಚ್ಚು ವರ್ಷದ ಹಿಂದಿನದು. ಕಟ್ಟಡವನ್ನು ಸರಿಯಾಗಿ ನೋಡಿಕೊಂಡಿರಲಿಲ್ಲವೆಂದು ತೋರುತ್ತದೆ. ಯಾರಿಗೂ ಅಪಾಯ ಸಂಭವಿಸಿರಲಿಲ್ಲ. ಆದರೆ ವಿದ್ಯಾರ್ಥಿನಿಯರಿಗೆ ಬೇರೆ ಸೌಕರ್ಯ ಕಲ್ಪಿಸಬೇಕಿತ್ತು. ಅಧಿಕಾರಿಗಳೆಲ್ಲಾ ಒಂದೇ ದೃಷ್ಟಿಯವರು : "ನಿಮ್ಮದೇ ತಪ್ಪು, ಏಕೆ ಸರಿಯಾಗಿ ನೋಡಿಕೊಳ್ಳಲಿಲ್ಲ ? ನಿಮ್ಮ ಇಂಜಿನಿಯರನ್ನು ಸಸ್ಪೆಂಡ್ ಮಾಡಿ," ಇತ್ಯಾದಿ. ಆಗ ಶ್ರೀ. ಸಿದ್ದರಾಮಯ್ಯ ಅರ್ಥ ಸಚಿವರು. ಅವರ ಬಳಿ ಹೋದಾಗ ಅವರ ಮೊದಲ ಪ್ರಶ್ನೆ: "ಅದೆಲ್ಲಾ ಸರಿ, ಆದರೆ ವಿದ್ಯಾರ್ಥಿನಿಯರು ಈಗೆಲ್ಲಿದ್ದಾರೆ ?" ಆ ಕನಿಷ್ಠ ಕಾಳಜಿಯನ್ನು ಬೇರೆ ಯಾರೂ ತೋರಿರಲಿಲ್ಲ. ಆ ಪ್ರಶ್ನೆಯು ಅವರ ಹಿನ್ನೆಲೆ ಮತ್ತು ದೃಷ್ಟಿಕೋನವನ್ನು ಸ್ಪಷ್ಟಪಡಿಸುವಂತಿತ್ತು. ಎರಡನೆಯ ಅನುಭವ ತುಮಕೂರಿನಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಕೇಂದ್ರ ತೆರೆದಾಗಿನದು. ಸವಲತ್ತುಗಳಿಲ್ಲದೆ ಆರಂಭವಾದ ಕೇಂದ್ರ ಅದು. ಅಂಬೇಡ್ಕರ್ ಭವನದಲ್ಲಿ ನಮ್ಮ ಕಚೇರಿ. ಕಟ್ಟಡ ಕಟ್ಟಿಸಿಕೊಳ್ಳಲು ಮೂವತ್ತು ಲಕ್ಷ ರೂಪಾಯಿಗಳನ್ನು ಸರ್ಕಾರ ನೀಡಿತ್ತು, ಆದರೆ ಜಾಗವೇ ಇರಲಿಲ್ಲ. ಆದ್ದರಿಂದ ಅಷ್ಟು ಹಣ ಕೈಬಿಟ್ಟು ಹೋಯಿತು. ಮುಂದಿನ ವರ್ಷದ ಬಜೆಟ್‌ನಲ್ಲಿ ಅದು ಖೋತಾ ಆಗುವ ಸಂಭವವಿತ್ತು. ಉಪಕುಲಪತಿಗಳ ಸೂಚನೆಯ ಮೇರೆಗೆ ನಾನು ಅರ್ಥಸಚಿವ ಶ್ರೀ. ಸಿದ್ದರಾಮಯ್ಯ ಅವರನ್ನು ಭೇಟಿಯಾಗಿ ಸನ್ನಿವೇಶವನ್ನು ವಿವರಿಸಿದೆ. ಅದೂ ಕಡೆಯ ಗಳಿಗೆಯಲ್ಲಿ. ಬಜೆಟ್‌ನಲ್ಲಿ ಮೂವತ್ತು ಲಕ್ಷ ಸೇರಿಸಿಕೊಟ್ಟರು. ಅವರು ತೋರಿದ ಕಾಳಜಿ ಅಪರೂಪದ್ದು, ಗಮನಾರ್ಹವಾದದ್ದು. ಆದರೆ ಮುಖ್ಯಮಂತ್ರಿಯಾಗಿ ಅವರೊಬ್ಬರೇ ಏನೂ ಮಾಡಲಾಗುವುದಿಲ್ಲ. ವಿಶೇಷತಃ ವಿಶ್ವವಿದ್ಯಾನಿಲಯಗಳಿಗೆ ಸಂಬಂಧಿಸಿದಂತೆ ಚಾನ್ಸಲರ್ ಆಗಿರುವ ರಾಜ್ಯಪಾಲರ ಪಾತ್ರವೂ ಇರುತ್ತದೆ. ಅವರ ಕಚೇರಿಯಲ್ಲೇ ಭ್ರಷ್ಟತನ ತುಂಬಿಕೊಂಡರೆ ಪರಿಸ್ಥಿತಿ ಬಹಳ ಕಠಿಣವಾಗುತ್ತದೆ.

**ಹೊಸತು :** ಸಾಮಾನ್ಯತಃ ವಿಶ್ವವಿದ್ಯಾಲಯಗಳ ಆಡಳಿತ, ಉಸ್ತುವಾರಿ, ಹೇಗಿದೆ ?

**ಎಂ. ಎಸ್. ತಿ. :** ತೀರಾ ಅಸಮರ್ಪಕವಾಗಿದೆ. ಈಚಿನ ಸಂಗತಿ ಗೊತ್ತಲ್ಲವೆ ? ಒಂದು ಉದಾಹರಣೆ ಬೇಕಾದರೆ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾನಿಲಯದ ಉಪಕುಲಪತಿಗಳ ಆಯ್ಕೆಯನ್ನು ಗಮನಿಸಿ : ಉಚ್ಚ ನ್ಯಾಯಾಲಯವು ಯಾರನ್ನು ತಪ್ಪಿತಸ್ಥನೆಂದು ಘೋಷಿಸಿ ಕ್ರಮ ತೆಗೆದುಕೊಳ್ಳಬೇಕೆಂದು ಹೇಳಿತ್ತೋ ಆತನನ್ನೇ ಉಪಕುಲಪತಿ ಮಾಡಲಾಗಿದೆ. ಅವರು ಮಾಡಿದ ಮೊದಲ ಕೆಲಸ ಉನ್ನತ ಹುದ್ದೆಗಳನ್ನು ತುಂಬಲು ಜಾಹಿರಾತು ನೀಡುವುದು ! ಇದೆಲ್ಲದರ ಹಿಂದೆ ಏನು ಅವ್ಯವಹಾರ ಇದ್ದಿರಬಹುದೆಂದು ನೀವೇ ಊಹಿಸಿಕೊಳ್ಳಿ. ಇಂತಹ ವಿಷಯಗಳಲ್ಲಿ ಪ್ರತಿ ಹಂತದಲ್ಲೂ ಉಸ್ತುವಾರಿಯು ಮುಖ್ಯ. ಅನೇಕ ಕೆಟ್ಟ ಹಿತಾಸಕ್ತಿಗಳಿರುತ್ತವೆ, ಅವನ್ನು ಚಿವುಟಿ ಹಾಕಬೇಕು; ಬೆಳೆಯಲು ಬಿಡಬಾರದು.

**ಹೊಸತು :** ನೀವು ವೈದ್ಯಕೀಯ ಮನೋವಿಜ್ಞಾನಿಗಳು. ವಿದ್ಯಾರ್ಥಿಗಳ ಮತ್ತು ಅಧ್ಯಾಪಕರ ಸಮಸ್ಯೆಗಳಿಗೆ ಈ ಶಿಸ್ತು ಏನಾದರೂ ಉಪಯುಕ್ತ ಕೊಡುಗೆ ನೀಡಬಲ್ಲುದೆ ?

**ಎಂ. ಎಸ್. ತಿ. :** ಖಂಡಿತ ನೀಡಬಲ್ಲುದು. ಅದರ ಪ್ರಯೋಜನವನ್ನು ಹೇಗೆ ಪಡೆಯಬಹುದೆಂದು ತಿಳಿದುಕೊಳ್ಳಬೇಕು, ಅಷ್ಟೆ. ಎಂತಹ ಜಟಿಲ ಸಂದರ್ಭಗಳಲ್ಲೂ ಅದರ ಉಪಯುಕ್ತತೆ ಇರಬಲ್ಲುದು. ಪರೀಕ್ಷೆ, ತರಗತಿಯ ಪಾಠ, ಏಕಾಗ್ರತೆ, ಹೊಂದಾಣಿಕೆ, ಇತ್ಯಾದಿ. ಈಗಂತೂ ಅತಿಕ್ಷುದ್ರ ಕಾರಣಗಳಿಗೆ ವಿದ್ಯಾರ್ಥಿಗಳು ಆತ್ಮಹತ್ಯೆ ಮಾಡಿಕೊಂಡುಬಿಡುತ್ತಿದ್ದಾರೆ. ಎಲ್ಲ ಶಿಕ್ಷಣ ಸಂಸ್ಥೆಗಳಲ್ಲೂ ಒಳ್ಳೆಯ ಸಲಹಾ ಕೇಂದ್ರಗಳನ್ನು ಸ್ಥಾಪಿಸಬೇಕು.

**ಹೊಸತು :** ಔಪಚಾರಿಕವಾಗಿ ಅವೆಲ್ಲಾ ಇವೆಯಲ್ಲವೆ ?

**ಎಂ. ಎಸ್. ತಿ. :** ಆರಂಭಿಕ ಹಂತದಲ್ಲೇ ಸಮಸ್ಯೆಗಳನ್ನು ಅರ್ಥ ಮಾಡಿಕೊಂಡು ಮಧ್ಯ ಪ್ರವೇಶ

ಮಾಡಿದರೆ ಅನೇಕ ಪರಿಹಾರಗಳು ಲಭ್ಯ. ಸಲಹಾ ಕೇಂದ್ರಗಳು ಕಾರ್ಯೋನ್ಮುಖವಾಗಬೇಕು.

**ಹೊಸತು :** ಬೇರೆಯಂತೆ ಇನ್ನೇನು ಸಾಧ್ಯತೆಗಳಿವೆ ?

**ಎಂ. ಎಸ್. ತಿ. :** ನಮ್ಮ ವ್ಯವಸ್ಥೆಯಲ್ಲಿ ಕಾಲೇಜು ಮತ್ತು ವಿಶ್ವವಿದ್ಯಾಲಯಗಳ ಅಧ್ಯಾಪಕರಿಗೆ ಆರಂಭದಲ್ಲಿ ತರಬೇತಿಯ ಕ್ರಮವಿಲ್ಲ. ಇಂದು ಎಂ.ಎ. ಪಾಸು ಮಾಡಿದರೆ ನಾಳೆ ಆಗಲೆ ಕಾಲೇಜಿನ ತರಗತಿಗೆ ನೇರ ಪ್ರವೇಶ. ಸಂವಹನ ಕೌಶಲ್ಯ, ವಿದ್ಯಾರ್ಥಿಗಳ ಮನಸ್ಸನ್ನು ತಿಳಿದು ಅವರೊಡನೆ ಸಂಸರ್ಗ ಏರ್ಪಡಿಸಿಕೊಳ್ಳುವ ವಿಧಾನ, ಅಧ್ಯಾಪನ ವಿಧಾನ, ಯಾವುದರಲ್ಲೂ ಪರಿಣತಿ ಇರುವುದಿಲ್ಲ. ಸಂಶೋಧನೆಗೂ ಅಧ್ಯಾಪನಕ್ಕೂ ವ್ಯತ್ಯಾಸವಿದೆ. ಎರಡಕ್ಕೂ ತರಬೇತಿಯೂ ಬೇರೆ ಬೇರೆ ತೆರನಾದ್ದು. ಅಧ್ಯಾಪಕ ಮತ್ತು ವಿದ್ಯಾರ್ಥಿಗಳ ನಡುವೆ ಒಳ್ಳೆಯ ಸಂಬಂಧವಿರಬೇಕಾದರೆ ಸೂಕ್ತ ವಾತಾವರಣ ಕಲ್ಪಿಸಿಕೊಳ್ಳಬೇಕು. ವೈದ್ಯಕೀಯ ಮನೋವಿಜ್ಞಾನವು ಅದಕ್ಕೆ ಸಹಾಯಕ. ಬೆಂಗಳೂರು ವಿಶ್ವವಿದ್ಯಾಲಯದ ಎಲ್ಲ ಬೋಧಕರಿಗೂ ಒಂದು ವಾರದ ತರಬೇತಿ ಶಿಬಿರ ಏರ್ಪಡಿಸಿದ್ದೆವು. ಅದು ಬಹಳ ಪ್ರಯೋಜನ ನೀಡಿತು. ಅಧ್ಯಾಪಕರಿಗೆ ಅವರ ವಿಷಯದ ಜ್ಞಾನವಿರುತ್ತದೆ, ನಾವು ಸಂವಹನದಲ್ಲಿ ತರಬೇತಿ ನೀಡಬೇಕು.

**ಹೊಸತು :** ಅದರಲ್ಲಿ ನಿಮ್ಮ ವಿಧಾನದ ವೈಶಿಷ್ಟ್ಯವೇನು ?

**ಎಂ. ಎಸ್. ತಿ. :** ಅದು ವ್ಯಕ್ತಿಗತ ವೈಶಿಷ್ಟ್ಯವಲ್ಲ, ಅದೊಂದು ಕ್ರಮ ಮತ್ತು ಜಾಣ್ಮೆ. ತರಗತಿಗಳಲ್ಲಿ ವಿವಿಧ ಸ್ತರಗಳವರಿರುತ್ತಾರೆ, ಎಲ್ಲರ ಗ್ರಹಣ ಸಾಮರ್ಥ್ಯ ಮತ್ತು ಹಿನ್ನೆಲೆ ಏಕಪ್ರಕಾರವಲ್ಲ. ಅಧ್ಯಾಪಕನು ಇವರೆಲ್ಲರಿಗೂ ಒಟ್ಟಿಗೆ ಪಾಠ ಹೇಳುವಾಗ ಪ್ರತಿಯೊಬ್ಬರನ್ನೂ ಅರ್ಥ ಮಾಡಿಕೊಳ್ಳಬೇಕು. ಪಂಡಿತ ಮತ್ತು ಪಾಮರ, ಇಬ್ಬರಿಗೂ ತಿಳಿಯುವಂತೆ ಪಾಠ ಹೇಳಬೇಕು. ಅವರಿಗೆ ತಿಳಿಯಿತೆ ಎಂಬುದು ನಮಗೆ ತಿಳಿಯಬೇಕು, ಅವರಿಗೆ ತಿಳಿಯದಿದ್ದರೆ ಹೇಗೆ ತಿಳಿಯುವಂತೆ ಮಾಡುವುದು ಎಂಬುದನ್ನೂ ತಿಳಿದಿರಬೇಕು. ಪರಿಣಾಮಕಾರಿ ಸಂವಹನವು ನೀಡುವ ತೃಪ್ತಿ ಅಪಾರವಾದ್ದು, ಅದೊಂದು ಸವಾಲು.



**ಹೊಸತು :** ತರಗತಿಯಲ್ಲಿ ಅಂತಹ ತೃಪ್ತಿಯನ್ನು ಅಧ್ಯಾಪಕರು ಪಡೆಯುತ್ತಿಲ್ಲವೇನೋ ಎನಿಸುತ್ತದೆ.

**ಎಂ. ಎಸ್. ತಿ. :** ನನ್ನ ಮಾನದಂಡ ಸರಳವಾಗಿದೆ. ಸಂಶೋಧನೆ, ಪ್ರಕಟಣೆ, ಮಾಡಿದರೆ ಸಂತೋಷ. ಅದನ್ನು ಮಾಡದಿದ್ದರೂ ಸರಿಯೆ, ನಿಗದಿತವಾದ ತರಗತಿಯ ಬೋಧನೆ ಮಾಡಲೇಬೇಕು. ಪೋಷಕರು ಮಕ್ಕಳನ್ನು ಕಾಲೇಜಿಗೆ ಏಕೆ ಕಳಿಸಿದ್ದಾರೆನ್ನುವ ತಿಳಿವಳಿಕೆ ಅಗತ್ಯ. ಸೂಕ್ತ ವಾತಾವರಣ ನಿರ್ಮಿಸಿಕೊಳ್ಳುವುದು ಅಧ್ಯಾಪಕರ ಜವಾಬ್ದಾರಿ. ವೈದ್ಯಕೀಯ ಮನೋವಿಜ್ಞಾನವು ಆ ದಿಸೆಯಲ್ಲಿ ಪ್ರಸ್ತುತ. ಮೂರು ತಿಂಗಳ ತರಬೇತಿ ಸಾಕು; ವಿಷಯದಲ್ಲಿ ಪಾಂಡಿತ್ಯ ನೀಡಲು ಅಲ್ಲ. ಸಂವಹನವು ಸಿದ್ಧಿಸಲು ಅದನ್ನು ನೀಡಬೇಕು.

**ಹೊಸತು :** ಅದರ ಅನುಷ್ಠಾನಕ್ಕೆ ಮುಗ್ಗಟ್ಟೇನಿದೆ ?

**ಎಂ. ಎಸ್. ತಿ. :** ಏನೂ ಇರಬಾರದು. ಉನ್ನತ ಶಿಕ್ಷಣ ಆಯೋಗ ಮುಂತಾದೆಡೆ ಈ ವಿಚಾರವನ್ನು ಪ್ರಸ್ತಾಪಿಸಿದ್ದೆ. 'ತರಬೇತಿ ನೀಡುವವರಿಗೆ ತರಬೇತಿ' – ಇದು ಉದ್ದೇಶ. ಅದರಲ್ಲಿ ಸಫಲರಾದರೆ ಬೋಧನೆಯ ಗುಣಮಟ್ಟ ವರ್ಧಿಸುತ್ತದೆ, ತರಗತಿಯಲ್ಲಿ ಪರಸ್ಪರ ಪ್ರತಿಕ್ರಿಯೆ ಗುಣಾತ್ಮಕವಾಗಿ ಭಿನ್ನವಾಗುತ್ತದೆ.

**ಹೊಸತು :** ಇಂದಿನ ವಿದ್ಯುನ್ಮಾನ ಮಾಧ್ಯಮವು ಅಧ್ಯಾಪಕರನ್ನು ಅನವಶ್ಯಕವಾಗಿಸುತ್ತದೆ ಎನ್ನುತ್ತಾರಲ್ಲ, ನಿಮಗೇನನಿಸುತ್ತದೆ ?

**ಎಂ. ಎಸ್. ತಿ. :** ಅದೊಂದು ಕೊಳಕು ವ್ಯವಸ್ಥೆಯಾಗಿಬಿಡುತ್ತದೆ. ವಿದ್ಯಾರ್ಥಿ – ಅಧ್ಯಾಪಕ ಸಂಬಂಧವು ವಿದ್ಯಾರ್ಥಿ – ಯಂತ್ರದ ಸಂಬಂಧದಂತೆ ಅಲ್ಲ. ವಿದ್ಯಾರ್ಥಿಯ ಬಾಯಿ ಬಿಡಿಸಲು, ಮನಸ್ಸು ತೆರೆದುಕೊಳ್ಳುವಂತೆ ಮಾಡಲು, ಯಂತ್ರಕ್ಕೆ ಆಗದು. ಅಧ್ಯಾಪನವು ಮಾಹಿತಿಯನ್ನು ಹಸ್ತಾಂತರಿಸುವ ಕ್ರಿಯೆಯಷ್ಟೇ ಅಲ್ಲ, ಅದು ತರಂಗಗಳನ್ನು ಎಬ್ಬಿಸುವ ಕ್ರಿಯೆ ಕೂಡ ಹೌದು. ಮಾಹಿತಿ ಎಲ್ಲೆಲ್ಲೋ ಲಭ್ಯ, ಆದರೆ ಸೃಷ್ಟ್ಯಾತ್ಮಕ ವಿನೂತನತೆ ಹಾಗೆ ಸಿಗುವುದಿಲ್ಲ. ಅಧ್ಯಾಪನದ ವ್ಯಾಪ್ತಿ ಅಂಥದು. ನಾವು ಜಾಗತಿಕ ಗುಣಮಟ್ಟದಲ್ಲಿ ೧೨೦–೧೩೦ರ ನಡುವೆ ಇದ್ದೇವೆ. ಅದು ಸಾಕೆ ? ಅದನ್ನು ಉತ್ತಮಪಡಿಸಬೇಡವೆ ?

**ಹೊಸತು :** ನಿವೃತ್ತ ಉಪಕುಲಪತಿಗಳಾದ ನೀವೆಲ್ಲಾ ಒಂದು ಸಂಘ ಕಟ್ಟಿಕೊಂಡಿದ್ದೀರಿ. ನಿಮ್ಮದೇ ಜಾಗವೊಂದಿದೆ. ಅದರ ಕೆಲಸ ಏನು ? ಅದರ ಪಾತ್ರವೇನು ?

**ಎಂ. ಎಸ್. ತಿ. :** ಸದ್ಯಕ್ಕೆ 'ಏನೂ ಇಲ್ಲ' ಎಂದು ವಿಷಾದದಿಂದ ಹೇಳಬೇಕಾಗಿದೆ. ನಿವೃತ್ತರಿಗೆ ಸ್ವಂತದ ವಿಶಿಷ್ಟ ಆಕಾಂಕ್ಷೆಗಳಿರುವುದಿಲ್ಲ. ಆದ್ದರಿಂದ ಗುಣಮಟ್ಟದತ್ತ ಅವರು ಗಮನ ಹರಿಸಬಹುದು. ನ್ಯೂನತೆಗಳ ಅರಿವು ಅವರಿಗಿದೆ; ಆದ್ದರಿಂದ ಸರ್ಕಾರಕ್ಕೆ ಸಲಹೆ ನೀಡಬಹುದು; ಅಧಿಕಾರವಾಣಿಯಿಂದಲ್ಲ, ತರ್ಕಬದ್ಧ ನಿರೂಪಣೆಯ ಮೂಲಕ. ಸರ್ಕಾರವು ಇವರಿಗೆ ಯೋಜನೆಗಳನ್ನು ಸಹ ನೀಡಬಹುದು.

**ಹೊಸತು :** ಸದ್ಯಕ್ಕಂತೂ ಎಂಥದೋ ಭಾಷಣಗಳನ್ನು ಬಿಟ್ಟು ಬೇರೇನೂ ಜರುಗುತ್ತಿಲ್ಲವಲ್ಲ.

**ಎಂ. ಎಸ್. ತಿ. :** ಜ್ಞಾನ ಆಯೋಗದ ರಚನೆಯಾಗಿತ್ತು. ಅಪಾರ ಮಾಹಿತಿಯ ಸಂಗ್ರಹ ಮಾಡಲಾಗಿದೆ. ಹದಿನೈದು ಮುಖ್ಯ ಶಿಫಾರಸುಗಳನ್ನು ಮಾಡಲಾಗಿದೆ. ಎಲ್ಲಾ ಅನುಷ್ಠಾನಯೋಗ್ಯವಾದುವು. ಆದರೆ ಅದನ್ನು ಎಲ್ಲೋ ಮೂಲೆಗೆ ಒತ್ತರಿಸಿಬಿಟ್ಟಿದ್ದಾರೆ. ಆಯೋಗದ ರಚನೆಯು ನಿಷ್ಫಲವಾಯಿತು. ಒಂದು ಸಮಿತಿ ರಚಿಸಲಾಗಿತ್ತು. ಎಂ. ಆರ್. ಶ್ರೀನಿವಾಸನ್ ಸಮಿತಿ. ಮೂರು ವರ್ಷ ಕೆಲಸ ಮಾಡಿ ಸಮಿತಿಯು ವರದಿ ನೀಡಿತು. ನಿರ್ದಿಷ್ಟ ಸಲಹೆಗಳನ್ನು ನೀಡಿತು. ಉದಾಹರಣೆಗೆ, ಉಪಕುಲಪತಿಗಳ ಆಯ್ಕೆಯ ವಿಧಾನ ಕುರಿತು. ಸಲಹೆಯ ಅನುಷ್ಠಾನವೂ ಸಮಿತಿಯ ಜವಾಬ್ದಾರಿ ಎಂದಿದ್ದೆವು, ಆದರೆ ಯಾರೂ ಈವರೆಗೆ ನಮ್ಮ ಸಲಹೆಯನ್ನೇನೂ ಕೇಳಿಲ್ಲ! ನಮ್ಮಲ್ಲಿ ಸೋರಿಹೋಗುವಷ್ಟು ಜ್ಞಾನವಿದೆ, ಅದನ್ನು ಶೇಖರಿಸಿಕೊಳ್ಳುವ ಯತ್ನವಿಲ್ಲ. ರಾಧಾಕೃಷ್ಣನ್ ಸಮಿತಿಯಿಂದ ಮೊದಲುಗೊಂಡು ಎಷ್ಟು ಶಿಕ್ಷಣ ಆಯೋಗಗಳ ಸಲಹೆಗಳು ನಮ್ಮ ಮುಂದಿವೆ, ನೋಡಿ.

**ಹೊಸತು :** ಕೊಠಾರಿ ಆಯೋಗವು ಶಿಕ್ಷಣದಲ್ಲಿ ಸೌಲಭ್ಯ ಮತ್ತು ಅವಕಾಶಗಳ ಸಮಾನತೆಗೆ ಒತ್ತುಕೊಟ್ಟಿತ್ತು. ಇದರಲ್ಲಿ ಸಮಾನತೆಯಿಲ್ಲ. ಆದರೆ ಸ್ಪರ್ಧೆಯಲ್ಲಿ ಸಮಾನತೆ ಹೇರಿದ್ದೇವೆ.

**ಎಂ. ಎಸ್. ತಿ. :** ಎಂ. ಆರ್. ಶ್ರೀನಿವಾಸನ್ ಸಮಿತಿಯ ವರದಿಯು ಚರ್ಚೆಗೆ ಬಂದಾಗ ಯಾರೋ ಶಿಕ್ಷಣ ಕಾರ್ಯದರ್ಶಿ ಹೇಳಿದರಂತೆ: "ಓ, ಶಿಕ್ಷಣ ಕ್ಷೇತ್ರದವರ ಸಲಹೆಗಳು ಇವೆಲ್ಲಾ. ಅವನ್ನು ಒಪ್ಪುವ ಪ್ರಶ್ನೆಯೇ ಇಲ್ಲ" ಎಂದು! ಶಿಕ್ಷಣವೇತ್ತರಲ್ಲದೆ ಬೇರಿನ್ನಾರು ಈ ಮಹಾನುಭಾವನಿಗೆ ವರದಿ ನೀಡಬೇಕು ?

**ಹೊಸತು :** ಶಿಕ್ಷಣ ಕ್ಷೇತ್ರವನ್ನು ಸಫಲಗೊಳಿಸುವುದು ಹೇಗೆ ?

**ಎಂ. ಎಸ್. ತಿ. :** ಕಳೆದ ೬೫ ವರ್ಷಗಳ ಅಭಿವೃದ್ಧಿ ಇತಿಹಾಸ ನೋಡಿ: ನೆಹರು ಯುಗದಲ್ಲಿ ಭಾರಿ ಉದ್ಯಮಗಳ ಸ್ಥಾಪನೆಯ ಕ್ರಾಂತಿ ಜರುಗಿತ್ತು; ಅಸಾಧಾರಣವಾದ್ದು ಅದು. ಕೃಷಿಕ್ಷೇತ್ರದಲ್ಲಿ ಹಸಿರು ಕ್ರಾಂತಿ ಪಂಜಾಬಿನಲ್ಲಿ, ಬಿಳಿಯ ಕ್ರಾಂತಿ ಗುಜರಾತಿನಲ್ಲಿ, ನಡೆದವು. ಅದರ ಪ್ರಭಾವವು ದೇಶಕ್ಕೆ ಸ್ಥೈರ್ಯ ನೀಡಿತು. ಸಾಮಾಜಿಕವಾಗಿ ಅಂಬೇಡ್ಕರ್ ಕ್ರಾಂತಿಯಾಯಿತು: ಅಚಿಂತ್ಯವಾದಷ್ಟು ಘನತೆಯನ್ನು ಜನಸಮುದಾಯಕ್ಕೆ ತಂದುಕೊಟ್ಟಿತು. ಆಮೇಲೆ ಮನಮೋಹನ ಸಿಂಗ್ ನೇತೃತ್ವದ ಜಾಗತೀಕರಣ ಕ್ರಾಂತಿ ನಡೆಯಿತು. ಉದ್ಯಮಗಳು ವಿಸ್ತೃತವಾದವು. ಆರ್ಥಿಕತೆಯು ಬೇರೊಂದು ಸ್ವರೂಪ ಪಡೆಯಿತು. ಈಚಿನ ದಿನಗಳಲ್ಲಿ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಕ್ರಾಂತಿಯಾಗಿದೆ. ಯಾವ ಕ್ರಾಂತಿಯ ಲವಲೇಶವೂ ಇಲ್ಲದೆ ಮುಂದುವರಿಯುತ್ತಾ ಬಂದಿರುವುದೆಂದರೆ ನಮ್ಮ ಶಿಕ್ಷಣ ಕ್ಷೇತ್ರ ಒಂದೇ. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಗುಣಾತ್ಮಕವಾಗಿ ನಾವು ಸಾಧಿಸಿರುವುದು ಅತ್ಯಲ್ಪ.



**ಹೊಸತು :** ವಿಜ್ಞಾನ, ಮ್ಯಾನೇಜ್‌ಮೆಂಟ್, ತಂತ್ರಜ್ಞಾನ, ಇಲ್ಲೆಲ್ಲಾ ಕ್ರಾಂತಿಯಾಗಲಿಲ್ಲವೆ ?

**ಎಂ. ಎಸ್. ತಿ. :** ಬೆಳವಣಿಗೆಯಾಗಿದೆ, ಕ್ರಾಂತಿಯಾಗಿಲ್ಲ. ಹೊಸ ವಿಧಾನಗಳು, ಆವಿಷ್ಕಾರಗಳು, ಫಲಗಳು, ಇವೆಲ್ಲಾ ಕ್ರಾಂತಿಯ ಸೂಚನೆ. ಅದರಲ್ಲಿ ನಾವು ಸೋಲುತ್ತಿದ್ದೇವೆ. ಮಕ್ಕಳಲ್ಲಿ ಸುಪ್ತವಾಗಿರುವ ಆವಿಷ್ಕಾರ ಶಕ್ತಿಯು ಅಭಿವ್ಯಕ್ತವಾಗಬೇಕು. ಒಂದು ಅವಲೋಕನವು ಸೃಷ್ಟ್ಯಾತ್ಮಕ ಪ್ರಕ್ರಿಯೆಗೆ ಇಂಬುಕೊಡುವಂತೆ ಆಗಬೇಕು. ಅದಕ್ಕೆ ಅಗತ್ಯವಾದ ಸಂರಚನೆ ನಮಗೆ ಬೇಕು. ಮಾರ್ಕ್ಸ್ ಹೇಳಿದ್ದನಲ್ಲ 'ಪರಕೀಯತೆಯ ಸಿದ್ಧಾಂತ' ಎಂದು. ಶಿಕ್ಷಣ ಕ್ಷೇತ್ರದಲ್ಲಿ ಅಂತಹ ಪರಕೀಯತೆಯ ಭಾವಕ್ಕೆ ಅವಕಾಶವೇ ಕೂಡದು. ಶಿಕ್ಷಣ ಮತ್ತು ಶಿಕ್ಷಿತರ ಮೇಳೈಸುವಿಕೆಯೆಂದರೆ ಅದು.

**ಹೊಸತು :** ಕಲೆ, ಸಂಗೀತ, ಇತ್ಯಾದಿಗಳ ಶಿಕ್ಷಣ ಕುರಿತು ಏನು ಹೇಳುತ್ತೀರಿ ? ಇಲ್ಲಿ ಎರಡು ವಿಧಗಳಿವೆ: ತಾವೇ ಸ್ವತಃ ಕಲಿಯುವವರು ಮತ್ತು ಬೇರೆಯವರಲ್ಲಿ ಕಲಿಯುವವರು. ಆ ಬಗ್ಗೆ...

**ಎಂ. ಎಸ್. ತಿ. :** ಶೇಕ್ಸ್‌ಪಿಯರನ ಹ್ಯಾಮ್ಲೆಟ್ ನಾಟಕದ ಸ್ವಗತವೊಂದಿದೆ: 'ಇರುವುದೋ ಇಲ್ಲವೋ, ಅದು ಪ್ರಶ್ನೆ' ಎಂಬ ಭಾಗ. ಅದನ್ನು ಕುರಿತಂತೆ ಫ್ರಾಯ್ಡ್ ವಿಶ್ಲೇಷಣೆ ನೀಡುವಾಗ 'ಈಡಿಪಸ್ ಕಾಂಪ್ಲೆಕ್ಸ್'ಅನ್ನು ಪ್ರಸ್ತಾಪಿಸುತ್ತಾನೆ. ದ ವಿಂಚಿ ಬಗೆಗೂ ವಿಸ್ತೃತ ವಿಶ್ಲೇಷಣೆ ನೀಡಿದ್ದಾನೆ. ಕಲೆಯ ಮನೋವಿಜ್ಞಾನವು ಅಲ್ಲಿ ಸ್ಪಷ್ಟವಾಗಿದೆ. ಅಭಿಜಾತ ಸಂಗೀತ, ಉದಾಹರಣೆಗೆ ಬೀಥೋವನ್; ಆಧುನಿಕ ಕಲೆ, ಉದಾಹರಣೆಗೆ ಪಿಕಾಸೋ; ಎಲ್ಲದಕ್ಕೂ ಅನ್ವಯವಾಗುವ ವಿಧಾನ ಅದು. ಸಾಮಾನ್ಯನೊಬ್ಬ ತನ್ನ ಭಾಷೆಯಲ್ಲಿ ಅಭಿವ್ಯಕ್ತಿಸಲಾಗದುದನ್ನು ಕಲಾವಿದನು ಸಂಗತಿಗಳಿಗೆ ಹೊಸ ಅರ್ಥವನ್ನು ಕಂಡುಕೊಂಡು ತನ್ನದೊಂದು ಭಾಷೆಯಲ್ಲಿ ಅಭಿವ್ಯಕ್ತಿಸುತ್ತಾನೆ. ಅವನದು ಸೂಕ್ಷ್ಮ ಅನುಭವ; ಆ ಅನುಭವ ನಮ್ಮದೂ ಇರಬಹುದು. ಆದರೆ ಅದನ್ನು ನಾವು ಹೆಸರಿಸಲಾರೆವು. ಕಲಾವಿದನ ಇಬ್ಬಂದಿ ಇಲ್ಲಿದೆ: ನಮಗೆ ಗೊತ್ತಿರದ ಅನುಭವವನ್ನು ನಮಗೆ ಗೊತ್ತಿರುವ ಭಾಷೆಯಲ್ಲಿ ಹೇಳಬೇಕು. ದೃಶ್ಯಕಲೆಯಲ್ಲಿ ನೋಡುಗನ, ಸಾಹಿತ್ಯದಲ್ಲಿ ಓದುಗನ ಸಂವೇದನ ಶಕ್ತಿಯ ಪಾತ್ರವೂ ಇದೆ. ಕಲಾವಿದನಿಗೆ ಒಂದು ರೀತಿಯ ಬಿಡುಗಡೆಯೆಂದರೆ ಸ್ವ-ಅಭಿವ್ಯಕ್ತಿ. ಓದುಗ – ನೋಡುಗರಿಗೂ ಪರಿಹಾರ ದೊರೆಯುತ್ತದೆ. ಅದುಮಿಡಲ್ಪಟ್ಟಿರುವ ಒತ್ತಡದ ಹೊರಹಾಕುವಿಕೆ ಅದರಲ್ಲಿದೆ. ಕಲಾವಿದನು ಸೃಷ್ಟಿಸುವ ಪಾತ್ರದ ಮುಖಾಂತರ ಓದುಗ ಮತ್ತು ನೋಡುಗ ತಮ್ಮನ್ನು ತಾವು ಕಂಡುಕೊಳ್ಳುತ್ತಾರೆ. ಅವರು ಪಾತ್ರದೊಡನೆ ತಮ್ಮನ್ನು ಸಮೀಕರಿಸಿಕೊಳ್ಳುತ್ತಾರೆ. ಕಲಾವಿದನು ತನ್ನ ಪಾತ್ರದಂತೆ ತಾನೂ ಮನಸ್ಸಿನ ಭಾರವನ್ನು ಇಳಿಸಿಕೊಳ್ಳುತ್ತಾನೆ. ಇದು ಸಾಮಾನ್ಯವಾಗಿ ಹಗುರವಾಗಿಸಿ ಕೊಳ್ಳುವುದಕ್ಕಿಂತ ಭಿನ್ನವಾದ್ದು, ಉನ್ನತಮಟ್ಟದ್ದು. ವಾಸ್ತವದ ಹಲವು ಮಗ್ಗುಲುಗಳೂ ಸದಾ ಇದ್ದಂಥವು, ಇರುವಂಥವು; ಅವು ಹೊಸ ಸೃಷ್ಟಿಯಲ್ಲ. ಆದರೆ ಅವು ಅನುಭವಕ್ಕೆ ಬಂದಿರಲಿಲ್ಲ, ಈಗ ಕಲಾವಿದನು ಅವನ್ನು ಅನುಭವಕ್ಕೆ ತರುತ್ತಾನೆ. ಮನಸ್ಸು ಹಗುರಗೊಳಿಸಿಕೊಳ್ಳುವುದಕ್ಕಿಂತಲೂ ಅನುಭವದ ವಿಸ್ತರಣೆಯು ಮುಖ್ಯ.

ಕಲೆಗೆ ಇದನ್ನು ಮೀರಿದ ಇನ್ನೊಂದು ಹಂತದ ಅರ್ಥವಿದೆ: ನೋಡುಗ ಅಥವಾ ಕೇಳುಗನ ಪ್ರಜ್ಞೆಯನ್ನು ಅತಿ ಎತ್ತರದ ಸ್ತರಕ್ಕೆ ಕೊಂಡೊಯ್ಯುವುದು. ಆವರೆಗೆ ಗೋಚರವಾಗದಿದ್ದುದೊಂದು ಪ್ರಭೆಯ ರೀತಿಯಲ್ಲಿ ಧಿಗ್ಗನೆ ಗೋಚರವಾಗುತ್ತದೆ. ಈ ಅರ್ಥದಲ್ಲಿ ಕಲೆಯು ಒಂದು ದೀವಟಿಗೆ ಇದ್ದಂತೆ. ಇದು ಮನೋವಿಜ್ಞಾನವು ಕಲೆಯನ್ನು ನೋಡುವ ಪರಿ. ಪತಂಜಲಿಯು ಯೋಗದ ಬಗ್ಗೆ ಹೇಳುವಂತೆ ಅದು "ಚಿತ್ತವೃತ್ತಿ ನಿರೋಧ"ದ ಸ್ಥಿತಿ. ತಲ್ಲೀನತೆ, ಏಕಾಗ್ರತೆ, ಆ ಕ್ಷಣಕ್ಕೆ ಬೇರೆಲ್ಲದರ ಅನಸ್ತಿತ್ವ, ಎಲ್ಲವೂ ಇದರಲ್ಲಿದೆ.

ಗಾಂಧೀಜಿ ಕಲೆಯನ್ನು ವಿಮುಖತೆಗೆ ಪ್ರೇರಣೆ ಎಂದು ಕರೆದಿದ್ದಂತೆ ಫ್ರಾಯ್ಡ್ ಸಹ ಹೇಳಿಯಾನು. ಮನಸ್ಸಿನ ಶಾಂತಭಾವಕ್ಕೆ ತನ್ನ ಪದ್ಧತಿಯ ಶುಶ್ರೂಷೆಯು ಸಾಧನವೆಂದು ಅವನು ಬಗೆದಿದ್ದ. ಅದನ್ನು ಹೀಗೆ ಹೇಳಬಹುದು: ಸಮಸ್ಯೆಗಳನ್ನು ಕೇವಲ ತರ್ಕದಿಂದ, ವಾದಗಳಿಂದ, ಪರಿಹರಿಸಲು ಆಗದು; ಅದಕ್ಕೊಂದು ಬೇರೆಯೇ ಪರಿಸರ ಬೇಕು. ಅದನ್ನು ವಿಷಯಾತೀತವಾದ್ದು, ಅನುಭವಜನ್ಯವಲ್ಲದ್ದು, ಎಂದು ಕರೆಯುತ್ತಾರೆ. ಅಂದರೆ, ವಾಸ್ತವದಲ್ಲೇ ಏನೋ ಬದಲಾವಣೆಯುಂಟಾಯಿತು ಎಂದಲ್ಲ. ವಾಸ್ತವವು ಹಾಗೆಯೇ ಇರುತ್ತದೆ, ಅದಕ್ಕೆ ಅಳಿವಿಲ್ಲ; ಆದರೆ ಕಲೆಯು ವಾಸ್ತವಕ್ಕೆ ವ್ಯಾಪ್ತಿಯನ್ನು ಹಿಗ್ಗಿಸಿ ನೀಡುತ್ತದೆ.

ಮೂರು ಸ್ತರಗಳಲ್ಲಿ ಕಲೆಯನ್ನು ಗ್ರಹಿಸಬಹುದು ಅಥವಾ ಕಲೆಗೆ ಪ್ರತಿಕ್ರಿಯಿಸಬಹುದು, ಎನ್ನಬಹುದು. ಒಂದು, ಫ್ರಾಯ್ಡ್‌ನ ಹಂತದ ಕಲಾವಿದರ ನಿರ್ಮಿತಿಯ ಗ್ರಹಣ; ಎರಡು, ಮಾನವ ಜೀವನದ ಸಮಸ್ಯೆಗಳನ್ನೆತ್ತುವಂತಹ ಕಲೆ; ಮತ್ತು ಮೂರು, ಹೊಸ ಆಯಾಮವುಳ್ಳ ಅಸಾಮಾನ್ಯ ಪ್ರಜ್ಞೆ.

**ಹೊಸತು :** ವಿಶ್ವವಿದ್ಯಾನಿಲಯದಲ್ಲಿ ಲಲಿತಕಲೆಗಳ ವಿಭಾಗಗಳನ್ನು ಸ್ಥಾಪಿಸಿದಿರಲ್ಲವೆ ?

**ಎಂ. ಎಸ್. ತಿ. :** ನಮ್ಮ ವಿಶ್ವವಿದ್ಯಾನಿಲಯದಲ್ಲಿ ಕಲೆಗಳು, ಕಲಾವಿದರು, ಎಂದರೆ ಏನೋ ಒಂದು ಅಸಡ್ಡೆ, ಅಸಮ್ಮತಿ, ಇರುತ್ತಿತ್ತು. "ಅವರು ಕುಡೀತಾರೆ" ಎಂಬ ಆಕ್ಷೇಪವನ್ನು ಸಾಮಾನ್ಯವಾಗಿ ಎತ್ತಿಬಿಡುತ್ತಿದ್ದರು. ಕಲಾವಿದರಲ್ಲದೆಯೂ ಕುಡಿಯುವವರು ಇರುತ್ತಾರೆ ಮತ್ತು ಕಲಾವಿದರಾಗಿಯೂ ಕುಡಿಯದವರಿರುತ್ತಾರೆ, ಅದು ಬೇರೆ ವಿಚಾರ. ವಿಪರೀತ ಶುಲ್ಕ ತೆತ್ತು ಕಲೆಯನ್ನು ಕಲಿಯಹೋಗಲು ಸಾಮಾನ್ಯ ಕುಟುಂಬಗಳ ವಿದ್ಯಾರ್ಥಿಗಳಿಗೆ ಆಗುವುದಿಲ್ಲ. ಆದ್ದರಿಂದ ಖಾಸಗಿ ಸಂಸ್ಥೆಗಳಲ್ಲಿ ಅವರು ಪ್ರವೇಶ ಪಡೆಯಲಾರರು. ಅಂಥವರಿಗೆ ವಿಶ್ವವಿದ್ಯಾನಿಲಯವು ಅವಕಾಶ ಕಲ್ಪಿಸಿಕೊಡುವ ಕೆಲಸವನ್ನು ಮಾಡಿತು.

**ಹೊಸತು :** ಅನೇಕ ವಿಚಾರಗಳನ್ನು ಹಂಚಿಕೊಳ್ಳುವ ಕೃಪೆ ತೋರಿದ್ದೀರಿ. ನಿಮಗೆ ಅನಂತ ವಂದನೆಗಳು.

■




**ಬಟವಾಡೆಯಾಗದ ರಸೀತಿ**



ಲಕ್ಕೂರು ಆನಂದ

**ಪುಟ : ೧೦೪**

**ಬೆಲೆ : ರೂ. ೭೫**

**ಅಭಿನವ ಪ್ರಕಾಶನ,** ೧೭/೧೮-೨, ೧ನೇ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು – ೫೬೦೦೪೦

"ಕಾವ್ಯವೆಂದರೆ ಓರೆಯಾಗಿ ತೆರೆದಿಟ್ಟ ಬಾಗಿಲು" ಎಂದು ಈ ಕವನ ಬರೆದಿರುವ ಕವಿ ಲಕ್ಕೂರು ಆನಂದ ನಂಬಿದ್ದಾರಂತೆ. ಹಾಗೆಂದು ಬೆನ್ನುಡಿಯಲ್ಲಿ ಜೋಗಿ ಹೇಳಿದ್ದಾರೆ. ನಿಜ, ಕಾವ್ಯ ನಮಗೆ ದಕ್ಕಬೇಕಾದರೆ ಇನ್ನರ್ಧ ಬಾಗಿಲನ್ನು ನಾವೇ ತೆರೆದುಕೊಂಡು ಒಳಗೆ ಪ್ರವೇಶಿಸಬೇಕು. ಕವಿತೆಯನ್ನು ಆಸ್ವಾದಿಸುವುದು ಹುಡುಗಾಟದ ಮಾತಲ್ಲ! ಅಲ್ಲಿನ ನೋವು–ನಲಿವು–ಹಾಸ್ಯ–ಸುಖ–ದುಃಖ–ಕೋಪತಾಪಗಳು ಏನೇನಿವೆಯೋ ಎಲ್ಲವನ್ನೂ ನಮ್ಮ ಮಿತಿಯಲ್ಲಿ ಅರ್ಥೈಸಬೇಕು. ಅದರೊಂದಿಗೆ ಜೋಡಿ ನಡಿಗೆ ಹೆಜ್ಜೆಹಾಕಬೇಕು. ಅಲ್ಲಿನ ಒಡಲಾಳವನ್ನು ಗ್ರಹಿಸಬೇಕು. ಇಲ್ಲವಾದಲ್ಲಿ ಅದೊಂದು ಕೇವಲ ಅಕ್ಷರಗಳನ್ನು ಉಚ್ಚರಿಸಿದ ಅರ್ಥಹೀನ ಶಬ್ದಾಡಂಬರವಾದೀತು. ಕವಿ ಹೇಳಿದಂತೆ ಬಟವಾಡೆಯಾಗದ ರಶೀತಿ, ಕಾಗದವಾದೀತು. ತಲುಪ ಬೇಕಾದ ಕಡೆ ತಲುಪದೇ ಉಳಿದೀತು. ಬದುಕಿನ ಎಲ್ಲ ರೀತಿಯ ಸೌಂದರ್ಯವನ್ನು, ಅದರ ಜೊತೆಗಿರುವ ಕುರೂಪದೊಂದಿಗೆ ಅನುಭವಿಸದೆ ವಿಧಿ ಇಲ್ಲ ಎಂಬ ಸತ್ಯವನ್ನು ಇಲ್ಲಿ ಕವಿತೆಗಳ ಮೂಲಕ ನಿರೂಪಿಸ ಲಾಗಿದೆ. ಇಲ್ಲಿ ಪ್ರತಿಮೆಗಳ ರೂಪಕವು ಅಮೂರ್ತ ಕಲ್ಪನೆಯೊಂದರ ಅಭಿವ್ಯಕ್ತಿಯೆಂಬುದು ವಿಶೇಷ. ಜಗತ್ತಿನಿಂದ ಕಾಣೆಯಾಗುತ್ತಿರುವ ಮಾನವೀಯತೆಯ ಹುಡುಕಾಟಕ್ಕೆ ಪ್ರಾಮುಖ್ಯ ನೀಡಿದ್ದೂ ವಿಶೇಷ. ಯಾವುದೋ ಅವ್ಯಕ್ತ ನೋವು ಕವನ ಸಂಕಲನದುದ್ದಕ್ಕೂ ಕಾಡಿ ಕಾಡಿ ಕೊನೆಗೆ ನೋವಿನದೇ ಮೇಲುಗೈ ಯಾದಂತೆ ಅಸಹಾಯಕತೆಯೊಂದು ನಿಟ್ಟುಸಿರು ಬಿಟ್ಟಂತೆ ಭಾಸವಾಗುವ ಕವಿತೆಗಳು...

**ಕಾರ್ಲ್ ಮಾರ್ಕ್ಸ್ – ಆಧುನಿಕ ಕಮ್ಯುನಿಸಮ್‌ನ ಸ್ಥಾಪಕ** ● *ಆರ್ನಾಲ್ಡ್ ಕೆಟಲ್*

*ಕನ್ನಡಕ್ಕೆ : ಜೆ. ಆರ್. ಲಕ್ಷ್ಮಣರಾವ್, ಜೀವೂಬಾಯಿ ಲಕ್ಷ್ಮಣರಾವ್*

**ಪುಟ : ೯೨** **ಬೆಲೆ : ರೂ. ೬೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು–೫೬೦ ೦೦೧

*ಕಾರ್ಲ್ ಮಾರ್ಕ್ಸ್ – ಲೋಕದ ಎಲ್ಲ ಶ್ರಮಜೀವಿಗಳು ಸದಾ ಸ್ಮರಿಸಿಕೊಳ್ಳಬೇಕಾದ ಚಿರಪರಿಚಿತ ಹೆಸರು. ಜರ್ಮನ್, ಫ್ರೆಂಚ್, ಇಂಗ್ಲಿಷ್ ಭಾಷೆಗಳಲ್ಲಿ ಅಸಾಧಾರಣ ಪಾಂಡಿತ್ಯವಿದ್ದ ಕಾರ್ಮಿಕ ಬಂಧು. ಕ್ರಾಂತಿಕಾರಿಯಾಗಿದ್ದು ಸಮಾಜದಲ್ಲಿ ಮೂಲಭೂತ ಬದಲಾವಣೆಯನ್ನೇ ತರಲು ಸದಾ ಚಿಂತಿಸುತ್ತಿದ್ದ ಜನಹಿತವಾದಿ. ಬಂಡವಾಳಶಾಹಿ ವ್ಯವಸ್ಥೆ ಹೇಗೆ ಕೆಲಸ ಮಾಡುತ್ತದೆಂದು ಅದರ ಬೇರುಮೂಲದವರೆಗೂ ಅಭ್ಯಸಿಸಿ ಅದರ ನಿರ್ಮೂಲನೆಗೆ ಹಲವಾರು ಚಳವಳಿಗಳನ್ನು ಹುಟ್ಟುಹಾಕಿದ್ದಷ್ಟೇ ಅಲ್ಲದೆ ಅದರಲ್ಲಿ ಯಶಸ್ವಿಯೂ ಆಗಿದ್ದ ಒಬ್ಬ ಮಾನವತಾವಾದಿ. ಅಪರೂಪದ ಇಂಥ ಹೋರಾಟಗಾರರು ಜಗತ್ತನ್ನೇ ಬದಲಿಸುವ ಸಂಕಲ್ಪತೊಟ್ಟು ತಮ್ಮ ಕೌಟುಂಬಿಕ ವೈಯಕ್ತಿಕ ಜೀವನದ ಸುಖಗಳನ್ನೆಲ್ಲ ಲೋಕಹಿತಕ್ಕಾಗಿ ತ್ಯಾಗ ಮಾಡಿರುತ್ತಾರೆ. ಮಾರ್ಕ್ಸ್ ಬರೆದ ವಿಪುಲ ಸಾಹಿತ್ಯದಲ್ಲೆಲ್ಲ ಶೋಷಿತ ಶ್ರಮಜೀವಿ ವರ್ಗದ ಹಿತಾಸಕ್ತಿಯೇ ಅಚ್ಚೊತ್ತಿ ನಿಂತಿದೆ. ಅವರ ಸಿದ್ಧಾಂತಗಳು ಅಂದಿಗಷ್ಟೇ ಅಲ್ಲ; ಸದಾಕಾಲಕ್ಕೂ ನಿತ್ಯನೂತನವಾಗಿದ್ದು ಸಮಾಜವಾದಿ ವ್ಯವಸ್ಥೆಗೆ ಭದ್ರ ಬುನಾದಿ ಒದಗಿಸುತ್ತವೆ. ಈ ಕೃತಿ ಇಂಥ ಮಹಾನುಭಾವನ ಜೀವನಗಾಥೆಯನ್ನು ಕುರಿತಾದದ್ದು. ಹೋರಾಟದ ಬದುಕನ್ನು ಬಾಳಿದವರಿಗೆ ಸ್ವಂತದ್ದಾಗಿ ಬೇರೊಂದು ಬದುಕು ಇರಲಾರದು. ಆದರೂ ತನ್ನ ಧ್ಯೇಯೋದ್ದೇಶಗಳಿಗೆ ಸ್ಪಂದಿಸಿದ ಕುಟುಂಬದ ಸದಸ್ಯರು ಹಾಗೂ ಪ್ರಾಣಕ್ಕಿಂತ ಹೆಚ್ಚಾಗಿ ಸಹಕರಿಸಿದ ಸ್ನೇಹಿತರು, ಅಂತರಂಗದ ಆದರಣೀಯ ವ್ಯಕ್ತಿಗಳು ಮಾರ್ಕ್ಸ್ ಜೊತೆಗಿದ್ದರು. ಇವರನ್ನೂ ಒಳಗೊಂಡಂತೆ ಪರಿಚಯಿಸಲಾದ ಈ ಕೃತಿ ಅಸಾಧಾರಣ ಪ್ರತಿಭಾವಂತನ ಜೀವನ ಚಿತ್ರಣ.*



**ಕಮ್ಯುನಿಸ್ಟರ ದೃಷ್ಟಿಯಲ್ಲಿ ವಿವೇಕಾನಂದರು** *ಕೆ. ದಾಮೋದರನ್, ಬಿನಯ್ ಕೆ. ರಾಯ್, ಇ.ಎಂ.ಎಸ್. ನಂಬೂದರಿಪಾದ್, ಸಿ. ರಾಜೇಶ್ವರ ರಾವ್, ಎ. ಬಿ. ಬರ್ಧನ್;*

*ಸಂಗ್ರಹಾನುವಾದ : ವಿ.ಎಸ್.ಎಸ್. ಶಾಸ್ತ್ರೀ*

**ಪುಟ : ೧೦೮** **ಬೆಲೆ : ರೂ. ೬೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ವಿಶ್ವಮಾನವ – ವೀರಸನ್ಯಾಸಿ – ವಿಶ್ವವಿಜೇತ ಮುಂತಾಗಿ ಜನರಿಂದ ಪ್ರಶಂಸೆ ಪಡೆದ ಸ್ವಾಮಿ ವಿವೇಕಾನಂದರದು ಅಧ್ಯಾತ್ಮ ಚಿಂತನೆ. ಜೊತೆಗೆ ಪ್ರಖರ ವಿಚಾರವಾದಿ ಹಾಗೂ ಪ್ರಗತಿಪರ ಮನೋಭಾವ ಹೊಂದಿದ್ದರು. ಇವರ ಸಂದೇಶಗಳು ಜಾಗತಿಕ ಮಟ್ಟದಲ್ಲಿ ಗುರುತಿಸಲ್ಪಟ್ಟವು. ಅವರ ಕಾಲದ ಭಾರತ ಆಂಗ್ಲರ ಆಳ್ವಿಕೆಯಲ್ಲಿ ನಲುಗಿತ್ತು. ಜೊತೆಗೆ ದೇಶೀಯ ಅನಿಷ್ಟಗಳಾದ ಮೂಢನಂಬಿಕೆ – ಜಾತಿಪದ್ಧತಿ ವಿಜೃಂಭಿಸಿತ್ತು. ಅನಕ್ಷರಸ್ಥರೂ ಬಡವರೂ ಆದ ಕೆಳವರ್ಗ ದವರನ್ನು ದಮನಿಸಿ ತಾವೇ ಶ್ರೇಷ್ಠರೆಂದು ಬೀಗುವ ಪುರೋಹಿತಶಾಹಿಯನ್ನಂತೂ ತಮ್ಮ ಕಟುಮಾತುಗಳಿಂದ ನಿಂದಿಸಿ ಮುಂದೆ ಶೂದ್ರ ಜನಾಂಗವೇ ಆಡಳಿತದ ಚುಕ್ಕಾಣಿ ಹಿಡಿಯಲಿದ್ದಾರೆಂದು ಖಂಡಿತವಾಗಿ ಮುನ್ನೋಟ ನೀಡಿದ್ದರು. ಯುವಜನತೆ ಎಚ್ಚೆತ್ತುಕೊಳ್ಳಬೇಕೆಂದು, ಭವ್ಯಭಾರತದ ರೂವಾರಿಗಳಾಗಬೇಕೆಂದು ಅವರು ಕರೆ ನೀಡಿದ್ದರು. ಇತ್ತೀಚೆಗೆ ವಿವೇಕಾನಂದರನ್ನು ತಮ್ಮವರೆಂದು ಬಿಂಬಿಸಿ, ತನ್ಮೂಲಕ ಜನರನ್ನು ನಂಬಿಸಿ, ನಮ್ಮ ಸಿದ್ಧಾಂತಗಳೇ ಅವರವೂ ಆಗಿದ್ದವೆಂದು ಹಸೀ ಸುಳ್ಳನ್ನು ಭಾರತೀಯ ಜನತಾ ಪಕ್ಷ, ಸಂಘಪರಿವಾರದಂತಹ ಕೋಮುವಾದಿಗಳು ಹೇಳಿಕೊಳ್ಳು ವುದರ ಹಿನ್ನೆಲೆಯಲ್ಲಿ ಈ ಕೃತಿಯನ್ನು ಕನ್ನಡಕ್ಕೆ ಅನುವಾದಿಸಲಾಗಿದೆ. ಇಲ್ಲಿ ಭಾರತದ ಎಡಪಕ್ಷಗಳ ನಾಯಕರಿಗೆ ವಿವೇಕಾನಂದ ಅವರ ವ್ಯಕ್ತಿತ್ವ ಹೇಗೆ ಕಂಡಿದೆಯೆಂದು – ಮುಖ್ಯವಾಗಿ ಮಾರ್ಕ್ಸವಾದಿ ದೃಷ್ಟಿಕೋನದಿಂದ–ವಿಮರ್ಶೆ ಮಾಡಲಾಗಿದೆ. ವಿವೇಕಾನಂದರು ಹಿಂದೂವಾದಿಗಳೆಂದು ಬಿಂಬಿಸುವ ಹುನ್ನಾರವನ್ನು ಕಟುಮಾತುಗಳಲ್ಲಿ ಖಂಡಿಸಲಾಗಿದೆ.*

**ಅಂತಃಸ್ವರ**

*ಓಡಿಶಾ ಮೂಲ : ಸುಸ್ಮಿತಾ ಬಾಗಚಿ ಅನುವಾದ : ಡಾ॥ ಮಾಧವಿ ಎಸ್. ಭಂಡಾರಿ*

**ಪುಟ : ೧೬೦** **ಬೆಲೆ : ರೂ. ೧೨೦**

**ಮಂದಾರ ಸಾಹಿತ್ಯ ,** ಮಂದಾರ, ಪದ್ಮನಾಭನಗರ, ಡಯಾನ ಥಿಯೇಟರ್ ಹಿಂಬದಿ ರಸ್ತೆ, ಉಡುಪಿ – ೫೭೬ ೧೦೧



*ಕಾಲ ಸಂಪೂರ್ಣವಾಗಿ ಕೆಟ್ಟುಹೋಗಿದೆಯೆಂದು ಹುಯಿಲೆದ್ದಿರುವ ಇಂದಿನ ದಿನಮಾನಗಳ ಬಗ್ಗೆ ಈ ಕಥೆಗಳು ಎಚ್ಚರಿಕೆಯ ಗಂಟೆಯನ್ನು ಬಾರಿಸುತ್ತವೆ. ಮನುಷ್ಯರು ಪರಸ್ಪರರನ್ನು ನಂಬಲಾರದಷ್ಟು ಕಾಲ ಅದು ಹೇಗೋ ಬದಲಾಗಿಬಿಟ್ಟಿದೆ. ಅದಕ್ಕೆ ಕಾರಣ ಯಾರು ಎಂದು ಕೇಳಿಕೊಂಡಾಗ ಇಲ್ಲಿನ ಕಥೆಗಳು ಉತ್ತರ ಹೇಳುತ್ತಿವೆ. ಒಬ್ಬರು ಇನ್ನೊಬ್ಬರತ್ತ ಬೊಟ್ಟು ಮಾಡುವಂತೆಯೇ ಇಲ್ಲ. ಈ ಬ್ರಹ್ಮಾಂಡವೆಂಬ ಬಹುದೊಡ್ಡ ಸಂಸಾರದಲ್ಲಿನ ಪ್ರಪಂಚವೆಂಬ ಭೂಮಿಯ ಮೇಲಿನ ಇನ್ನೊಂದು ಪುಟ್ಟ ಸಂಸಾರಕ್ಕೆ ಸೇರಿದ ಅತಿ ಚಿಕ್ಕ ಸಂಸಾರಗಳೆಂಬ ಮನೆಮನೆಯಲ್ಲಿ ನಡೆವ ಘಟನೆಗಳೇ ಇಲ್ಲಿನ ಈ ಚಿಕ್ಕ ಚಿಕ್ಕ ಕಥೆಗಳು. ನಾವೇ ಸೃಷ್ಟಿಸಿಕೊಂಡ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲಾಗದ ಅಸಹಾಯಕತೆ ನಮ್ಮದು. ಎದ್ದುನಿಂತು ಬೆದರಿಸುವ ಸಮಸ್ಯೆ, ಹೆಜ್ಜೆಹೆಜ್ಜೆಗೆ ಹಿಂಬಾಲಿಸುತ್ತಿರುವಾಗ ಈ ಕಥೆಗಳಲ್ಲಿನ ಪಾತ್ರಗಳು ಹೇಗೆ ಸ್ಪಂದಿಸಿವೆ? ಏನು ಪರಿಹಾರ ಕಂಡುಕೊಂಡಿವೆ? ಇಲ್ಲಿ ಪರಿಹಾರವೇ ಕಾಣದ, ಪ್ರಯತ್ನಿಸಿದರೆ ಸರಿಹೋಗುವ, ತನ್ನಿಂತಾನೇ ಸರಿಪಡಿಸಬಹುದಾದ – ಹಲವಾರು ರೀತಿಯ ಗೊಂದಲದ ಕೌಟುಂಬಿಕ ಕಗ್ಗಂಟುಗಳಿವೆ. ಯಾರೋ ಪರಿಹಾರ ಸೂಚಿಸುತ್ತಾರೆಂದು ಕಾದು ಕುಳಿತುಕೊಳ್ಳದೆ ಮುಖಾಮುಖಿಯಾಗಿ ಎದುರಿಸಬೇಕಾದ ಅಗತ್ಯಗಳನ್ನು ಮನಗಾಣಿಸಿದೆ. ಎಲ್ಲವೂ ನಮ್ಮ – ನಿಮ್ಮ ಮನೆಮನೆಯ ಕಥೆಗಳು. ಒಬ್ಬರದಂತೆ ಇನ್ನೊಬ್ಬರ ಹೆಬ್ಬೆರಳ ಗುರುತಿಲ್ಲ – ಆದರೂ ಎಲ್ಲರಿಗೂ ಹೆಬ್ಬೆರಳೆಂಬುದು ಇದೆ ತಾನೆ? ಈ ಕಥೆಗಳೂ ಇಂಥವೇ, ಅಪ್ಪಟ ಭಾರತೀಯ ಬದುಕಿನ ಶೈಲಿಗಳು. ಮೂಲ ಓಡಿಶಾ ಭಾಷೆಯಿಂದ ಕನ್ನಡಕ್ಕೆ ಮಾಧವಿ ಭಂಡಾರಿಯವರ ಅನುವಾದ.*

**– ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು - ೨೨*



ಸಿ. ಆರ್. ಕೃಷ್ಣರಾವ್

# ಅವಿಶ್ರಾಂತ ಹೋರಾಟಗಾರ ನೆಲ್ಸನ್ ಮಂಡೇಲರಿಗೆ ನಮನ

**ದಕ್ಷಿಣ ಆಫ್ರಿಕಾದ ಜನರಿಗೆ ನೆಲ್ಸನ್ ಮಂಡೇಲ 'ರಾಷ್ಟ್ರಪಿತ' ಹಾಗೂ 'ಪ್ರಜಾಪ್ರಭುತ್ವದ ಸ್ಥಾಪಕ', ಪ್ರಪಂಚದ ಜನರಿಗೆ ಅಪ್ರತಿಮ ಸ್ವಾತಂತ್ರ್ಯ ಯೋಧ. ೧೯೯೩ರಲ್ಲಿ ನೊಬೆಲ್ ಶಾಂತಿ ಪುರಸ್ಕಾರ ಪಡೆದ ಮಂಡೇಲ ಭಾರತದ ಅತ್ಯುನ್ನತ ಗೌರವ ಪುರಸ್ಕಾರ 'ಭಾರತ ರತ್ನ'ದ ಭಾಜನರು. ಹಲವು ದೇಶಗಳ ಉನ್ನತ ಗೌರವ ಪ್ರಶಸ್ತಿಗಳನ್ನು ಸ್ವೀಕರಿಸಿರುವ ಮಂಡೇಲರ ನಿಧನದಿಂದ ಜಗತ್ತು ಒಬ್ಬ ಮಹಾನ್ ರಾಜಕಾರಣಿಯನ್ನು ಕಳೆದುಕೊಂಡಿದೆ.**




"ಮಾನ್ಯರೆ ನಾನೊಬ್ಬ ಪದವೀಧರ. ಹಲವು ವರ್ಷಗಳ ಕಾಲ ಜೊಹಾನ್ಸ್‌ಬರ್ಗ್‌ನಲ್ಲಿ ನಾನು ನ್ಯಾಯವಾದಿಯಾಗಿ ಕಾರ್ಯನಿರತನಾಗಿದ್ದೆ. ನಾನೊಬ್ಬ ಶಿಕ್ಷೆಗೆ ಗುರಿಯಾಗಿರುವ ಬಂದಿ. ಪರವಾನಗಿಯಿಲ್ಲದೆ ನಾನು ರಾಷ್ಟ್ರದಿಂದ ಹೊರಹೋಗಿದ್ದೆನೆಂದು ನನಗೆ ಐದು ವರ್ಷದ ಕಾರಾಗೃಹ ವಾಸ ವಿಧಿಸಲಾಗಿದೆ. ಮೇ ೧೯೬೧ರಲ್ಲಿ ಕೆಲಸಗಾರರನ್ನು ಮುಷ್ಕರ ಹೂಡಬೇಕೆಂದು ಪ್ರೇರೇಪಿಸಿದೆನೆಂದು ಇನ್ನೊಂದು ಆಪಾದನೆಯು ನನ್ನ ಮೇಲಿದೆ.

"ಉಂಕೋಂತೊ ಸಿಜ್ವೆಯೆಂಬ ಸಶಸ್ತ್ರ ಪಡೆಯನ್ನು ಸಂಘಟಿಸಿದವರಲ್ಲಿ ನಾನೊಬ್ಬನೆಂಬುದನ್ನು ಸಂತೋಷದಿಂದ ಒಪ್ಪಿಕೊಳ್ಳುತ್ತೇನೆ. ಆಗಸ್ಟ್ ೧೯೬೨ರಲ್ಲಿ ಬಂಧನಕ್ಕೊಳಗಾಗುವ ತನಕ ಆ ಪಡೆಯ ಕಾರ್ಯ ನಿರ್ವಹಣೆಯಲ್ಲಿ ನಾನು ಪ್ರಮುಖ ಪಾತ್ರವಹಿಸಿದ್ದೆನೆಂದೂ ಒಪ್ಪುತ್ತೇನೆ... ಸರಕಾರದ ವಿರುದ್ಧ ಹಲವು ಕಾರ್ಯಕ್ರಮಗಳನ್ನು ನಾನು ರೂಪಿಸಿದ್ದು ನಿಜ... ನಾವು ಅನುಸರಿಸಿದ ಹಿಂಸೆಯು ಭೀತಿಯನ್ನು ಬಿತ್ತುವಂತಹ ಹಿಂಸಾತ್ಮಕ ಕೃತ್ಯವಲ್ಲ... ದಕ್ಷಿಣ ಆಫ್ರಿಕವು ಅಲ್ಲಿ ವಾಸಿಸುವ ಜನರಿಗೆ ಸೇರಿದೆಯೇ ಹೊರತು ಆ ಜನರ ಯಾವೊಂದು ಭಾಗಕ್ಕೆ ಮಾತ್ರವೂ ಅಲ್ಲ. ಅವರು ಬಿಳಿಯವರಾಗಿರಲಿ ಕರಿಯವರಾಗಿರಲಿ ಅವರೆಲ್ಲಾ ದಕ್ಷಿಣ ಆಫ್ರಿಕಾದ ಸಮಾನ ಪ್ರಜೆಗಳು. ವಿವಿಧ ವರ್ಣಗಳ ನಡುವೆ ಅಖಂಡವಾದ ಯುದ್ಧವಾಗಬೇಕೆಂಬುದು ನಮ್ಮ ಇಚ್ಛೆಯಲ್ಲ...

"೧೯೬೦ರಲ್ಲಿ ಶಾರ್ಪ್‌ವಿಲೆ ಎಂಬಲ್ಲಿ ಭಾರಿ ಹತ್ಯೆ ನಡೆಯಿತು. ನಂತರ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ಸನ್ನು ನ್ಯಾಯಬಾಹಿರ ಸಂಸ್ಥೆ ಎಂದು ಘೋಷಿಸಲಾಯಿತು... ಪರಿಣಾಮವಾಗಿ, ನಮ್ಮ ಸಂಸ್ಥೆಯು ಅಳಿಸಿಹೋಗುವ ಬದಲು ಭೂಗತ ಕಾರ್ಯಾಚರಣೆಯನ್ನಾರಂಭಿಸಬೇಕಾಗಿ ಬಂತು... ಹೋರಾಟವನ್ನು ಮುಂದುವರಿಸದೆ ನಮಗೆ ಗತ್ಯಂತರವಿರಲಿಲ್ಲ. ಇಲ್ಲದಿದ್ದರೆ ದಕ್ಷಿಣ ಆಫ್ರಿಕಾದ ಕ್ರೂರ ಸರ್ಕಾರಕ್ಕೆ ಶರಣು ಹೋಗಬೇಕಾಗಿತ್ತಷ್ಟೆ... ಐವತ್ತು ವರ್ಷಗಳ ಅಹಿಂಸಾತ್ಮಕ ಚಳುವಳಿ ಆಫ್ರಿಕನ್ನರಿಗೆ ಯಾವ ಪ್ರಯೋಜನವನ್ನೂ ಒದಗಿಸಿರಲಿಲ್ಲ. ಏನಾದರೂ ಇದ್ದರೆ, ಅದು ಹೆಚ್ಚು ಹೆಚ್ಚು ತೀಕ್ಷ್ಣವಾದ ದಮನಕಾರಿ ಕಾನೂನುಗಳ ರೂಪದಲ್ಲಿ ಮಾತ್ರವೇ. ...ಯಾವ ಸರ್ಕಾರವು ತನ್ನ ಅಧಿಕಾರವನ್ನು ಉಳಿಸಿಕೊಳ್ಳಲು ಶಸ್ತ್ರಾಸ್ತ್ರಗಳ ಶಕ್ತಿಯನ್ನು ಬಳಸುತ್ತದೋ ಅಂತಹ ಸರಕಾರವನ್ನು ವಿರೋಧಿಸಲು ಶಸ್ತ್ರಾಸ್ತ್ರಗಳ ಬಳಕೆ ಮಾಡಲೇಬೇಕಾಗುತ್ತದೆ...

"ನಮ್ಮ ಸಂಸ್ಥೆಯ ತಾತ್ವಿಕ ನಿಲುವು ಆಫ್ರಿಕನ್ನರಿಗೆ ಅವರ ನಾಡಿನಲ್ಲಿ ಸೂಕ್ತವಾದ ಸ್ಥಾನಮಾನಗಳಿರಬೇಕೆಂಬುದು. ಬಿಳಿಯವನನ್ನು ಸಮುದ್ರಕ್ಕೆ ನೂಕಿ ಎಂಬುದಲ್ಲ... ಕರಿಯವರೆಲ್ಲ ಗುರುತಿನ ಚೀಟಿಯನ್ನು ಇರಿಸಿಕೊಂಡಿರಬೇಕೆಂಬ ಕಾನೂನು ನಮ್ಮನ್ನು ರೊಚ್ಚಿಗೆಬ್ಬಿಸಿದೆ... ನಮಗೆ ಬೇಕಾದ್ದು ರಾಜಕೀಯ ಹಕ್ಕುಗಳು... ನಮ್ಮದು ನೈಜವಾದ ರಾಷ್ಟ್ರೀಯ ಹೋರಾಟ. ಜೀವಂತವಾಗಿರುವ ಹಕ್ಕಿಗಾಗಿ ಈ ಹೋರಾಟ...




ರೋಬೆನ್ ದ್ವೀಪದ ಕಾರಾಗೃಹ



ನೆಲ್ಸನ್ ಮಂಡೇಲ ಕಾರಾಗೃಹದಲ್ಲಿ

"ಆಫ್ರಿಕಾದ ಜನತೆಯ ಹೋರಾಟಕ್ಕಾಗಿ ನನ್ನ ಜೀವನವನ್ನು ಮೊದಲಿನಿಂದಲೂ ನಾನು ಮುಡುಪಾಗಿಟ್ಟಿದ್ದೇನೆ. ಬಿಳಿಯರ ಪ್ರಭಾವದ ವಿರುದ್ಧವೂ ಹೋರಾಡಿದ್ದೇನೆ, ಕರಿಯರ ಪ್ರಭಾವದ ವಿರುದ್ಧವೂ ಹೋರಾಡಿದ್ದೇನೆ. ಪ್ರಜಾಪ್ರಭುತ್ವವಾದಿ ಸ್ವತಂತ್ರ ಸಮಾಜದ ಧ್ಯೇಯವನ್ನು ಕಾರ್ಯರೂಪಕ್ಕೆ ತರಲು ನಾನು ಸದಾ ಶ್ರಮಿಸಿದ್ದೇನೆ. ಪರಸ್ಪರ ಹೊಂದಾಣಿಕೆ ಮತ್ತು ಸಮಾನಾವಕಾಶಗಳು ಇರುವಂತಹ ಸಮಾಜವು ನನ್ನ ಧ್ಯೇಯ. ಆ ಧ್ಯೇಯಕ್ಕಾಗಿ ಬದುಕುತ್ತೇನೆಂದು ನನ್ನ ಆಶಯ. ಆ ಧ್ಯೇಯಕ್ಕಾಗಿ ನನ್ನ ಜೀವವನ್ನು ಕೊಡಬೇಕಾಗಿ ಬಂದರೆ ನಾನದಕ್ಕೂ ಸಿದ್ಧನಿದ್ದೇನೆ."

ಈ ಬಗೆಯ ನುಡಿಮುತ್ತುಗಳನ್ನಾಡಿದವರು ಜೀವಾವಧಿ ಶಿಕ್ಷೆಗೆ ಗುರಿಯಾದ ದಕ್ಷಿಣ ಆಫ್ರಿಕಾದ ಅಪ್ರತಿಮ ನಾಯಕ ನೆಲ್ಸನ್ ಮಂಡೇಲ. ಜೊಹಾನ್ಸ್‌ಬರ್ಗ್ ನ್ಯಾಯಾಲಯದಲ್ಲಿ ಜಗತ್ಪ್ರಸಿದ್ಧವಾದ 'ರಿವೋನಿಯ ವಿಚಾರಣೆ'ಯ ಕಾಲದಲ್ಲಿ ಐವತ್ತು ವರ್ಷಗಳ ಹಿಂದೆ ನೆಲ್ಸನ್ ಮಂಡೇಲ ನೀಡಿದ ಹೇಳಿಕೆಯ ಆಯ್ದ ಭಾಗಗಳು ಇವು. ಇದನ್ನು ಓದಲು ಅವರಿಗೆ ನಾಲ್ಕು ಗಂಟೆಗಳು ಹಿಡಿದುವು. ದೇಶಭಕ್ತನೊಬ್ಬ ನ್ಯಾಯಾಲಯದ ಮುಂದೆ ಮಾಡಿದ ಈ ಹೇಳಿಕೆ ಇಂದೂ ಪ್ರಸ್ತುತ. ಈ ಧೀಮಂತ ಹೋರಾಟಗಾರ ನುಡಿದಂತೆ ನಡೆದುಕೊಂಡವರು, ತನ್ನ ಜನರ ವಿಮೋಚನೆಗಾಗಿ ಇಪ್ಪತ್ತೇಳು ವರ್ಷಗಳು ಕಾರಾಗೃಹ ವಾಸ ಅನುಭವಿಸಿದವರು ಮಂಡೇಲ. ಅವರು ತೋರಿದ ಧೈರ್ಯ, ಸ್ಥೈರ್ಯಗಳು ಅನುಕರಣೀಯ. ತನ್ನ ಇಡೀ ಬದುಕನ್ನು ರಾಷ್ಟ್ರಕ್ಕಾಗಿ ಸವೆಸಿದ ಜೀವ ಅವರದು. ಕಾರಾಗೃಹದಿಂದ ಅಧಿಕಾರದ ಗದ್ದುಗೆಗೇರಿದರೂ ಒಂದೇ ಅವಧಿಗೆ ರಾಷ್ಟ್ರಾಧ್ಯಕ್ಷರಾಗಿದ್ದು ನಿವೃತ್ತರಾದ ಅಪರೂಪದ ರಾಜಕಾರಣಿ. ಅಸಾಧಾರಣ ಮುತ್ಸದ್ದಿತನ ತೋರಿ, ಯಶಸ್ವಿಯಾಗಿ ಎರಡು ವರ್ಷ ಸಂಧಾನ ನಡೆಸಿ ತನ್ನ ಜನರಿಗೆ ಸಮಾನ ಹಕ್ಕುಗಳನ್ನು ದೊರಕಿಸಿಕೊಟ್ಟ ಮೇರು ನಾಯಕ. ತುಂಬು ಜೀವನ ನಡೆಸಿ ತೊಂಬತ್ತೈದನೆ ವಯಸ್ಸಿನಲ್ಲಿ ಅಸುನೀಗಿದ ಮಹಾನ್ ನಾಯಕ ಮಂಡೇಲ ಚಿರಸ್ಮರಣೀಯ. ಅವರು ನಮ್ಮನ್ನಗಲಿದ್ದರೂ ಸ್ವಾತಂತ್ರ್ಯಪ್ರಿಯರಿಗೆ ಸದಾ ಚೈತನ್ಯದ ಚಿಲುಮೆಯಾಗಿರುತ್ತಾರೆ. ಅವರ ಚಿರಸ್ಮರಣೆಗೆ 'ಹೊಸತು' ಹೃದಯಪೂರ್ವಕವಾದ ನಮನ ಸಲ್ಲಿಸುತ್ತದೆ.



ನೆಲ್ಸನ್ ಮಂಡೇಲಗೆ ವಿಶ್ವದ ಗೌರವ

ಕಾರಾಗೃಹದಲ್ಲಿದ್ದಾಗಲೂ ತನ್ನ ಜನರಿಗೆ, ಅವರ ಹೋರಾಟಕ್ಕೆ ಸ್ಫೂರ್ತಿಯ ಸೆಲೆಯಾಗಿದ್ದ ಮಂಡೇಲ, ಆ ಕಠಿಣ ದಿನಗಳಲ್ಲಿ ತಮ್ಮ ಆತ್ಮಚರಿತ್ರೆ ಬರೆದಿದ್ದಾರೆ. ಅದೊಂದು ಅಮೂಲ್ಯ ಕೃತಿ, ಸ್ವಾತಂತ್ರ್ಯ ಹೋರಾಟಗಾರರಿಗೆ ಕೈಪಿಡಿ. ಯಶಸ್ವೀ ವಕೀಲನಾಗಿ ಆರಾಮ ಜೀವನ ನಡೆಸಬಹುದಾಗಿದ್ದ ಮಂಡೇಲ ಆಯ್ಕೆ ಮಾಡಿಕೊಂಡಿದ್ದು ಹೋರಾಟದ ಬದುಕು. ಇಪ್ಪತ್ತಾರನೇ ವಯಸ್ಸಿನಲ್ಲಿಯೇ ೧೯೪೪ರಲ್ಲಿ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ಸಿನಲ್ಲಿ ಯುವ ಜನರ ವಿಭಾಗ ಸ್ಥಾಪಿಸಿ ಅದನ್ನು ಸಶಸ್ತ್ರ ಹೋರಾಟಕ್ಕೆ ಸಜ್ಜುಗೊಳಿಸಿದ್ದು ನೆಲ್ಸನ್ ಮಂಡೇಲ. ಮತ್ತೆ ಅವರು ಗುರಿಸಾಧನೆಯಾಗುವವರೆಗೆ ಹಿಂದಿರುಗಿ ನೋಡಿದವರಲ್ಲ. ೧೯೫೬ರಲ್ಲಿ ಮಂಡೇಲ ಮತ್ತು ೧೫೫ ಮಂದಿ ಇತರ ಕಾರ್ಯಕರ್ತರನ್ನು ದೇಶದ್ರೋಹದ ಆಪಾದನೆಯ ಮೇಲೆ ಸರಕಾರ ಬಂಧಿಸಿತು. ಕಮ್ಯುನಿಸ್ಟ್ ಕ್ರಾಂತಿ ನಡೆಸಲು ಸಂಚು ನಡೆಸಿದರೆಂದು ಅವರನ್ನು ವಿಚಾರಣೆಗೆ ಗುರಿಪಡಿಸಲಾಗಿತ್ತು. ಈ ವಿಚಾರಣೆಯ ಕಾಲವನ್ನೂ ಮಂಡೇಲ ಆಫ್ರಿಕನ್ ನ್ಯಾಷನಲ್ ಕ್ರಾಂಗ್ರೆಸ್ಸಿನ ಧ್ಯೇಯಗಳ ಪ್ರಚಾರಕ್ಕೆ ಉಪಯೋಗಿಸಿಕೊಂಡಿದ್ದರು. ಷಾರ್ಪ್‌ವಿಲ್ಲೆ ಕಗ್ಗೊಲೆ ಪ್ರಕರಣ, ಕರಿಯರಿಗೆ ಪಾಸ್ ನೀಡಿಕೆ ಕಾಯಿದೆ ವಿರುದ್ಧ ಪ್ರತಿಭಟನೆ ತೋರಿದ ಮಂಡೇಲ ಕೆಲಕಾಲ ಭೂಗತರಾಗಿ ಹೋರಾಟ ಮುಂದುವರಿಸಿದರು. ಅತಿ ದೀರ್ಘಕಾಲ ಸೆರೆವಾಸವನ್ನು ಅನುಭವಿಸಿದ ದಾಖಲೆ ಮಂಡೇಲ ಅವರದ್ದು. ವಾಲ್ಟರ್ ಸಿಸುಲು, ಗೊವಾನ್ ಬೆಕಿ, ರೇಮಂಡ್ ಹ್ಲಾಟ, ಡೆನ್ನಿಸ್ ಗೋಲ್ಡ್‌ಬರ್ಗ್, ಅಹಮದ್ ಕತ್ರಾದ, ಲಯೊನೆಟ್ ಬರ್ನ್‌ಸ್ಟೀನ್ ಮುಂತಾದವರೆಲ್ಲ ಅವರ ಸಂಗಾತಿಗಳು ರೊಬ್ಬೆನ್ ದ್ವೀಪದಲ್ಲಿನ ಕಾರಾಗೃಹದಲ್ಲಿದ್ದಾಗ. ದಕ್ಷಿಣ ಆಫ್ರಿಕಾದ ಭಾರತೀಯ ಸಮುದಾಯದೊಂದಿಗೆ, ಕಮ್ಯುನಿಸ್ಟರೊಂದಿಗೆ ನಿಕಟವಾದ ಬಾಂಧವ್ಯ ಇರಿಸಿಕೊಂಡಿದ್ದರು ಮಂಡೇಲ.

ದಕ್ಷಿಣ ಆಫ್ರಿಕಾದ ಜನರಿಗೆ ನೆಲ್ಸನ್ ಮಂಡೇಲ 'ರಾಷ್ಟ್ರಪಿತ' ಹಾಗೂ 'ಪ್ರಜಾಪ್ರಭುತ್ವದ ಸ್ಥಾಪಕ', ಪ್ರಪಂಚದ ಜನರಿಗೆ ಅಪ್ರತಿಮ ಸ್ವಾತಂತ್ರ್ಯ ಯೋಧ. ೧೯೯೩ರಲ್ಲಿ ನೊಬೆಲ್ ಶಾಂತಿ ಪುರಸ್ಕಾರ ಪಡೆದ ಮಂಡೇಲ ಭಾರತದ ಅತ್ಯುನ್ನತ ಗೌರವ ಪುರಸ್ಕಾರ 'ಭಾರತ ರತ್ನ'ದ ಭಾಜನರು. ಹಲವು ದೇಶಗಳ ಉನ್ನತ ಗೌರವ ಪ್ರಶಸ್ತಿಗಳನ್ನು ಸ್ವೀಕರಿಸಿರುವ ಮಂಡೇಲರ ನಿಧನದಿಂದ ಜಗತ್ತು ಒಬ್ಬ ಮಹಾನ್ ರಾಜಕಾರಣಿಯನ್ನು ಕಳೆದುಕೊಂಡಿದೆ. ಅವರ ಅಂತ್ಯಸಂಸ್ಕಾರಕ್ಕೆ ಆಗಮಿಸಿದ್ದ ವಿವಿಧ ದೇಶಗಳ ಅಧಿಪತಿಗಳ ಸಮೂಹವೇ ಅದಕ್ಕೆ ಸಾಕ್ಷಿ. ಎಂಬತ್ತಕ್ಕೂ ಹೆಚ್ಚು ರಾಷ್ಟ್ರಗಳ ನಾಯಕರುಗಳು ಭಾಗವಹಿಸಿದ್ದುದು, ಗೌರವ ಸಲ್ಲಿಸಿದ್ದು ಮಂಡೇಲರ ಹಿರಿಮೆಗೆ ದ್ಯೋತಕ. ಅವರ ಸ್ಮರಣೆಗೆ 'ಹೊಸತು' ಮತ್ತೊಮ್ಮೆ ಅಂತಿಮ ನಮನ ಸಲ್ಲಿಸುತ್ತದೆ.

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೭ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫



# ಲಂಕೇಶ್ ಪ್ರಕಾಶನ

## ನಮ್ಮ ಪ್ರಕಾಶನದಿಂದ ಈವರೆಗೆ ಪ್ರಕಟವಾಗಿರುವ ಪುಸ್ತಕಗಳು

ಪ್ರತಿಗಳಿಗಾಗಿ ಸಂಪರ್ಕಿಸಿ
**ಲಂಕೇಶ್ ಪ್ರಕಾಶನ**
ನಂ.9, ಇ.ಎ.ಟಿ.ರಸ್ತೆ, ಬಸವನಗುಡಿ
ಬೆಂಗಳೂರು-4 080-26676427
9880302817



| ಶೀರ್ಷಿಕೆ | ಬೆಲೆ | ಮಾಧ್ಯಮ | ಲೇಖಕರು |
|---|---|---|---|
| 1. ನೀಲು ಕಾವ್ಯ –ಸಂಗ್ರಹ 1 | 150.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 2. ನೀಲು ಕಾವ್ಯ –ಸಂಗ್ರಹ 2 | 150.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 3. ನೀಲು ಕಾವ್ಯ –ಸಂಗ್ರಹ 3 | 200.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 4. ಚಿತ್ರ ಸಮೂಹ | 90.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 5. ಅಕ್ಷರ ಹೊಸ ಕಾವ್ಯ | 250.00 | ಕಾವ್ಯ ಸಂಗ್ರಹ | ಪಿ. ಲಂಕೇಶ್ |
| 6. ಮರೆಯುವ ಮುನ್ನ–ಸಂಗ್ರಹ 1 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| 7. ಮರೆಯುವ ಮುನ್ನ–ಸಂಗ್ರಹ 2 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| 8. ಮರೆಯುವ ಮುನ್ನ–ಸಂಗ್ರಹ 3 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| 9. ಮರೆಯುವ ಮುನ್ನ–ಸಂಗ್ರಹ 4 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| 10. ಪಾಂಚಾಲಿ | 150.00 | 1974ರ ದೀಪಾವಳಿ ಸಂಚಿಕೆ | ಪಿ. ಲಂಕೇಶ್ |
| 11. ಮನಕೆ ಕಾರಂಜಿಯ ಸ್ಪರ್ಶ | 150.00 | ಪಾಶ್ಚಿಮಾತ್ಯ ಬರಹಗಳು | ಪಿ. ಲಂಕೇಶ್ |
| 12. ಈ ನರಕ ಈ ಪುಲಕ | 125.00 | ಸಿನಿಮಾ ಬರಹಗಳು | ಪಿ. ಲಂಕೇಶ್ |
| 13. ಆಟ–ಜೂಜು–ಮೋಜು! | 150.00 | ಕ್ರೀಡಾ ಬರಹಗಳು | ಪಿ. ಲಂಕೇಶ್ |
| 14. ಟೀಕೆ–ಟಿಪ್ಪಣಿ 1 | 200.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 15. ಟೀಕೆ–ಟಿಪ್ಪಣಿ 2 | 200.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 16. ಟೀಕೆ–ಟಿಪ್ಪಣಿ 3 | 200.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 17. ಸಾಹಿತಿ–ಸಾಹಿತ್ಯ | 300.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 18. ರೂಪಕ ಲೇಖಕರು | 70.00 | ಪ್ರಸಿದ್ಧ ಲೇಖಕರ ಬದುಕು–ಬರಹ | ಪಿ. ಲಂಕೇಶ್ |
| 19. ಕಂಡದ್ದು ಕಂಡಹಾಗೆ | 100.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 20. ಪ್ರಸ್ತುತ | 80.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 21. ಹುಳಿಮಾವಿನ ಮರ | 250.00 | ಆತ್ಮಕಥೆ | ಪಿ. ಲಂಕೇಶ್ |
| 22. ಮುಸ್ಸಂಜೆಯ ಕಥಾ ಪ್ರಸಂಗ | 250.00 | ಕಾದಂಬರಿ | ಪಿ. ಲಂಕೇಶ್ |
| 23. ಬಿರುಕು | 60.00 | ಕಾದಂಬರಿ | ಪಿ. ಲಂಕೇಶ್ |
| 24. ಅಕ್ಕ | 80.00 | ಕಾದಂಬರಿ | ಪಿ. ಲಂಕೇಶ್ |
| 25. ಮಂಜು ಕವಿದ ಸಂಜೆ | 85.00 | ಕಥಾ ಸಂಕಲನ | ಪಿ. ಲಂಕೇಶ್ |
| 26. ಉಮಾಪತಿ ಸ್ಕಾಲರ್‌ಶಿಪ್ ಯಾತ್ರೆ | 70.00 | ಕಥಾ ಸಂಕಲನ | ಪಿ. ಲಂಕೇಶ್ |
| 27. ಕಲ್ಲು ಕರಗುವ ಸಮಯ | 125.00 | ಕಥಾ ಸಂಕಲನ | ಪಿ. ಲಂಕೇಶ್ |
| 28. ನಾನಲ್ಲ | 60.00 | ಕಥಾ ಸಂಕಲನ | ಪಿ. ಲಂಕೇಶ್ |
| 29. ಕೆರೆಯ ನೀರನು ಕೆರೆಗೆ ಚೆಲ್ಲಿ | 50.00 | ಕಥಾ ಸಂಕಲನ | ಪಿ. ಲಂಕೇಶ್ |
| 30. ಉಲ್ಲಂಘನೆ | 80.00 | ಕಥಾ ಸಂಕಲನ | ಪಿ. ಲಂಕೇಶ್ |
| 31. ಪಾಪದ ಹೂಗಳು | 60.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 32. ಬಿರುಕು | 40.00 | ನಾಟಕ | ಪಿ. ಲಂಕೇಶ್ |
| 33. ಸಂಕ್ರಾಂತಿ | 45.00 | ನಾಟಕ | ಪಿ. ಲಂಕೇಶ್ |
| 34. ತೆರೆಗಳು | 50.00 | ನಾಟಕ | ಪಿ. ಲಂಕೇಶ್ |
| 35. ಈಡಿಪಸ್ ಮತ್ತು ಅಂತಿಗೊನೆ | 60.00 | ನಾಟಕ | ಪಿ. ಲಂಕೇಶ್ |
| 36. ಟಿ. ಪ್ರಸನ್ನನ ಗೃಹಸ್ಥಾಶ್ರಮ | 50.00 | ನಾಟಕ | ಪಿ. ಲಂಕೇಶ್ |
| 37. ಗುಣಮುಖ | 30.00 | ನಾಟಕ | ಪಿ. ಲಂಕೇಶ್ |
| 38. ಕ್ರಾಂತಿ ಬಂತು ಕ್ರಾಂತಿ | 40.00 | ನಾಟಕ | ಪಿ. ಲಂಕೇಶ್ |
| 39. ಕಪ್ಪು ಮಲ್ಲಿಗೆ | 75.00 | ಅನುವಾದಿತ ಕತೆಗಳು | ಗೌರಿ ಲಂಕೇಶ್ |
| 40. ಕಂಡಹಾಗೆ – 1 | 125.00 | ಸಮಕಾಲೀನ ಬರಹಗಳು | ಗೌರಿ ಲಂಕೇಶ್ |
| 41. ಕಂಡಹಾಗೆ – 2 | 150.00 | ಸಮಕಾಲೀನ ಬರಹಗಳು | ಗೌರಿ ಲಂಕೇಶ್ |
| 42. ದರವೇಶಿ ಕತೆಗಳು | 90.00 | ಕತೆಗಳು | ಅನು: ಗೌರಿ ಲಂಕೇಶ್ |
| 43. ಬಸವರಾಜಮಾರ್ಗ | 40.00 | ಲೇಖನಗಳು | ಸಂ: ಗೌರಿ ಲಂಕೇಶ್ |
| 44. ಬೆನಜೀರ್ | 25.00 | ಜೀವನ ಚರಿತ್ರೆ | ಗೌರಿ ಲಂಕೇಶ್ |
| 45. ಆವರಣ ಎಂಬ ವಿ–ಕೃತಿ | 100.00 | ವಿಮರ್ಶೆಗಳು | ಸಂ: ಗೌರಿ ಲಂಕೇಶ್ |
| 46. ಜೈಲೆಂಬ ಲೋಕದಲ್ಲಿ | 75.00 | ಸರಳುಗಳ ಹಿಂದಿನ ಸತ್ಯಗಳು | ಕುಮಾರ್ ಸಮತಳ |
| 47. ವೇದಾಂತ ರೆಜಿಮೆಂಟ್ | 60.00 | ವೈಚಾರಿಕ ಲೇಖನಗಳು | ಬಿ.ವಿ.ವೀರಭದ್ರಪ್ಪ |
| 48. ಕಳೆದುಕೊಂಡವಳು | 45.00 | ಕತೆಗಳು | ಜಾಹ್ನವಿ |
| 49. ನೂರುಸ್ವರ | 60.00 | ಕತೆಗಳು | ಉಮಾ ರಾವ್ |
| 50. ಟ್ರೇನ್ ಟು ಪಾಕಿಸ್ತಾನ್ | 125.00 | ಕಾದಂಬರಿ | ಖುಷ್ವಂತ್ ಸಿಂಗ್. ಅನು : ಡಾ. ಎಂ.ಬಿ. ರಾಮಮೂರ್ತಿ |
| 51. ಮಿಡತೆಗಳ ಬರವಿಗೆ.... | 100.00 | ಅನು: ಸುಕನ್ಯಾ ಕಾನರಳ್ಳಿ | ಅರುಂಧತಿ ರಾಯ್ |
| 52. ಡಿಸೆಂಬರ್ 13 | 150.00 | ಅನು: ಸುಕನ್ಯಾ ಕಾನರಳ್ಳಿ | ಅರುಂಧತಿ ರಾಯ್ |
| 53. ಮನುಸ್ಮೃತಿ | 20.00 | ಸಂಘಪರಿವಾರದ ಸಂವಿಧಾನ | ಏಕಲವ್ಯ |
| 54. ಆರೋಗ್ಯ ಮತ್ತು ಜೀವನ | 125.00 | ವೈದ್ಯಕೀಯ ಸಾಹಿತ್ಯ | ಡಾ. ಎಂ.ಬಿ. ರಾಮಮೂರ್ತಿ |
| 55. ತೇಜಸ್ವಿ ನೆನಪು | 100.00 | ಬರಹಗಳ ಸಂಗ್ರಹ | ಸಂ.: ಬಿ. ಚಂದ್ರೇಗೌಡ |
| 56. ಜಬೀವುಲ್ಲಾ ಕೊಟ್ಟ ಕೋಳಿ | 100.00 | ಹಾಸ್ಯಲೇಖನಗಳು | ಬಿ. ಚಂದ್ರೇಗೌಡ |
| 57. ಮುತ್ತುರಾಜನ ಮುತ್ತು | 175.00 | ಶಿವರಾಜ್‌ಕುಮಾರ್ ಆತ್ಮಕಥೆ | ಸದಾಶಿವ ಶೆಣೈ |
| 58. ವಿಷ್ಣು–ನೂರೊಂದು ನೆನಪು | 150.00 | ವಿಷ್ಣುವರ್ಧನ್ ಆತ್ಮಕಥೆ | ಸದಾಶಿವ ಶೆಣೈ |
| 59. ಓ ಈಳಂ | 250.00 | ಎಲ್‌ಟಿಟಿಇ ಕಥನ | ಕುಮಾರ್‌ಬುರಡಿಕಟ್ಟಿ |
| 60. ಖೈರ್ಲಾಂಜಿ | 200.00 | ದಲಿತ ಭಾರತದ ಕಥನ | ಆನಂದ್ ತೇಲ್‌ತುಂಬ್ಡೆ |
| 61. ಕಮಲಾ ದಾಸ್ ಕಥೆಗಳು | 60.00 | ಸಣ್ಣ ಕಥೆಗಳು | ಅನು: ಗಂಗಾಧರನ್ |
| 62. ಮಾಂಟೊ ಕಥೆಗಳು | 80.00 | ಸಣ್ಣ ಕಥೆಗಳು | ಅನು: ಜೆ.ಬಾಲಕೃಷ್ಣ |
| 63. ಕೋಮುವಾದ | 60.00 | ವೈಚಾರಿಕ ಬರಹಗಳು | ರಾಮ ಪುಲಿಯಾನಿ |
| 64. ಜಾತಿ ಪದ್ಧತಿ | 125.00 | | ರಾಮ್‌ಮನೋಹರ್ ಲೋಹಿಯಾ |
| 65. ರಾಮಾಯಣ ವಿಷವೃಕ್ಷ | 75.00 | ವೈಚಾರಿಕ ಬರಹಗಳು | ಡಾ.ಬಂಜಗೆರೆ ಜಯಪ್ರಕಾಶ್ |
| 66. ಅರೇಬಿಯನ್ ನೈಟ್ಸ್ | 150.00 | ಕಥೆಗಳು | ಪಂಜು ಗಂಗೊಳ್ಳಿ |
| 67. ಜಿಮ್‌ಕಾರ್ಬೆಟ್–ಶಿಕಾರಿ ಕತೆಗಳು | 80.00 | ಕಥೆಗಳು | ಟಿ. ಎಸ್ .ವಿವೇಕಾನಂದ |
| 68. ಚೆಕ್‌ಪೋಸ್ಟ್ | 100.00 | ಸಮಕಾಲೀನ ಬರಹಗಳು | ಪಾರ್ವತೀಶ್ |
| 69. Some–ಪದ | 80.00 | ಅನ್ಯಭಾಷಾ ಪದಗಳ ಪ್ರವಾಸ ಕಥನ | ಪಾರ್ವತೀಶ್ |
| 70. ಬಿಡಿಚಿತ್ರಗಳು | 60.00 | ಸಮಕಾಲೀನ ಬರಹಗಳು | ಪಾರ್ವತೀಶ್ |
| 71. ಗೋವು ಪವಿತ್ರ ಎಂಬ ಮಿಥ್ಯೆ | 80.00 | ವೈಚಾರಿಕ ಬರಹಗಳು | ಡಿ.ಎನ್.ಝಾ |
| 72. ಕರ್ಕರೆಯನ್ನು ಕೊಂದವರ್ಯಾರು? | 200.00 | | ಎಸ್. ಎಂ. ಮುಶ್ರಿಫ್ |
| 73. ಅಸ್ಪೃಶ್ಯ ವಸಂತ | 200.00 | ಕಾದಂಬರಿ | ಕಲ್ಯಾಣ್ ರಾವ್ |
| 74. ಬಾಲಗೋಪಾಲ್ ಬರಹಗಳು | 150.00 | ವೈಚಾರಿಕ ಬರಹಗಳು | ಬಾಲಗೋಪಾಲ್ |
| 75. ಬದುಕು–ಬಯಲು | 200.00 | ಹಿಜ್ರಾ ಒಬ್ಬಳ ಆತ್ಮಕತೆ | ಎ. ರೇವತಿ |
| 76. ಚಾರ್ವಾಕ | 250.00 | ಸಮಕಾಲೀನ ಬರಹಗಳು | ಶಿವಸುಂದರ್ |
| 77. ಜಂಗಲ್‌ನಾಮಾ | 175.00 | ಗೆರಿಲ್ಲಾ ವಲಯದೊಳಗೆ | ಸತ್ನಾಮ್ |
| 78. ತಾಜುಮಾ ಕವಿತೆಗಳು | 75.00 | ಕವನಗಳು | ತಾಜುಮಾ |
| 79. ಅಂತ್ಯಜರ ತತ್ವ ಚಿಂತನೆ | 100.00 | | ಬಂಜಗೆರೆ ಜಯಪ್ರಕಾಶ್ |
| 80. ಪ್ರೀತಿ ಮತ್ತು ಕ್ರಾಂತಿ | 125.00 | ಕವನಗಳು | ಫೈಜ್ ಮಹಮ್ಮದ್ ಫೈಜ್ |
| 81. ಲೋಕಾಯುಕ್ತ ತನಿಖಾ ವರದಿ | 100.00 | | ಸಂತೋಷ್ ಹೆಗ್ಡೆ |
| 82. ಕೇಸರಿ ಭಯೋತ್ಪಾದನೆ | 100.00 | | ಸುರೇಶ್ ಭಟ್ ಬಾಕ್ರಬೈಲ್ |
| 83. ಹೇಳುತ್ತೇನೆ ಕೇಳು | 175.00 | ಹೆಣ್ಣಿನ ಆತ್ಮಕತೆ | ಸುಕನ್ಯಾ ಕನಾರಳ್ಳಿ |
| 84. ನನ್ನ ಪ್ರೀತಿಯ ಭಾರತ | 125.00 | ಸಾಹಸ ಕಥೆಗಳು | ಜಿಮ್‌ಕಾರ್ಬೆಟ್ |
| 85. ಒಂದು ಶಹರದ ಸುತ್ತ | 85.00 | ನಾಟಕ | ಎಸ್. ಎಫ್. ಯೋಗಪ್ಪನವರ್ |
| 86. ಮಂಗನ ಬ್ಯಾಟೆ | 250.00 | ಮಲೆನಾಡಿನ ಪರಿಸರ ಕಥನ | ಕಲ್ಕುಳಿ ವಿಠಲ್ ಹೆಗ್ಡೆ |
| 87. ಭಾರತದಲ್ಲಿ ಮಾವೋ ಚಳುವಳಿ | 250.00 | ಮಲೆನಾಡಿನ ಪರಿಸರ ಕಥನ | ಕಲ್ಕುಳಿ ವಿಠಲ್ ಹೆಗ್ಡೆ |
| 88. ನನ್ನ ಪ್ರೀತಿಯ ಭಾರತ | 125.00 | | |
| 89. ಮಧ್ಯಯುಗೀನ ಭಾರತ ಅಂತರ್‌ರಾಜ್ಯ ತತ್ವಚಿಂತನೆ | 100.00 | | |
| 90. ಬಿಡಿಚಿತ್ರಗಳು | I 60.00 :: II 100.00 | | |
| 91. ಭಾರತದಲ್ಲಿ ಕ್ರಾಂತಿ ಮತ್ತು ಮಾವೋವಾದಿ ಚಳವಳಿ – ಶ್ರೀಧರ | 150.00 | | |
| 92. ಬೆಳಕಿನಡೆಗೆ | 125.00 | | |

**ಈ ಹಣ ಯಾಕೆ ? ಮತದಾರರಿಗೆ ಹಂಚಲು. ಹಂಚುವುದು ಯಾರು ? ಯಾರೋ ಒಬ್ಬ. ಅವನು ನಿಯತ್ತಿನಿಂದ ಹಂಚುತ್ತಾನೆಯೆ ? ಜೇನು ಬಿಚ್ಚುವವನು ಕೈ ನೆಕ್ಕಿಯೇ ನೆಕ್ಕುತ್ತಾನೆ. ಅಪ್ಪನವರಿಗೆ ದ್ರೋಹ ಬಗೆಯುವುದು ಖಾತರಿ. ಅವನು ದ್ರೋಹಿ. ನಾನು ಮಾಡಲು ಯೋಚಿಸಿದ್ದೇನು ? ಅದೇ ದ್ರೋಹ ! ಅವನು ಪ್ರಾಮಾಣಿಕನೇ ಇರಬಹುದು. ಯಾರಿಗೆ ಪ್ರಾಮಾಣಿಕ ? ಚುನಾವಣಾ ಆಯೋಗ ಹಣ ಹಂಚುವುದು ಅಪರಾಧ ಎನ್ನುತ್ತದೆ. ಅಂದಮೇಲೆ ಅವನು ಪಕ್ಷಕ್ಕೆ ಪ್ರಾಮಾಣಿಕ, ದೇಶಕ್ಕೆ ದ್ರೋಹಿ ಎಂದಾಯಿತು ! ತಾನೂ ಇದರಲ್ಲಿ ಭಾಗಿ ಅಲ್ಲವೆ ? ಇದರಲ್ಲಿ ಸ್ವಲ್ಪ ಹಣ ಹಂಚಿಕೆಗೆ ಒಳಗಾಗದಂತೆ ತಡೆದರೂ ಅಷ್ಟರಮಟ್ಟಿಗೆ ಮತದಾನ ಪಾವಿತ್ರ್ಯ ಉಳಿಸಿದಂತೆ !**



ಎಚ್. ಎಲ್. ಕೇಶವಮೂರ್ತಿ

# ಮತದಾನದ ಪಾವಿತ್ರ್ಯ ಉಳಿಸಿದರು!

ಮೈಸೂರಪ್ಪನವರು ಚಡಪಡಿಸುತ್ತಿದ್ದರು. ನಿಂತಲ್ಲಿ ನಿಲ್ಲಲಾರರು, ಕುಂತಲ್ಲಿ ಕೂರಲಾರರು. ಸಮಯ ಸಂದರ್ಭವೇ ಹಾಗಿತ್ತು. ಲೋಕಸಭೆ ಉಪಚುನಾವಣೆ ಹೊಸ್ತಿಲಿನ ಮೇಲೆ ನಿಂತಿತ್ತು. ಒಂದು ರೀತಿಯಲ್ಲಿ ಆ ಕ್ಷೇತ್ರ ಅಪ್ಪನವರ ಮೀಸಲು ಕ್ಷೇತ್ರ ಅನ್ನುವುದು ಮನೆಮಾತಾಗಿತ್ತು. ಮತದಾರರೂ ಹಾಗೇ ಇದ್ದರು. ಅವರ ಪಕ್ಷದ ವತಿಯಿಂದ ಒಂದು ನಾಯಿಯನ್ನು ನಿಲ್ಲಿಸಿದರೂ ನಿಯತ್ತಾಗಿ ಅದಕ್ಕೇ ಮತ ಹಾಕುತ್ತಾ ಬಂದಿದ್ದರು. ಅಪ್ಪನವರೋ ಅಥವಾ ಅವರ ಪರವಾಗಿ ಯಾರೋ ಮತ ಯಾಚನೆಗೆ ಹೋದರೆ ಸಾಕು, "ನೀವ್ಯಾಕ್ಸಾರ್ ಬರೋಕೋದ್ರಿ, ಕಾಲದಿಂದಲೂ ನಮ್ಮೋಟು ನಿಮ್ಗೆ ಅಲ್ವ?", "ನೀವಾಗ್ಲೆ ಗೆದ್ದಾಯ್ತು ಬುಡಿ ಸಾ" ಎಂಬಂತಹ ಆಶಾಭಾವನೆ ಮೂಡಿಸುತ್ತಿದ್ದರು. ಆದರೂ ಯಾಕೋ ಇತ್ತೀಚೆಗೆ ಬಾಯಿಯಲ್ಲಿ ಇಂತಹ ಮಾತುಗಳನ್ನು ಆಡುತ್ತಿದ್ದರೂ ಅವರ ದೃಷ್ಟಿಯಲ್ಲಿ ಮತ ಯಾಚಕನ ಜೇಬಿನ ಮೇಲೆ ಕೇಂದ್ರೀಕರಿಸುತ್ತಿದ್ದಂತೆ ಭಾಸವಾಗುತ್ತಿತ್ತು. ಹಣದ ಆಸೆಗೆ ಗ್ಯಾರಂಟಿ ಓಟೂ ಕೈಮೀರಿ ಹೋದೀತು ಎಂಬ ಭಯ ಅಪ್ಪನವರಿಗೆ. ಅವರೂ ಅಷ್ಟೋ ಇಷ್ಟೋ ಮತದಾರ ಮಹಾಪ್ರಭುವಿನ ಬಾಯಿಗೆ ಎಸೆಯುವುದು ಅನಿವಾರ್ಯವೇ ಆಗಿತ್ತು. ಎಲ್ಲ ಪಕ್ಷದವರೂ ಇದನ್ನೇ ಮಾಡುತ್ತಾ ಬಂದಿದ್ದರಿಂದ ಓಟು ಇರುವುದೇ ಮಾರಾಟಕ್ಕೆ ಎಂಬ ತೀರ್ಮಾನಕ್ಕೆ ಅವರೆಲ್ಲ ಬಂದಂತಿತ್ತು.

ಇದು ವಸ್ತುಸ್ಥಿತಿ. ಮತದಾರ ಮಹಾಪ್ರಭು 'ಕಾಸು ಕೊಡಿ, ಮತ ಪಡಿ' ಎನ್ನುತ್ತಾನೆ. ಹೀಗೆ ಆಮಿಷ ಒಡ್ಡಿ ಮತ ಪಡೆಯುವುದು ಅಪರಾಧ ಎನ್ನುತ್ತದೆ ಚುನಾವಣಾ ಆಯೋಗ. ನೀತಿ–ನಿಯಮ ಪಾಲಿಸಿಯೇ ಬಿಡೋಣ ಅಂದರೆ ಈಗಾಗಲೆ ಪ್ರತಿಪಕ್ಷದವರು ಹಣದ ಹೊಳೆ ಹರಿಸಿ ಅಪ್ಪನವರ ಭದ್ರಕೋಟೆಗೆ ಕನ್ನ ಹಾಕುತ್ತಿದ್ದಾರೆ ಎಂಬ ಸುದ್ದಿ ಎಲ್ಲೆಡೆ ಹಾರಾಡುತ್ತಿದೆ. ಅವರೂ ಹಂಚಲೇ ಬೇಕು. ಹೀಗೆ ಮಾಡಲು ಹಣದ ಬರ ಏನೂ ಅಪ್ಪನವರಿಗೆ ಇರಲಿಲ್ಲ. ಆದರೆ ಅದನ್ನು ಫಲಾನುಭವಿಗಳಿಗೆ ತಲುಪಿಸುವುದೇ ಸಮಸ್ಯೆಯಾಗಿತ್ತು. ಯಾವತ್ತೂ ಮಾಡಿದಂತೆ ಆಂಬ್ಯುಲೆನ್ಸು, ಪೊಲೀಸ್ ವಾಹನ ಇಂತಹವು ಗಳಲ್ಲಿ ಹಣ ಸಾಗಾಟ ಮಾಡೋಣ ಎಂದರೆ ಹಾಳಾದ ಆಯೋಗ ಅವನ್ನೂ ಬಿಡದೆ ತಪಾಸಣೆ ಮಾಡುತ್ತಾ ಕುಳಿತಿದೆಯಂತೆ. ಹಾಗಾದಲ್ಲಿ ಪಕ್ಷ ಸೋತರೂ ಚಿಂತೆ ಇಲ್ಲ, ಇಷ್ಟೊಂದು ಒದ್ದಾಡಿಕೊಂಡು ಹಣ ಹಂಚುವುದು ಬೇಡವೇ ಬೇಡ ಎಂದು ಇದ್ದುಬಿಡೋಣ ಅಂದರೆ ಅಪ್ಪನವರ ಘನತೆ ಗೌರವದ ಪ್ರಶ್ನೆ ಎದುರಾಗುತ್ತದೆ. ಅಪ್ಪನವರು ಅಳೆದರು, ಸುರಿದರು. ಹೇಗಾದರೂ ಮಾಡಿ ಹಣ ಹಂಚಲೇಬೇಕೆಂದು ನಿರ್ಧರಿಸಿದರು. ಹಣ ಸಾಗಿಸಲೆಂದೇ ವಿಶೇಷ ವಾಹನ ಸಿದ್ಧಪಡಿಸಿದರು. ಹಣ ತುಂಬಿಸಿದರು. ನಂಬಿಕಸ್ಥ ಡ್ರೈವರ್ ಕ್ಯಾತನಿಗೆ ಈ ಜವಾಬ್ದಾರಿ ವಹಿಸಿದರು.

ಕ್ಯಾತ ಒಂದು ಇಕ್ಕಟ್ಟಿಗೆ ಸಿಲುಕಿದ್ದ. ಮದುವೆಯಾಗಿ ಒಂದು ವರ್ಷವೂ ತುಂಬಿರಲಿಲ್ಲ. ಪ್ರೀತಿಯ ಮಡದಿಗೆ ಬೆನ್ನು ನೋವು ಕಾಣಿಸಿಕೊಂಡಿತು. ಸದಾ ನೋವು ನೋವು ಎಂದು ನರಳುತ್ತಿದ್ದಳು. ಡಾಕ್ಟರ್ ಬಳಿ ಕರೆದುಕೊಂಡು

ಹೋಗಿದ್ದ. ಅವರು ಯಾವ ಯಾವದೊ ಪರೀಕ್ಷೆಗಳನ್ನು ಮಾಡಿಸಿ ಇದು ಕ್ಯಾನ್ಸರ್ ಅಂದಿದ್ದರು. ಅದನ್ನು ಗುಣಪಡಿಸಲು ಎರಡು ಮೂರು ಲಕ್ಷ ರೂಪಾಯಿಗಳು ಬೇಕಾಗುತ್ವೆ ಎಂದಿದ್ದರು. ಕ್ಯಾನ್ಸರ್ ಹೆಸರು ಕೇಳಿಯೇ ಜರ್ಜರಿತರಾಗಿದ್ದ ದಂಪತಿಗಳು ಲಕ್ಷಗಳ ಮಾತು ಕೇಳಿ ಭೂಮಿಗೇ ಇಳಿದುಹೋದರು. ವೈದ್ಯರನ್ನು ಮರೆತರು. 'ಹಣೆಬರ ಇದ್ದಂಗಾಯ್ತದೆ' ಎಂದು ದೇವರ ಮೇಲೆ ಭಾರ ಹಾಕುವುದು ಬಿಟ್ಟು ಅನ್ಯಮಾರ್ಗವೇ ಅವರಿಗಿರಲಿಲ್ಲ.

ಕಾರಿನಲ್ಲಿ ಕುಳಿತಾಗ ಒಂದು ಸಣ್ಣ ಆಸೆ ಸುಳಿಯಿತು. ಇಲ್ಲಿ ಮೂರು ಕೋಟಿ ಇದೆ. ಅದರಲ್ಲಿ ಐದೋ ಹತ್ತೋ ಲಕ್ಷ ತೆಗೆದುಕೊಂಡರೆ ಯಾರಿಗೂ ನಷ್ಟವಿಲ್ಲ. ಹೆಂಡತಿಯ ಕಾಯಿಲೆ ಗುಣಪಡಿಸಬಹುದು. ಈ ಯೋಚನೆ ಬಂದದ್ದೇ ತಡ ಮನಸ್ಸು ಹಗುರಾಯಿತು. ಅದು ಒಂದು ಕ್ಷಣ ಮಾತ್ರ. ನೈತಿಕಪ್ರಜ್ಞೆ ಎಚ್ಚರಗೊಂಡಿತು. "ಇದು ನಂಬಿಕೆ ದ್ರೋಹ ಅಲ್ಲವೇ ? ಉಂಡ ಮನೆಗೆ ಎರಡು ಬಗೆಯುವುದು ಎಷ್ಟು ಸರಿ ? ಇಂತಹ ಮನಸ್ಸು ನನಗೆ ಹೇಗಾದರು ಬಂತು ?" ಎಂದೆಲ್ಲ ಪೇಚಾಡಿಕೊಂಡ. ಅವನ ಮನಸ್ಸು ತೊಳಲಾಟಕ್ಕೆ ಬಿದ್ದಿತು. ಈ ಹಣ ಯಾಕೆ ? ಮತದಾರರಿಗೆ ಹಂಚಲು. ಹಂಚುವುದು ಯಾರು ? ಯಾರೋ ಒಬ್ಬ. ಅವನು ನಿಯತ್ತಿನಿಂದ ಹಂಚುತ್ತಾನೆಯೆ ? ಜೇನು ಬಿಚ್ಚುವವನು ಕೈ ನೆಕ್ಕಿಯೇ ನೆಕ್ಕುತ್ತಾನೆ. ಅಪ್ಪನವರಿಗೆ ದ್ರೋಹ ಬಗೆಯುವುದು ಖಾತರಿ. ಅವನು ದ್ರೋಹಿ. ನಾನು ಮಾಡಲು ಯೋಚಿಸಿದ್ದೇನು ? ಅದೇ ದ್ರೋಹ! ಅವನು ಪ್ರಾಮಾಣಿಕನೇ ಇರಬಹುದು. ಯಾರಿಗೆ ಪ್ರಾಮಾಣಿಕ ? ಚುನಾವಣಾ ಆಯೋಗ ಹಣ ಹಂಚುವುದು ಅಪರಾಧ ಎನ್ನುತ್ತದೆ. ಅಂದಮೇಲೆ ಅವನು ಪಕ್ಷಕ್ಕೆ ಪ್ರಾಮಾಣಿಕ, ದೇಶಕ್ಕೆ ದ್ರೋಹಿ ಎಂದಾಯಿತು ! ತಾನೂ ಇದರಲ್ಲಿ ಭಾಗಿ ಅಲ್ಲವೆ ? ಇದರಲ್ಲಿ ಸ್ವಲ್ಪ ಹಣ ಹಂಚಿಕೆಗೆ ಒಳಗಾಗದಂತೆ ತಡೆದರೂ ಅಷ್ಟರಮಟ್ಟಿಗೆ ಮತದಾನ ಪಾವಿತ್ರ್ಯ ಉಳಿಸಿದಂತೆ ! ಹೀಗೆ ಮಾಡಲು ನಿರ್ಧರಿಸಿದ. ಧನ್ಯತಾ ಭಾವ ಮೂಡಿತು. ಬೆಂಗಳೂರು ಬಿಡುವ ಮುನ್ನ ಮನೆಯ ಬಳಿಗೆ ಹೋದ. ಸಾವಿರ ರೂಪಾಯಿ ನೋಟುಗಳ ಒಂದು ಕಟ್ಟು ಕಟ್ಟಿಕೊಂಡು ಮನೆಯ ಒಳಕ್ಕೆ ಹೋದ. ಯಾರಿಗೂ ತಿಳಿಯದಂತೆ ಅದನ್ನು ಭದ್ರಪಡಿಸಿದ.

ಮತ್ತೆ ಕಾರು ಹೊರಟಿತು. ಹಾಗೆಯೇ ಯೋಚಿಸಿದ. ಸಮಯದ ಅಭಾವ. ಹಣ ಎಣಿಸಲಿಲ್ಲ. ಅಲ್ಲಿ ಎಷ್ಟು ಇದ್ದಿರಬಹುದು ? ಹತ್ತು ಲಕ್ಷ? ಹದಿನೈದು ಲಕ್ಷ? ಇಪ್ಪತ್ತು ಲಕ್ಷ? ಎಷ್ಟಾದರೂ ಇರಲಿ. ಅಷ್ಟರಮಟ್ಟಿಗೆ ಓಟು ಕೊಳ್ಳುವಿಕೆ ತಡೆದೆನಲ್ಲ, ಪವಿತ್ರ ಮತದಾನ ಕ್ರಿಯೆಗೆ ಅಳಿಲುಸೇವೆ ಸಲ್ಲಿಸಿದೆನಲ್ಲ ಎಂದು ಏನೋ ಒಂದು ರೀತಿಯಲ್ಲಿ ಸಮಾಧಾನ ಪಟ್ಟುಕೊಂಡ. ಇನ್ನೂ ಕೆಲವು ನೋಟುಗಳನ್ನು ತೆಗೆದುಕೊಂಡು ಹೆಚ್ಚಿನ ಸೇವೆ ಮಾಡಬಹುದಿತ್ತಲ್ಲಾ...

ಕಾರು ಓಡುತ್ತಲೇ ಇತ್ತು. ಪೊಲೀಸರು ಎದುರಾದರು. ಕ್ಯಾತ ಕಾರು ನಿಲ್ಲಿಸ ಬೇಕೆಂದಿದ್ದ. ಅಷ್ಟರಲ್ಲೇ ಅವರೇ 'ಮೈಸೂರಪ್ಪನವರ ಕಾರು' ಎಂದು ಮುಂದೆ ಹೋಗಲು ಸೂಚಿಸಿದರು. ಈಗ ಕ್ಯಾತ ನಿಜಕ್ಕೂ ಯೋಚನೆಗೆ ಬಿದ್ದ. ಯಾವ ಅಡೆತಡೆಯೂ ಇಲ್ಲದೆ ಹಣ ತಲುಪಿಸಿದರೆ... ಅವರು ಎಣಿಸಿ ನೋಡಬಹುದು... ಇದ್ದದ್ದು ಇಷ್ಟೇ ಎಂದು ಅಪ್ಪನವರಿಗೆ ತಿಳಿಸಬಹುದು... ಪರಿಣಾಮ ಏನಾಗಬಹುದು ? ಹಣವನ್ನು ಒದ್ದು ವಸೂಲಿ ಮಾಡುತ್ತಾರೆ. ಕೆಲಸದಿಂದ ಕಿತ್ತು ಹಾಕುತ್ತಾರೆ. ಅಷ್ಟು ಮಾತ್ರ ಅಲ್ಲ ತನಗೆ ಬೇರೆ ಎಲ್ಲಿಯೂ ಕೆಲಸ ಸಿಗದಂತೆ ಮಾಡಿ ಜೀವನವನ್ನು ನರಕ ಮಾಡುತ್ತಾರೆ. ಕರಾಳ ಭವಿಷ್ಯ ನೆನೆದು ಕ್ಯಾತ ದಿಗಿಲುಗೊಂಡ. ಚುನಾವಣಾ ಆಯೋಗ ಹಿಡಿದುಕೊಂಡರೆ ಸಾಕು ಭಗವಂತ ! ಅಂದುಕೊಂಡ. ಆಯೋಗದವರು ಮುಂದೆ ಏನು ಮಾಡಬಹುದು ಎಂಬುದನ್ನು ಕುರಿತು ಚಿಂತಿಸಿದ. ಮಾಧ್ಯಮದವರನ್ನು ಕರೆಸಿ ಪ್ರಚಾರ ತೆಗೆದುಕೊಳ್ಳುವರಲ್ಲಾ... ಹಣದ ಮೊತ್ತ ಬಯಲಾಗುತ್ತಲ್ಲಾ... ಅಪ್ಪನವರು ಬಿಟ್ಟಾರೆಯೆ ನನ್ನನ್ನು ಎಂದು ಪದರುಗುಟ್ಟಿದ. ಹಿಂದಕ್ಕೆ ಹೋಗಿ ಮನೆಯಲ್ಲಿ ಬಚ್ಚಿಟ್ಟಿದ್ದ ಹಣವನ್ನು ಮೊದಲಿನಂತೆಯೇ ಇರಿಸುವುದೇ ಪರಿಹಾರ ಅಂದುಕೊಂಡ. ಆದರೆ ಆಗಲೇ ಬಹಳ ದೂರ ಬಂದು ಆಗಿತ್ತು. ಹಿಂತಿರುಗಿ ಹೋಗುವಾಗ ಆಯೋಗದ ಕಣ್ಣಿಗೆ ಬೀಳಬಹುದು. ಹಣ ತಲುಪಿಸಿದವರಿಗೆ ತಲುಪಿಸಿದರೆ... ಹಡಬಿ ಹಣ ಎಣಿಸದೇ ಇರುವ ಸಾಧ್ಯತೆಯೇ ಹೆಚ್ಚು. ಒಂದು ವೇಳೆ ಎಣಿಸಿಯೇ ಬಿಟ್ಟರೂ 'ಅವರು ಸುಳ್ಳು ಏಳ್ತಾ ಅವ್ರೆ ಅಪ್ಪಾವರೆ' ಎಂದು ನಾಟಕ ಆಡುವ ಸಾಧ್ಯತೆಯಾದರೂ ಇದೆ. ಇದೇ ಉತ್ತಮ ಎಂದು ಕಾರಿನ ವೇಗ ಹೆಚ್ಚಿಸಿದ.

ಜಿಲ್ಲೆಯ ಗಡಿಯಲ್ಲಿ ತಪಾಸಣಾ ಕೇಂದ್ರ ಇತ್ತು. ಕ್ಯಾತ ಹೆದ್ದಾರಿ ಬಿಟ್ಟು ಗಾಡಿ ಜಾಡು ಹಿಡಿದ. ಅಲ್ಲೇ ನಿಂತಿದ್ದರು ಯಮದೂತರು !

ಪೊಲೀಸ್ ಠಾಣೆಯಲ್ಲಿ ಕೂರಿಸಿದ್ದರು. ರಾತ್ರಿ ಕಳೆದು ಬೆಳಗಾಯಿತು. ಪತ್ರಿಕೆ ಬಂತು ನೋಡಿದ. 'ಕಾರಿನಲ್ಲಿ ಕೋಟಿ ಕೋಟಿ' ಎಂದು ದಪ್ಪ ಅಕ್ಷರಗಳಲ್ಲಿತ್ತು. ಇನ್ನು ನನ್ನ ಕತೆ ಮುಗಿಯಿತು ಎಂದು ಭಯಭೀತನಾದ. ನಡುಗುತ್ತಲೇ ಒಳಗಿನ ವಿಷಯ ಓದಿದ. ಓದುತ್ತಾ ಓದುತ್ತಾ ಸಂತೋಷದಿಂದ ಕುಣಿಯುವಂತೆ ಆಯಿತು !

ಅಂತಹದ್ದೇನು ಇತ್ತು ಅದರಲ್ಲಿ ?

"ಕಾರಿನಲ್ಲಿ ಇದ್ದದ್ದು ಒಂದು ಕೋಟಿ ಅಷ್ಟೆ ಅಂತೆ !"

ಅಷ್ಟು ಮಾತ್ರ ಅಲ್ಲ, ಕಾರಿನಲ್ಲಿದ್ದ ಹಣ ಯಾರದ್ದು ಎಂದು ಇನ್ನೂ ಖಚಿತವಾಗಿಲ್ಲವಂತೆ !

ಪೊಲೀಸಿನವರು ಕ್ಯಾತನನ್ನು ಮಾತ್ರ ಅಲ್ಲ ಮೈಸೂರಪ್ಪನವರ ಮಾನವನ್ನೂ ಕಾಪಾಡಿದ್ದರು !

ಜಾಮೀನು ಸಿಕ್ಕಿ ಕ್ಯಾತ ಬಂದ. ಕಾರಿಗೆ ನೋಟು ತುಂಬಿದವನಿಗೂ ಅವನಿಗೂ ತಳಕ ಇತ್ತು. ಅವನನ್ನು ಕೇಳಿದ : "ಅಲ್ಲಾ ಪೊಲೀಸ್ನೋರು ಕಾರಲ್ಲಿದ್ದದ್ದು ಒಂದೇ ಕೋಟಿ ಅಂದ್ರಲ್ಲಾ... ಇನ್ನೆರಡು ಕೋಟಿ ಏನಾಯ್ತು ? ಅವರೇ ಹೊಡ್ಕಂಡವ್ರ ?"

"ಎಷ್ಟು ? ಎರಡು ಕೋಟಿ ಅಂದ್ರಾ ? ಅಷ್ಟು ಸಿಕ್ಕಿರಕ್ಕಿಲ್ಲ ಬುಡು ಮಂತೆ"

'ಅದೇನು ಅಸ್ಟು ಕಂಡಿಸನ್ನಾಗಿ ಹೇಳ್ತೀಯಲ್ಲ ?'

'ನಾನು ಹತ್ತು ಲಕ್ಸಾವ ಅಬೇಸ್ ಮಾಡಿದ್ದೆ' ಅಂದ ಅವ !

ಅಂತೂ ಇಂತೂ ಎಲ್ಲರೂ ಸೇರಿ ಮತದಾನದ ಪಾವಿತ್ರ್ಯ ಉಳಿಸಿದ್ದರು !

**ಎಚ್. ಎಲ್. ಕೇಶವಮೂರ್ತಿ**
ನಂ. ೧೩, ಹೌಸಿಂಗ್ ಬೋರ್ಡ್ ಅಪಾರ್ಟ್‌ಮೆಂಟ್ಸ್, ಅಗ್ನಿಶಾಮಕ ಠಾಣೆ ಎದುರು
ಗುತ್ತಲು ಅಂಚೆ, ಮಂಡ್ಯ – ೫೭೧ ೪೦೩

# ಮೂಢನಂಬಿಕೆಗಳ ಸಾಮ್ರಾಜ್ಯದಲ್ಲಿ



ಬದಲಾವಣೆಯನ್ನು ಯಾರೂ ತಡೆಗಟ್ಟಲು ಸಾಧ್ಯವಿಲ್ಲ. ಅದನ್ನು ತಡೆಗಟ್ಟುತ್ತೇವೆಂದು ಹೊರಡುವವರು ಮೂಲಭೂತವಾದಿಗಳು. ಇವರು ಎಲ್ಲ ಧರ್ಮದೊಳಗೂ ಎಲ್ಲ ದೇಶಗಳೊಳಗೂ ಇದ್ದಾರೆ. ಸಾಕ್ರೆಟೀಸನಿಗೆ ವಿಷ ಕೊಟ್ಟವರು ಇವರೆ, ಆರ್ಕಿಮಿಡೀಸನನ್ನು ಶಿಕ್ಷಿಸಿದವರು ಇವರೆ. ಪ್ರತಿಯೊಂದನ್ನೂ ಧರ್ಮದ ಚಾಳೀಸಿನಿಂದ ನೋಡುವವರಿಗೆ ಬದಲಾವಣೆ ಹಿಡಿಸದು.

ಒಂದು ಕಾಲದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಶಿಕ್ಷಣ ಪಡೆದು ಬಹುಸಂಖ್ಯಾತರಾದ ಶೂದ್ರರನ್ನು ಶಿಕ್ಷಣ ಪಡೆಯದಂತೆ ತಡೆಗಟ್ಟಲಾಯ್ತು. ವೇದಗಳು ಅಂದಿನ ಲಭ್ಯ ಜ್ಞಾನವನ್ನು ತುಂಬಿಕೊಂಡಿದ್ದವು. ಅವುಗಳನ್ನು ಶೂದ್ರರು ಓದಿದರೆ ಕಿವಿಯಲ್ಲಿ ಕಾದ ಸೀಸ ಹಾಕಬೇಕೆಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ. ಅದನ್ನು ಕುವೆಂಪು ಪ್ರಶ್ನಿಸುತ್ತಾರೆ:

*ಋಷಿಗಳೂ ಕೂಡ ನಮ್ಮಂತೆ ಮಾನವರು*
*ಅವರ ಶಾಸ್ತ್ರಗಳು ಅವರ ಕಾಲಕ್ಕೆ ಮಾತ್ರ!*

ಬ್ರಿಟಿಷರು ಭಾರತಕ್ಕೆ ಬರದೇ ಹೋಗಿದ್ದರೆ ತಾವು ಹಾರುವಯ್ಯನ ಮನೆಯಲ್ಲಿ ಸೆಗಣಿ ಬಳಿಯಬೇಕಾಗುತ್ತಿತ್ತೆಂದು ಕುವೆಂಪು ಹೇಳುತ್ತಾರೆ. ಬ್ರಿಟಿಷರು ಬಂದದ್ದರಿಂದ ಸಾರ್ವತ್ರಿಕ ಶಿಕ್ಷಣ ಪ್ರಾರಂಭವಾಯ್ತು. ಮೊದಲು ಅಯ್ಯನವರ ಖಾಸಗಿ ಶಾಲೆಗಳಿದ್ದವು. ಶಾಲೆಗೆ ಹೋಗುವ ಮಕ್ಕಳ ತಂದೆ-ತಾಯಿಗಳು ಶಿಕ್ಷಕರಿಗೆ ಸಂಭಾವನೆ ನೀಡುತ್ತಿದ್ದರು. ಅನುಕೂಲವಂತರು ಮಾತ್ರ ಶಿಕ್ಷಣ ಪಡೆಯಬಹುದಾಗಿತ್ತು. ಶಿಕ್ಷಕರು ಪುರಾಣ, ಪುಣ್ಯಕಥೆಗಳನ್ನೇ ಹೇಳುತ್ತಿದ್ದರು. ಲೆಖ್ಖದ ಬೋಧನೆ ಸರಿಯಾಗಿತ್ತು. ಭಾಷಾಬೋಧನೆ ಚೆನ್ನಾಗಿತ್ತು. ವಿಜ್ಞಾನವನ್ನು ಕಲಿಸುತ್ತಿರಲಿಲ್ಲ. ವೈಜ್ಞಾನಿಕ ಮನೋಧರ್ಮವಂತೂ ದೂರದ ಮಾತು.

ಕರ್ನಾಟಕದ ಪ್ರಾಚೀನ ಕವಿಗಳು ಮತ್ತು ನವಯುಗದ ಕವಿಗಳು, ಬರಹಗಾರರು ಜನ ಬದುಕಲೆಂದು ಬರೆದವರು. ಹಲವು ಕವಿಗಳು ರಾಜಾಶ್ರಯ

**ಅಲ್ಲಮಪ್ರಭು ಬೆಟ್ಟದೂರು**

**ಕರ್ನಾಟಕದಲ್ಲಿರುವಷ್ಟು ಮಠಪೀಠಗಳು ಬೇರೆಲ್ಲಿಯೂ ಇದ್ದಂತಿಲ್ಲ. ದಲಿತರ ಕೇರಿಗೆ ಹೋಗಿಬರುವದನ್ನೇ ಕ್ರಾಂತಿ ಎಂದು ಭಾವಿಸಿದ ಪೇಜಾವರ ಸ್ವಾಮಿಗಳು ಸಹಭೋಜನವನ್ನು ವಿರೋಧಿಸುತ್ತಾರೆ. ಬ್ರಾಹ್ಮಣರು ಉಂಡ ಪತ್ರೋಳಿ, ಬಾಳೆ ಎಲೆಗಳ ಮೇಲೆ ಉರುಳಿದರೆ ಚರ್ಮರೋಗಗಳು ವಾಸಿಯಾಗುತ್ತದೆಂಬ ಮೂಢನಂಬಿಕೆಯನ್ನು ಉದ್ದೇಶಪೂರ್ವಕವಾಗಿ ಪೋಷಿಸಿಕೊಂಡು ಬರಲಾಗಿದೆ. ಅದನ್ನು ತಡೆಗಟ್ಟಲು ಹೋದ ವಿಚಾರವಾದಿಗಳ ಮೇಲೆ ಹಲ್ಲೆ ಮಾಡಲಾಗಿದೆ. ಲಿಂಗಣ್ಣ ಸತ್ಯಂಪೇಟೆಯವರು ಮಾತೆ ಮಹಾದೇವಿಯವರ ನಿಲುವುಗಳನ್ನು ಎಂಬತ್ತರ ದಶಕದಲ್ಲಿ ವಿರೋಧಿಸಿ 'ಪ್ರಪಂಚ' ವಾರಪತ್ರಿಕೆಯಲ್ಲಿ ಸರಣಿ ಲೇಖನಗಳನ್ನು ಬರೆದು ಜನಜಾಗೃತಿ ಮೂಡಿಸಿದರು. ಕೊಪ್ಪಳ ಜಿಲ್ಲೆಯ ಬಹದ್ದೂರ ಬಂಡೆಯ ಸ್ವಾಮಿಯ ಪ್ರೇಮಪತ್ರಗಳನ್ನು ತಮ್ಮ 'ಅಗ್ನಿ ಅಂಕುರ' ಪತ್ರಿಕೆಯಲ್ಲಿ ಪ್ರಕಟಿಸಿದ್ದರಿಂದ ಜನಜಾಗೃತಿಯಾಗಿ ಸ್ವಾಮಿ ಬಹದ್ದೂರ ಬಂಡೆ ಬಿಟ್ಟು ಹೋದ. ವಿಶ್ವಾರಾಧ್ಯ ಸತ್ಯಂಪೇಟೆಯವರು ಕಲ್ಬುರ್ಗಿ ಜಿಲ್ಲೆಯ 'ಕವಲಗಿ' ಕಚ್ಚೆಹರಕ ಸ್ವಾಮಿಯೊಬ್ಬನ ಬಗ್ಗೆ ಜನರಲ್ಲಿ ಜಾಗೃತಿಯುಂಟು ಮಾಡಿದರೂ ಮೂಢನಂಬಿಕೆಯೇ ಬಲವಾಗಿದ್ದ ಆ ಪ್ರದೇಶದಲ್ಲಿ ಗಂಡಂದಿರ ಎದುರೇ ಅವರ ಹೆಂಡಿರನ್ನು ಎಳೆದಾಡಿ ದೆವ್ವ ಬಿಡಿಸುವದಾಗಿ ಹೇಳಿ ಅವರೊಡನೆ ಕವಲಗಿ ಸ್ವಾಮಿ ಸಂಭೋಗ ಮಾಡುತ್ತಿದ್ದ.**






# ಹೊಸ ವರ್ಷ 2014
## ಹಾಗೂ
## ಮಕರ ಸಂಕ್ರಾಂತಿಯ ಶುಭಾಶಯಗಳು

ಬಲ್ಲವರು ನುಡಿದುದು
ಬದಲಾವಣೆಯೇ ಜಗದ ನಿಯಮ
ಮೋಡದಿ ಕಾಲೂರಿ ನಡೆಯುವುದೂ
ಇನ್ನೊಂದು ಆಯಾಮ



ಈ ಹೊಸ ವರುಷದಲಿ
ಮಹೋನ್ನತ ಬದಲಾವಣೆಯು
ನಿಮ್ಮದಾಗಲಿ, ಶುಭವಾಗಲಿ.






## ಮಲ್ಟಿ ಕಲರ್ ಪ್ರಿಂಟಿಂಗ್
## ಅಗತ್ಯತೆಗಳಿಗೆ ಸಂಪರ್ಕಿಸಿ



# ಪ್ರಿಂಟ್‌ಲೈನ್ ಸಿಸ್ಟಮ್ಸ್
# Printline Systems

SINCE 1996

**CTP & PRINT HOUSE**

**CTP BUREAU:** #210, 28th Cross, 2nd Block, Rajajinagar, Bangalore - 10

**PRINT HOUSE :** # 30, 6th 'B' Main Road, Prakashnagar, Bangalore - 21

**PHONE :** 81509 36999 / 94480 46970 / 23428372 / 41285509 / 2313 3063

**E-mail: printlinesystems@gmail.com**

ಪಡೆದರೂ ಜನಪರ ನಿಲುವನ್ನು ಹೊಂದಿದ್ದರು. ಕನ್ನಡದ ಪ್ರಥಮ ಮಹಾಕವಿ ಪಂಪ.

*ಕುಲಂ ಕುಲಮಲ್ತು*
*ಛಲಂ ಕುಲಂ*
*ಗುಣಂ ಕುಲಂ*
*ಅಣ್ಮು ಕುಲಂ*
*ಅಭಿಮಾನಮೊಂದೆ ಕುಲಂ*

ಹುಟ್ಟಿನೊಂದಿಗೆ ಬರುವ ಕುಲವು ಕುಲವಲ್ಲ, ಛಲವು ಕುಲ, ಒಳ್ಳೆಯ ಗುಣವು ಕುಲ, ಪರಾಕ್ರಮವು ಕುಲ, ಎಲ್ಲಕ್ಕಿಂತ ಮಿಗಿಲಾಗಿ ಸ್ವಾಭಿಮಾನವೊಂದೇ ಕುಲ ಎಂದು ಪಂಪ ಹೇಳಿ 'ಕುಲ' ಶಬ್ದಕ್ಕಿರುವ ಅರ್ಥವನ್ನು ವಿಸ್ತರಿಸಿದ್ದಾನೆ. ಹರಿಹರ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶ, ಶರಣರು, ದಾಸರು ಶುದ್ಧ ಭಕ್ತಿಯನ್ನು ಪ್ರತಿಪಾದಿಸಿದ್ದಾರೆ. ಮೂಢನಂಬಿಕೆಗಳನ್ನು ನಿರಾಕರಿಸಿ ಪರಂಪರೆಯನ್ನು ಎತ್ತಿಹಿಡಿದಿದ್ದಾರೆ.

ಯಾರನ್ನೂ ನೋಯಿಸದೆ ಬರೆಯುವದು ಕಷ್ಟ ಎಂದು ಡಾ॥ ಯು. ಆರ್. ಅನಂತಮೂರ್ತಿಯವರು ಹೇಳಿದ್ದಾರೆ. ಬಸವಣ್ಣ ಬ್ರಾಹ್ಮಣ್ಯವನ್ನು ವಿರೋಧಿಸಿದ. ತಾವೂ ಕೂಡ ಕೆಲವು ಕೃತಿಗಳಲ್ಲಿ ಸಂಪ್ರದಾಯದ ಧೋರಣೆ ಖಂಡಿಸಿರುವುದರಿಂದ ತಮ್ಮನ್ನು 'ಡುಂಢಿ' ಕೃತಿ ಬರೆದ ಯೋಗೇಶ ಮಾಸ್ಟರನಂತೆ ಬಂಧಿಸಬೇಕಾಗಿತ್ತೆಂದು ಇತ್ತೀಚೆಗೆ ಹೇಳಿದ್ದಾರೆ. ಪ್ರೊ॥ ಚಂದ್ರಶೇಖರ ಪಾಟೀಲ ಮತ್ತು ಪ್ರೊ॥ ಬರಗೂರು ರಾಮಚಂದ್ರಪ್ಪ 'ಡುಂಢಿ' ಕೃತಿಕಾರನ ಬಂಧನವನ್ನು ಖಂಡಿಸಿದ್ದಾರೆ. ಲೇಖಕ ಬರೆದದ್ದೆಲ್ಲವನ್ನೂ ಒಪ್ಪಬೇಕಾಗಿಲ್ಲ. ಅವನ ವಿಚಾರ ಧಾರೆಯನ್ನು ಪ್ರಶ್ನಿಸಬಹುದು. ಇದು ಚರ್ಚೆಯ ಮಟ್ಟದಲ್ಲಿ ಇರಬೇಕಲ್ಲದೆ ಲಿಂಗಣ್ಣ ಸತ್ಯಂಪೇಟೆ, ದಾಭೋಲ್ಕರ್, ಸುಶ್ಮಿತಾ ಸೇನರಿಗೊದಗಿದ ಸ್ಥಿತಿ ಲೇಖಕರಲ್ಲಿ, ವಿಚಾರವಾದಿಗಳಲ್ಲಿ ಆತಂಕ ಉಂಟು ಮಾಡಬಹುದು. ಇದರಿಂದ ಸಮಾಜ ಹಿನ್ನಡೆಯನ್ನು ಪಡೆಯುತ್ತದೆ. ಫ್ರಾನ್ಸಿನ ಕೆಲವು ಲೇಖಕರು ಕ್ರಾಂತಿಗೆ ಕಿಡಿ ಹೊತ್ತಿಸಿದರು. ಸಮಾಜವು ಆಮೂಲಾಗ್ರವಾಗಿ ಬದಲಾಗುವದೇ ಕ್ರಾಂತಿ. ರಾಜಪ್ರಭುತ್ವ ವಿರೋಧಿಸಿ ಪ್ರಜಾಪ್ರಭುತ್ವ ಬಯಸುವದು ಒಂದು ಹಂತದ ಕ್ರಾಂತಿ. ಪ್ರಜಾಪ್ರಭುತ್ವದ ಹುಳುಕು ಬಯಲಿಗಿಡದಿದ್ದರೆ ಅದೂ ಕುಸಿಯುತ್ತದೆ. ಭಾರತದ ಸರಕಾರಗಳು ಹಗರಣಗಳಲ್ಲಿ ಸಿಲುಕಿವೆ. ಅದನ್ನು ಬಯಲಿಗೆ ತಂದು ಶಿಕ್ಷಿಸುವುದು ಯೋಗ್ಯ.



ಜನರನ್ನು ಚಿಂತನೆಗೆ ತೊಡಗಿಸಬೇಕು. ಟಿ.ವಿ. ಮಾಧ್ಯಮ, ಸಿನಿಮಾ ಮಾಧ್ಯಮ ಮತ್ತೆ ಜನರನ್ನು ಮೌಢ್ಯದ ಕಡೆ ಕರೆದೊಯ್ಯುತ್ತಿವೆ. ಕಂಪನಿ ನಾಟಕಗಳಂತೂ ಅಶ್ಲೀಲತೆಯ ಸಂಭಾಷಣೆ ಹೆಣೆದು ಜನರನ್ನು ರಂಜಿಸುತ್ತಿವೆ. ಇಂಥ ಸನ್ನಿವೇಶದಲ್ಲಿ ಜನರನ್ನು ಜಾಗೃತಿಗೊಳಿಸುವದು ಕಷ್ಟ.

ಕರ್ನಾಟಕದಲ್ಲಿರುವಷ್ಟು ಮಠಪೀಠಗಳು ಬೇರೆಲ್ಲಿಯೂ ಇದ್ದಂತಿಲ್ಲ. ದಲಿತರ ಕೇರಿಗೆ ಹೋಗಿ ಬರುವದನ್ನೇ ಕ್ರಾಂತಿ ಎಂದು ಭಾವಿಸಿದ ಪೇಜಾವರ ಸ್ವಾಮಿಗಳು ಸಹಭೋಜನವನ್ನು ವಿರೋಧಿಸುತ್ತಾರೆ. ಬ್ರಾಹ್ಮಣರು ಉಂಡ ಪತ್ರೋಳಿ, ಬಾಳೆಎಲೆಗಳ ಮೇಲೆ ಉರುಳಿದರೆ ಚರ್ಮರೋಗಗಳು ವಾಸಿ ಆಗುತ್ತವೆ ಎಂಬ ಮೂಢನಂಬಿಕೆಯನ್ನು ಉದ್ದೇಶಪೂರ್ವಕವಾಗಿ ಪೋಷಿಸಿಕೊಂಡು ಬರಲಾಗಿದೆ. ಅದನ್ನು ತಡೆಗಟ್ಟಲು ಹೋದ ವಿಚಾರವಾದಿಗಳ ಮೇಲೆ ಹಲ್ಲೆ ಮಾಡಲಾಗಿದೆ. ಲಿಂಗಣ್ಣ ಸತ್ಯಂಪೇಟೆಯವರು ಮಾತೆ ಮಹಾದೇವಿಯವರ ನಿಲುವುಗಳನ್ನು ಎಂಬತ್ತರ ದಶಕದಲ್ಲಿ ವಿರೋಧಿಸಿ 'ಪ್ರಪಂಚ' ವಾರಪತ್ರಿಕೆಯಲ್ಲಿ ಸರಣಿ ಲೇಖನಗಳನ್ನು ಬರೆದು ಜನಜಾಗೃತಿ ಮೂಡಿಸಿದರು. ಕೊಪ್ಪಳ ಜಿಲ್ಲೆಯ ಬಹದ್ದೂರ ಬಂಡೆಯ ಸ್ವಾಮಿಯ ಪ್ರೇಮಪತ್ರಗಳನ್ನು ತಮ್ಮ 'ಅಗ್ನಿ ಅಂಕುರ' ಪತ್ರಿಕೆಯಲ್ಲಿ ಪ್ರಕಟಿಸಿದ್ದರಿಂದ ಜನಜಾಗೃತಿಯಾಗಿ ಸ್ವಾಮಿ ಬಹದ್ದೂರ ಬಂಡೆ ಬಿಟ್ಟುಹೋದ. ವಿಶ್ವಾರಾಧ್ಯ ಸತ್ಯಂಪೇಟೆಯವರು ಕಲ್ಬುರ್ಗಿ ಜಿಲ್ಲೆಯ 'ಕವಲಗಿ' ಕಚ್ಚೆಹರಕ ಸ್ವಾಮಿಯೊಬ್ಬನ ಬಗ್ಗೆ ಜನರಲ್ಲಿ ಜಾಗೃತಿಯುಂಟುಮಾಡಿದರೂ ಮೂಢನಂಬಿಕೆಯೇ ಬಲವಾಗಿದ್ದ ಆ ಪ್ರದೇಶದಲ್ಲಿ ಗಂಡಂದಿರ ಎದುರೇ ಅವರ ಹೆಂಡಿರನ್ನು ಎಳೆದಾಡಿ ದೆವ್ವ ಬಿಡಿಸುವದಾಗಿ ಹೇಳಿ ಕವಲಗಿ ಸ್ವಾಮಿ ಅವರೊಡನೆ ಸಂಭೋಗ ಮಾಡುತ್ತಿದ್ದ. ಈ ದೇಶದ ಜನಸಾಮಾನ್ಯರಾದ ಅನೇಕರಿಗೆ ಶಿಕ್ಷಣವಿಲ್ಲ. ಹೀಗಾಗಿ ಮೂಢನಂಬಿಕೆಗಳಿವೆ. ಅವುಗಳನ್ನೇ ಬಂಡವಾಳ ಮಾಡಿಕೊಂಡು ಅನೇಕರು ಐಷಾರಾಮಿ ಜೀವನ ನಡೆಸುತ್ತಿದ್ದಾರೆ. ಲಿಂಗಣ್ಣ ಸತ್ಯಂಪೇಟೆ ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದರು. 'ಲಂಕೇಶ ಪತ್ರಿಕೆ'ಯ ವರದಿಗಾರರಾಗಿ ಅನೇಕ ರಾಜಕಾರಣಿಗಳ, ಸ್ವಾಮಿಗಳ, ಬಾರಾ ಭಾನಗಡಿಗಳನ್ನು ಬಯಲಿಗೆಳೆದರು.



೧೯೮೫ರಲ್ಲಿ ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಕುದುರೆಮೋತಿ ಎಂಬ ಗ್ರಾಮದ ವಿಶ್ವವೇ ಕಂಡರಿಯದ, ಕೇಳಿ ಅರಿಯದ ಅಮಾನವೀಯ ಘಟನೆಯೊಂದು ಜರುಗಿತು. ಹುಸೇನ ಬಿ. ಎಂಬ ಮಿಠಾಯಿ ಮಾರುವವನ ಮಡದಿಯ ಯೋನಿಯಲ್ಲಿ ಉಸುಕು ತುಂಬಿ ಕಟ್ಟಿಗೆಯಿಂದ ತಿವಿಯಲಾಗಿತ್ತು. ಪ್ರಾಥಮಿಕ ಶಾಲೆಯ ಶಿಕ್ಷಕನ ಮಡದಿ ಪಾರ್ವತಮ್ಮನನ್ನು ಜೂನ್ ೧೧, ೧೯೮೫ರಂದು ಬಾಜಾಭಜಂತ್ರಿಯೊಡನೆ ಬೆತ್ತಲೆ ಮೆರವಣಿಗೆ ಮಾಡಲಾಯ್ತು. ಕುದುರೆಮೋತಿಯ ಮೈಸೂರು ಮಠದ ಸ್ವಾಮಿ ಮಹಾಂತ ಸ್ವಾಮಿ ತನ್ನ ಭಕ್ತರಿಗೆ ಏನೇನು ಹೇಳಿದನೋ ? ಹುಸೇನ ಬಿ, ಪಾರ್ವತಮ್ಮ ತನ್ನ ಬಲೆಗೆ ಬೀಳದಿದ್ದರಿಂದ ಹೀಗೆ ಮಾಡಿದನೋ ? ಮತ್ತೇನು ಕಾರಣವೋ ? ಕಾರಣವು ಏನೇ ಇರಲಿ, ಮಹಿಳೆಯರ ಅಪಮಾನ ಸಹಿಸಲಾಗದು. ಶರಣ ಸಂಸ್ಕೃತಿಯಲ್ಲಿ,

*ಮೊಲೆ ಮೂಡಿ ಬಂದರೆ ಹೆಣ್ಣೆಂಬರು*
*ಗಡ್ಡ, ಮೀಸೆ ಬಂದರೆ ಗಂಡೆಂಬರು*
*ಒಳಗೆ ಸುಳಿವಾತ್ಮ ಹೆಣ್ಣೂ ಅಲ್ಲ*
*ಗಂಡೂ ಅಲ್ಲ ಕಾಣಾ ರಾಮನಾಥ*

– ಎಂಬ ಸಮಾನತೆ ಧೋರಣೆಯಿರುವಾಗ ಮಹಿಳೆಯರ ಅಪಮಾನ ಸಹಿಸಿಕೊಳ್ಳಲಾಗದು. ಶರಣರ ಈ ಧೋರಣೆ ಗೊತ್ತಿದ್ದರಿಂದಲೇ ಕುದುರೆಮೋತಿ ಸ್ವಾಮಿಯ ಅನಾಗರಿಕತೆಯನ್ನು ಪ್ರಶ್ನಿಸಲಾಯ್ತು. ಸ್ವಾಮಿಗಳ ಎದುರಿಗೆ ತಲೆ ತಗ್ಗಿಸಬೇಕಲ್ಲದೆ ತಲೆ ಎತ್ತಿ ಪ್ರಶ್ನಿಸಬಾರದು ಎಂಬುದು ಬಹು ದೊಡ್ಡ ಮೂಢನಂಬಿಕೆ. ಬಸವಣ್ಣನಿಗೆ ಶರಣರು ಶರಣೆಂದರೆ ಶರಣು ಶರಣಾರ್ಥಿಯೆಂದು ಪ್ರತಿಯಾಗಿ ಗೌರವಿಸಿ ನಮಿಸುವ ಸಮಾನತೆಯ ಪರಿಪಾಠವನ್ನು ನಮ್ಮ ಮಠಪೀಠಾಧಿಪತಿಗಳು ಎಂದು ಕಲಿಯುವರೋ ?

ಕುದುರೆಮೋತಿ ಸ್ವಾಮಿಯನ್ನು ಪ್ರಶ್ನಿಸುವ ಧೈರ್ಯವನ್ನು ನಾವು (ವಿಠ್ಠಪ್ಪ ಗೋರಂಟ್ಲಿ,

ಗವಿಸಿದ್ಧ ಎನ್. ಬಳ್ಳಾರಿ, ಎ.ಐ.ಎಸ್.ಎಫ್.ನ ಮಹಾಂತೇಶ ಕೊತಬಾಳ, ರುದ್ರಗೌಡ, ಲಿಂಗರಾಜ ನವಲಿ, ಸುರೇಶ ಸಸಿ, ರವಿ ಜೋಶಿ ಮುಂತಾದವರು) ಮೊಟ್ಟಮೊದಲಿಗೆ ತೋರಿದ್ದರಿಂದ ಮುಂದೆ ಅನಾಚಾರ ಮಾಡಿದ ಸ್ವಾಮಿಗಳನ್ನೆಲ್ಲ ಅಲ್ಲಲ್ಲಿಯ ಜನರೇ ವಿಚಾರಿಸಿಕೊಂಡರು. 'ಪಾವಿತ್ರ್ಯ' ಮುರಿಯುವ ಕೆಲಸ ನಾವು ಅಂದು ಮಾಡಿದ್ದರಿಂದ ಇಂದು ಮಠ ಪೀಠಗಳನ್ನು ಪ್ರಶ್ನಿಸುವುದು ಸರಳವಾಗಿದೆ. ನಿತ್ಯಾನಂದ ಸ್ವಾಮಿ, ಅಸಾರಾಮ ಬಾಪುವರೆಗೆ ಈ ಹೋರಾಟ ಅನೂಚಾನವಾಗಿ ನಡೆದುಕೊಂಡು ಬಂದಿದೆ. ಮುಂದೆಯೂ ನಡೆಯುತ್ತಲೇ ಇರಬೇಕು.

'ಬ್ರಹ್ಮಚರ್ಯವೇ ಜೀವನ, ವೀರ್ಯ ನಾಶವೇ ಮೃತ್ಯು' ಎಂಬ ಪರಿಕಲ್ಪನೆಯನ್ನು ಅಧ್ಯಾತ್ಮವಾದಿಗಳಲ್ಲಿ ಕೆಲವರು ಒಪ್ಪುತ್ತಾರೆ. "ಇಂದ್ರಿಯ ನಿಗ್ರಹವ ಮಾಡಿದರೆ ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು", "ರತಿಪತಿ ಸುಖವ ಬಿಟ್ಟರೆ ಸಿರಿಯಾಳ ಚೆಂಗಳೆಯರು ?" ಎಂಬ ಬಸವಣ್ಣ ದಾಂಪತ್ಯ ಜೀವನದಲ್ಲಿದ್ದೇ ಅಧ್ಯಾತ್ಮ ಸಾಧನೆಗೆ ಒತ್ತುಕೊಟ್ಟವರು. ಅಲ್ಲಮಪ್ರಭು, ಅಕ್ಕಮಹಾದೇವಿ, ಸಿದ್ಧರಾಮ, ಚೆನ್ನಬಸವಣ್ಣ ಮುಂತಾದವರು ಸಂಸಾರಿಗಳಲ್ಲ. ಅಕ್ಕಮಹಾದೇವಿಯ ಗಂಡ ಕೌಶಿಕರಾಜ. ಅಕ್ಕಮಹಾದೇವಿಯ ಬೇಡಿಕೆಗಳಿಗೆ ಸ್ಪಂದಿಸಿದ್ದರೆ, ಸಂಯಮಿಯಾಗಿದ್ದರೆ ಅಕ್ಕ ಸಂಸಾರಿಯಾಗಿಯೇ ಉಳಿಯುತ್ತಿದ್ದಳು. ಕೌಶಿಕನ ಅತಿ ಕಾಮುಕತನ ಅಕ್ಕನನ್ನು ವೈರಾಗ್ಯ ಮನೋಭಾವದ ಅತಿಗೆ ಕೊಂಡೊಯ್ದಿತು. ಸನ್ಯಾಸವು ಶ್ರೇಷ್ಠವಲ್ಲ, ಸಂಸಾರವು ಕನಿಷ್ಠ ಅಲ್ಲ ಎಂದು ಬಹುಹಿಂದೆ ವಾಚಕರ ವಾಣಿಗೆ ನಿತ್ಯಾನಂದ ನಂತಹ ಸ್ವಾಮಿಯನ್ನು ನೋಡಿ (ಪ್ರಜಾವಾಣಿಗೆ) ಪತ್ರ ಬರೆದಿದ್ದೆ. ಬ್ರಹ್ಮಚರ್ಯ ಈಗಿನ ಕಾಲ ದಲ್ಲಂತೂ ಸಾಧ್ಯವಿಲ್ಲ. ಇಹವನ್ನು ನಿರಾಕರಿಸದ ಶರಣ ಮಾರ್ಗದಲ್ಲಿ ಬ್ರಹ್ಮಚರ್ಯಕ್ಕೆ ಅವಾಸ್ತವಿಕ ಪ್ರಾಶಸ್ತ್ಯ ಹೇಗೆ ಬಂತು ? ಮಠಪೀಠಗಳ ಸ್ವಾಮಿಗಳು ಸಂಸಾರಿ ಗಳಾದರೆ ಮಠದ ಆಸ್ತಿ ದುರುಪಯೋಗ ಆಗಬಹುದು ಎಂಬ ಕಾರಣಕ್ಕಾಗಿ ಮಠ ಪೀಠಗಳ ಸ್ವಾಮಿಗಳಾಗುವವರಿಗೆ ವಿವಾಹ ಆಗದಿರುವುದು ಕಡ್ಡಾಯವಾಗಿದ್ದಿರಬೇಕು. ನಿಸರ್ಗದ ನಿಯಮವನ್ನು ಯಾರೂ ಮೀರಲು ಸಾಧ್ಯವಿಲ್ಲ. ಮೀರುತ್ತೇವೆ ಎಂಬವರು ಅಡ್ಡಮಾರ್ಗ ಹಿಡಿಯುತ್ತಾರೆ.

ಇತ್ತೀಚೆಗೆ ಟಿ.ವಿ. ಮಾಧ್ಯಮ ಜನರನ್ನು ವಾಸ್ತು, ಭವಿಷ್ಯ, ಮೂಢನಂಬಿಕೆಯ ಕಡೆ ಕರೆದೊಯ್ಯುತ್ತಿದೆ. ವಾಸ್ತು ಎಂಬುದು ಕಟ್ಟಡ ರಚನಾಶಾಸ್ತ್ರ. ಅದರಲ್ಲಿ ಮೂಢನಂಬಿಕೆಗಳನ್ನು, ವರ್ಣಾಶ್ರಮ ಧರ್ಮದ ಅಸಮಾನತೆಯನ್ನು ತೂರಿಸಲಾಗಿದೆ. ಸಾವಿರಾರು ವರ್ಷಗಳ ದೇವಾಲಯಗಳು ಇನ್ನೂ ಗಟ್ಟಿಯಾಗಿದ್ದರೆ ಅದಕ್ಕೆ ಕಾರಣ ಅವರು ಬುನಾದಿ ಹಾಕುವ ಕ್ರಮ ವಿಶೇಷವಾಗಿತ್ತು. ಮನೆ ಕಟ್ಟುವಾಗ ಚೌಕಾಕಾರದಲ್ಲಿ ಬುನಾದಿ ತೋಡುತ್ತೇವೆ. ಆದರೆ ನಮ್ಮ ಹಿರಿಯರು ಗುಡಿಕಟ್ಟುವ ಎಲ್ಲ ಜಾಗದ ಮಣ್ಣನ್ನು ಹೊರಹಾಕಿ ಅಲ್ಲಿ ನೆಲಗಟ್ಟನ್ನು ನಿರ್ಮಿಸಿ ಮೇಲೆ ಗುಡಿಗಳನ್ನು ಕಟ್ಟುತ್ತಿದ್ದರು. ಉದಾಹರಣೆಗೆ ಹೇಳಬೇಕೆಂದರೆ ಬೇಲೂರಿನ ಚೆನ್ನಕೇಶವ ದೇವಸ್ಥಾನ, ಹಳೆಬೀಡಿನ ಹೊಯ್ಸಳೇಶ್ವರ ದೇವಸ್ಥಾನ. ನಕ್ಷತ್ರಾಕಾರದ ನೆಲಗಟ್ಟಿನ ಮೇಲೆ ಅವು ನಿರ್ಮಾಣವಾಗಿರುವುದರಿಂದ ಇವತ್ತಿಗೂ ನಮಗೆ ನೋಡಲು ಸಿಗುತ್ತಿವೆ. ಯಾವ ದಿಕ್ಕಿನಿಂದ ಗಾಳಿ ಬೀಸುತ್ತದೆ ಎಂಬುದನ್ನು ನೋಡಿ ಜಾಲಂದ್ರಗಳನ್ನು ಮಾಡುತ್ತಿದ್ದರು. ವಾಸ್ತು ನಿಪುಣ ರೆಂದು ಹೇಳಿಕೊಳ್ಳುವವರು ಜನರಲ್ಲಿ ಭಯ ಬಿತ್ತಿ ಈಗಾಗಲೇ ಕಟ್ಟಿದ ಕಟ್ಟಡಗಳನ್ನು ಮಾರ್ಪಡಿಸಿ ಇಲ್ಲವೇ ಕೆಡವಿ ಜನರ ಶ್ರಮ, ಹಣ ಹಾಳುಮಾಡುತ್ತಿದ್ದಾರೆ.

*ಭವಿಷ್ಯ ಹೇಳುವದು ಹೊಟ್ಟೆಹೊರೆದುಕೊಳ್ಳಲಿಕ್ಕೆ*
*ಗಿಳಿಯೋದಿ ಫಲವೇನು*
*ಬೆಕ್ಕು ಬಹುದ ಹೇಳಲರಿಯದು*

ಎಂದು ಬಸವಣ್ಣನವರು ಭವಿಷ್ಯ ಹೇಳುವದನ್ನು ತಳ್ಳಿಹಾಕುತ್ತಾರೆ. ವಿದ್ಯುತ್ ಇಲ್ಲದಾಗ ದೆವ್ವದ ಕಥೆಗಳು ಚಲಾವಣೆಯಲ್ಲಿದ್ದವು. ಮುಂದುವರಿದ ದೇಶಗಳಲ್ಲಿ ದೆವ್ವದ ಕಥೆಗಳನ್ನು ಸಿನಿಮಾ ಮಾಡಿ ಜನರನ್ನು ಅಂಜಿಸುತ್ತಾರೆ. ದೆವ್ವ ಇಲ್ಲ ಎಂದು ಸಾರುವ ಒಂದೂ ಸಿನಿಮಾವನ್ನು ನಾನಂತೂ ನೋಡಿಲ್ಲ. ಒಂದು ಕಾಲಕ್ಕೆ ಮೋಹಿನಿ ಸಿನಿಮಾಗಳು ಜನಪ್ರಿಯವಾಗಿದ್ದವು. ಪುನರ್‌ಜನ್ಮ ಸಮರ್ಥಿಸಿ ಅನೇಕ ಸಿನಿಮಾಗಳು ಬಂದವು. ಆಗಾಗ ದೂರದ ಯಾವುದೋ ಊರಿನಲ್ಲಿ ಒಬ್ಬನಿಗೆ ಪುನರ್‌ಜನ್ಮದ ನೆನಪಾಗುತ್ತಿದೆ ಎಂದು ಪತ್ರಿಕೆಯವರು ಬರೆಯುತ್ತಾರೆ.

ನಮಗೆ ಅಷ್ಟು ದೂರ ಹೋಗಿ ಅಧ್ಯಯನ ಮಾಡುವದು, ವಿಶ್ಲೇಷಿಸುವದು ಸಾಧ್ಯವಾಗುವದಿಲ್ಲ. ಅದನ್ನೇ ಬಂಡವಾಳ ಮಾಡಿಕೊಂಡು ಜನರಿಗೆ ಮಂಕುಬೂದಿ ಎರಚುವದು ನಡೆದೇ ಇದೆ.

ದೇವದಾಸಿ ಪದ್ಧತಿ, ಬೆತ್ತಲೆ ಮೆರವಣಿಗೆ ಮೌಢ್ಯದ ಪರಮಾವಧಿ. ಸಿಡಿ ಆಡುವ ಪದ್ಧತಿ, ಶಸ್ತ್ರ ಹಾಕುವ ಪದ್ಧತಿಗಳು ಇನ್ನೂ ಇವೆ. ಗ್ರಹಗಳನ್ನೂ ಬ್ರಾಹ್ಮಣ ಗ್ರಹಗಳು, ಕ್ಷತ್ರಿಯ ಗ್ರಹಗಳು, ಶೂದ್ರ ಗ್ರಹಗಳೆಂದು ವಿಂಗಡಿಸುವವರೂ ಇದ್ದಾರೆ. ಅಘೋರಿಗಳೆಂಬ ಪಂಥದವರು ಶವದ ಮೇಲೆ ಕುಳಿತು ಧ್ಯಾನ ಮಾಡುತ್ತಾರೆ. ಶವಗಳನ್ನು ತಿನ್ನುತ್ತಾರೆ. ಯೋನಿ ಪೂಜೆ ಮಾಡುವವರೂ ಇದ್ದಾರೆ. ಶಿಶ್ನ ಪೂಜಕರೂ ಇದ್ದಾರೆ.

ಹಾವು ಹಾಲು ಕುಡಿಯುವದಿಲ್ಲ. ಇಲಿ ಮುಂತಾಗಿ ತಿನ್ನುತ್ತದೆ. ಪುಂಗಿಯ ನಾದಕ್ಕೆ ನಾಗರ ಹಾವು ತಲೆದೂಗುತ್ತದೆ ಎಂಬುದು ಮೂಢನಂಬಿಕೆ ಯೆಂದರೂ ಯಾರೂ ಕೇಳುತ್ತಿಲ್ಲ.

*ಕಲ್ಲ ನಾಗರ ಕಂಡರೆ*
*ಹಾಲನೆರೆಯೆಂಬರು*
*ದಿಟದ ನಾಗರ ಕಂಡರೆ*
*ಕೊಲ್ಲು ಕೊಲ್ಲೆಂಬರು*
*ಉಂಬ ಜಂಗಮ ಬಂದರೆ*
*ನಡೆ ನಡೆಯೆಂಬರು*
*ಉಣ್ಣದ ಲಿಂಗಕ್ಕೆ*
*ಬೋನ ಹಿಡಿಯುವರು*

– *(ಬಸವಣ್ಣ)*

ಜನಸಾಮಾನ್ಯರು ಚಲಾವಣೆಯಲ್ಲಿರುವ ಸಂಪ್ರದಾಯದ ಆಚರಣೆಯನ್ನು ಹಿಡಿದುಕೊಳ್ಳುತ್ತಾರೆ. ವಿಚಾರ ಮಾಡುವದು ಅವರಿಗೆ ಅಪರಿಚಿತವಾದದ್ದು. ಮುಗ್ಧತೆಯೋ, ಮೌಢ್ಯವೋ ತಿಳಿಯದು.

ಆಧುನಿಕ ಕಾಲದಲ್ಲಿ ಸತಿಪದ್ಧತಿ ಉತ್ತರ ಭಾರತದಲ್ಲಿ ನಡೆದುಹೋಯ್ತು. ರೂಪಾ ಕನ್ವರ್ ಎಂಬ ಹೆಣ್ಣುಮಗಳ ಗಂಡ ರೋಗಗ್ರಸ್ತನಾಗಿದ್ದ. ರೋಗ ವಾಸಿಯಾಗದೆ ತೀರಿಕೊಂಡ. ರೂಪಾ ಕನ್ವರ್‌ಗೆ ಮತ್ತೇರುವಂತೆ ಮಾಡಿ ಚಿತೆಗೆ ದೂಡಿದರು. 'ಸತಿಮಾತಾಕೀ ಜೈ' ಎಂದು ಘೋಷಣೆ ಕೂಗುತ್ತ ಬೆಂಕಿಯಿಂದ ಆಕೆ ಹೊರಬರಲು ಯತ್ನಿಸಿದರೂ ಆಕೆಯನ್ನು ಕಟ್ಟಿಗೆ, ಬೊಂಬುಗಳಿಂದ ತಿವಿದು ಬೆಂಕಿಗೆ ದೂಡಿ ಕೊಲ್ಲಲಾಯ್ತು. ಇದನ್ನು ಯಾರು ಉತ್ತೇಜಿಸಿದರು ? ಧಾರ್ಮಿಕ ಅಂಧಶ್ರದ್ಧೆಯುಳ್ಳವರು, ಮತ ಮೂಢರು ಎಂದು ಹೇಳಬೇಕಾಗುತ್ತದೆ. ರಾಜಾ ರಾಂಮೋಹನ ರಾಯ ಮತ್ತಿತರರ ಒತ್ತಾಯದಿಂದ ಬ್ರಿಟಿಷರು ಸತಿ ಪದ್ಧತಿಯನ್ನು ನಿಷೇಧಿಸಿದ್ದರು.

ಚಂದ್ರಗುತ್ತಿಯಲ್ಲಿ ಬೆತ್ತಲೆ ಮೆರವಣಿಗೆ ವಿರೋಧಿಸಿದ ವಿಚಾರವಂತರನ್ನು, ಫೋಟೋಗ್ರಾಫರ್ ಗಳನ್ನು, ಪೊಲೀಸರನ್ನು ಬೆತ್ತಲೆ ಮಾಡುವಷ್ಟು ಶಕ್ತಿಯಿದೆ ಮೂಢನಂಬಿಕೆಗಳಿಗೆ. ನಂತರ ಸರಕಾರ ಬೆತ್ತಲೆ ಮೆರವಣಿಗೆ ನಿಷೇಧಿಸಿತು. ಮಾರೆಮ್ಮ, ದುರಗಮ್ಮ, ಸುಂಕಲಮ್ಮ, ಎಲ್ಲಮ್ಮ ಮುಂತಾದ ಶಕ್ತಿ ದೇವತೆಗಳ ಮುಂದೆ ಕೋಣ ಕಡಿಯುವ ಪದ್ಧತಿ ಕರ್ನಾಟಕದಾದ್ಯಂತ ಇದೆ. ದೇವರಿಗೆ ಬಲಿ ನೀಡಿದರೆ ತೃಪ್ತಳಾಗುತ್ತಾಳೆ, ಗ್ರಾಮಕ್ಕೆ ತೊಂದರೆಯಾಗುವದಿಲ್ಲ ಎಂಬ ಮೂಢನಂಬಿಕೆ ಇದರ ಹಿಂದೆ ಇದೆ.

ಪವಾಡಗಳಿಂದ ಪಾವಡ (ವಸ್ತ್ರ)ವನ್ನು ಸೃಷ್ಟಿ ಮಾಡಲು ಸಾಧ್ಯವಿಲ್ಲ. ಹಿಂದೆ ಸಾಯಿಬಾಬಾ ಅವರಿಗೆ ಎಚ್. ನರಸಿಂಹಯ್ಯ ಶೂನ್ಯದಿಂದ ಕುಂಬಳಕಾಯಿ ಸೃಷ್ಟಿಸಲು ಸವಾಲು ಹಾಕಿದ್ದರು. ಬಡವರಿಗೆ ಬೂದಿ, ಗೋಕಾಕ, ಬೇಂದ್ರೆ, ಕಸ್ತೂರಿ ಅವರಿಗೆ ಬಂಗಾರಸಹಿತ ರುದ್ರಾಕ್ಷಿ ಸರ ನೀಡುತ್ತಿದ್ದರು ಸಾಯಿಬಾಬಾ. ಶ್ರೀಲಂಕಾದ ವಿಚಾರವಾದಿ ಅಬ್ರಹಾಂ ಕೋವೂರ ಬ್ಯಾಂಕಿನಲ್ಲಿ ಒಂದು ಲಕ್ಷ ರೂಪಾಯಿ ಡಿಪಾಸಿಟ್ ಇಟ್ಟು ಶೂನ್ಯದಿಂದ ಕುಂಬಳಕಾಯಿ ಸೃಷ್ಟಿಸಿಕೊಡುವವರಿಗೆ ಒಂದು ಲಕ್ಷ ರೂಪಾಯಿ ಬಹುಮಾನ ನೀಡುವದಾಗಿ ಘೋಷಿಸಿದರೂ ಭಾರತದ ಯಾವ ದೇವಮಾನವರೂ ಕೋವೂರರ ಸವಾಲನ್ನು ಸ್ವೀಕರಿಸಲಿಲ್ಲ.

ಲೋಕಾಯತರು ಕರ್ಮಸಿದ್ಧಾಂತವನ್ನು, ಪುನರ್‌ಜನ್ಮವನ್ನು, ಅಷ್ಟೇ ಏಕೆ ದೇವರ ಇರುವಿಕೆಯನ್ನೇ ಪ್ರಶ್ನಿಸಿದರು. ಬುದ್ಧ ಶಾಸ್ತ್ರ, ಯಜ್ಞ, ಮೇಲು – ಕೀಳು ವಿರೋಧಿಸಿ ಸಮಾನತೆ ಪ್ರೀತಿಸಿ ಸತ್ಯ, ಅಹಿಂಸೆ, ತಾಳ್ಮೆ ಬಗ್ಗೆ ಬೋಧಿಸಿ ಅತಿಯಾಸೆಯೇ ದುಃಖಕ್ಕೆ ಮೂಲ ಎಂದು ಸಾರಿದ. ಲೋಕಾಯತ ಅಥವಾ ಚಾರ್ವಾಕ ತತ್ವಜ್ಞಾನ ಭೌತಿಕ ತತ್ವಜ್ಞಾನ. ಪರಲೋಕದ ಪರಿಕಲ್ಪನೆ ನಿರಾಕರಿಸಿ ಈ ಲೋಕದಲ್ಲೇ ಚೆನ್ನಾಗಿ ಬಾಳಲು ಹೇಳುತ್ತದೆ.

ಎಲ್ಲೋ ಹುಡುಕಿದೆ
ಇಲ್ಲದ ದೇವರ
ಕಲ್ಲು ಮಣ್ಣುಗಳ
ಗುಡಿಯೊಳಗೆ
ಇಲ್ಲೇ ಇರುವ
ಪ್ರೀತಿ ಪ್ರೇಮಗಳ
ಅರಿಯದಾದೆವು ನಮ್ಮೊಳಗೆ

– ಎಂದು ರಾಷ್ಟ್ರಕವಿ ಜಿ. ಎಸ್. ಶಿವರುದ್ರಪ್ಪ ಅವರು ಪರಸ್ಪರ ಪ್ರೀತಿ, ವಿಶ್ವಾಸವೇ ಈ ಬಾಳಿನ ಬೆಳಕು ಎಂದು ಹೇಳಿ ದೇವರ ನಿರಾಕರಣೆ ಮಾಡಿದ್ದಾರೆ. ದೇವರು ಎಂಬ ಪರಿಕಲ್ಪನೆಯನ್ನು ಅನೇಕರು ಒಪ್ಪುತ್ತಾರೆ. ಬೌದ್ಧಿಕ ಶಿಖರ ಮುಟ್ಟಿದವರು ನಿರಾಕರಿಸುತ್ತಾರೆ. ದೇವರು ಎಂಬುದು ಮೂಢ ನಂಬಿಕೆಯೇ ? ಹೌದೋ ? ಅಲ್ಲವೋ ? ಇದು ಚರ್ಚೆಯ ವಸ್ತು. ದೇವರ ಬಗ್ಗೆ ಬುದ್ಧ ಮಾತಾಡಲಿಲ್ಲ ಮೌನ ವಹಿಸಿದ. ಅದು ಆತನ ಜಾಣತನ, ಇದೆಯೆಂದು ಹೇಳಲಿಲ್ಲ ಇಲ್ಲವೆಂದೂ ಹೇಳಲಿಲ್ಲ.

ವಸುದೇವ ಭೂಪಾಲಂ ಐವತ್ತರ ದಶಕದಲ್ಲೇ ಭಿನ್ನವಾಗಿ ಆಲೋಚಿಸುತ್ತಿದ್ದರು. ಅವರ 'ದೇವರು ಸತ್ತ' ಕೃತಿ ಸಾಂಪ್ರದಾಯಿಕರನ್ನು ನಡುಗಿಸುವಂತಿದೆ. 'ದೇವರು ಸತ್ತ ಅವನ ಚಟ್ಟ ಎತ್ತಿರಿ' ಎಂಬ ಮಾತುಗಳು ಅವರ ಕೃತಿಯಲ್ಲಿವೆ. ಎ. ಎನ್. ಮೂರ್ತಿರಾವ್, ಗೌರೀಶ ಕಾಯ್ಕಿಣಿ, ಶಿವರಾಮ ಕಾರಂತ, ಬಂಡಾಯದ ಬರಹಗಾರರು ವೈಚಾರಿಕ ನೆಲೆಯಲ್ಲಿ ದೇವರ ಪರಿಕಲ್ಪನೆ ಪ್ರಶ್ನಿಸಿ ಮಾನವೀಯತೆ ಮುಖ್ಯ ಎಂದು ಪ್ರತಿಪಾದಿಸುತ್ತಾರೆ. ಈ ದೇಶದ ಜನಸಾಮಾನ್ಯರು ಹಸಿವಿನಿಂದ ಕಂಗೆಟ್ಟವರು. ಅವರು ಹೊಟ್ಟೆ ತುಂಬಿಕೊಳ್ಳುವದೇ ಅವರ ಮುಂದಿರುವ ಸಮಸ್ಯೆ. "ಅನ್ನ ದೇವರ ಮುಂದೆ ಇನ್ನು ದೇವರು ಉಂಟೇ ?" ಎಂದು ಸರ್ವಜ್ಞ ಪ್ರಶ್ನಿಸುತ್ತಾನೆ. ಕುವೆಂಪು ಅವರು ತರುಣ ಜನಾಂಗಕ್ಕೆ ಹೀಗೆ ಕರೆಕೊಡುತ್ತಾರೆ :

*ಗುಡಿ, ಚರ್ಚು, ಮಸೀದಿಗಳ ಬಿಟ್ಟು ಹೊರಬನ್ನಿ*
*ಭಾರತದ ಬಡತನವ ಬುಡಮಟ್ಟ ಕೀಳಬನ್ನಿ*
ಮುಂದುವರಿದು ವಿಜ್ಞಾನ ದೀವಿಗೆಯ ಹಿಡಿಯಬನ್ನಿ ಎನ್ನುತ್ತಾರೆ.

ಓದಿ ಬ್ರಾಹ್ಮಣನಾಗು
ಕಾದಿ ಕ್ಷತ್ರಿಯನಾಗು
.........................
ಏನಾದರೂ ಆಗು
ನಿನ್ನೊಲವಿನಂತಾಗು
ಮೊದಲು ಮಾನವನಾಗು

## ದಿ|| ಯು. ಎಸ್. ವೆಂಕಟರಾಮನ್ ಸ್ಮರಣಾರ್ಥ : ಉತ್ತಮ ಲೇಖನಗಳಿಗೆ ಬಹುಮಾನಗಳು

ಖ್ಯಾತ ಕಾರ್ಮಿಕ ನಾಯಕರೂ, ಚಿತ್ರಕಲಾವಿದರೂ ಚಿಂತಕರೂ ಆಗಿದ್ದ ದಿವಂಗತ ಯು. ಎಸ್. ವೆಂಕಟರಾಮನ್ ಅವರ ಸ್ಮರಣಾರ್ಥ ಅವರ ಕುಟುಂಬದ ಸದಸ್ಯರು 'ಹೊಸತು' ಪತ್ರಿಕೆಯಲ್ಲಿ ಪ್ರಕಟವಾಗುವ ಉತ್ತಮ 'ಶ್ರಮಿಕ ವರ್ಗದ ಕುರಿತ ಲೇಖನಗಳು' ಹಾಗೂ ಉತ್ತಮ 'ಚಿತ್ರಕಲೆ ಹಾಗೂ ಚಿತ್ರಕಲೆ ಕುರಿತ ಲೇಖನ'ಗಳಿಗಾಗಿ ಒಟ್ಟು ೧೦,೦೦೦ ರೂಪಾಯಿಗಳ ಬಹುಮಾನ ವನ್ನು ಕೊಡಲು ಅಪೇಕ್ಷಿಸಿದ್ದಾರೆ. ಪ್ರತಿವರ್ಷ ಕೊಡುವ ಈ ಬಹುಮಾನವನ್ನು ವರ್ಷದ ಕೊನೆಯಲ್ಲಿ ಪ್ರಕಟಿಸಿ ಲೇಖಕರಿಗೆ, ಕಲಾವಿದರಿಗೆ ಕೊಡಲಾಗುವುದು. ದಿವಂಗತ ಯು. ಎಸ್. ವೆಂಕಟರಾಮನ್ ಅವರ ಕುಟುಂಬದ ಸದಸ್ಯರಿಗೆ 'ಹೊಸತು' ಧನ್ಯವಾದಗಳನ್ನು ಅರ್ಪಿಸುತ್ತದೆ.

– ಸಂ.





ಎಂದು ಕಾವ್ಯಾನಂದರು ಹೇಳುತ್ತಾರೆ. ಮಾನವ ನಾಗುವದು, ಮಾನವೀಯತೆ ಹಿಂದೆಂದಿಗಿಂತಲೂ ಇಂದು ಅಗತ್ಯವಾಗಿವೆ. ಉದಾತ್ತವಾದ ಆಲೋಚನೆ ಸಾಮಾಜಿಕವಾಗಿ, ಆಧ್ಯಾತ್ಮಿಕವಾಗಿ ಹೊರಹೊಮ್ಮಬೇಕು.

*ಪ್ರಕೃತಿಯೇ ಗುರು*
*ಗಗನ ಲಿಂಗವು*
*ಜಡವಿದೆಲ್ಲವು ಜಂಗಮ !*
*ತಿನುವ ರೊಟ್ಟಿಯೆ*
*ಶಿವನ ಪ್ರಸಾದವು*
*ಕುಡಿವ ನೀರೆ ತೀರ್ಥ*

ವಿಶ್ವಮಾನವನಾಗಿ ಹುಟ್ಟಿ ಅಲ್ಪ ಮಾನವನಾಗಬಾರದೆಂಬುದು ಮಹಾಕವಿ ಕುವೆಂಪು ಅವರ ಆಶಯ. ವರ್ಣಾಶ್ರಮ ಧರ್ಮವನ್ನು ನಾಶ ಮಾಡಬೇಕು. ಬಹು ಸಂಸ್ಕೃತಿ ಹರಡಬೇಕು. ಮತ ಮೌಢ್ಯ ನಿಲ್ಲಬೇಕು. ಇದು ಮಹಾಕವಿಯ ಆಶಯ.

ನಮ್ಮ ಸಂವಿಧಾನವು ವೈಜ್ಞಾನಿಕ ವಿಚಾರಧಾರೆಯನ್ನು ಎತ್ತಿ ಹಿಡಿಯ ಬೇಕೆಂದು ಬಯಸುತ್ತದೆ. ಲೇಖಕರು, ವಿಚಾರವಾದಿಗಳು, ಹೋರಾಟಗಾರರು ಸಂವಿಧಾನದ ವಿಚಾರವನ್ನು ಎತ್ತಿ ಹಿಡಿಯುವ ಕೆಲಸ ಮಾಡುತ್ತಿದ್ದರೂ ಅವರ ಮೇಲೆ ಹಲ್ಲೆ ನಡೆಸುವದು, ಕೊಲ್ಲುವದು, ಅವರ ಪುಸ್ತಕಗಳನ್ನು ಬ್ಯಾನ್ ಮಾಡುವದು ನಡೆದೇ ಇದೆ.

ಲಿಂಗಣ್ಣ ಸತ್ಯಂಪೇಟೆಯವರು ಕೊಲೆಯಾದಾಗ ೧೮ ಜನ ಲೇಖಕರು ಸೇರಿ ಕೊಲೆಯ ತನಿಖೆಯಾಗಬೇಕು, ತಪ್ಪಿತಸ್ಥರಿಗೆ ಶಿಕ್ಷೆಯಾಗಬೇಕೆಂದು ಪತ್ರಿಕೆ ಗಳಿಗೆ ಬರೆದ ಪತ್ರವನ್ನು ಪ್ರಕಟಿಸಬೇಕೆಂದು ಪ್ರತಿ ಪತ್ರಿಕೆಯ ಸಂಪಾದಕರಿಗೆ, ವರದಿಗಾರರಿಗೆ ಒತ್ತಾಯಿಸಿದಾಗ ಅದು ಪ್ರಕಟವಾಯ್ತು. ಲಿಂಗಣ್ಣ ಸತ್ಯಂಪೇಟೆ ಯವರ ಕೊಲೆ ತನಿಖೆಯನ್ನು ಸಿ.ಓ.ಡಿ. ಮಾಡುತ್ತಿದೆಯಂತೆ. ಅಂದಿನ ಮುಖ್ಯಮಂತ್ರಿ ಜಗದೀಶ ಶೆಟ್ಟರಿಗೆ, ಅಂದಿನ ವಿರೋಧಪಕ್ಷದ ನಾಯಕರಾಗಿದ್ದ ಸಿದ್ದರಾಮಯ್ಯನವರಿಗೆ ಒತ್ತಾಯಿಸಿ ಮನವಿ ಕಳಿಸಲಾಗಿತ್ತು. ಮೌಢ್ಯಕ್ಕೆ ರಕ್ಷಣೆಯಿದೆ, ವಿಚಾರಕ್ಕಲ್ಲ.

ಸ್ವಧರ್ಮದಲ್ಲಿ ನಿಧನವಾಗುವದು ಶ್ರೇಯಸ್ಕರ ಎಂದು ಶಾಸ್ತ್ರ ಹೇಳುತ್ತಿದೆ. ಉತ್ತರ ಭಾರತದಲ್ಲಿ ತಮ್ಮ ಜಾತಿ ಬಿಟ್ಟು ಅನ್ಯ ಜಾತಿಯಲ್ಲಿ ಪ್ರೀತಿಸಿ ವಿವಾಹವಾಗುವವರನ್ನು ಸಂಬಂಧಿಕರೇ ಕೊಲ್ಲುತ್ತಿದ್ದಾರೆ. ಅದನ್ನು 'ಮರ್ಯಾದಾ ಹತ್ಯೆ' ಎಂದು ಕರೆಯಲಾಗುತ್ತದೆ. ಮತವನ್ನು ಮೀರದಷ್ಟು ಮೌಢ್ಯ ತುಂಬಿಕೊಂಡಿದೆ.

೨೦೦೯ರಲ್ಲಿ 'ವೈಚಾರಿಕ ಕವನಗಳು' ಪ್ರಕಟಿಸಿದ ಎಸ್. ಮಂಜುನಾಥ ಗೃಹ ಮೌಢ್ಯ, ವಾಸ್ತು ಮೌಢ್ಯ, ನಿಂಬೆ ಮೌಢ್ಯ, ತಾಯ್ತದ ಮೌಢ್ಯ, ಕಾಗೆ ಮೌಢ್ಯ, ಗೂಬೆ ಮೌಢ್ಯ, ಹಲ್ಲಿ ಮೌಢ್ಯ, ಬೆಕ್ಕಿನ ಮೌಢ್ಯ, ಅಂಕೆ ಮೌಢ್ಯ, ಸಂಖ್ಯೆ ಮೌಢ್ಯ, ಮಂತ್ರದ ಮೌಢ್ಯ, ತಂತ್ರದ ಮೌಢ್ಯ, ಜಾತಿಯ ಮೌಢ್ಯ, ಧರ್ಮದ ಮೌಢ್ಯ ಹೀಗೆ ಪಟ್ಟಿ ಮಾಡುತ್ತ ಒಂದು ಕವಿತೆಯಲ್ಲಿ ಹೀಗೆ ಹೇಳುತ್ತಾರೆ :

"ನಂಬಿಕೆಯಿಂದ ದೃಢವಿಶ್ವಾಸದ ವೃದ್ಧಿ, ಮೂಢನಂಬಿಕೆಯಿಂದ ಭಯ, ಪುಕ್ಕಲುತನಗಳ ಸಿದ್ಧಿ" ಎಂಬ ಮಾತು ನಿಜ.


**ಅಲ್ಲಮಪ್ರಭು ಬೆಟ್ಟದೂರು**
ಅಮರ ಚೇತನ, ಕಲ್ಯಾಣನಗರ, ಕೊಪ್ಪಳ – ೫೮೩ ೨೩೧



೨೧ನೇ ಶತಮಾನದಲ್ಲಿ ನಾವಿದ್ದರೂ ಇನ್ನೂ ನಮಗೆ ವೈದ್ಯಲೋಕದ ಬಗ್ಗೆ ನಂಬಿಕೆಯೇ ಇಲ್ಲ. ನೀವು ಯಾವುದೇ ಅಂಗವಿಕಲ ಮಕ್ಕಳ ಪಾಲಕರನ್ನು ಕೇಳಿ ನೋಡಿ. ಅವರು ಒಂದಿಷ್ಟು ಹರಕೆ ಹೊತ್ತಿರುತ್ತಾರೆ. ಇಲ್ಲವೇ ಒಂದಿಷ್ಟು ಹೋಮ ಹವನ ಮಾಡಿಸಿರುತ್ತಾರೆ. ಸುಬ್ರಹ್ಮಣ್ಯ, ಧರ್ಮಸ್ಥಳ, ಕೊಲ್ಲೂರು, ತಿರುಪತಿ ಮುಂತಾದ ಯಾವುದೇ ಪುಣ್ಯಕ್ಷೇತ್ರಗಳಿಗೆ ಭೇಟಿ ನೀಡಿದರೂ ಅಲ್ಲಿಲ್ಲಾ ನಿಮಗೆ ಅಂಗವಿಕಲ ಮಕ್ಕಳ ಪಾಲಕರು ಸಿಕ್ಕೇ ಸಿಗುತ್ತಾರೆ. ಗುಲ್ಬರ್ಗ ಜಿಲ್ಲೆಯ ಗಾಣಗಾಪುರಕ್ಕೆ ನೀವು ಯಾವಾಗ ಬೇಕಾದರೂ ಹೋಗಿ. ಅಲ್ಲಿ ಮಾನಸಿಕ ರೋಗಿಗಳ, ಬುದ್ಧಿಮಾಂದ್ಯರ ಜಾತ್ರೆಯೇ ನೆರೆದಿರುತ್ತದೆ. ದೇವಾಲಯದ ಮುಂದೆ ಚಿತ್ರವಿಚಿತ್ರವಾಗಿ ನಡೆದುಕೊಳ್ಳುವ ನೂರಾರು ವ್ಯಕ್ತಿಗಳು ಸಿಗುತ್ತಾರೆ.

# ಅಂಗವೈಕಲ್ಯ ಮತ್ತು ಮೌಢ್ಯ!

**ಸೂರ್ಯದೇವ**

ಅಂಗವೈಕಲ್ಯಕ್ಕೆ ಈಡಾದವರು ಮತ್ತು ಅವರ ಪಾಲಕರು ಮೂಢನಂಬಿಕೆಗೆ ಬಲಿಯಾಗುವುದು ಹೆಚ್ಚು. ಯಾಕೆಂದರೆ ಅಂಗವೈಕಲ್ಯಕ್ಕೆ ಒಳಗಾದವರ ಮನಸ್ಸು ಅತ್ಯಂತ ಸೂಕ್ಷ್ಮವಾಗಿರುತ್ತದೆ. ಅಲ್ಲದೆ ಅಂಗವಿಕಲತೆಯನ್ನು ಮೀರಿ ಬೆಳೆಯಲು ಯಾವಾಗಲೂ ಹಪಹಪಿಸುತ್ತಿರುತ್ತದೆ. ಕಣ್ಣು ಕಾಣದವನಿಗೆ ಕಣ್ಣು ಬರುತ್ತದೆ ಎಂದರೆ, ಕಿವಿ ಕೇಳದವನಿಗೆ ಕೇಳಿಸುತ್ತದೆ ಎಂದರೆ, ಕಾಲು, ಕೈ ಇಲ್ಲದವರಿಗೆ ಕೈ ಕಾಲು ಸರಿಯಾಗಿಬಿಡುತ್ತವೆ ಎಂದು ಯಾರಾದರೂ ಹೇಳಿದರೆ ಅದನ್ನು ನಂಬಿಬಿಡುತ್ತಾರೆ. ಅಂಗವಿಕಲರ ತಂದೆ ತಾಯಿಗಳೂ ಸಹ ಇಂತಹದೇ ಸ್ಥಿತಿಯಲ್ಲಿ ಇರುತ್ತಾರೆ. ತಮ್ಮ ಮಕ್ಕಳ ಅಂಗವೈಕಲ್ಯವನ್ನು ಯಾರಾದರೂ ವಾಸಿ ಮಾಡಿ ಅವರು ಸಹಜ ಜೀವನ ನಡೆಸುವಂತೆ ಮಾಡುತ್ತಾರೆ ಎಂದರೆ ಅದನ್ನು ನಂಬುವ ಪ್ರಮೇಯವೇ ಹೆಚ್ಚು. ಬಹುತೇಕ ಬಾರಿ ಅಂಗವಿಕಲರ ಮತ್ತು ಅವರ ಪಾಲಕರ ಈ ದೌರ್ಬಲ್ಯವನ್ನು ದುರುಪಯೋಗ ಮಾಡಿಕೊಳ್ಳಲಾಗುತ್ತದೆ.

“ನೀವ್ಯಾಕೆ ಹೆದರುತ್ತೀರಿ ? ಒಂದು ೧೦ ಸಾವಿರ ಮೃತ್ಯುಂಜಯ ಜಪ ಮಾಡಿಸಿಬಿಡಿ ಎಲ್ಲ ಸರಿಯಾಗುತ್ತದೆ. ಇಲ್ಲವೇ ಗಣ ಹವನ, ಧನ್ವಂತರಿ ಹೋಮ ಮಾಡಿಸಿದರೂ ಆದೀತು', ಎಂದು ಸಲಹೆ ಕೊಡುವವರೇನೂ ಕಡಿಮೆ ಇಲ್ಲ. ಜಾತಕದಲ್ಲಿ ತೊಂದರೆ ಇದೆ, ಬಾಣ ಚಿಕಿತ್ಸೆ ಮಾಡಿದರೆ ತೊಂದರೆ ನಿವಾರಣೆ ಯಾಗುತ್ತದೆ, ಜಾತಕ, ನಕ್ಷತ್ರ, ರಾಶಿ ಎಲ್ಲಾ ಮೂಢನಂಬಿಕೆ ಎಂದು ಹೇಳುತ್ತಾರೆ. ಆದರೆ ಇದಕ್ಕೆಲ್ಲಾ ವೈಜ್ಞಾನಿಕ ಹಿನ್ನೆಲೆ ಇದೆ. ಒಬ್ಬ ವ್ಯಕ್ತಿ ಅಂಗವಿಕಲನಾಗಿ ಯಾಕೆ ಹುಟ್ಟುತ್ತಾನೆ ಎನ್ನುವುದನ್ನು ಜಾತಕದ ಮೂಲಕ ಕಂಡುಹಿಡಿಯಬಹುದು. ಇದಕ್ಕೆಲ್ಲಾ ಪರಿಹಾರಗಳೂ ಇವೆ ಎಂದು ವಾದಿಸುವವರ ಸಂಖ್ಯೆ ಕಡಿಮೆ ಏನಿಲ್ಲ. ಇನ್ನು ಕೆಲವು ಬಾಬಾಗಳು, ಸ್ವಾಮೀಜಿಗಳು ಇದನ್ನೇ ಬಂಡವಾಳ ಮಾಡಿಕೊಂಡು ತಮ್ಮ ಹೊಟ್ಟೆ ತುಂಬಿಸಿಕೊಳ್ಳುತ್ತಾರೆ.

ಇದಕ್ಕೆ ಮುಖ್ಯ ಕಾರಣ ಎಂದರೆ ನಮಗೆ ನಮ್ಮ ಮೇಲೆಯೇ ನಂಬಿಕೆ ಇಲ್ಲದಿರುವುದು. ಕಿವಿ ಕೇಳದ ಮಗುವಿಗೆ ಮಾತನಾಡಲು ಬರುವುದಿಲ್ಲ. ಆದರೆ ನಾವು ಪ್ರಯತ್ನಪಟ್ಟರೆ ಅದಕ್ಕೆ ಮಾತು ಕಲಿಸಬಹುದು ಎನ್ನುವ ನಂಬಿಕೆ ನಮ್ಮಲ್ಲಿ ಇರುವುದೇ ಇಲ್ಲ. ಬಹುತೇಕ ಬಾರಿ ಅಂಗವಿಕಲ ಮಕ್ಕಳ ತಂದೆ ತಾಯಿಗಳು ಯಾವುದೋ ಪೂರ್ವ ಜನ್ಮದ ಪಾಪದ ಫಲದಿಂದ ತಮಗೆ ಇಂತಹ ಮಗು ಹುಟ್ಟಿದೆ ಎಂದೇ ಭಾವಿಸುತ್ತಾರೆ. ಅಲ್ಲದೆ ಅಂಗವೈಕಲ್ಯದಿಂದ ಬಳಲುತ್ತಿರುವ ಮಗುವನ್ನು ಸಮಾಜದಲ್ಲಿ ಸಮರ್ಥ ಮನುಷ್ಯನನ್ನಾಗಿ ಬೆಳೆಸುವುದು ಹೇಗೆ ಎನ್ನುವುದರ ಬದಲು ಪೂರ್ವ ಜನ್ಮದ ಯಾವ ಪಾಪದ ಫಲದಿಂದ ಹೀಗಾಗಿರ ಬಹುದು ಎಂಬ ಕುತೂಹಲವೇ ನಮಗೆ ಮುಖ್ಯವಾಗುತ್ತದೆ. ಅದನ್ನು ತಿಳಿಯುವ ಚಪಲ ಹೆಚ್ಚಾಗುತ್ತದೆ. ಇದು ಪ್ರತಿಯೊಬ್ಬ ಪಲಾಯನವಾದಿ ಮನುಷ್ಯನ ಗುಣ. ಯಾರೋ ಬಾಬಾ, ಯಾರೋ ಜ್ಯೋತಿಷಿ “ನೀವು ಹಿಂದಿನ ಜನ್ಮದಲ್ಲಿ ನಿಮಗೆ ಗೊತ್ತಿಲ್ಲದೆ, ಇಂತಹ ತಪ್ಪು ಮಾಡಿದ್ದೀರಿ. ಅದಕ್ಕಾಗಿಯೇ ಹೀಗಾಗಿದೆ” ಎಂದುಬಿಟ್ಟರೆ ನಮಗೆ ಏನೋ ನೆಮ್ಮದಿ. “ನಾನು ಮೊದಲೇ ಹೇಳಿರಲಿಲ್ಲವಾ ? ಈ ಜನ್ಮದಲ್ಲಿಯಂತೂ ನಾನು ಯಾವುದೇ ತಪ್ಪು ಮಾಡಿರಲಿಲ್ಲ. ಆದರೂ ನನಗೆ ಇಂತಹ ಮಗ ಹುಟ್ಟಿದ್ದಾನೆ ಎಂದರೆ ಅದಕ್ಕೆ ಪೂರ್ವ ಜನ್ಮದ ಕರ್ಮವೇ ಕಾರಣ ಎನ್ನುವುದು ನನಗೆ ಗೊತ್ತಿತ್ತು. ಏನು ಮಾಡಲು ಸಾಧ್ಯ? ಈಗ ಎಲ್ಲವನ್ನೂ ಅನುಭವಿಸಬೇಕು ಅಷ್ಟೆ” ಎಂಬ ಸಮರ್ಥನೆಯೂ ಪಾಲಕರಿಂದ ಬರುತ್ತದೆ.

ಇಂತಹ ಪಲಾಯನವಾದದಿಂದಲೇ ಸಾವಿರ ಸಾವಿರ ಮಂದಿ ಅಂಧರು, ಕಿವುಡರು, ಬುದ್ಧಿಮಾಂದ್ಯ ಮಕ್ಕಳು ನಿಷ್ಪ್ರಯೋಜಕರಾಗಿ ತಮ್ಮದಲ್ಲದ ತಪ್ಪಿಗೆ ಇಡೀ ಜೀವಮಾನವನ್ನು ಕಷ್ಟದಲ್ಲಿ ಕಳೆಯುತ್ತಾರೆ. ಬುದ್ಧಿಮಾಂದ್ಯ, ಆಟಿಸಂ ಇರುವ ಮಕ್ಕಳನ್ನು ಮನೆಯಲ್ಲಿ ಕೂಡಿಹಾಕುವ, ಮಾತುಬಾರದ ವ್ಯಕ್ತಿಯ ಮೇಲೆ ಹಲ್ಲೆ ನಡೆಸುವ ಮನಃಸ್ಥಿತಿಗೂ ಇದೇ ಕಾರಣ.



ಭಾರತೀಯ ಸಮಾಜದಲ್ಲಿ ಇಂತಹ ಮನೋಭಾವನೆಯನ್ನು ಹೋಗಲಾಡಿಸಲು ಇನ್ನೂ ಯಾರಿಂದಲೂ ಸಾಧ್ಯವಾಗಿಲ್ಲ. ಇದಕ್ಕೆ ಮುಖ್ಯ ಕಾರಣ ನಾವು ಯಾವಾಗಲೂ ಎಲ್ಲ ಸಮಸ್ಯೆಗಳನ್ನು ನಿವಾರಣೆ ಮಾಡಲು ದೇವರು ಅವತಾರ ಎತ್ತುತ್ತಾನೆ ಎಂದು ನಂಬಿಕೊಂಡಿರುತ್ತೇವೆ. ನಮ್ಮ ಎಲ್ಲ ಸಮಸ್ಯೆಗಳನ್ನೂ ಅವನು ಬಗೆಹರಿಸುತ್ತಾನೆ ಎನ್ನುವ ದೃಢವಿಶ್ವಾಸ ನಮಗಿದೆ. ಅದಕ್ಕೇ ಅಂಗವಿಕಲ ಮಕ್ಕಳು ಹುಟ್ಟಿದ ತಕ್ಷಣ ಅದನ್ನು ಸರಿಪಡಿಸುವುದು ಹೇಗೆ ಎಂದು ಆಲೋಚಿಸುವ ಬದಲು ಇಂತಹ ಮಗು ತಮಗೆ ಯಾಕೆ ಹುಟ್ಟಿತು ಎನ್ನುವುದರ ಬಗ್ಗೆಯೇ ನಾವು ಹೆಚ್ಚು ಆಲೋಚಿಸುತ್ತೇವೆ. ಅದಕ್ಕೆ ಕಾರಣಗಳನ್ನು ವೈಜ್ಞಾನಿಕವಾಗಿ ತಿಳಿದುಕೊಳ್ಳಲು ಪ್ರಯತ್ನಿಸುವುದಿಲ್ಲ. ನಮಗೆ ಆಗ ವೈದ್ಯರಿಗಿಂತ ಹೆಚ್ಚಾಗಿ ಜ್ಯೋತಿಷಿಗಳೋ, ಬಾಬಾಗಳೋ, ಸ್ವಾಮೀಜಿಗಳೋ ನೆನಪಾಗುತ್ತಾರೆ. ಜಾತಕ ತೋರಿಸುವುದು, ಕವಡೆ ಪ್ರಶ್ನೆ ಕೇಳುವುದು, ಗಿಳಿಶಾಸ್ತ್ರ ಕೇಳುವುದು, ಹುಟ್ಟಿದ ದಿನ, ವೇಳೆ ಸರಿ ಇಲ್ಲ ಎಂದು ನಂಬುವುದು. ಜಾತಕದಲ್ಲಿ ದೋಷ ಇದೆ ಎಂದು ಯಾರಾದರೂ ಹೇಳಿದರೆ ಅದನ್ನು ನಂಬಿಬಿಡುವುದು. ವೈದ್ಯರು ಸ್ಕ್ಯಾನಿಂಗ್ ಮಾಡಿಸಬೇಕು, ಎಕ್ಸ್‌ರೇ, ಬಯಾಪ್ಸಿ ಮುಂತಾದ ಪರೀಕ್ಷೆ ಮಾಡಿಸಬೇಕು ಎಂದರೆ ನಮ್ಮ ಮನ ಒಪ್ಪುವುದಿಲ್ಲ. ಸುಮ್ಮನೆ ಯಾಕೆ ಖರ್ಚು ಎಂದು ಭಾವಿಸುತ್ತೇವೆ. ಆದರೆ ಬಾಬಾ ಒಬ್ಬ ನಿಂಬೆಹಣ್ಣು ಕೊಟ್ಟೋ, ಹೋಮ ಹವನ ಮಾಡಬೇಕು ಎಂದೋ, ಪಾರಾಯಣ ಮಾಡಿಸಬೇಕು ಎಂದೋ ಹೇಳಿಬಿಟ್ಟರೆ ಎಷ್ಟೇ ಖರ್ಚಾದರೂ ಮಾಡಿಸುತ್ತೇವೆ.

ನಮ್ಮ ನಂಬಿಕೆ ಏನೆಂದರೆ ಬಾಬಾಗಳು ಬೂದಿ ಹಾಕಿ, ಮಂತ್ರ ಹಾಕಿ, ತಾಯಿತ ಕಟ್ಟಿ ಮಕ್ಕಳನ್ನು ಸರಿ ಮಾಡಿಬಿಡುತ್ತಾರೆ ಎನ್ನುವುದು. "ಅಯ್ಯೋ! ಆ ಸ್ವಾಮೀಜಿ ಒಬ್ಬರು ಅಂಧನ ಕಣ್ಣು ಮುಟ್ಟಿದ್ದೇ ತಡ, ಅವನಿಗೆ ಕಣ್ಣು ಕಾಣಿಸಲು ಆರಂಭವಾಯಿತು. ಕಾಲಿಲ್ಲದವನು ನಡೆದುಬಿಟ್ಟ. ಮಾತು ಆಡಲು ಬಾರದವನು ಮಹಾನ್ ಸಂಗೀತಗಾರ ಆಗಿಬಿಟ್ಟ" ಎಂದು ಬೂಸಿ ಬಿಡುವ ಜನರಿಗೇನೂ ಕಡಿಮೆ ಇಲ್ಲ. ಇಂತಹ ವ್ಯಕ್ತಿಗಳು ಗ್ಯಾಂಗ್ ಕಟ್ಟಿಕೊಂಡು ಜನರನ್ನು ಮೋಸ ಮಾಡುವ ಬಲೆ ಬೀಸುತ್ತಾರೆ. ಈ ಬಲೆಯಲ್ಲಿ ಅಂಗವಿಕಲರು ಮತ್ತು ಅವರ ಪೋಷಕರು ಬೀಳುತ್ತಾರೆ. ಇನ್ನೊಂದು ಮುಖ್ಯ ವಿಷಯವನ್ನು ಗಮನಿಸಬೇಕು. ಅಂಗವೈಕಲ್ಯಕ್ಕೆ ಈಡಾದವರು ಒಂದು ಸಮಯದ ನಂತರ ಗಟ್ಟಿಯಾಗುತ್ತಾರೆ. ಅವರಲ್ಲಿ ಆತ್ಮವಿಶ್ವಾಸ ಮೂಡುತ್ತದೆ. ತಮ್ಮ ಕೊರತೆಯನ್ನು ಮೀರಿ ಬೆಳೆಯಲು ಯತ್ನಿಸುತ್ತಾರೆ. ಆದರೆ ಅಂಗವಿಕಲರ ತಂದೆ ತಾಯಿಗೆ ಮಾತ್ರ ಅವರು ಬದುಕಿ ಇರುವವರೆಗೂ ಕೊರಗು ಇದ್ದೇ ಇರುತ್ತದೆ. ಎಂದಾದರೂ ಯಾವುದೋ ಮೂಲದಿಂದಾದರೂ ಬೆಳಕೊಂದು ಕಾಣಿಸುತ್ತದೆ ಎಂದೇ ಅವರು ಭಾವಿಸುತ್ತಾರೆ. ಅದರ ನಿರೀಕ್ಷೆಯಲ್ಲಿಯೇ ತಮ್ಮ ಜೀವನವನ್ನು ಕಳೆಯುತ್ತಾರೆ. ಹೀಗೆ ಇದ್ದವರನ್ನು ಮೋಸ ಮಾಡುವುದು ಸುಲಭ.

ಇನ್ನು ಕೆಲವರು ವೈದ್ಯರನ್ನು ನಂಬಿದರೂ ಅವರು ಯಾವುದೋ ಶಸ್ತ್ರ ಚಿಕಿತ್ಸೆ ಮಾಡಿ, ಔಷಧಿ ಕೊಟ್ಟು, ಚುಚ್ಚುಮದ್ದು ನೀಡಿ ನಮ್ಮ ಮಗುವನ್ನು ಸರಿ ಮಾಡುತ್ತಾರೆ ಎನ್ನುವ ವಿಶ್ವಾಸ ಹೊಂದಿರುತ್ತಾರೆ. ಆದರೆ ನಾವು ಪ್ರಯತ್ನ ಮಾಡಿ ನಮ್ಮ ಮಕ್ಕಳನ್ನು ಬೆಳೆಸಬೇಕು ಎನ್ನುವುದನ್ನೇ ಮರೆತುಬಿಟ್ಟಿರುತ್ತಾರೆ. ಅಂಗವಿಕಲರನ್ನು ಅಥವಾ ಅವರ ಪಾಲಕರನ್ನು ಹಾದಿ ತಪ್ಪಿಸುವವರೂ ಕಡಿಮೆ ಏನಿಲ್ಲ. ಬುದ್ಧಿಮಾಂದ್ಯ ಮುಂತಾದ ಮನಸ್ಸಿಗೆ ಸಂಬಂಧಿಸಿದ ರೋಗಗಳನ್ನು ಬಿಟ್ಟರೆ ಅಂಗವಿಕಲ ಮಕ್ಕಳು ಸಾಮಾನ್ಯವಾಗಿ ಚೂಟಿಯಾಗಿರುತ್ತಾರೆ. ಟಿವಿ ನೋಡಿ ಖುಷಿಪಡುತ್ತಾರೆ. ಸಂಬಂಧಿಸಿದ ಅಂಗವೈಕಲ್ಯ ಬಿಟ್ಟರೆ ಉಳಿದಂತೆ ಅವರ ಯಾವುದೇ ನಡವಳಿಕೆಯಲ್ಲಿ ವ್ಯತ್ಯಾಸ ಇರುವುದಿಲ್ಲ. ಹೈಪರ್ ಆ್ಯಕ್ಟಿವ್ ಮಕ್ಕಳಂತೂ ಇನ್ನೂ ಚುರುಕು. ಆದರೆ ಅವರಿಗೆ ಭೂತ ಮೆಟ್ಟಿಕೊಂಡಿದೆ, ಪಿಶಾಚಿ ತೊಂದರೆ ಇದೆ ಎಂದು ನಂಬುವವರೇ ಜಾಸ್ತಿ.

ನನ್ನ ಮಗನಿಗೂ ಹೀಗೆಯೇ ಆಯ್ತು. ಆತನಿಗೆ ಕಿವಿ ಕೇಳಿಸುವುದಿಲ್ಲ ಎಂದು ವೈದ್ಯರ ಬಳಿಗೆ ಹೋಗಿದ್ದನ್ನು ನನ್ನ ನೆಂಟರೇ ಆಕ್ಷೇಪಿಸಿದ್ದರು. "ಇನ್ನೂ ಹಸುಳೆ. ಈಗಲೇ ಅದನ್ನು ಡಾಕ್ಟರ್ ಬಳಿಗೆ ಕರೆದುಕೊಂಡು ಹೋಗಿ ಅದರ ಜೀವನವನ್ನೇ ಹಾಳು ಮಾಡುತ್ತಿದ್ದೀರಿ. ಎಷ್ಟೋ ಮಕ್ಕಳು ೫–೬ ವರ್ಷದ ನಂತರ ಮಾತನಾಡಿದ ಉದಾಹರಣೆ ಇವೆ" ಎಂದು ನಮ್ಮನ್ನು ತರಾಟೆಗೆ ತೆಗೆದುಕೊಳ್ಳುತ್ತಿದ್ದರು. ಜೊತೆಗೆ ಹೀಗೆ ತಡವಾಗಿ ಮಾತನಾಡಿದವರ

ಪಟ್ಟಿಯನ್ನೇ ನಮ್ಮ ಮುಂದೆ ಇಡುತ್ತಿದ್ದರು. ನನ್ನ ಮಗ ಟಿವಿ ನೋಡುವುದನ್ನು ತೋರಿಸಿ "ಕಿವಿ ಕೇಳೋದಿಲ್ಲ ಎಂದರೆ ಟಿವಿ ನೋಡ್ತಾನೆಯೇ?" ಎಂದು ಪ್ರಶ್ನೆ ಮಾಡುತ್ತಿದ್ದರು. ಅವನ ಮುಂದೆ ಚಪ್ಪಾಳೆ ತಟ್ಟಿ ಅವನು ನಗುವುದನ್ನು ಕಂಡು, "ಅಯ್ಯೋ ಅವನಿಗೆ ಕಿವಿ ಕೇಳುತ್ತದೆ. ಮಾತು ಕೊಂಚ ನಿಧಾನ ಅಷ್ಟೆ. ನೀವು ಚಿಂತೆ ಮಾಡಬೇಕಾಗಿದ್ದೇ ಇಲ್ಲ" ಎಂದು ನಮ್ಮನ್ನು ಸಮಾಧಾನಪಡಿಸಲು ಯತ್ನಿಸುತ್ತಿದ್ದರು. ಆದರೆ ನಿಜವಾಗಿ ಅವನು ಟಿವಿಯಲ್ಲಿ ಬರುವ ಚಿತ್ರಗಳನ್ನು ಮತ್ತು ಬೆಳಕನ್ನು ನೋಡುತ್ತಿದ್ದನೇ ವಿನಾ ಕೇಳಿಸಿಕೊಳ್ಳುತ್ತಿರಲಿಲ್ಲ. ಅವರು ಚಪ್ಪಾಳೆ ಹೊಡೆದಾಗ ಅವರ ಕೈ ಚಲನೆಯನ್ನು ಕಂಡು ನಗುತ್ತಿದ್ದನೇ ವಿನಾ ಅದರ ಶಬ್ದವನ್ನು ಕೇಳಿ ಅಲ್ಲ.




ಇನ್ನು ಕೆಲವರಿದ್ದರು. "ಮಗುವಿನ ಜಾತಕ ಮಾಡಿಸಿದಿರಾ ? ಏನಾದರೂ ತೊಂದರೆ ಇರಬಹುದು. ಒಳ್ಳೆಯ ಜ್ಯೋತಿಷಿ ಬಳಿ ತೋರಿಸಿ. ಶನಿ ಕಾಟ, ರಾಹು ಕಾಟ ಏನಾದರೂ ಇರಬಹುದು" ಎಂದು ಹೇಳುತ್ತಿದ್ದರು. ಅದಕ್ಕೂ ಒಂದಿಷ್ಟು ಉದಾಹರಣೆ ಬೇರೆ. ಯಾರದ್ದೋ ಮನೆಯಲ್ಲಿ ಯಾವುದೋ ಮಗುವಿಗೆ ಹೀಗೆಯೇ ಆಗಿತ್ತು. ಅವನಿಗೆ ಆ ದೇವರಿಗೆ ಹರಕೆ ಹೊತ್ತ ಮೇಲೆ ಸರಿಯಾಯಿತು. ಈ ಹೋಮ ಮಾಡಿದ ನಂತರ ಅವನಿಗೆ ಮಾತು ಬಂತು ಎಂಬ ಕತೆಗಳ ಸರಮಾಲೆ. ಮಗನಿಗೆ ಕಿವಿ ಕೇಳಿಸುವುದಿಲ್ಲ ಎನ್ನುವುದು ಗೊತ್ತಾದ ಆರಂಭದ ಸಮಯದಲ್ಲಿ ನಮ್ಮ ಮನಸ್ಸು ಹೇಗಿತ್ತು ಎಂದರೆ ಪ್ರವಾಹದಲ್ಲಿ ತೇಲಿ ಹೋಗುವ ಅನುಭವ. ಯಾವುದಾದರೂ ಹುಲ್ಲುಕಡ್ಡಿ ಸಿಕ್ಕರೂ ಅದನ್ನೇ ಗಬಕ್ಕನೆ ಹಿಡಿದುಕೊಳ್ಳುವ ಅವಸರ. ಅದಕ್ಕೇ ಜಾತಕ ತೋರಿಸು, ಹೋಮ, ಹವನ ಮಾಡಿಸು, ದೇವರಿಗೆ ಹರಕೆ ಹೇಳಿಕೋ ಎಂದರೂ ಎಲ್ಲೋ ಒಂದು ಆಸೆ. ಏನೋ ಪವಾಡ ಆಗಿಬಿಡಬಹುದು. ನನ್ನ ಮಗ ಶಬ್ದಗಳನ್ನು ಕೇಳಿಸಿಕೊಳ್ಳಬಹುದು. ಎಲ್ಲರಂತೆ ಮಾತನಾಡಬಹುದು ಎಂಬ ಕನಸು.

ಮನಸ್ಸು ಅಷ್ಟು ದುರ್ಬಲವಾಗಿರುವುದರಿಂದ ಯಾರು ಏನು ಹೇಳಿದರೂ ಅದನ್ನು ಕೇಳುವ ಕಾತುರ. ಅಲ್ಲದೆ ಅವರು ನಮ್ಮ ವಿರೋಧಿಗಳೇನೂ ಅಲ್ಲವಲ್ಲ. ನಮಗೆ ಒಳ್ಳೆಯದಾಗಲಿ ಎಂದು ತಾನೆ ಹೇಳಿದ್ದು ಎಂಬ ಭಾವನೆ. ಮನದ ಮೂಲೆಯಲ್ಲಿ ಎಲ್ಲೋ ಒಂದು ಕಡೆ ಇವೆಲ್ಲಾ ಉಪಯೋಗಕ್ಕೆ ಬಾರದ ಕೆಲಸ ಎನ್ನಿಸಿದರೂ ಅವುಗಳನ್ನೆಲ್ಲಾ ಮಾಡಿಸಿದರೆ ಏನೋ ಒಂದಿಷ್ಟು ಉಪಯೋಗವಾಗಬಹುದು ಎಂಬ ಆಸೆ ಬೇರೆ.

ಇದನ್ನೇ ಕೆಲವರು ದುರುಪಯೋಗ ಮಾಡಿಕೊಳ್ಳುತ್ತಾರೆ. ಅದಕ್ಕೆ ನಮ್ಮ ಮನೆಯಲ್ಲಿಯೂ ಹರಕೆ ಹೊತ್ತುಕೊಳ್ಳುವ ಕೆಲಸ ನಿರಂತರವಾಗಿ ನಡೆಯಿತು. ಜೊತೆಗೆ, ಒಂದಿಷ್ಟು ಹೋಮ ಹವನಗಳೂ ನಡೆದವು. ಇನ್ನು ತೀರಾ ನಮ್ಮ ಹತ್ತಿರದ ಸಂಬಂಧಿಗಳು ನನ್ನ ಮಗನಿಗೆ ಒಳ್ಳೆಯದಾಗಲಿ ಎಂದು ಹರಕೆ ಹೊತ್ತರು. ಬೇರೆ ಬೇರೆ ಜ್ಯೋತಿಷಿಗಳ ಬಳಿಗೆ ಹೋಗಿ ಅವನ ಭವಿಷ್ಯ ಕೇಳಿದರು. "ಆಯ್ತು, ನೀವು ಹೇಳಿದಂತೆ ಹೋಮ ಮಾಡೋಣ. ಕೊಲ್ಲೂರು ಮೂಕಾಂಬಿಕೆಗೆ ಹರಕೆ ಕಟ್ಟಿಕೊಳ್ಳೋಣ. ಪಂಡರಾಪುರಕ್ಕೂ ಹರಕೆ ಒಪ್ಪಿಸೋಣ. ಅವನ ಹೆಸರಿನಲ್ಲಿ ಇನ್ನು ಯಾವುದೇ ದೇವರಿಗೂ ಪೂಜೆ ಮಾಡಿಸೋಣ. ಆದರೆ ವೈದ್ಯರಲ್ಲಿಗೆ ಹೋಗುವುದನ್ನು ತಪ್ಪಿಸುವಂತಿಲ್ಲ. ಸರಿಯಾದ ವೈದ್ಯರ ಬಳಿಗೆ ಹೋಗಿ ತೋರಿಸಿದರೆ ಅವನಿಗೆ ಏನು ತೊಂದರೆ ಎನ್ನುವುದಾದರೂ ಗೊತ್ತಾಗುತ್ತದಲ್ಲ. ನೀವು ಹೇಳಿದಂತೆ ಹೋಮ, ಹವನ, ಹರಕೆಯಿಂದ ಕಡಿಮೆ ಯಾದರೆ ಆಗಲಿ. ವೈದ್ಯರಿಂದ ಅವನು ಸರಿಯಾದರೆ ಆಗಲಿ. ಇಲ್ಲಿ ಅವನು ಸರಿಯಾಗುವುದು ಮುಖ್ಯವೇ ವಿನಾ ಯಾವುದರಿಂದ ಸರಿಯಾದ ಎನ್ನುವುದಲ್ಲ" ಎಂದು ನಾನು ವಾದಿಸುತ್ತಿದ್ದೆ. ಕೊನೆಗೆ ನನ್ನ ವಾದವೂ ಗೆದ್ದಿತು. ಅವರ ವಾದವೂ ಗೆದ್ದಿತು. ಈ ರೀತಿ ಆಗುವುದು ಅತ್ಯಂತ ದುರ್ಲಭ. ಬಹಳಷ್ಟು ಬಾರಿ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಹೋಮ, ಹವನಗಳನ್ನು ನಂಬಿದ ಹಾಗೆ, ದೇವರಿಗೆ ಹರಕೆ ಹೊತ್ತುಕೊಳ್ಳುವುದನ್ನು ನಂಬಿದ ಹಾಗೆ ವೈದ್ಯರನ್ನು ನಂಬುವುದೇ ಇಲ್ಲ.

ನಾನು ಮೈಸೂರಿಗೆ ಬಂದು ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ ಮತ್ತು ಜನತಾ ನಗರದಲ್ಲಿ ಇರುವ ಕಿವುಡು ಮಕ್ಕಳು ಮತ್ತು ತಾಯಂದಿರ ಶಾಲೆಗೆ ಹೋಗಲು ಆರಂಭಿಸಿದ ನಂತರ ನನಗೆ ಇನ್ನೊಂದು ವಿಷಯ ಸ್ಪಷ್ಟವಾಯಿತು. ಬಹುತೇಕ ತಂದೆ ತಾಯಿಗಳು ತಮ್ಮ ಮಗುವಿಗೆ ಕಿವುಡು ಎನ್ನುವುದನ್ನು ತಕ್ಷಣಕ್ಕೆ ಒಪ್ಪಿಕೊಳ್ಳುವುದಿಲ್ಲ. 'ಮಗುವಿಗೆ ಯಾಕೋ ಮಾತು ನಿಧಾನ. ಇನ್ನೂ ಮಾತು ಬಂದಿಲ್ಲ' ಎಂದು ಭಾವಿಸಿಕೊಂಡು ಸುಮ್ಮನೆ ಇರುತ್ತಾರೆ. ಮಗುವಿಗೆ ೫–೬ ವರ್ಷ ಆಗುವ ತನಕವೂ ಈಗ ಮಾತು ಬರುತ್ತದೆ. ಮುಂದಿನ ವರ್ಷ ಮಾತು ಬರುತ್ತದೆ ಎಂದೇ ಕಾಯುತ್ತಾರೆ. ಅದಕ್ಕೇ ಬಹುತೇಕ ತಂದೆ ತಾಯಿಗಳು ತಮ್ಮ ಕಿವುಡು ಮಕ್ಕಳನ್ನು ತಡವಾಗಿಯೇ ಆಸ್ಪತ್ರೆಗೆ ಕರೆತರುತ್ತಾರೆ.

ಮಗು ಚಿಕ್ಕದಿರುವಾಗಲೇ ಅದರ ಶ್ರವಣ ದೋಷವನ್ನು ಗುರುತಿಸಿ ಶ್ರವಣ ಯಂತ್ರವನ್ನು ಹಾಕಿದರೆ ಅದಕ್ಕೆ ಒಳ್ಳೆಯದು. ಆಗ ಮಗುವಿಗೆ ಹೆಚ್ಚು ಹೆಚ್ಚು ಕಲಿಸಬಹುದು. ಅಲ್ಲದೆ ಇತರ ಎಲ್ಲ ಮಕ್ಕಳನ್ನು ಬೆಳೆಸಿದಂತೆಯೇ ಅದನ್ನೂ ಬೆಳೆಸಬಹುದು. ಮಗುವಿಗೆ ೫–೬ ವರ್ಷ ಆಗುವ ಹೊತ್ತಿಗೆ ಅದರ ಬುದ್ಧಿ ಬೆಳೆದಿರುತ್ತದೆ. ಅಷ್ಟರಲ್ಲಾಗಲೇ ಅದು ಸನ್ನೆ ಭಾಷೆಯನ್ನು ರೂಢಿಸಿಕೊಂಡಿರುತ್ತದೆ. ಆಗ ಅದಕ್ಕೆ ಮಾತನ್ನು ಕಲಿಸುವುದು ಕಷ್ಟ. ಹುಟ್ಟು ಕಿವುಡರಾಗಿರುವ ಬಹುತೇಕ ಮಕ್ಕಳಿಗೆ ಕಿವಿ ಸರಿಯಾಗಿರುತ್ತದೆ. ಬಾಯಿಯೂ ಸರಿ ಇರುತ್ತದೆ. ಕಿವಿ ಕೇಳಿಸುತ್ತದೆ ಎನ್ನುವುದು ಗೊತ್ತಾಗುವುದು ಕಿವಿಯ ಮೇಲೆ ಬಿದ್ದ ಶಬ್ದ ಮಿದುಳಿಗೆ ಗೊತ್ತಾದಾಗ. ಹೀಗೆ ಕಿವಿಯ ಮೇಲೆ ಬಿದ್ದ ಶಬ್ದ ಮಿದುಳಿಗೆ ತಿಳಿಸಲು ಕಿವಿ ಮತ್ತು ಮಿದುಳಿನ ನಡುವೆ ಕಾಕ್ಲೇರ್ ಎಂಬ ಸೆಲ್‌ಗಳಿರುತ್ತವೆ. ಅವು ಬೆಳವಣಿಗೆಯಾಗದೇ ಇರುವುದೇ ಮಕ್ಕಳಿಗೆ ಕಿವಿ ಕೇಳಿಸದೇ ಇರಲು ಮುಖ್ಯ ಕಾರಣ. ಕಿವುಡುತನಕ್ಕೆ ಇದೊಂದೇ ಕಾರಣ ಎಂದಲ್ಲ. ಆದರೆ ಹುಟ್ಟು ಕಿವುಡರಲ್ಲಿ ಈ ಸಮಸ್ಯೆಯೇ ಹೆಚ್ಚು.

ಈ ಸೆಲ್‌ಗಳನ್ನು ಔಷಧಿಗಳಿಂದ ಬೆಳವಣಿಗೆ ಮಾಡುವುದು ಸಾಧ್ಯವಿಲ್ಲ. ಹೃದಯ ಕಸಿ ಮಾಡಿದಂತೆ, ಮೂತ್ರಕೋಶ ಕಸಿ ಮಾಡಿದಂತೆ ಜೈವಿಕವಾಗಿ ಕಿವಿಯನ್ನು ಕಸಿ ಮಾಡುವ ಸಂಶೋಧನೆ ಇನ್ನೂ ಸಾಧ್ಯವಾಗಿಲ್ಲ. ಆದ್ದರಿಂದ ಈಗಲೂ ಕಿವುಡು ಮಕ್ಕಳಿಗೆ ಮಾತಿನ ಥೆರಪಿಯೇ ಒಳ್ಳೆಯ ವಿಧಾನ. ಈಗ ಕಾಕ್ಲೇರ್ ಇಂಪ್ಲ್ಯಾಂಟ್ ಎಂಬ ಶಸ್ತ್ರಚಿಕಿತ್ಸೆಯನ್ನು ಮಾಡಿ ಮಕ್ಕಳಿಗೆ ಕಿವಿ ಕೇಳಿಸುವಂತೆ ಮಾಡಲಾಗುತ್ತಿದೆ. ಆದರೆ ಅದು ಅತ್ಯಂತ ದುಬಾರಿ ಬಾಬ್ತು. ಕನಿಷ್ಠ ೬ರಿಂದ ೧೨ ಲಕ್ಷ ರೂಪಾಯಿ ಬೇಕು. ಭಾರತದ ಬಹುತೇಕ ಎಲ್ಲ ದೊಡ್ಡ ನಗರಗಳ ದೊಡ್ಡ ದೊಡ್ಡ ಆಸ್ಪತ್ರೆಗಳಲ್ಲಿ ಈ ಶಸ್ತ್ರಚಿಕಿತ್ಸೆ ಮಾಡಲಾಗುತ್ತದೆ. ಶಸ್ತ್ರಚಿಕಿತ್ಸೆಯ ನಂತರ ಮಗುವಿಗೆ ಪಿಸುಮಾತು ಕೂಡ ಕೇಳುತ್ತದೆ. ಆದರೆ ಕಾಕ್ಲೇರ್



ಮಾಡಿಸಿಕೊಂಡಿರುವ ಮಗುವನ್ನು ಮಾತ್ರ ಅತ್ಯಂತ ಜೋಪಾನವಾಗಿ ನೋಡಿಕೊಳ್ಳಬೇಕು. ಶಸ್ತ್ರಚಿಕಿತ್ಸೆ ಆದ ತಕ್ಷಣವೇ ಮಗುವಿಗೆ ಕಿವಿ ಕೇಳಿಸುವುದಿಲ್ಲ. ಕಾಕ್ಲೇರ್ ಮಾಡಿಸಿಕೊಂಡ ನಂತರ ಕೇಳಿಸಿಕೊಳ್ಳುವುದು ಹೇಗೆ ಎಂಬ ಬಗ್ಗೆ ಥೆರಪಿಯನ್ನೂ ತೆಗೆದುಕೊಳ್ಳಬೇಕು.

ಮಕ್ಕಳು ಅಂಗವಿಕಲರಾಗಿದ್ದರೆ ನಮ್ಮ ಮನಸ್ಸಿಗೂ ಮಂಕು ಕವಿದಿರುತ್ತದೆ. ಯಾವುದೇ ಮಗು ಕನ್ನಡಕ ಹಾಕಿಕೊಂಡಿದೆ ಎಂದರೆ ಅದಕ್ಕೆ ಕಣ್ಣು ಕಾಣಿಸುತ್ತದೆ ಎಂದೇ ಅರ್ಥ. ಕಣ್ಣು ಕಾಣಿಸದೇ ಇದ್ದರೆ ಕನ್ನಡಕ ಹಾಕಿದರೂ ಪ್ರಯೋಜನವಿರುವುದಿಲ್ಲ. ಕಣ್ಣಿನಲ್ಲಿ ಸಮಸ್ಯೆ ಇರುವುದರಿಂದ ಕನ್ನಡಕ ಹಾಕಿಕೊಳ್ಳುತ್ತಾರೆ. ಅದೇ ರೀತಿ ಕಿವಿ ಕೇಳಿಸುವುದಿಲ್ಲ ಎಂದಾದರೆ ಯಾವುದೇ ಶ್ರವಣ ಯಂತ್ರ ಹಾಕಿದರೂ ಕಿವಿ ಕೇಳಿಸುವುದೇ ಇಲ್ಲ. ಇಷ್ಟು ಸರಳವಾದ ಸತ್ಯ ಕೂಡ ನಮ್ಮ ಅರಿವಿಗೆ ಬರುವುದೇ ಇಲ್ಲ.

ಮಗುವಿಗೆ ಕಿವಿ ಕೇಳಿಸದೇ ಇದ್ದರೆ ಕೊಲ್ಲೂರು ಮೂಕಾಂಬಿಕೆಗೆ ಹರಕೆ, ಕಣ್ಣು ಕಾಣದೇ ಇದ್ದರೆ ಇಷ್ಟ ದೇವತೆಗೆ ಹರಕೆ... ಹೀಗೆ ಹರಕೆಯ ಸರಮಾಲೆ ಇದ್ದೇ ಇರುತ್ತದೆ. ಈಗಲೂ ನಮ್ಮ ಹಳ್ಳಿಗಳಲ್ಲಿ ಮಕ್ಕಳಿಗೆ ಜ್ವರ ಬಂದಿದೆ ಎಂದರೆ ಅದನ್ನು ವೈದ್ಯರ ಬಳಿಗೆ ಕರೆದುಕೊಂಡು ಹೋಗುವುದಿಲ್ಲ. ಜ್ಯೋತಿಷಿ ಬಳಿಗೆ ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಅವರು ಒಂದು ಕಾಗದದ ಚೀಟಿ ಕೊಟ್ಟು ಅದನ್ನು ಕುಂಕುಮದ ನೀರಿನಲ್ಲಿ ಅದ್ದಿ ಮಗುವಿಗೆ ಕಟ್ಟಲು ಹೇಳುತ್ತಾರೆ. ಮಗುವಿಗೆ ನೀರನ್ನು ಚಿಮುಕಿಸುತ್ತಾರೆ.

ಮಕ್ಕಳು ಹಟ ಮಾಡಿದರೆ, ಬಾಲ್ಯದಲ್ಲಿಯೇ ಯಾವುದೇ ರೋಗಕ್ಕೆ ತುತ್ತಾದರೆ ಮಕ್ಕಳಿಗೆ ಬಾಲಗ್ರಹ ಹಿಡಿದಿದೆ ಎಂದು ಭಾವಿಸುವವರೇ ಜಾಸ್ತಿ. ಬಾಲ್ಯದಲ್ಲಿಯೇ ಶನಿಕಾಟ, ಸಾಢೇಸಾತ್, ಪಂಚಮ ಶನಿ ಹೀಗೆ ಏನಾದರೂ ಒಂದು ಕಾರಣ ಇದ್ದೇ ಇರುತ್ತದೆ. ೨೧ನೇ ಶತಮಾನದಲ್ಲಿ ನಾವಿದ್ದರೂ ಇನ್ನೂ ನಮಗೆ ವೈದ್ಯಲೋಕದ ಬಗ್ಗೆ ನಂಬಿಕೆಯೇ ಇಲ್ಲ. ನೀವು ಯಾವುದೇ ಅಂಗವಿಕಲ ಮಕ್ಕಳ ಪಾಲಕರನ್ನು ಕೇಳಿ ನೋಡಿ. ಅವರು ಒಂದಿಷ್ಟು ಹರಕೆ ಹೊತ್ತಿರುತ್ತಾರೆ. ಇಲ್ಲವೇ ಒಂದಿಷ್ಟು ಹೋಮ ಹವನ ಮಾಡಿಸಿರುತ್ತಾರೆ. ಸುಬ್ರಹ್ಮಣ್ಯ, ಧರ್ಮಸ್ಥಳ, ಕೊಲ್ಲೂರು, ತಿರುಪತಿ ಮುಂತಾದ ಯಾವುದೇ ಪುಣ್ಯಕ್ಷೇತ್ರಗಳಿಗೆ ಭೇಟಿ ನೀಡಿದರೂ ಅಲ್ಲೆಲ್ಲಾ ನಿಮಗೆ ಅಂಗವಿಕಲ ಮಕ್ಕಳ ಪಾಲಕರು ಸಿಕ್ಕೇ ಸಿಗುತ್ತಾರೆ. ಗುಲ್ಬರ್ಗ ಜಿಲ್ಲೆಯ ಗಾಣಗಾಪುರಕ್ಕೆ ನೀವು ಯಾವಾಗ ಬೇಕಾದರೂ ಹೋಗಿ. ಅಲ್ಲಿ ಮಾನಸಿಕ ರೋಗಿಗಳ, ಬುದ್ಧಿಮಾಂದ್ಯರ ಜಾತ್ರೆಯೇ ನೆರೆದಿರುತ್ತದೆ. ದೇವಾಲಯದ ಮುಂದೆ ಚಿತ್ರವಿಚಿತ್ರವಾಗಿ ನಡೆದುಕೊಳ್ಳುವ ನೂರಾರು ವ್ಯಕ್ತಿಗಳು ಸಿಗುತ್ತಾರೆ. ಕೆಲವೊಮ್ಮೆ ಭಯವನ್ನೂ ಹುಟ್ಟಿಸುತ್ತಾರೆ.

ಮಕ್ಕಳಾಗದೇ ಇದ್ದರೆ ತಾಯಿತ ಕಟ್ಟಿ ಮಕ್ಕಳು ಆಗುವಂತೆ ಮಾಡುವ ಬಾಬಾಗಳು ನಮ್ಮ ನಡುವೆ ಇದ್ದಾರೆ. ಅವರ ಪ್ರಚಾರ ಎಷ್ಟು ಜೋರಾಗಿರುತ್ತದೆ ಎಂದರೆ ಅವರ ಮನೆಯ ಬಳಿ ಜನ ಸಾಲುಗಟ್ಟಿ ನಿಂತಿರುತ್ತಾರೆ. ಅವರು ಕೇಳಿದಷ್ಟು ಹಣ ಕೊಡಲು ಸಿದ್ಧರಾಗಿರುತ್ತಾರೆ. ಆ ಸಾಲುಗಳಲ್ಲಿ ವೈದ್ಯ ದಂಪತಿಗಳೂ ಸಿಗುತ್ತಾರೆ ಎಂದರೆ ನಮ್ಮ ಮೌಢ್ಯಕ್ಕೆ ಏನನ್ನೋಣ! ಹೀಗೆ ತಾಯತ ಕಟ್ಟಿ ಮಕ್ಕಳನ್ನು ಕರುಣಿಸುವ ಬಾಬಾಗಳು ಬೆಂಗಳೂರಿನಲ್ಲಿಯೇ ಇದ್ದಾರೆ. ಅವರ ಆಶೀರ್ವಾದಕ್ಕೆ ಕಾಯುತ್ತಿರುವ ವೈದ್ಯ ದಂಪತಿಗಳೂ ಇದೇ ಬೆಂಗಳೂರಿನಲ್ಲಿ ಸಿಗುತ್ತಾರೆ.

ಮೌಢ್ಯಕ್ಕೂ ಮನುಷ್ಯನ ಆರೋಗ್ಯಕ್ಕೂ ತುಂಬಾ ಸಂಬಂಧವಿದೆ. ಬಹಳಷ್ಟು ಬಾರಿ ಮೋಸ ಹೋಗುವುದು ಆರೋಗ್ಯದ ಸಮಸ್ಯೆಗಳಿಂದಲೇ ಆಗಿರುತ್ತದೆ. ಬ್ರಾಹ್ಮಣರು ಊಟ ಮಾಡಿದ ಬಾಳೆ ಎಲೆ ಮೇಲೆ ಉರುಳಾಡುವ ಮಡೆಸ್ನಾನ ಪದ್ಧತಿ ನಡೆಯುವಲ್ಲಿಗೆ ಹೋಗಿ. ಬಹುತೇಕರು ಆರೋಗ್ಯದ ಸಮಸ್ಯೆಯಿಂದ ಬಳಲುತ್ತಿರುತ್ತಾರೆ. ಚರ್ಮರೋಗ ಇದರಿಂದ ಗುಣವಾಗುತ್ತದೆ ಎಂಬ ಸಮರ್ಥನೆ ಬರುತ್ತದೆ. ಬೆತ್ತಲೆ ಸೇವೆಯಾಗಲಿ, ಮಕ್ಕಳನ್ನು ಉರಿಯುವ ಕೆಂಡದ ಮೇಲೆ ಇಟ್ಟು ತೆಗೆಯುವ ಪದ್ಧತಿಯಾಗಲಿ, ಮಹಡಿಯಿಂದ ಅವರನ್ನು ಕೆಳಕ್ಕೆ ಎಸೆಯುವ ಪದ್ಧತಿಯಾಗಲಿ ಹೀಗೆ ಹಲವಾರು ಮೌಢ್ಯ ಆಚರಣೆಗಳಿಗೆ ಆರೋಗ್ಯದ ಸಮಸ್ಯೆಗಳೇ ಕಾರಣವಾಗಿರುತ್ತವೆ.

ಮೌಢ್ಯ ನಿಯಂತ್ರಣ ಕಾಯ್ದೆ ಜಾರಿಗೆ ತರುವುದರ ಜೊತೆಗೆ ಜನರಲ್ಲಿ ಈ ಬಗ್ಗೆ ಜಾಗೃತಿ ಮೂಡಿಸದೇ ಹೋದರೆ ಜನ ಜಾತಕವನ್ನೇ ನಂಬುತ್ತಾರೆಯೇ ವಿನಾ ವೈದ್ಯರನ್ನಲ್ಲ.

**ಸೂರ್ಯದೇವ**
೧೫, ಪೈಪ್‌ಲೈನ್ ರಸ್ತೆ, ವೈಯ್ಯಾಲಿಕಾವಲ್, ಬೆಂಗಳೂರು-೩



ಕುಲಾಂತರಿ ತಳಿಗಳು ಹೊಸ, ಹೊಸ ಪರ್ಯಾಯಗಳನ್ನು ಕಲ್ಪಿಸುತ್ತಲಿವೆ. ಅವುಗಳನ್ನು ಜಾಣತನದಿಂದ ಬಳಸಿಕೊಂಡು ಲಾಭ ಪಡೆಯುವ ದಿಶೆಯಲ್ಲಿ ಚಿಂತನೆ ನಡೆಯಬೇಕು.

# ಕುಲಾಂತರಿ ಬೆಳೆಗಳು ಭರವಸೆ, ಆತಂಕ ಮತ್ತು ಭವಿಷ್ಯ

ಡಾ॥ ಶರಣಬಸವೇಶ್ವರ ಅಂಗಡಿ

**ಸು**ಮಾರು ಇಪ್ಪತ್ತು ವರ್ಷಗಳ ಹಿಂದೆ ಬಯೋಟೆಕ್ನಾಲಜಿ ಕುರಿತ ಸಾರ್ವಜನಿಕ ಸಭೆಯನ್ನುದ್ದೇಶಿಸಿ ಮಾತನಾಡುತ್ತಿದ್ದೆ.

"ಈ ಜೈವಿಕ ತಂತ್ರಜ್ಞಾನ ವಿನಾಶಕ ಅಂತಾರಲ್ಲ ?" ಸಭಿಕರೊಬ್ಬರ ಪ್ರಶ್ನೆಗೆ ನಾನು, "ಅಲ್ಲಲ್ಲ. ಇದು ವಿನಾಯಕ ಟೆಕ್ನಾಲಜಿ. ಕಾರಣ : ವಿನಾಯಕ– ಜೈವಿಕ ತಂತ್ರಜ್ಞಾನ (ಅಂಗಾಂಗ ಕಸಿ)ದ ಪೌರಾಣಿಕ ಪ್ರತಿಮೆ. ಜೊತೆಗೆ ಇಂದು ನಮಗಿರುವ ಹಲವಾರು ಸಮಸ್ಯೆಗಳು, ಅಡೆತಡೆಗಳನ್ನು ತೊಡೆದುಹಾಕಬಲ್ಲ ಈ ಟೆಕ್ನಾಲಜಿ ಒಂದು ರೀತಿಯ ವಿಘ್ನನಿವಾರಕ. ಆದ್ದರಿಂದ ವಿನಾಯಕ" ಅಂದಿದ್ದಕ್ಕೆ ಜನಸ್ತೋಮ ಖುಷಿಯಿಂದ ಪ್ರತಿಕ್ರಿಯಿಸಿತ್ತು.

ಇಂದು ಬಯೋಟೆಕ್ನಾಲಜಿ ಅಗಾಧವಾಗಿ ಬೆಳೆದಿದೆ. ಸೂಕ್ಷ್ಮಾತಿಸೂಕ್ಷ್ಮ ಸ್ತರದಲ್ಲಿ, ಜೀವಿಗಳನ್ನು ನಮ್ಮಿಷ್ಟಾನುಸಾರ ಬದಲಿಸುವ ಜೆನೆಟಿಕ್ ಇಂಜಿನಿಯರಿಂಗ್‌ನ ಸಾಧ್ಯತೆಗಳನ್ನು ಕಲ್ಪಿಸಿದೆ. ಅವನ್ನು ಬಳಸಿ ಕೆಲವು ಸಮಸ್ಯೆಗಳಿಗೆ ಪರಿಹಾರವಾಗಿ ನಿರ್ಮಿಸಿದ ಟ್ರಾನ್ಸ್‌ಜೆನಿಕ್ ತಳಿಗಳು ವಾದ, ವಿವಾದ, ಗೊಂದಲಗಳನ್ನು ಸೃಷ್ಟಿಸುತ್ತಲಿವೆ. ಪರ, ವಿರೋಧ ಚರ್ಚೆಗಳಲ್ಲಿ ಸತ್ಯಾಂಶ ಹುಡುಕುವುದು ಕಷ್ಟವಾಗುತ್ತಲಿದೆ.

GM (Genetically Modified) ಅಂದರೆ ತಳಿ ಮಾರ್ಪಡಿಸಿದ ಬೆಳೆಗಳು ಯಾ ಕುಲಾಂತರಿ ಬೆಳೆ ಕುರಿತ ಮಹತ್ವದ ಮಾಹಿತಿಯನ್ನು ಸರಳವಾಗಿ ವಿವರಿಸುವ ಪ್ರಯತ್ನ ಇಲ್ಲಿದೆ.

ಜೀವಿಗಳ ನಿರ್ದಿಷ್ಟ ಗುಣಗಳನ್ನು ನಿರ್ಧರಿಸಿ, ಅವುಗಳ ವಂಶಪಾರಂಪರ್ಯತೆಯನ್ನು ನಿಯಂತ್ರಿಸುವುದು ಅವುಗಳೊಳಗಣ ಡಿಎನ್‌ಎ ಹೆಸರಿನ ವಂಶವಾಹಿತತ್ವ. ಈ ಮೂಲತತ್ವದ ಕಾರ್ಯವೈಖರಿಯನ್ನು ಕೂಲಂಕಷ ಅಧ್ಯಯನ, ಪ್ರಯೋಗಗಳಿಂದ ಅರಿತ ವಿಜ್ಞಾನಿಗಳು ಅದನ್ನು ನಮ್ಮ ಅನುಕೂಲಕ್ಕೆ ಅನುಗುಣವಾಗಿ ಬಳಸಿಕೊಳ್ಳಲು ಹಲವಾರು ಅತ್ಯಂತ ಸೂಕ್ಷ್ಮ ವಿಧಿ, ವಿಧಾನಗಳನ್ನು ರೂಪಿಸಿದರು. ಅವೆಲ್ಲವನ್ನೂ ಒಟ್ಟಾಗಿ ಬಯೋಟೆಕ್ನಾಲಜಿ ಅಥವಾ ಜೈವಿಕ ತಂತ್ರಜ್ಞಾನ ಎನ್ನುವುದು.

ಸೂಕ್ಷ್ಮಾತಿಸೂಕ್ಷ್ಮ ಎಳೆಯ ರೂಪದ ಡಿಎನ್‌ಎ ಸುರುಳಿಯೊಳಗಣ ಸುರುಳಿಯಾಗಿ ಸುತ್ತಿಕೊಂಡು, ಅತ್ಯಂತ ಒತ್ತೊತ್ತಾಗಿ ವರ್ಣತಂತು (ಕ್ರೋಮೋಸೋಮ್)ಗಳಲ್ಲಿ ಪ್ಯಾಕ್ ಆಗಿರುತ್ತದೆ. ಡಿಎನ್‌ಎನ ನಿರ್ದಿಷ್ಟ ಅಣುಭಾಗಗಳು ಜೀವಿಗಳ ಪ್ರತ್ಯೇಕ ಗುಣಗಳನ್ನು ನಿರ್ಧರಿಸುತ್ತವೆ. ಆದ್ದರಿಂದ ಅವನ್ನು ಗುಣ ನಿರ್ಧಾರಕ ಅಣು, ಗುಣಾಣು ಅಥವಾ ಜೀನ್(ಜೀನಿ) ಎನ್ನುತ್ತಾರೆ.

ಎಲ್ಲ ಜೀವಿಗಳಲ್ಲಿಯೂ ಅಂತರ್ಗತವಾಗಿರುವ ವಂಶವಾಹಿಯ ಈ ಗುಣಾಣುಗಳನ್ನು ಯಾವುದೇ ಜೀವಿ ಅಥವಾ ಸೂಕ್ಷ್ಮಾಣುಜೀವಿಯೊಂದರಿಂದ ಬೇರ್ಪಡಿಸಿ, ಮತ್ತೊಂದು ತೀರಾ ಭಿನ್ನವಾದ ಜೀವಿ (ಪ್ರಾಣಿ ಯಾ ಸಸ್ಯ) ಯೊಳಕ್ಕೆ ಸೇರಿಸಿ ಗುಣ ವರ್ಗಾಯಿಸುವ ಪ್ರಯತ್ನಗಳು ಯಶಸ್ವಿಯಾದೊಡನೆಯೇ ಅಪರಿಮಿತ ಸಾಧ್ಯತೆಗಳ ಹೊಸ ಲೋಕವೊಂದು ತೆರೆದುಕೊಂಡಿತು.

ಒಂದೆಡೆಯಿಂದ ಕಿತ್ತು ಇನ್ನೊಂದೆಡೆ ನೆಡುವ ಈ ಕ್ರಿಯೆ ಒಂದು ರೀತಿಯ ಇಂಜಿನಿಯರಿಂಗ್ ಕೆಲಸವಾದ್ದರಿಂದ ಇದಕ್ಕೆ ಜೆನೆಟಿಕ್ ಇಂಜಿನಿಯರಿಂಗ್ ಎಂಬ ಹೆಸರು ಸಂದಿತು.

ಕಳೆದ ಕೆಲವು ವರ್ಷಗಳಿಂದ ವಿವಾದಕ್ಕೊಳಗಾಗಿರುವ ಬಿಟಿ ಹತ್ತಿ, ಬಿಟಿ ಬದನೆ

ಜೆನೆಟಿಕ್ ಇಂಜಿನಿಯರಿಂಗ್‌ನ ಸೃಷ್ಟಿಗಳು. ಎರಡರಲ್ಲಿಯೂ ಮಣ್ಣಿನಲ್ಲಿ ವಾಸಿಸುವ ಬ್ಯಾಸಿಲಸ್ ಥುರಿಂಜಿಯನ್ಸಿಸ್ ಹೆಸರಿನ ಬ್ಯಾಕ್ಟೀರಿಯಾದ ಕೀಟನಾಶಕ ಪ್ರೊಟೀನ್ ಗುಣಾಣುವನ್ನು ಜೆನೆಟಿಕ್ ಇಂಜಿನಿಯರಿಂಗ್ ತಂತ್ರದಿಂದ ಸೇರಿಸಿ ಸೂಚ್ಯವಾಗಿ ಬಿಟಿ ಬೆಳೆಗಳು ಎನ್ನಲಾಗಿದೆ.

ಬಿಟಿ ಹತ್ತಿ ಕಾಯಿಕೊರಕ ಕೀಟಕ್ಕೆ ಮಾರಕವಾದರೆ ಬದನೆಕಾಯಿ ಕೊರೆಯುವ ಹುಳುವಿಗೆ ಬಿಟಿ ಬದನೆ ಅಸ್ತ್ರವಾಯ್ತು.

ತಮ್ಮ ಪ್ರಭೇದ ಅಥವಾ ಕುಲದಲ್ಲಿಲ್ಲದ ಗುಣವನ್ನು ಬೇರೊಂದು ಜೀವಿಯಿಂದ ಪಡೆದ ಇವನ್ನೇ ಟ್ರಾನ್ಸ್‌ಜೆನಿಕ್ ಬೆಳೆಗಳು ಅಥವಾ ಜೆನೆಟಿಕಲಿ ಮಾಡಿಫೈಯ್ಡ್ (GM) ಬೆಳೆಗಳು ಎನ್ನುವುದು.

ಯಾವುದೇ ಕುಲಾಂತರಿ ತಳಿಯನ್ನು ಬಿಡುಗಡೆ ಮಾಡಬೇಕಾದರೆ ಅದು ಮಾನವ ಹಾಗೂ ಪ್ರಾಣಿಗಳ ಆರೋಗ್ಯಕ್ಕೆ ಹಾನಿಯುಂಟುಮಾಡುವದಿಲ್ಲ ಹಾಗೂ ಪರಿಸರಕ್ಕೆ ಅದರಿಂದ ಧಕ್ಕೆಯಾಗುವದಿಲ್ಲ ಎನ್ನುವದನ್ನು ದೃಢೀಕರಿಸಿಕೊಳ್ಳಬೇಕು. ಅದಕ್ಕಾಗಿ ತಳಿಯನ್ನು ಸುಮಾರು ೩೬ ಸುದೀರ್ಘ ಕಠಿಣ ಪರೀಕ್ಷಣೆಗಳಿಗೊಡ್ಡಿ ಅದು ಸರ್ವರೀತಿಯಲ್ಲೂ ಸುರಕ್ಷಿತ ಎಂಬುದನ್ನು ಪ್ರಮಾಣೀಕರಿಸಿದ ನಂತರವೇ ಅದನ್ನು ಬಿಡುಗಡೆ ಮಾಡುವುದು.

ಮೊತ್ತ ಮೊದಲ ಟ್ರಾನ್ಸ್‌ಜೆನಿಕ್ ಸಸ್ಯ ಸೃಷ್ಟಿಯಾಗಿದ್ದು ೩೦ ವರ್ಷಗಳ ಹಿಂದೆ. ಕುಲಾಂತರಿ ತಳಿಯ ವಾಣಿಜ್ಯೀಕರಣವಾದದ್ದು ೧೯೯೩ರಲ್ಲಿ. ಕಳೆದ ಎರಡು ದಶಕಗಳಲ್ಲಿ ಕುಲಾಂತರಿ ಬೆಳೆಗಳು ಸಾಂಪ್ರದಾಯಿಕ ತಳಿಗಳ ಮೇಲೆ ಮೇಲುಗೈ ಸಾಧಿಸಿವೆ.

ಕಳೆದ ವರ್ಷ ವಿಶ್ವದ ೧೫೩೦ ಕೋಟಿ ಹೆಕ್ಟೇರ್ ಬೇಸಾಯ ಯೋಗ್ಯ ಭೂಮಿಯ ಶೇಕಡ ೧೨ರಷ್ಟು ಭಾಗ ಕುಲಾಂತರಿ ಬೆಳೆಗಳಿಂದಾವೃತವಾಗಿತ್ತು. ಜಗತ್ತಿನ ೨೮ ದೇಶಗಳು ೧೭ ಕೋಟಿ ಹೆಕ್ಟೇರುಗಳಲ್ಲಿ ಕುಲಾಂತರಿ ಬೆಳೆ ಇಟ್ಟಿದ್ದವು. ಇದರಲ್ಲಿ ೧೫ ಕೋಟಿ ೨೦ ಲಕ್ಷ ಹೆಕ್ಟೇರ್, ಯು.ಎಸ್.ಎ., ಬ್ರೆಜಿಲ್, ಅರ್ಜೆಂಟೈನಾ, ಕೆನಡಾ ಮತ್ತು ಭಾರತ ದೇಶಗಳಲ್ಲಿತ್ತು. ಸೊಯಾ ಅವರೆ, ಮೆಕ್ಕೆಜೋಳ, ಹತ್ತಿ ಮತ್ತು ಕೆನೊಲ (ಸಾಸಿವೆ ಜಾತಿಯ ಎಣ್ಣೆಬೀಜ – ಕೆನಡಾದಲ್ಲಿ ಜನಪ್ರಿಯ) ಕುಲಾಂತರಿ ಬೆಳೆಗಳಲ್ಲಿ



## ಭಾರತದಲ್ಲಿ ತಳಿ ಮಾರ್ಪಡಿತ ತಳಿಗಳು ಅಥವಾ ಜಿ. ಎಂ. ತಳಿಗಳು

ಪ್ರಸ್ತುತವಾಗಿ ಪ್ರಪಂಚದಲ್ಲಿ ತಳಿ ಮಾರ್ಪಡಿತ ಹತ್ತಿ ಬೆಳೆಯ ವಿಸ್ತೀರ್ಣ ಸುಮಾರು ೨೫ ದಶಲಕ್ಷ (ಎರಡೂವರೆ ಕೋಟಿ) ಹೆಕ್ಟೇರುಗಳಷ್ಟಿದೆ. ಇದರಲ್ಲಿ ಕಳೆನಾಶಕ ನಿರೋಧಕ ತಳಿಗಳಿವೆಯಾದರೂ ಕಾಯಿ ಕೊರೆಯುವ ಕೀಟನಾಶಕ ಗುಣದ ಬಿಟಿ ತಳಿಗಳದ್ದೇ ಮೇಲುಗೈ.

ವಿಶ್ವದ ಹತ್ತಿ ಉತ್ಪಾದಕ ದೇಶಗಳಲ್ಲಿ ಎರಡನೆಯ ಸ್ಥಾನದಲ್ಲಿರುವ ಭಾರತ (ಮೊದಲ ಸ್ಥಾನ ಚೀನಾದ್ದು) ಸುಮಾರು ೧೨ ದಶಲಕ್ಷ ಹೆಕ್ಟೇರು ಪ್ರದೇಶದಲ್ಲಿ ಹತ್ತಿ ಬೆಳೆಯುತ್ತಿದೆ. ಬಿಟಿ ಹತ್ತಿ ಇಂದು ಭಾರತದ ಏಕೈಕ ಜಿಎಂ ಬೆಳೆ. ಬಹುರಾಷ್ಟ್ರೀಯ ಮೊನ್ಸಾಂಟೋ ಕಂಪನಿ, ಭಾರತೀಯ ಕಂಪನಿ ಮಹಿಕೋ ಜೊತೆಯ ಜಾಯಿಂಟ್ ವೆಂಚರ್ ಮೂಲಕ ಕೈಗೊಂಡ ಸುಮಾರು ೫ ವರ್ಷಗಳ ವಿವರವಾದ ಪ್ರಯೋಗ ಪರೀಕ್ಷಣೆಗಳ ನಂತರ ೨೦೦೨ರಲ್ಲಿ ಬಿಟಿ ಹತ್ತಿಯನ್ನು ಬಿಡುಗಡೆ ಮಾಡಿತು. ನಂತರ ಮೊನ್ಸಾಂಟೋ ಕಂಪನಿಯಿಂದ ಬಿಟಿ ಗುಣದ ಪರವಾನಗಿ (ಲೈಸೆನ್ಸ್) ಪಡೆದ ಹಲವಾರು ಭಾರತೀಯ ಬೀಜ ಕಂಪನಿಗಳು ಅದನ್ನು ತಮ್ಮ ಹೈಬ್ರಿಡ್‌ಗಳಿಗೆ ಸೇರಿಸಿದವು. ೨೦೧೦ರ ವೇಳೆಗೆ ಈ ಎಲ್ಲ ಕಂಪನಿಗಳ ೭೮೦ ಬಿಟಿ ಹೈಬ್ರಿಡ್‌ಗಳು ಮತ್ತು ಒಂದು ಬಿಟಿ ತಳಿ ೯.೪ ದಶಲಕ್ಷ ಹೆಕ್ಟೇರು (ಹತ್ತಿ ಬೆಳೆಯ ಒಟ್ಟು ವಿಸ್ತೀರ್ಣದ ಶೇ. ೮೬ರಷ್ಟು) ಭಾಗವನ್ನಾವರಿಸಿದವು.

ಬಿಟಿ ತಳಿಗಳಿಂದಾಗಿ ದೇಶದ ಹತ್ತಿ ಉತ್ಪಾದನೆ ಶೇ. ೬೦ರಷ್ಟು ಹೆಚ್ಚಾಗಿದೆಯೆಂಬ ವರದಿಗಳಿವೆ. ಆದರೆ ಉತ್ಪಾದನೆಯ ಅಧಿಕಾಂಶ ಹೆಚ್ಚಳವಾದದ್ದು ಅಧಿಕ ಇಳುವರಿ ನೀಡುವ ಹೈಬ್ರಿಡ್ ತಳಿಗಳು ಮತ್ತು ಮೂಲ ಸೌಕರ್ಯ (ಉದಾಹರಣೆಗೆ, ಗುಜರಾತ್‌ನಲ್ಲಿ ಹೆಚ್ಚಿನ ನೀರಾವರಿ ಸೌಲಭ್ಯ)ಗಳ ಅಭಿವೃದ್ಧಿಯಿಂದಾಗಿ. ಬಿಟಿ ಹತ್ತಿಯ ಕೊಡುಗೆಯೇನಿದ್ದರೂ ಅತ್ಯಲ್ಪ ಎಂಬುದು ತಜ್ಞರ ಅಭಿಮತ.

ಈ ಭಿನ್ನಾಭಿಪ್ರಾಯಗಳ ಜೊತೆಗೆ 'ಕಾಯಿಕೊರಕ ಕೀಟನಾಶಕಗಳ ಬಳಕೆಯೇನೋ ತಗ್ಗಿದೆ. ಆದರೆ ಎಲೆಹೀರಿ ಹುಳುವಿಗೆ ಔಷಧಿ ಹೊಡೆಯಲೇ ಬೇಕಲ್ಲ' ಎಂಬುದು ಬೆಳೆಗಾರರ ಅಳಲು.

ಬಿಟಿ ಹತ್ತಿಗೆ ಕಳೆನಾಶಕ ನಿರೋಧಕ ಗುಣ ಸೇರಿಸಲಾಗಿದ್ದು ಆ ತಳಿ ಬಿಡುಗಡೆಗಾಗಿ ಕಾಯುತ್ತಲಿದೆ.

ಮೆಕ್ಕೆಜೋಳದಲ್ಲಿ ಕಾಂಡ ಕೊರೆಯುವ ಕೀಟ ನಿರೋಧಕತೆಯ ಜೊತೆಗೆ ತೆನೆಯನ್ನು ಬಾಧಿಸುವ ಹುಳು ಹಾಗೂ ಕಳೆನಾಶಕ ಸಹಿಷ್ಣು ಗುಣಗಳನ್ನೂ ಸೇರಿಸಲಾದ ತಳಿ ಪರೀಕ್ಷಣೆಯ ಹಂತಗಳನ್ನು ದಾಟಿ ಈಗ ಬಿಡುಗಡೆಗೆ ಸಿದ್ಧವಾಗಿದೆ.

ಕಳೆನಾಶಕ ಸಹಿಷ್ಣುತೆ ಹಾಗೂ ಕೀಟ ನಿರೋಧಕ ಗುಣಗಳದ್ದೇ ಸಿಂಹಪಾಲು, ಹೋದ ವರ್ಷ ಜಗತ್ತಿನಲ್ಲಿ ಬಳಕೆಯಾದ ಕುಲಾಂತರಿ ತಳಿ ಬೀಜದ ಮೌಲ್ಯ ೧೫೬೦೦ ಕೋಟಿ ಡಾಲರ್ !

ಹೋದ ವರ್ಷ ಕುಲಾಂತರಿ ಬೆಳೆ ವಿಸ್ತೀರ್ಣದಲ್ಲಿ ೬ನೇ ಸ್ಥಾನದಲ್ಲಿರುವ ಚೀನಾ ದೇಶದ ೭೨ ಲಕ್ಷ ರೈತರು ೪೦ ಲಕ್ಷ ಹೆಕ್ಟೇರಿನಲ್ಲಿ ಕುಲಾಂತರಿ ಬೆಳೆ ಬಿತ್ತಿದ್ದರು.

೨೦೧೨ರಲ್ಲಿ ಮೊದಲ ಬಾರಿಗೆ ಕ್ಯೂಬಾ ಹಾಗೂ ಸುಡಾನ್ ದೇಶಗಳು ಕ್ರಮವಾಗಿ ಬಿಟಿ ಮೆಕ್ಕೆ ಜೋಳ ಮತ್ತು ಬಿಟಿ ಹತ್ತಿ ಬೆಳೆದವು.

ಮೇಲಿನ ಎಲ್ಲ ವಿವರಗಳಿಂದ ಕುಲಾಂತರಿ ಬೆಳೆಗಳ ಜನಪ್ರಿಯತೆ ಶೀಘ್ರಗತಿಯಲ್ಲಿ ಬೆಳೆಯುತ್ತ ಇರುವುದು ಸಾಬೀತಾಗುತ್ತದೆ. ಈ ಬೆಳೆಗಳ ವಿಸ್ತೀರ್ಣದಲ್ಲಿ ಭಾರತ ೫ನೆಯ ಸ್ಥಾನದಲ್ಲಿರುವದು ಗಮನಾರ್ಹ ಸಂಗತಿ.

ಕುಲಾಂತರಿ ಬೆಳೆಗಳ ವಿಷಯದಲ್ಲಿ ಭಾರತ ಕವಲು ಹಾದಿಯಲ್ಲಿದೆ. ಸ್ವಾತಂತ್ರ್ಯಾನಂತರದ ಆರು ದಶಕಗಳಲ್ಲಿ ದೇಶದ ಜನಸಂಖ್ಯೆ ಎರಡು ಪಟ್ಟು ಹೆಚ್ಚಾಗಿದೆ. ಇಂದು ೧೨೦ ಕೋಟಿ ಜನಕ್ಕೆ ಆಹಾರವೊದಗಿಸುವ ಸವಾಲಿಗೆ ಈ ಬೆಳೆಗಳು ಪರ್ಯಾಯ ಪರಿಹಾರಗಳನ್ನು ಕಲ್ಪಿಸಬಲ್ಲವು.

ಕುಲಾಂತರಿ ಬೆಳೆಗಳು ಮಾನವರ ಮತ್ತು ಪ್ರಾಣಿಗಳ ಆರೋಗ್ಯಕ್ಕೆ ಅಪಾಯಕರ; ಕೃಷಿಯಾಧಾರಿತ ದೇಶದ ಆರ್ಥಿಕತೆಗೆ ಮಾರಕ; ಇವು ಪರಿಸರ ಹಾಗೂ ಜೀವಾವಾಸಕ್ಕೆ ಅಗೋಚರ, ಅನೂಹ್ಯ ಧಕ್ಕೆಗಳನ್ನುಂಟುಮಾಡಬಹುದು; ಸಣ್ಣ ರೈತರನ್ನು ದುಬಾರಿ ಬೆಲೆಯ ಬೀಜ ಕೊಳ್ಳಲೇಬೇಕಾದ ಅನಿವಾರ್ಯತೆಗೆ ಒಡ್ಡುತ್ತವೆ... ಎಂಬಿತ್ಯಾದಿ ಆತಂಕಗಳು ಹಲವು ಜನರ ಮನದಲ್ಲಿವೆ. ಇವಕ್ಕೆ ಸೂಕ್ತ ಆಧಾರ ಅಥವಾ ಕಾರಣಗಳಿಲ್ಲ.

ದೇಶದಲ್ಲಿ ಆಹಾರದ ತೀವ್ರ ಕೊರತೆಯಿದ್ದಾಗ ಹಸಿರುಕ್ರಾಂತಿ ನಮ್ಮ ನೆರವಿಗೆ ಬಂತು. ಅರವತ್ತರ ದಶಕದಲ್ಲಿ ಅಧಿಕ ಪೋಷಕಾಂಶಗಳನ್ನುಂಡು, ಹೆಚ್ಚಿನ ಇಳುವರಿ ನೀಡುವ ರೋಗ ನಿರೋಧಕ ಗಿಡ್ಡ ಗೋಧಿ ತಳಿಗಳು, ಜೋಳದ ಸಂಕರ ತಳಿಗಳು, ಆಹಾರೋತ್ಪಾದನೆಯನ್ನು ಗಣನೀಯವಾಗಿ ಹೆಚ್ಚಿಸಿದವು. ಇಂದು ನಾವು ಆಹಾರ ಕ್ಷೇತ್ರದಲ್ಲಿ ಸ್ವಾವಲಂಬಿಗಳಾಗಿರುವುದು ಹಸಿರು ಕ್ರಾಂತಿಯಿಂದಾಗಿ.

ಕುಲಾಂತರಿ ಬೆಳೆಗಳಿಗೆ ಮತ್ತೊಂದು ಪರಿಸರಸ್ನೇಹಿ ಹಸಿರು ಕ್ರಾಂತಿಯನ್ನುಂಟುಮಾಡುವ ಸಾಮರ್ಥ್ಯವಿದೆ. ಬಿಟಿ ತಳಿಗಳಿಂದ ಮೊದಲ ೧೫ ವರ್ಷಗಳಲ್ಲಿ ಸುಮಾರು ೪ ಲಕ್ಷ ಟನ್ ಕೀಟನಾಶಕಗಳ ಬಳಕೆ ತಗ್ಗಿದೆ.

ಜೊತೆಗೆ ವೈರಾಣು ರೋಗ ನಿರೋಧಕ ಮರಗೆಣಸು, 'ಎ' ವಿಟಮಿನ್ ಭರಿತ ಬಂಗಾರದ ಭತ್ತ, ಅಧಿಕ ಪೋಷಕಾಂಶಗಳುಳ್ಳ ಕಿತ್ತಳೆ ಬಣ್ಣದ ಸಿಹಿಗೆಣಸು ನಮ್ಮ ಕೃಷಿ ಮತ್ತು ಆಹಾರ ಪದ್ಧತಿಗಳನ್ನು ಗಣನೀಯವಾಗಿ ವೃದ್ಧಿಸಬಲ್ಲವು.

ಆದರೆ ಕೇಂದ್ರ ಸರ್ಕಾರದಲ್ಲಿ ಈ ತಳಿಗಳ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಕೃಷಿ ಮಂತ್ರಿಗಳು ಇವನ್ನು ಬೆಂಬಲಿಸಿದರೆ ಹಿಂದಿನ ಪರಿಸರ ಮತ್ತು ಅರಣ್ಯಖಾತೆಯ ಸಚಿವರು ಬಿಟಿ ಬದನೆಯನ್ನು ನಿಷೇಧಿಸಿದರು. ಕುಲಾಂತರಿ ತಳಿಗಳ ಸುರಕ್ಷಿತತೆಯನ್ನು ದೃಢಪಡಿಸಿಕೊಂಡು ಅವುಗಳ ಬಿಡುಗಡೆಗೆ ಒಪ್ಪಿಗೆ ನೀಡುವ ಸಮಿತಿಯನ್ನು ಪುನಾರಚಿಸುವ ಪ್ರಯತ್ನಗಳು ಆಮೆ ನಡಿಗೆಯಲ್ಲಿವೆ. ಪೃಥಕ್ಕರಿತ ಚರ್ಚೆಗಳಿಂದಾಗಿ ಒಮ್ಮತಕ್ಕೆ ಬರಲು ಸಾಧ್ಯವಾಗುತ್ತಿಲ್ಲ.

'ಪ್ರತಿಯೊಂದು ಕಥೆಗೆ ಮೂರು ಮಗ್ಗುಲು ಗಳಿರುತ್ತವೆ. ನಿನ್ನದು ನನ್ನದು ಹಾಗೂ ನಿಜವಾದದ್ದು' ಎನ್ನುವ ಮಾತು ಕುಲಾಂತರಿ ಬೆಳೆಗಳಿಗೂ ಅನ್ವಯಿಸುತ್ತದೆ. ಈ ಕುರಿತ ಪರ, ವಿರೋಧ ಚರ್ಚೆಗಳಲ್ಲಿ ನಿಜಸ್ಥಿತಿ ಕಳೆದುಹೋಗಿದೆ.




"ಈ ತಂತ್ರಜ್ಞಾನವನ್ನು ಸಮರ್ಥಿಸುವ, ನೂರಾರು ವೈಜ್ಞಾನಿಕ ಸಂಶೋಧನೆಗಳನ್ನಾಧರಿಸಿದ, ಉತ್ತಮ ವೈಜ್ಞಾನಿಕ ಪ್ರಕಟಣೆ ಹಾಗೂ ಅಭಿಪ್ರಾಯ ಗಳನ್ನು ಕಡೆಗಣಿಸಲಾಗುತ್ತಿದೆ. ಬದಲಿಗೆ, ಕೇವಲ ಬೆರಳೆಣಿಕೆಯಷ್ಟು ವಿರೋಧಿಗಳ ಅವೈಜ್ಞಾನಿಕ, ನ್ಯೂನ ಸಲಹೆಗಳ ಮೇರೆಗೆ ಸುಪ್ರೀಂ ಕೋರ್ಟ್ ನೇಮಿಸಿದ ತಾಂತ್ರಿಕ ತಜ್ಞರ ಸಮಿತಿ ಕುಲಾಂತರಿ ಬೆಳೆ ತಳಿಗಳನ್ನು ರೈತರ ಹೊಲಗಳಲ್ಲಿ ಪರೀಕ್ಷಿಸುವುದನ್ನು ನಿಷೇಧಿಸಿದೆ. ಇದು ದುರದೃಷ್ಟಕರ" ಎನ್ನುತ್ತಾರೆ ಅಮೆರಿಕದ ಅಯೋವಾ ವಿಶ್ವವಿದ್ಯಾನಿಲಯದ ಕೃಷಿತಜ್ಞ, ಭಾರತೀಯ ಸಂಜಾತ ಡಾ॥ ಶಾಂತು ಶಾಂತಾರಾಂ.

"ಕುಲಾಂತರಿ ತಳಿ ತಂತ್ರಜ್ಞಾನಕ್ಕೆ ವ್ಯಕ್ತಗೊಳ್ಳುತ್ತಲಿರುವ ವಿರೋಧ ಮತ್ತು ಆತಂಕಗಳು ಮೇಲ್ನೋಟಕ್ಕೆ ವೈಜ್ಞಾನಿಕವಾಗಿ ಕಂಡರೂ ಸೂಕ್ಷ್ಮವಾಗಿ ಗಮನಿಸಿದಾಗ ಅವುಗಳಿಗೆ ಯಾವುದೇ ವೈಜ್ಞಾನಿಕವಾದ ಸಾಕ್ಷ್ಯಾಧಾರಗಳಿಲ್ಲವೆಂಬ ಸತ್ಯ ಗೋಚರಿಸುತ್ತದೆ. ಕುಲಾಂತರಿ ತಳಿಗಳನ್ನು ಅತ್ಯಂತ ಕೂಲಂಕಷವಾಗಿ, ವಿಜ್ಞಾನದ ಪರೀಕ್ಷೆಗಳಿಗೊಡ್ಡಿ, ಅಧ್ಯಯನಗಳನ್ನು ಕೈಗೊಂಡ ವಿಜ್ಞಾನಿಗಳು, ತಜ್ಞರು ಸಾಕಷ್ಟು ಸಾಕ್ಷ್ಯಾಧಾರಗಳೊಂದಿಗೆ ಇವುಗಳ ಸುರಕ್ಷಿತತೆ ಕುರಿತು ತಿಳಿಯಹೇಳಿದರೂ ಅದಕ್ಕೆ ಕಿವಿಗೊಡದೆ ತಮ್ಮ ಮೊಂಡುವಾದವನ್ನೇ ಸಮರ್ಥಿಸಿಕೊಳ್ಳುವ ವಿರೋಧಿಗಳು ಇಲ್ಲ ಸಲ್ಲದ ಪುರಾವೆಗಳನ್ನು ಸೃಷ್ಟಿಸಿ, ಆತಂಕ ಹುಟ್ಟಿಸಿ ರಾಜಕಾರಣಿಗಳ ಮನವೊಲಿಸಿ ಕುಲಾಂತರಿ ವಿರೋಧಿ ನೀತಿಗಳನ್ನು ಜಾರಿಗೊಳಿಸುತ್ತಿದ್ದಾರೆ" ಎನ್ನುವ ಡಾ॥ ಶಾಂತಾರಾಂರವರ ಅಭಿಪ್ರಾಯ ಸರಿಯಾಗಿದೆ.

೨೦೧೨ರ ಆಗಸ್ಟ್‌ನಲ್ಲಿ ಕೃಷಿ ಕುರಿತ ಸಂಸದೀಯ ಸಮಿತಿ ಕುಲಾಂತರಿ ಬೆಳೆಗಳಿಂದ ಪರಿಣಾಮಕ್ಕೊಳಗಾಗಬಹುದಾದ ಹಲವರೊಡನೆ ಸಮಾಲೋಚಿಸಿ, ಇವುಗಳಿಂದ ಜೀವವೈವಿಧ್ಯ, ಮಾನವ ಮತ್ತು ಪ್ರಾಣಿ ಆರೋಗ್ಯ, ಪರಿಸರ ಮತ್ತು ಕೃಷಿಯ ಭವಿಷ್ಯದ ಮೇಲಾಗಬಹುದಾದ ಪರಿಣಾಮಗಳನ್ನು ಪರಿಗಣಿಸಿ, 'ಸದ್ಯಕ್ಕೆ ಕುಲಾಂತರಿ ತಳಿ ಕುರಿತ ಸಮಸ್ತ ಸಂಶೋಧನೆ ಮತ್ತು ಅಭಿವೃದ್ಧಿ ಯತ್ನಗಳನ್ನು ಪರಿರೋಧಿತ (Containment) ಪ್ರದೇಶದಲ್ಲಿ ಮಾತ್ರ ಮಾಡತಕ್ಕದ್ದು. ಎಲ್ಲ ಕ್ಷೇತ್ರ ಪರೀಕ್ಷೆ (field trial)ಗಳನ್ನು ನಿಲ್ಲಿಸಬೇಕು' ಎಂದು ಹೇಳಿದೆ.

"ಅಲ್ಲದೆ ೬೦ರ ದಶಕದಲ್ಲಿದ್ದ ಆಹಾರದ ಬಿಕ್ಕಟ್ಟಿನ ಪರಿಸ್ಥಿತಿ ಇಂದು ಇಲ್ಲ. ಆದ್ದರಿಂದ ಕುಲಾಂತರಿ ತಳಿ ಕುರಿತು ಯಾವುದೇ ತುರ್ತುಕ್ರಮ ಅನಗತ್ಯ" ಎಂಬುದು ಸಮಿತಿಯ ಅಭಿಪ್ರಾಯ.

ಪ್ರಾಯಶಃ "ತುರ್ತು ಪರಿಸ್ಥಿತಿಯುಂಟಾಗುವವರೆಗೆ ಕಾಯಬಹುದು, ನಂತರ ನೋಡಿದರಾಯ್ತು" ಎನ್ನುವದು ಇದರ ಇಂಗಿತ.

೨೦೧೩ ಏಪ್ರಿಲ್‌ನಲ್ಲಿ ಕೇಂದ್ರೀಯ ಪರಿಸರ ಮತ್ತು ಅರಣ್ಯ ಖಾತೆಯ ರಾಜ್ಯ ಸಚಿವರು ದೇಶದಲ್ಲಿ ೨೦ ಕುಲಾಂತರಿ ಬೆಳೆ ತಳಿಗಳ ಕ್ಷೇತ್ರ ಪರೀಕ್ಷೆಗೆ ಸರಕಾರ ಅನುಮತಿ ನೀಡಿರುವ ಸಂಗತಿಯನ್ನು ಸಂಸತ್ತಿನ ಮೇಲ್ಮನೆಯಲ್ಲಿ ಪ್ರಸ್ತಾಪಿಸಿದ್ದಾರೆ. ಈಗಾಗಲೇ ಹತ್ತಿ, ಮೆಕ್ಕೆಜೋಳ ಮತ್ತು ಸಾಸಿವೆ ತಳಿಗಳ ಕ್ಷೇತ್ರ ಪರೀಕ್ಷೆಗಳು ಶುರುವಾಗಿವೆ.

ಈವರೆಗೆ ಕುಲಾಂತರಿ ತಳಿಗಳನ್ನು ಪರೀಕ್ಷಿಸಿ, ಅವುಗಳ ವಾಣಿಜ್ಯೀಕರಣವನ್ನು ಅನುಮೋದಿಸುತ್ತಿರುವ ಜೆನೆಟಿಕ್ ಇಂಜಿನಿಯರಿಂಗ್ ಅನುಮೋದನಾ ಸಮಿತಿ ಜಿಇಎಸಿ ಬದಲಿಗೆ ಭಾರತೀಯ ಬಯೊಟೆಕ್ ನಿಯಂತ್ರಣ ಪ್ರಾಧಿಕಾರ (ಬಿಆರ್‌ಎಐ) ಸ್ಥಾಪಿಸುವ ಚಿಂತನೆ ನಡೆದಿದೆ.

೨೦೧೩ರ ಸೆಪ್ಟೆಂಬರಿನಲ್ಲಿ, ಇಟಲಿ ದೇಶದ ಪೆರುಜಿಯ ವಿಶ್ವವಿದ್ಯಾನಿಲಯದ ವಿಜ್ಞಾನಿಗಳ ತಂಡವೊಂದು ೨೦೦೨ರಿಂದ ೨೦೧೨ರ ಅವಧಿಯಲ್ಲಿ ಕುಲಾಂತರಿ ಬೆಳೆಗಳ ಬಗ್ಗೆ ಪ್ರಕಟಿತ ಸುಮಾರು ೧೮೦೦ ಸಂಶೋಧನಾ ಲೇಖನಗಳನ್ನು ಕೂಲಂಕಷವಾಗಿ ಪರಾಮರ್ಶಿಸಿ 'ಈವರೆಗೆ ನಡೆದಿರುವ ವೈಜ್ಞಾನಿಕ ಸಂಶೋಧನೆಗಳಲ್ಲಿ ಕುಲಾಂತರಿ ಬೆಳೆಗಳ ಬಳಕೆಯಿಂದ ಯಾವುದೇ ನೇರ, ಗಣನೀಯ ಅಪಾಯ ಪತ್ತೆಯಾಗಿಲ್ಲ. ಈ ಬೆಳೆಗಳು ಮಾನವ ಹಾಗೂ ಪ್ರಾಣಿಗಳ ಸೇವನೆಗೆ ಸಂಪೂರ್ಣ ಸುರಕ್ಷಿತ' ಎಂದು ಘೋಷಿಸಿದೆ.

ಜಾಗತಿಕವಾಗಿ ನಾವಿಂದು ಭೂಮಿಯ ಶೇಕಡಾ ೪೦ರಷ್ಟು ಭಾಗ (ವಿಸ್ತೀರ್ಣದಲ್ಲಿ ದಕ್ಷಿಣ ಅಮೆರಿಕ ಮತ್ತು ಆಫ್ರಿಕಾ ದೇಶಗಳಿಗೆ ಸಮ)ವನ್ನು ತೆರವುಗೊಳಿಸಿದ್ದೇವೆ. ಇದರಲ್ಲಿ ಸುಮಾರು ಭಾಗವನ್ನು ತ್ವರಿತವಾಗಿ ಬೆಳೆಯುತ್ತಿರುವ ಕೃಷಿಯೇತರ ಅಗತ್ಯಗಳು ಕಬಳಿಸುತ್ತಿವೆ. ಆಧುನಿಕ ಕೃಷಿಯಿಂದ ನೆಲ, ಜಲ ಸಂಪನ್ಮೂಲ ಮತ್ತು ಪರಿಸರ ಮಲಿನಗೊಳ್ಳುತ್ತಲಿವೆ. ವೇಗದಿಂದ ಬೆಳೆಯುತ್ತಿರುವ ವಿಶ್ವದ ೭೦೦ ಕೋಟಿ ಜನಸಂಖ್ಯೆಗೆ ಕ್ಷೀಣಿಸುತ್ತಲಿರುವ ನೆಲ, ಜಲ ಸಂಪನ್ಮೂಲ ಬಳಸಿ ಅಧಿಕ ಆಹಾರ ಉತ್ಪಾದಿಸುವ ದೈತ್ಯ ಸವಾಲು ವಿಶ್ವದ ಮುಂದಿದೆ. ಇನ್ನು ೨೦೫೦ರ ವೇಳೆಗೆ ಸುಮಾರು ೯೦೦ ಕೋಟಿ ಜಾಗತಿಕ ಜನಸಂಖ್ಯೆಗೆ ಆಹಾರವೊದಗಿಸುವ ಪರಿಸ್ಥಿತಿ ನೆನೆದರೇ ನಡುಕ ಹುಟ್ಟುತ್ತದೆ. ಅದಕ್ಕೆ ಪೂರ್ವಭಾವಿ ಸಿದ್ಧತೆಯಾಗಿ ವಿಶ್ವದ ಸುಮಾರು ೩೦ಕ್ಕೂ ಅಧಿಕ



ಪ್ರಾಯೋಗಿಕ ಹಂತದಲ್ಲಿರುವ ಅಕ್ಕಿ, ಅಲಸಂದೆ ಮತ್ತು ಮೆಕ್ಕೆಜೋಳದ ಕುಲಾಂತರಿ ತಳಿಗಳು ಕೋಟ್ಯಂತರ ಜನರ ಬದುಕನ್ನೇ ಬದಲಿಸಲಿವೆ.

ದಿನನಿತ್ಯದ ಊಟಕ್ಕೆ ಅನ್ನವನ್ನೇ ನಂಬಿರುವ ೪೦ ಕೋಟಿ ಬಡವರು ಮತ್ತು 'ಎ' ಅನ್ನಾಂಗದ ಅಭಾವ ಪೀಡಿತ ೨೫ ಕೋಟಿ ಶಾಲಾಪೂರ್ವ ವಯಸ್ಸಿನ ಮಕ್ಕಳಿಗೆ ವರವಾಗಬಲ್ಲ, ಪ್ರೊ॥ ವಿಟಾಮಿನ್ ಎ ವರ್ಧಿತ ಬಂಗಾರದ ಅಕ್ಕಿ, ಎ ಜೀವಸತ್ವದ ಕೊರತೆಯಿಂದ ಅಸುನೀಗುವ ಹಸುಳೆಗಳಿಗೆ ಸಂಜೀವಿನಿಯೂ ಆದೀತು.

ಆಫ್ರಿಕದ ೨೦ ಕೋಟಿ ಜನರ ಆಹಾರ ಅಲಸಂದೆಯ ಕಾಯಿಕೊರಕ ನಿರೋಧಕ ತಳಿಯಿಂದ ಶೇ. ೬೭ರಷ್ಟು ಕೀಟನಾಶಕ ಬಳಕೆ ತಗ್ಗಿಸಿ, ಶೇ. ೭೦ರಷ್ಟು ಅಧಿಕ ಇಳುವರಿ ಪಡೆಯಬಹುದು.

ಮೂವತ್ತು ಕೋಟಿ ಆಫ್ರಿಕನ್ನರ ಆಹಾರ ಮೆಕ್ಕೆಜೋಳದಲ್ಲಿ ಬರನಿರೋಧಕ ತಳಿಯಿಂದ ಶೇ. ೩೦ರಷ್ಟು ಇಳುವರಿ ವೃದ್ಧಿ ಸಾಧ್ಯ.

ದೇಶಗಳು ಕುಲಾಂತರಿ ತಳಿಗಳನ್ನು ಅಂಗೀಕರಿಸಿ ಅವುಗಳಿಂದ ಪ್ರಯೋಜನ ಪಡೆಯುತ್ತಲಿವೆ.

ಭಾರತವೂ ಈ ನಿಟ್ಟಿನಲ್ಲಿ ಸರಿಯಾದ ನಿರ್ಧಾರ ಕೈಗೊಂಡು ಮುಂದುವರಿಯುವುದು ಒಳ್ಳೆಯದು.

'ವಿಜ್ಞಾನವೊಂದು ಭ್ರಮೆಯಲ್ಲ. ಆದರೆ ವಿಜ್ಞಾನ ನಮಗೆ ನೀಡಲಾಗದ್ದನ್ನು ನಾವು ಬೇರೆಡೆಯಿಂದ ಪಡೆದುಕೊಳ್ಳುತ್ತೇವೆಂದು ಊಹಿಸಿಕೊಳ್ಳುವುದು ಭ್ರಾಂತಿಯಾದೀತು' ಎಂಬ ಮಾತಿದೆ. ಇದು ಕುಲಾಂತರಿ ತಳಿ ವಿಜ್ಞಾನಕ್ಕೂ ಅನ್ವಯಿಸುತ್ತದೆ.

ಕುಲಾಂತರಿ ತಳಿಗಳು ಹೊಸ, ಹೊಸ ಪರ್ಯಾಯಗಳನ್ನು ಕಲ್ಪಿಸುತ್ತಲಿವೆ. ಅವುಗಳನ್ನು ಜಾಣತನದಿಂದ ಬಳಸಿಕೊಂಡು ಲಾಭ ಪಡೆಯುವ ದಿಶೆಯಲ್ಲಿ ಚಿಂತನೆ ನಡೆಯಬೇಕು.

ಕುಲಾಂತರಿ ತಳಿಗಳ ಲಾಭಸಾಧ್ಯತೆ ಮತ್ತು ಅಪಾಯ ಸಂಭವಗಳನ್ನು ನಿಷ್ಪಕ್ಷಪಾತದಿಂದ ವಿಮರ್ಶಿಸುವುದು ಅಗತ್ಯ. ಕೃಷಿಯ ಎಲ್ಲ ಸಮಸ್ಯೆಗಳಿಗೂ ಇವು ಪರಿಹಾರವಾಗಲಿಕ್ಕಿಲ್ಲ. ಆದರೆ ಇಳುವರಿ, ಪೌಷ್ಟಿಕಾಂಶಗಳ ಮೌಲ್ಯವರ್ಧನೆಗೆ ಸಹಾಯಕವಾಗಿ, ರಸಗೊಬ್ಬರ ಮತ್ತು ಕೀಟನಾಶಕಗಳ ಅತೀ ಬಳಕೆ ತಡೆದು ನೀರಿನ ಸಮರ್ಪಕ ಬಳಕೆಗೆ ನೆರವಾಗುತ್ತವೆ. ಸ್ವಷ್ಟ ಪರಿಸರೀಯ ಹಾಗೂ ಪರಿಸರ ವಿಜ್ಞಾನದ ಲಾಭಗಳನ್ನು ನೀಡುವ ಕುಲಾಂತರಿ ತಳಿಗಳು ನಿಸ್ಸಂದೇಹವಾಗಿ ಭವಿಷ್ಯದ ಬೆಳೆಗಳು.

ಬರನಿರೋಧಕ ಮೆಕ್ಕೆಜೋಳ ಅಮೆರಿಕದಲ್ಲಿ ಈ ವರ್ಷ ಮಾರುಕಟ್ಟೆಗೆ ಬಂದಿದೆ. ಲಘು ಪೋಷಕಾಂಶವರ್ಧಿತ ಬಂಗಾರದ ಅಕ್ಕಿ ಭಾರತ ಮತ್ತಿತರ ದೇಶಗಳಲ್ಲಿ ವಾಣಿಜ್ಯೀಕರಣಕ್ಕೆ ತಯಾರಾಗಿದೆ. ಇವುಗಳಿಂದ ಪ್ರಯೋಜನ ಪಡೆಯಬೇಕು.

ಊಹಾಪೋಹಗಳಿಂದ ಪ್ರೇರಿತ ಕಾಲ್ಪನಿಕ ಭಯದಿಂದಾಗಿ ಅಪಾರ ಸಾಮರ್ಥ್ಯವುಳ್ಳ ಕುಲಾಂತರಿ ತಳಿ ತಂತ್ರಜ್ಞಾನ ಅವಕಾಶ ವಂಚಿತವಾಗಬಾರದು. ಇಂದು ನಮಗೆ ಅನಿವಾರ್ಯವೆನ್ನಿಸಿರುವ ಹಲವು ಹತ್ತು ತಂತ್ರಜ್ಞಾನಗಳಂತೆ ಇದಕ್ಕೂ ಹೇರಳ ಸಾಧ್ಯತೆಗಳಿವೆ. 'ವಿಜ್ಞಾನ ಶಿಷ್ಟ ಸೇವಕನಾಗಬಲ್ಲುದು, ಆದರೆ ದುಷ್ಟ ಧಣಿಯಾದೀತು' ಎಂಬ ಮಾತಿದೆ.

ಯಾವುದೇ ತಂತ್ರಜ್ಞಾನವನ್ನು ನಮ್ಮ ಒಳಿತಿಗಷ್ಟೇ ದುಡಿಸಿಕೊಳ್ಳುವ ವಿವೇಚನೆ ನಮಗಿರಬೇಕು. ಬೆಂಕಿಯಿಂದಾಗಬಹುದಾದ ಅನಾಹುತ, ಅವಘಡಗಳಿಗೆ ಹೆದರಿ ಆದಿಮಾನವ ಅಗ್ನಿಯನ್ನು ಕಂಡುಹಿಡಿಯದಿದ್ದರೆ ನಾವೆಲ್ಲಾ ಚಳಿಯಿಂದ ಮರಗಟ್ಟಿ ಸಾಯುತ್ತಿದ್ದೆವು.

ತಂತ್ರಜ್ಞಾನದಿಂದೊದಗಬಹುದಾದ ಅಪಾಯ ಸಾಧ್ಯತೆಗಳನ್ನು ಮುಂದಾಗಿಯೇ ಅರಿತು ಅವನ್ನು ತಡೆಯುವ, ತೊಡೆಯುವ ವಿಧಿವಿಧಾನಗಳನ್ನು ರೂಪಿಸುವ ಮೂಲಕ ಅದರಿಂದ ಅತಿ ಹೆಚ್ಚು ಪ್ರಯೋಜನ ಪಡೆಯುವ ದಿಶೆಯಲ್ಲಿ ಯೋಚಿಸುವುದು ಜಾಣತನ.

**ಡಾ॥ ಶರಣಬಸವೇಶ್ವರ ಅಂಗಡಿ**
ನಂ. ೫೮೨, 'ವಚನ', ೬ನೇ ಅಡ್ಡರಸ್ತೆ, 'ಎ' ಬ್ಲಾಕ್, ಸಹಕಾರನಗರ, ಬೆಂಗಳೂರು – ೫೬೦ ೦೯೨

**ಕೆ**ಲವು ವರ್ಷಗಳಿಂದ ಜೈವಿಕ ತಂತ್ರಜ್ಞಾನದ ಬಗ್ಗೆ ಸಾರ್ವಜನಿಕ ವಲಯದಲ್ಲಿ ಬಹಳಷ್ಟು ಚರ್ಚೆ ನಡೆಯುತ್ತಿದೆ. ಸರ್ಕಾರ, ಜೈವಿಕ ತಂತ್ರಜ್ಞಾನದಲ್ಲಿ ತೊಡಗಿರುವ ಉದ್ಯಮ, ಅದರ ಪರ ಮತ್ತು ವಿರೋಧ ವ್ಯಕ್ತಪಡಿಸುತ್ತಿರುವ ನಾಗರಿಕ ಸಮಾಜ (ಸಿವಿಲ್ ಸೊಸೈಟಿ ಅಥವಾ ಸರ್ಕಾರೇತರ ಸಂಸ್ಥೆಗಳು) ಪರಸ್ಪರ ತಮ್ಮದೇ ಅಂಕಿ-ಅಂಶಗಳನ್ನು ಉದ್ಧರಿಸುತ್ತಾ ಸಾಮಾನ್ಯ ನಾಗರಿಕರಲ್ಲಿ ಸಾಕಷ್ಟು ಗೊಂದಲವನ್ನೂ ಸೃಷ್ಟಿ ಮಾಡಿವೆ. ವಿಶೇಷವಾಗಿ ಆಧಾರದ ವಿಷಯದಲ್ಲಿ ಜೈವಿಕವಾಗಿ ಮಾರ್ಪಡಿಸಿದ ಅಥವಾ ಕುಲಾಂತರಿ ಬೆಳೆಗಳ ಬಗ್ಗೆ ವಾದವಿವಾದ ಸತತವಾಗಿ ನಡೆಯುತ್ತಲೇ ಇದೆ. ಔಷಧ ಕ್ಷೇತ್ರದಲ್ಲಿ ಜೈವಿಕ ತಂತ್ರಜ್ಞಾನವನ್ನು ಒಪ್ಪಿಕೊಂಡಿರುವ ನಾಗರಿಕರು ಅಷ್ಟೇ ಸುಲಭವಾಗಿ ಆಹಾರದ ವಿಷಯದಲ್ಲಿ ಅದನ್ನು ಸ್ವಾಗತಿಸುತ್ತಿಲ್ಲ. ಕುಲಾಂತರಿ ಬದನೆಕಾಯಿಗೆ ಅನುಮತಿ ನೀಡುವ ಬಗ್ಗೆ ರಾಷ್ಟ್ರವ್ಯಾಪಿ ವಿರೋಧ ವ್ಯಕ್ತವಾಗಿದ್ದನ್ನು ಇಲ್ಲಿ ಸ್ಮರಿಸಬಹುದು. ಇತ್ತೀಚೆಗೆ ಯುರೋಪಿಯನ್ ರಾಷ್ಟ್ರಗಳು ಸಹ ಕುಲಾಂತರಿ ಆಹಾರ ಪದಾರ್ಥಗಳನ್ನು ನಿಷೇಧಿಸಲು ಮುಂದಾಗಿವೆ.

ಜೈವಿಕ ತಂತ್ರಜ್ಞಾನಕ್ಕೆ ಸಂಬಂಧಪಟ್ಟಂತೆ ನಮ್ಮ ದೇಶದಲ್ಲಿ ಯಾವುದೇ ಖಚಿತವಾದ ನಿಲುವು ಹೊರ ಬಂದಿಲ್ಲ. ಅಥವಾ ಇದಕ್ಕೆಂದೇ ಪ್ರತ್ಯೇಕ ನಿಯಂತ್ರಣಾ ವ್ಯವಸ್ಥೆ ಇಲ್ಲ. ಪರಿಸರ ಸಂರಕ್ಷಣಾ ಕಾನೂನಿನ ಅಡಿಯಲ್ಲಿ ಕೆಲವೊಂದು ನಿಯಮಗಳಿವೆ. ಜೈವಿಕ ತಂತ್ರಜ್ಞಾನಕ್ಕೆ ಮತ್ತು ಕುಲಾಂತರಿ ಬೆಳೆಗೆ ವ್ಯಕ್ತವಾಗುತ್ತಿರುವ ಪರ ಮತ್ತು ವಿರೋಧದ ಹಿನ್ನೆಲೆಯಲ್ಲಿ ಪ್ರತ್ಯೇಕ ನಿಯಂತ್ರಣ ಪ್ರಾಧಿಕಾರ ರಚಿಸುವ ಉದ್ದೇಶದಿಂದ ಕೇಂದ್ರ ಸರ್ಕಾರ ಭಾರತೀಯ ಜೈವಿಕ ತಂತ್ರಜ್ಞಾನ ನಿಯಂತ್ರಣ ಪ್ರಾಧಿಕಾರ ಮಸೂದೆ (೨೦೧೧) ಯನ್ನು ರಚಿಸಿದೆ. ಕೇಂದ್ರ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯವು ಈ ಮಸೂದೆ ಯನ್ನು ದಿನಾಂಕ ೨೩.೪.೨೦೧೩ ರಂದು ಲೋಕಸಭೆಯಲ್ಲಿ ಮಂಡಿಸಿದೆ. ಮಸೂದೆಯ ಬಗ್ಗೆ ವಿರೋಧ ವ್ಯಕ್ತ ವಾಗಿದ್ದು ಅದನ್ನು ಮಂಡಿಸಲೇಬಾರದೆಂಬ ಕೂಗು ಕೇಳಿಬರುತ್ತಿದೆ. ಕೆಲವರು ಮಸೂದೆಗೆ ಮತ್ತಷ್ಟು ತಿದ್ದುಪಡಿ ಮಾಡಿದ ನಂತರ ಒಪ್ಪಿಕೊಳ್ಳಬೇಕೆಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**ವೈ. ಜಿ. ಮುರಳೀಧರನ್**

ಮಸೂದೆಯಲ್ಲಿ ಏನೆಲ್ಲಾ ಅಡಗಿದೆ? ಏಕೆ ಈ ಪರ ಮತ್ತು ವಿರೋಧ ?

ಭಾರತೀಯ ಜೈವಿಕ ತಂತ್ರಜ್ಞಾನ ನಿಯಂತ್ರಣ ಪ್ರಾಧಿಕಾರ (ಬಿಆರ್‌ಎಐ)ದ ಮುಖ್ಯ ಉದ್ದೇಶ ಜೈವಿಕ ತಂತ್ರಜ್ಞಾನದ ಸರಿಯಾದ ಬಳಕೆ ಮತ್ತು ಅದರ ಗುಣಮಟ್ಟವನ್ನು ವೃದ್ಧಿಸುವುದು. ಇದಕ್ಕಾಗಿ ಪ್ರತ್ಯೇಕ ಪ್ರಾಧಿಕಾರವನ್ನು ಸ್ಥಾಪಿಸಲಾಗುವುದು. ಪ್ರಾಧಿಕಾರದಲ್ಲಿ ಒಬ್ಬ ಅಧ್ಯಕ್ಷರು ಮತ್ತು ತಲಾ ಇಬ್ಬರು ಪೂರ್ಣಾವಧಿ ಸದಸ್ಯರು ಮತ್ತು ಇಬ್ಬರು ಅಲ್ಪಾವಧಿ ಸದಸ್ಯರು ಇರುತ್ತಾರೆ. ಜೈವಿಕ ತಂತ್ರಜ್ಞಾನದ ಕ್ಷೇತ್ರದ ಎಲ್ಲ ಚಟುವಟಿಕೆಗಳನ್ನು ನಿಯಂತ್ರಿಸುವುದು ಬಿಆರ್‌ಎಐನ ಉದ್ದೇಶ. ಇದರ ಬಗ್ಗೆ ನಡೆಯುವ ಅಧ್ಯಯನ, ಸಮೀಕ್ಷೆ, ಪರೀಕ್ಷೆ ಇತ್ಯಾದಿ ಬಗ್ಗೆ ಮಾಹಿತಿ ಪಡೆಯುವುದು ಮತ್ತು ಅದರ ಬಗ್ಗೆ ತನಿಖೆ ನಡೆಸುವ ಅಧಿಕಾರವನ್ನು ಪ್ರಾಧಿಕಾರಕ್ಕೆ ನೀಡಲಾಗಿದೆ. ಕೆಲವೊಂದು ನಿರ್ದಿಷ್ಟ ಜೈವಿಕ ಪದಾರ್ಥಗಳ ಬಗ್ಗೆ ಯಾವುದೇ ಅಧ್ಯಯನ, ಫೀಲ್ಡ್ ಟ್ರಯಲ್ ಇತ್ಯಾದಿ ನಡೆಸಬೇಕಾದರೂ ಬಿಆರ್‌ಎಐನಿಂದ ಅನುಮತಿ ಪಡೆಯಬೇಕಾಗುತ್ತದೆ. ವಿಶೇಷವಾಗಿ ಕುಲಾಂತರಿ ತಳಿ ಬಗ್ಗೆ ಒತ್ತುಕೊಡಲಾಗಿದೆ.

ಮೇಲ್ನೋಟಕ್ಕೆ ಬಿಆರ್‌ಎಐ ಸಮರ್ಪಕವಾಗಿದೆ ಎಂದು ತೋರಿದರೂ ಅದರ ಹಿಂದಿರುವ ಉದ್ದೇಶ ಬೇರೆಯದೇ ಆಗಿರುವುದು ಸ್ಪಷ್ಟ. ಜೈವಿಕ ವೈವಿಧ್ಯತೆ, ಪರಿಸರ, ಮಾನವರ ಆರೋಗ್ಯ ಇತ್ಯಾದಿಯ ಮೇಲೆ ಜೈವಿಕ ತಂತ್ರಜ್ಞಾನ ದಿಂದ ಉಂಟಾಗಬಹುದಾದ ದುಷ್ಪರಿಣಾಮಗಳನ್ನು ನಿಯಂತ್ರಿಸುವ ಯಾವುದೇ ಪ್ರಸ್ತಾಪ ಮಸೂದೆಯಲ್ಲಿ ಕಾಣುತ್ತಿಲ್ಲ. ಬದಲಾಗಿ ಜೈವಿಕ ತಂತ್ರಜ್ಞಾನವನ್ನು ಪ್ರೋತ್ಸಾಹಿಸುವ ಎಲ್ಲ ಉದ್ದೇಶಗಳು ಕಾಣುತ್ತಿವೆ. ಭಾರತವು ೨೦೦೩ರಲ್ಲಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಮಾಡಿಕೊಂಡಿರುವ ಕಾರ್ಟಾಜೆನಾ ಒಪ್ಪಂದಕ್ಕೆ ಬಿಆರ್‌ಎಐ ವಿರೋಧಿ ಎಂಬ ಅಭಿಪ್ರಾಯವೂ ಇದೆ. ತಾನು ಕಲೆಹಾಕಿದ ಮಾಹಿತಿಯನ್ನು ಯಾವುದೇ ಕಾರಣಕ್ಕೂ ಬಹಿರಂಗಪಡಿಸು ವುದಿಲ್ಲ ಎಂದು ಮಸೂದೆಯಲ್ಲಿ ಹೇಳಿರುವುದು ಸಾಕಷ್ಟು ವಾದವಿವಾದಕ್ಕೆ ಎಡೆಮಾಡಿಕೊಟ್ಟಿದೆ. ಸಾರ್ವಜನಿಕರ ಹಿತದೃಷ್ಟಿಯಿಂದ ಮಾತ್ರ ಮಾಹಿತಿ



# ಜೈವಿಕ ತಂತ್ರಜ್ಞಾನ ನಿಯಂತ್ರಣಕ್ಕೆ ಪ್ರಾಧಿಕಾರದ ರಚನೆ

**ಜೈವಿಕ ತಂತ್ರಜ್ಞಾನಕ್ಕೆ ಮತ್ತು ಕುಲಾಂತರಿ ಬೆಳೆಗೆ ವ್ಯಕ್ತವಾಗುತ್ತಿರುವ ಪರ ಮತ್ತು ವಿರೋಧದ ಹಿನ್ನೆಲೆಯಲ್ಲಿ ಪ್ರತ್ಯೇಕ ನಿಯಂತ್ರಣ ಪ್ರಾಧಿಕಾರ ರಚಿಸುವ ಉದ್ದೇಶದಿಂದ ಕೇಂದ್ರ ಸರ್ಕಾರ ಭಾರತೀಯ ಜೈವಿಕ ತಂತ್ರಜ್ಞಾನ ನಿಯಂತ್ರಣ ಪ್ರಾಧಿಕಾರ ಮಸೂದೆ (೨೦೧೧)ಯನ್ನು ರಚಿಸಿದೆ. ಕೇಂದ್ರ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯವು ಈ ಮಸೂದೆಯನ್ನು ದಿನಾಂಕ ೨೩.೪.೨೦೧೩ರಂದು ಲೋಕಸಭೆಯಲ್ಲಿ ಮಂಡಿಸಿದೆ. ಮಸೂದೆಯ ಬಗ್ಗೆ ವಿರೋಧ ವ್ಯಕ್ತವಾಗಿದ್ದು ಅದನ್ನು ಮಂಡಿಸಲೇಬಾರದೆಂಬ ಕೂಗು ಕೇಳಿಬರುತ್ತಿದೆ. ಕೆಲವರು ಮಸೂದೆಗೆ ಮತ್ತಷ್ಟು ತಿದ್ದುಪಡಿ ಮಾಡಿದ ನಂತರ ಒಪ್ಪಿಕೊಳ್ಳಬೇಕೆಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಮಸೂದೆಯಲ್ಲಿ ಏನೆಲ್ಲಾ ಅಡಗಿದೆ ? ಏಕೆ ಈ ಪರ ಮತ್ತು ವಿರೋಧ ?**

ಬಹಿರಂಗಪಡಿಸುವುದಾಗಿ ಮಸೂದೆ ಹೇಳುತ್ತದೆ. ತಪ್ಪು ಮಾಹಿತಿ ನೀಡುವವರಿಗೆ ಜೈಲು ಶಿಕ್ಷೆ ಮತ್ತು ದಂಡ ವಿಧಿಸುವ ಅಂಶವೂ ಇದೆ. ಈ ಅಂಶವೂ ಸಹ ಸಾಕಷ್ಟು ಚರ್ಚೆಗೆ ಒಳಪಟ್ಟಿದೆ. ಕಾರಣ ಮಾಹಿತಿ ಹಕ್ಕು ಅಧಿನಿಯಮ ೨೦೦೫ರ ಪ್ರಕಾರ ವಿನಾಯಿತಿ ಪಡೆದಿರುವ ಮಾಹಿತಿಯನ್ನು ಬಿಟ್ಟು ಉಳಿದೆಲ್ಲಾ ಮಾಹಿತಿ ಪಡೆಯುವ ಹಕ್ಕು ನಾಗರಿಕರದ್ದು. ಅಲ್ಲದೆ ಯಾವುದು 'ಸಾರ್ವಜನಿಕ ಹಿತ' ಎಂಬುದನ್ನು ನಿರ್ಧರಿಸಬೇಕಾದದ್ದು ಕೇಂದ್ರ ಅಥವಾ ರಾಜ್ಯ ಮಾಹಿತಿ ಆಯೋಗದ್ದು. ಆದರೆ ಬಿಆರ್‌ಎಐ ಪ್ರಕಾರ ತಾನೇ ಈ ನಿರ್ಧಾರ ಕೈಗೊಳ್ಳಲಿದೆ. ತಾನು ಯಾವ ಮಾಹಿತಿಯನ್ನು ನೀಡಬೇಕು ಅಥವಾ ನೀಡಬಾರದು ಎಂಬುದನ್ನು ನಿರ್ಧರಿಸುವ ಅಧಿಕಾರವನ್ನು ತಾನೇ ವಹಿಸಿಕೊಂಡಿದೆ. ಮಾಹಿತಿ ಬಹಿರಂಗಪಡಿಸುವುದರ ಜೊತೆಗೆ ಬಿಆರ್‌ಎಐನ ಕಾರ್ಯ ಚಟುವಟಿಕೆಗಳಲ್ಲಿ ಮತ್ತು ನಿರ್ಧಾರ ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಸಾರ್ವಜನಿಕರ ಭಾಗವಹಿಸುವಿಕೆಗೆ ಯಾವುದೇ ಅವಕಾಶವಿಲ್ಲ. ಯಾವುದೇ ನಿರ್ಧಾರ ಕೈಗೊಳ್ಳುವ ಮುನ್ನ ಬಿಆರ್‌ಎಐ ಸಾರ್ವಜನಿಕರಿಂದ ತಮ್ಮ ಅಭಿಪ್ರಾಯ ಮತ್ತು ಸಲಹೆ ಸೂಚನೆಗಳನ್ನು ಸ್ವೀಕರಿಸುತ್ತದೆ. ಇಲ್ಲಿಗೆ ಸಾರ್ವಜನಿಕರ ಭಾಗವಹಿಸುವಿಕೆ ಅಂತ್ಯಗೊಳ್ಳುತ್ತದೆ. ಇದನ್ನು ಪಾರದರ್ಶಕತೆ ಎಂದು ಕರೆಯಬಹುದೆ ?

ಜೈವಿಕ ತಂತ್ರಜ್ಞಾನದ ಕ್ಷೇತ್ರವನ್ನು ಈ ಮಸೂದೆಯ ಅಗತ್ಯಕ್ಕೆ ಅನುಸಾರವಾಗಿ ಮೂರು ರೀತಿ ವಿಂಗಡಿಸಲಾಗಿದೆ. ಪ್ರಥಮ ವರ್ಗದಲ್ಲಿ ಕೃಷಿ, ಅರಣ್ಯ ಮತ್ತು ಮತ್ಸ್ಯೋದ್ಯಮವನ್ನು ಸೇರಿಸಲಾಗಿದೆ. ಎರಡನೇ ವರ್ಗದಲ್ಲಿ ಮಾನವರ ಆರೋಗ್ಯ ಹಾಗೂ ಪಶುಸಂಗೋಪನೆಗೆ ಅಗತ್ಯವಾದ ಉತ್ಪನ್ನಗಳನ್ನು ಸೇರಿಸಲಾಗಿದೆ. ಮೂರನೇ ವರ್ಗದಲ್ಲಿ ಉದ್ಯಮ ಹಾಗೂ ಪರಿಸರವನ್ನು ಸೇರಿಸಲಾಗಿದೆ. ಇದರ ಜೊತೆಗೆ ಪ್ರಾಧಿಕಾರದಲ್ಲಿ ಜೈವಿಕ ತಂತ್ರಜ್ಞಾನದಿಂದ ಉಂಟಾಗಬಹುದಾದ ಅಪಾಯಗಳ ಬಗ್ಗೆ ಅಧ್ಯಯನ ನಡೆಸಲು ಮತ್ತು ಸೂಕ್ತ ಕ್ರಮ ಕೈಗೊಳ್ಳಲು ರಿಸ್ಕ್ ಅಸೆಸ್‌ಮೆಂಟ್ ಯೂನಿಟ್ ಸ್ಥಾಪಿಸಲಾಗುವುದು. ಜೈವಿಕ ತಂತ್ರಜ್ಞಾನದ ಬಗ್ಗೆ ಯಾವುದೇ ಭಿನ್ನಾಭಿಪ್ರಾಯ ಉಂಟಾದರೂ ಅದನ್ನು ಪರಸ್ಪರ ಚರ್ಚೆಯ ಮೂಲಕ ಪರಿಹರಿಸಿ ಒಮ್ಮತದ ನಿರ್ಧಾರ ಕೈಗೊಳ್ಳಲು ಸಚಿವಾಲಯದ ಮಟ್ಟದಲ್ಲಿ ಮಂಡಳಿಯೊಂದನ್ನು ರಚಿಸುವ ಅವಕಾಶ ಕಲ್ಪಿಸಲಾಗಿದೆ. ಇದನ್ನು ಇಂಟರ್ ಮಿನಿಸ್ಟೀರಿಯಲ್ ಬೋರ್ಡ್ ಎಂದು ಕರೆಯಲಾಗಿದೆ. ಇದರ ಜೊತೆಗೆ ಸಲಹಾ ಸಮಿತಿಯೊಂದನ್ನು ರಚಿಸಲಾಗುವುದು. ರಾಜ್ಯ ಮಟ್ಟದಲ್ಲೂ ಬಿಆರ್‌ಎಐ ಸ್ಥಾಪನೆಯಾಗಲಿದೆ.

ಬಿಆರ್‌ಎಐನಲ್ಲಿ ವಿಜ್ಞಾನಿಗಳು ಮತ್ತು ಸಾಮಾಜಿಕ ಕಾರ್ಯಕರ್ತರಿಗಿಂತ ಸರ್ಕಾರಿ ವಲಯದ ಅಧಿಕಾರಿಗಳಿಗೆ ಹೆಚ್ಚು ಅವಕಾಶ ನೀಡಲಾಗಿದೆ. ವಿಜ್ಞಾನ, ಸಾರ್ವಜನಿಕ ಆರೋಗ್ಯ, ತಂತ್ರಜ್ಞಾನ ಇತ್ಯಾದಿ ಕ್ಷೇತ್ರದಲ್ಲಿ ಪರಿಣತಿ ಹೊಂದಿರುವವರ ಸಂಖ್ಯೆ ಅತಿ ಕಡಿಮೆ.

ಜೈವಿಕ ತಂತ್ರಜ್ಞಾನವಾಗಲಿ ಅಥವಾ ಕುಲಾಂತರಿ ತಳಿಯಾಗಲಿ, ಅದನ್ನು ಪ್ರೋತ್ಸಾಹಿಸುವ ಬದಲು ಅದನ್ನು ನಿಯಂತ್ರಿಸುವುದು ಪ್ರಾಧಿಕಾರದ ಕರ್ತವ್ಯವಾಗಬೇಕು. ಈ ನಿಟ್ಟಿನಲ್ಲಿ ಕೆಲವೊಂದು ಸೂಚನೆಗಳನ್ನು ನೀಡಬಹುದು. ಈಗಾಗಲೆ ಪರಿಸರ ಮತ್ತು ಅರಣ್ಯ ಸಚಿವಾಲಯ ಕುಲಾಂತರಿ ತಳಿ ಬಗ್ಗೆ ಕೆಲವೊಂದು ನಿರ್ದೇಶನಗಳನ್ನು ನೀಡಿದೆ. ಜೈವಿಕ ತಂತ್ರಜ್ಞಾನವನ್ನು ನಿಯಂತ್ರಿಸಲು ಈ ಸಚಿವಾಲಯವೇ ಹೆಚ್ಚು ಸೂಕ್ತ. ಮಸೂದೆಯಲ್ಲಿ ಈ ಕೆಲಸವನ್ನು ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯಕ್ಕೆ ನೀಡಲಾಗಿದ್ದು ಅದನ್ನು ಬದಲಿಸಬೇಕು. ಭಾರತೀಯ ಸಂವಿಧಾನದ ಪ್ರಕಾರ ಸಾರ್ವಜನಿಕ ಆರೋಗ್ಯ, ಕೃಷಿ ಇತ್ಯಾದಿ ರಾಜ್ಯ ಸರ್ಕಾರದ ವಿಷಯಗಳು. ಬಿಆರ್‌ಎಐ ಮಸೂದೆಯು ಈ ವಿಷಯಗಳ ಮೇಲೆ ರಾಜ್ಯಕ್ಕಿರುವ ಅಧಿಕಾರವನ್ನು ಕಿತ್ತುಕೊಳ್ಳದಿದ್ದರೂ ಮೊಟಕುಗೊಳಿಸುತ್ತದೆ. ಇದನ್ನು ಸರಿಪಡಿಸುವ ಅಗತ್ಯವಿದೆ.

ಜೈವಿಕ ತಂತ್ರಜ್ಞಾನ ಮತ್ತು ಕುಲಾಂತರಿ ತಳಿಯ ಸುರಕ್ಷತೆ ಬಗ್ಗೆ ಈಗಿರುವ ಪುರಾವೆ ಮತ್ತು ಅಧ್ಯಯನ ಅಷ್ಟೇನೂ ಸಮಾಧಾನಕರವಾಗಿಲ್ಲ. ಈ ಹಿನ್ನೆಲೆಯಲ್ಲಿ ಕುಲಾಂತರಿ ತಳಿ ಆಹಾರಕ್ಕೆ ಸೂಕ್ತ ಪುರಾವೆ ದೊರೆಯುವವರೆಗೂ ಅದನ್ನು ಅನುಮಾನದಿಂದಲೇ ನೋಡುವ ಅಗತ್ಯವಿದೆ. ಇದನ್ನು ಗಮನದಲ್ಲಿಟ್ಟುಕೊಂಡು ಬಿಆರ್‌ಎಐ ಕಾರ್ಯ ನಿರ್ವಹಿಸುವ ಅಂಶವನ್ನು (ಪ್ರಿಕಾಷನರಿ ಪ್ರಿನ್ಸಿಪಲ್) ಮಸೂದೆಯಲ್ಲಿ ಸೇರಿಸಬೇಕು. ಮಾಹಿತಿ ಬಹಿರಂಗಪಡಿಸುವ ವಿಷಯದಲ್ಲಾಗಲಿ ಅಥವಾ ಪ್ರಾಧಿಕಾರದ ಪ್ರಕ್ರಿಯೆಯ ವಿಷಯದಲ್ಲಾಗಲಿ ಪಾರದರ್ಶಕತೆಯ ಕೊರತೆ ಇರುವುದರಿಂದ ಅದಕ್ಕೆ ಸೂಕ್ತ ಮಾರ್ಪಾಟುಗಳನ್ನು ಮಾಡುವುದು ಅಗತ್ಯ.

ವೈ. ಜಿ. ಮುರಳೀಧರನ್
ನಂ. ೯೦೦, 'ಸಂಧ್ಯಾರಾಗ', ೧ನೇ ಹಂತ, ೧ನೇ ಫೇಸ್, ಚಂದ್ರಾಲೇಔಟ್
೧೫ನೇ ಅಡ್ಡರಸ್ತೆ, ನಾಗರಭಾವಿ ಅಂಚೆ, ಬೆಂಗಳೂರು – ೫೬೦ ೦೭೨

## ಸುದ್ದಿಚಿತ್ರ




ಅಂತರರಾಷ್ಟ್ರೀಯ ವಿಕಲಚೇತನರ ರಾಷ್ಟ್ರೀಯ ದಿನದ ಸಂದರ್ಭದಲ್ಲಿ ನವಕರ್ನಾಟಕ ಪ್ರಕಾಶನದ 'ನಮ್ಮ ನಂತರ ಯಾರು?' (ಲೇಖಕರು : ಪ್ರೊ|| ಎಚ್. ಚಂದ್ರಶೇಖರ್, ಶಿವಕುಮಾರ್, ಲತಾ ಜಾಕೋಬ್) ಕೃತಿಯನ್ನು ದಿನಾಂಕ ೩-೧೨-೨೦೧೩ರಂದು ಬೆಂಗಳೂರಿನ ಮೆಡಿಕೋ ಪ್ಯಾಸ್ಟೋರಲ್ ಅಸೋಸಿಯೇಷನ್‌ನವರು ಆಯೋಜಿಸಿದ ಸಮಾರಂಭದಲ್ಲಿ ಕರ್ನಾಟಕ ಸರ್ಕಾರದ ವಿಕಲಚೇತನರ ಕಲ್ಯಾಣ ಇಲಾಖೆಯ ಆಯುಕ್ತರಾದ ಶ್ರೀ ಕೆ. ಎಸ್. ರಾಜಣ್ಣನವರು ಲೋಕಾರ್ಪಣೆ ಮಾಡಿದರು.
ಈ ಸಮಾರಂಭದಲ್ಲಿ ವಿಕಲಚೇತನರ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗಿದವು.



# ನಂಬಿಕೆ–ಮೂಢನಂಬಿಕೆ ವೈದ್ಯ ಕಣ್ಣಿನಿಂದ...

**ಡಾ|| ಎಚ್. ಎಸ್. ಅನುಪಮಾ**

ನಂಬಿಕೆ, ಮೂಢನಂಬಿಕೆಗಳ ನಡುವಿನ ಗೆರೆ ತುಂಬ ತೆಳು.

ವಾಸ್ತವ ಮತ್ತು ಸತ್ಯಗಳನ್ನು ಸೂಕ್ಷ್ಮವಾಗಿ ಗ್ರಹಿಸುವ ಮನಸು ವೈಜ್ಞಾನಿಕ ಮನೋಭಾವ ರೂಢಿಸಿಕೊಳ್ಳುತ್ತದೆ. ಅದು ಯಾವುದನ್ನೂ ಕುರುಡಾಗಿ ನಂಬದೆ ಪರೀಕ್ಷಿಸಿ ವಿಶ್ವಾಸ ತುಂಬಿಕೊಳ್ಳುತ್ತದೆ. ಈ ಶ್ರದ್ಧೆ ವ್ಯಕ್ತಿಗತ ಬೆಳವಣಿಗೆಗೂ ಸಮಾಜದ ಹಿತದೃಷ್ಟಿಯಿಂದಲೂ ಅಗತ್ಯವಾಗಿದೆ. ಅಂಥ ಮನಸ್ಸುಗಳಲ್ಲಿ ಧರ್ಮ, ದೇವರು, ಸಿದ್ಧಾಂತ ಕುರಿತ ನಂಬಿಕೆಗಳು ಧೈರ್ಯ ತುಂಬಬಲ್ಲವು. ಆದರೆ ತಪ್ಪು ಗ್ರಹಿಕೆಗಳಿಂದ ಹುಟ್ಟಿಕೊಳ್ಳುವ ಮೂಢನಂಬಿಕೆ ಭಯ ಮತ್ತು ಅವಲಂಬನೆಯನ್ನು ಉಂಟುಮಾಡುತ್ತದೆ. ಸ್ವಸಾಮರ್ಥ್ಯವನ್ನು ಮರೆಸುತ್ತದೆ. ಮೌಢ್ಯದ ಅಪಾಯ ಇಲ್ಲಿಗೇ ನಿಲ್ಲುವುದಿಲ್ಲ: ಅದು ನಡೆಯುತ್ತಿರುವ ಎಲ್ಲ ರೂಢಿಗಳಿಗೂ ಪರಂಪರೆಯ ಸೋಗು ಹಾಕುತ್ತದೆ; ಆಚರಣೆಗಳು ಧರ್ಮ ಮತ್ತು ನೈತಿಕತೆಯ ಜೊತೆ ಸೇರಿ ಪ್ರಶ್ನಿಸುವ ಮನೋಭಾವವನ್ನು, ಬದುಕಿನ ಚಲನಶೀಲತೆಯನ್ನು ನಾಶಮಾಡುತ್ತವೆ. ಇವೆಲ್ಲ ಆಚರಿಸುವ ವ್ಯಕ್ತಿಯ ಮೇಲೆ, ಕುಟುಂಬ–ಸಮಾಜದ ಮೇಲೆ ದುಷ್ಪರಿಣಾಮ ಬೀರುತ್ತವೆ.

ಮೂಢನಂಬಿಕೆ ಕುರಿತು ಚರ್ಚೆ ನಡೆಯುತ್ತಿರುವ ಈ ಹೊತ್ತು 'ಇನ್ಮೇಲೆ ಕರಿಮಣಿ ಸರನೂ ಹಾಕ್ಕಳೋ ಹಂಗಿಲ್ಲಂತೆ, ಕೊಳ್ಳಲ್ಲಿ ರುದ್ರಾಕ್ಷಿ ಸರ ಹಾಕಿದ್ರೂ ಅಪರಾಧವಂತೆ' ಎಂಬ ಅರೆ ಕುಹಕ, ಅರೆ ಉತ್ಪ್ರೇಕ್ಷೆಯ ಮಾತುಗಳನ್ನು ಜನ ಅಲ್ಲಿಲ್ಲಿ ಮಾತನಾಡಿಕೊಳ್ಳುವುದನ್ನು ಕೇಳುತ್ತೇನೆ. 'ದೇವ್ರಿಗೆ ಹರಕೆ ಹೊತ್ಕಳೋವಾಗ ಇನ್ನು ಜಾಗ್ರತೆ' ಎಂಬ ಮಾತು ಜನರ ಬಾಯಲ್ಲಿ ಬರುವಾಗ ಮೂಢನಂಬಿಕೆ ವಿರೋಧಿ ಕಾನೂನು ಜಾರಿಯಾಗಿದ್ದೇ ಹೌದಾದರೆ ಇವರು ಯಾವ್ಯಾವುದನ್ನೆಲ್ಲ ನಿಲ್ಲಿಸಬಹುದು ? ಇನ್ನೆಷ್ಟು ತೆರೆಮರೆಯಲ್ಲಿ ಮುಂದುವರೆಯಬಹುದು ? ಎಂದು ಯೋಚಿಸುತ್ತೇನೆ.

ಇಷ್ಟು ಬರೆವ ಹೊತ್ತಿಗೆ ಮರದಿಂದ ಕೆಳಗೆ ಬಿದ್ದವನೊಬ್ಬನನ್ನು ಅಗೋ ಆ ವಾಹನದಲ್ಲಿ ಕರೆತಂದರು. ಪರೀಕ್ಷಿಸಲಾಗಿ ಅವನಾಗಲೇ ಪ್ರಾಣ ಬಿಟ್ಟಿದ್ದ. ಹಾಗೆಂದ ಕೂಡಲೇ ಕರೆತಂದ ವಾಹನದವರು ಲಗುಬಗೆಯಿಂದ ದೇಹವಿಳಿಸಿ ಹೋದರು – ಶವ ಸಾಗಿಸಿದ ವಾಹನದಲ್ಲಿ ಬೇರೆ ಗಿರಾಕಿಗಳು ಹತ್ತುವುದಿಲ್ಲ ಎಂಬ ಕಾರಣಕ್ಕೆ! ರೋದಿಸುವ ಬಂಧುಗಳು ಆಂಬುಲೆನ್ಸ್ ಅಥವಾ ಅನ್ಯಧರ್ಮೀಯರ ವಾಹನಕ್ಕಾಗಿ ಹುಡುಕಾಡುತ್ತಿರುವಾಗ ನನ್ನಲ್ಲಿ ಈ ಸಾಲುಗಳು ಮೂಡುತ್ತಲಿವೆ.

* * *

ನಂಬಿಕೆ, ಮೂಢನಂಬಿಕೆಗಳೆರಡೂ ಎಲ್ಲರಲ್ಲಿ ಬೇರೆಬೇರೆ ರೂಪದಲ್ಲಿ ಮನೆ ಮಾಡಿವೆ. ಆದರೂ ಗ್ರಾಮೀಣ, ಅನಕ್ಷರಸ್ಥ, ಬಡ ಶೋಷಿತ ವರ್ಗಗಳಲ್ಲಿ; ಅಸಹಾಯಕತೆ ಹಾಗೂ ಅಪರಿಹಾರ್ಯ ಕಷ್ಟಗಳಿರುವಲ್ಲಿ ಮೂಢನಂಬಿಕೆಯೂ ಹೆಚ್ಚು. ಅಲ್ಲದೇ ಪುರುಷರಿಗಿಂತ ಮಹಿಳೆಯರಲ್ಲಿ ಅಂಥ ನಂಬಿಕೆಗಳು ಹೆಚ್ಚು. ಇತ್ತೀಚಿನ ಒಂದು ಸಮೀಕ್ಷೆಯ ಪ್ರಕಾರ ಉದ್ಯೋಗಸ್ಥರಲ್ಲಿ ೮೦% ಮಹಿಳೆಯರು ಮೂಢನಂಬಿಕೆಗಳನ್ನು ಪ್ರದರ್ಶಿಸಿ ಸಮರ್ಥಿಸಿಕೊಂಡರೆ; ಪುರುಷರಲ್ಲಿ ೬೮% ಜನರು ಅಂಥ ನಂಬಿಕೆಗಳನ್ನು ಹೊಂದಿರುತ್ತಾರೆ. ಕುಟುಂಬ, ಸಮಾಜದಲ್ಲಿ ಮಹಿಳೆಗೆ ನೀಡಲಾದ ಎರಡನೆ ದರ್ಜೆಯ ಸ್ಥಾನಮಾನ, ಜವಾಬ್ದಾರಿ, ದೈಹಿಕ ಭಿನ್ನತೆ, ಅಧಿಕಾರ ಹೀನತೆ, ಭಾವುಕತೆ ಹಾಗೂ ಇವೆಲ್ಲ ತಂದೊಡ್ಡುವ

ಶಿಕ್ಷಣವು ಮೌಢ್ಯವನ್ನು ಸ್ವಲ್ಪ ಮಟ್ಟಿಗೆ ಕಡಿಮೆ ಮಾಡುವುದಾದರೂ ಶಿಕ್ಷಿತರ ಮೌಢ್ಯ ಬೇರೆಯೇ ಬಗೆಯದು ಮತ್ತು ಅದು ಅನಕ್ಷರಸ್ಥರ ಮೌಢ್ಯಕ್ಕಿಂತ ಅಪಾಯಕಾರಿಯಾದುದು. ಅರೆಬೆಂದ ಕಾಳನ್ನು ಅನ್ನವನ್ನಾಗಿಸಲೂ ಬಾರದು; ಹಿಟ್ಟನ್ನಾಗಿಸಲೂ ಬಾರದು. ವಿದ್ಯಾವಂತರ ಮೌಢ್ಯ ಅವರಿಗಷ್ಟೇ ಅಪಾಯಕರವಲ್ಲ, ಅವರನ್ನು ನೋಡಿ ಇತರರು ಅನುಕರಿಸುವುದರಿಂದ ಹೆಚ್ಚು ಅಪಾಯಕಾರಿಯಾಗುತ್ತದೆ. ಡಾಕ್ಟರು, ಎಂಜಿನಿಯರು, ಲಾಯರುಗಳೆಲ್ಲ ಎಂಜಲೆಲೆ ಮೇಲೆ ಉರುಳುತ್ತಾರೆ ಎನ್ನುವುದು ಮಡೆಸ್ನಾನಕ್ಕೆ ವಿಶೇಷ ಮಾನ್ಯತೆಯನ್ನು ಜನಸಾಮಾನ್ಯರ ಮನಸ್ಸಿನಲ್ಲಿ ಮೂಡಿಸುತ್ತದೆ. ಇಸ್ರೋ ವಿಜ್ಞಾನಿಯೇ ತಿರುಪತಿ ತಿಮ್ಮಪ್ಪನೆದುರು ಉಪಗ್ರಹ ಮಾದರಿ ಇಟ್ಟು ಪೂಜಿಸಿದ ಮೇಲೆ; ತಮ್ಮ ಆರಾಧ್ಯ ದೈವ ಕ್ರಿಕೆಟಿಗ ಆಷಾಢಬಲಿ ಮಾಡಿದ ಮೇಲೆ; ವೈದ್ಯರೇ ಆಪರೇಷನ್ನಿಗೆ ಮೊದಲು ಪೂಜೆ ಮಾಡುವರೆಂದ ಮೇಲೆ – ಇನ್ನು ಪಾಮರರಾದ ತಾವು ಕುಂಕುಮ–ವಿಭೂತಿ–ಜ್ಯೋತಿಷ ನಂಬುವುದೇನೂ ದೊಡ್ಡದಲ್ಲ ಎಂದೇ ಜನಸಾಮಾನ್ಯ ಭಾವಿಸುತ್ತಾನೆ. ಹೀಗೆ ಅಕ್ಷರ ಕಲಿತವರು ಹಾಗೂ ಗಣ್ಯರು ವ್ಯವಸ್ಥಿತವಾಗಿ ಮೌಢ್ಯ ಹರಡಲು ಕಾರಣವಾಗುತ್ತಾರೆ.

ಅಸಹಾಯಕತೆ – ಇವು ಮಹಿಳೆಯರನ್ನು ಪ್ರಶ್ನಿಸದೇ ಒಪ್ಪಿಕೊಳ್ಳುವ; ಇರುವುದನ್ನು ಇರುವ ಹಾಗೇ ಮುಂದುವರಿಸುವ ಉಪಕರಣಗಳಾಗುವಂತೆ ಮಾಡಿವೆ. ಹೀಗಿರುವಾಗ ಹೆಣ್ಣಿನಲ್ಲಿ ಮೌಢ್ಯ ಹೆಚ್ಚಿದ್ದರೆ ಅದೇನೂ ಆಶ್ಚರ್ಯವಲ್ಲ. ಈ ವ್ಯವಸ್ಥೆ ಹಾಗಿರಲೆಂದೇ ಅವಳನ್ನು ರೂಪುಗೊಳಿಸಿದೆ.

ಪುರುಷಪ್ರಧಾನ ಸಮಾಜ ಅವಳನ್ನು ಯಾವ್ಯಾವ ರೀತಿಯ ಖೆಡ್ಡಾದಲ್ಲಿ ಕೆಡವಿದೆ ಎಂದರೆ ದಾಸ್ಯವೇ ಹೆಣ್ಣಿಗಿರಬೇಕಾದ ಪರಮಶ್ರೇಷ್ಠ ಗುಣ ಎಂದು ಬಿಂಬಿಸಲಾಗುತ್ತದೆ. ಎಷ್ಟೋ ಸಲ ಇದನ್ನು ಒಪ್ಪಿಕೊಳ್ಳದ ರೆಬೆಲ್ ಮನಸ್ಸು ತನ್ನ ವಿರೋಧವನ್ನು ವ್ಯಕ್ತಿತ್ವ ಬದಲಾವಣೆಯ ಮೂಲಕ ತೋರಿಸುತ್ತದೆ. ಗಾಯಗೊಂಡ, ಪೂರ್ಣ ಅರಳದ ಅಸಹಾಯಕ ನಿರ್ಲಕ್ಷಿತ ಮನಸ್ಸು ಇತರರ ಗಮನ ತನ್ನೆಡೆ ಸೆಳೆದುಕೊಳ್ಳಲು; ತನ್ನ ವಿರೋಧ ಪ್ರಕಟಪಡಿಸಲು; ಪ್ರಾಮುಖ್ಯತೆ ಹೆಚ್ಚಿಸಿಕೊಳ್ಳಲು ಅನೇಕ ಉಪಾಯಗಳನ್ನು ಅಪ್ರಜ್ಞಾಪೂರ್ವಕವಾಗಿ ಹೂಡುತ್ತಿರುತ್ತದೆ. ಇಂಥ ಉಪಾಯಗಳಲ್ಲಿ ಎದ್ದು ಕಾಣುವುದು 'ಮೈಮೇಲೆ ಬರುವುದು'. 'ಮೈಮೇಲೆ ಬರುವ'ವರ ಹಿನ್ನೆಲೆ ಶೋಧಿಸಿದರೆ ಅದು ಹಠಮಾರಿ ಸ್ವಭಾವದವರಲ್ಲಿ ಹೆಚ್ಚು ಎಂಬ ವಾಸ್ತವ ಬೆಳಕಿಗೆ ಬರುತ್ತದೆ. ದೆವ್ವ, ಭೂತ, ಗಾಂವ್ಟಿ ದೈವಗಳು ಎಷ್ಟು ಮಹಿಳಾಸ್ನೇಹಿಗಳೆಂದರೆ ಹುಡುಹುಡುಕಿ ಹೆಣ್ಮಕ್ಕಳ ಮೇಲೇ ಬರುತ್ತವೆ. ದೆವ್ವ ಎಂದರೆ ಅತೃಪ್ತ ಆತ್ಮ ಎಂಬ ನಂಬಿಕೆಯಿದೆ. ನಿಜ. ಆದರೆ ಅತೃಪ್ತ ಆತ್ಮ ಸತ್ತವರದಲ್ಲ, ಮೈದುಂಬುವ ವ್ಯಕ್ತಿಯದು !

ಬಹಳಷ್ಟು ಹೆಣ್ಣುಮಕ್ಕಳ ಮನೋದೈಹಿಕ ಕಾಯಿಲೆಗಳಿಗೂ ಇಂಥ ಅಂಶಗಳೇ ಕಾರಣವಾಗಿರುತ್ತವೆ. ಮನೋಕ್ಲೇಷವನ್ನು ಹೊರತೋರ್ಪಡಿಸಲು ಅಸಾಧ್ಯವಾದಾಗ ವೈದ್ಯಕೀಯವಾಗಿ ಕಾರಣ ಪತ್ತೆಯಾಗದ ಹೊಟ್ಟೆನೋವು, ತಲೆನೋವು, ನಿಶ್ಶಕ್ತಿ, ತಲೆಸುತ್ತು, ಬವಳಿ ಬೀಳುವುದು ಇತ್ಯಾದಿ ದೈಹಿಕ ಲಕ್ಷಣಗಳ ರೂಪದಲ್ಲಿ ಅದು ಹೊರಕಾಣಿಸಿಕೊಳ್ಳುತ್ತದೆ. ಇದು ತೀವ್ರತರವಾದಾಗ ವ್ಯಕ್ತಿತ್ವದ ಬದಲಾವಣೆಗಳು ಸಂಭವಿಸಿ ವಿಚಿತ್ರವಾಗಿ ವರ್ತಿಸಲು ಶುರುಮಾಡುತ್ತಾರೆ. ಆದರೆ ಕುಟುಂಬದವರು ಅದಕ್ಕೆ ಮಾನಸಿಕ ಆಘಾತ ಕಾರಣವೆಂದು ನಂಬುವುದೇ ಇಲ್ಲ. 'ಮನೇಲಿ ಎಲ್ಲ ಚೆನ್ನಾಗಿದೆ, ಏನೋ ಸಣ್ಣಪುಟ್ಟ ಎಲ್ಲರಿಗೂ ಇರಬೋದಾದಂಥ ತೊಂದರೆ ಇದೆಯೇ ಹೊರತು 'ಮಾನಸಿಕ' ಆಗುವಂಥದೇನೂ ಇಲ್ಲ' ಎಂದೇ ವಾದಿಸುತ್ತಾರೆ. ಅವಳಿಗೊಂದು ಸ್ಥಾನವಿಲ್ಲದ ಕಡೆ ಅವಳ ಕಾಯಿಲೆ, ಮನಸ್ಸುಗಳಿಗೂ ಸ್ಥಾನವಿರುವುದಿಲ್ಲ. ಅವಳ ಒಳಮನದ ಸೂಕ್ಷ್ಮ ಏರಿಳಿತಗಳು ಕಾಯಿಲೆಯಾಗಿ ಕಾಣಿಸುವುದಿಲ್ಲ. ಎಂದೇ ಮೊದಲು ಮಾಟಗಾರ, ಮಂತ್ರಗಾರ, ನೋಟ ನೋಡುವವ, ದೆವ್ವ ಬಿಡಿಸುವವರ ಬಳಿ ಹೋಗಿ ಅಲ್ಲಿ ಗುಣಕಾಣದ ಸಮಸ್ಯೆಗಳಷ್ಟೇ ವೈದ್ಯರ ಬಳಿ ಬರುತ್ತವೆ. ಸೂಕ್ತ ಸಮಯದಲ್ಲಿ ಚಿಕಿತ್ಸೆ ದೊರೆಯದೇ ಇನ್ನೆಷ್ಟೋ ಆತ್ಮಹತ್ಯೆಗಳಲ್ಲಿ ಕೊನೆಯಾಗುತ್ತವೆ.

ಹೆಣ್ಣುಮಕ್ಕಳ ಆರೋಗ್ಯ ಸಂಬಂಧಿ ತಪ್ಪು ತಿಳುವಳಿಕೆ, ಮೌಢ್ಯಗಳು ಹುಟ್ಟಿನಿಂದ ಸಾವಿನವರೆಗೆ ವಿಸ್ತರಿಸಿವೆ. ಮಡಿ, ಮುಟ್ಟು, ಮೈಲಿಗೆಗಳು ಅವಳ ಜೀವ ಹಿಂಡುತ್ತವೆ. ಪೂಜಾ ಸಮಾರಂಭ, ವಿಶೇಷ ಕಾರ್ಯಕ್ರಮ, ತೀರ್ಥಯಾತ್ರೆಗಳು ನಡೆಯುವ ಹೊತ್ತಿನಲ್ಲಿ ಹೆಣ್ಣುಮಕ್ಕಳು ತಮ್ಮ 'ಡೇಟ್' ಹಿಂದೆ, ಮುಂದೆ ಮಾಡಲು ಪಡುವ ಪಡಿಪಾಟಲು ನೋಡಿದರೆ ಇನ್ನು ನೂರು ವರ್ಷವಾದರೂ 'ಆ ಮೂರು ದಿನಗಳ'ಲ್ಲಿ ತಾವು ಶುದ್ಧ ಎಂದು ಅವರು ಭಾವಿಸುವ ಸಾಧ್ಯತೆಯಿಲ್ಲ. ಆಕಾಶವೇ ತಲೆಮೇಲೆ ಬಿದ್ದವರಂತೆ ಗುಂಪುಗುಂಪಾಗಿ ಬರುವ ಹೆಂಗಳೆಯರ ಮುಟ್ಟಿನ ದಿನಗಳನ್ನು ಬದಲಾಯಿಸಲು ಹೆಣಗಾಡುತ್ತ ಆ ಸುದೀರ್ಘ ಲೆಕ್ಕಾಚಾರದಲ್ಲಿ ಅವರಿಗೆ ಬೈಯಬೇಕೆಂದುಕೊಂಡಿದ್ದೆಲ್ಲ ಮರೆತು ಬಿಡುತ್ತೇನೆ. ಈ ಸಲವಂತೂ ಆಯಿತು, ಇನ್ನು ಮುಂದೆಯಾದರೂ ಕೊನೆ ಪಕ್ಷ ಅವರ ಮಕ್ಕಳಿಗಾದರೂ ಹೀಗೆ ಮಾಡದಿರಲಿ ಎಂದು ಮಾನವ ಸಂತಾನೋತ್ಪತ್ತಿ ಕ್ರಿಯೆಯ ಮೂಲವಾದ ಋತುಚಕ್ರದ ಪಾವಿತ್ರ್ಯತೆಯ ಬಗ್ಗೆ ಹೇಳುತ್ತೇನೆ. ಎಷ್ಟು ಒಳಗಿಳಿಯುವುದೋ, ಎಷ್ಟು ಈ ಕಿವಿಯಿಂದ ಆ ಕಿವಿಗೆ ಹಾಗೇ ಹಾರಿಹೋಗುವುದೋ ಅಂತೂ ಗುಂಪು ಹೊರಬೀಳುವಾಗಿನ ಗುಸುಗುಸು

ಕೇಳಿದರೆ ಇನ್ನೊಮ್ಮೆ 'ಮುಟ್ಟು ಮುಂದೆ ಹೋಗುವ ಮಾತ್ರೆ' ಕೇಳಲು 'ಅಮ್ಮ'ನ ಬಳಿ ಬರಬಾರದು ಎಂದು ಅವರು ಗೊಣಗಿಕೊಳ್ಳುತ್ತಿರುವಂತೆ ಅನಿಸುತ್ತದೆ.

ಮಂತ್ರಿಸಿಕೊಟ್ಟ ಪಾಯಸ ಕುಡಿದರೆ ಹೊಟ್ಟೆಯಲ್ಲಿ ಕಾಲು ಕೆಳಗಾಗಿ ಬೆಳೆದ ಗರ್ಭಸ್ಥ ಮಗು ತಿರುಗಿ ತಲೆ ಕೆಳಗೆ ಬಂದು ನಾರ್ಮಲ್ ಡೆಲಿವರಿ ಆಗುವುದೆಂದು ನಂಬುತ್ತಾರೆ. ಯಾವ ತಾರೀಖು, ಎಷ್ಟು ಘಂಟೆಗೆ ಮಗು ಹುಟ್ಟಿದರೆ ಒಳ್ಳೆಯದೆಂದು ಮೊದಲೇ ಮಗುವಿನ ಜಾತಕ ಬರೆಸಿಕೊಂಡು ಅಷ್ಟು ಗಂಟೆಗೆ ಸರಿಯಾಗಿ ಸಿಸೇರಿಯನ್ ಮಾಡುವಂತೆ ವೈದ್ಯರನ್ನು ಕೇಳುತ್ತಾರೆ. ಮೊದಲ ಮಕ್ಕಳು ಹೆಣ್ಣಾಗಿದ್ದರಂತೂ ಯಾವ ಆಸ್ಪತ್ರೆಗೆ ಹೋದರೆ ಗಂಡು ಹುಟ್ಟುವುದೆಂದು ಹೆರಿಗೆಯ ಮುನ್ನಾದಿನ ಜ್ಯೋತಿಷಿಗಳ ಸಲಹೆ ಕೇಳುತ್ತಾರೆ. ಚಿಕನ್ ತಿಂದೇ ಗರ್ಭಪಾತವಾಯಿತು: ಡಾಕ್ಟರು ಕೊಟ್ಟ ಟಾನಿಕ್ ಗುಳಿಗೆ ತಿಂದು ಮಗು ಬೆಳೆದು ಹೆರಿಗೆ ಕಷ್ಟವಾಯಿತು ಎಂದು ನಂಬುತ್ತಾರೆ. ಗ್ರಹಣ, ಅದರಲ್ಲೂ ಅಮಾವಾಸ್ಯೆ ದಿನ ಆದಷ್ಟೂ ಹೆರಿಗೆ ಆಗದಂತೆ ನೋಡಿಕೊಳ್ಳಲು ವೈದ್ಯರನ್ನು ವಿನಂತಿಸುತ್ತಾರೆ. ಮುಟ್ಟಾದ ಎಷ್ಟನೇ ದಿನ, ಹೇಗೆಹೇಗೆ ಗಂಡ ಹೆಂಡತಿ ಕೂಡಿದರೆ ಗಂಡು ಮಗುವಾಗುತ್ತದೆ ಎಂದು ನಂಬಿ ಚೈನೀಸ್ ಕ್ಯಾಲೆಂಡರು ಅನುಸರಿಸುತ್ತಾರೆ.

ಹಾಕುತ್ತ ಹೋದರೆ ಎಲ್ಲ ವಾಕ್ಯಗಳಿಗೂ ಆಶ್ಚರ್ಯ ಸೂಚಕ ಚಿಹ್ನೆ ಹಾಕಬೇಕು. ಹೆರಿಗೆ ಎಂಬ ಒಮ್ಮೆ ಸತ್ತು ಮತ್ತೆ ಹುಟ್ಟುವ ಕ್ರಿಯೆಯ ವಿಷಯದಲ್ಲಿ ಮನುಷ್ಯಸಮಾಜ ಹೆಂಗಸಿಗೆ ಕೊಡುವ ಮಾನಸಿಕ ಹಿಂಸೆಗಳಿಗೆ ಎಷ್ಟೊಂದು ಮುಖಗಳು!

ಹೀಗೆ ಆರೋಗ್ಯ ಮತ್ತು ಆಹಾರ – ಈ ಎರಡೇ ವಿಷಯಗಳ ಕುರಿತು ನೋಡಿದರೂ ತಪ್ಪು ತಿಳುವಳಿಕೆಗಳು ಹಾಗೂ ಮೂಢನಂಬಿಕೆಗಳು ಅಗಾಧವಾಗಿ, ಆಳವಾಗಿ ಇವೆ. ಈಗಲೂ ಜನರಲ್ ಪ್ರಾಕ್ಟೀಸಿನಲ್ಲಿ ನೋಡುವಂತೆ ಅರ್ಧಕ್ಕಿಂತ ಹೆಚ್ಚು ರೋಗಿಗಳು ತಮ್ಮ ಕಾಯಿಲೆಗೆ ಕೇವಲ ವೈದ್ಯರನ್ನು, ಅವರ ಚಿಕಿತ್ಸೆಯನ್ನು ನಂಬುವುದಿಲ್ಲ. ಅದರ ಜೊತೆಗೆ ತಮ್ಮ ಮನೆ ಮದ್ದು ಅಥವಾ ಮನೆದೇವರ ಸಲಹೆ, ಅದು ಕೊಟ್ಟ ಪ್ರಸಾದ, ಸೂಚನೆಗಳನ್ನು ಪಾಲಿಸುತ್ತಾರೆ. ಅರಿಶಿನ ಕಾಮಾಲೆ ಎಂಬ ಕಾಯಿಲೆ ಬರಲು ಕಾರಣ, ಪರಿಹಾರ, ಲಭ್ಯವಿರುವ ಚಿಕಿತ್ಸೆ ಎಲ್ಲ ತಿಳಿಹೇಳಿದ ಬಳಿಕವೂ ಮನೆಗೆ ಹೋಗಿದ್ದೇ ಕೈ ಸುಡಿಸುತ್ತಾರೆ. ಎಲುವು ಮುರಿದವರು, 'ಮುರಿದಿದೆ ಎಂದು ಹೇಳಲಷ್ಟೇ ಎಕ್ಸ್‌ರೇ ಮಾಡಿ, ಮುಂದಿನ ಜವಾಬ್ದಾರಿ ನಾವು ನೋಡಿಕೊಳ್ತೇವೆ' ಎಂದು ನೇರವಾಗಿ ಹೇಳುತ್ತಾರೆ. ಹಸುಗೂಸು, ಮಕ್ಕಳಿಗೆ ಬೇರೆಬೇರೆ ಕಾರಣಗಳಿಗಾಗಿ ಅಪಸ್ಮಾರ(ಫಿಟ್ಸ್) ಬಂದಿದ್ದರೂ ಅದಕ್ಕೆ ಬಾಲಗ್ರಹ, ಕಣ್ಣಿ ಎಂಬಿತ್ಯಾದಿ ನಾಮವಿಶೇಷಣಗಳ ಅಡಿಯಲ್ಲಿ ಹಣೆಮೇಲೆ ಬಳೆಯ ಚುಳಕೆಯಿಂದ ಸುಟ್ಟು, ನೆತ್ತಿಗೇನನ್ನೋ ಬಡಿದು ತಮ್ಮ ಚಿಕಿತ್ಸೆ ನಡೆಸುತ್ತಾರೆ. ಬುದ್ಧಿಮಾಂದ್ಯ ಮಕ್ಕಳನ್ನು ಶೈತಾನ/ದೆವ್ವ ಬಡಿದ ವ್ಯಕ್ತಿಗಳು ಎಂದು ಮೊದಮೊದಲು ಕೊಲ್ಲಲಾಗುತ್ತಿತ್ತಂತೆ. ತೊನ್ನು ಎಂಬ ಕಾಯಿಲೆಯಲ್ಲದ ಚರ್ಮದ ಕಾಯಿಲೆ ಹಾಗೂ ಅದನ್ನು ಹೊಂದಿರುವ ವ್ಯಕ್ತಿಗಳು ಇನ್ನಿಲ್ಲದ ಮೌಢ್ಯಕ್ಕೆ ಬಲಿಯಾಗಿದ್ದಾರೆ. ತೊನ್ನು ಹಿಡಿದವರು ಅಪಶಕುನ ಸೂಚಕ ವ್ಯಕ್ತಿಗಳು ಎಂಬಂತೆ ಇವತ್ತಿಗೂ ಪರಿಗಣಿಸಲಾಗುತ್ತದೆ.

೨೦೦೨ರಲ್ಲಿ ರೆವರೆಂಡ್ ಅಲೆಕ್ಸ್ ಆರ್ಬಿಟೋ ಎಂಬ ಫಿಲಿಫೀನ್ಸ್ ವ್ಯಕ್ತಿ ಭಾರತಕ್ಕೆ ಬಂದ. ಕೊಯ್ಯದೇ, ಕತ್ತರಿಸದೇ, ಒಂದು ಹನಿ ರಕ್ತವನ್ನೂ ಸುರಿಸದೇ ತಾನು 'ಸೈಕಿಕ್ ಸರ್ಜರಿ' ಮಾಡಿ ಗಡ್ಡೆಗಳನ್ನು ಮಾಯ ಮಾಡಿಬಿಡುವುದಾಗಿ ಹೇಳಿಕೊಂಡ. ಅವನು ಭಾರತವಷ್ಟೇ ಅಲ್ಲ, ಹಲವು ದೇಶಗಳಲ್ಲಿ ಹೀಗೆ ಆಪರೇಷನ್ ಇಲ್ಲದೇ ಕೇವಲ ಕೈಯಲ್ಲಿ ಮುಟ್ಟಿ ಗೆಡ್ಡೆ ಕರಗಿಸಿದ್ದ ! ಅಂಥವನು ಬರುತ್ತೇನೆ ಎಂದಿದ್ದೇ ಇಲ್ಲೂ ದೊಡ್ಡ ಕ್ಯಾಂಪ್ ಒಂದನ್ನು ಸಂಘಟಿಸಲಾಯ್ತು. ಹಲವರ ವಿರೋಧ ಇದ್ದರೂ ಲೆಕ್ಕಿಸದೇ ಆತನನ್ನು ಕರೆಸಲಾಯ್ತು. ಅವನ ಚಿಕಿತ್ಸೆ ಶುರುವಾಗಿತ್ತಷ್ಟೇ, ಕೋರ್ಟ್ ಬಂಧನದ ಆಜ್ಞೆ ಜಾರಿಮಾಡಿತು. ಆತ ಕೂಡಲೇ ಪರಾರಿಯಾಗಿ ಆಶ್ಚರ್ಯಕರ ರೀತಿಯಲ್ಲಿ ಫಿಲಿಫೀನ್ಸ್‌ಗೆ ತಪ್ಪಿಸಿಕೊಂಡು ಹೋದ.

ಜನರಿಗೆ ಪಂಗನಾಮ ಎಳೆಯಲು ಫಿಲಿಫೀನ್ಸ್‌ನಿಂದ ಯಾರೋ ಬರಬೇಕಾದ ಅವಶ್ಯಕತೆಯಿರಲಿಲ್ಲ. ಆರೋಗ್ಯ ಕುರಿತ ಅಜ್ಞಾನ ನಮ್ಮಲ್ಲಿ ಎಷ್ಟರಮಟ್ಟಿಗೆ ವ್ಯಾಪಕ ವಾಗಿದೆಯೆಂದರೆ ಮಾರಿಗೊಬ್ಬ, ಮೊಳಕ್ಕೊಬ್ಬ ನಕಲಿ ವೈದ್ಯ ರಾಜಾರೋಷವಾಗಿ ಸುಳ್ಳು ಬೋರ್ಡು ತಗಲಿಸಿಕೊಂಡು ಪ್ರಾಕ್ಟೀಸ್ ಮಾಡಲು ಸಾಧ್ಯವಾಗಿದೆ. ಬೂದಿ ಕೊಟ್ಟು ಕಾಯಿಲೆ ಗುಣಪಡಿಸುವೆನೆಂದು ಹೇಳಿ ನಂಬಿಸಿ ಬದುಕಲು ಈ ದೇಶದಲ್ಲಿ ಸಾಧ್ಯವಿದೆ. ಅಂಥವರು ರೋಚಕವಾಗಿ ಹೇಳುವ ಹಸಿಸುಳ್ಳುಗಳನ್ನು ಜನ ಹಾಗೇ ನಂಬುತ್ತಾರೆ. ಕ್ಯಾನ್ಸರ್, ಏಡ್ಸ್‌ನಂತಹ ಮಾರಣಾಂತಿಕ ರೋಗಗಳನ್ನು; ಇನ್ನೆಷ್ಟೋ



ನಾವುಕೊಟ್ಟ ಮೊಟ್ಟೆಗಳು ಕೊಳೆತಿರಬೇಕು ಕಣಯ್ಯ ಅದಕ್ಕೆ ಹೀಗೆ..!

ಗುಣವಾಗದ ಕಾಯಿಲೆಗಳನ್ನು ತಾವು ಖಂಡಿತಾ ಗುಣಪಡಿಸುವುದಾಗಿ, ಇಲ್ಲದಿದ್ದರೆ ಹಣ ವಾಪಸು ನೀಡುವುದಾಗಿ ಸಾರುವ ನಕಲಿ ವೈದ್ಯರ ಪಡೆಯೇ ನಮ್ಮ ದೇಶದಲ್ಲಿದೆ.

ದುಬಾರಿಯಾಗಿರುವ ಆಧುನಿಕ ವೈದ್ಯಸೇವೆ, ತುಟಿ ಹೊಲಿದುಕೊಂಡ ಯಂತ್ರಗಳಂತಿರುವ ತಜ್ಞವೈದ್ಯರು, ದಿಕ್ಕೆಡಿಸುವ ಉಚಿತ ಸಲಹೆಗಳು, ಸರ್ಕಾರಿ ಆಸ್ಪತ್ರೆಗಳಲ್ಲಿ ದೊರಕದ ಕಾಳಜಿ, ಕಾಯಿಲೆ–ಅದಕ್ಕೆ ಲಭ್ಯವಿರುವ ಚಿಕಿತ್ಸೆ ಕುರಿತ ಅಜ್ಞಾನ – ಈ ಎಲ್ಲ ಕಾರಣಗಳಿಂದ ಬಹುಪಾಲು ಬಡವರು ನಕಲಿಗಳ ಮೊರೆ ಹೋಗುವುದು ಅನಿವಾರ್ಯವಾಗಿದೆ. ದುಬಾರಿ ಆಸ್ಪತ್ರೆಗಳು ಅವರು ಅಂಥ ವ್ಯವಸ್ಥೆಗೆ ಜೋತುಬೀಳುವಂತೆ ಮಾಡಿರುವುದು ಅರ್ಧ ಸತ್ಯವಾದರೆ; ವೈಜ್ಞಾನಿಕ ಸತ್ಯ ಏನೆಂದು ತಿಳಿಯುವ ಕನಿಷ್ಠ ಕುತೂಹಲವೂ ಜನರ ಟೆಂಪರಮೆಂಟ್‌ನಲ್ಲಿ ಇಲ್ಲದಿರುವುದು ಮೌಢ್ಯ ಬೆಳೆಯಲು ಇನ್ನೊಂದು ಕಾರಣವಾಗಿದೆ.

✶ ✶ ✶

ಇತ್ತೀಚಿನ ವರ್ಷಗಳಲ್ಲಿ – ಅದರಲ್ಲೂ ಮಾಹಿತಿ ಕ್ರಾಂತಿ ಸಂಭವಿಸಿದ ೨೧ನೇ ಶತಮಾನದ ಸಾಫ್ಟ್‌ವೇರ್ ಯುಗದಲ್ಲಿ ಎಷ್ಟೊಂದು ಮೌಢ್ಯದ ಘಟನೆಗಳು ಸಂಭವಿಸಿವೆ ? ಸಂಭವಿಸುತ್ತಿವೆ !

ಕಳೆದ ವರ್ಷ ಡಿಸೆಂಬರ್ ೨೧ಕ್ಕೆ ಪ್ರಪಂಚ ಮುಳುಗೇ ಹೋಗುತ್ತೆನ್ನುವ ಗುಲ್ಲು ಶುರುವಾಯಿತು. 'ಡೂಮ್ಸ್ ಡೆ' ಕುರಿತು ನಾಸ್ಟ್ರಡಾಮಸ್ ವ್ಯಾಖ್ಯಾನವನ್ನೂ ಸಹಾಯಕ್ಕೆ ಪಡೆದು ಊಹಿಸಲಾಯಿತು. ಅದಕ್ಕಿಂತ ಮೊದಲೂ ಪ್ರಪಂಚ ಕೊನೆಯಾಗಿ ನಾಶವಾಗುವ ಕುರಿತು ಕೆಲ ಡೆಡ್‌ಲೈನ್‌ಗಳನ್ನು ಕೊಡಲಾಗಿತ್ತು. ಅವರ ದುರದೃಷ್ಟಕ್ಕೆ ಅಂಥದೇನೂ ಸಂಭವಿಸದೇ ಎಲ್ಲ ಕೇಡಿಗರನ್ನೂ–ಕೇಡುಗಳನ್ನೂ ತನ್ನ ಮೈಮೇಲೆ ಹೊತ್ತ ಭೂಮ್ತಾಯಿ ಕ್ಷಮಯಾ ಧರಿತ್ರಿಯಾಗಿ ಎಂದಿನಂತೆ ತಿರುಗತೊಡಗಿದಳು. ಕೆಲ ವರ್ಷಗಳ ಕೆಳಗೆ ಗಣೇಶನ ಮೂರ್ತಿ ಹಾಲು ಕುಡಿಯುತ್ತದೆಂದು ಎದ್ದ ಗುಲ್ಲು ಕಾಡ್ಗಿಚ್ಚಿನಂತೆ ಹರಡಿ ದೇಶದ ಎಲ್ಲ ಗಣಪತಿಯ ಕ್ಯಾಲೆಂಡರುಗಳೂ ಗುಡಿಗಳೂ ಹಾಲು ಕುಡಿಸುವವರಿಂದ ಕಿಕ್ಕಿರಿದು ತುಂಬಿದವು. ಸನಲ್ ಎಡಮರುಕು ಎಂಬಾತ ಜೀಸಸ್‌ನ ಮೂರ್ತಿ ಕಣ್ಣೀರು ಸುರಿಸಿತೆಂದು ಹೇಳಿ ವಿವಾದವಾಗಿತ್ತು. ನಂತರ ತನ್ನ ಬಂಧನವಾಗಬಹುದೆಂದು ತಿಳಿದ ಆತ ಫಿನ್ಲೆಂಡಿಗೆ ಹೋದವ ವಾಪಸಾಗದೇ ಅಲ್ಲೇ ಉಳಿದ.

ನರಬಲಿ ಒಂದು ಅಮಾನುಷ ಮೌಢ್ಯ. ಈ ವರುಷ ಕರ್ನಾಟಕದಲ್ಲಿ ನಡೆದ ಒಂದು ನರಬಲಿಯ ಪ್ರಕರಣವನ್ನು ಗಮನಿಸಿರಬಹುದು. ನೆಲದಾಳದಲ್ಲಿರುವ ನಿಧಿ ಹುಡುಕುವ ಮೊದಲು ನಿಧಿ ಕಾಯುವ ಶಕ್ತಿಗಳನ್ನು ಸಂಪ್ರೀತಗೊಳಿಸಲು ನರಬಲಿ ಕೊಡುತ್ತಿದ್ದು ಅದು ಇಂದಿನವರೆಗೂ ಅಲ್ಲಿಲ್ಲಿ ನಡೆಯುತ್ತಿದೆ. ನರಬಲಿಗೆ ಈಡಾಗುತ್ತಿದ್ದವರು ಬಡ ಮಹಿಳೆಯರು ಮತ್ತು ಮಕ್ಕಳು ಎಂದು ಬೇರೆ ಹೇಳಬೇಕಿಲ್ಲ.

ಮಾಟಗಾತಿಯರೆಂಬ ಶಂಕೆಯಿಂದ ನಡೆಸುವ ಕೊಲೆಗಳು, ಮಾಟವೆಂಬ ಬ್ಲ್ಯಾಕ್ ಮ್ಯಾಜಿಕ್ ಕುರಿತು ಜನರಿಗಿರುವ ಭಯವೂ ಮೌಢ್ಯದ ಪರಮಾವಧಿಯೇ. ಇತ್ತೀಚೆಗೆ ನ್ಯಾಷನಲ್ ಕಮಿಷನ್ ಫಾರ್ ವುಮೆನ್, 'ನ್ಯಾಷನಲ್ ಕ್ರೈಂ ರೆಕಾರ್ಡ್ಸ್ ಬ್ಯೂರೋ' ಉಲ್ಲೇಖಿಸಿ ಮಾಡಿದ ವರದಿಯಲ್ಲಿ ಹೇಳಿರುವಂತೆ ೨೦೦೮ರಿಂದ ಈಚೆಗೆ ೭೬೮ ಮಹಿಳೆಯರು ಮಾಟಗಾತಿ ಎಂಬ ಶಂಕೆಯ ಮೇಲೆ ಕೊಲೆಯಾಗಿದ್ದಾರೆ. ದಕ್ಷಿಣದ ರಾಜ್ಯಗಳಿಗಿಂತ ಉತ್ತರದ ರಾಜ್ಯಗಳಲ್ಲಿ ಮಾಟದ ಪಿಡುಗು ಹೆಚ್ಚು. ಹಾಗೇ ಬುದ್ಧಿವಂತರ ರಾಜ್ಯ ಕೇರಳದಲ್ಲೂ ಮಾಟ–ಜ್ಯೋತಿಷ್ಯದ ಪಿಡುಗು ಘನವಾಗಿದೆ.

೭೪% ಸಾಕ್ಷರತೆ ಇರುವ ನಮ್ಮ ದೇಶದಲ್ಲಿ ಜನರ ಮೌಢ್ಯವನ್ನೇ ಬಂಡವಾಳವಾಗಿಸಿ ಹಗಲು ದರೋಡೆ ನಡೆಯುತ್ತಿರುವುದು ಹೇಗೆ ? ಅವರಿಗೆ ಯಾರ ಕುಮ್ಮಕ್ಕಿದೆ? ಕೇವಲ ವಂಚಕರಿಗೆ, ಪುರೋಹಿತ ವರ್ಗದವರಿಗೆ ಕಾಸು ಗಿಟ್ಟಿಸಿಕೊಡುವ ಮೌಢ್ಯವನ್ನು ಜನರಿಗೆ ಜಾಗೃತಿ, ಶಿಕ್ಷಣ ನೀಡಿ ಸರಿಪಡಿಸಬೇಕಲ್ಲವೆ?

ಶಿಕ್ಷಣವು ಮೌಢ್ಯವನ್ನು ಸ್ವಲ್ಪ ಮಟ್ಟಿಗೆ ಕಡಿಮೆ ಮಾಡುವುದಾದರೂ ಶಿಕ್ಷಿತರ ಮೌಢ್ಯ ಬೇರೆಯೇ ಬಗೆಯದು ಮತ್ತು ಅದು ಅನಕ್ಷರಸ್ಥರ ಮೌಢ್ಯಕ್ಕಿಂತ ಅಪಾಯಕಾರಿಯಾದುದು. ಅರೆಬೆಂದ ಕಾಳನ್ನು ಅನ್ನವನ್ನಾಗಿಸಲೂ ಬಾರದು; ಹಿಟ್ಟನ್ನಾಗಿಸಲೂ ಬಾರದು. ವಿದ್ಯಾವಂತರ ಮೌಢ್ಯ ಅವರಿಗಷ್ಟೇ ಅಪಾಯಕರವಲ್ಲ, ಅವರನ್ನು ನೋಡಿ ಇತರರು ಅನುಕರಿಸುವುದರಿಂದ ಹೆಚ್ಚು ಅಪಾಯಕಾರಿಯಾಗುತ್ತದೆ. ಡಾಕ್ಟರು, ಎಂಜಿನಿಯರು, ಲಾಯರುಗಳೆಲ್ಲ ಎಂಜಲೆಲೆ ಮೇಲೆ ಉರುಳುತ್ತಾರೆ ಎನ್ನುವುದು ಮಡೆಸ್ನಾನಕ್ಕೆ ವಿಶೇಷ ಮಾನ್ಯತೆಯನ್ನು ಜನಸಾಮಾನ್ಯರ ಮನಸ್ಸಿನಲ್ಲಿ ಮೂಡಿಸುತ್ತದೆ. ಇಸ್ರೋ ವಿಜ್ಞಾನಿಯೇ ತಿರುಪತಿ ತಿಮ್ಮಪ್ಪನೆದುರು ಉಪಗ್ರಹ ಮಾದರಿ ಇಟ್ಟು ಪೂಜಿಸಿದ ಮೇಲೆ; ತಮ್ಮ ಆರಾಧ್ಯ ದೈವ ಕ್ರಿಕೆಟಿಗ ಆಷಾಢಬಲಿ ಮಾಡಿದ ಮೇಲೆ; ವೈದ್ಯರೇ ಆಪರೇಷನ್ನಿಗೆ ಮೊದಲು ಪೂಜೆ ಮಾಡುವರೆಂದ ಮೇಲೆ – ಇನ್ನು ಪಾಮರರಾದ ತಾವು ಕುಂಕುಮ–ವಿಭೂತಿ–ಜ್ಯೋತಿಷ್ಯ ನಂಬುವುದೇನೂ ದೊಡ್ಡದಲ್ಲ ಎಂದೇ ಜನಸಾಮಾನ್ಯ ಭಾವಿಸುತ್ತಾನೆ. ಹೀಗೆ ಅಕ್ಷರ ಕಲಿತವರು ಹಾಗೂ ಗಣ್ಯರು ವ್ಯವಸ್ಥಿತವಾಗಿ ಮೌಢ್ಯ ಹರಡಲು ಕಾರಣವಾಗುತ್ತಾರೆ.



ಜನರಿಗೆ ತಿಳುವಳಿಕೆ–ಜಾಗೃತಿ ನೀಡಬೇಕಾದ ಮಾಧ್ಯಮಗಳು ದಿನನಿತ್ಯ ಜ್ಯೋತಿಷ್ಯ–ಭವಿಷ್ಯ ಕಾರ್ಯಕ್ರಮ ಪ್ರಸಾರ ಮಾಡುತ್ತವೆ. ಬಾನಾಮತಿ, ದೆವ್ವ ಭೂತದ ಸುಳ್ಳು ಕತೆಗಳನ್ನು ಧಾರಾವಾಹಿಯಾಗಿಸುತ್ತವೆ. 'ಯಾಕಂತ ಗೊತ್ತಿಲ್ಲ, ಯಾರ್‍ಗೂ ಗೊತ್ತಿಲ್ಲ...' ಎಂದು ಗೊಗ್ಗರು ದನಿಯಲ್ಲಿ ಹಸಿಸುಳ್ಳು ಬಿತ್ತರಿಸುವ ಚಾನೆಲ್‌ಗಳು ಅನಕ್ಷರಸ್ಥರಲ್ಲಿ ಮೌಢ್ಯ ಬಿತ್ತನೆ ಮಾಡುವ ಉಪಕರಣವಾಗಿವೆ. ಭೂತದೆವ್ವದ ಸಿನಿಮಾಗಳು ಬಾಕ್ಸಾಫೀಸಿನಲ್ಲಿ ಜಯಭೇರಿ ಹೊಡೆಯುತ್ತವೆ. ಮಕ್ಕಳಿಗೆ ಹೇಳುವ ಕತೆಗಳಲ್ಲೂ ದೆವ್ವ–ಭೂತ–ಬೇತಾಳಗಳು ಸುಳಿಯುತ್ತಾರೆ. ಅಷ್ಟೇ ಅಲ್ಲ, ವಿದೇಶೀ ಹ್ಯಾರಿ ಪಾಟರ್ ಮಾಟವಿದ್ಯೆಯ ಬಗೆಗೆ ಏನೇನೋ ಜ್ಞಾನವನ್ನು ಪುಟ್ಟ ಮಕ್ಕಳ ಮನಸ್ಸಿನಲ್ಲಿ ತುಂಬಿದ್ದಾನೆ. ಮಕ್ಕಳಲ್ಲಿ ಇವು ಒಂದು ಮಟ್ಟದವರೆಗೆ ಕಲ್ಪನಾಶಕ್ತಿ ಬೆಳೆಸಬಹುದಾದರೂ ಪ್ರಶ್ನೆ ಕೇಳಲಾರದ ಮೊದ್ದುತನವನ್ನೂ ಸೃಷ್ಟಿಸುತ್ತದೆ.

ನಮ್ಮ ಜನನಾಯಕರು ಯಾರೋ ಸಾಧುವಿಗೆ ಬಿದ್ದ ಕನಸು ನಂಬಿ ನಿಧಿಯ ಶೋಧಕ್ಕೆ ಅನುಮತಿ ನೀಡುತ್ತಾರೆ. ಅಧಿಕಾರದ ಕಾರಿಡಾರುಗಳಲ್ಲಿ ಹೋಮ ಹವನ ನಡೆಸುತ್ತ, ಚಾಮರಾಜ ನಗರವೇ ಅಪಶಕುನದ ಊರು ಎಂಬ ಮೌಢ್ಯವನ್ನು ಪೋಷಿಸುತ್ತಾರೆ. ಸೆಕ್ಯುಲರ್ ಆಗಿರಬೇಕಾದ ಸರ್ಕಾರಗಳೇ ತೀರ್ಥ–ಪ್ರಸಾದ ವಿನಿಯೋಗ ಮಾಡುತ್ತ; ತೀರ್ಥಯಾತ್ರೆಗೆ ಸಬ್ಸಿಡಿ ಕೊಡುತ್ತ ಆರ್ಟ್ ಆಫ್ ಲಿವಿಂಗ್‌ಗಳಿಗೆ ಪುಕ್ಕಟೆ ನೂರಾರು ಎಕರೆ ಜಾಗ ನೀಡುತ್ತವೆ. ಮಠಮಾನ್ಯಗಳಿಗೆ ಕೋಟ್ಯಂತರ ಅನುದಾನ ಕೊಡುತ್ತ; ಜ್ಯೋತಿಷ್ಯ, ವಾಸ್ತುವನ್ನು ವಿಶ್ವವಿದ್ಯಾಲಯ ಪಠ್ಯವಾಗಿಸುತ್ತ; ಜನರನ್ನು ಧಾರ್ಮಿಕವಾಗಿ ಸಂಪ್ರೀತಗೊಳಿಸಲು ಹಲವು ಜನಪ್ರಿಯ ಯೋಜನೆಗಳನ್ನು ಘೋಷಿಸಲಾಗುತ್ತದೆ.

ವಸ್ತುಸ್ಥಿತಿ ಹೀಗಿರುವಾಗ ವಿಜ್ಞಾನಿಗಳೂ ಸೇರಿದಂತೆ ಎಷ್ಟೋ ಜನ ಜ್ಯೋತಿಷ್ಯ ಒಂದು ವಿಜ್ಞಾನ ಎಂದು ನಂಬುತ್ತಾರೆ. ೨೦೦೬ರಿಂದ ದೆಹಲಿ ವಿಶ್ವವಿದ್ಯಾಲಯದ ಸಂಸ್ಕೃತ ಭಾಷೆ ಕಲಿಯುವ ಪದವಿ ವಿದ್ಯಾರ್ಥಿಗಳು ಮೂರನೇ ವರ್ಷದಲ್ಲಿ ಜ್ಯೋತಿಷ್ಯ–ವಾಸ್ತು ಶಾಸ್ತ್ರ– ಆಯುರ್ವೇದವನ್ನು ಕಂಪಲ್ಸರಿ ವಿಷಯವನ್ನಾಗಿ ಕಲಿಯಬೇಕಿದೆ. ಶುಕ್ರವಾರ ಸಂಜೆಯಾದ ಮೇಲೆ ಮನೆಯಿಂದ ಹೊರಗೆ ಹಾಲು–ಸಕ್ಕರೆ–ಹಣ ಹೊರಹೋದರೆ ಲಕ್ಷ್ಮಿಯೇ ತಮ್ಮ ಕೈಬಿಟ್ಟಳೆಂದು ೯೦% ಜನ ಭಾವಿಸುವ ದೇಶದಲ್ಲಿ ಇಂಥ ವಿಷಯಗಳನ್ನು ಪದವಿ ತರಗತಿಗೆ ಕಲಿಸುವ ಔಚಿತ್ಯವೇನು ? ಯುವ ಪೀಳಿಗೆಯಲ್ಲಿ ಶಿಕ್ಷಣವು ವೈಜ್ಞಾನಿಕ ಮನೋಭಾವ ಬೆಳೆಸಬೇಕೇ ಹೊರತು, ಪರಂಪರೆಯ ಹೆಸರಿನಲ್ಲಿ ತುಕ್ಕು ಹಿಡಿದ ಶಾಸ್ತ್ರ ಪುರಾಣಗಳನ್ನು ಶಾಸ್ತ್ರೀಯವಾಗಿ ಕಲಿಯುವ ಅವಶ್ಯಕತೆಯಿಲ್ಲ. ಸಂಸ್ಕೃತ ವಿಶ್ವವಿದ್ಯಾಲಯಗಳೂ ಜ್ಯೋತಿಷ್ಯ ಕೋರ್ಸುಗಳೂ ಶುರುವಾಗಲು ತುದಿಗಾಲ ಮೇಲೆ ಕಾಯುತ್ತಿರುವ ಈ ದಿನಗಳಲ್ಲಿ 'ಫೇಯ್ತ್ ಹೀಲಿಂಗ್' ಕೂಡಾ ಒಂದು ಉದ್ಯಮವಾಗಿ ಬೆಳೆಯುತ್ತಿದೆ. ಜನರ ಮೌಢ್ಯ ಉಳಿದು, ಬೆಳೆದು ಬರಲು ಅವರ ಅಜ್ಞಾನದ ಜೊತೆಗೆ ಇಂಥ ಎಲ್ಲ ಸಂಗತಿಗಳೂ ಪೂರಕವಾಗಿರುವುದನ್ನು ಗಮನಿಸಬೇಕಿದೆ.

ಧಾರ್ಮಿಕ ವ್ಯಕ್ತಿಗಳು–ಗಣ್ಯರು–ಮಾಧ್ಯಮದವರು–ಶಿಕ್ಷಣ ವ್ಯವಸ್ಥೆ ಎಲ್ಲವೂ ಹೀಗಿರುವಾಗ ಅರೆ ನಂಬಿಕೆಗಳು, ಮೂಢನಂಬಿಕೆಗಳು ಧಾರ್ಮಿಕತೆಯೂ ಅಲ್ಲ; ನೈತಿಕತೆಯೂ ಅಲ್ಲ; ಅಧ್ಯಾತ್ಮವಂತೂ ಖಂಡಿತಾ ಅಲ್ಲ ಎಂದು ಹೇಳುವವರಾರು ? ಹಾಗೆ ಹೇಳುವುದೇ ಕಷ್ಟ, ಏಕೆಂದರೆ 'ಧಾರ್ಮಿಕ ಭಾವನೆಗಳಿಗೆ ಧಕ್ಕೆ' ಆಗುತ್ತದೆ.

ಹೀಗಿರುತ್ತ ಕೇವಲ ಕಾನೂನು ಜಾರಿಯಿಂದ ಮೌಢ್ಯ ನಾಶವಾಗ ಬಹುದೆಂದು ಅನಿಸುವುದಿಲ್ಲ. ನಮ್ಮ ಜನರ ಬಳಿ ಗುದ್ದಾಡುತ್ತ ಸಾಧ್ಯವಾದಷ್ಟು ವೈಜ್ಞಾನಿಕ, ವೈಚಾರಿಕ ವಿಷಯಗಳನ್ನು ಅವರಿಗೆ ತಟ್ಟುವಂತೆ ಕತೆಯಾಗಿಸಿ ಹೇಳುವುದೇ ಸರಿಯಾದ ದಾರಿ ಎನಿಸುತ್ತಿದೆ.


**ಡಾ॥ ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ, ಕಾವಲಕ್ಕಿ ಅಂಚೆ
ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ, ಪಿನ್ – ೫೮೧ ೩೬೧





# ದೀಪಸ್ತಂಭದ ಅಡಿಯಲ್ಲಿ

**ಡಾ॥ ಸಿದ್ದನಗೌಡ ಪಾಟೀಲ**

ಪ್ರೊ॥ ಅಮೀನಪ್ಪ ಸಂಗನಬಸಪ್ಪ ಹಿಪ್ಪರಗಿ ಅವರಿಗೆ ಅವರ ಸ್ನೇಹಿತರು, ಶಿಷ್ಯರು, ಹಿತೈಷಿಗಳು, ಅಭಿಮಾನಿಗಳು ಸೇರಿ ಅರ್ಪಿಸಿದ ಅಭಿನಂದನ ಗ್ರಂಥದ ಹೆಸರು 'ದೀಪಸ್ತಂಭ'. ಅಮೀನಪ್ಪ ಎಂಬ ಹೆಸರಿನಲ್ಲಿಯೇ ಸೌಹಾರ್ದ ಪರಂಪರೆಯನ್ನು ಹೊಂದಿದ್ದ ಪ್ರೊ॥ ಎ. ಎಸ್. ಹಿಪ್ಪರಗಿಯವರು ಊಳಿಗಮಾನ್ಯ ಸಂಸ್ಕೃತಿ ನಿರ್ಮಿಸಿದ್ದ ಆ ಭಾಗದ ಕತ್ತಲೆ ಬದುಕಿನಲ್ಲಿ ಒಂದು ದೀಪಸ್ತಂಭವಾಗಿದ್ದವರು. ಆ ದೀಪಸ್ತಂಭದ ಹಣತೆ ಬೀರಿದ ಬೆಳಕಿನಲ್ಲಿ ನೂರಾರು ಜನ ನಡೆದು ಉತ್ತಮ ಬದುಕು ರೂಪಿಸಿಕೊಂಡಿದ್ದಾರೆ. ಹಾಗೇ ಆ ಹಣತೆಯಿಂದ ನೂರಾರು ಹಣತೆಗಳು ದೀಪ ಹಚ್ಚಿಕೊಂಡು ಸಾಮಾಜಿಕ, ಶೈಕ್ಷಣಿಕ ಲೋಕದ ಕತ್ತಲೆಯನ್ನು ದೂರಮಾಡಲು ಯತ್ನಿಸುತ್ತಿವೆ. ಅಂಥ ಪ್ರಖರ ಬೆಳಕನ್ನು ನೀಡಿದ, ದೀಪಸ್ತಂಭವಾಗಿದ್ದ ಪ್ರೊ॥ ಎ. ಎಸ್. ಹಿಪ್ಪರಗಿಯವರು ನಿಧನರಾಗಿ ಒಂದು ವರ್ಷವಾಯಿತು. ಉತ್ತರ ಕರ್ನಾಟಕದ ವಿಜಾಪೂರ ಜಿಲ್ಲೆಯಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡಿದ್ದ ಪ್ರೊ॥ ಹಿಪ್ಪರಗಿಯವರು ಆ ಭಾಗದ ಜನಮನದಲ್ಲಿ ಇಂದಿಗೂ ಬೆಳಕಿನ ಕಿರಣವಾಗಿಯೇ ಉಳಿದಿದ್ದಾರೆ. ಶರಣ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು, ತಮ್ಮ ಅಪಾರಜ್ಞಾನ, ಪಾಂಡಿತ್ಯ, ಸಾಮಾಜಿಕ ಕಳಕಳಿಯಿಂದ ಒಬ್ಬ ಮಾದರಿ 'ಗುರು'ವಾಗಿದ್ದ ಅವರು ಕಳೆದ ೨೦೧೨ರ ಡಿಸೆಂಬರ್ ತಿಂಗಳಲ್ಲಿ ನಿಧನರಾದರು.

ಸಾಮಾನ್ಯವಾಗಿ ದೀಪದ ಕೆಳಗೆ ಕತ್ತಲೆಯೆಂದು ಭಾವಿಸಿ ಆ ಪ್ರದೇಶವನ್ನು ನಿರ್ಲಕ್ಷಿಸಿ ಕೇವಲ ದೀಪದ ಕುರಿತು ಮಾತನಾಡುವ ರೂಢಿ ಇದೆ. ಆದರೆ ಆ ಕತ್ತಲೆ ಪ್ರದೇಶದ ಇತಿಹಾಸ, ಪರಿಶ್ರಮವನ್ನು ಗಮನಿಸುವುದಿಲ್ಲ. ಪ್ರೊ॥ ಎ. ಎಸ್. ಹಿಪ್ಪರಗಿಯವರು ಕತ್ತಲಲೋಕದಿಂದ ತಮ್ಮ ಸ್ವಂತ ಪರಿಶ್ರಮದಿಂದ ಬೆಳೆದು ನಿಂತ ಒಂದು ದೀಪಸ್ತಂಭ. ೧೯೨೭ರಲ್ಲಿ ವಿಜಾಪೂರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಕಪನೂರು ಎಂಬ ಪುಟ್ಟ ಗ್ರಾಮದಲ್ಲಿ ಪ್ರೊ॥ ಎ. ಎಸ್. ಹಿಪ್ಪರಗಿಯವರು ಬಡರೈತನ ಮಗನಾಗಿ ಜನಿಸಿದವರು. ಕೃಷ್ಣಾ ನದಿಯ ಎಡದಂಡೆಯಲ್ಲಿರುವ ಈ ಗ್ರಾಮ ಶಾಲೆ, ಆಸ್ಪತ್ರೆ, ರಸ್ತೆಯಂತಹ ಯಾವ ಸೌಲಭ್ಯಗಳೂ ಇಲ್ಲದೆ ಆ ಕಾಲದಲ್ಲಿ ಕೇವಲ ೧೪೪ ಜನಸಂಖ್ಯೆಯನ್ನು ಹೊಂದಿದ ಕುಗ್ರಾಮ. ೧೯೩೦ರ ಸಂದರ್ಭದಲ್ಲಿ ದೇಶದಲ್ಲಿ ಸ್ವಾತಂತ್ರ್ಯ ಹೋರಾಟದ ಕಾವು ತೀವ್ರವಾಗುತ್ತಿದ್ದರೂ ಅದರ ಯಾವ ಮಾಹಿತಿಯೂ ಇಲ್ಲದೆ ಊಳಿಗಮಾನ್ಯ ವ್ಯವಸ್ಥೆಯಡಿಯಲ್ಲಿ ಆ ಪ್ರದೇಶ ನಲುಗಿಹೋಗಿತ್ತು. ಬ್ರಿಟಿಷರಾಗಲಿ, ಅವರ ಮುಂಚಿನ ಪೇಶ್ವೆ, ಶಾಹಿ ಮುಂತಾದ ಮನೆತನಗಳು ಜಮೀನ್ದಾರರ ಮೂಲಕವೇ ಆ ಗ್ರಾಮಗಳನ್ನು ನಿಯಂತ್ರಿಸುತ್ತಿದ್ದರು. ಸ್ಥಳೀಯವಾಗಿ ಶತಶತಮಾನಗಳಿಂದ ಅಲ್ಲಿನ ಸರಕಾರವೆಂದರೆ ಈ ಜಮೀನುದಾರ ಮನೆತನಗಳೇ. (ಈಗಲೂ ಹೆಚ್ಚಿನ ಬದಲಾವಣೆ ಏನೂ ಇಲ್ಲ) ವಾಸ್ತವವಾಗಿ ರೈತರೆಂದರೂ ಅಂದಿನ ರೈತರಿಗೆ ಸ್ವಂತ ಜಮೀನು ಗಳಿರಲಿಲ್ಲ. ಎಲ್ಲ ಜಮೀನುಗಳೂ 'ವತನದಾರ'ರ ಒಡೆತನದಲ್ಲಿಯೇ ಇದ್ದವು. ಈ ಜಮೀನುದಾರರಿಂದ ಲಾವಣಿರೂಪದಲ್ಲಿ ಜಮೀನು ಪಡೆದು ಉಳುಮೆ ಮಾಡುವವನೇ ಅಂದಿನ ರೈತ. ಹಾಗೆ ಆ ಭಾಗದ ಬಲದಿನ್ನಿ ನಾಡಗೌಡ ಎಂಬ ಜಮೀನ್ದಾರನ ಜಮೀನಿನಲ್ಲಿ ಲಾವಣಿ ರೂಪದಲ್ಲಿ ಜಮೀನು ಮಾಡಿಕೊಂಡಿದ್ದ ರೈತನ ಮಗನಾಗಿ ಹುಟ್ಟಿದವರು ಪ್ರೊ॥ ಎ. ಎಸ್. ಹಿಪ್ಪರಗಿಯವರು. ಇವರಿನ್ನೂ ಚಿಕ್ಕವರಿರುವಾಗಲೇ ನಾಡಗೌಡರು ಇವರ ಜಮೀನನ್ನು ಹಿಂದಕ್ಕೆ ಪಡೆಯುತ್ತಾರೆ. ಸ್ವಾಭಿಮಾನಿಯಾಗಿದ್ದ ಹಿಪ್ಪರಗಿಯವರ ತಂದೆ ಆ ಕಾಲದಲ್ಲಿಯೇ ನಾಡಗೌಡ ಎಂಬ ಧನಿಯ ವಿರುದ್ಧ ನ್ಯಾಯಾಲಯದ ಮೆಟ್ಟಿಲೇರುತ್ತಾರೆ. ಧನಿಗಳ ವಿರುದ್ಧ ಧ್ವನಿಯೆತ್ತುವುದಿರಲಿ ಜೋರಾಗಿ ಉಸಿರಾಡುವುದೂ ಕಷ್ಟವಾಗಿದ್ದ ಆ ಕಾಲದಲ್ಲಿ ಇವರು ನ್ಯಾಯಾಲಯದ ಮೆಟ್ಟಿಲೇರಿದರು. ಆದರೆ ಬ್ರಿಟಿಷ್ ಸರಕಾರದ ನ್ಯಾಯ ಧನಿಗಳ ಪರವಾಗಿತ್ತು. ರೈತನಾಗಿ ಬದುಕಿದ ನೆಲದಲ್ಲಿ ಕೂಲಿಕಾರನಾಗಿ ಬದುಕಲಾರೆನೆಂದು ತೀರ್ಮಾನಿಸಿದ ಅಮೀನಪ್ಪ (ಹಿಪ್ಪರಗಿ) ಅವರ ತಂದೆ ಊರನ್ನೇ ಬಿಟ್ಟು ಪಕ್ಕದ ಬಸವನ ಬಾಗೇವಾಡಿ ತಾಲೂಕಿನ ವಡವಡಗಿ ಎಂಬ ಗ್ರಾಮಕ್ಕೆ ಸಂಸಾರ ಸಮೇತ ಹೋಗಿ ಕೂಲಿ ಮಾಡಿ ಬದುಕುತ್ತಾರೆ. ತಾಯಿ ರೈತರ ಹೊಲದಲ್ಲಿ ಕೂಲಿಗೆ ಹೋದರೆ ತಂದೆ ಹಗ್ಗ ಹೊಸೆದು ಜೀವನ ನಡೆಸುತ್ತಾರೆ.

ರೈತನ ಮಗನಾಗಿದ್ದ ಅಮೀನಪ್ಪ ಈಗ ಕೂಲಿಕಾರನ ಮಗನಾಗಿದ್ದ. ಆ ಊರಿನಲ್ಲಿ ಶಾಲೆ ಇದ್ದರೂ ಶಾಲೆಗೆ ಹೋಗುವ ಶಕ್ತಿಯಿಲ್ಲ. ಅದೇ ಸಂದರ್ಭದಲ್ಲಿ ಇವರ ತಾಯಿ ಒಂದು ದಿನ ಕೂಲಿಗೆ ಹೋಗುವಾಗ ಇವರ ತಮ್ಮ ತಾಯಿಯ ಗಮನಕ್ಕೆ ಬಾರದೇ ಅವರನ್ನು ಹಿಂಬಾಲಿಸಿಹೋಗಿ ಊರ ಮುಂದಿನ ಹಳ್ಳದಲ್ಲಿ ಬಿದ್ದು ಮೃತನಾಗುತ್ತಾನೆ. ಈ ಘಟನೆಯಿಂದ ಇವರ ತಾಯಿ ಮಾನಸಿಕ ಆಘಾತಕ್ಕೆ ತುತ್ತಾಗುತ್ತಾರೆ. ತಂದೆ ಬದುಕಿನ ಭರವಸೆಯನ್ನೇ ಕಳೆದುಕೊಳ್ಳುತ್ತಾರೆ. ಆಗ ಹಿಪ್ಪರಗಿಯವರ ಅಣ್ಣ ಮತ್ತು ಇವರು ಸೇರಿ ಚಿಕ್ಕಮಕ್ಕಳಾಗಿದ್ದರೂ ಊರ ತೋಟಗಳಲ್ಲಿ ಕೆಲಸ ಮಾಡುತ್ತಾರೆ. ಆಗ ಒಂದು ದಿನ ಇವರ ಮೂಲ ಗ್ರಾಮ ಕಪನೂರಿನ ಧನಿಗಳಾದ, ಇವರು ಊರುಬಿಡಲು ಕಾರಣರಾದ ನಾಡಗೌಡರ ನಿಧನದಿಂದ ಮನೆತನದ ಹಿರಿತನದಲ್ಲಿ ಬದಲಾವಣೆಯಾಗುತ್ತದೆ. ಶಂಕ್ರಪ್ಪ ದೇಸಾಯಿ ಎನ್ನುವವರು ಆಡಳಿತಕ್ಕೆ ಬರುತ್ತಾರೆ. ಅವರು ವಿದ್ಯಾವಂತರು. ಅವರು ಆಡಳಿತಕ್ಕೆ ಬಂದಾಗ ಹಿಂದಿನ ಘಟನೆಯನ್ನು ನೆನಪಿಸಿಕೊಂಡು ಹಿಪ್ಪರಗಿ ಅವರ ಸಂಸಾರದ ಸಮಸ್ಯೆಯನ್ನರಿತು ಮತ್ತೆ ಅವರನ್ನು ಊರಿಗೆ ಕರೆಸಿ ಅವರಿಗೆ ಜಮೀನು ಕೊಡುತ್ತಾರೆ. ಸ್ವಾಭಿಮಾನಿಯಾದ ಹಿಪ್ಪರಗಿಯವರ ತಂದೆ ಸಂಗನಬಸಪ್ಪನವರು "ತಾನು ಬಿಟ್ಟುಹೋದ ಜಮೀನನ್ನು ತನಗೆ ಕೊಟ್ಟರೆ ಮಾತ್ರ ಮರಳಿ ಊರಿಗೆ ಬರುತ್ತೇನೆ" ಎಂದು ಹೇಳುತ್ತಾರೆ. ಮತ್ತೆ ಅದೇ ಜಮೀನು ಪಡೆದು ಊರಿಗೆ ಬರುತ್ತಾರೆ. ಆಗ ಎ. ಎಸ್. ಹಿಪ್ಪರಗಿಯವರಿಗೆ ಒಂಬತ್ತು ವರ್ಷ. "ಇಂಥ ಅಪರೂಪದ ಮಾನವೀಯ ಅಂಶಗಳೇ ಆಗಾಗ ಹುಟ್ಟುವ

ಕ್ರಾಂತಿ ಕಿಡಿಗಳನ್ನು ತಣ್ಣಗೆ ಮಾಡಿವೆ; ಮೆತ್ತಗೂ ಮಾಡಿವೆ" ಎಂದು ಆ ಸಂದರ್ಭವನ್ನು ಹಿಪ್ಪರಗಿಯವರು ನೆನಪಿಸಿಕೊಳ್ಳುತ್ತಾರೆ. ಇದು ಅವರ ಮನೋಭಾವವನ್ನು ತೋರಿಸುತ್ತದೆ.

ಮರಳಿ ಕಪನೂರಿಗೆ ಬಂದು ರೈತನ ಮಗನಾದ ಮೇಲೆಯೇ ಅಮೀನಪ್ಪನವರು ಪಕ್ಕದ ಹಳ್ಳಿಯ ಶಾಲೆಗೆ ಸೇರುತ್ತಾರೆ. ಪರಿಶ್ರಮಪಟ್ಟು ಓದಿ ಜಾಣ ವಿದ್ಯಾರ್ಥಿಯಾಗಿದ್ದ ಅಮೀನಪ್ಪ ಅಲ್ಲಿ ನಾಲ್ಕನೇ ವರ್ಗದವರೆಗೆ ಓದಿ ನಿಲ್ಲಿಸುತ್ತಾರೆ. ಕಾರಣ ಆ ಊರಿನಲ್ಲಿ ಮುಂದಿನ ವಿದ್ಯಾಭ್ಯಾಸಕ್ಕೆ ಶಾಲೆ ಇರಲಿಲ್ಲ. ದೂರದೂರಿಗೆ ಹೋಗಿ ಓದುವ ಶಕ್ತಿ ಇರಲಿಲ್ಲ. ಅದೇ ಸಂದರ್ಭದಲ್ಲಿ ಇವರ ತಂದೆ ತೀರಿಹೋಗುತ್ತಾರೆ. ಮತ್ತೆ ಅತಂತ್ರ ಸ್ಥಿತಿ. ಒಂದು ದಿನ ಅಮೀನಪ್ಪ ಊರಮುಂದೆ ಗಿಡದ ಕೆಳಗೆ ಆಟ ಆಡುವಾಗ ಅದೇ ಗಿಡದ ಇನ್ನೊಂದು ಬದಿಗೆ ನಾಲತ್ವಾಡ ಗ್ರಾಮದಿಂದ ಎಣ್ಣೆ ವ್ಯಾಪಾರ ಮಾಡಲು ಸೋಮಪ್ಪ ಎಂಬ ವ್ಯಾಪಾರಿ ಬಂದಿರುತ್ತಾನೆ. ಊರಿನ ಮುದುಕಿಯೊಬ್ಬಳು ಕುಸುಬಿ ಕೊಟ್ಟು ಎಣ್ಣೆ ಖರೀದಿಸಲು ಬಂದಿರುತ್ತಾಳೆ. (ಆಗ ಹೆಚ್ಚಿಗೆ ಹಣಕಾಸಿನ ಚಲಾವಣೆ ಗ್ರಾಮಗಳಲ್ಲಿ ಇರಲಿಲ್ಲ) ಅವರು ವ್ಯಾಪಾರದ ಕುರಿತು ಲೆಕ್ಕದ ಬಗ್ಗೆ ಮಾತನಾಡುವಾಗ, "ಮೂರು ಸೇರು ಎಣ್ಣೆಗೆ ಐದು ಸೇರು ಕುಸುಬಿ. ಒಂಬತ್ತು ಸೇರು ಎಣ್ಣೆಗೆ ಎಷ್ಟು ಕುಸುಬಿ" ಎಂದು ಆಕೆ ಕೇಳುತ್ತಾಳೆ. ಪಕ್ಕದಲ್ಲೇ ಆಡುತ್ತಿದ್ದ ಅಮೀನಪ್ಪ ತಕ್ಷಣ 'ಒಂಬತ್ತು ಸೇರು ಎಣ್ಣೆಗೆ ಹದಿನೈದು ಸೇರು ಕುಸುಬಿ' ಎಂದು ಹೇಳಿ ತನ್ನ ಪಾಡಿಗೆ ತಾನು ಆಟವಾಡುತ್ತಾನೆ. ಈ ಹುಡುಗನನ್ನು ನೋಡಿದ ವ್ಯಾಪಾರಿ ಸೋಮಪ್ಪ ಅವನನ್ನು ಕರೆದು ವಿಚಾರಿಸಿ, ಅವನ ಪರಿಸ್ಥಿತಿ ತಿಳಿದು ಮನೆಯವರನ್ನೊಪ್ಪಿಸಿ ತಮ್ಮ ಜೊತೆಗೆ ನಾಲತ್ವಾಡಕ್ಕೆ ಕರೆದೊಯ್ದು ವಿದ್ಯಾಭ್ಯಾಸ ಮಾಡಿಸುತ್ತಾರೆ. ಜಾಣ ವಿದ್ಯಾರ್ಥಿಯಾಗಿದ್ದ ಹಿಪ್ಪರಗಿಯವರು ಐದು, ಆರು, ಏಳನೇ ವರ್ಗಗಳನ್ನು ಅಲ್ಲಿಯೇ ಕಲಿತು ಮುಲ್ಕೀ ಪರೀಕ್ಷೆ (ಏಳನೇ ವರ್ಗ)ಯಲ್ಲಿ ಮುದ್ದೇಬಿಹಾಳ ತಾಲೂಕಿನಲ್ಲಿಯೇ ಹೆಚ್ಚು ಅಂಕ ಪಡೆದು, ಮೊದಲಿಗರಾಗಿ ಪಾಸಾಗುತ್ತಾರೆ. ಇದು ಕತ್ತಲೆ ಲೋಕದಿಂದ ಹೊರಬಂದ ಒಂದು ಬೆಳಕಿನ ಕಿಡಿಯ ಹಿನ್ನೆಲೆ.

ಮುಲ್ಕೀ ಪರೀಕ್ಷೆ ಮುಗಿಸಿ ಎ. ಎಸ್. ಹಿಪ್ಪರಗಿಯವರು ಪ್ರಾಥಮಿಕ ಶಾಲಾ ಶಿಕ್ಷಕರಾಗುತ್ತಾರೆ. ಆ ಸಂದರ್ಭದಲ್ಲಿ ಇವರಿಗೆ ವಿದ್ಯಾಭ್ಯಾಸಕ್ಕೆ ಕಾರಣರಾದ ಎಣ್ಣೆ ವ್ಯಾಪಾರಿ ಸೋಮಪ್ಪನವರು ಅನಾರೋಗ್ಯಕ್ಕೆ ತುತ್ತಾಗುತ್ತಾರೆ. ಅವರ ಮುಂದೆ ಕುಳಿತ ಹಿಪ್ಪರಗಿಯವರು ನಿಮ್ಮ ಋಣ ತೀರಿಸಲಾಗಲಿಲ್ಲ ಎಂದು ಕಣ್ಣೀರು ತರುತ್ತಾರೆ. ಆಗ ಸೋಮಪ್ಪ ಇವರನ್ನು ಹತ್ತಿರ ಕರೆದು, "ನೀನು ಕಲಿಯ ಬೇಕೆಂದು ಆಶಿಸುತ್ತಿದ್ದೆ. ಆದರೆ ಅನುಕೂಲವಿರಲಿಲ್ಲ. ಹೇಗೂ ಶಿಕ್ಷಕನಾಗಿರುವೆ, ನಿನ್ನಂತೆ ಕಲಿಯಬೇಕೆಂದು ಆಶಿಸುತ್ತಿದ್ದು, ಅನುಕೂಲ ಇರದ ನಾಲ್ಕು ಬಡ ಮಕ್ಕಳಿಗೆ ಕಲಿಯಲು ನೀನು ಅನುಕೂಲ ಮಾಡಿಕೊಟ್ಟರೆ ನನ್ನ ಋಣ ತೀರಿಸಿದಂತೆ" ಎಂದು ಹೇಳುತ್ತಾರೆ. 'ಆ ಮಾತು ಕೇಳಿ ನನ್ನ ಮೈ ಜುಮ್ಮೆಂದಿತು' ಎಂದು ಹಿಪ್ಪರಗಿಯವರು ಸ್ಮರಿಸಿಕೊಳ್ಳುತ್ತಾರೆ. ಮುಂದೆ ತಮ್ಮ ಪ್ರಾಥಮಿಕ ಶಾಲಾ ಶಿಕ್ಷಕ ವೃತ್ತಿಯುದ್ದಕ್ಕೂ ಅವರು ಶಾಲೆಗೆ ಬರದ ಮಕ್ಕಳಿಗಾಗಿ ವಿಶೇಷ ಕಾರ್ಯಕ್ರಮಗಳನ್ನು ಹಾಕಿಕೊಂಡು ಜನಪ್ರಿಯ ಶಿಕ್ಷಕರಾಗುತ್ತಾರೆ. ಗ್ರಾಮಗಳಲ್ಲಿ ಇವರು ನಮ್ಮೂರಿಗೇ ಬೇಕು ಎಂಬ ಸ್ಪರ್ಧೆ ನಡೆಯುವಷ್ಟು ಬೆಳೆದು ನಿಲ್ಲುತ್ತಾರೆ. ಆದರೂ ಅಷ್ಟಕ್ಕೇ ಬಿಡದೆ ಮುಂದೆ ಢವಳಗಿ ಎಂಬ ಗ್ರಾಮದಲ್ಲಿ ಒಂದು ಹೈಸ್ಕೂಲ್ ಆರಂಭಿಸಿ ಆ ಸ್ಕೂಲಿನ ಬೆಳವಣಿಗೆಗಾಗಿ ಹೊಲಗಳಿಗೆ ಹೋಗಿ ರೈತರಿಂದ ಕಾಳು, ದವಸಧಾನ್ಯ ಸಂಗ್ರಹಿಸಿ ಅದನ್ನು ಮಾರಿ ಶಾಲೆಗೆ ಹಾಕುತ್ತಾರೆ. ಬಡ ಮಕ್ಕಳಿಗಾಗಿ ಉಚಿತ ಪ್ರಸಾದ ನಿಲಯ ಆರಂಭಿಸುತ್ತಾರೆ. ಅದರ ಬೆಳವಣಿಗೆಗಾಗಿ ನೂರಾರು ಪ್ರಯತ್ನ ಮಾಡುತ್ತಾರೆ. ಆ ಭಾಗದಲ್ಲಿ ಅದನ್ನೊಂದು ಪ್ರತಿಷ್ಠಿತ ಸಂಸ್ಥೆಯಾಗಿ ಬೆಳೆಸುತ್ತಾರೆ. ಇಂದು ಎಂ.ಬಿ.ಪಿ. ಹೈಸ್ಕೂಲ್ ಮುದ್ದೇಬಿಹಾಳ ತಾಲೂಕಿನಲ್ಲಿ ಗಮನಾರ್ಹ ಸಂಸ್ಥೆಯಾಗಿ ಬೆಳೆದಿದೆ. ಸಾವಿರಾರು ಮಕ್ಕಳು ಈ ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡಿದ್ದಾರೆ. ಬಡ ಮಕ್ಕಳು ಅಲ್ಲಿನ ಬೋರ್ಡಿಂಗ್‌ನಲ್ಲಿದ್ದು ಊಟ ಮಾಡಿದ್ದಾರೆ, ಇಂದಿಗೂ ಮಾಡುತ್ತಿದ್ದಾರೆ. ತನ್ನನ್ನು ಕಲಿಸಿ ವಿದ್ಯಾವಂತನನ್ನಾಗಿ ಮಾಡಿದ ವ್ಯಕ್ತಿಯ ಮಾತಿನಂತೆ ಅವನ ಋಣ ತೀರಿಸಿದ ಪರಿ ಹಾಗೂ ಅನಕ್ಷರತೆ ಮತ್ತು ಬಡತನದ ವಿರುದ್ಧ ಪ್ರೊ|| ಎ. ಎಸ್. ಹಿಪ್ಪರಗಿಯವರು ನಡೆಸಿದ ಹೋರಾಟದ ವಿಧಾನ ಇದು.

ಪ್ರೊ॥ ಎ. ಎಸ್. ಹಿಪ್ಪರಗಿಯವರ ಶಿಕ್ಷಣದ ಹಸಿವು ಅಲ್ಲಿಗೇ ನಿಲ್ಲುವುದಿಲ್ಲ. ಅವರು ಶಾಲಾಶಿಕ್ಷಕರಾಗಿಯೇ ತಮ್ಮ ಹೆಚ್ಚಿನ ವಿದ್ಯಾಭ್ಯಾಸವನ್ನು ಮುಂದುವರಿಸುತ್ತಾರೆ. ಬಾಗಲಕೋಟೆಗೆ ವರ್ಗವಾಗಿ ಅಲ್ಲಿ ಪದವಿ ವಿದ್ಯಾಭ್ಯಾಸ ಮಾಡುತ್ತಾರೆ. ಹೀಗೆ ೧೯೫೯–೬೦ರಲ್ಲಿ ಪಿ.ಯು.ಸಿ., ೧೯೬೩ರಲ್ಲಿ ಬಿ.ಎ. ಪದವಿ ಪಡೆಯುತ್ತಾರೆ. ಅವರು ಪ್ರಾಥಮಿಕ ಶಿಕ್ಷಕ ವೃತ್ತಿ ಮಾಡುತ್ತ, ಜೊತೆಗೇ ಬಿ.ಎ. ಪದವಿ ಮುಗಿಸಿದಾಗಲೇ ಅವರಿಗೆ ಐದು ಜನ ಮಕ್ಕಳು. ಇಷ್ಟಾದರೂ ಅವರ ಶಿಕ್ಷಣದ ಹಸಿವು ಮುಗಿಯುವುದಿಲ್ಲ. ಮಡದಿ ಮಕ್ಕಳನ್ನು ತವರು ಮನೆಗೆ ಕಳಿಸಿ, ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸ್ನಾತಕೋತ್ತರ ಪದವಿ ಪಡೆಯಲು ಹೋಗುತ್ತಾರೆ. ಅಲ್ಲಿ ಎಂ.ಎ. ಓದುವಾಗ ಅವರ ಖರ್ಚು ವೆಚ್ಚವನ್ನೆಲ್ಲ ಅವರು ಹಿಂದೆ ಶಿಕ್ಷಕರಾಗಿ ಕೆಲಸ ಮಾಡಿದ ಊರುಗಳ ಕೆಲ ಹಿತೈಷಿಗಳು, ಅವರ ಶಿಷ್ಯರಲ್ಲಿ ಕೆಲವರು ನೋಡಿಕೊಳ್ಳುತ್ತಾರೆ. ಎಂ.ಎ. ಪದವಿಯನ್ನು ಪಡೆದು ಮರಳಿ ಗ್ರಾಮಕ್ಕೆ ಬರುವಾಗ ಡಾ॥ ಆರ್. ಸಿ. ಹಿರೇಮಠ ಅವರು ಇವರಿಗೆ ವಿಶ್ವವಿದ್ಯಾಲಯದಲ್ಲಿಯೇ ಉಳಿಯಲು ಹೇಳುತ್ತಾರೆ. ಆದರೆ ಗ್ರಾಮೀಣ ಬದುಕು, ಗ್ರಾಮೀಣ ಶಿಕ್ಷಣದ ಬಗ್ಗೆಯೇ ಆಸಕ್ತಿ ಹೊಂದಿದ್ದ ಇವರು ಹಿಂತಿರುಗಿ ಬಂದು ಮೇಲೆ ತಿಳಿಸಿದ ಢವಳಗಿ ಪ್ರೌಢಶಾಲೆಯ ಸ್ಥಾಪನೆಗಾಗಿ ಶ್ರಮಿಸುತ್ತಾರೆ. ಆ ಹೈಸ್ಕೂಲ್ ಒಂದು ಹಂತಕ್ಕೆ ಬಂದ ನಂತರ ಅದರ ಉಸ್ತುವಾರಿಯನ್ನು ಬೇರೆಯವರಿಗೊಪ್ಪಿಸುತ್ತಾರೆ. ಕಾರಣ ಹೈಸ್ಕೂಲ್ ಶಿಕ್ಷಕರಾಗಬೇಕಾದರೆ ಬಿ.ಎಡ್. ಪದವಿ ಬೇಕು. ಇವರು ಮಾಡಿದ್ದು ಎಂ.ಎ. ಪದವಿ. ಹಾಗಾಗಿ ೧೯೬೭ರಲ್ಲಿ ವಿಜಾಪೂರದ ಎಸ್. ಬಿ. ಕಲಾ ಮಹಾವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಸೇರಿಕೊಳ್ಳುತ್ತಾರೆ. ಅಲ್ಲಿಗೆ ಅವರ ಅಧ್ಯಯನ, ಅಧ್ಯಾಪನದ ಕ್ಷೇತ್ರ ಇನ್ನೂ ವಿಶಾಲವಾಗುತ್ತದೆ.

ಮೂಲತಃ ಶರಣ ತತ್ವಗಳ ಒಲವು, ಪಾತಾಳದಿಂದ ಮೇಲೇರಿ ಬಂದ ಬದುಕಿನ ಅನುಭವ, ಶಿಕ್ಷಣದ ಮೇಲಿನ ಅಪಾರ ಪ್ರೀತಿ, ಸಾಮಾಜಿಕ ಕಳಕಳಿ, ಜೊತೆಗೆ ಮಾರ್ಕ್ಸ್‌ವಾದ ಮತ್ತು ವಿಶ್ವದ ಪ್ರಜಾಸತ್ತಾತ್ಮಕ ಚಳುವಳಿಗಳ ಅಧ್ಯಯನ, ಎಂಥ ಸಂದರ್ಭದಲ್ಲೂ ಎದೆಗುಂದದ ಛಲ ಇವೆಲ್ಲವೂ ಪ್ರೊ॥ ಎ. ಎಸ್. ಹಿಪ್ಪರಗಿಯವರನ್ನು ಒಂದು ದೀಪಸ್ತಂಭವಾಗಿ ನಿಲ್ಲಲು ಪ್ರೇರಕವಾದ ಅಂಶಗಳು. ಪದವಿ ಕಾಲೇಜಿಗೆ ಅಧ್ಯಾಪಕರಾದ ನಂತರ ಅವರ ಚಿಂತನೆ, ಸಾಹಿತ್ಯ, ಶಾಸನ, ವ್ಯಾಕರಣ ಮುಂತಾದ ವಿಷಯಗಳ ಕುರಿತ ಅವರ ಪಾಂಡಿತ್ಯವನ್ನು ಗ್ರಹಿಸುವಂಥ ವಿದ್ಯಾರ್ಥಿ ವೃಂದ ಅವರಿಗೆ ಸಿಕ್ಕಿತು. ಅದರಲ್ಲೂ ಅವರ ಗ್ರಾಮಮುಖಿ ಚಿಂತನೆ, ಸಮಾಜಮುಖಿ ಆಲೋಚನೆಗಳು ಹೆಚ್ಚು ಆಕರ್ಷಣೆಗೊಳಗಾದವು. ಒಂದು ಸ್ಥಾನಕ್ಕೆ ಹೋದಮೇಲೂ ಅವರ ಅಧ್ಯಯನದ ಹಸಿವು ತೀರಿರಲಿಲ್ಲ. ಒಬ್ಬ 'ಗುರು' ಇರಬೇಕಾದದ್ದು ಹಾಗೆಯೇ. ಶಿಕ್ಷಕನಾದವನು ನಿವೃತ್ತಿಯಾಗುತ್ತಾನೆ, ಆದರೆ ಗುರುವಾದವನು ನಿವೃತ್ತಿಯಾಗುವುದಿಲ್ಲ. ಗುರುವಾದವನು ತನ್ನ ಕೊನೆಯುಸಿರಿನ ತನಕ ವಿದ್ಯಾರ್ಥಿಯಾಗಿಯೇ ಇರುತ್ತಾನೆ. ಆಗ ಮಾತ್ರ ಅವನು ಗುರುವಾಗಲು ಸಾಧ್ಯ.

ವಿಜಾಪೂರದಂಥ ಊಳಿಗಮಾನ್ಯ ಸಂಸ್ಕೃತಿಯ ಊರಿನಲ್ಲಿ ಪ್ರಗತಿಪರ ಚಿಂತನೆಯನ್ನು ಬೆಳೆಸುವುದು ಕಷ್ಟದ ಕೆಲಸವೇ. ವಿಜಾಪೂರದಲ್ಲಿ ಕಮ್ಯುನಿಸ್ಟ್ ಪಕ್ಷ ಸ್ವಾತಂತ್ರ್ಯಪೂರ್ವಕಾಲದಿಂದಲೂ ಇತ್ತು. ಬಾಲ್‌ಸಿಂಗ್ ಮಾಸ್ತರ, ಲಾಯದಗುಂದಿಯವರಂಥ ಕೆಲವರು ಅಲ್ಲಿ ಕಮ್ಯುನಿಸ್ಟ್ ಪಕ್ಷವನ್ನು ಕಟ್ಟಿದ್ದರು. ಪಿ. ಎಸ್. ಪಾಟೀಲ ಎಂಬ ನ್ಯಾಯವಾದಿ, ಪಿ. ವಿ. ವಜ್ರಮಟ್ಟಿ ಎಂಬ ಸಾಹಿತಿ ಹೀಗೆ ಕೆಲವೇ ಜನರಿದ್ದರೂ ಸಣ್ಣ ಪ್ರಮಾಣದ ಪ್ರಗತಿಪರ ಧಾರೆ ಆ ಪ್ರದೇಶದಲ್ಲಿತ್ತು. ಪ್ರೊ॥ ಎ. ಎಸ್. ಹಿಪ್ಪರಗಿಯವರು ವಿಜಾಪೂರಕ್ಕೆ ಬಂದ ಮೇಲೆ ಅವರ ವಿದ್ಯಾರ್ಥಿಗಳು ಮತ್ತು ಅವರ ಸಂಪರ್ಕಕ್ಕೆ ಬಂದ ಯುವಕರು ದೊಡ್ಡ






*ಹಿಪ್ಪರಗಿ ದಂಪತಿಗಳು ಅಮೀನಪ್ಪ, ಶಿವಲಿಂಗಮ್ಮ*

ಪ್ರಮಾಣದಲ್ಲಿ ಪ್ರಗತಿಪರ ಚಿಂತನೆಯತ್ತ ವಾಲಿದರು. ಇನ್ನೂ ಕೆಲವರು ಕಮ್ಯುನಿಸ್ಟ್ ಚಳುವಳಿಯ ನಾಯಕರಾಗಿಯೇ ಬೆಳೆದರು. ೮೦ರ ದಶಕದಲ್ಲಿ ಈ ರಾಜ್ಯದ ಸಾಹಿತ್ಯ ಸಾಂಸ್ಕೃತಿಕ ಲೋಕಕ್ಕೆ ಹೊಸ ದಿಕ್ಕು ತೋರಿದ ಬಂಡಾಯ ಸಾಹಿತ್ಯ ಸಂಘಟನೆಯ ಸ್ಥಾಪನಾ ಸಮ್ಮೇಳನ ೧೯೭೯ರಲ್ಲಿ ಬೆಂಗಳೂರಿನಲ್ಲಿ ನಡೆದಿತ್ತು. ಮೊದಲ ಸಮ್ಮೇಳನ ಪ್ರತಿಕ್ರಿಯೆ, ಪ್ರತಿರೋಧದ ಆಶಯ ಹೊಂದಿತ್ತು. ಅದಕ್ಕೊಂದು ಕ್ರಿಯೆ ಆಧರಿತ ಕಾರ್ಯಕ್ರಮ ರೂಪಗೊಂಡಿದ್ದು ಎರಡನೇ ಸಮ್ಮೇಳನದಲ್ಲಿ. ವಿಜಾಪೂರದಂಥ ಪ್ರದೇಶದಲ್ಲಿ ೧೯೮೦ರಲ್ಲಿ ಈ ಎರಡನೇ ಬಂಡಾಯ ಸಾಹಿತ್ಯ ಸಮ್ಮೇಳನ ನಡೆಸಿಕೊಟ್ಟವರು ಪ್ರೊ॥ ಎ. ಎಸ್. ಹಿಪ್ಪರಗಿಯವರು. ಅವರು ಸಮ್ಮೇಳನದ ಸಂಚಾಲಕರಾಗಿ ವಿಜಾಪೂರದ ಶ್ರೀ ಬೋಜಣ್ಣ ಬೀಳಗಿ, ಬಿ. ಎಂ. ಸಜ್ಜನ, ಸಾರಂಗಮಠ, ಕಮ್ಯುನಿಸ್ಟ್ ಮುಖಂಡರಾಗಿದ್ದ ಲಾಯದಗುಂದಿ, ಚಂಚಲಕರ, ಪ್ರಕಾಶ ಹಿಟ್ಟಿನಹಳ್ಳಿ, ನರಸಿಂಗರಾವ್ ಕುಲಕರ್ಣಿ, ಯುವಕರಾದ ರಮಜಾನ್ ದರ್ಗಾ, ಅಪ್ಪಾಸಾಹೇಬ ಯರನಾಳ, ಜಯಲಕ್ಷ್ಮೀ, ಮೋಹನ ಹಿಪ್ಪರಗಿ ಹೀಗೆ ಸೀಮಿತ ಸಂಖ್ಯೆಯ ಪ್ರಗತಿಪರರ ಸಹಕಾರದಿಂದ ತಮ್ಮ ವಿದ್ಯಾರ್ಥಿ ಬಳಗವನ್ನು ತೊಡಗಿಸಿ ಸಮ್ಮೇಳನವನ್ನು ಯಶಸ್ವಿ ಮಾಡಿದರು. ಅದಾದ ನಂತರ ಹೊಸ ಚಿಂತನೆಯ ಗಾಳಿ ದೊಡ್ಡ ಪ್ರಮಾಣದಲ್ಲಿಯೇ ಆ ಭಾಗದಲ್ಲಿ ಬೀಸಿತು.

ನಿವೃತ್ತಿಯ ನಂತರವೂ ಅವರು ನಿರಂತರವಾಗಿ ಕ್ರಿಯಾಶೀಲರಾಗಿದ್ದರು. ಅವರು ಕಟ್ಟಿ ಬೆಳೆಸಿದ ಢವಳಗಿಯ ಎಂ.ಬಿ.ಪಿ. ಹೈಸ್ಕೂಲ್‌ನ ಬೆಳವಣಿಗೆಗಾಗಿ ದುಡಿದರು. ಅವರ ಈ ಕ್ರಿಯಾಶೀಲತೆಯನ್ನು ದಾಖಲಿಸಲು ಅವರ ಸ್ನೇಹಿತರೂ ಶಿಷ್ಯರೂ ಸೇರಿ ಅವರಿದ್ದಾಗಲೇ 'ಪ್ರೊ॥ ಎ. ಎಸ್. ಹಿಪ್ಪರಗಿ ಪ್ರತಿಷ್ಠಾನ' ಆರಂಭಿಸಿದ್ದಾರೆ. 'ದೀಪಸ್ತಂಭ' ಎಂಬ ಅಭಿನಂದನ ಗ್ರಂಥವನ್ನು ಪ್ರಕಟಿಸಿದ್ದಾರೆ. ಮುಂದೆಯೂ ಅವರ ಚಿಂತನೆಗೆ ಪೂರಕವಾಗಿ ಆ ಭಾಗದಲ್ಲಿ ಕೆಲಸ ಮಾಡುವುದು ಈ ಪ್ರತಿಷ್ಠಾನದ ಉದ್ದೇಶವಾಗಿದೆ. ಬಡತನದ ವಿರುದ್ಧದ ಹೋರಾಟಕ್ಕೆ ಎರಡು ಮಾದರಿಗಳಿವೆ. ಬಡವರಾಗಿದ್ದವರು ಮುಂದೆ ಸ್ಥಿತಿವಂತರಾದಾಗ ತಮಗಿದ್ದ ಬಡತನವನ್ನು ಅಣಕಿಸುವಂತೆ ಕಾರು, ಬಂಗಲೆ, ಹೀಗೆ ಆಡಂಬರದ ಜೀವನ ನಡೆಸುವುದು ಒಂದು ಮಾದರಿಯಾದರೆ, ಬಡತನದಿಂದ ಮೇಲೆದ್ದು ಸ್ಥಿತಿವಂತರಾದಾಗ ಒಟ್ಟು ಸಮಾಜದಲ್ಲಿಯ ಬಡತನವನ್ನೇ ನಿರ್ಮೂಲನೆ ಮಾಡಲು ಚಿಂತಿಸುವುದು ಮತ್ತು ಕ್ರಿಯಾಶೀಲರಾಗುವುದು ಇನ್ನೊಂದು ಮಾದರಿ. ಈ ಎರಡನೇ ಮಾದರಿ 'ಗುರು'ಗಳಾದ ಪ್ರೊ॥ ಎ. ಎಸ್. ಹಿಪ್ಪರಗಿಯವರದು. ಅವರ ಶಿಷ್ಯನಾಗಿ ನಾನು ಬದುಕಿನಲ್ಲಿ ಜನಪರವಾದ ಹೊಸ ದೃಷ್ಟಿಕೋನವನ್ನು ಪಡೆಯಲು ಸಾಧ್ಯವಾಯಿತು ಎನ್ನುವುದು ಜಮೀನ್ದಾರಿ ವ್ಯವಸ್ಥೆಯಲ್ಲಿ ಹುಟ್ಟಿ ಬಂದಿದ್ದ ನನಗೆ ಹೆಮ್ಮೆಯ ವಿಷಯ.


**ಡಾ॥ ಸಿದ್ದನಗೌಡ ಪಾಟೀಲ**
ಘಾಟೆಭವನ, ವೈಯ್ಯಾಲಿಕಾವಲ್, ಮಲ್ಲೇಶ್ವರಂ
ಬೆಂಗಳೂರು – ೫೬೦ ೦೦೩



ದಾಂಡಿ ಯಾತ್ರಾ ಆತು ಭಾರತ ಸ್ವತಂತ್ರ ಆತು
ಆಶ್ರಮ ಹೋಗಿ ಸ್ಮಾರಕ ಆತು
ಖಾಲಿ ಖಾಲಿ ಕಟ್ಟಡ
ದಿನಾಲೂ ಸಂಜೀನ್ಯಾಗ ಭಜನಿ
ದೇಶ ವಿದೇಶದ ಜನ ಹಿಂಡ ಕಟಗೊಂಡ ಬರತಾರ
ನೋಡತಾರ ಅಬ್ಬಾ ಅಂತಾರ ಫೋಟೋ ಹೊಡೀತಾರ
ಕ್ಯಾಮರಾದೊಳಗ ಇಟಗೊಂಡ ಮನೀಗ್ ಹೋಗತಾರ.
ಊರಾಗ ಜನ ಇನ್ನೂ ಹೆಚ್ಚಾದರು
ಆಳುಗಳ ಮ್ಯಾಲೆ ಆಳುಗರ ಅಧಿಕಾರ ಬೆಳೀತು.
ಮತದ ಹೆಚ್ಚಾಟದೊಳಗ
ಮತ ಮತಗಳ ಹುಚ್ಚಾಟದೊಳಗ
ನಮ್ಮ ತಲಿಯೊಳಗಿನ ಮತಿ ಮಾಯ ಆಗಿ
ಎದಿ ಎದಿಯೊಳಗಿನ ಸಾಬರಮತಿ ಬತ್ತಿ ಹೋಗಿ
ಕತ್ತಿ ಕುಡುಗೋಲು ಬೆಂಕಿ ಬಲಾತ್ಕಾರ

# ಸಾಬರಮತಿ ಈಗ ಹರಿಯೂದಿಲ್ಲ

ಕಾವ್ಯಲೋಕ

ಗುಜರಾತ್ ಅನ್ನೋ ಪ್ರದೇಶದೊಳಗ
ಸಾಬರಮತಿ ಅನ್ನೋ ಈ ಹೊಳಿ
ಎಷ್ಟೋ ಲಕ್ಷ ವರ್ಷದಿಂದ
ತನ್ನಷ್ಟಕ್ಕ ತಾ ಹರೀತಿತ್ತು.
ಹಳೆ ಕಳೆ ಕಳಕೋತ ಹೊಸ ನಾಳೆ ಬರಕೋತ
ಹುಲ್ಲಿನೊಳಗಿನ ಹಸರಾಗಿ ಹಕ್ಕಿಯೊಳಗಿನ ಹಾಡಾಗಿ
ಹಣ್ಣಿನೊಳಗಿನ ರಸ ಆಗಿ ಮಲಿಯೊಳಗಿನ ಹಾಲಾಗಿ
ಬರ ಬಿದ್ದಾಗ ಸೊರಗಿ ಮಳಿ ಸುರದಾಗ ಅರಳಿ
ತೆರಿ ತೆರಿ ಆಗಿ ತನ್ನಷ್ಟಕ್ಕ ತಾ
ಸಾಬರಮತಿ ಹರೀತನ ಇತ್ತು.
ನೂರು ವರ್ಷದ ಹಿಂದ
ಇಲ್ಲಿ ಗಾಂಧಿ ಬಂದ ತನ್ನ ಆಶ್ರಮ ತಂದ
ಮುಂದ ಹದಿಮೂರು ವರ್ಷ ದಿನಾಲೂ
ಆಶ್ರಮವಾಸಿಗಳು ಮತ್ತ ಗಾಂಧಿ ಸಹಿತ
ಸಾಬರಮತಿಯೊಳಗ ಸ್ನಾನ ಮಾಡಿದರು
ತಮ್ಮ ಸತ್ಯ ಅಹಿಂಸೆ ಬ್ರಹ್ಮಚರ್ಯ
ತಿಕ್ಕಿ ತಿಕ್ಕಿ ಸ್ವಚ್ಛ ಮಾಡಿಕೊಂಡು
ಶುಭ್ರಮತಿ ಆಗಲಿಕ್ಕೆ ಪ್ರಯತ್ನ ಮಾಡಿದರು
ಸಾಬರಮತಿ ಹರೀತನ ಇತ್ತು
'ಕೈ'ಗಾರಿಕೆ ಹೋಗಿ ಕಾರ್ಖಾನೆ ಆದವು
ಹಳ್ಳಿ ಖಾಲಿ ಮಾಡಿ ಜನ ಶಹರದ ಹೊಟ್ಟಿ ತುಂಬಿದ್ರು
ಊರು ಬೆಳೀತು
ಊರ ಹೊಲಸೆಲ್ಲಾ ಹೊಳಿಯೊಳಗ ಹರೀತು
ಮೊದಲ ತಿಳಿ ತಿಳಿ ಬಿಳಿ ಬಿಳಿ ಹೊಳೀತಿತ್ತು ಹೊಳಿ
ಹೊಳದ್ ಹೊಳದ್ ಹರೀತಿತ್ತು ಹೊಳಿ
ಆದರ ಈಗ ಊರವರ ಕಪ್ಪೆಲ್ಲಾ
ಇದರಾಗ ಸೇರಿ ಹೊಳಿ ಹೋಗಿ
ಹೊಲಸ ನಾರೂ ಕರಿ ನೀರಿನ ಚ
ರಂಡಿ ಆತು
ಸಾಬರಮತಿ ಕಾಳಿ ಆದಳು

ರಕ್ತ ಹರೀತು ಹೊಳಿ ತುಂಬ ರಕ್ತ ಹರೀತು
ಅವರ ರಕ್ತನೂ ಕೆಂಪು ಇವರ ರಕ್ತನೂ ಕೆಂಪು
ಉರುವಣಿಗಿ ನಡೀತು ಊರ ತುಂಬ
ಚಂಡಿ ಚಾಮುಂಡಿ ದುರ್ಗಿ ಮೆರವಣಿಗಿ ನಡೀತು
ಸಾಬರಮತಿ ಖರೆ ಕಾಳಿ ಆದಳು.
ನಾವೀಗ ಇನ್ನೂ ಮುಂದವರದೀವಿ
ವಿದೇಶದ ತಂತ್ರಜ್ಞಾನ ತಂದೀವಿ
ಹರಿಯೂ ಹೊಳಿ ದೂರ ಕಳಿಸಿ
ಸುತ್ತ ಮುತ್ತ ಗ್ವಾಡಿ ಕಟ್ಟಿ
ಉದ್ದ ಹರೀತಿದ್ದ ಹೊಳಿ
ಅಡ್ಡ ಮಲಗಿಸಿ ಕಟ್ಟಿ
ಹೊರಗಿನ ನೀರು ಒಳಗ ಸುರುವಿ
ಆಶ್ರಮದ ಎದುರಿಗೆ
ದೊಡ್ಡ ಜಲಾಶಯ ಮಾಡೀವಿ
ಈಗ ಇಲ್ಲಿ ಕರಿ ಹೊಲಸೂ ಇಲ್ಲ ಕೆಂಪು ರಕ್ತನೂ ಇಲ್ಲ
ಆಶ್ರಮನೂ ಸ್ವಚ್ಛ ಅದ
ಆಶ್ರಮದ ಎದುರಿಗಿನ ನೀರೂ ಸ್ವಚ್ಛ ಅದ
ಆದರ ಇಲ್ಲಿ
ಸಾಬರಮತಿ ಈಗ ಹರಿಯೂದಿಲ್ಲ

**ಸಂಕುಲಜೀವ**
'ನಗೆಮಲ್ಲಿಗೆ', ನಂ. ೨೦/೧, ಮಹಿಷಿ ರಸ್ತೆ, ಮಾಳಮಡ್ಡಿ
ಧಾರವಾಡ – ೫೮೦ ೦೦೭

ಹಿಮ್ಮಾಹಿತಿ : ಸಾಬರಮತಿ ದಂಡೆಯ ಮೇಧಾವಾಡಆಶ್ರಮ ಸ್ಥಾಪಿಸಿದ್ದು ೧೯೧೭ರಲ್ಲಿ.
೧೯೩೦ರಲ್ಲಿ ಪ್ರಸಿದ್ಧ ದಾಂಡಿ ಯಾತ್ರೆ ಶುರುವಾಗಿದ್ದು ಇಲ್ಲಿಂದಲೆ.
ಆ ನಂತರ ಗಾಂಧಿ ಈ ಆಶ್ರಮಕ್ಕೆ ಮತ್ತೆ ಬರಲೇ ಇಲ್ಲ.
ಕಳೆದ ಐದು ವರ್ಷಗಳಲ್ಲಿ ಗುಜರಾತ ಸರಕಾರದವರು ಆಶ್ರಮದ ಎದುರಿಗಿನ
ಸಾಬರಮತಿಗೆ ನಾಲ್ಕೂ ದಿಕ್ಕುಗಳಲ್ಲಿ ಕಟ್ಟೆ ಕಟ್ಟಿ ನರ್ಮದಾ ಕಾಲುವೆಯಿಂದ
ನೀರು ತಂದು ತುಂಬಿಸಿ ಒಂದು ಜಲಾಶಯವನ್ನಾಗಿಸಿದ್ದಾರೆ.

# ಮೈಲಿಗೆಯ ಕೇಡು

**‘ನಿಮ್ಮ ಕಡೆಯ ತಾಯಿಗೆ ನೀವು ಪೂಜೆ ಸಲ್ಲಿಸಿಲ್ಲ. ಮೂರು ವರ್ಷಕ್ಕೆ ಒಮ್ಮೆಯಾದರೂ ದರ್ಶನ ಮಾಡಿ’ ಎಂದು ರಾಜಾಜಿನಗರದಲ್ಲಿ ವಿಜಾಪುರದ ಕಡೆಯ ಸ್ವಾಮಿ ಕಂಡಾಗ ಹೇಳಿದ್ದು ಇರುಪಮ್ಮ ನೆನೆಸಿಕೊಂಡಿದ್ದಳು. ಭಗವತಿಯಮ್ಮನ ಕಡೆ ಹೋಗದೆ ಏಳೆಂಟು ವರ್ಷಗಳಾಗಿದ್ದವು. ಗುಳೆ ಹೋಗುವ ಕಾಲದಲ್ಲೂ ತಾಯಿಯ ನೆನಪಾದರೂ ‘ಬಾಳ್ವೆ ಚಂದ ಮಾಡು. ಬರ್ತೀನಿ’ ಅಂದುಕೊಂಡದ್ದು ಈಗ ಇರುಪಮ್ಮನಿಗೆ ನೆನಪಾಯ್ತು. ಬೆಂಗಳೂರಲ್ಲಿದ್ದಾಗ ಸ್ವಾಮಿ ಹೇಳಿದ ಮ್ಯಾಲೂ ಬಂದು ಹೋಗಲು ಏಳೆಂಟು ತಿಂಗಳೇ ಕಳೆದರೂ ಆಗಿದ್ದಿಲ್ಲ. ಕೊನೆಗೆ ಶಿವಾನಂದನ ಕಾರನ್ನು ಮಾಂತೇಶ–ಸುಮತಿ ಕೇಳಿ, ಡಿಸೇಲ್ ಹಾಕಿಕೊಂಡು ಹೋಗಿಬರ್ತೀವಿ ಎಂದು ಒಪ್ಪಿಗೆ ಪಡೆದು ಕಾರಿನಲ್ಲಿ ಬಂದಿದ್ದರು. ಶಿವಾನಂದ ಡಿಸೇಲ್ ತುಂಬಿಸಿ, ಡ್ರೈವರನನ್ನೂ ಕೊಟ್ಟುಕಳಿಸಿದ್ದ...**

ಡಾ|| ಅಮರೇಶ ನುಗಡೋಣಿ

“ಜಮೀರ್, ಇಲ್ಲೇ ಕಾರ್ ನಿಲ್ಸು. ನಾವು ಇಳಿತೀವಿ. ದಾರಿ ಬಿಟ್ಟು ಸೈಡಿಗೆ ನಿಲ್ಲಿಸಿಬಿಡು” ಅಂದ ಮಾಂತೇಶ. ಕಾರು ಗಕ್ಕನೆ ನಿಂತಿತು. ಒಳಗಿದ್ದವರು ಮುಂದಕ್ಕೆ ಬಾಗಿದರು. ಮುಂದಿದ್ದ ಮಾಂತೇಶ ಇಳಿದ. ಹಿಂದಿದ್ದ ತಂಗಿ ಸುಮತಿ, ತಾಯಿ ಇರುಪಮ್ಮ ಇಳಿದರು. ಸೂರ್ಯ ಮೂಡುತ್ತಿದ್ದ. ಎಳೆ ಬಿಸಿಲು ಎಲ್ಲ ಕಡೆ ಹೊಳೆಯುತ್ತಿತ್ತು. ಮಾಂತೇಶ ಸುತ್ತಲೂ ನೋಡಿದ. ಎತ್ತ ನೋಡಿದರೂ ಗುಂಡು ಬಂಡೆಗಳ ಹಾಸು, ನಡು ನಡುವೆ ಗಿಡಗಳು ಬಿಸಿಲಿಗೆ ಮಿಂಚುತ್ತಿದ್ದವು. ಆಗಲೇ ಬಂಡಿಗಳು, ಎತ್ತುಗಳು ಬಂದು ಬೀಡು ಬಿಟ್ಟಿದ್ದವು. ಅಲ್ಲಲ್ಲಿ ಜನರು ಬಿಸಿಲಿಗೆ ಒಡ್ಡಿಕೊಂಡು ಗುಂಡು ಬಂಡೆಗಳ ಮೇಲೆ ಚಲ್ಲಾಪಿಲ್ಲಿ ಕುಂತಿದ್ದರು. ಇಂದು ಭಗವತಿಯಮ್ಮನ ವಾರ. ಬರುವ ಹೋಗುವ ಜನರ ಗದ್ದಲವಿರುತ್ತದೆಂದು ಮಾಂತೇಶನಿಗೆ ಗೊತ್ತಿತ್ತು. “ಅವ್ವ, ಅವಸರ ಏನೂ ಇಲ್ಲ. ರಾತ್ರಿನೇ ಟಿ. ಬಿ.ಗೆ ಹೋಗಿ ಮಲಗದಷ್ಟೆ. ನೀವು ಆರಾಮಾಗಿ ಪೂಜೆ ಮುಗಿಸಿ ಬರ್ರಿ” ಅಂದ. ಕಾರು ಹಿಂದಕ್ಕೆ ಸರಿಯುತ್ತ ಹೋಯಿತು. ಇರುಪಮ್ಮ ನಿಂತು ನೋಡಿದಳು. ಏನೂ ಬದಲಾವಣೆ ಕಾಣಲಿಲ್ಲ. ನದಿಯ ಕೊಳಕ್ಕೆ ಹೋಗುವ ದಾರಿ ಚೂರು ಅಗಲವಾಗಿತ್ತು. ಈಗೀಗ ಜೀಪು, ಕಾರುಗಳು ಬರ್ತಿರಬೇಕು. ಅನತಿ ದೂರದಲ್ಲಿ ನದಿಯ ಕೊಳ, ಅದರ ಬಲಪಕ್ಕದಲ್ಲಿ ಅಮ್ಮನ ಕೋಡುಗಲ್ಲು ಕಂಡಿತು. ಇರುಪಮ್ಮ ಕೈ ಮುಗಿದಳು. ಅದೇ ಗುಂಡು ಬಂಡೆಗಳು ಎತ್ತ ನೋಡಿದರೂ ಕಂಡವು. ಅಮ್ಮನ ವಾರದ ಪೂಜೆಗೆ ಜನ ಬರುತ್ತಿದ್ದುದು ಕಂಡಿತು. “ಅವ್ವ, ಬೆಂಗ್ಳೂರಾಗ ಇಂಥ ಬಿಸಿಲೇ ನೋಡಿಲ್ಲ. ನಾನು ಆ ಬಂಡೆ ಮೇಲೆ ನಿಂತು ಬಿಸಿಲು ಕಾಯಿಸ್ತೀನಿ” ಎಂದು ಹೊರಟೇಬಿಟ್ಟಳು. ಇರುಪಮ್ಮ ಮಗನನ್ನು, ಮಗಳನ್ನು ನೋಡಿ ಬೆರಗಾದಳು. ಬೆಂಗಳೂರಲ್ಲಿ ನಿತ್ಯ ಜಂಜಡದಲ್ಲಿ ಮಕ್ಕಳನ್ನು ಹಿಂಗ ಮನಸ್ಸುಗೊಟ್ಟು ನೋಡದೇ ಆಗುತ್ತಿರಲಿಲ್ಲ. ಸುಮತಿ, ಮಾಂತೂ ಒಂದುವ್ಯಾಳೆ ಊರಲ್ಲೇ ಇದ್ದಿದ್ದರೆ ಹಿಂಗ ಇರತ್ತಿದ್ದರೇನು ? ಅವರ್ಯಾಕ ತಾನೇ ಹಿಂಗ ಇರತ್ತಿರಲಿಲ್ಲ ಅನ್ನಿಸಿತು. ಎಲ್ಲ ಅಮ್ಮನ ದಯೆ ಅಂತ ಅಂದಳು. ಅಮ್ಮನ ಕೋಡುಗಲ್ಲು ಕಾಣುತ್ತಿತ್ತು. ಹಂಗ ನೋಡಿದರೆ



ಭಗವತಿಯಮ್ಮನಿಗೆ ಇರುಪಮ್ಮ ಬಂದದ್ದು ಕಮ್ಮಿ. ಗಂಡನ ಮನೆಗೆ ಬಂದ ಮ್ಯಾಲೆ, ಗಂಡನ ಮನೆಮಂದಿ, ಊರ ಮಂದಿ ಅಮ್ಮನಿಗೆ ನಡಕಂತಿದ್ದರು. ಇರುಪಮ್ಮ ಎರಡೋ ಮೂರೋ ವರ್ಷಕ್ಕೆ ಒಮ್ಮೆ ಮನೆ ಮಂದಿ ಜತೆಗೆ ಬಂಡಿಯಲ್ಲಿ ಬಂದು, ಕೊಳದಲ್ಲಿ ಮುಳುಗಿ, ಅಮ್ಮನಿಗೆ ಸಣಮಾಡಿ, ಮನೆಯಿಂದ ತಂದ ಬುತ್ತಿ ಉಂಡು, ಹೊತ್ತು ಮುಳುಗ ಹೊತ್ತಿಗೆ ಊರು ಸೇರುತ್ತಿದ್ದಳು. ಗಂಡ ಮಲ್ಲಪ್ಪ ಅಮ್ಮನ ದರ್ಶನಕ್ಕೆ ಬರುತ್ತಿರಲಿಲ್ಲ. ಆತ ಕೊಳ್ಳದ ಸಿದ್ಧನನ್ನು ನೆನಿತಿದ್ದ. ಇರುಪಮ್ಮನಿಗೆ ಗಂಡನ ಹೆಣ ಕಣ್ಣು ಮುಂದೆ ಬಂತು. ಸುತ್ತಲೂರಿನ ಜನ ಹಿನ್ನೀರಿಗೆ ಮುಳುಗುತ್ತಿದ್ದ ಹೊಲ – ಮನೆ ಬುಟ್ಟು, ದನಕರ, ಪಾತ್ರೆಪಗಡ, ಕಾಳುಕಡಿ ಎಲ್ಲ ಬಂಡಿಯಲ್ಲಿ ಹೇರಿಕೊಂಡು ಸರ್ಕಾರದ ಟೆಂಟ್‌ಗಳಿಗೆ ಹೋಗುತ್ತಿದ್ದಾಗ, ಇರುಪಮ್ಮ ಗಂಡನನ್ನು ಹುಡುಕುತ್ತ ತಿರುತಿರುಗಿ ಅತ್ತಳು. ಕೊನೆಗೆ ಭಜನೆ ಮಾಡುತ್ತ ಸಿದ್ಧನ ಕೊಳ್ಳದಲ್ಲಿದ್ದು, ಸಿದ್ಧನ ಮಂಟಪದಲ್ಲಿ ಜೀವ ಬಿಟ್ಟಿದ್ದ. ಭಜನೆ ಗುಂಪಿನವರು ಹೆಣ ತಂದು ಇಟ್ಟರು. ಗಂಡನ ಅಣ್ಣಂದಿರು, ತಮ್ಮಂದಿರು, ಅವರ ಹೆಂಡರು – ಮಕ್ಕಳು ತಮ್ಮ ತಮ್ಮ ಬಾಳ್ವೆಯ ಜತೆಗೆ ಊರುಬಿಟ್ಟು ಹೋಗಿದ್ದರು. ಊರಲ್ಲಿ ನೀರೋ ನೀರು. ಇರುಪಮ್ಮ ಮಕ್ಕಳ ಜತೆ ಬಸಯ್ಯ ತಾತನವರನ್ನು ಹುಡುಕಿ ಕರೆತಂದು ರೀತಿ–ರಿವಾಜಿನಂತ ಮಣ್ಣು ಮಾಡಿ, ಮುಳುಗುತ್ತಿದ್ದ ಹೊಲ – ಮನೆ ಪ್ರದೇಶದಿಂದ ಹೊರಬಂದಳು. ಪರಿಹಾರ ಪಡೆಯಲು ಅಲೆದು ಬೇಡಿ ಬೇಡಿ ಸುಸ್ತಾಗಿ ಕುಂತಳು. ಸಿಕ್ಕದ್ದು ಎಷ್ಟು? ಮೂರು ವರ್ಷದ ಬಾಳ್ವೆಗೂ ಹತ್ತಲಿಲ್ಲ. ಮಗ ಬೆಂಗಳೂರಿಗೆ ದುಡಿಯಲು ಹೋದ. ಬಾಳ್ವೆಗೆ ಜೀವ ಬಂತು. ಮಾಂತು ಜೀವ ತೇಯ್ದು ಹಣ ಕಳಿಸುತ್ತಿದ್ದ...

"ಇರುಪಮ್ಮಕ್ಕ... ?" ಯಾರೋ ಮುಂದೆ ಬಂದು ನಿಂತು ಕರೆದರು. ಐದಾರು ಮಂದಿಯ ಗುಂಪು. "ಅಯ್ಯ, ಸಾವಿತ್ರಿಯಲ್ಲ... ?" ಊರವರು ಅಮ್ಮನ ವಾರಕ್ಕೆ ಬಂದಿದ್ದವರು ನೋಡಿ ಗಾಬರಿಯಾಗಿ ಮುತ್ತಿಕೊಂಡುಬಿಟ್ಟರು. "ಯಕ್ಕ, ಬೆಂಗ್ಳೂರು ಸೇರಿ ಎಷ್ಟು ಚಂದ ಆಗಿದ್ದಿ? ಟಿ.ವಿ. ಸೀರಿಯಲ್‌ನಲ್ಲಿ ಬರ್‍ತಾರಲ್ಲ ಹಂಗ ಕಾಣಕತ್ತಿದ್ದಿ ನೋಡವ್ವ" ಎಂದು ಮ್ಯಾಲೆ ಬಿದ್ದು ಅಭಿಮಾನದಿಂದ ಮಾತಿಗೆ ನಿಂತರು. ಇರುಪಮ್ಮನೂ ಕಕ್ಕುಲಾತಿಯಿಂದಲೇ ಮಾತಾಡಿಸಿದಳು. ಮಕ್ಕಳನ್ನು ಕರದು ತೋರಿಸಿದಳು. "ಕೋಟೆ ಕಡೆ ಬಾವ್ವ. ಆರೇಳು ವರ್ಷ ಆಯ್ತು ಕಾಣ್ದೆ. ಹಿನ್ನೀರು ಬಂದು, ಮುಳುಗಡೆಯಾಗಿ ಸಂಬಂಧಗಳೇ ಕಡದವು." ಹಿರಿಯ ಹೆಂಗಸು ಕಣ್ಣೀರು ಒರೆಸಿಕೊಂಡಳು. ಅವರೆಲ್ಲ ಹೋದರು. "ಮಾಂತೂ, ಏನು ಮುಳುಗಿದ್ರು, ಹೋದ್ರು ನಮ್ಮೂರೇ ಪಾಡ ಅಲ್ಲೇನು ?" ಅಂದು "ಕಾರಿನ್ಯಾಗ ಪೂಜೆ ಕೈಚೀಲ ಐತೆ. ತಂದುಕೊಡು" ಅಂದಳು.

ಮಾಂತೇಶ ಕಾರಿನ ಕಡೆ ಬಂದ. ಜಮೀರ್ ಇರಲಿಲ್ಲ. ಮೊಬೈಲ್‌ನಿಂದ ಕಾಲ್ ಮಾಡಿದ. ಅಷ್ಟರಲ್ಲಿ ಮೂವರು ಹುಡುಗರು ಬಂದು "ಮಾಂತೇಶ್" ಎಂದು ನಿಂತರು. ಮಾಂತೇಶ ಅವರನ್ನು ಗುರುತಿಸಿ "ಹ್ಹೋ ಚಂದ್ರಾ, ಭೀಮೇಶ್, ಶಂಕರ್ ಅಲ್ವಾ..." ಎಂದು ಕೈ ಕೊಟ್ಟ.

"ಏನು ಮಾಂತೇಶ್, ಸಿನೇಮಾ ಹೀರೋ ಆಗಿಬಿಟ್ಟಿದ್ದಿ ? ನಾವು ನೋಡು...?"

"ಮಾಂತೇಶ್, ಚಿತ್ರಕಲೆ ಕಲ್ತು ಬೆಂಗ್ಳೂರು ಸೇರಿ ಶ್ರೀಮಂತ ಆಗಿದ್ದೇನು ?" ಕೇಳಿದ ಒಬ್ಬ.

"ಏನು ಕೆಲ್ಸ ಅಲ್ಲಿ ನಿಂದು ? ನಮ್ಗೂ ಕೆಲ್ಸ ಕೊಡ್ಸು ಬರ್ತೀವಿ" ಮತ್ತೊಬ್ಬ.

"ಸಿನೆಮಾದವರ ಜತೆಗೆ ಇರ್‍ತಿದ್ದೆಂತ ? ಹೌದೇನು ?" ಇನ್ನೊಬ್ಬ.

"ಕೆಲ್ಸ ಮಾಡ್ತೀನಿ ಅಷ್ಟೆ. ಸಿನೆಮಾ ಸೆಟ್ಸ್, ಟಿ.ವಿ. ಸೀರಿಯಲ್ ನಡಿತವಲ್ಲ ಅಲ್ಲಿ ಡೆಕೋರೇಟ್ ಮಾಡದು. ಸ್ಟೇಜ್ ಮಾಡೋದು. ಕೆಲ್ಸ ಮಾಡುವಾಗ ಅಲ್ಲಿ ನಟ, ನಟಿಯರು ಬರ್‍ತಾರೆ, ಹೋಗ್ತಾರೆ ಅಷ್ಟೆ" ಅಂದು ಎಲ್ಲರನ್ನೂ ಖುಷಿಯಿಂದ ನೋಡಿದ. ಮಾತಾಡಿ ಕಳಿಸಿ ಮಾಂತೇಶ ಅಲ್ಲೇ ನಿಂತ. ಡ್ರೈವರ್ ಆಗಿದ್ದ ಒಬ್ಬ. ಒಬ್ಬ ಕೋಟೆಯ ಹೋಟೆಲ್‌ನಲ್ಲಿ ಕೆಲ್ಸಕ್ಕಿದ್ದ. ಒಬ್ಬ ಒಕ್ಕಲತನ ಮಾಡ್ತಿದ್ದನಂತೆ. ಅವರೇ ಹೇಳಿದ್ದರು. ಮಾಂತೇಶ್ ಜಮೀರನನ್ನು ಮರೆತು ನಿಂತಿದ್ದ. ತನಗೆ ಚಿತ್ರ ಬರೆಯಲು ಬರುತ್ತಿರಲಿಲ್ಲ ಎಂದರೆ, ಪತ್ತಾರು ಮಾಸ್ತ್ರು, ಬೆಂಗಳೂರಲ್ಲಿ ಬಡಿಗೇರ್ ಸರ್‍ರು, ಪ್ರೊ॥ ಮಹಾಲಿಂಗ ಅವರು ಸಿಗದಿದ್ದರೆ ಏನಾಗುತ್ತಿದ್ದೆ ? ಊರಲ್ಲಿ ಇದ್ದಾಗ ಹೊಲ ಮುಳುಗಿತು. ಮನೆ ಮುಳುಗಿತು. ಅಪ್ಪ ಸತ್ತ. ನನಗೆ ಚಿತ್ರಕಲೆ ಇಲ್ಲದಿದ್ದರೆ ನಾನೂ ಇವರಂತೆ ಸಿಕ್ಕ ಕೆಲ್ಸ ಮಾಡ್ತಿದ್ದೇನೋ ಏನೋ ? ಅಂದುಕೊಂಡ.

"ಕರದ್ರೇನು ?" ಜಮೀರ್ ಬಂದ ನಗುತ್ತ.

"ಕಾರ್‌ನಲ್ಲಿ ಅವ್ವನ ಪೂಜೆಯ ಬ್ಯಾಗ್ ಐತೆ. ತಗೋತೀನಿ" ಅಂದು ಕೇಳಿದ.

"ಬರ್ರಿ ಮಾಂತೇಶ್, ಈ ಜಾತ್ರೆ ಮಜಾ ಐತೆ" ಅಂದ ಜಮೀರ್.

"ಜಾತ್ರೆಯಲ್ಲ. ಅಮ್ಮನವಾರದ ದಿನ."

"ನದಿನಲ್ಲಿ ಮುಳುಗ್ತಾರೆ ಹೆಂಗಸ್ರು. ಪೂಜೆ ಮಾಡ್ಸಿ ಬಂದು, ಎಲ್ಲಿ ಬೇಕಲ್ಲಿ ನಿಂತು ಬಟ್ಟೆ ಚೇಂಜ್ ಮಾಡ್ತಾರ" ಅಂದು ಕೈ ಚೀಲ ತೆಗೆಯಲು ಡೋರ್ ತೆರೆದ.

"ಜಮೀರ್, ಹೆಂಗಸರನ್ನು ನೋಡಬಾರದು. ಆ ತಾಯಿ ಬಹಳ ಸಿಟ್ಟಿನಮ್ಮ" ಅಂದ ಮಾಂತೇಶ್.

"ಹೌದೇನು ? ಹೆಂಗಸರೇ ಜಾಸ್ತಿ. ಗಂಡಸರು ನದಿಯಲ್ಲಿ ಇಳಿಯುತ್ತಿಲ್ಲ" ಅಂದ. ಮಾಂತೇಶ್ ಪೂಜೆಯ ಕೈಚೀಲ ತಂದುಕೊಟ್ಟ ಅವ್ವನಿಗೆ. ಇರುಪಮ್ಮ ಮಗಳನ್ನು ಕರೆದಳು. "ಬಂದೆಮ್ಮ" ಅಂತ ಕೂಗಿದಳು ಸುಮತಿ.

"ನಿಮ್ಮಮ್ಮ ಅವರೇನು ? ಎಷ್ಟು ಬದಲಾಗಿದ್ದಾರಲ್ಲ. ಕೋಟೆ ಮನೆಯಲ್ಲಿ ಎಷ್ಟು ಸಲ ನೋಡಿದ್ದೀನಿ" ಅಂದಳು ಓರಗಿಯವಳು. ಸುಮತಿ ಕಾರಿನಿಂದ ಇಳಿದು, ದಾರಿಬಿಟ್ಟು ಬಂಡೆ ಹಾಸಿನ ಕಡೆ ಬಂದು ನಿಂತು ನದಿ ಪರಿಸರ ನೋಡುತ್ತಿದ್ದಳು. ನದಿಯ ಕೊಳದಲ್ಲಿ ಮುಳುಗಿ, ಅಮ್ಮನ ದರ್ಶನ ಪಡೆದು, ಹಸಿ ಬಟ್ಟೆಯನ್ನು ಬಿಚ್ಚಿ, ಒಣಸೀರೆ ತೊಡಲು ಗುಂಡುಗಳ ಮರೆಗೆ ಬರುತ್ತಿದ್ದ ಹೆಂಗಸರು. ಯಾರೂ ಮುಜುಗರ ಪಡದೆ, ಹಸಿಬಟ್ಟೆ ಕಳಚುತ್ತಲೇ ಸೀರೆ ಉಟ್ಟುಕೊಳ್ಳುತ್ತಿದ್ದರು. ಸುಮತಿಗೇ ಮುಜುಗರವಾಯ್ತು. ಸುತ್ತಲೂ ಗಂಡಸರು ಇದ್ದಾರೇನೆಂದು ನೋಡಿದಳು. ನದಿ ಕಡೆ ಗಂಡಸರು ಕಾಣುತ್ತಿರಲಿಲ್ಲ. ನದಿಗೆ ಬರುವ ದಾರಿಯ ಅಕ್ಕ – ಪಕ್ಕದ ಕಡೆ ಗುಂಡು – ಬಂಡೆಗಳ ಮೇಲೆ, ಗಿಡಗಳ ಮರೆಯಲ್ಲಿ ಕುಂತು ಮಾತಾಡುತ್ತಿದ್ದರು. ಹೆಂಗಸರೂ ಗಂಡಸರೂ ಕೂಡಿಯೇ ಒಲೆ ಹೂಡಿ, ಪಾತ್ರೆಗಳನ್ನಿಟ್ಟು ಅಡಿಗೆ ಮಾಡುತ್ತಿರುವುದು ಕಂಡು ಬಂತು. ಸುಮತಿ ಊರಲ್ಲಿದ್ದಾಗ, ಮುಳುಗಡೆಯಾದ ಮ್ಯಾಲೆ, ಕೋಟೆಗೆ ಬಂದ ಮ್ಯಾಲೆ, ಹೈಸ್ಕೂಲ್ ಮುಗಿಸಿದ ಮ್ಯಾಲೆಯೂ ಭಗವತಮ್ಮನ ಜಾತ್ರೆಗೆ, ವಾರಕ್ಕೆ, ಪಿಕ್‌ನಿಕ್‌ಗೂ ಬಂದಿರಲಿಲ್ಲ. ಭಗವತಮ್ಮನ ಬಗ್ಗೆ ಕೇಳಿದ್ದಳು. ಬಂದದ್ದು ಇದೇ ಮೊದಲು. ಅಲ್ಲೆ ನಿಂತು ನೋಡುತ್ತಿದ್ದಾಗ ಹೆಂಗಸರ ಒಂದು ಗುಂಪು ಕೊಳದಲ್ಲಿ ಮುಳುಗಿ, ಅಮ್ಮನಿಗೆ ಹರಕೆ ತೀರಿಸಿ ಬಟ್ಟೆ ಬದಲಿಸಲೆಂದು ಬಂತು. ಸುಮತಿ ಅವರನ್ನೇ ನೋಡುತ್ತ ಕೊನೆಗೆ ಹತ್ತಿರ ಹೋಗಿ "ನೀನು ಭ್ರಮರಾಂಬ ಅಂತ ಅಲ್ವ ?" ಅಂತ ಅಂಜುತ್ತ ಕೇಳಿದಳು. ಸೀರೆ ಉಡುತ್ತಿದ್ದ ಆಕೆ "ಹೌದು... ನೀನ್ಯಾರೂ ಅರೇ ಸುಮತೀ..." ಅಂತ ಹಿಗ್ಗಿ ಅಂದಳು. "ಹೌದು. ಅಲ್ಲಿ ಅಮ್ಮ ನಿಂತಿದ್ದಾರೆ. ನಾನು ನೋಡಿ ನಿನ್ನ ಗುರುತು ಹಿಡಿದೆ" ಅಂದಳು. ಆಕೆ ಎಲ್ಲರಿಗೂ ತೋರಿಸಿದಳು. "ಸುಮತಿ, ಏನವ್ವ ಇದು ! ಕೋಟೆ ಹೈಸ್ಕೂಲ್ ಓದುವಾಗ ಹೆಂಗಿದ್ದಿ ? ಈಗ ? ನಾನು ನಿನ್ನ ನೋಡ್ದೇನೋಡ್ದೆ. ಎಲ್ಲೊ ನೋಡಿದ್ದೀನಿ. ಯಾರಿರಬೇಕು ಅಂತ..." ಎಂದು ಕೈ ಹಿಡಿದು ಖುಷಿಗೊಂಡಳು. 'ಬೆಂಗ್ಳೂರು ಸೇರಿ ಏನ್ಮಾಡ್ತಿದ್ದಿ ?' ಕೇಳಿದಳು.

"ಏನಂದ್ರೆ ಅಣ್ಣ ಬೆಂಗಳೂರಿನಲ್ಲಿದ್ದ. ಅಮ್ಮ ನಾವ್ಯಾಕ ಹೋಗ್ಬಾರ್ದು ? ಇಲ್ಲೇನಿದೆ. ನನ್ಗೂ ಕೆಲ್ಸ ಸಿಕ್ರೆ ಮಾಡ್ತೀನಿ. ಅಂತ ಬೆನ್ನತ್ತಿದ್ದಳು. ಹೈಸ್ಕೂಲ್ ಮುಗಿದಿತ್ತು. ಹೋಗಿ ಕಾಲೇಜ್ ಸೇರಿದೆ. ಹಾಗೆ ಪಾರ್ಟ್ಟೈಮ್ ಕೆಲ್ಸ. ಈಗ ಎನ್.ಜಿ.ಓ.ದಲ್ಲಿ ಕೆಲ್ಸ ಮಾಡ್ತಿದ್ದೀನಿ. ನೀನು ?" ಸುಮತಿ ಕೇಳಿದಳು.

"ಮದುವೆಯಾಯ್ತು. ಗಂಡ ಕ್ಲರ್ಕ ಇದ್ದಾನ. ಸರ್ಕಾರಿ ಕೆಲ್ಸ ಅಂತ ಮದುವೆ ಆಗಿದ್ದೀನಿ. ಎರಡು ಮಕ್ಳು ಅಂದಳು ಭ್ರಮರಾಂಬ." ಎಲ್ಲಿ ? ಕೇಳಿದರೆ "ಸಂಜೆ ಹೋಗ್ತೀವಿ ಅಂತ ಬುಟ್ಟು ಬಂದೀನಿ. ಇವರು ವಠಾರದ ಮಂದಿ. ಅವರ ಜೋಡಿ ಬಂದೆ." ಎಂದು ಮಾತಾಡುತ್ತಿದ್ದಾಗಲೇ ಅಮ್ಮ ಕರೆದಿದ್ದಳು. "ಬೆಂಗ್ಳೂರಿಗೆ ಬಂದ್ರೆ ಬನ್ನಿ" ಎಂದು ಮೆಲ್ಲಗೆ ಗುಂಡು, ಬಂಡೆಯ ಹಾಸಿನ ಮೇಲೆ ಇಳಿದು ಏರುತ್ತ ಬಂದು, "ಅವ್ವ, ನಿನ್ಗೆ ನೆನಪಿರುತ್ತೆ ನೋಡು. ಭ್ರಮರಾಂಬ ಅಂತ. ಹೈಸ್ಕೂಲ್ ಗೆಳತಿ ಅಲ್ಲಿ ಸಿಕ್ಕಿದ್ದಳು." "ಹೌದೇನು ? ವಾರದ ದಿನಕ್ಕ ಬಂದಿರ್ತಾರ ಇಲ್ಲಿ ನಮ್ಮೂರ ಮಂದಿ ಬಂದಿದ್ರು. ಮಾತಾಡಿಸಿದ್ರು. ಅಂದಂಗ ಬಿಸಿಲು ಮ್ಯಾಲೆ ಬಂತು. ಕೊಳಕ್ಕೆ ಹೋಗಣು" ಅಂತ ಕರೆದಳು. "ಅವ್ವ, ನಾನೂ ಸ್ನಾನ ಮಾಡಬೇಕಾ ? ಬಟ್ಟೆ ಬದಲಿಸಲು ಇಲ್ಲಿ ರೂಮ್ ಕೂಡ ಇಲ್ಲ." "ಮಗಳ ಮಾತಿಗೆ ಸ್ನಾನ ಅಲ್ಲವ್ವ, ಕೊಳದಲ್ಲಿ ಮುಳುಗಿ, ಅವ್ವನಿಗೆ ಪೂಜೆ ಸಲ್ಲಿಸಿ, ಮ್ಯಾಲೆ ಬಂದು ಬಟ್ಟೆ ಬದಲಿಸನು. ಇಲ್ಲಿ ನಾಚಿಕೆ ಮುಜುಗರ ಮಾಡ್ಕೋಬಾರ್ದು. ನಿನ್ನ ಸಲುವಾಗಿಯೇ ಬಂದೀವಿ ನಡಿ" ಅಂದಳು ಇರುಪಮ್ಮ. "ಹೋಗೇ ನನ್ನ ಸಲುವಾಗಿ ಯಾಕ ?" ಅಂದಳು. "ಮಕ್ಳ ಸಲುವಾಗಿ ದೇವ್ರು ದಿಂಡ್ರು ಅಂತ ನಡಕಬೇಕಾಗ್ತದಪ್ಪ. ನಿನ್ಗ ಈಗ ಹೆಂಗ ತಿಳದೀತು..." ಇರುಪಮ್ಮ ಹೇಳುತ್ತಿದ್ದಾಗಲೇ 'ಮಹಿಳೆಯ ಶೋಷಣೆ ನಿಲ್ಲಲಿ.' 'ಪುರೋಹಿತಶಾಹಿ ಹುನ್ನಾರಕ್ಕೆ ಮಹಿಳೆಯರ ಬಲಿ ನಿಲ್ಲಲಿ'. 'ಸತ್ಯಕ್ಕಾಗಿ ನಮ್ಮ ಹೋರಾಟ' ಎಂದು ಕೂಗುತ್ತ ದಾರಿ ತುಂಬ ಮಹಿಳೆಯರು ಆವೇಶದಿಂದಲೇ ಬಂದರು. ಕೈಯಲ್ಲಿ ಝಂಡಾದಂತೆ ಕಾಣುವ ಬರಹಗಳ ಫಲಕಗಳನ್ನು ಹಿಡಿದಿದ್ದರು. ಮುಂದ ಮುಂದ ಏಳೆಂಟು ಜನ ಪೊಲೀಸರೂ ಹೊರಟಿದ್ದರು. ಅವರು ನದಿಯ ಕೊಳದ ಕಡೆ ಹೋದರು. ಕೂಗುತ್ತಲೇ ಹೋದರು. ಅಕ್ಕಪಕ್ಕದಲ್ಲಿ ಬೀಡು ಬಿಟ್ಟಿದ್ದ ಮಂದಿ ಎದ್ದು ನಿಂತು ಗಾಬರಿಯಿಂದ ನೋಡುತ್ತ ಬಂದು ದಾರಿಯ ಗುಂಟ ನೆರೆದರು. ಇರುಪಮ್ಮ, ಸುಮತಿ ನಿಂತಿದ್ದಲ್ಲಿಗೆ ಮಾಂತೇಶನು ಬಂದು ನಿಂತ. 'ಏನು ? ಪೊಲೀಸರ್ರು ಬಂದಾರ !' ಅಂತ ನೆರೆದ ಮಂದಿ ಮಾತಾಡಿಕೊಂಡರು. ಕೊಳದಲ್ಲಿ ಹೋದ ಹೆಂಗಸರ ಗುಂಪು ನಿಂತದ್ದು ಕಂಡಿತು. ಒಬ್ಬ ಮಹಿಳೆ ಎತ್ತರದಲ್ಲಿ ನಿಂತು ಭಾಷಣ ಮಾಡಲು ನಿಂತಳು. ಜನ ಅತ್ತ ಹೋದಂತೆ ಪೊಲೀಸರು ಗದರಿಸುತ್ತ ಮರಳಿ ಕಳಿಸಲು ಬೆತ್ತ ಬೀಸುತ್ತಿದ್ದರು. ಅಲ್ಲಿ ಗದ್ದಲ ಕಂಡಿತು. ಸ್ವಲ್ಪ ಹೊತ್ತಿನ ನಂತರ ಪೊಲೀಸರ ಕಾವಲಿನಲ್ಲಿ ಅದೇ ದಾರಿಯಲ್ಲಿ, ಕೂಗುತ್ತ ಬಂದು "ಬನ್ನಿ ಬನ್ನಿ" ಎಂದು ಎಲ್ಲರನ್ನು ಕರೆಯುತ್ತಿದ್ದರು. ನೋಡುತ್ತ ನಿಂತವರು ಹಿಂಜರಿಯುತ್ತಿದ್ದರು. ಇರುಪಮ್ಮ ನಿಂತಿದ್ದಲ್ಲಿಗೆ ಬಂದು ದಾಟಿ ಹೋದರು. "ಅವ್ವ, ನೀನು ಹೋಗಿ ಮಿಂದು, ಪೂಜೆ ಮುಗಿಸಿ ಬಾ. ಸುಮತಿ ನೀನೂ ಹೋಗು. ನಾನು ಕಾರಿನ ಕಡೆ ಇರ್ತೀನಿ" ಎಂದು ಮಾಂತೇಶ ಹೇಳಿ, ಕುತೂಹಲ ತಡೆಯದೇ ಹೋರಾಟ ಮಾಡುವಂತೆ ಕಂಡ ಆ ಮಹಿಳಾ ಗುಂಪಿನ ಕಡೆ ನಡೆದ. ಬೆಂಗಳೂರಲ್ಲಿ ಆಗಾಗ ಪ್ರತಿಭಟನೆ ಮಾಡುವ ಗುಂಪು, ಅದನ್ನು ನಿಯಂತ್ರಿಸುವ ಪೊಲೀಸ್ ಕಾವಲು ನೋಡಿದ್ದ. ಯಾಕೆ ಪ್ರತಿಭಟನೆ ಎಂದು ತಿಳಿಯಲು ಹೊರಟಿದ್ದ.

ಮತ್ತೆ ತಣ್ಣಗಾಯ್ತು ! ವಾರದ ಪೂಜೆಗೆ ಬಂದಿದ್ದವರೆಲ್ಲ ಮೊದಲಿನಂತೆ ತಮ್ಮ ತಮ್ಮ ಕೆಲ್ಸಕ್ಕೆ ತೊಡಗಿಕೊಂಡರು. ಇರುಪಮ್ಮ, ಸುಮತಿ ನದಿಯ ಕೊಳದ ಕಡೆ ಪೂಜೆಯ ಚೀಲ ಹಿಡಿದು ನಡೆದರು. ಆಗಲೇ ಬಿಸಿಲು ಚುರುಕಾಗಿತ್ತು. ನದಿ ಅಂಚಿಗೆ ಬಂದರು. ಕಲ್ಲಿನ ಪಾಂಟಣಿಗೆ ಇಳಿದರೆ ಕೊಳ. ಕೊಳಕ್ಕೆ ಅಂಟಿಕೊಂಡೇ ಅತ್ತತ್ತ ನದಿ ಹರಿತಿತ್ತು. ಕೊಳದ ಬಲಗಡೆ ಕಟ್ಟೆಯ ಮ್ಯಾಲೆ ಭಗವತಿಯಮ್ಮನ ಕೋಡುಗಲ್ಲು ಇತ್ತು. ಕೊಳದಲ್ಲೂ ಹೆಂಗಸರು ಮುಳುಗಿ ಏಳುತ್ತಿದ್ದರು. ಎದ್ದವರು ಪೂಜೆಗೆಂದು ಅಮ್ಮನ ಕಡೆ ಹೋಗುತ್ತಿದ್ದರು. "ಅವ್ವ, ಕೊಳ, ಅದರಾಚೆ ನದಿ ಎಷ್ಟು ಚೆಂದ ಇದೆ ನೋಡು" ಎಂದು ನಿಂತು ನೋಡಿದಳು. "ಮೊದ್ಲು ಕಾರ್ಯ ಮುಗುಸನು. ಆ ಮ್ಯಾಲೆ ನಿಂತು ನೋಡುವಂತೆ" ಎಂದು ಕರೆದಳು. ಹೆಂಗಸರ ನಡುವೆ, ಕೊಳದಲ್ಲಿ ಇಳಿದು ಮಿಂದು ಎದ್ದರು. ಸುಮತಿಯ ಸಲುವಾಗಿ ಐದತ್ತು ನಿಮಿಷ ನೀರಲ್ಲೇ ಇರಬೇಕಾಯ್ತು. ಹಸಿ ಬಟ್ಟೆಯಲ್ಲೇ ಅಮ್ಮನ ಕಟ್ಟೆಕಡೆ ಬಂದರು. ಹೆಂಗಸರು ನಿಂತಿರುತ್ತಿದ್ದರು. ಪೂಜಾರಿಗಳು ಇರುಪಮ್ಮನಿಗೆ ವಿಶೇಷವಾಗಿ ಜಾಗ ಮಾಡಿ ಕರೆದು ನಿಲ್ಲಿಸಿದರು. ಇರುಪಮ್ಮ ಸೀರೆ, ಪೂಜೆ ಸಾಮಾನು ಕೊಟ್ಟಳು. ಕಾಳಜಿಯಿಂದ ಪೂಜೆ ಮಾಡಿ ಹರಿಸಿದರು. ಸುಮತಿ ಅಮ್ಮನ ಚಿತ್ರ, ಕೋಡುಗಲ್ಲಿನ ಅಗಲವಾದ ಬಂಡೆಯ ಮ್ಯಾಲಿನ ಚಿತ್ರವನ್ನು ನೋಡುತ್ತ ಬೆರಗಾದಳು. ದೇವತೆಯ ಕುಂತ, ಬಂಡೆಗೆ ಬೆನ್ನು ಆನಿಸಿ ಕುಂತ ಚಿತ್ರವನ್ನು ಕಂಡು ಮೂಕಳಾದಳು. ಹೆಂಗಸರು ಯಾರೂ ಅದನ್ನು ದಿಟ್ಟಿಸಿ ನೋಡುವಂತೆ ಕಾಣುತ್ತಿರಲಿಲ್ಲ. ಪೂಜೆ ಮುಗಿಸಿಕೊಂಡು, ನಮಸ್ಕಾರ ಮಾಡಿ ಅಲ್ಲಿಂದ ಹೊರಡುತ್ತಿದ್ದರು. ಇರುಪಮ್ಮನೂ ಗದ್ದಲದ ನಡುವೆ ಭಕ್ತಿಯಿಂದ ಸಣಮಾಡಿ, 'ಮಕ್ಕಳ ಮದುವೆಯಾಗಿ, ತಣ್ಣಗಿರುವಂತೆ ಹರಸವ್ವ' ಅಂತ ಬೇಡಿಕೊಂಡು ಅಲ್ಲಿಂದ ಮರಳಿದಳು. ಕಾರಿನಲ್ಲಿದ್ದ ಬಟ್ಟೆಯ ಬ್ಯಾಗನ್ನು ಎತ್ತಿಕೊಂಡು, ಜಾಗನೋಡಿ ಬಟ್ಟೆ ಬದಲಿಸಲು ಪ್ರಯತ್ನಿಸುತ್ತಿದ್ದಾಗ, ಕಳಚಿದ ಬಟ್ಟೆ ಒಗೆದುಕೊಡಲು ಅಗಸರ ಹೆಂಗಸರು ಬೆನ್ನತ್ತಿದ್ದರು. "ನಿಮ್ಗ ಕೊಡ್ತೀವಿ. ಚೂರು ದೂರ ಇರ್ರಿ" ಎಂದು ಇರುಪಮ್ಮ ಗದರಿಸಿದಳು. ತಾಯಿ, ಮಗಳು ದಾರಿಯಿಂದ ದೂರ ಬಂದು ಒಂದು ಗುಂಡಿನ ಮರೆಯಲ್ಲಿ ಬಟ್ಟೆ ಬದಲಿಸಲು ನಿಂತರು. ಮರೆಯೇನೂ ಇರಲಿಲ್ಲ. ಅಲ್ಲಲ್ಲಿ ಹೆಂಗಸರು ಬಟ್ಟೆ ಬದಲಿಸುತ್ತಿದ್ದರು.

ಇರುಪಮ್ಮ ತೊಟ್ಟಿದ್ದ ಹಸಿ ಸೀರೆ ಬಿಚ್ಚುತ್ತಲೇ ಒಣ ಸೀರೆಯನ್ನು ಮೈಯಿಗೆ ಹೊದ್ದು, ಉಡುತ್ತಿದ್ದಳು. "ಶೀಲ ಉಳ್ಳವರು ಭಗವತವ್ವನ ಕೊಳದಾಗ ಮಿಂದು ಪೂಜೆ ಮಾಡುವ ಪುಣ್ಯಾ ಮಾಡಿರ್ತಾರ. ಆ ಪುಣ್ಯ ನನ್ಗಿಲ್ಲ. ಮುಂದಿನ ಜನ್ಮದಾಗ ಆ ಪುಣ್ಯಮಾಡಿ, ನಿನ್ನ ಕೊಳದಾಗ ಮಿಂದು ಪೂಜೆ ಮಾಡಿ ಬಾಳ್ತೀನಿ" ಅಂದಳು. ಸೀರೆ ಉಡುತ್ತಿದ್ದ ಇರುಪಮ್ಮ 'ಯಾರು ?' ಎಂದು ಸುತ್ತ ನೋಡಿದಾಗ, ಗುಡಿಯ ಬಳಿ, ಅಮ್ಮನ ಕೋಡುಗಲ್ಲಿನ ಕಡೆ ಮುಖ ಮಾಡಿ ಕೈಮುಗಿದು ಬೇಡುತ್ತಿದ್ದ ಹೆಂಗಸು ಕಂಡಳು ! ಆ ನಡು ವಯಸ್ಸಿನ ಹೆಂಗಸು ಮತ್ತೆ ಮತ್ತೆ ತನ್ನಷ್ಟಕ್ಕೆ ತಾನೇ ಅಂದುಕೊಳ್ಳುತ್ತ ಬೇಡುತ್ತಿದ್ದುದು ಕಂಡಳು. ಇರುಪಮ್ಮ ಕೇಳುತ್ತ ಸಣ್ಣಾಗಿ ಬೆವರುತ್ತ ನಿಂತಳು. ಸೀರೆಯ ನಿರಿಗೆ ಹಾಕುತ್ತ ನಿಂತಿದ್ದಳೋ ಅದು ಸಡಿಲಾಗಿ ನೆಲಕ್ಕೆ ಬಿತ್ತು. 'ಅವ್ವಾ' ಅಂತ ಎತ್ತಿ ಗಡಬಡಿಸಿ ಮೈಗೆ ಸುತ್ತಿಕೊಂಡಳು. ಕಳಚಿದ ಸೀರೆ ಎತ್ತಿಕೊಳ್ಳಲು ಅಗಸರ ಹೆಂಗಸು ಕಾಯುತ್ತಿದ್ದಳು. ಬಂದು ಎಳೆದು ಕೊಂಡಳು. ಸುಮತಿಯೂ ಬಟ್ಟೆ ಬದಲಿಸಿಕೊಂಡು, ಹಸಿಬಟ್ಟೆ ಅಗಸರವಳಿಗೆ ಒಪ್ಪಿಸುತ್ತಿದ್ದಳು. ಇರುಪಮ್ಮ ಬೆವರುತ್ತ ನಡುಗುತ್ತಲೇ ಸೀರೆ ಕುಪ್ಪಸ ಉಟ್ಟುಕೊಂಡಳು. "ಅವ್ವ, ಕಾರಿನ ಬಳಿ ಅಣ್ಣ ಬಂದಾನ. ನಾ ಹೋಗ್ತೀನಿ. ಬಾ" ಅಂದು ಹೊರಟಳು. ಇರುಪಮ್ಮ ಪುನಃ ಆ ಹೆಂಗಸನ್ನು ನೋಡಿದಳು. ಆಕೆ ಕಾಣಲಿಲ್ಲ. ಸುತ್ತಲೂ ನೋಡಿದಳು. ಅಲ್ಲಲ್ಲಿ ಬಟ್ಟೆ ಬದಲಿಸುತ್ತ ನಿಂತಿರುವ ಹೆಂಗಸರೇ ಕಂಡರು. ನಿಲ್ಲಲಾಗದೇ ಗುಂಡಿನ ಮೇಲೆ ಕುಂತು, ಕೋಡುಗಲ್ಲಿನ ಕಡೆ ನೋಡುತ್ತ 'ಮತವು ಬಂತು' ಅಂದುಕೊಂಡಳು. ಮೈಮನಸ್ಸಿನಿಂದ ಜೀವ ಸೋರಿ ಹೋದಂತಾಗತೊಡಗಿತು. ಇರುಪಮ್ಮ ಗಟ್ಟಿಗಳೇ. ಗಂಡನ ಮನೆಗೆ ಬಂದಾಗ ಮನೆತುಂಬ ಮನೆಮಂದಿ. ಮನೆ ಕೆಲ್ಸ ಅಂದ್ರೆ ಜೀವ ಬತ್ತಿಹೋಗುವಷ್ಟು ಕೆಲ್ಸ. ಹತ್ತಾರು ಮಂದಿಗೆ ರೊಟ್ಟಿ ಬಡಿಬೇಕು. ಜೋಳದ ನುಚ್ಚಿನ ಅನ್ನ ಮಾಡಬೇಕು. ಮಜ್ಜಿಗೆ ಮಾಡಿ, ಬೆಣ್ಣೆ ತೆಗಿಬೇಕು. ದನಕರ ನೋಡಬೇಕು. ಮನೆಗೆ ನೀರು ತರಬೇಕು. ಬಟ್ಟೆ ಒಗಿಬೇಕು. ಗಂಡನ ತಮ್ಮಂದಿರು, ಅಣ್ಣಂದಿರು, ಅವರವರ ಹೆಂಡರು–ಮಕ್ಕಳ ನಿಗಾ ನೋಡುತ್ತ, ಅವರ ಜತೆ ಕೆಲ್ಸ ಮಾಡುತ್ತಿದ್ದರೂ ಚೂರು ಬಡವರ ಮನೆಯಿಂದ ಬಂದಿದ್ದ ಇರುಪಮ್ಮನ ಮ್ಯಾಲೆ ಕೆಲ್ಸ ಜಾಸ್ತಿಯಾಯ್ತು. ಗಂಡ ಯಾರ ಗೊಡವೆ ಇಲ್ಲದೆ, ಪಾಲಿಗೆ ಬಂದ ಕೆಲ್ಸ ಮಾಡುತ್ತ, ಭಜನೆ ಮ್ಯಾಳದಲ್ಲಿ ಸೇರಿಬಿಡುತ್ತಿದ್ದ. ಇರುಪಮ್ಮನಿಗೆ ಮಕ್ಕಳಾದವು. ಅಲ್ಲಿಂದ ಮನೆ ಪಾಲು ಆಯಿತು. ಗಂಡನಿಗೆ ಹಾಳುಬಾವಿಯಿದ್ದ ಐದು ಎಕರೆ ಹೊಲ ಬಂದಿತು. ಇರುಪಮ್ಮ ಮನೆ–ಮಂದಿಯನ್ನು ಬಿಟ್ಟು ಹೊಲದಲ್ಲಿಯೇ ಸೂರು ಮಾಡಿಕೊಂಡು, ಕಾಯಿಪಲ್ಲೆ ಬೆಳಕಂಡು, ಹೈನ ಮಾಡಿ ಮಕ್ಕಳನ್ನು ಸಾಕಿಕೊಂಡಿದ್ದಳು. ಹೊಟ್ಟೆ ಬಟ್ಟೆಗೆ ಆಗುವಷ್ಟು ದುಡಿತಿದ್ದಳು. ಗಂಡ ನೆರವಾಗುತ್ತಿದ್ದರೂ ಬದುಕಿನ ಬಗ್ಗೆ ಥಲ ಕಾಳಜಿ ಇರಲಿಲ್ಲ. ಮಕ್ಕಳೂ ಸಾಲಿಗೆ ಹೋಗಲು ತೊಡಗಿದಾಗ ಖರ್ಚು ಜಾಸ್ತಿಯಾಯ್ತು. ಹೀಗೆ ಬಾಳ್ವೆ ನಡಿತಿದ್ದಾಗಲೇ ಹಿನ್ನೀರು ನಿಂತು ಮುಳುಗಡೆಯಾಗುವ ಭೀತಿ ಶುರುವಾಯ್ತು. ಸರ್ಕಾರ ಹೊಲ ಮನೆಯಿಂದ ಹೊರ ಹೋಗುವಂತೆ ಬೆನ್ನತ್ತಿದರು. ಊರುಗಳು, ಹೊಲಗಳು ಮುಳುಗುತ್ತ ಬಂದು, ಇರುಪಮ್ಮನ ತೋಟ, ಸೂರು ಮುಳುಗಲು ಜಾಗ ತೊರೆಯಬೇಕಾಯ್ತು. ಗಂಡ ಊರು–ಕೇರಿ, ಹೊಲ, ಸಿದ್ಧನ ಕೊಳ್ಳ, ಕಲ್ಲಿನ ಮಂಟಪದಲ್ಲಿದ್ದ ಸಿದ್ಧನ ಗುಡಿ ಬುಟ್ಟು ಕದಲಲಿಲ್ಲ. ನೀರು ತುಂಬುತ್ತ ಬಂದು ಮುಳುಗಿತು. ಭಜನೆ ಮಾಡುತ್ತ ಸಿದ್ಧನ ಗುಡಿಯಲ್ಲೇ ಜೀವ ಬಿಟ್ಟಿದ್ದ. ಇರುಪಮ್ಮನಿಗೆ ಎದೆ ತುಂಬಿ ಬಂತು. ಅಳು ಬಂತು.

ಮಗ ಚಿತ್ರಕಲೆ ಕಲಿತಿದ್ದು, ಬೆಂಗಳೂರು ಸೇರಿ ಕೆಲ್ಸಕ್ಕೆ ನಿಂತು ಮನೆ ನಡೆಸಿದ. ಕೊನೆಗೆ ಇರುಪಮ್ಮ ಮಗಳೊಂದಿಗೆ ಮಗನ ಕಡೆ ಇರಲು ಬೆಂಗಳೂರು ಸೇರಿದಳು. ಮಗಳು ರೆಡಿಮೇಡ್ ಬಟ್ಟೆ ಅಂಗಡಿಯಲ್ಲಿ ಕೆಲ್ಸಕ್ಕೆ ನಿಂತಳು. ಇರುಪಮ್ಮ ಉತ್ತರ ಕರ್ನಾಟಕದ 'ಊಟದ ಮನೆ'ಗೆ ಅಡಿಗೆ ಮಾಡುತ್ತ ಬದುಕಲು ನಿಂತಳು. ಮಾಂತೂ ಚೆನ್ನಾಗಿಯೇ ದುಡಿತಿದ್ದ. ಬರುತ್ತ ಇರುಪಮ್ಮ ಮನೆಯಿಂದನೆ ಅಡಿಗೆ ಮಾಡಿ ಕಳಿಸುತ್ತ ಇರುವಾಗ ಆಕೆಗೆ ರಾಜಾಜಿನಗರದ ಓಣಿಯಲ್ಲಿ ಶಿವಾನಂದ ಎಂಬುವವರ ಪರಿಚಯವಾಯ್ತು. ಆತ ದೊಡ್ಡ ಕೆಲ್ಸದಲ್ಲಿದ್ದ. ಹೆಂಡತಿ ಮಕ್ಕಳಿಂದ ಅಮೆರಿಕ ಸೇರಿದ್ದಳು. ಆತ ಇರುಪಮ್ಮನ ಜಿಲ್ಲೆಯವನು. ಸ್ವಂತ ಮನೆಯಿತ್ತು. ಆತನ ಮನೆಯಲ್ಲಿ ಎರಡು ರೂಮ್ ಪ್ರತ್ಯೇಕ ಇದ್ದವು. ಇರುಪಮ್ಮನಿಗೆ, ಮಾಂತೇಶನಿಗೆ ಪರಿಚಯವಾದ ಶಿವಾನಂದ ಇರುಪಮ್ಮನ ಅಡಿಗೆ ಉಂಡು ಖುಷಿಗೊಂಡಿದ್ದ. ಅದೇ ಸಲಿಗೆ ಮ್ಯಾಲೆ ಮನೆ ಬಾಡಿಗೆಗೆಂದೇ

ಆತನ ಮನೆ ಸೇರಿದರು. ಹೋಟಲ್ ಊಟ ತಿಂದೇ ಇದ್ದ ಶಿವಾನಂದನಿಗೆ ರಾತ್ರಿ ಇರುಪಮ್ಮನ ಅಡಿಗೆಯ ಊಟ ಸಿಗುತ್ತಿತ್ತು. ಆತ ಒಳ್ಳೆಯವನೆಂದು ಇರುಪಮ್ಮ, ಮಾಂತೇಶ್, ಸುಮತಿ ಆಪ್ತರಾದರು. ಇರುಪಮ್ಮ ಶಿವಾನಂದ ಸಮವಯಸ್ಕರು. ಗುಳೆ ಬಂದ ಇರುಪಮ್ಮನಿಗೆ ಆತ ತಣ್ಣಗೆ ನೆರವಾಗುತ್ತಿದ್ದ.

ಇರುಪಮ್ಮ ಆತನಿಗೆ ಒಪ್ಪಿಸಿಕೊಂಡಳು! ಮಾಂತೇಶ್, ಸುಮತಿ ಯೌವ್ವನಕ್ಕೆ ಬಂದು ನಿಂತರು. ನಾಜೂಕಾಗಿ ಇರುಪಮ್ಮ ಇದ್ದಳು. ಶಿವಾನಂದನೂ ತನ್ನ ಕೆಲಸದ ಮೇಲೆ ಬೇರೆ ಊರುಗಳಿಗೆ ಹೋಗಿಬರುತ್ತಿದ್ದ. ಹಿಂಗಾಗಿ ಇರುಪಮ್ಮನ ಮ್ಯಾಲೆ ಮಕ್ಕಳಿಗಾಗಲಿ, ಓಣಿಯಲ್ಲಿ ಯಾರಿಗೂ ಅನುಮಾನ ಇರಲಿಲ್ಲ. ಮೇಲಾಗಿ ಇರುಪಮ್ಮ ಹೊಟ್ಟೆಪಾಡಿಗೆ ಹಗಲು ರಾತ್ರಿ ದುಡಿವ ಹೆಂಗಸಾಗಿದ್ದಳು. 'ನಿಮ್ಮ ಕಡೆಯ ತಾಯಿಗೆ ನೀವು ಪೂಜೆ ಸಲ್ಲಿಸಿಲ್ಲ. ಮೂರು ವರ್ಷಕ್ಕೆ ಒಮ್ಮೆಯಾದರೂ ದರ್ಶನ ಮಾಡಿ' ಎಂದು ರಾಜಾಜಿನಗರದಲ್ಲಿ ವಿಜಾಪುರದ ಕಡೆಯ ಸ್ವಾಮಿ ಕಂಡಾಗ ಹೇಳಿದ್ದು ಇರುಪಮ್ಮ ನೆನೆಸಿಕೊಂಡಿದ್ದಳು. ಭಗವತಿಯಮ್ಮನ ಕಡೆ ಹೋಗದೆ ಏಳೆಂಟು ವರ್ಷಗಳಾಗಿದ್ದವು. ಗುಳೆ ಹೋಗುವ ಕಾಲದಲ್ಲೂ ತಾಯಿಯ ನೆನಪಾದರೂ 'ಬಾಳ್ವೆ ಚಂದ ಮಾಡು. ಬರ್ತೀನಿ' ಅಂದುಕೊಂಡದ್ದು ಈಗ ಇರುಪಮ್ಮನಿಗೆ ನೆನಪಾಯ್ತು. ಬೆಂಗಳೂರಲ್ಲಿದ್ದಾಗ ಸ್ವಾಮಿ ಹೇಳಿದ ಮ್ಯಾಲೂ ಬಂದು ಹೋಗಲು ಏಳೆಂಟು ತಿಂಗಳೇ ಕಳೆದರೂ ಆಗಿದ್ದಿಲ್ಲ. ಕೊನೆಗೆ ಶಿವಾನಂದನ ಕಾರನ್ನು ಮಾಂತೇಶ–ಸುಮತಿ ಕೇಳಿ, ಡಿಸೇಲ್ ಹಾಕಿಕೊಂಡು ಹೋಗಿಬರ್ತೀವಿ ಎಂದು ಒಪ್ಪಿಗೆ ಪಡೆದು ಕಾರಿನಲ್ಲಿ ಬಂದಿದ್ದರು. ಶಿವಾನಂದ ಡಿಸೇಲ್ ತುಂಬಿಸಿ, ಡ್ರೈವರನನ್ನೂ ಕೊಟ್ಟುಕಳಿಸಿದ್ದ...

ಭಕ್ತಿಯಿಂದ ಬಂದ ಇರುಪಮ್ಮನಿಗೆ ಕೊಳದಲ್ಲಿ ಮುಳುಗಿ, ಪೂಜೆ ಸಲ್ಲಿಸಿ ಬಂದು, ಬಟ್ಟೆ ಬದಲಿಸುವಾಗ ಆ ಹೆಂಗಸು ಅಂದದ್ದು ಕೇಳಿಸಿಕೊಂಡು ಕುಸಿದೇ ಹೋಗಿದ್ದಳು. ಭಗವತಿಯಮ್ಮನ ಕೊಳದಲ್ಲಿ ಮುಳುಗಿ, ಆಕೆಗೆ ಪೂಜೆ ಸಲ್ಲಿಸುವವರು ಗರತಿಯರಾಗಿರಬೇಕು. ನಡತೆ ತಪ್ಪಿದ ಹೆಂಗಸರು ಇತ್ತ ಸುಳಿಯುತ್ತಿರಲಿಲ್ಲ. ಒಂದು ವ್ಯಾಳೆ ಅಂಥ ಹೆಂಗಸರು ತಾಯಿ ಕೊಳದಲ್ಲಿ ಮುಳುಗಿ ಎದ್ದರೆ ಅಂತವರು ರಕ್ತಕಾರಿ ಸಾಯುತ್ತಾರೆಂದು ಇರುಪಮ್ಮ ತನ್ನೂರಿನಿಂದ ಮದುವೆಯಾಗಿ ಗಂಡನ ಮನೆಗೆ ಬಂದ ಮೇಲೆ, ತಾಯಿ ಬಗ್ಗೆ ಊರುಕೇರಿ ಮಂದಿ ಸಮಯ ಸಂದರ್ಭ ಬಂದಾಗ ಮಾತಾಡಿದ್ದು ನೆನಪಾಯ್ತು! ಆ ಹೆಂಗಸು ಬೇಡಿಕೊಂಡ ಮಾತುಗಳೂ ಕೇಳಿಸಿಕೊಂಡು ತತ್ತರಿಸಿದ್ದಳು. ಶಿವಾನಂದ ನೆಪ್ಪಾಗಿದ್ದ. ಮುಳುಗಿದ್ದೂ ಆಯ್ತು. ಪೂಜೆ ಮಾಡಿದ್ದು ಆಗಿತ್ತು. ಜನ ಮಾತಾಡುವಂತೆ, ತಾಯಿ ಮ್ಯಾಲೆ ಪದ ಹಾಡುವ, ಕತೆ ಹೇಳುತ್ತ ಊರಾಡುವ ಹೆಂಗಸರೂ ಕಣ್ಣಮುಂದೆ ಬಂದರು. ತಪ್ಪಿನ ಅರಿವು ಮೂಡಿ ಕಾಡಿತು. ತಾನು ರಕ್ತಕಾರಿ ಸತ್ತರೆ ಮಕ್ಕಳ ಗತಿ? ಎಂದು ಚಿಂತಿಸಿದಳು. 'ನೀನು ಗರತಿ ಆಗಿದ್ದರೆ ಅವ್ವನ ಕೊಳದಾಗ ಮುಳುಗಿ ತೋರಿಸು' ಅಂತ ಅನುಮಾನಪಡುವ ಗಂಡಸರು ಹೆಂಡತಿಯರಿಗೆ ಸವಾಲು ಹಾಕುತ್ತಿದ್ದ ಕೆಲವು ಘಟನೆಗಳೂ ಎದೆಯಿಂದ ಎದ್ದುಬಂದವು.

"ಅವ್ವ, ಬಿಸಲಾಗ ಹಿಂಗ್ಯಾಕ ಕುಂತಿದ್ದಿ? ಪೂಜೆ ಮುಗಿಸಿ, ಬಟ್ಟೆ ಬದಲಿಸಿ ಕಾರಿನ ಕಡೆ ಬರಬಾರದೇನು? ನಿನ್ಗ ಗೊತ್ತದಲ್ಲ, ಇಲ್ಲಿ ಹೆಂಗಸರು ಮನೆಯಿಂದ ಮಾಡಿಕೊಂಡು ತಂದ ರೊಟ್ಟಿ, ಪಲ್ಯ, ಮೊಸರು, ಸೇಂಗಾ ಹಿಂಡಿ ಮಾರಾಕ ಬಂದಾರ. ತಗಂಡು ಊಟ ಮಾಡನು..." ಎಂದು ಸುಮತಿ ಬಂದು ಕರೆದು, ಅವ್ವನನ್ನು ನೋಡಿ "ಆರಾಮಿಲ್ಲೇನು? ಛಳಿಯಾಗ ಕೊಳದಾಗ ಮುಳುಗಿದಿ" ಎಂದು ಬಂದು ಕೈ ಹಿಡಿದಳು. ಮಗಳಿಗೆ ಯಾವುದೂ ತೋರಗೊಡದೆ ಇರುಪಮ್ಮ ಎದ್ದಳು. ದಾರಿ ಕಡೆ ಬರುತ್ತಿದ್ದಂಗೇ ಮಾಂತೇಶ ಬಂದು "ಅವ್ವ, ಮುಂಜಾನೆ ಪ್ರತಿಭಟನೆ ಮಾಡಲು ಬಂದಿದ್ದರಲ್ಲ ಹೆಂಗಸರು, ಅವರ ಕಡೆ ಹೋಗಿದ್ದೆ. ಅವರು ಭಾಷಣ ಮಾಡಿದ್ದು ಕೇಳಿ ಬಂದೆ. ಹಿಂದ ನಮ್ಮ ಪ್ರೊ॥ ಬಡಿಗೇರ ಜತೆ ಇಲ್ಲಿಗೆ ಬಂದಿದ್ದೆ. ಅವರು ಈ ಜಾತ್ರಿ ನೋಡಿದ್ರು. ಅಮ್ಮನ ಮ್ಯಾಲಿನ ಕಥೆ ಹಾಡುವುದನ್ನು ರಾತ್ರಿ ಕುಂತು ಕೇಳಿದ್ರು ನಿನ್ಗ ಹೇಳಿದ್ದೆ ನೋಡು. ಪ್ರೊ॥ ಬಡಿಗೇರ ಅವರೂ 'ಈ ಕಥೆಯನ್ನು ಕೇಳಿದ್ರ ಏನೋ ಇಲ್ಲಿ ಮುಚ್ಚಿದ್ದಾರೆ' ಅನ್ನಿಸ್ತಿದೆ ಅಂದಿದ್ರು. ಆ ಹೋರಾಟ ಯಾಕ ಮಾಡ್ತಾರಂದ್ರ 'ಹೆಂಗಸ್ರು ಶೀಲವಂತೆಯರಾಗಿದ್ದರೆ ಮಾತ್ರ ಈ ಅಮ್ಮನ ಕೊಳದಾಗ ಮಿಂದು ಪೂಜೆ ಮಾಡಬೇಕು. ಹಾದರ ಮಾಡಿದ ಹೆಂಗಸರು ಮಿಂದರೆ ಎದೆ ಒಡದು, ರಕ್ತ ಸೋರಿ ಸಾಯ್ತಾರ' ಅಂತ ಸುಳ್ಳು ಸುಳ್ಳು ಕಥೆ ಕಟ್ಟಿ ಪೂಜಾರಿಗಳು ಹಿಂದಿನಿಂದ ಹೇಳುತ್ತ ಬಂದಿದ್ದಾರಂತ. ಅದನ್ನು ಹೆಂಗಸರು ನಂಬಬಾರದು. ಅವ್ವನ ಮ್ಯಾಲಿನ ಕಥೆ ಹಾಡ್ತಾರಲ್ಲ ಅದರಾಗ ಇರುವ ಕಥೆ ಬ್ಯಾರೆ. ಪೂಜಾರಿಗಳು ಅದನ್ನ ತಿರುಚಿ ಕಟ್ಟಿ ಹಾಡುವಂತೆ ಮಾಡಿದ್ದಾರಂತೆ. ಅದಕ್ಕಾಗಿ ಹೆಂಗಸರನ್ನು ಶೋಷಣೆ ಮಾಡುವ ಬಗ್ಗೆ ಜಾಗೃತಿ ಮುಡಿಸಾಕ ಬಂದಾರ" ಎಂದು




ಹೇಳಿದ. ಇರುಪಮ್ಮನಿಗೆ ಮಗನ ಮಾತು ಕೇಳಿ ಚೂರು ಉಮೇದಿ ಬಂತು. ಆದ್ರೂ ತಾಸಿನಿಂದ ಆಗುತ್ತಿದ್ದ ಸಂಕಟ ಕಮ್ಮಿಯಾಗಲಿಲ್ಲ. ಮಾಂತೇಶನನ್ನು ನೋಡಿ "ಏನು ಹೇಳ್ತಾರ ಕೇಳನೇನು?" ಎಂದು ಕೇಳಿದಳು. "ಇಷ್ಟೇ. ಬೇಕಾದ್ರ ಕೇಳಿ ಬರನು! ನಮ್ಮ ಪ್ರೊ॥ ಬಡಿಗೇರ ಸರ್ ಇದ್ದಿದ್ದರೆ ಬೇಶಿತ್ತು" ಎಂದು ನೆನೆಸಿಕೊಂಡ. ಇರುಪಮ್ಮ ಹೋರಾಟ ಮಾಡುತ್ತಿದ್ದ ಮಹಿಳೆಯರ ಗುಂಪಿನ ಕಡೆ ಹೋಗಿ ಬರಬೇಕೆನಿಸಿತು. "ಮಾಂತೂ, ತಂಗಿ, ನೀನು, ಜಮೀರ್ ಸೇರಿ ಊಟ ಮಾಡ್ರಿ. ನಾನು ಚೂರು ಅಲ್ಲಿಗೆ ಹೋಗಿಬರ್ತೀನಿ" ಎಂದು ಹೇಳಿ, ಪ್ರತಿಭಟನಕಾರರ ಗುಂಪಿನ ಕಡೆ ಬಂದಳು. ಟೆಂಟ್ ಹಾಕಿದ್ದರು. ಅಲ್ಲಿ ಪೊಲೀಸರೂ ಇದ್ದರು. ಭಾಷಣ ಮಾಡುತ್ತ ನಿಂತಿದ್ದ ಹೆಂಗಸಿನ ಸುತ್ತ ಪೂಜೆಗೆ ಬಂದ ಮಹಿಳೆಯರೂ ನೆರೆದಿದ್ದರು. "ತಲೆತಲೆಯಾಂತರದಿಂದ ಹೆಂಗಸರಿಗೆ ಶೀಲ ಕಾಪಾಡಿಕೊಳ್ಳುವ ಸಲುವಾಗಿ ನೂರಾರು ಕಥೆ ಕಟ್ಟಿ, ಹಾಡುತ್ತ ಅದನ್ನು ಮಹಿಳೆಯರು ನಂಬುವಂತೆ ಮಾಡುತ್ತಿದ್ದಾರೆ. ಭಗವತಿಯಮ್ಮನ ಮ್ಯಾಲಿರುವ ಮೂಲ ಕಥೆ, ಅದನ್ನು ಹಾಡುವ ಗಾಯಕರು ಇನ್ನೂ ಜೀವಂತ ಇದ್ದಾರೆ. ಭಗವತಿ ಅಮ್ಮನ ಕಥೆಯಾದರೂ ಏನು? ಭಗವತಿಯ ಗಂಡ ದಂಡಿಗೆ ಹೋಗಿದ್ದ. ಕಾಳಗ ನಡೆದಿತ್ತು. ದಂಡಿನ ಮುಖಂಡ ಬಂದು 'ನಿನ್ನ ಗಂಡ ಕಾಳಗದಲ್ಲಿ ಸತ್ತ. ನೀನು ಚಿಂತೆ ಮಾಡಬ್ಯಾಡ. ನಾನೇ ನಿನ್ನ ಉಡುಕಿ ಮಾಡ್ಕಂತೀನಿ' ಎಂದು ಒಪ್ಪಿಸಿದ. ಭಗವತಿ ಬೇಗ ಒಪ್ಪಲಿಲ್ಲ. 'ಹೆಂಡತಿಯ ಹಾಗೆ ನೋಡಿಕೊಳ್ತೇನೆ' ಎಂದು ನಂಬಿಸಿ ಒಪ್ಪಿಸಿ, ಕೂಡಿದ. ತಿಂಗಳ ಒಳಗಾಗಿ ಕಾಳಗ ನಿಂತ ಮ್ಯಾಲೆ ಭಗವತಿ ಗಂಡ ಬಂದ. ಭಗವತಿ ದಂಡಿನ ಮುಖಂಡನ ತೋಳಿನ್ಯಾಗ ಇದ್ದಳು. ಗಂಡ ಸಿಟ್ಟಿನಿಂದ ಕುದ್ದು ಮುಖಂಡನನ್ನು ಇರಿದು ಕೊಂದ. ತಪ್ಪಿಸಿಕೊಂಡ ಭಗವತಿ ಸಾಯಲು ರಾತೋರಾತ್ರಿ ಗಂಗಮ್ಮನ ಬಳಿ ಬಂದಳು. ಆ ಕೋಡುಗಲ್ಲಿನ ಬಳಿ ಕುಂತು ಅತ್ತಳು. ಅದನ್ನು ಕೇಳಿದ ಹರಿವ ಗಂಗವ್ವ ಮರಳಿ ಬಂದು ಕೇಳಿ 'ನಿನ್ನ ತಪ್ಪಿಲ್ಲ. ನೀನು ಬಾಳು' ಎಂದು ಹರಸಿ ಹೋದಳು. ಆದ್ರೆ ಪುರೋಹಿತರು ಇದನ್ನು ತಿರುಚಿದರು. ಶೀಲ ಕಳಕಂಡವರು ಈ ಭಗವತಿ ಅವ್ವನಂತೆ ಕೊಳದಲ್ಲಿ ಮೀಯದೇ ನದಿ ದಂಡೆ ಮ್ಯಾಲೆ ಕೂಡಬೇಕು. ಗರತಿಯರು ಮಿಂದು ಭಗವತಿಗೆ ಪೂಜೆ ಮಾಡಬಹುದು ಅಂತ ಪೂಜೆಗೆ ಅವಕಾಶ ಮಾಡಿ, ತಾವು ಬದುಕುತ್ತಿದ್ದಾರೆ. ಮೂಲ ಕಥೆಯಲ್ಲಿ ಭಗವತಿ ಅಮ್ಮ ಹೆಂಗಸರು ಬಲಿಯಾಗಿ ಮೈಲಿಗೆಯಾದ್ರೆ ಅಂಥವರ ಮೈಲಿಗೆ ತೊಳೆಯಲು ಇಲ್ಲಿ ಕುಳಿತಿದ್ದಾಳೆ ಎಂದು ವಿದ್ಯಾವಂತೆ ಒಬ್ಬ ಮಹಿಳೆ ಭಾಷಣ ಮಾಡುತ್ತ ಹೆಂಗಸರಿಗೆ ತಿಳಿ ಹೇಳುತ್ತಿದ್ದಳು. ಇರುಪಮ್ಮ ಮೈಯೆಲ್ಲ ಕಣ್ಣಾಗಿ, ಕಿವಿಯಾಗಿ ನೋಡುತ್ತ, ಕೇಳುತ್ತ ಬಲಗೊಂಡಳು. ಸೋರಿದ್ದ ಜೀವ ತುಂಬಿತು. ದಾಪುಗಾಲ ಹಾಕುತ್ತ ಕೊಳದ ಕಡೆ ಬಿರುಗಾಳಿಯಂತೆ ನಡೆದಳು. ದಾರಿಯಲ್ಲೇ ನಿಂತ ಮಕ್ಕಳಿಗೆ "ಇನ್ನೊಂದು ಸಲ ಕೊಳದಲ್ಲಿ ಮಿಂದು, ಪೂಜೆ ಮಾಡಿ ಬರ್ತೀನಿ" ಎಂದು ಹೇಳುತ್ತಲೇ ಹೋದಳು. ಮಾಂತೇಶ್, ಸುಮತಿ ಗಾಬರಿಯಾಗಿ ಹಿಂಬಾಲಿಸಿದರು.

**ಡಾ॥ ಅಮರೇಶ ನುಗಡೋಣಿ**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ ಜಿಲ್ಲೆ

ಇಂದಿನ ಬರಹಗಾರರು ತಮ್ಮ ಅನುಭವಲೋಕವನ್ನು ವಿಭಿನ್ನವಾಗಿ ಕಟ್ಟುವ ಉತ್ಸಾಹದಲ್ಲಿ ಮುಕ್ತತೆಯೇ ಹೊಸತನ ಎನ್ನುವ ಭ್ರಮೆಗೆ ಒಳಗಾಗುತ್ತಿರುವರೇ? ಅಂತರ್ಜಾಲ ತಾಣಗಳು ನಿರ್ಭಿಡೆಯ ಅಭಿಪ್ರಾಯಗಳಿಗೆ ಅವಕಾಶವನ್ನು ಕೊಡುತ್ತ ; ಒಂದು ಮುಖೇಡಿತನವನ್ನೂ ಒದಗಿಸಿತು. ಅಂತಹ ಉಡಾಫೆ ಧೋರಣೆ ಮತ್ತು ಅನಿಯಂತ್ರಿತ ಭಾಷೆ ಸಾಹಿತ್ಯದ ಘನತೆಯನ್ನೇ ಕುಂದಿಸುತ್ತದೆ. ಸಾಹಿತ್ಯಿಕ ಸಾಂಸ್ಕೃತಿಕ ಸಿದ್ಧಾಂತಗಳು ಬದುಕನ್ನು ಕುರಿತ ಗಾಢವಾದ ಮಮತೆ ಮತ್ತು ಶ್ರದ್ಧೆಯಲ್ಲಿ ಹುಟ್ಟುತ್ತವೆ. ಅವುಗಳನ್ನು ಸರಳವಾಗಿ ಪದಾರ್ಥೀಕರಿಸುವುದು ತಪ್ಪು. ಒಂದು ಉದಾಹರಣೆಯನ್ನು ಗಮನಿಸುವುದಾದರೆ, ಸ್ತ್ರೀ ವಾದವು ಪ್ರತಿರೋಧಗಳ ಸಂಕಥನವೋ ಮುಕ್ತತೆಯ ಪ್ರತಿಪಾದನೆಯೋ ಅಲ್ಲ. ಸಾಮಾಜಿಕ ಸಂರಚನೆಯೊಳಗೆ ಬೆರೆತು ಬೆಳೆಯುತ್ತಿರುವ ಯಾಜಮಾನ್ಯದ ಅಗಣಿತ ಸ್ತರಗಳನ್ನು ಅಧ್ಯಯನ ಮಾಡುವ ವೈಧಾನಿಕತೆ. ಅದು ಮತ್ತೆ ಮರುನಿರ್ವಚನಕ್ಕೆ ಒಳಗಾಗಬೇಕಿದೆ.

# ಎರಡು ದಶಕಗಳು : ಬರಹ ಮತ್ತು ಚಳವಳಿ

ಡಾ॥ ವಿನಯಾ



**ಮೂ**ವತ್ತು ಮೂವತ್ತೈದು ವರ್ಷಗಳ ಹಿಂದಿನ ಮಾತು. ಅದೊಂದು ಪುಟ್ಟ ಹಳ್ಳಿ. ಆ ಹಳ್ಳಿಯಲ್ಲಿ ಸುತ್ತ ಹತ್ತೂರಿನಲ್ಲಿ ಹೆಸರುವಾಸಿಯಾದ ಜಮೀನ್ದಾರನಿದ್ದ. ಅವನಿಗಾಗಲೇ ಎಪ್ಪತ್ತು ವರ್ಷ ದಾಟಿದ್ದವು. ಮುಸ್ಸಂಜೆ ಹೊತ್ತಲ್ಲಿ ಈ ಹಿರೀಕ ತನ್ನ ಆರಾಮಕುರ್ಚಿಯಲ್ಲಿ ಒರಗಿ ಸೋಮೇಶ್ವರ ಶತಕವನ್ನೊ, ಜೈಮಿನಿಯ ಸಾಲುಗಳನ್ನೋ, ಗದುಗಿನ ಭಾರತದ ಪದವನ್ನೋ ದೊಡ್ಡ ದನಿಯಲ್ಲಿ ಹಾಡಿಕೊಳ್ಳುವಾಗ, ಮನೆಯ ಮೊಮ್ಮಕ್ಕಳು ತಾಳ ಹಿಡಿದು ದೇವರ ಮುಂದೆ ಭಜನೆ ಮಾಡುತ್ತಿದ್ದರು. ಆ ಹೊತ್ತಲ್ಲಿ ಅಂಬಿಗರ ಕೇರಿಯ ಸೋಮಯ್ಯ ಭರ್ತಿ ಕುಡಿದು ಬಂದು ಅಂಗಳದ ಬದಿಯ ರಸ್ತೆಯಲ್ಲಿ ನಿಂತು ತೂರಾಡುತ್ತ ಹಾರಾಡುತ್ತ ಈ ಹಿರೀಕನನ್ನು ಬಯ್ಯುತ್ತಿದ್ದ, ಜೀವ ಕೊರೆಯುವ ಲಯದಲ್ಲಿ. ಮೊಮ್ಮಕ್ಕಳ ಭಜನೆ ನಿಂತು ಆ ಬಯ್ಗಳಿಕ್ಕೆ ಕಿವಿಯಾಗುವ, ಅಜ್ಜನ ಪ್ರತಿಕ್ರಿಯೆಗೆ ಕಣ್ಣಾಗುವ ಕ್ಷಣವದು. ಸುಮ್ಮನೆ ಕೇಳಿಸಿಕೊಳ್ಳುತ್ತಿದ್ದ ಅಜ್ಜ ಆಗಾಗ ಒಂದೋ ಎರಡೋ ಮಾತಿನಲ್ಲಿ ಬೆದರಿಸುತ್ತಿದ್ದ. ನಮಗೆ ನಿದ್ದೆ ಹತ್ತುವವರೆಗೂ ಸೋಮಯ್ಯನ ಲಯಬದ್ಧ ದನಿ ಕ್ಷೀಣವಾಗಿ ಕೇಳುತ್ತಿರುತ್ತಿತ್ತು. ಮಾರನೆಯ ಬೆಳಿಗ್ಗೆ ನಿನ್ನೆಯ ತಾನು ತಾನಲ್ಲವೆ ಅಲ್ಲ ಎನ್ನುವಂತೆ ಸೋಮಯ್ಯ ಅಂಗಳದಲ್ಲಿ ನಿಂತಾಗಿರುತ್ತಿತ್ತು. ವಾರಕ್ಕೊಮ್ಮೆಯಾದರೂ ಪುನರಾವರ್ತನೆಯಾಗುತ್ತಿದ್ದ ಈ ಘಟನೆ ಬಾಲ್ಯದ ಬೆರಗುಗಳಲ್ಲಿ ಸೇರಿಹೋಗಿತ್ತು. ಸದ್ಯದ ಕನ್ನಡ ಸಾಹಿತ್ಯದ ಬಗ್ಗೆ ಯೋಚಿಸುವಾಗ ಈ ಘಟನೆಯನ್ನು ನನ್ನ ಮುಂದಿನ ಅಭಿಪ್ರಾಯಗಳಿಗೆ ಪ್ರವೇಶಿಕೆಯಾಗಿಸಿಕೊಳ್ಳುತ್ತೇನೆ. ಕತ್ತಲ ಪರದೆಯ ಮರೆಯಲ್ಲಾದರೂ ಸರಿ, ತನ್ನ ಹೊಟ್ಟೆಯ ಸಂಕಟವನ್ನು ಲಯಬದ್ಧವಾಗಿ ಸಾರುವ ಸೋಮಯ್ಯ ಜಮೀನ್ದಾರನ ಮನೆಯ ಅಂಗಳದವರೆಗೂ ಬಂದಿದ್ದಾನೆ. ಜಮೀನ್ದಾರ ತೀಕ್ಷ್ಣವಾಗಿ ವಿರೋಧಿಸುತ್ತಿಲ್ಲ. ಎಷ್ಟೋ ಸಂದರ್ಭದಲ್ಲಿ ಸಹಾನುಭೂತಿಯ ಕೇಳುಗನಾಗಿದ್ದಾನೆ. ಇದರಿಂದ ಸೋಮಯ್ಯನ ಸಂಕಟ ಮತ್ತೂ ಹೆಚ್ಚುತ್ತದೆ. ಕಡೆಗವನಿಗುಳಿಯುವುದು ಮಾತಿಗೆ ಮೀರಿದ ರೋದನ. ಹಗಲ ಬೆಳಕಿನಲ್ಲಿ ಅದೇ ಜಮೀನ್ದಾರನ ಅಂಗಳದಲ್ಲಿ ನಡು ಬಗ್ಗಿಸಿ ದುಡಿಯಬೇಕು.

ಇವತ್ತು ಬರಹಗಾರ ತನ್ನ ವರ್ತಮಾನದ ಅನುಭವಗಳಿಗೆ ಕಟ್ಟಿಕೊಳ್ಳುವ ಆಕ್ರೋಶ ಹೀಗೆ ಕ್ಷಣದ ಇಳುಹುವಿಕೆ ಆಗಿ ಕರಗಿಹೋಗುತ್ತಿದೆಯೇ? ಅಧಿಕಾರ ಕೇಂದ್ರವನ್ನು ವಿಚಲಿತಗೊಳಿಸುವುದು ಸಾಧ್ಯವಾಗುತ್ತಿಲ್ಲವೇ? ಬಂಡವಾಳವಾದ ಬಹುಸ್ತರೀಯವಾಗಿ ಬದುಕಿನ ಕ್ರಮದಲ್ಲಿ ಮಿಲಾವತ್ ಆಗಿರುವ ಈ ಕಾಲದಲ್ಲಿ ಸಾಹಿತ್ಯಾಭಿವ್ಯಕ್ತಿ ಮನರಂಜನೆಯ ಸರಕಾಗಿಬಿಡುವ ಅಪಾಯವಿದೆ. ಯಾರನ್ನು ಉದ್ದೇಶಿಸಲಾಗಿದೆಯೋ ಅವರೇ ಸಂಸ್ಕೃತಿಯ ರಕ್ಷಕರೂ ಪ್ರಜಾಪ್ರಭುತ್ವದ ರಕ್ಷಕರೂ ಕಲೆ ಸಾಹಿತ್ಯಗಳ ಪೋಷಕರೂ ಆಗಿಬಿಟ್ಟಾಗ ಬರಹಗಾರರು ತಮ್ಮ ಮಾತನ್ನು ಕೇಳಿಸುವುದು ಹೇಗೆ? ಮತ್ತು ಯಾಕೆ?

ಸಾಹಿತ್ಯದ ಕುರಿತ ಮಾತುಗಳು ನಮ್ಮ ಕಾಲದ ರಾಜಕೀಯ ಸಾಂಸ್ಕೃತಿಕ ವಿದ್ಯಮಾನಗಳ ಮಾತುಗಳಾಗಿಯೇ ಮುನ್ನಡೆಯಬೇಕಾದದ್ದು ಅನಿವಾರ್ಯವೇನೋ. ಸಾಮಾಜಿಕ ಮೌಲ್ಯ ಮತ್ತು ಅಂತಃಸಾಕ್ಷಿಗಳು ಲಜ್ಜೆಗೆಟ್ಟ ಕಾಲವಿದು. ಲಾಭಕೋರತನವನ್ನೇ ಗುರಿಯಾಗಿಟ್ಟುಕೊಂಡ ರಾಜಕೀಯ ಪಕ್ಷಗಳು ಮತ್ತು ಸರ್ಕಾರ ಜನರನ್ನು ವಿಸ್ಮೃತಿಗೆ ತಳ್ಳುತ್ತಿವೆ. ನರಗುಂದದಲ್ಲಿ ರೈತರ ದಂಗೆ ನಡೆದ ಕಾಲ ಮತ್ತು ಪರಿಣಾಮಕ್ಕೂ ಹಾವೇರಿ ಮತ್ತು ಬೆಳಗಾವಿಯಲ್ಲಿ ನಡೆದ ರೈತ ಸಂಬಂಧಿ ಘಟನೆಗಳಿಗೂ ವ್ಯತ್ಯಾಸವಿದೆ. ಕೊನೆಯ ಎರಡು ಘಟನೆಗಳಲ್ಲಿ ಹಣ ಮುಖ್ಯ ಮಧ್ಯವರ್ತಿಯಾಗಿ ಕೆಲಸ ಮಾಡಿದ್ದರಿಂದ ಅವು ಕೆಲಕಾಲದ ಕುತೂಹಲದ ಘಟನೆಗಳಾದವು. ಸರ್ಕಾರದ

ಪ್ರತಿಯೊಂದು ನಿರ್ಧಾರವನ್ನೂ ತಮ್ಮ ಸೌಖ್ಯದ ದೃಷ್ಟಿಯಿಂದ ಪ್ರಶ್ನಿಸುವ ಮತಗಳ ಅನಗತ್ಯ ಪ್ರವೇಶ ಪ್ರಜಾಪ್ರಭುತ್ವದ ಕಲ್ಪನೆಯನ್ನೇ ಅಪಹಾಸ್ಯ ಮಾಡುತ್ತಿದೆ. ಮಾಧ್ಯಮಗಳು ತಮ್ಮ ಜನಪ್ರಿಯತೆಗಾಗಿ ಮಾತಿನ ಘನತೆಯನ್ನು ತೋರಿಸುತ್ತವೆ. ಇದು ಪರಿಸ್ಥಿತಿಯಾಗಿರುವಾಗ ಅವೇ ಮಾತುಗಳಲ್ಲಿ ಮತ್ತೊಂದು ಅರ್ಥಸಾಧ್ಯತೆಯನ್ನು ನುಡಿಸಬೇಕಾಗುವ ಬರಹಗಾರನ ಎದುರಿಗಿರುವ ಸವಾಲು ತುಂಬ ಸೂಕ್ಷ್ಮವಾದದ್ದು. ಸಂಕೀರ್ಣವಾದದ್ದು. ಬಂಡವಾಳವಾದ ಒಂದು ಸ್ಥಿತಿಯಾಗಿ ವ್ಯಾಪಿಸಿಕೊಂಡು, ಬರಹಗಾರನ ಒಳಗನ್ನು ಅನನ್ಯ ರೀತಿಯಲ್ಲಿ ಹೊಕ್ಕಿ ಕೂತಿರುವಾಗ ಬರಹ ಎನ್ನುವುದು ಏಕಕಾಲದಲ್ಲಿ ಹಲವು ಬಾಗಿಲುಗಳನ್ನು ತೆರೆಯುವ ಕ್ರಿಯೆಯಾಗಬೇಕಾಗುತ್ತದೆ.

ಆಧುನಿಕ ಸಾಹಿತ್ಯ ವಸಾಹತುಶಾಹಿ ಪಲ್ಲಟಗಳ ಉತ್ಪನ್ನ. ಆದರೆ ರಾಷ್ಟ್ರೀಯ ಚಳುವಳಿಯೇ ಮೊದಲಾದ ಕಾರಣಗಳಿಗಾಗಿ ವಸಾಹತು ಪ್ರಜ್ಞೆಯೊಂದಿಗೆ ನಿರಂತರ ಮುಖಾಮುಖಿಯಾಯಿತು. ಹೊಸಗನ್ನಡದ ಮುಖ್ಯ ಸಾಹಿತ್ಯಿಕ ಪಂಥಗಳಿಗೆ ನಿರ್ದಿಷ್ಟ ಸೈದ್ಧಾಂತಿಕ ನಿಲುವಿತ್ತು. ಅದು ಚಳುವಳಿಯ ರೀತಿಯಲ್ಲಿ ಪ್ರಸರಣಗೊಂಡಿತ್ತು. ಬಂಡಾಯ ಸಾಹಿತ್ಯ ಬರಹಗಾರರ ಸಾಮಾಜಿಕ ಬದ್ಧತೆಯನ್ನು ಮುಖ್ಯ ಮಾನದಂಡವಾಗಿಸಿತ್ತು. ಬರಹವೂ ರಾಜಕೀಯ ಪ್ರಜ್ಞೆಯ ವಿಸ್ತರಣೆ ಎಂದು ಕನ್ನಡಕ್ಕೆ ಗಾಢವಾಗಿಯೇ ನಮೂದಿಸಿತು. ಜಾಗತಿಕ ಬಂಡವಾಳವಾದದ ಅಕ್ರಮ ಪ್ರವೇಶ ಸ್ಥಳೀಯ ಸಂಗತಿಗಳ ರೂಪಗುಣಗಳನ್ನು ಒಳಗೊಳಗೆ ಬದಲಿಸಿಟ್ಟಾಗ ಈ ಹೊಸ ಸವಾಲುಗಳನ್ನು ಎದುರಿಸಲು ಬಂಡಾಯದ ತಾತ್ವಿಕತೆಯೂ ಸೋತಿತು. ಬಂಡಾಯ ಸಾಹಿತ್ಯ ಚಳುವಳಿ ಮಾತ್ರವಲ್ಲ ರೈತ ಚಳುವಳಿ, ದಲಿತ ಚಳುವಳಿಗಳೂ ಛಿದ್ರಗೊಂಡವು. ನಾಯಕತ್ವವು ದುರ್ಬಲಗೊಂಡಿತು. ಅವಕಾಶವಾದಿತನದ ಆರೋಪ ಕೇಳಿಬಂತು. ನೆತ್ತಿಯ ಮೇಲೆ ಬಿದ್ದ ಏಟಿನಿಂದಾಗಿ ಚಳುವಳಿಯು ಸೀಳುಗಳಾಗಿ ಒಡೆಯಿತು. ಇದಕ್ಕೆ ಹಲವು ಕಾರಣಗಳಿದ್ದವು. ಅವುಗಳಲ್ಲಿ ಬಂಡವಾಳವಾದವು ತಾತ್ವಿಕತೆಯನ್ನು ಮಣಿಸಿ ಗಾಯಗೊಳಿಸಿದ ವಿಧಾನವೂ ಒಂದಾಗಿತ್ತು. ಸಾಮಾಜಿಕ ಸಂಕಟದ ಈ ಹೊತ್ತಿನಲ್ಲಿ ಹಲವು ಮುಂಚೂಣಿಯ ನಾಯಕರು ಮಾನವ ಬಾಂಬರ್‌ಗಳಂತೆ ಬಳಸಲ್ಪಟ್ಟರು. ವ್ಯಕ್ತಿತ್ವದ ಸ್ವಹತ್ಯೆಗೆ ಒಳಗಾದರು.

ಆ ನಂತರದ ಎರಡು ದಶಕಗಳು ಜಾಗತೀಕರಣದ ರಭಸಕ್ಕೆ ಸಾಮಾಜಿಕ ರಚನೆಗಳಲ್ಲಿ ಹೊಸ ಹೊಸ ಬಿರುಕುಗಳು ಉಂಟಾಗಿ, ಸೃಜನಶೀಲತೆಗೆ ಹೊಸ ಆಸ್ಪದಗಳು ಒದಗುತ್ತ, ಆತ್ಮವಿಮರ್ಶೆಗೂ ಒತ್ತಾಯಿಸಿದ ಕಾಲ. ಸಮಾಜದ ತಳವರ್ಗಗಳು ತಮ್ಮ ಅನುಭವ ಲೋಕವನ್ನು ಅನಾವರಣಗೊಳಿಸತೊಡಗಿದವು. ಅಂಚಿನ ಜಗತ್ತು ದಾಖಲಾಗತೊಡಗಿತು. ಭಾಷಿಕವಾಗಿ, ಭೌಗೋಲಿಕವಾಗಿ ಮತ್ತು ಜಾತಿ, ಧರ್ಮ, ಲಿಂಗಗಳ ನೆಲೆಯಲ್ಲಿ ಸಂಕರಶೀಲ ಅಧ್ಯಾಯ ಆರಂಭವಾಯಿತು. ಬೇರೆ ಬೇರೆ ವೃತ್ತಿ ಮತ್ತು ಬದುಕುಗಳ ಅನುಭವವಲಯ, ಅನ್ಯಜ್ಞಾನಶಿಸ್ತುಗಳಿಂದ ಪಡೆದ ದೃಷ್ಟಿಕೋನಗಳು, ವಿಸ್ತೃತ ಅಧ್ಯಯನದಿಂದ ರೂಪಿಸಿಕೊಂಡ ತಾತ್ವಿಕತೆ ಇವು ಈ ಸಂದರ್ಭದ ಸಾಹಿತ್ಯವನ್ನು ನಿರ್ಧರಿಸಿದವು. ನಗರ, ಮಹಾನಗರ ಮತ್ತು ಹಳ್ಳಿಯ ವಿವಿಧ ಲೋಕಗಳಿಂದ ಬಂದ ಬರಹಗಾರರು ಏಕಕಾಲದಲ್ಲಿ ಬರೆಯಲು ತೊಡಗಿದರು. ಸಾಹಿತ್ಯ ಸೃಷ್ಟಿಗೆ ಪೂರ್ವ ಪರಂಪರೆಯ ಅನುಸಂಧಾನ ಮತ್ತು ಸಾಹಿತ್ಯಾಧ್ಯಯನದ ಶಿಸ್ತು ಅಗತ್ಯ ಎಂಬ ಮಿಥ್ ಒಡೆಯಲ್ಪಟ್ಟಿತು.

ಜಾಗತೀಕರಣದ ಈ ಕಾಲಾವಧಿಯು ಆಧುನಿಕತೆಯ ಕುರಿತು ವಸಾಹತುಶಾಹಿಯು ಬೆಳೆಸಿದ ಚಿಂತನೆಯನ್ನು ಪುನರ್‌ವಿಶ್ಲೇಷಣೆಗೆ ಒಡ್ಡಿತು. ವಸಾಹತುವಾದವು ತನಗೆ ಅನುಕೂಲಕರವಾದ ಆಧುನಿಕತೆಗೆ ಸಿದ್ಧಗೊಳಿಸಿದ ಹುನ್ನಾರ ಈಗ ಅರ್ಥವಾಗತೊಡಗಿತು. ಆಧುನಿಕೋತ್ತರವಾದವು ಸಮಾಜದ ಸಣ್ಣ ಸಣ್ಣ ವಲಯಗಳಿಗೂ ಐಡೆಂಟಿಟಿಯ ಅವಕಾಶವನ್ನು ತೆರೆಯುತ್ತ, ಅಂತಹ ಅಗತ್ಯ ಕ್ರಿಯಾಶೀಲತೆಗೆ ಉತ್ತೇಜನ ನೀಡಿತು. ಇದರಿಂದ ಶೋಷಿತ ವರ್ಗಗಳು ವರ್ಗ ಹೋರಾಟದ ವಿಶಾಲ ಚಿಂತನೆಯತ್ತ ಸಾಗದೆ, ಸ್ಥಾನಿಕ ಆದ್ಯತೆಗಳನ್ನು ಆಧರಿಸಿ ಹೋರಾಟಗಳನ್ನು ರೂಪಿಸಿದವು. ಹೋರಾಟಗಳು ವಿಷಯಕೇಂದ್ರಿತವೂ ಘಟನೆಯಾಧಾರಿತವೂ ಆದಾಗ ವಿಸ್ತಾರ ತಾತ್ವಿಕ ಚೌಕಟ್ಟು ಸಿದ್ಧಗೊಳ್ಳಲಿಲ್ಲ. ಅಧಿಕಾರ ರಾಜಕಾರಣವನ್ನು ಸರ್ವಸ್ವವಾಗಿಸಿಕೊಂಡ ರಾಜಕೀಯ ಪಕ್ಷಗಳು ಚಳುವಳಿಯ ಪರಿಕಲ್ಪನೆಯನ್ನು ಸ್ವಾರ್ಥಕ್ಕೆ ಬಳಸಿಕೊಳ್ಳತೊಡಗಿದ್ದು, ಸಾಮಾಜಿಕ ನ್ಯಾಯಕ್ಕಾಗಿ ಅದೇ ಮಾದರಿಯ ಚಳುವಳಿಯನ್ನು ರೂಪಿಸಲು ಒಂದು ತಡೆಯಾಯಿತು. ಆದರೆ ಜನಸಮುದಾಯಗಳು ತಮ್ಮ ಅವಶ್ಯಕತೆಗಳ

ಪೂರೈಕೆಗಾಗಿ ಹೋರಾಟ, ಪ್ರತಿಭಟನೆ, ಹಕ್ಕೊತ್ತಾಯಗಳನ್ನು ಮಂಡಿಸುವ ಪ್ರಕ್ರಿಯೆ ನಡೆಯಿತು ಮತ್ತು ಉದ್ದೇಶಿತ ಅವಶ್ಯಕತೆಯ ಪೂರೈಕೆಯೊಂದಿಗೆ ಹೋರಾಟಗಳು ನಿಲ್ಲುವಂತಾಯಿತು. ಸರ್ಕಾರ ಮತ್ತು ಪ್ರಜೆಗಳ ಸಂಬಂಧ ಕೊಡುವವರು ಮತ್ತು ಪಡೆದುಕೊಳ್ಳುವವರು ಎಂಬ ತಪ್ಪುವ್ಯಾಖ್ಯಾನವಾಗಿ, ಜನಸಾಮಾನ್ಯರು ಸಹಜ ಹಕ್ಕಿನಿಂದ ವಂಚಿತರಾದರು.

ಸಾಮಾಜಿಕವಾದ ಈ ಸ್ಥಿತಿಯಲ್ಲಿ ಸಾಹಿತ್ಯವು ಚಳುವಳಿಯಿಂದ ಪಡೆದುಕೊಳ್ಳುವ ಅಂತಃಶಕ್ತಿಯ ಪ್ರಶ್ನೆ ಗೊಂದಲಕ್ಕೊಳಗಾಯಿತು. ನವೋದಯ ಕಾಲದಿಂದಲೂ ಇದ್ದ ಸೈದ್ಧಾಂತಿಕ ನಿಲುವಿನ ಬೆಂಬಲ ಇಲ್ಲವಾಯಿತು. ಕನ್ನಡದ ಬರಹಲೋಕ ಸ್ವಾಯತ್ತ ಹೊಣೆಗಾರಿಕೆಯನ್ನು ಪಡೆದದ್ದು ಈ ಕಾಲದಲ್ಲಿಯೇ. ಬಹುತೇಕ ಬರಹಗಾರರು ಸಾಮಾಜಿಕ ಬದ್ಧತೆಯನ್ನು ವ್ಯಕ್ತಪಡಿಸಿದರು. ಅಂಥವರನ್ನು ಬುದ್ಧಿಜೀವಿವರ್ಗ ಎಂದು ಲೇವಡಿ ಮಾಡುವ, ಅನುಭವ ಪ್ರಾಮಾಣ್ಯತೆಯನ್ನು ಮಾತ್ರ ನೆಚ್ಚಿಕೊಳ್ಳುತ್ತೇವೆ ಎನ್ನುವ ಬರಹಗಾರರೂ ಇದ್ದಾರೆ. ಅನುಭವ ಸ್ವೀಕರಣ ದಲ್ಲಿಯೇ ದೃಷ್ಟಿಕೋನವು ಬೆರೆತಿರುವುದನ್ನು ಅಲಕ್ಷಿಸುತ್ತಾರೆ. ಬದ್ಧತೆಯು ಸಮಾಜಮುಖಿ ನಿಲುವು ಮಾತ್ರವಲ್ಲ, ಸಮಾಜ ವಿಮುಖತೆಯ ನಿಲುವೂ ಆಗಿರುತ್ತದೆ. 'ಸಿದ್ಧಾಂತಗಳ ಒತ್ತಡವಿಲ್ಲದ ಕಾಲ' ಎಂದು ವಿಮರ್ಶಕರು ಗುರುತಿಸುವಾಗ, ಬರಹಗಾರರು ವರ್ತಮಾನದ ಸುಡುಸತ್ಯಗಳಿಗೆ ವ್ಯಕ್ತಿಗತ ನೆಲೆಯಲ್ಲಿಯೇ ಮುಖಾಮುಖಿಯಾದರು.

ಕೋಮುವಾದ ಮನುಷ್ಯನ ಘನತೆಯನ್ನು ಉಡಾಫೆ ಮಾಡುವಾಗ, ದಲಿತ ಸಮಸ್ಯೆಗಳು ಹೆಚ್ಚೆಚ್ಚು ಸಂಕೀರ್ಣವಾಗುತ್ತಿರುವಾಗ, ಹಲ್ಲೆ ಬಹಿಷ್ಕಾರಗಳು ನಡೆಯುವಾಗ, ಮಹಿಳಾ ದೌರ್ಜನ್ಯದ ಪ್ರಮಾಣ ಹಿಂದೆಂದಿಗಿಂತಲೂ ತೀವ್ರ ಸ್ವರೂಪವನ್ನು ಪಡೆದಿರುವಾಗ ಬರಹ ಈ ಎಲ್ಲವನ್ನೂ ಒಳಗೊಳ್ಳದಿರಲಾರದ ಸ್ವ ಬಂಧನಕ್ಕೊಳಗಾಯಿತು. ಈ ಎರಡು ದಶಕಗಳಲ್ಲಿ ನಡೆದ ಹಿಂಸೆ–ದೌರ್ಜನ್ಯ ಗಳಿಗೆ ಸಂವೇದನಾಶೀಲ ಮನಸ್ಸುಗಳು ಅಷ್ಟೇ ತೀವ್ರವಾಗಿ ದಣಿವರಿಯದೆ ಪ್ರತಿರೋಧಿಸಿವೆ. ಬರಹಗಾರರ ಸಾಮಾಜಿಕ ಬದ್ಧತೆಯ ಪ್ರಶ್ನೆಯನ್ನು ಕಾಲವೇ ಮುನ್ನೆಲೆಗೆ ತಂದು ನಿಲ್ಲಿಸತೊಡಗಿದೆ.

ಸಮಕಾಲೀನ ವಿದ್ಯಮಾನಗಳನ್ನು ವಿವರಿಸುವ, ಅದರ ಕಾರಣಗಳನ್ನು ವಿಶ್ಲೇಷಿಸುವ, ಅಕಾರಣ ಹಿಂಸೆಯ ಪ್ರವೃತ್ತಿ ಕೊನೆಗೊಳ್ಳಬೇಕು ಎಂದು ನಿರೀಕ್ಷಿಸುವ ಸಾಮಾಜಿಕ ಬದುಕಿನ ಉತ್ಪಾತಗಳಿಗೆ ಪೋಎಟಿಕ್ ಜಸ್ಟೀಸ್ ಮೂಲಕ ಉತ್ತರಿಸಿಕೊಳ್ಳುವ ಪ್ರಯತ್ನ ಕಂಡುಬಂತು. ದೇಶವಿಭಜನೆಯ ಕಾಲದ ಕೋಮುವಾದದ ಕರಾಳತೆಗೆ ಅಷ್ಟಾಗಿ ತೆರೆದುಕೊಳ್ಳದೆ, ತನ್ನ ನಾಡು–ನುಡಿಗಳ ಮೀಮಾಂಸೆಯಲ್ಲಿ ತೊಡಗಿದ್ದ ನವೋದಯ ಸಂದರ್ಭಕ್ಕಿಂತ ಬೇರೆಯಾಗಿರುವ ಸಂವೇದನೆಯಿದು. ರಾಜಕೀಯ ವಿತಂಡ ವಾದದ ಪ್ರವೇಶದಿಂದಾಗಿ ಜನಸಾಮಾನ್ಯರ ಬದುಕು ಅನಾಥವಾಗುವುದನ್ನು ಸುಮ್ಮನೆ ಸಹಿಸಲಾಗದ ಸ್ಥಿತಿಯದು. ೭೦–೮೦ರ ದಶಕವು ಸಾಂಪ್ರದಾಯಿಕ ವೈರವನ್ನು ಎದುರಿಸುವ ಸಮಾನತೆಯ ಕನಸನ್ನು ಕಾಣುವ ಕಾಲವಾಗಿತ್ತು. ಆದರೆ ೯೦ರ ದಶಕ ಹೊಸ ಆಕ್ರಮಣವನ್ನು ಎದುರಿಸುವ ತುರ್ತನ್ನು ಸೃಷ್ಟಿಸಿತು. ಬಾಬರಿ ಮಸೀದಿ ನಾಶ ಭಾರತದ ಜನಸಾಮಾನ್ಯರಿಗೆ ಗಾಂಧಿ ಹತ್ಯೆಯಂತಹದೇ ತಲ್ಲಣವನ್ನು ಸೃಷ್ಟಿಸಿತು. ಬಾಬರಿ ಮಸೀದಿ ನಾಶ ಮತ್ತು ಗುಜರಾತ್ ಹತ್ಯಾಕಾಂಡಕ್ಕೆ ಪ್ರತಿರೋಧಿಯಾಗಿ ಅದೆಷ್ಟೊಂದು ಕವಿತೆಗಳು ಬಂದವಲ್ಲ! ಜಿ.ಎಸ್.ಎಸ್., ಕಣವಿಯವರಂಥ ಹಿರಿಯರನ್ನು ಮೊದಲ್ಗೊಂಡು ಅನಾಮಧೇಯನ ಮೊದಲ ಕವಿತೆಯವರೆಗೆ ಇದರ ವ್ಯಾಪ್ತಿಯಿದೆ. ಮಾರ್ಕ್ವೆಜ಼್ ಹೇಳುವ – ಕ್ರಾಂತಿಯ ಕಾಲದಲ್ಲಿ ಲೇಖಕ ಮಾಡಬೇಕಾಗಿ ರುವುದು ಬರೆಯುವುದು ಬರೆಯುವುದು ಮತ್ತು ಬರೆಯುವುದು – ಎನ್ನುವ ಮಾತನ್ನು ಕನ್ನಡ ಪ್ರಜ್ಞೆ ಅನ್ವಯಿಸಿಕೊಳ್ಳಲು ಪ್ರಯತ್ನಿಸಿದಂತೆ ತೋರುತ್ತದೆ. ಸುತ್ತಲಿನ ಪರಿಸರದಲ್ಲಿ ಕೋಮುವಾದಿ ಹಿಂಸೆ, ಮತೀಯವಾದಿ ಭಯೋತ್ಪಾದಕತೆಗಳು ಛಿಡೆ ಬಿಸಾತಿಲ್ಲದೆ ನಡೆಯುವಾಗ ಈ ಆಕ್ರಮಣದ ಸೂಕ್ಷ್ಮಾತಿಸೂಕ್ಷ್ಮ ಪದರುಗಳನ್ನು ಪರೀಕ್ಷಿಸುತ್ತ ಬೆಚ್ಚಿಬಿದ್ದವರಂತೆ ಕವಿತೆ ಬರೆಯಲು ಆರಂಭಿಸಿದವರಿದ್ದಾರೆ. ಬರವಣಿಗೆಯನ್ನು ಆತ್ಮಸ್ಥೈರ್ಯಕ್ಕಾಗಿ, ಸಮಾಧಾನದ ಹುಡುಕಾಟವಾಗಿ ನಡೆಸಿದವರಿದ್ದಾರೆ. ಸಾಮಾಜಿಕ ಸಂಕಟವನ್ನು ತನ್ನ ಒಡಲ ಬೇಗುದಿಯಾಗಿಸಿಕೊಳ್ಳುವ ಪ್ರಜ್ಞೆಯ ವಿಕಸನದ ಸಂಕೇತವಿದು. ಬಂಡಾಯ ಕಾಲದ ತೀವ್ರ ಪ್ರತಿರೋಧಕ್ಕೆ ಅಪಮಾನದ ಸ್ಮೃತಿಯಿತ್ತು. ವೈರಿಯ ಕುರಿತ ಖಚಿತ ತಿಳುವಳಿಕೆಯಿತ್ತು. ಆದರೆ ಈ ಎರಡು ದಶಕಗಳಲ್ಲಿ ಕನ್ನಡ ಕಾವ್ಯ ತಲ್ಲಣಿಸಿದ್ದು ಮಾನವೀಯ ಅನುಭೂತಿಗಾಗಿ. ಇದು ಸಂವೇದನೆಯ ಸ್ತರವನ್ನು ವಿಸ್ತರಿಸಿತು. ಇಲ್ಲಿ ವೈರಿಗೆ ಮೂರ್ತ ಆಕೃತಿಯಿರಲಿಲ್ಲ ಅಥವಾ ಎಲ್ಲವೂ ಅವನ ಛಾಯೆಯೇ ಆಗಿತ್ತು. ತಾನು ಲೂಟಿಗೆ ಒಳಗಾಗುತ್ತೇನೆ ಎಂಬ ಭಯಕ್ಕಿಂತಲೂ ತಾನೂ ಲೂಟಿಕಾರನಾಗಿಬಿಡಬಹುದಾದ ಭಯ ದೊಡ್ಡದು. ಬಹುತ್ವದ ಈ ಬದುಕಿನಲ್ಲಿ ಇದುವರೆಗೆ ಕಟ್ಟಿಕೊಂಡು ಬಂದಿರುವ ಬಾಳ್ವೆಯ ವಿಧಾನ ಸರಿಯಿದೆಯೆ? ಅಥವಾ ಅಸೂಕ್ಷ್ಮವಾಗಿದೆಯೇ? ಎಂಬ ಮರುನಿರ್ವಚನದ ಅಗತ್ಯವನ್ನು ಸಾಹಿತ್ಯ–ಕಲೆಗಳು ಪ್ರತಿಪಾದಿಸಿದವು. ಕನ್ನಡ ಪ್ರಜ್ಞೆಗೆ ಅಷ್ಟು ಕಾಡದಿದ್ದ ಹಿಟ್ಲರ್ ಈಗ ಒಂದು ರೂಪಕದಂತೆ ಬರಹಲೋಕವನ್ನು ಪ್ರವೇಶಿಸಿದ. ನೇಮಿಚಂದ್ರ ನಮ್ಮೊಳಗೆ ಯಾವಾಗಲೋ ಹುಟ್ಟಿಬಿಡಬಹುದಾದ ಹಿಟ್ಲರ್ ಬಗ್ಗೆ 'ಯಾದ್ ವಶೇಮ್' ಕಾದಂಬರಿ ಬರೆದರು. ನಿನ್ನ ಎದೆಯಲ್ಲಿ ಚೂರೇ ಚೂರು ಚಡಿಯಿದೆಯೆಂದರೂ ಅಲ್ಲಿ ಕೋಮುವಾದ ಹಣಕಿಕ್ಕಬಹುದು ಎಂಬ ಗಾಬರಿಯಲ್ಲಿ ವಸಂತ ಬನ್ನಾಡಿ ಬರೆದರು. ಎಚ್.ನಾಗವೇಣಿ ಮಂಜು ಮಕಾಲ್ದಿಯನ್ನು ಐಸಂಬ್ಯಾರ್ದಿಯನ್ನು ಏಕಕಾಲದಲ್ಲಿ ಕನ್ನಡದ ಅರಿವಿಗೆ ತಂದರು. ಇದುವರೆಗೂ ತಂತಮ್ಮ ಧರ್ಮಗಳೊಳಗಿನ ಹುಳುಕನ್ನು ಬರೆಯುತ್ತಿದ್ದ ಅಲ್ಪಸಂಖ್ಯಾತ ಬರಹಗಾರರು ವರ್ತಮಾನದ ಆಘಾತಕಾರಿ ಬೆಳವಣಿಗೆಯಲ್ಲಿ ಸ್ವನಿಯಂತ್ರಣದ ಸ್ಥಿತಿಗೆ ಒಳಗಾದರು. ಈ ಒತ್ತಡದಲ್ಲಿ ತಮ್ಮ ಬದುಕು 'ಕಸಿ ಗುಲಾಬಿಯ ಕಥನ' ಎಂದು ಹೇಳಿಕೊಳ್ಳುವ ಸಾಧ್ಯತೆಯೂ ಉಳಿದಿರಲಿಲ್ಲ. ವರ್ತಮಾನದ ಒತ್ತುವರಿಯ ಅಂಚಿಗೆ ಸರಿಸಲ್ಪಟ್ಟಿರುವ ಸೌಹಾರ್ದ ಪರಂಪರೆಯ ಶೋಧದಲ್ಲಿ ಶ್ರದ್ಧೆಯಿಂದ ತೊಡಗಿಸಿ ಕೊಳ್ಳುವ ಮೂಲಕ ಉತ್ತರದಾಯಿತ್ವವನ್ನು ಕಟ್ಟಿದರು. ಒಂದು ತುಂಡುಗೋಡೆ ಕಥೆಯಿಂದ ಸ್ವಾತಂತ್ರ್ಯದ ಓಟದವರೆಗೂ ಇದೊಂದು ಸಫರ್ ಆಗಿತ್ತು.

೭೦–೮೦ರ ದಶಕದ ಬರಹಗಳಿಗೆ ತಾತ್ವಿಕ ಖಚಿತತೆಯಿತ್ತು. ತಾವು ಸರಿಯೆಂದು ತಿಳಿದ ಸಿದ್ಧಾಂತದ ವಿವರಣೆ, ವಿಸ್ತರಣೆ, ಉದಾಹರಣೆಗಳ ರೀತಿಯ ಬರವಣಿಗೆಯಿತ್ತು. ಆದರೀಗ ಬಂಡವಾಳವಾದ; ಕೋಮುವಾದ ಮತ್ತು ಪ್ರಭುತ್ವದ ನಿಲುವುಗಳನ್ನು ವಿಶ್ಲೇಷಿಸುವ ಪ್ರತಿಯೊಂದು ಬರಹವೂ ತನ್ನನ್ನು ತಾನು ಸ್ವಯಂಪೂರ್ಣವಾಗಿಸಿಕೊಳ್ಳುವ ಒತ್ತಡಕ್ಕೆ ಸಿಲುಕಿತು. ಕವಿತೆಯ ಆಶಯ ಮತ್ತು ನಿರ್ವಹಣಾ ಕೌಶಲಗಳೆರಡರಲ್ಲೂ ಯಶಸ್ವಿಯಾದ ಕೆಲ ಕೃತಿಗಳು ಬಂದವು. ಬಂಡಾಯ ಸಾಹಿತ್ಯ ಸಂದರ್ಭದ ಮಿತಿಯ ಸ್ಪಷ್ಟತೆಯು ಈ ಮುಂದಿನ ತಲೆಮಾರಿನ ಲೇಖಕರಿಗಿತ್ತು. ಸಾಮಾಜಿಕ ಬದ್ಧತೆಯು ಕವಿತೆಯ ಸೋಲಿಗೆ ಕಾರಣವಲ್ಲ ಎಂಬುದನ್ನು ಕನ್ನಡ ಪ್ರಜ್ಞೆ ಮನದಟ್ಟು ಮಾಡಿಕೊಂಡಿತು. ಎನ್ಕೆ ಹನುಮಂತಯ್ಯ ನವರ 'ಗೋವು ತಿಂದು ಗೋವಿನಂತಾದವನು' ಕವಿತೆಯು ಅಲ್ಪಸಂಖ್ಯಾತರನ್ನು ಅಪಮಾನಿಸುವ ಗೋವಿನ ರಾಜಕಾರಣಕ್ಕೆ ಬರೆದ ಪ್ರತಿಕ್ರಿಯೆ. ಪ್ರಭುತ್ವದ ರಾಜಕಾರಣವನ್ನು ಅದೇ ಅಸ್ತ್ರವನ್ನು ಬಳಸಿಯೇ ಹೊಡೆದು ಹಾಕಲಾಯ್ತು. ದಲಿತ ಬದುಕು ಸಂಕಟಗಳಿಂದ ಮುಕ್ತವೇನೂ ಆಗಿರಲಿಲ್ಲ. ಹೊಸ ಹೊಸ ವೇಷಗಳಲ್ಲಿ ಅದು ಪುನರಾವರ್ತನೆ ಯಾಗುತ್ತಿತ್ತು. ಈ ಅಸಹಾಯಕತೆಯನ್ನು ಬಳಸಿ ಕೊಳ್ಳುವ ಅಧಿಕಾರ ರಾಜಕಾರಣ ಮತ್ತು ಮತ ಮಾನ್ಯಗಳ ಸುಪರ್ದಿನಿಂದ ದೂರ ಸರಿದು ತಮ್ಮ ಅಗತ್ಯವನ್ನು ಅರ್ಥೈಸಿಕೊಳ್ಳುವ ಜವಾಬ್ದಾರಿ ದಲಿತ ಪ್ರಜ್ಞೆಗಿತ್ತು. ಇಂತಹ ಸಂಕೀರ್ಣ ಸ್ಥಿತಿಯಲ್ಲಿಯೂ ಇನ್ನಿತರ ಶೋಷಿತ ವಲಯಗಳೊಂದಿಗಿರುವ ನೈತಿಕ ಎಚ್ಚರವನ್ನು ದಲಿತ ಸಾಹಿತ್ಯ ಪ್ರಕಟಿಸಿತು. 'ಸಾಬಿ, ಬಿರಯಾನಿ ತಿನ್ನಲು ಬರ್ತೀನಿ ಅಂದಿದ್ದಿ'


ಧ್ಯಾನವೇ ಬುದ್ಧನೆಂದು ಕಣ್ಣು ಮುಚ್ಚಿದೆ
ಯಶೋಧರೆಯ ನಿಟ್ಟುಸಿರು ಇರಿದು ಹಾಕಿತು
– ಬಸೂ

(ಸುಬ್ಬು ಹೊಲೆಯಾರ್) ಇಂತಹ ಖಾಸಗಿ ಎನಿಸುವ ಪದ್ಯಗಳೂ ಅಪ್ಪಟ ರಾಜಕೀಯ ಪ್ರಜ್ಞೆಯ ದ್ಯೋತಕಗಳಾಗಿದ್ದವು. ಬಂಡವಾಳವಾದಿ ಸಿದ್ಧಾಂತದ ಅತಿಕ್ರಮ ಹೆಚ್ಚಿದಂತೆಲ್ಲ ದುರ್ಬಲ ವಲಯಗಳು ಒಂದುಗೂಡುವ ಪ್ರಾಕೃತಿಕ ಹೋರಾಟ ಕ್ರಮ ಇಲ್ಲಿತ್ತು. "ಅಕ್ಕ ಸೀತಾ, ನಾನೂ ನಿನ್ನಂತೆ ಶಂಕಿತ" (ಪೀರಭಾಷಾ) ಈ ಮಾದರಿ ಕನ್ನಡ ಕಾವ್ಯದ ಲಕ್ಷಣದಂತೆ ಮುಂದುವರಿಯಿತು. ಅಸಹಾಯಕ ಅಪಮಾನಿತ ಜಗತ್ತು ತನ್ನ ಸಂಕಟವನ್ನು ಗೆಳತಿಯ, ತಾಯಿಯ, ಸೋದರಿಯ ಮುಂದೆ ನಿವೇದಿಸಿಕೊಳ್ಳುವ ಅಭಿವ್ಯಕ್ತಿ ಕ್ರಮ ಕಾಣುತ್ತದೆ. ೮೦ರ ದಶಕದವರೆಗೂ ದಲಿತ, ಮಹಿಳೆ, ಮುಸ್ಲಿಂ ಮುಂತಾದ ಪ್ರತ್ಯೇಕ ಘಟಕಗಳಲ್ಲಿ ಅಭಿವ್ಯಕ್ತಗೊಳ್ಳುತ್ತಿದ್ದ ಕ್ರಮಕ್ಕಿಂತ ಬೇರೆಯಾಗಿ, ಸಂವೇದನೆಗಳ ಸಂಕರಶೀಲತೆಯನ್ನು ಸಾಧಿಸಿ ಕೊಂಡಿದ್ದು ಮಹತ್ವದ ಹೆಜ್ಜೆಯಾಗಿದೆ. ಸಾಮಾಜಿಕ ಆಪತ್ತಿನ ಕಾಲದಲ್ಲಿ ಕನ್ನಡದ ಬಹುತೇಕ ಬರಹಗಳು 'ದೋಸ್ತಾರದೀನ್' ನಿಲುವನ್ನು ಪ್ರಕಟಿಸಿದವು.

ಇಂತಹ ಸಾಂದರ್ಭಿಕ ಒತ್ತಡದಲ್ಲಿ ಮಹಿಳಾ ಸಾಹಿತ್ಯ ಜಾಗತೀಕರಣವು ಉತ್ಪಾದಿಸಿದ ಹೊಸ ಸಮಸ್ಯೆಗಳಿಗೆ ಮುಖಾಮುಖಿಯಾಯಿತು. ಹೆಣ್ಣೆಂಬ ಕಾರಣದ ಹಳೆಯ ಗಾಯ ಮಾಯವಾಗಿರಲಿಲ್ಲ. ಕೀವಾಡುತ್ತಲೇ ಇತ್ತು. ಅದನ್ನು ಅತ್ತತ್ತ ದೂಡಿ, ತನ್ನ ಒಟ್ಟೂ ಶಕ್ತಿಯನ್ನು ಒಗ್ಗೂಡಿಸಿಕೊಂಡಿದ್ದು ಸದ್ಯದ ಸವಾಲು ಗಳನ್ನೆದುರಿಸಿತು. 'ಮಹಮ್ಮದನಿಗೊಂದು ಪ್ರೇಮಪತ್ರ' (ಸವಿತಾ ನಾಗಭೂಷಣ) ಮಾದರಿಯ ಕವಿತೆಗಳು ಬಂದವು. ಹೆಣ್ಣಿನ ಶ್ರಮ, ಸಂಯಮ ಮತ್ತು ಸಂಗೋಪನಾ ಸಾಮರ್ಥ್ಯವನ್ನು ಬಂಡವಾಳವಾದಿ ಸ್ಥಿತಿಯು ಅಲಕ್ಷಿಸುತ್ತದೆ. ಹಣವೇ ಮುಖ್ಯವಾದ ವಾತಾವರಣ ನಿರ್ಮಾಣಗೊಳ್ಳುತ್ತ, ಅದೇ ಆಗ ಶಿಕ್ಷಣ ಸ್ವಾತಂತ್ರ್ಯ ಸೌಲಭ್ಯಗಳನ್ನು ಅನುಭವಿಸುತ್ತಿದ್ದ ಆಧುನಿಕ ಹೆಣ್ಣನ್ನು ತನ್ನ ಮುಖ್ಯ ಬಳಕೆದಾರ ವರ್ಗವಾಗಿ ಮಾರ್ಪಾಡಿಸಿಕೊಳ್ಳತೊಡಗಿತು. ಬಂಡವಾಳವಾದ ತನ್ನ ಆಮದಾನಿಗಾಗಿ ಸಾಂಪ್ರದಾಯಿಕ ಮೌಲ್ಯಗಳನ್ನು ಉತ್ತೇಜಿಸುತ್ತ ಅದರ ಕಮಾಡಿಟಿಯಾಗಿ ಹೆಣ್ಣನ್ನು ಬಳಸತೊಡಗಿತು. ಮಹಿಳಾ ಸಂವೇದನೆಯ ಆಪತ್ತಿನ ಕಾಲವಿದು. ಬಾಣಲೆಯಿಂದ ಬೆಂಕಿಗೆ ಬಿದ್ದ ಅನುಭವವನ್ನು ಅರಗಿಸಿಕೊಳ್ಳುವುದು ಸವಾಲಾಯಿತು. ಸ್ತ್ರೀವಾದಿ ಚಿಂತನೆ ಅನ್ಯಜ್ಞಾನ ಶಿಸ್ತುಗಳೊಂದಿಗೆ ಸಹವರ್ತಿಯಾಗಿ ಚಲಿಸುತ್ತ, ಯಜಮಾನಶಾಹಿಯ ಚಹರೆಯು ಮುದ್ದು ಜಾಹೀರಾತಿನ ಮೂಲಕವೂ ಒಳಹೊಕ್ಕು ಠಿಕಾಣಿ ಹೂಡುವುದನ್ನು ಅರ್ಥೈಸಿಕೊಳ್ಳುತ್ತ ಮರುನಿರ್ವಚನಕ್ಕೆ ಅಣಿಯಾಗಬೇಕಾಯಿತು. ಆಧುನಿಕ ಕನ್ನಡ ಸಾಹಿತ್ಯದ ಆರಂಭದಿಂದಲೂ ಪ್ರಧಾನ ಸಾಹಿತ್ಯದೊಂದಿಗೆ ನಿರ್ದಿಷ್ಟ ಅಂತರವನ್ನು ಉಳಿಸಿಕೊಂಡಿದ್ದ ಮಹಿಳಾ ಅಭಿವ್ಯಕ್ತಿಯು ಈ ಹಂತದಲ್ಲಿ ತನ್ನ ದಾರಿಯನ್ನು ಒಂದಾಗಿಸಿಕೊಂಡಿದೆ. ಭೂಮಿಯ ಒಳಪದರಿನಲ್ಲಿ ಕಣ್ಣಿಗೆ ಕಾಣದ ನೀರಸೆಲೆಯೊಂದು ಹರಿಯುತ್ತಿದೆ. ಅದು ಮನುಷ್ಯ ನಿರ್ಮಿತ ಹೆದ್ದಾರಿ, ಕಾಲುದಾರಿಗಳಿಗಿಂತ ಬೇರೆಯಾದ ಅಂತರ್ಗತ ಬೆಸುಗೆ. ಅಂತಹ ನೀರದಾರಿ ಈ ದಶಕದ ಕನ್ನಡ ಬರಹದ ಮುಖ್ಯ ಲಕ್ಷಣ, ಗುಜರಾತ್, ಕೌಸರಬಾನು, ಮೋಷೆ, ತ್ರಿಶೂಲ, ಇಟ್ಟಂಗಿ, ರಥಯಾತ್ರೆ, ಸವಣೂರು, ನಿರ್ಭಯಾ, ಯಶೋಧಮ್ಮ ಏನೆಲ್ಲವೂ ಕಾವ್ಯರೂಪಕವಾಗಿಬಿಟ್ಟ ಅವಧಿಯಿದು.

ಎಲ್ಲವೂ ಸರಕಾಗುತ್ತಿರುವ ಕಾಲದಲ್ಲಿ ಸಾಹಿತ್ಯವನ್ನು ಆಳದ ನೈತಿಕತೆಯಿಂದ ಪೊರೆಯುವುದು ಅಗತ್ಯವಾಗಿತ್ತು. ಈ ಅಗತ್ಯಕ್ಕಾಗಿ ಅಭಿವ್ಯಕ್ತಿಯ ಕ್ರಮವೂ ವಿಭಿನ್ನ ಸಾಧ್ಯತೆಯತ್ತ ಸಾಗಬೇಕಿತ್ತು. "ಸರಕು ಸಂಸ್ಕೃತಿಯ ಸ್ವರ್ಗದ ಕನಸಿಗೆ ತಮ್ಮನ್ನು ಹರಾಜುಮಾಡಿಕೊಂಡಿರುವ ನಾಗರಿಕ ಭಾಷೆಗಳ ಚೌಕಟ್ಟಿನಲ್ಲಿ ಕಾವ್ಯದ ಪರಿಸ್ಥಿತಿ ಕಷ್ಟಕ್ಕೆ... ಕವಿತೆ ಕೇವಲ ಕಲಾತ್ಮಕ ಆಕೃತಿ ಎಂಬ ನಂಬಿಕೆ ಈಗ ನನಗಿಲ್ಲ. ಅದೊಂದು ಅನ್ವೇಷಣಾ ಕ್ರಮ – ಎನ್ನುವ ಕವಿ ಶಿವಪ್ರಕಾಶರ ಮಾತುಗಳನ್ನು ಗಮನಿಸಬೇಕು. ಶಿವಪ್ರಕಾಶ ತಮ್ಮ ಕಾವ್ಯಾಭಿವ್ಯಕ್ತಿಯ ಕ್ರಮವನ್ನು ಉದ್ದೇಶ ಪೂರ್ವಕವಾಗಿ ಬದಲಿಸಿ, ಕಾವ್ಯ ಸತ್ಸಂಗದ ಕಾಲಕ್ಷೇಪವಲ್ಲ ಎಂಬ ನಿಲುವನ್ನು ಮಂಡಿಸಿದರು. ಸಾಹಿತ್ಯದ ಪ್ರಕಾರಗಳು ತಮ್ಮ ಮೂಲ ನಿರ್ವಚನಗಳನ್ನು ಮೀರಿದ ಕಾಲವಿದು. ಎದೆಗೆ ಬಿದ್ದ ಅಕ್ಷರ–ಅಂತಹ ನಿದರ್ಶನ. ಕಾವ್ಯ, ಕಥೆ, ವರದಿ, ರೂಪಕಗಳ ಕಲಸು ಕೃತಿಯದು. ಸಾಹಿತ್ಯದ ಮುಖ್ಯ ಪ್ರಕಾರಗಳು ಎಂಬ ಮೀಸಲು ಮುರಿದು ವರದಿ,

ಅಂಕಣ, ಲೇಖನ, ಜೀವನಚರಿತ್ರೆಯಂತಹ ಬರಹಗಳು ಮುಖ್ಯವೆನಿಸಿದವು. ಪಿ. ಸಾಯಿನಾಥ ಮತ್ತು ಹರ್ಷಮಂದರ ಅವರ ಲೇಖನಗಳನ್ನು ಕನ್ನಡಪ್ರಜ್ಞೆ ಅನುವಾದಿಸಿಕೊಂಡ ತುರ್ತುಗಳನ್ನು ಗಮನಿಸಬೇಕು.

ಈ ಕಾಲದ ಬರಹಗಳಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಸೃಜನಶೀಲ ಪಠ್ಯಗಳಿಗೂ ವಿಮರ್ಶೆಗೂ ಇರುವ ಬಿರುಕು. ಎಡ–ಬಲ ಮತ್ತು ಮಧ್ಯಮ ಮಾರ್ಗಿ ವಿಮರ್ಶಕರು ಕೂಡ ಚಳುವಳಿಗಳಿಲ್ಲದ ಕಾಲ ಲೇಖಕರಿಗೆ ಸ್ವಾತಂತ್ರ್ಯ ನೀಡುತ್ತಿದೆ ಎಂಬರ್ಥದ ಮಾತುಗಳನ್ನಾಡಿದರೆ, ಲೇಖಕರು ಚಳುವಳಿಗಳ ಸಾಮಾಜಿಕ ಬದ್ಧತೆಯನ್ನು ಸೃಜನಶೀಲತೆಯಲ್ಲಿ ಕಟ್ಟುವ ಪ್ರಯತ್ನಗಳನ್ನು ಮಾಡಿದರು. ಸಮಾಜಮುಖಿಯಾಗಿ ಪ್ರವಹಿಸುವ ಬರಹಕ್ಕೊಂದು ಲಗಾಮು ಹಾಕಲು ವಿಮರ್ಶೆ ಬಯಸಿದ್ದಕ್ಕೆ ಸಾಕಷ್ಟು ಕಾರಣಗಳಿದ್ದವು. ಉನ್ನತ ತಂತ್ರಜ್ಞಾನವನ್ನು ಬಳಸಿಕೊಳ್ಳುವ ಮಾಧ್ಯಮಗಳು ವರ್ತಮಾನದ ಆಗುಹೋಗುಗಳನ್ನು ಅತಿರಂಜಕವಾಗಿ ಬಿತ್ತರಿಸುತ್ತವೆ. ಜನಸಮುದಾಯವು ಸೃಷ್ಟಿಸಿಕೊಂಡು ಬಂದ ಪರಿಭಾಷೆಯನ್ನು ಸಲೀಸಾಗಿ, ಕೆಲವೊಮ್ಮೆ ತಪ್ಪಾಗಿ ಕೂಡ ಬಳಸುತ್ತದೆ. ಭಾಷೆ ಮನರಂಜನೆಯನ್ನು ಉತ್ಪಾದಿಸುವ ಸರಕಾಗುತ್ತಿದೆ. ಮನುಷ್ಯ ಸಂಬಂಧದ ಆಪ್ತತೆಯೂ ದ್ವೇಷವೂ ತೋರಿಸಿಕೊಳ್ಳುವ ಸಂಗತಿಗಳಾಗುತ್ತಿವೆ. ಮನುಷ್ಯ ಬದುಕಿನ ಸಂಕೀರ್ಣತೆಯನ್ನೂ ಘನತೆಯನ್ನೂ ತಲೆಮಾರುಗಳಿಗೆ ಕೈದಾಟಿಸುತ್ತದೆಂದು ನಂಬಿಕೊಂಡ ಸಾಹಿತ್ಯ ಕೂಡ ಇಂತಹವೇ ಸರಳ ಶೋಕಿಗೆ ಒಳಗಾಗುವ ಅಪಾಯ ಇದೆ. ತೀವ್ರ ವೇಗದ ಕಾಲ ವರ್ತಮಾನವನ್ನು ಅರ್ಥೈಸಿಕೊಳ್ಳಲೂ ಪುರಸೊತ್ತು ಕೊಡುತ್ತಿಲ್ಲ. ಘಟನೆಯೊಂದರ ಸೂಕ್ಷ್ಮವನ್ನು ಗಮನಿಸಲಾಗದ ಏಕಮುಖಿ ತೀರ್ಮಾನಗಳಿಗೆ ದೂಡುತ್ತಿದೆ. ಮಾಧ್ಯಮಗಳಲ್ಲಿ ಸೃಷ್ಟಿಯಾಗುತ್ತಿರುವ ಅವಕಾಶದ ಪ್ರಲೋಭನೆ ಬರಹಗಾರರನ್ನು ಪ್ರಸಿದ್ಧಿಯ ಸೋಂಕು ರೋಗಕ್ಕೆ ದೂಡಬಹುದು. ಈಗಾಗಲೇ ತಾವು ಬರೆದ ಒಂದು ಲೇಖನ ಏಕಕಾಲದಲ್ಲಿ ಬೇರೆ ಬೇರೆ ಪತ್ರಿಕೆಗಳಲ್ಲಿ ಬ್ಲಾಗ್‌ಗಳಲ್ಲಿ ಪ್ರಕಟವಾಗುವಂತೆ ನೋಡಿಕೊಳ್ಳುವ ಶೋಕಿ ಆರಂಭವಾಗಿದೆ. ಬರಹದ ಪ್ರಸ್ತುತತೆಗಿಂತಲೂ ಬರಹಗಾರರು ಇಟ್ಟುಕೊಂಡಿರುವ ಪರಿಚಯವೇ ಮುಂತಾದ ಅನ್ಯಕಾರಣಗಳು ಪ್ರಕಟಣೆಯ ವಿಮರ್ಶೆಯ ಹಿಂದಿವೆ – ಎಂಬ ಸಣ್ಣಮಾತುಗಳು ಕೇಳುತ್ತಿರುತ್ತವೆ. ತಂತ್ರಜ್ಞಾನದ ವಿಕಾಸದ ಫಲಾನುಭವಿಗಳಾಗಿ ಬೇರೆ ಬೇರೆ ಭಾಷೆ ದೇಶ ಕಲಾಪ್ರಕಾರಗಳಲ್ಲಿಯ ಸಾಹಿತ್ಯಿಕ ವಾಗ್ವಾದಗಳನ್ನು, ಪರಿಕಲ್ಪನೆಗಳನ್ನು ಮೂಲಕ್ಕೆ ಋಣಿಯಲ್ಲದೆ ಬಳಸಿಕೊಳ್ಳುವುದು, ಸೃಜನಶೀಲ ಪ್ರಕಾರಗಳಿಂದ ಪರಂಪರೆಯಿಂದ ಪಡೆದ ಕೊಲಾಜ್‌ಗಳು ಮೂಲ ಸಂವೇದನೆಯಂತೆ ವಿಜೃಂಭಿಸುವುದು, ಚಾಲ್ತಿಯಲ್ಲಿ ಇರುವ ವಿಷಯಗಳಿಗೆ ಪ್ರತಿಕ್ರಿಯಿಸುತ್ತ, ಅನಗತ್ಯವಾಗಿ ವಿರೋಧಿಸುತ್ತ ಆ ಮೂಲಕ ತಾನು ಅವಕಾಶಗಳನ್ನು ಪಡೆದುಕೊಳ್ಳುವುದು – ಇಂತಹ ಸಣ್ಣ ತಪ್ಪು ನಡೆಗಳು ಒಟ್ಟೂ ಸಾಹಿತ್ಯಾಭಿವ್ಯಕ್ತಿಯ ಇಳಿಕೆಯಾಗುತ್ತವೆ. ತನ್ನನ್ನು ಜನಸಂವೇದನೆಯ ಭಾಗವೆಂದುಕೊಳ್ಳುವವರ ಸೃಜನಶೀಲತೆ ಕ್ರಿಯಾಶೀಲತೆಗಳು ಸ್ವಾರ್ಥಕ್ಕೆ ತೊಡಿಸಿದ ಬಣ್ಣದ ಬಟ್ಟೆಯಾಗಿಬಿಟ್ಟರೆ 'ತಾಯ ಮೊಲೆವಾಲು ನಂಜಾಗಿ ಕೊಲುವ' ಅಸಹನೀಯತೆಯಾಗುತ್ತದೆ. ಕೊಲ್ಲುವವನಿಗೂ ಕೊಲ್ಲಿಸಿಕೊಳ್ಳುವವನಿಗೂ ಒಂದೇ ಭಾಷೆ ಎಂದರೆ ಇದೇ ಏನೋ? ಇಂದಿನ ಕನ್ನಡದ ಸಂದರ್ಭ ಅಂತಹ ಸುಳುವು ತೋರುತ್ತಿರುವುದರಿಂದ ಬರಹಗಾರರು ಹೆಚ್ಚು ಸೂಕ್ಷ್ಮವಾಗಿ ನಡೆಯಬೇಕಿದೆ. ಯಾಕೆಂದರೆ ಅವಕಾಶಗಳು ಅಸಂಖ್ಯವಾಗಿವೆ.

ಕಾರ್ಪೊರೇಟ್ ವಲಯ ತನ್ನ ಉದ್ಯೋಗಿಗಳಿಗೆ ಮನರಂಜನೆಯ ಕಾರ್ಯಕ್ರಮಗಳನ್ನು ಸಂಯೋಜಿಸುತ್ತ, ಅದರ ಭಾಗವಾಗಿ ಸಾಹಿತ್ಯಿಕ ಕಾರ್ಯಕ್ರಮಗಳನ್ನೂ ನಡೆಸುತ್ತದೆ. ಅವರ ಹಿತಕ್ಕಾಗಿ ಒಂಟಿಯಾಗಿ ಅಥವಾ ಜಂಟಿಯಾಗಿ ನಡೆಸುವ ನುಡಿಸಿರಿಗಳು, ಸಂಭ್ರಮಗಳು, ಮಠಗಳ ಸಾಹಿತ್ಯ ಗೋಷ್ಠಿಗಳು ವರ್ತಮಾನವನ್ನು ತುಂಬಿಸಿಟ್ಟಿವೆ. ಇಂಥವುಗಳಲ್ಲಿ ಭಾಗವಹಿಸಬೇಕೇ ಬೇಡವೇ ಎಂಬ ಬಗ್ಗೆ ಸಾಕಷ್ಟು ಗೊಂದಲಗಳಿವೆ. ತಾವು ಕಲಾವಿದರು ಮಾತ್ರ, ಸಾಮಾಜಿಕ ನ್ಯಾಯದ ಉಸ್ತುವಾರಿಕೆ ತಮಗೆ ಸಂಬಂಧಿಸಿಲ್ಲ ಎಂದುಕೊಂಡವರಿಗೆ ಸಮಸ್ಯೆಯಿಲ್ಲ. ತಾನು ಮೊದಲು ಮನುಷ್ಯ ಆ ನಂತರ ಕಲಾವಿದ – ಎಂದುಕೊಂಡವರಿಗೆ ತಳಮಳದ ಸಂಗತಿ. ಬಂಡಾಯ ಸಾಹಿತಿಗಳು ಪರಿಷತ್ತಿನ ಕಾರ್ಯಕ್ರಮದಲ್ಲಿ ಭಾಗವಹಿಸಬಹುದು ಎಂಬ ತೀರ್ಮಾನ ತೆಗೆದುಕೊಂಡಾಗ, ವೇದಿಕೆ ಯಾವುದಾದರೂ ನಮ್ಮ ನಿಲುವನ್ನು ಪ್ರಕಟಿಸುವುದು ಎಂದಾಗಿತ್ತು. ಇದು ಸಾಧ್ಯವಾಯಿತೇ? ಎಂಬುದು ಬೇರೆ ಪ್ರಶ್ನೆ. ಸಾಹಿತ್ಯದ ಮೂಲಕ ನಮ್ಮ ನಿಲುವನ್ನು ಜನರಿಗೆ ತಲುಪಿಸುವ ಅವಕಾಶವನ್ನೇಕೆ ಕಳೆದುಕೊಳ್ಳಬೇಕು? ಹೀಗೆ ಕಳೆದುಕೊಳ್ಳುತ್ತ ಹೋದರೆ ಸಾಹಿತಿಗಳದೊಂದು ಪಂಡಿತ ಮಂಡಳಿಯಾಗಲಿಕ್ಕಿಲ್ಲವೇ? – ಎಂಬ ಅಭಿಪ್ರಾಯವೂ ಇದೆ. ಭಾಗವಹಿಸುವ ವೇದಿಕೆಗಳ ಬಗ್ಗೆ ಇರುವ ಎಚ್ಚರವೇನೋ ಸರಿಯೆ. ನಮ್ಮ ಬರಹಗಳನ್ನು ಪ್ರಕಟಪಡಿಸುವ ಮಾಧ್ಯಮಗಳ ಬಗ್ಗೆ ಇಂಥ ಎಚ್ಚರ ಇದೆಯೇ? ಮಾಧ್ಯಮಗಳು ಬಂಡವಾಳಗಾರರ ಕೈಯಲ್ಲಿವೆ. ಪ್ರತ್ಯೇಕ ರಾಜಕೀಯ ಅಜೆಂಡಾಗಳನ್ನೂ ಹೊಂದಿವೆ. ಇವುಗಳಿಗೆ ಪ್ರಜಾಸತ್ತಾತ್ಮಕ ಚಹರೆಯಿಲ್ಲ. ಆದರೂ ಮೌನ ಅನುಸಂಧಾನ ನಡೆದಿಲ್ಲವೇ? ಇಂತಹ ಹತ್ತಾರು ಪ್ರಶ್ನೆಗಳನ್ನು ಎದುರಾಗಿಸುತ್ತಿರುವುದು ಬರಹಗಾರರ ಭಾಗೀದಾರಿಕೆಯ ಬಗೆಗಿನ ರಾಜಿ ಸಂಧಾನಕ್ಕಲ್ಲ. ಇವತ್ತು ಬರಹಗಾರರು ಪಯಣಿಸುತ್ತಿರುವ ಕಿರಿಇಕ್ಕಟ್ಟಿನ ಹಾದಿಯನ್ನು ಕಾಣಿಸಲಿಕ್ಕೆ, ಅಷ್ಟೆ.

ಇಂದಿನ ಬರಹಗಾರರು ತಮ್ಮ ಅನುಭವ ಲೋಕವನ್ನು ವಿಭಿನ್ನವಾಗಿ ಕಟ್ಟುವ ಉತ್ಸಾಹದಲ್ಲಿ ಮುಕ್ತತೆಯೇ ಹೊಸತನ ಎನ್ನುವ ಭ್ರಮೆಗೆ ಒಳಗಾಗುತ್ತಿರುವರೇ? ಅಂತರ್ಜಾಲ ತಾಣಗಳು ನಿರ್ಭಿಡೆಯ ಅಭಿಪ್ರಾಯಗಳಿಗೆ ಅವಕಾಶವನ್ನು ಕೊಡುತ್ತ; ಒಂದು ಮುಖೇಡಿತನವನ್ನೂ ಒದಗಿಸಿತು. ಅಂತಹ ಉಡಾಫೆ ಧೋರಣೆ ಮತ್ತು ಅನಿಯಂತ್ರಿತ ಭಾಷೆ ಸಾಹಿತ್ಯದ ಘನತೆಯನ್ನೇ ಕುಂದಿಸುತ್ತದೆ. ಸಾಹಿತ್ಯಿಕ ಸಾಂಸ್ಕೃತಿಕ ಸಿದ್ಧಾಂತಗಳು ಬದುಕನ್ನು ಕುರಿತ ಗಾಢವಾದ ಮಮತೆ ಮತ್ತು ಶ್ರದ್ಧೆಯಲ್ಲಿ ಹುಟ್ಟಿರುತ್ತವೆ. ಅವುಗಳನ್ನು ಸರಳವಾಗಿ ಪದಾರ್ಥೀ ಕರಿಸುವುದು ತಪ್ಪು. ಒಂದು ಉದಾಹರಣೆಯನ್ನು ಗಮನಿಸುವುದಾದರೆ, ಸ್ತ್ರೀವಾದವು ಪ್ರತಿರೋಧಗಳ ಸಂಕಥನವೋ ಮುಕ್ತತೆಯ ಪ್ರತಿಪಾದನೆಯೋ ಅಲ್ಲ. ಸಾಮಾಜಿಕ ಸಂರಚನೆಯೊಳಗೆ ಬೆರೆತು ಬೆಳೆಯು ತ್ತಿರುವ ಯಾಜಮಾನ್ಯದ ಅಗಣಿತ ಸ್ತರಗಳನ್ನು ಅಧ್ಯಯನ ಮಾಡುವ ವೈಧಾನಿಕತೆ. ಅದು ಮತ್ತೆ ಮರುನಿರ್ವಚನಕ್ಕೆ ಒಳಗಾಗಬೇಕಿದೆ. 'ನನ್ನ ದೇಹ ನನ್ನ ಉಡುಗೆ' ಎಂದು ಹಕ್ಕೊತ್ತಾಯ ಮಾಡುವ ಕ್ಷಣದಲ್ಲಿಯೇ ಯಾವುದು ನನ್ನ ಆಯ್ಕೆ ಎನ್ನುತ್ತಿದ್ದೇನೋ ಅದರೊಳಗೆ ಪಿತೃವ್ಯವಸ್ಥೆಯ ಉಪಭೋಗಿ ನೆಲೆ ಬೆರೆತಿದೆಯೇ? ಎನ್ನುವುದನ್ನು ವಿವೇಚಿಸಬೇಕಿದೆ. ಇಂತಹ ಸೂಕ್ಷ್ಮಗಳನ್ನು ಗಮನಿಸದೆ ಹೆಣ್ಣಿನ ದೇಹವನ್ನು ಒಂದು ಮಾಧ್ಯಮವಾಗಿ ಬಳಸುವುದು, ಪರಂಪರೆಯ ಹಳಸಲು ಭಾವಯಾನವೇ. ಸ್ವಾತಂತ್ರ್ಯವನ್ನು ಲೈಂಗಿಕ ಮುಕ್ತತೆಯ ತೀವ್ರಾನುಭೂತಿಯಾಗಿಸುವುದು ಹೆಣ್ಣನ್ನು ಕುರಿತ ಪಿತೃವ್ಯವಸ್ಥೆಯ ಕಲ್ಪಿತವೇ. ಮಹಿಳಾ ದಿನಾಚರಣೆಯ ದಿನ ಒಂದು ಜಾಹೀರಾತು ಮಹಿಳಾ ಸ್ವಾತಂತ್ರ್ಯದ ಪರಿಭಾಷೆಯನ್ನು ಮುಲಾಜಿಲ್ಲದೆ ಬಳಸಿಕೊಳ್ಳುತ್ತದೆ. ಬಂಡವಾಳವಾದ ಸಂವೇದನೆಯನ್ನು ಒರಟಾಗಿಸುತ್ತಿದೆ. 'ವಸಾಹತುಶಾಹಿಯು ನಿಜವಾಗಿಯೂ ಆಳುವ ಲೋಕವೆಂದರೆ ಸೋತವರ ಮನೋಲೋಕ' ಎಂದು ಗೂಗಿ ವಾ ಥಿಯಾಂಗೊ ವಸಾಹತುವಾದದ ಬಗ್ಗೆ ಹೇಳುವ ಮಾತು ನವವಸಾಹತುಶಾಹಿಯ ಈ ಕಾಲದಲ್ಲಿ ಇನ್ನೂ ನಿಚ್ಚಳವಾಗಿ ವಿಜೃಂಭಿಸುತ್ತಿದೆ. ಬರಹಗಾರರ ಉನ್ಮತ್ತಭಾವ ಸ್ಥಿತಿ ಅವರ ಅಭಿವ್ಯಕ್ತಿಯನ್ನು ಸೋಮಯ್ಯನ ಪ್ರತಿಭಟನೆಯ ಹಾಗೆ ನಿಷ್ಫಲವಾಗಿಸಬಹುದು. ಅಂಗಳವನ್ನೂ ದಾಟಲಾಗದ ಅವನ ಕ್ರಿಯೆಯ ನಿರಂತರ ವಿಫಲತೆ, ಆ ಮನೆಯ ಮೊಮ್ಮಕ್ಕಳ ಅರಿವಿಗೂ ಮುಟ್ಟಿಸಲಾಗದ ಮಾತು ಕಣ್ಣೀರುಗಳ ನಿಸ್ತೇಜತೆ ನಮಗೆ ನೆನಪಿರಬೇಕಿದೆ.



ಡಾ|| ವಿನಯಾ
'ನೆಮ್ಮದಿ', ೧೨೪, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ಧಾರವಾಡ–೫೮೦೦೦೩

# ಸ್ವಾತಂತ್ರ್ಯಾನಂತರದ ಭಾರತ – ೧

# ವಸಾಹತು ಆಡಳಿತದಲ್ಲಿ ಪರಿಸ್ಥಿತಿ

ಸಿ. ಆರ್. ಕೃಷ್ಣರಾವ್

**ಭಾ**ರತ ಸ್ವತಂತ್ರಗೊಂಡು ಅರವತ್ತೇಳು ವರ್ಷಗಳಾಗಿವೆ. ದೇಶದಲ್ಲಿ ಬಹಳಷ್ಟು ಬದಲಾವಣೆಗಳಾಗಿವೆ. ಜನಜೀವನದಲ್ಲಿ, ಹೆಚ್ಚುತ್ತಿರುವ ನಗರೀಕರಣದಲ್ಲಿ, ವ್ಯಾಪಾರ ವಹಿವಾಟುಗಳಲ್ಲಿ, ಬೆಳೆಯುತ್ತಿರುವ ಕೈಗಾರಿಕೆಗಳಲ್ಲಿ ಮಾರ್ಪಾಟುಗಳಾಗಿರುವುದನ್ನು ಕಾಣುತ್ತಿದ್ದೇವೆ. ಒಟ್ಟಾರೆಯಾಗಿ ದೇಶದ ಪ್ರಗತಿಯನ್ನು ನೋಡಿದಾಗ ಸಾಧನೆಯು ನಿರೀಕ್ಷಿತ ಮಟ್ಟವನ್ನು ತಲುಪಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ವಸಾಹತುಶಾಹಿ ನೊಗವನ್ನು ಕಳಚಿಕೊಂಡ ಭಾರತ ಈಗ ನವವಸಾಹತುಶಾಹಿಯ, ಜಾಗತಿಕ ಬಂಡವಾಳಶಾಹಿಯ ಕಬಂಧಬಾಹುಗಳಲ್ಲಿ ಸಿಕ್ಕಿಕೊಂಡಿದೆ, ವಿದೇಶೀ ಬಂಡವಾಳಕ್ಕೆ ಮಾರುಹೋಗಿದೆ. ಸಮಾಜವಾದಿ ಮಾದರಿ ಸಮಾಜದ ನಿರ್ಮಾಣದ ಗುರಿ ಇರಿಸಿಕೊಂಡು ಅಭಿವೃದ್ಧಿ ಸಾಧಿಸಲು, ಯೋಜನಾಬದ್ಧವಾದ ಆರ್ಥಿಕವನ್ನು ಸ್ಥಾಪಿಸಿಹೊರಟ ದೇಶ ಬಂಡವಾಳಶಾಹಿ ವ್ಯವಸ್ಥೆಯನ್ನು ಬಲಗೊಳಿಸುತ್ತಿದೆ. ಕಳೆದ ಮೂರು ದಶಕಗಳಿಗೂ ಹೆಚ್ಚು ವರ್ಷಗಳಿಂದ ಅನುಸರಿಸುತ್ತ ಬಂದಿರುವ ಜಾಗತೀಕರಣ, ಉದಾರೀಕರಣ, ಖಾಸಗೀಕರಣ, ವಿದೇಶೀ ಬಂಡವಾಳ, ಮುಕ್ತ ಮಾರುಕಟ್ಟೆ ಇವುಗಳ ವಿಷವರ್ತುಲ ಜನಜೀವನವನ್ನು ಆತಂಕಕ್ಕೀಡುಮಾಡುತ್ತಿದೆ. ಸ್ವಾವಲಂಬನೆ ಸಾಧಿಸುವುದಕ್ಕೆ ಪ್ರತಿಯಾಗಿ ಪರಾವಲಂಬನೆಯತ್ತ ದೇಶ ಸಾಗುತ್ತಿದೆ. ಈ ಎಲ್ಲ ಬೆಳವಣಿಗೆಗಳ ಫಲಾನುಭವಿಗಳು ದೇಶದ ಬಂಡವಾಳದಾರರು ಮತ್ತು ಶ್ರೀಮಂತ ವರ್ಗದವರಾಗಿದ್ದಾರೆ. ಬಡವರು ಮತ್ತು ಶ್ರೀಮಂತರ ಮಧ್ಯೆ ಕಂದಕ ದೊಡ್ಡದಾಗುತ್ತಿದೆ. ದೇಶದ ಆಡಳಿತದಲ್ಲಿ ಭ್ರಷ್ಟಾಚಾರ, ಅವ್ಯವಹಾರ, ದುರಾಡಳಿತ, ಸ್ತ್ರೀಯರು ಮತ್ತು ದುರ್ಬಲರ ಮೇಲೆ ದೌರ್ಜನ್ಯ ಮುಗಿಲು ಮುಟ್ಟುತ್ತಿದೆ. ಈ ದುರಾಚಾರಗಳು ಸಾಮಾಜಿಕ ಜೀವನದ ಎಲ್ಲ ಕ್ಷೇತ್ರದಲ್ಲೂ ಪಸರಿಸುತ್ತಿರುವುದೀಗ ಕಳವಳಕಾರಿ. ಜನಪರ ಧೋರಣೆಗಳನ್ನು ಕೈಬಿಟ್ಟಿರುವ ಸರಕಾರ ಹೆಚ್ಚು ಹೆಚ್ಚಾಗಿ ಜನವಿರೋಧಿ ನೀತಿಯನ್ನು ಅನುಸರಿಸತೊಡಗಿದೆ. ಜನಸಾಮಾನ್ಯರ ಹಿತಸಾಧನೆಗಿಂತ ಕಾರ್ಪೊರೇಟ್ ವಲಯದ ಪೋಷಣೆ ಸರಕಾರದ ಗುರಿಯಾಗಿದೆ. ಇಷ್ಟೆಲ್ಲ ಅವಾಂತರಗಳಿದ್ದಾಗ್ಯೂ ಭಾರತ ಪ್ರಜಾಪ್ರಭುತ್ವ ರಾಷ್ಟ್ರವಾಗಿ ನೆಲೆಗೊಂಡಿರುವುದೀಗ ದೊಡ್ಡ ಸಾಧನೆ. ರಾಷ್ಟ್ರೀಯ ಸ್ವಾತಂತ್ರ್ಯ ಚಳವಳಿಯ ಮುಂಚೂಣಿಯಲ್ಲಿದ್ದ ಕಾಂಗ್ರೆಸ್ ಪಕ್ಷದ ದೀರ್ಘ ಕಾಲದ, ಹೆಚ್ಚು ಕಡಿಮೆ ನಾಲ್ಕು ದಶಕಗಳಿಗೂ ಹೆಚ್ಚು ವರ್ಷಗಳ ಆಡಳಿತ ಅಂತ್ಯಗೊಂಡು ಈಗ ದೇಶ ಸಮ್ಮಿಶ್ರ ಸರಕಾರದ ಯುಗದಲ್ಲಿದೆ. ಮತೀಯವಾದದಿಂದ ದೇಶದ ವಿಭಜನೆಯ ಕಾಲದಲ್ಲಿ ಸಾಕಷ್ಟು ಯಾತನೆಯನ್ನು ಅನುಭವಿಸಿದ್ದ ಈ ನೆಲದಲ್ಲಿ ಮತೀಯವಾದಿ ರಾಜಕಾರಣ ಬಲಗೊಂಡಿರುವುದೀಗ ಆತಂಕಕಾರಿ. ಒಂದು ಕಡೆ ಹೆಚ್ಚುತ್ತಿರುವ ಹಿಂದುತ್ವವಾದಿಗಳ ಪ್ರಾಬಲ್ಯ, ಇನ್ನೊಂದು ಕಡೆ ಇಸ್ಲಾಮಿಕ್ ಉಗ್ರವಾದಿಗಳ ಉಪಟಳ ವಿಪತ್ಕಾರಿ ಬೆಳವಣಿಗೆ. ಅದೇ ಸಮಯದಲ್ಲಿ ದೇಶದ ಕಾರ್ಯಾಂಗ, ಶಾಸಕಾಂಗ, ನ್ಯಾಯಾಂಗ, ಮಾಧ್ಯಮ, ಪ್ರಜಾಪ್ರಭುತ್ವದ ಪ್ರಮುಖ ಆಧಾರವಾಗಿರುವ ಈ ಅಂಗಗಳು ಭ್ರಷ್ಟಾಚಾರ, ಸ್ವಹಿತ ಸಾಧನೆ, ಅವ್ಯವಹಾರಗಳಲ್ಲಿ ತೊಡಗುತ್ತಿರುವುದು ತೀವ್ರ ಕಳವಳ ಉಂಟುಮಾಡಿದೆ. ಈ ಹಿನ್ನೆಲೆಯನ್ನು ಗಮನದಲ್ಲಿರಿಸಿಕೊಂಡು ದೇಶದ ವಿವಿಧ ಕ್ಷೇತ್ರಗಳ, ಜನಜೀವನದ ಪ್ರಗತಿಯನ್ನು ಅವಲೋಕಿಸೋಣ.

ಅದಕ್ಕೆ ಮುನ್ನ ಸ್ವಾತಂತ್ರ್ಯಪೂರ್ವದ ಭಾರತ ಹೇಗಿತ್ತು ಎನ್ನುವುದನ್ನು ಪರಿಚಯ ಮಾಡಿಕೊಳ್ಳೋಣ. ಅಂದರೆ ವಸಾಹತುಶಾಹಿ ಆಡಳಿತದ ಕಾಲದಲ್ಲಿ ಭಾರತದ ಜನತೆಯ ಜೀವನ ಸ್ಥಿತಿ ಹೇಗಿತ್ತು ಎನ್ನುವುದನ್ನು ಪರಿಶೀಲಿಸೋಣ. ಭಾರತ ಸ್ವಾತಂತ್ರ್ಯ ಪಡೆದುಕೊಂಡಾಗ ಎರಡನೇ ಮಹಾಯುದ್ಧ ಕೊನೆಗೊಂಡು ಎರಡೇ ವರ್ಷ ಕಳೆದಿತ್ತು. ದೇಶದಲ್ಲಿ ಆಹಾರ ಪರಿಸ್ಥಿತಿ ತುಂಬ ಕಠಿಣವಾಗಿತ್ತು. ಯುದ್ಧಕಾಲದಲ್ಲಿ ಜಾರಿಗೆ ಬಂದ ಪಡಿತರ ವ್ಯವಸ್ಥೆ ಮುಂದುವರಿದಿತ್ತು. ಸರಕಾರಿ ಡಿಪೋಗಳ ಮುಂದೆ ಗಂಟೆಗಟ್ಟಳೆ ಸಾಲಿನಲ್ಲಿ ನಿಂತು ಅಕ್ಕಿ, ಗೋಧಿ, ಬೇಳೆಕಾಳು, ಎಣ್ಣೆ, ಕಟ್ಟಿಗೆ ಕೊಳ್ಳಬೇಕಾಗಿತ್ತು. ಕಡುಬಡತನ ಎಲ್ಲಕಡೆ ಕಾಡುತ್ತಿತ್ತು. ಭಾರತದ



ಪಡಿತರ ವ್ಯವಸ್ಥೆಯಲ್ಲಿ ಆಹಾರಧಾನ್ಯಕ್ಕಾಗಿ ಸಾಲು ನಿಂತ ಜನ

ಅರ್ಥವ್ಯವಸ್ಥೆ ಬ್ರಿಟನ್ನಿನ ಆರ್ಥಿಕಕ್ಕೆ ಲಗತ್ತಾಗಿತ್ತು, ಅಧೀನವಾಗಿತ್ತು. ದೇಶದ ಪರಂಪರಾಗತ ವ್ಯವಸ್ಥೆ ಮುರಿದುಬಿದ್ದಿತ್ತು. ಎಲ್ಲದಕ್ಕೂ ಬ್ರಿಟನ್‌ಅನ್ನೇ ಅವಲಂಬಿಸಬೇಕಾಗಿತ್ತು. ಕಚ್ಚಾವಸ್ತುಗಳನ್ನು ಬ್ರಿಟನ್ನಿಗೆ ರಫ್ತು ಮಾಡಿ ಅಲ್ಲಿಂದ ಸಿದ್ಧವಾದ ಸರಕುಗಳನ್ನು ಆಮದು ಮಾಡಿಕೊಳ್ಳಬೇಕಾಗಿತ್ತು. ಅಂದಿನ ದಿನಗಳಲ್ಲಿ ಭಾರತ ಶೇ. ೬೮ರಷ್ಟು ಕಚ್ಚಾ ಪದಾರ್ಥಗಳನ್ನು ರವಾನಿಸಿ, ಹೆಚ್ಚುಕಡಿಮೆ ಅದೇ ಪ್ರಮಾಣದಲ್ಲಿ ತಯಾರಿತ ವಸ್ತುಗಳನ್ನು ಖರೀದಿಸುತ್ತಿತ್ತು. ಭಾರತ ಬಹುತೇಕ ಕೃಷಿಪ್ರಧಾನವಾಗಿದ್ದು, ಪಾಳೆಯಗಾರಿ ವ್ಯವಸ್ಥೆಯನ್ನು ಹೊಂದಿತ್ತು. ವಸಾಹತು ವ್ಯವಸ್ಥೆ ದೇಶದ ಕೃಷಿ ಮತ್ತು ಕೈಗಾರಿಕಾ ಅಭಿವೃದ್ಧಿಗೆ ಬಹುದೊಡ್ಡ ಅಡ್ಡಿಯಾಗಿತ್ತು. ಜಮೀನಿನಲ್ಲಿ ಇಳುವರಿಯೂ ಕಮ್ಮಿಯಾಗಿತ್ತು. ಕೆಲವೊಂದು ಪ್ರದೇಶಗಳಲ್ಲಿ ಉತ್ಪಾದನೆಯೇ ಇರಲಿಲ್ಲ, ೧೯೪೦ರಲ್ಲಿ ದೇಶದ ಶೇ. ೭೦ರಷ್ಟು ಸಾಗುವಳಿ ಜಮೀನು ಭೂಮಾಲಿಕರು ಮತ್ತು ಲೇವಾದೇವಿಗಾರರ ವಶದಲ್ಲಿತ್ತು. ಕೃಷಿ ಉತ್ಪಾದನೆಯಲ್ಲಿ ಅರ್ಧ ಪಾಲನ್ನು, ಕೆಲವೊಮ್ಮೆ ಅದಕ್ಕೂ ಹೆಚ್ಚಿನ ಪಾಲನ್ನು ಸರಕಾರವೇ ಪಡೆದುಕೊಳ್ಳುತ್ತಿತ್ತು. ಸರಕಾರಕ್ಕೆ ಕೃಷಿ ಅಭಿವೃದ್ಧಿಗಿಂತ ಕಂದಾಯ ವಸೂಲಿಯೇ ಮುಖ್ಯವಾಗಿತ್ತು. ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಕೃಷಿಕ್ಷೇತ್ರ ಆಧುನೀಕರಣಗೊಂಡು, ಕೃಷಿ ಯಂತ್ರಗಳನ್ನು ಬಳಸುತ್ತಿದ್ದರೆ, ಭಾರತದ ಕೃಷಿಕರು ಶತಮಾನಗಳಿಂದ ಉಪಯೋಗಿಸುತ್ತಿದ್ದ ಉಪಕರಣಗಳನ್ನೇ ಬಳಸುತ್ತಿದ್ದರು. ಉದಾಹರಣೆಗೆ ೧೯೫೧ರಲ್ಲಿ ಕೃಷಿ ಕ್ಷೇತ್ರದಲ್ಲಿ ೯೩೦,೦೦೦ ಕಬ್ಬಿಣದ ನೇಗಿಲುಗಳಿದ್ದರೆ, ಮರದ ನೇಗಿಲುಗಳ ಸಂಖ್ಯೆ ೩೧.೩ ದಶಲಕ್ಷಗಳಾಗಿದ್ದುವು. ಉಳುವ ರೈತನಿಗೆ ಹೊಲವೇ ಇರಲಿಲ್ಲ. ೧೯೫೧ರಲ್ಲಿ ಶೇ. ೨೮ರಷ್ಟು ಮಂದಿ ಕೃಷಿ ಕಾರ್ಮಿಕರಿದ್ದರು. ಉಳಿದವರು ಗೇಣಿದಾರರಾಗಿ, ಬೆಳೆಯಲ್ಲಿ ಪಾಲುದಾರರಾಗಿ ಭೂಮಾಲಿಕರ ಜಮೀನುಗಳಲ್ಲಿ ದುಡಿಯುತ್ತಿದ್ದರು. ಇದರ ಮೇಲೆ ಹಿಡುವಳಿಯಲ್ಲಿ ತುಂಡುಭೂಮಿಯೇ ಹೆಚ್ಚಾಗಿತ್ತು. ನೀರಾವರಿ ವ್ಯವಸ್ಥೆಯಾಗಲಿ, ಗ್ರಾಮಗಳಲ್ಲಿ ರಸ್ತೆಗಳಾಗಲೀ ಇರಲಿಲ್ಲ. ನೀರಿನ ವಸತಿ ಏನಿದ್ದರೂ ವಾಣಿಜ್ಯ ಬೆಳೆಗಳಿಗೆ ಮಾತ್ರ ಸೀಮಿತವಾಗಿತ್ತು.



**ಅಧಿಕವಾಗಿ ಬಳಕೆಯಲ್ಲಿದ್ದ ಮರದ ನೇಗಿಲು**

ರಾಸಾಯನಿಕ ಗೊಬ್ಬರಗಳ ಬಳಕೆಯೇ ಇರಲಿಲ್ಲ. ಜೈವಿಕ ಗೊಬ್ಬರ ಮಾತ್ರ ಬಳಕೆಯಲ್ಲಿತ್ತು. ೧೯೩೮–೩೯ರಲ್ಲಿ ಶೇ. ೧೧ರಷ್ಟು ಸಾಗುವಳಿ ಜಮೀನಿನಲ್ಲಿ ಮಾತ್ರ ಸುಧಾರಿತ ಬೀಜವನ್ನು ಬಿತ್ತಲಾಗುತ್ತಿತ್ತು. ಕೃಷಿ ಶಿಕ್ಷಣವಂತೂ ಇರಲೇ ಇಲ್ಲ. ೧೯೪೬ರಲ್ಲಿ ದೇಶದಲ್ಲಿ ೯ ಕೃಷಿ ಕಾಲೇಜುಗಳಿದ್ದುವು. ಅವುಗಳಲ್ಲಿ ಒಟ್ಟು ೩,೧೧೦ ವಿದ್ಯಾರ್ಥಿಗಳಿದ್ದರು. ಭೂಮಿಯ ಫಲವತ್ತತೆ ಹೆಚ್ಚಿಸಲು, ಪ್ರವಾಹದ ಹಾವಳಿ ನಿಯಂತ್ರಿಸಲು, ಕೃಷಿ ಭೂಮಿಯಲ್ಲಿ ಚೌಳು ತೆಗೆಯಲು ಯಾವ ವ್ಯವಸ್ಥೆಯೂ ಇರಲಿಲ್ಲ. ಹಾಗೆಯೇ ಕಾಲುವೆಗಳೂ ಚರಂಡಿಗಳೂ ಇರಲಿಲ್ಲ. ೧೯೪೦ರ ದಶಕದಲ್ಲಿ ಶೇ. ೨೬ರಷ್ಟು ಸಾಗುವಳಿಯಾದ ಜಮೀನು ನೀರಾವರಿ ವ್ಯವಸ್ಥೆ ಹೊಂದಿತ್ತು. ದೇಶದ ಕೃಷಿಕ್ಷೇತ್ರದ ಪರಿಸ್ಥಿತಿ ಇಂಥದ್ದಾಗಿತ್ತು.

ಇನ್ನು ಕೈಗಾರಿಕಾ ಕ್ಷೇತ್ರದ ಪರಿಸ್ಥಿತಿ ಉತ್ತೇಜನಕಾರಿಯಾಗೇನೂ ಇರಲಿಲ್ಲ. ಹತ್ತೊಂಬತ್ತನೆ ಶತಮಾನದಲ್ಲಿಯೇ ದೇಶದ ಗುಡಿಕೈಗಾರಿಕೆ ನಶಿಸಿಹೋಗಿತ್ತು

ಸಿದ್ಧವಸ್ತುಗಳ ಆಮದಿನಿಂದಾಗಿ. ಅದೇ ಶತಮಾನದ ಉತ್ತರಾರ್ಧದಲ್ಲಿ ಕೆಲ ಕೈಗಾರಿಕೆಗಳು ಸ್ಥಾಪನೆಯಾದರೂ ಅವು ಮುಖ್ಯವಾಗಿ ಸೆಣಬು, ಹತ್ತಿಗಿರಣಿಗಳು, ಸಕ್ಕರೆ, ಸಿಮೆಂಟ್ ಮತ್ತು ಸ್ವಲ್ಪಮಟ್ಟಿಗೆ ಕಾಗದ ತಯಾರಿಕೆಗೆ ಸೀಮಿತವಾಗಿತ್ತು. ೧೯೫೦ರಲ್ಲಿ ಭಾರತದ ಕೈಗಾರಿಕಾ ಕ್ಷೇತ್ರ ಶೇ. ೯೦ರಷ್ಟು ಯಂತ್ರ ಸಾಮಗ್ರಿಗಳನ್ನು ಆಮದು ಮಾಡಿಕೊಳ್ಳುತ್ತಿತ್ತು. ಆಗ ದೇಶದಲ್ಲಿ ಉತ್ಪಾದನೆಯಾಗುತ್ತಿದ್ದುದು ೧.೦೪ ಮಿಲಿಯ ಟನ್ ಉಕ್ಕು, ೩೨.೮ ಮಿಲಿಯ ಟನ್ ಕಲ್ಲಿದ್ದಲು, ೨.೭ ಮಿಲಿಯ ಟನ್ ಸಿಮೆಂಟ್, ೩ ಮಿಲಿಯ ಟನ್‌ನಷ್ಟು ಯಂತ್ರೋಪಕರಣಗಳು, ೭ ರೈಲ್ವೆ ಇಂಜಿನ್‌ಗಳು, ೯೯,೦೦೦ ಬೈಸಿಕಲ್‌ಗಳು, ೧.೪ ಮಿಲಿಯ ವಿದ್ಯುದ್ದೀಪಗಳು, ೩೩,೦೦೦ ಹೊಲಿಗೆ ಯಂತ್ರಗಳು ಆಗಿದ್ದವು. ವಿದ್ಯುಚ್ಛಕ್ತಿ ಉತ್ಪಾದನೆಯ ಪ್ರಮಾಣ ತಲಾ ಒಂದಕ್ಕೆ ೧೪ ಕಿ.ವಾ.ಗಳಾಗಿದ್ದುವು. ೧೯೫೦ರಲ್ಲಿ ದೇಶದಲ್ಲಿದ್ದ ಬ್ಯಾಂಕ್‌ಗಳ ಸಂಖ್ಯೆ ೫,೦೭೨ ಮಾತ್ರ. ದೇಶದ ಜನಸಂಖ್ಯೆ ಆಗ ೩೫೭ ಮಿಲಿಯ ಆಗಿತ್ತು. ಇವರ ಪೈಕಿ ೨.೩ ಮಿಲಿಯ ಮಂದಿ ಮಾತ್ರ ಆಧುನಿಕ ಕೈಗಾರಿಕೆಗಳಲ್ಲಿ ಕೆಲಸ ಮಾಡುತ್ತಿದ್ದರು. ಶೇ. ೮೨.೩ರಷ್ಟು ಜನ ಗ್ರಾಮಗಳಲ್ಲಿ ವಾಸ ಮಾಡುತ್ತಿದ್ದರು. ಹೆಚ್ಚಿನ ಕೈಗಾರಿಕೆಗಳು, ಪ್ಲಾಂಟೇಶನ್ನುಗಳು ಸ್ವಾತಂತ್ರ್ಯಪೂರ್ವದ ಕಾಲದಲ್ಲಿ ಬ್ರಿಟಿಷರ ವಶದಲ್ಲಿತ್ತು. ೧೯೪೦ರ ದಶಕದಲ್ಲಿ ಭಾರತದಲ್ಲಿದ್ದದ್ದು ೬೫,೦೦೦ ಮೈಲಿ ಉದ್ದದ ಹೆದ್ದಾರಿಗಳು ಮತ್ತು ಸುಮಾರು ೪೨,೦೦೦ ಮೈಲಿಗಳ ಉದ್ದದ ರೈಲು ಮಾರ್ಗಗಳು ಮಾತ್ರ. ಇನ್ನು ವೈಜ್ಞಾನಿಕ ಮತ್ತು ತಾಂತ್ರಿಕ ತರಬೇತಿ ಅತ್ಯಂತ ಕನಿಷ್ಠ ಪ್ರಮಾಣದ್ದಾಗಿತ್ತು. ೧೯೩೯ರಲ್ಲಿ ದೇಶದಲ್ಲಿ ೨,೨೧೭ ವಿದ್ಯಾರ್ಥಿಗಳನ್ನು ಹೊಂದಿದ್ದ ೭ ಇಂಜಿನಿಯರಿಂಗ್ ಕಾಲೇಜುಗಳಿದ್ದುವು. ದೇಶದಲ್ಲಿ ಸಾರ್ವಜನಿಕ ಆರೋಗ್ಯ ಸೇವೆ ತುಂಬ ಕಡಿಮೆ ಪ್ರಮಾಣದಲ್ಲಿತ್ತು. ಸಾಂಕ್ರಾಮಿಕ ರೋಗಗಳಿಂದಾಗಿ ಪ್ರತಿ ವರ್ಷ ಹತ್ತಾರು ಮಿಲಿಯ ಜನ ಸಾವಿಗೀಡಾಗುತ್ತಿದ್ದರು. ೧೯೪೩ರಲ್ಲಿ ದೇಶದಲ್ಲಿ ೧೦ ವೈದ್ಯಕೀಯ ಕಾಲೇಜುಗಳಿದ್ದು ೭೦೦ ಮಂದಿ ಪದವೀಧರ ವೈದ್ಯರನ್ನು ತರಬೇತುಗೊಳಿಸುತ್ತಿತ್ತು ಮತ್ತು ೨೭ ವೈದ್ಯಕೀಯ ಶಾಲೆಗಳು ೭,೦೦೦ ಮಂದಿ ಪರವಾನಗಿ ಪಡೆದ ವೈದ್ಯರನ್ನು ಸಿದ್ಧಗೊಳಿಸುತ್ತಿತ್ತು. ಇದ್ದ ಸುಮಾರು ೧೮,೦೦೦ ವೈದ್ಯರುಗಳು ಕೂಡ ನಗರ ಪ್ರದೇಶಗಳಲ್ಲಿಯೇ ಇರುತ್ತಿದ್ದರು. ಗ್ರಾಮಾಂತರ ಪ್ರದೇಶಗಳಲ್ಲಿ ಯಾವ ವೈದ್ಯಕೀಯ ಸೌಲಭ್ಯಗಳೂ ಇರಲಿಲ್ಲ. ದೇಶದಲ್ಲಿ ೧,೯೧೫ ಆಸ್ಪತ್ರೆಗಳು ೬,೫೮೯ ಚಿಕಿತ್ಸಾಲಯಗಳು ಇದ್ದು ಒಟ್ಟು ಸುಮಾರು ೧೨೪,೦೦೦ ಹಾಸಿಗೆಗಳು ಇದ್ದುವು. ೧೯೫೧ರಲ್ಲಿ ದೇಶದ ಜನಸಂಖ್ಯೆಯಲ್ಲಿ ಶೇ. ೮೪ರಷ್ಟು ಪುರುಷರು, ಶೇ. ೯೨ರಷ್ಟು ಸ್ತ್ರೀಯರು ನಿರಕ್ಷರಕುಕ್ಷಿಗಳಾಗಿದ್ದರು. ದೇಶದಲ್ಲಿ ಕೇವಲ ೧೩,೫೯೦ ಮಿಡಲ್ ಸ್ಕೂಲುಗಳು, ೭,೨೮೮ ಹೈಸ್ಕೂಲುಗಳು ಇದ್ದುವು. ದೇಶದಲ್ಲಿದ್ದ ವಿಶ್ವವಿದ್ಯಾನಿಲಯಗಳು ಬೆರಳೆಣಿಕೆಯಷ್ಟು.

ಬ್ರಿಟಿಷ್ ಆಳ್ವಿಕೆಯ ಕಾಲದಲ್ಲಿ ವಿದ್ಯುಚ್ಛಕ್ತಿಯಾಗಲಿ, ಕುಡಿಯುವ ನೀರಿನ ಸೌಕರ್ಯಗಳಾಗಲಿ ಅನೇಕ ನಗರಗಳಲ್ಲಿ ಇರಲಿಲ್ಲ. ಇನ್ನು ದೇಶದಲ್ಲಿ ಹಳ್ಳಿಗಾಡಿನ ಪರಿಸ್ಥಿತಿಯಂತೂ ತೀರಾ ಚಿಂತಾಜನಕವಾಗಿದ್ದುವು. ಇನ್ನೂರು ವರ್ಷಗಳ ಬ್ರಿಟಿಷ್ ಆಳ್ವಿಕೆಯ ಕಾಲದಲ್ಲಿ ಯಾವುದೇ ಅಭಿವೃದ್ಧಿ ಕಾಣದ ಭಾರತ ತೀರಾ ಹಿಂದುಳಿದ ದೇಶವಾಗಿತ್ತು. ಮೊದಲೇ ಹೇಳಿರುವ ಹಾಗೆ ದೇಶದಲ್ಲಿ ಆಹಾರದ ಕೊರತೆ ತೀವ್ರವಾಗಿತ್ತು. ಇದು ಭಾರತ ಸ್ವಾತಂತ್ರ್ಯ ಪಡೆದುಕೊಂಡಾಗ ಇದ್ದ ಪರಿಸ್ಥಿತಿ. ಅತ್ಯಂತ ಹಿಂದುಳಿದ ರಾಷ್ಟ್ರವಾಗಿದ್ದ ಭಾರತ ಈಗ ಅಭಿವೃದ್ಧಿಶೀಲ ರಾಷ್ಟ್ರ. ಅಭಿವೃದ್ಧಿಹೊಂದಿದ ರಾಷ್ಟ್ರವಾಗಲು ಇನ್ನೂ ಬಹುದೂರ ಸಾಗಬೇಕಾಗಿದೆ. ಮೊದಲಿನಿಂದಲೂ 'ವಿಭಜಿಸು ಆಳು' ಎಂಬ ನೀತಿಯನ್ನನುಸರಿಸಿದ ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ದೇಶವನ್ನು ವಿಭಜಿಸಿಯೇ ಸ್ವಾತಂತ್ರ್ಯ ನೀಡಿದರು. ದೇಶದ ವಿಭಜನೆ, ತದನಂತರ ಜರುಗಿದ ನರಮೇಧ, ಕೋಟಿಗಟ್ಟಳೆ ನಿರಾಶ್ರಿತರ ಆಗಮನ ಹಾಗೂ ಇತರ ಎಲ್ಲ ಅನಾಹುತಗಳೂ ಈಗ ಇತಿಹಾಸ. ಅದು ಪ್ರತ್ಯೇಕವಾದ ವಿಷಯ. ಈ ಬಗ್ಗೆ ಸಾಕಷ್ಟು ಬರಹಗಳು ಲಭ್ಯ.

ಸ್ವಾತಂತ್ರ್ಯಾನಂತರದ ವರ್ಷಗಳಲ್ಲಿ ಆಗಿರುವ ಬದಲಾವಣೆಗಳನ್ನು ಗುರ್ತಿಸುವುದು ಈ ಲೇಖನಮಾಲೆಯ ಉದ್ದೇಶ. ಅಂಕಿಅಂಶಗಳನ್ನು ಪ್ರಸ್ತುತಪಡಿಸುವುದಕ್ಕಿಂತ ಹೆಚ್ಚಾಗಿ ಕಣ್ಣಿಗೆ ಬೀಳುವ ಬದಲಾವಣೆಗಳನ್ನು ಗಮನಕ್ಕೆ ತರುವುದು ಇಂದು ಅಗತ್ಯ ಎನಿಸುತ್ತದೆ. ಈಗಿನ ಪೀಳಿಗೆಯು ಊಹಿಸಿಕೊಳ್ಳಲೂ ಆಗದ ಪರಿಸ್ಥಿತಿಯ ಬಗ್ಗೆ ಅರಿವು ಮೂಡಿಸುವ ಪ್ರಯತ್ನ ಇದು. ಇಪ್ಪತ್ತೊಂದನೆ ಶತಮಾನದ ಎರಡನೆ ದಶಕದಲ್ಲಿ ನಾವು ಕಾಣುತ್ತಿರುವ ಕೊಳ್ಳುಬಾಕ ಸಂಸ್ಕೃತಿ, ಬೆಳೆಯುತ್ತಿರುವ ನಗರೀಕರಣ, ಮಾಲುಗಳು, ರಿಯಲ್ ಎಸ್ಟೇಟ್‌ಗಳು, ಹೊಸ ಕೈಗಾರಿಕೆಗಳು, ವಾಹನಗಳ ದಟ್ಟಣೆ ಮುಂತಾದವು ಒಂದು ಕಡೆಯಾದರೆ, ನಮ್ಮ ಗ್ರಾಮಾಂತರ ಪ್ರದೇಶಗಳ ಸ್ಥಿತಿ ಇನ್ನೂ ಸುಧಾರಿಸದೇ ಇರುವುದು ಇನ್ನೊಂದು ಕಡೆ. ಆರು ದಶಕಗಳ ಕಾಲದಲ್ಲಿ ದೇಶ ಸಾಧಿಸಿರುವ ಪ್ರಗತಿ ಎಷ್ಟು, ಅದರ ಫಲ ಜನಸಾಮಾನ್ಯರಿಗೆ ತಲಪಿದೆಯೇ ಎಂಬುದನ್ನು ನೋಡೋಣ. ಆರ್ಥಿಕ

## ತುತ್ತು

ನೀನು
ನನ್ನ ಸಣಕಲು ಹೊಟ್ಟೆ ಕಂಡು
ನಗುತ್ತಿಯಾ –
ಅಲ್ಲಿ
ನನ್ನ
ಅವ್ವನ ತುತ್ತು ಉಂಟು !
ನಾನು
ನಿನ್ನ ಡೊಳ್ಳುಹೊಟ್ಟೆ ಕಂಡು
ನಗುತ್ತೇನೆ –
ಅಲ್ಲಿ
ಬಡವರ ತುತ್ತು ಉಂಟು !



ಅಂಬಾದಾಸ ವಡೆ
ಬಾಗಲಕೋಟ



ಅಂದು ಇದ್ದ ವಾಸದ ಮನೆಗಳು

## ಅಭಿನಂದನೆ



೨೦೧೨ನೇ ಸಾಲಿನ ಗುಲ್ಬರ್ಗದ ಡಾ॥ ಪಿ. ಎಸ್. ಶಂಕರ್ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ' ಪ್ರಶಸ್ತಿಗೆ ಡಾ॥ ವಸುಂಧರಾ ಭೂಪತಿಯವರ ಪುಸ್ತಕ 'ಮೊಗ್ಗು ಅರಳುವಾಗ' ಆಯ್ಕೆಯಾಗಿದೆ. ಪ್ರಶಸ್ತಿಯು ಐದು ಸಾವಿರ ನಗದು, ಸ್ಮರಣಫಲಕವನ್ನೊಳಗೊಂಡಿರುತ್ತದೆ. ಲೇಖಕಿ ಡಾ॥ ವಸುಂಧರಾ ಭೂಪತಿ ಅವರಿಗೆ ಹೊಸತು – ನವಕರ್ನಾಟಕ ಬಳಗದ ಹಾರ್ದಿಕ ಅಭಿನಂದನೆಗಳು.

ಯೋಜನೆಗಳು ಮೊದಲಿನಲ್ಲಿ ಹೊಂದಿದ್ದ ಗುರಿ, ಈಗ ತಿರುಗುಮುರುಗಾಗಿದೆ. ಸಾರ್ವಜನಿಕ ಉದ್ಯಮಗಳ ಸ್ಥಾಪನೆಯಿಂದ ಪ್ರಾರಂಭವಾದ ದೇಶದ ಔದ್ಯೋಗೀಕರಣದ ನೀತಿ ಈಗ ಆ ಉದ್ಯಮಗಳನ್ನು ಖಾಸಗೀಕರಿಸುವ ಮಾರ್ಗ ಹಿಡಿದಿದೆ. ದೇಶದಲ್ಲಾಗುತ್ತಿರುವ ಈ ಬದಲಾವಣೆಗಳು ಎಲ್ಲಿಗೆ ಕೊಂಡೊಯ್ಯುತ್ತಿವೆ ಎಂಬುದನ್ನು ನೋಡೋಣ.

ಉದಾಹರಣೆಗೆ ಕರ್ನಾಟಕದ ರಾಜಧಾನಿ ಬೆಂಗಳೂರು ನಗರ ಮಹಾನಗರವಾಗಿ ಇಂದು ಬೃಹದಾಕಾರವಾಗಿ ಬೆಳೆದಿದೆ. ಈ ನಮ್ಮ ನಗರದಂತೆಯೇ ದೇಶದ ಇತರ ನಗರಗಳೂ ಕೂಡ ಕಳೆದ ಮೂರು–ನಾಲ್ಕು ದಶಕಗಳ ಕಾಲದಲ್ಲಿ ಗುರ್ತಿಸಲಾಗದಂತೆ ಬದಲಾಯಿಸಿವೆ. ೧೯೪೦ರ ದಶಕದಲ್ಲಿ, ಅಂದರೆ ಸ್ವಾತಂತ್ರ್ಯಪೂರ್ವದ ವರ್ಷಗಳಲ್ಲಿ ಬೆಂಗಳೂರಿನ ಜನಸಂಖ್ಯೆ ಸುಮಾರು ಮೂರು ಲಕ್ಷ. ಈಗ ಅದು ಹತ್ತಿರ ಹತ್ತಿರ ನೂರು ಲಕ್ಷವಾಗಿದೆ. ಮೂರು–ನಾಲ್ಕು ಹತ್ತಿ ಗಿರಣಿಗಳು ಇದ್ದ ಬೆಂಗಳೂರು ಈಗ ದೇಶದ ಪ್ರಮುಖ ಕೈಗಾರಿಕಾ ಕೇಂದ್ರಗಳಲ್ಲೊಂದು. ಎರಡನೇ ಮಹಾಯುದ್ಧದ ಕಾಲದಲ್ಲಿ ಸ್ಥಾಪನೆಗೊಂಡ ವಿಮಾನ ಕಾರ್ಖಾನೆ ಮೊದಲ ದೊಡ್ಡ ಕೈಗಾರಿಕೆ. ಹೆಚ್ಚಿನ ನೌಕರರು ಆಗ ಸೈಕಲ್ ಮೇಲೇ ಹೋಗುತ್ತಿದ್ದರು. ಇವರಿಗೆ ಊಟದ ಡಬ್ಬಿ ಕೊಂಡುಹೋಗುವುದು ಉಪ ಉದ್ಯಮವಾಗಿತ್ತು. ಬೆಂಗಳೂರು ನಗರದ ದಕ್ಷಿಣದಲ್ಲಿ ನನ್ನ ನೆನಪಿನಲ್ಲಿರುವ ಹಾಗೆ ಮೊದಲು ವಿಸ್ತಾರಗೊಂಡ ಬಡಾವಣೆ ನರಸಿಂಹರಾಜ ಕಾಲನಿ. ಆಗಲೇ ಚಾಮರಾಜಪೇಟೆಯಲ್ಲಿದ್ದ ನಾವು ಅದನ್ನೇ ಬಹು ದೂರ ಎಂದುಕೊಳ್ಳುತ್ತಿದ್ದುದುಂಟು. ಈಗ ಬಡಾವಣೆಗಳು ಎಲ್ಲ ದಿಕ್ಕುಗಳಲ್ಲೂ ವಿಸ್ತಾರಗೊಂಡಿವೆ. ನಗರಸಭೆಯಾಗಿ ನಗರ ಪಾಲಿಕೆಯಾಗಿದ್ದ ಊರು ಈ ಬೃಹತ್ ನಗರ ಪಾಲಿಕೆ. ಸ್ವಾತಂತ್ರ್ಯಪೂರ್ವದಲ್ಲಿ ಬೆಂಗಳೂರಿನ ಕಂಟೋನ್ಮೆಂಟ್ ವಿಭಾಗ ಬೆಂಗಳೂರು ನಗರಕ್ಕೆ ಸೇರಿದ್ದಾಗಿರಲಿಲ್ಲ. ಅದು ನೇರವಾಗಿ ಇಂಗ್ಲಿಷರ ಆಡಳಿತದಲ್ಲಿದ್ದು ಮದರಾಸು ಪ್ರೆಸಿಡೆನ್ಸಿಗೆ ಸೇರಿತ್ತು. ಬೆಂಗಳೂರಿನಲ್ಲಿ ಆಗ ಇದ್ದುದು ಸೆಂಟ್ರಲ್ ಕಾಲೇಜು ಮತ್ತು ಇಂಟರ್‌ಮೀಡಿಯೆಟ್ ಕಾಲೇಜು ಮಾತ್ರ. ಕಂಟೋನ್ಮೆಂಟಿನಲ್ಲಿದ್ದದ್ದು ಸೇಂಟ್ ಜೋಸೆಫ್ ಕಾಲೇಜು ಅಷ್ಟೆ. ನಗರದಲ್ಲಿ ಇದ್ದುದು ನಾಲ್ಕೈದು ಹೈಸ್ಕೂಲುಗಳು ಅಷ್ಟೆ. ಇಂಥ ಬೆಳವಣಿಗೆಗಳನ್ನು ದೇಶದ ಇತರ ಕಡೆಗಳಲ್ಲೂ ಗುರ್ತಿಸಬಹುದು. ಹಂತಹಂತವಾಗಿ ಕಳೆದ ದಶಕಗಳಲ್ಲಿ ಸಂಭವಿಸಿರುವ ಬೆಳವಣಿಗೆಗಳನ್ನು ಗಮನಿಸೋಣ.

(ಮುಂದುವರಿಯುವುದು)

ಸಿ. ಆರ್. ಕೃಷ್ಣರಾವ್
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫




ಶಿವಮೊಗ್ಗದ ಶ್ರೀ ಲಕ್ಷ್ಮಣ ರಾವ್ ಶಿರಸಿ ಮತ್ತು ಶ್ರೀಮತಿ ಶಾಂತಾಬಾಯಿಯವರ ಎಂಟು ಮಕ್ಕಳಲ್ಲಿ ಮೂರನೆಯವರಾಗಿ ಹೇಮಲತಾ ಬೆಂಗಳೂರಿನಲ್ಲಿ ೧೯೪೪ರ ಅಕ್ಟೋಬರ್ ೨೩ರಂದು ಜನಿಸಿದರು.

ವಿಜ್ಞಾನಿ ಶ್ರೀ ನಾರಾಯಣ ಮಹಿಷಿಯವರನ್ನು ಮದುವೆಯಾಗಿ ಬೆಂಗಳೂರಿಗೆ ಬಂದನಂತರ ೧೯೭೨ರಲ್ಲಿ ಸರ್ಕಾರಿ ಲಾ ಕಾಲೇಜಿಗೆ ಸೇರಿದ ಹೇಮಲತಾ ೧೯೭೫ರಲ್ಲಿ ಎಲ್‌ಎಲ್‌ಬಿ ಪದವೀಧರೆಯಾಗಿ ಪ್ರಖ್ಯಾತ ಹಿರಿಯ ನ್ಯಾಯವಾದಿ ದಿವಂಗತ ಕೊಠಾವಳೆಯವರ ಮಾರ್ಗದರ್ಶನದಲ್ಲಿ ಆರಂಭಿಸಿದ ಅವರ ವಕೀಲಿ ವೃತ್ತಿ ಇಂದಿಗೂ ಅಬಾಧಿತವಾಗಿ ಮುಂದುವರಿದಿದೆ. ಜೊತೆ ಜೊತೆಗೆ ಅವರು ಹಲವಾರು ವೃತ್ತಿ ಸಂಬಂಧಿ ಸಂಘಟನೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ೧೯೮೦ರಿಂದ ೧೯೮೫ರವರೆಗೆ ಅವರು ಕರ್ನಾಟಕದ ಮಹಿಳಾ ವಕೀಲರ ಫೆಡರೇಷನ್‌ನ ಕಾರ್ಯದರ್ಶಿ ಮತ್ತು ಖಜಾಂಚಿಯಾಗಿ ದುಡಿದರು. ೧೯೮೦ರಿಂದ ೧೯೮೨ರವರೆಗೆ ಕರ್ನಾಟಕ ಹೈಕೋರ್ಟ್ ವಿಭಾಗದ ವಕೀಲರ ಸಂಘದ ಜಂಟಿ ಕಾರ್ಯದರ್ಶಿಯಾಗಿಯೂ ಕಾರ್ಯ ನಿರ್ವಹಿಸಿದ್ದಾರೆ. ೧೯೮೭ರಿಂದ ೧೯೯೫ರ ವರೆಗೆ ಕರ್ನಾಟಕ ರಾಜ್ಯ ಜ್ಯೂರಿಸ್ಟ್ ಕಮಿಷನ್‌ನ ಗೌರವ ಕಾರ್ಯದರ್ಶಿಯಾಗಿಯೂ ಕೆಲಸ ಮಾಡಿದ್ದಾರೆ. ಕರ್ನಾಟಕ ಫೆಡರೇಷನ್ ಆಫ್ ವಿಮೆನ್ ಲಾಯರ್ಸ್‌ನ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದಾರೆ.

'ಜಾಯಮಾನ' ಮತ್ತು 'ತ್ರಿಶಂಕು' - ಎಂಬ ಕಥಾಸಂಕಲನ ಮತ್ತು 'ಅನುಕೂಲಕ್ಕೊಬ್ಬ ಹೆಂಡತಿ' ಎಂಬ ಲಘು ಪ್ರಬಂಧಗಳ ಸಂಗ್ರಹದ ರಚನೆಯೊಂದಿಗೆ ಆರಂಭವಾದ ಹೇಮಲತಾ ಅವರ ಬರವಣಿಗೆಯ ದಿಕ್ಕು ಕಾನೂನು ಮತ್ತು ಸಾಮಾಜಿಕ ಚಿಂತನೆಯ ಲೇಖನಗಳ ವ್ಯವಸಾಯದವರೆಗೂ ಸಾಗಿದೆ. ಹೇಮಲತಾರವರ ಕಾನೂನಿನ ಜ್ಞಾನ ಮತ್ತು ಕನ್ನಡ ಭಾಷೆಯ ಮೇಲಿನ ಪ್ರಭುತ್ವ - ಇವೆರಡರ ಸಂಗಮದಿಂದ ಕನ್ನಡದಲ್ಲಿ ಕಾನೂನಿನ ಪ್ರಚಾರಕ್ಕೆ ಶಕ್ತಿ ಬಂದಿದೆ. ಆಕಾಶವಾಣಿ ಮತ್ತು ದೂರದರ್ಶನದಲ್ಲಿ ಅವರು ನೀಡುವ ಭಾಷಣಗಳು, ನಡೆಸಿಕೊಡುವ ಫೋನ್-ಇನ್ ಕಾರ್ಯಕ್ರಮಗಳು ಕಾನೂನನ್ನು ಜನಸಾಮಾನ್ಯರತ್ತ ಕೊಂಡೊಯ್ಯುವ ಪ್ರಬಲ ಮಾಧ್ಯಮವಾಗಿವೆ. ಕರ್ನಾಟಕ ಆಡಳಿತ ಟ್ರಿಬ್ಯೂನಲ್ ೧೯೯೪ರಲ್ಲಿ ಪ್ರಕಟಿಸಿದ 'ಕರ್ನಾಟಕ ಸರ್ವೀಸಸ್ ಲಾ ಜರ್ನಲ್'ನ ಸಂಪಾದಕಿ ಹೇಮಲತಾ. ೧೯೮೪ರಿಂದ ೧೯೯೩ರವರೆಗಿನ ಹೈಕೋರ್ಟ್ ತೀರ್ಪುಗಳ ಕನ್ನಡ ಭಾಷಾಂತರ 'ಕರ್ನಾಟಕ ತೀರ್ಪುಗಳ ವರದಿ' (ಲಾ ಜರ್ನಲ್) ಯ ಸಂಪಾದಕಿ ಸಹ.

೧೯೭೯ರಲ್ಲಿ ಆರಂಭವಾದ ಕರ್ನಾಟಕ ಲೇಖಕಿಯರ ಸಂಘದ ಮೊದಲ ದಿನಗಳಿಂದಲೂ ಅದರೊಡನೆ ಸಂಬಂಧವಿರಿಸಿಕೊಂಡಿದ್ದ ಹೇಮಲತಾರವರು ೧೯೮೭ರಲ್ಲಿ ಅದರ ಅಧ್ಯಕ್ಷರಾದರು. ನಾಲ್ಕು ಅವಧಿಗಳಲ್ಲಿ ಎಂಟು ವರ್ಷಗಳ ಕಾಲ ಸಾಗಿದ ಅವರ ಅಧ್ಯಕ್ಷತೆಯ ಕಾಲ ಹೇಮಲತಾ ಮಹಿಷಿಯವರ ಬದುಕಿನಲ್ಲಿ ಒಂದು ಮಹತ್ತರ ಸಾಧನೆಯ ಕಾಲವಾದಂತೆ ಲೇಖಕಿಯರ ಸಂಘಕ್ಕೂ ಸೈದ್ಧಾಂತಿಕತೆ ಮತ್ತು ಚಳುವಳಿಯ ಸ್ವರೂಪ ಕೊಟ್ಟ ಅಪರೂಪದ ಸಂದರ್ಭ. ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆಯಾಗಿ ಹೇಮಲತಾ ತೋರಿಸಿದ ನಾಯಕತ್ವ ಗುಣಗಳು ಸಂಘ ಅಪರೂಪದ ಸಾಧನೆಯನ್ನು ತೋರಿಸಲು ಕಾರಣವಾದವು.

ಹೇಮಲತಾ ಅವರ ವಿಸ್ತಾರವಾದ ಕಾನೂನಿನ ತಿಳುವಳಿಕೆ ಅವರ ಕ್ಷೇತ್ರವನ್ನು ಹಲವು ನೆಲೆಯಲ್ಲಿ ಹಿಗ್ಗಿಸಿದೆ. ೧೯೮೪ರಿಂದ ೧೯೯೦ರವರೆಗೆ ಪ್ರಾದೇಶಿಕ ಚಲನಚಿತ್ರ ಸೆನ್ಸಾರ್ ಮಂಡಳಿಯ ಸದಸ್ಯರಾಗಿ ಕೆಲಸ ಮಾಡಿದ್ದರು. ಮಹಿಳಾ ಆಯೋಗದ ಸದಸ್ಯೆಯಾಗಿಯೂ ಒಂದು ಅವಧಿಗೆ ಕೆಲಸ ಮಾಡಿದ್ದಾರೆ. ೧೯೯೮ರಿಂದ ೨೦೦೨ರವರೆಗೆ ಭಾರತೀಯ ವಿದ್ಯಾಭವನದ ಗಾಂಧಿ ಕೇಂದ್ರದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಮತ್ತು ೧೯೯೯ರಿಂದ ೨೦೦೩ರವರೆಗೆ ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯೆಯಾಗಿ ಕಾರ್ಯ ನಿರ್ವಹಿಸಿದ್ದಾರೆ. ಇದಲ್ಲದೆ ನಿಮ್ಹಾನ್ಸ್‌ನ ನೀತಿ ಸಮಿತಿಯ ಸದಸ್ಯೆಯಾಗಿದ್ದರು. ಇನ್‌ಸ್ಟಿಟ್ಯೂಟ್ ಫಾರ್ ಸೋಷಿಯಲ್ ಅಂಡ್ ಇಕನಾಮಿಕ್ ಚೇಂಜ್‌ನ ಬೋರ್ಡ್ ಆಫ್ ಗವರ್ನರ್ಸ್‌ನ ಸದಸ್ಯೆಯಾಗಿ ಕಾರ್ಯ ನಿರ್ವಹಿಸಿದ್ದಾರೆ. ಪ್ರಸ್ತುತ ಅವರು ಅಂತರರಾಷ್ಟ್ರೀಯ ಮಾಹಿತಿ ಕಾನೂನಿನ ಇನ್‌ಸ್ಟಿಟ್ಯೂಟ್‌ನ ಗವರ್ನಿಂಗ್ ಕೌನ್ಸಿಲ್‌ನ ಸದಸ್ಯರಾಗಿ ಕೆಲಸ ಮಾಡುತ್ತಿದ್ದಾರೆ. ಅಕೆಡೆಮಿ ಫಾರ್ ಸೆಕ್ಷುಯಲ್ ಅಂಡ್ ರಿಪ್ರೊಡಕ್ಟೀವ್ ಎಜುಕೇಷನ್ ಅಂಡ್ ಸಪೋರ್ಟ್‌ನ ಟ್ರಸ್ಟಿಯಾಗಿ ಮತ್ತು ಧಾರವಾಡದ ಮಹಿಷಿ ಚಾರಿಟಬಲ್ ಟ್ರಸ್ಟ್‌ನ ಟ್ರಸ್ಟಿಯಾಗಿಯೂ ಕೆಲಸ ಮಾಡುತ್ತಿದ್ದಾರೆ.

# ಮಹಿಳಾ ಹಕ್ಕುಗಳ ಹೋರಾಟಗಾರ್ತಿ ಹೇಮಲತಾ ಮಹಿಷಿ



ಸಂದರ್ಶಕರು
ಡಾ॥ ಎನ್. ಗಾಯತ್ರಿ
ವಾಸಂತಿ ಸಾಗರ್

ಸಂದರ್ಶನ ಲೇಖನ
ವಾಸಂತಿ ಸಾಗರ್

ಛಾಯಾಚಿತ್ರ
ಡಾ॥ ಎನ್. ಗಾಯತ್ರಿ

ಇವರ ಸೇವೆಯನ್ನು ಹಲವಾರು ಸಂಘ, ಸಂಸ್ಥೆಗಳು ತಮ್ಮ ಸಂಸ್ಥೆಗಳಲ್ಲಿ ಬಳಸಿಕೊಳ್ಳಲು ಮುಂದಾದವು. ಅದರ ಫಲವಾಗಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್, ಭಾರತೀಯ ರಿಸರ್ವ್ ಬ್ಯಾಂಕ್, ಕುದುರೆಮುಖ ಕಬ್ಬಿಣ ಅದಿರು ಕಂಪೆನಿ, ಭಾರತೀಯ ವಿಜ್ಞಾನ ಮಂದಿರ, ಬೆಂಗಳೂರು ವಿಶ್ವವಿದ್ಯಾಲಯ, ಚಿತ್ರಕಲಾ ಪರಿಷತ್, ಕೇಂದ್ರೀಯ ಶಕ್ತಿ ಸಂಶೋಧನಾ ಸಂಸ್ಥೆ, ಹಂಪಿಯ ಕನ್ನಡ ವಿಶ್ವವಿದ್ಯಾಲಯ - ಈ ಸಂಸ್ಥೆಗಳಲ್ಲಿರುವ ಲೈಂಗಿಕ ಕಿರುಕುಳ ದೂರು ಸಮಿತಿಗಳಲ್ಲಿ ಸ್ವಯಂಸೇವಾ ಸಂಸ್ಥೆಯ ಪ್ರತಿನಿಧಿಯಾಗಿ, ಕಾನೂನು ತಜ್ಞೆಯಾಗಿ ನೇಮಕಗೊಂಡಿದ್ದಾರೆ. ವಾಯುಪಡೆಯ ಲೈಂಗಿಕ ಕಿರುಕುಳ ಸಮಿತಿಯ ವಿಚಾರಣೆಯಲ್ಲಿ ಹೊರಸದಸ್ಯೆಯಾಗಿ ಭಾಗವಹಿಸಿದ್ದರು.

ಸಾಹಿತ್ಯ, ಸಂಗೀತ, ನಾಟಕ, ಸಿನಿಮಾ - ಹೀಗೆ ಎಲ್ಲಾ ಕಲಾಪ್ರಕಾರಗಳಲ್ಲೂ ಸಮನಾದ ಆಸಕ್ತಿ, ಅಭಿರುಚಿ ಬೆಳೆಸಿಕೊಂಡು ಅವುಗಳ ಸಾರವನ್ನು ಆಸ್ವಾದಿಸಿ, ಅದನ್ನು ಬದುಕಿನ ಹಲವು ಕ್ಷೇತ್ರಗಳಿಗೆ ಕೊಂಡೊಯ್ದವರು ಹೇಮಲತಾ. ಪತ್ರಿಕೆ, ಭಾಷಣ, ರೇಡಿಯೋ, ದೂರದರ್ಶನ, ಬರಹ - ಎಲ್ಲಾ ಸಮೂಹ ಮಾಧ್ಯಮಗಳಲ್ಲೂ ಪ್ರವೇಶಿಸಿ ಜನಸಂಪರ್ಕದ ಬಾಗಿಲನ್ನು ತೆರೆದುಕೊಂಡರು. ತಮ್ಮ ಕಾಲದ ಎಲ್ಲ ಪ್ರಗತಿಪರ ಚಳುವಳಿಗಳಲ್ಲಿ ಭಾಗವಹಿಸುತ್ತಾ , ತಮ್ಮ ಅಪಾರ ಸಹನೆಯಿಂದ ಮಹಿಳೆಯರಿಗೆ ಸಾಂತ್ವನದ ಸಲಹೆಗಾರ್ತಿಯಾಗಿ ಮಹಿಳೆಯರಲ್ಲಿ ಸೋದರಿತ್ವದ ವಲಯವನ್ನು ಸೃಜಿಸಿದ ಹೇಮಲತಾ ಅವರ ಜೀವನ ಪ್ರೀತಿ, ಜೀವನೋತ್ಸಾಹ ಎಂದಿಗೂ ಬತ್ತದ ಒರತೆ.

**ನಮ್ಮ ನಡುವಿನ ಯಶಸ್ವಿ ನ್ಯಾಯವಾದಿ, ಬಹುಮುಖ ವ್ಯಕ್ತಿತ್ವದ ಸಾಧಕಿ, ಶ್ರೀಮತಿ ಹೇಮಲತಾ ಮಹಿಷಿಯವರನ್ನು ಮಲ್ಲೇಶ್ವರಂನಲ್ಲಿ ಇರುವ ಅವರ ಕಚೇರಿಯಲ್ಲಿ 'ಹೊಸತು' ವಿಶೇಷ ಸಂಚಿಕೆಗಾಗಿ ನಡೆಸಿದ ಸಂದರ್ಶನ ಇಲ್ಲಿದೆ.**

**ಹೊಸತು :** ನಮಸ್ಕಾರ. ನಮ್ಮ 'ಹೊಸತು' ಪತ್ರಿಕೆಯ ವಿಶೇಷಾಂಕಕ್ಕಾಗಿ ನಿಮ್ಮನ್ನು ಸಂದರ್ಶಿಸಲು ಬಂದಿದ್ದೇವೆ.

**ಹೇಮಲತಾ ಮಹಿಷಿ :** ಸಂತೋಷ.

**ಹೊಸತು :** ನಮ್ಮ ಸಮಕಾಲೀನ ಸಂದರ್ಭದಲ್ಲಿ ನೀವು ಒಬ್ಬ ಕಾನೂನು ತಜ್ಞೆಯಾಗಿ, ಲೇಖಕಿಯಾಗಿ, ಕ್ರೀಡಾಪಟುವಾಗಿ ಮತ್ತು ಸಾಹಿತ್ಯ ಸಂಘಟಕಿಯಾಗಿ ನಿಮ್ಮ ವಿಶಿಷ್ಟ ವ್ಯಕ್ತಿತ್ವದ ಛಾಪು ಮೂಡಿಸಿದ್ದೀರ. ಈ ನಿಮ್ಮ ಬೆಳವಣಿಗೆಯಲ್ಲಿ ನಿಮ್ಮ ಬಾಲ್ಯದ ಪರಿಸರ ಮತ್ತು ನಿಮಗೆ ಒತ್ತಾಸೆ ನೀಡಿದ ನಿಮ್ಮ ಕುಟುಂಬದ ಪರಿಸರ ಹೇಗಿತ್ತು ?

**ಹೇಮಲತಾ :** ನಮ್ಮ ತಂದೆ–ತಾಯಿಯವರು ಒಂದು ರೀತಿಯಲ್ಲಿ ನಮಗೆಲ್ಲಾ ಪೂರ್ತಿಯಾಗಿ ಸ್ವಾತಂತ್ರ್ಯವನ್ನು ಕೊಟ್ಟಿದ್ದರು. "ನೀನು ಹೆಣ್ಣು ಹುಡುಗಿ, ಅದು ಮಾಡಬೇಡ ಇದು ಮಾಡಬೇಡ" ಎಂದು ಯಾವತ್ತೂ ಅನ್ನುತ್ತಿರಲಿಲ್ಲ. ಶಿವಮೊಗ್ಗದಲ್ಲಿದ್ದಾಗ ನಾನು ಮತ್ತು ನನ್ನ ಗೆಳತಿ ಶ್ರುತಕೀರ್ತಿ, ಗಂಡು ಹುಡುಗರ ಟೀಮ್‌ನಲ್ಲೇ ಬಾಲ್ ಬ್ಯಾಡ್ಮಿಂಟನ್ ಪ್ರಾಕ್ಟೀಸ್ ಮಾಡುತ್ತಿದ್ದೆವು. ರಾಷ್ಟ್ರಮಟ್ಟದಲ್ಲಿಯೂ ಆಡಿದ್ದೇನೆ; ಗೆದ್ದಿದ್ದೇನೆ.

ಚಿಕ್ಕಂದಿನಿಂದಲೇ ನನಗೆ ಪುಸ್ತಕ ಓದುವ ಹುಚ್ಚು. ಮಾಸ್ತಿ, ಅ.ನ.ಕೃ., ಕೃಷ್ಣಮೂರ್ತಿ ಪುರಾಣಿಕ, ಬಸವರಾಜ ಕಟ್ಟೀಮನಿ ಮತ್ತು ಪತ್ತೇದಾರಿ ಕಾದಂಬರಿಗಳ ನರಸಿಂಹಯ್ಯ – ಹೀಗೆ ಎಲ್ಲರ ಕೃತಿಗಳನ್ನು ಓದುತ್ತಾ ಬೆಳೆದೆವು. ಸಾಹಿತ್ಯದ ಬಗ್ಗೆ ಅಭಿರುಚಿ ಹುಟ್ಟಿದ್ದು ಹೀಗೆ. ನಾವು ಶಾಲೆಗೆ ಹೋಗುತ್ತಿದ್ದಾಗ, ಕತೆ ಪುಸ್ತಕ ಓದಬೇಡಿ, ಎಂದು ಮನೆಯಲ್ಲಿ ಯಾರೂ ನಮಗೆ ಬಯ್ಯುತ್ತಿರಲಿಲ್ಲ. ಮನೆಮಂದಿಯೆಲ್ಲಾ ಓದುತ್ತಿದ್ದೆವು. ನಮ್ಮ ತಂದೆಯೂ 'ಚಂದಮಾಮ'ದಿಂದ ಹಿಡಿದು ಮಕ್ಕಳು ತಂದ ಹಲವು ಪುಸ್ತಕಗಳನ್ನು ಓದುತ್ತಿದ್ದರು. ಶಾಲೆಯಲ್ಲಿದ್ದಾಗ ನಾನು ನಾಟಕಗಳಲ್ಲಿ ಭಾಗವಹಿಸುತ್ತಿದ್ದೆ. ಹಾಡುಗಳನ್ನು ಹಾಡುತ್ತಿದ್ದೆ. ಅದೇಕೋ ನನಗೆ ಗಂಡು ಪಾತ್ರಗಳನ್ನು ಮಾಡಲು ಕೊಡುತ್ತಿದ್ದರು.

**ಹೊಸತು :** ನೀವು ವಕೀಲರಾಗುವುದಕ್ಕೆ ಮುಂಚೆ ಏನು ಮಾಡುತ್ತಿದ್ದಿರಿ ?

**ಹೇಮಲತಾ :** ಬಿ.ಎ. ಆದ ಕೂಡಲೇ ನಾನು ಓದುತ್ತಿದ್ದ ನ್ಯಾಷನಲ್ ಗರ್ಲ್ಸ್ ಹೈಸ್ಕೂಲ್‌ನಲ್ಲೇ ಕೆಲಸ ಸಿಕ್ಕಿತ್ತು. ಅಲ್ಲಿ ಪ್ರಾರಂಭದಲ್ಲಿ ಇಂಗ್ಲಿಷ್ ಮತ್ತು ಇತಿಹಾಸ




*ಶ್ರೀಮತಿ ಹೇಮಲತಾ ಮಹಿಷಿ, ಡಾ॥ ಎನ್. ಗಾಯತ್ರಿ, ಶ್ರೀಮತಿ ವಾಸಂತಿ ಸಾಗರ್*

ಕಲಿಸುತ್ತಿದ್ದೆ. ಜೊತೆಗೆ, ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ ನಾನು ಚರಿತ್ರೆಯಲ್ಲಿ ಎಂ.ಎ. ಮಾಡಿದೆ. ನಂತರ ನಮ್ಮ ಸಂಸ್ಥೆಯದೇ ಕಸ್ತೂರ ಬಾ ಪಿ.ಯು.ಸಿ. ಕಾಲೇಜು ಶುರುವಾಗಿತ್ತು. ಅಲ್ಲಿ ಒಂದು ವರ್ಷ ಪಾಠ ಮಾಡಿದೆ. ಅದಾದ ಮೇಲೆ ಅದೇ ಸಂಸ್ಥೆಯ ಕಮಲ ನೆಹರು ಕಾಲೇಜಿನಲ್ಲಿ ಉಪಾಧ್ಯಾಯಿನಿಯಾಗಿ ಮೂರು ವರ್ಷ ಪಾಠ ಮಾಡಿದೆ. ೧೯೬೯ರಲ್ಲಿ ಮದುವೆ ಆಯಿತು. ಆದ್ರೆ ಮದುವೆ ಆದ ಒಂದು ತಿಂಗಳಿಗೆ ನನ್ನ ಪತಿ ಅಮೆರಿಕಕ್ಕೆ ಹೆಚ್ಚಿನ ಓದಿಗೆ ಹೋದರು, ಹಾಗಾಗಿ ಅವರು ಅಲ್ಲಿಂದ ಬಂದ ನಂತರ ಆ ವರ್ಷದ ಶೈಕ್ಷಣಿಕ ವರ್ಷ ಪೂರ್ತಿ ಮಾಡ್ಕೊಂಡು ೧೯೭೧ರಲ್ಲಿ ಬೆಂಗಳೂರಿಗೆ ಬಂದು ೧೯೭೨ರಲ್ಲಿ ನಮ್ಮ ಮನೆಯವರ ಸಲಹೆಯ ಮೇರೆಗೆ ಕಾನೂನು ತರಗತಿಗೆ ದಾಖಲಾದೆ.

**ಹೊಸತು :** ನೀವು ಬರವಣಿಗೆಗೆ ತೊಡಗಿಕೊಂಡದ್ದು ಯಾವಾಗ ?

**ಹೇಮಲತಾ :** ಮದುವೆ ಆದಮೇಲೆ ಸಾಹಿತ್ಯಲೋಕಕ್ಕೆ ತಿರುಗಿಕೊಂಡೆ. ನನ್ನ ಗಂಡನ ಮನೆಯಲ್ಲಿ ಸಾಹಿತ್ಯದ ವಾತಾವರಣವಿತ್ತು. ನನ್ನ ಗಂಡನ ಸೋದರಿಯರಾದ ಸರೋಜಿನಿ ಮಹಿಷಿ, ಚಂಪಾ ಮಹಿಷಿಯವರು ಹಾಗೂ ನನ್ನ ಗಂಡ ಡಾ॥ ನಾರಾಯಣ ಮಹಿಷಿ ಕೂಡ ಬರೆಯುತ್ತಿದ್ದರು. ನನ್ನ ಗಂಡ ನನಗೆ ಬರೆಯಲಿಕ್ಕೆ ಪ್ರಯತ್ನ ಮಾಡು ಎಂದು ಪ್ರೋತ್ಸಾಹ ನೀಡಿದರು. ಆರಂಭದಲ್ಲಿ ಸ್ವಲ್ಪ ಒತ್ತಾಯದಿಂದಲೇ ಬರೆಸಿದರು ಎಂದೆನ್ನಬಹುದು. ನನ್ನ ಪ್ರಾರಂಭದ ಬರವಣಿಗೆಗೆ 'ಸಂಯುಕ್ತ ಕರ್ನಾಟಕ' ಬಳಗದಿಂದ ಪ್ರೋತ್ಸಾಹ ಸಿಕ್ಕಿತು. ನಂತರ ಬರವಣಿಗೆ ಸುಧಾ, ಪ್ರಜಾವಾಣಿಯಲ್ಲಿ ಪ್ರಕಟಗೊಳ್ಳುತ್ತಿತ್ತು. ಇಲ್ಲಿ ಮುಖ್ಯವಾಗಿ ಜಿ. ಎನ್. ರಂಗನಾಥ್ ರಾವ್ ಮತ್ತು ಎಂ. ಬಿ. ಸಿಂಗ್ ಅವರನ್ನು ನೆನಪಿಸಿಕೊಳ್ಳಬಹುದು.

**ಹೊಸತು :** ಆಗ ನೀವು ಎಂತಹ ಬರವಣಿಗೆಯಲ್ಲಿ ತೊಡಗಿಕೊಂಡಿದ್ದಿರಿ ?

**ಹೇಮಲತಾ :** ೧೯೭೫ರಲ್ಲಿ ಅಂತರರಾಷ್ಟ್ರೀಯ ಮಹಿಳಾ ವರ್ಷ. ಎಲ್ಲಾ ಕಡೆ ಮಹಿಳೆಯರ ಹಕ್ಕುಗಳ ಬಗ್ಗೆ ಚರ್ಚೆ. ನಾನು ಆಗ ತಾನೆ ಕಾನೂನು ಪದವಿ ಪಡೆದುಕೊಂಡಿದ್ದೆ. ಹಾಗಾಗಿ ಕಾನೂನನ್ನು ಒಂದು ಹೊಸ ದೃಷ್ಟಿಯಿಂದ ನೋಡೋದಕ್ಕೆ ಒಂದು ಅವಕಾಶವಾಯ್ತು. ಮಹಿಳೆಯ ದೃಷ್ಟಿಕೋನದಿಂದ ಕಾನೂನಿನ ಪರಿಣಾಮ ಮತ್ತು ಸಾಧ್ಯತೆಯನ್ನು ನೋಡಿದಾಗ ಅದರ ಅರ್ಥ ಬೇರೆಯಾಗಿ ಕಂಡಿತು. ನನ್ನ ಕಾನೂನು ಲೇಖನಗಳು ಆಮೇಲೆ ಶುರುವಾದುವು. ಅಲ್ಲಿಯ ತನಕ ಕಥೆಗಳನ್ನು ಬರೆಯುತ್ತಿದ್ದೆ. ಆಗ ನವ್ಯದ ಗಾಳಿ ಇತ್ತು. ಆ ನಂತರ ಬೇರೆ ಬೇರೆ ಮಹಿಳಾಪರ ವಿಷಯಗಳ ಬಗ್ಗೆ ಬರೆಯುತ್ತಿದ್ದೆ.

**ಹೊಸತು :** ನಿಮಗೆ ಕಾನೂನಿನ ಬಗ್ಗೆ ಆಸಕ್ತಿ ಹುಟ್ಟಿದ್ದು ಹೇಗೆ ?

**ಹೇಮಲತಾ :** ನನಗೆ ಮುಂಚಿನಿಂದಲೂ ಕಾನೂನನ್ನು ಒಂದು ವಿಷಯವಾಗಿ ಅಭ್ಯಸಿಸಬೇಕು ಅಂತ ಇಷ್ಟ ಇತ್ತು. ಬೆಂಗಳೂರಿಗೆ ಬಂದ ನಂತರ ನನ್ನ ಗಂಡ ಕಾನೂನು ಪದವಿ ಬಗ್ಗೆ ಕೇಳಿದ ತಕ್ಷಣ ಇದೇ ಅವಕಾಶ ಅಂತ ಹೇಳಿ ಸೇರ್ಕೊಂಡುಬಿಟ್ಟೆ. ೧೯೭೨–೭೫ರಲ್ಲಿ ಪದವಿ ಮುಗಿಸಿ ತಕ್ಷಣ ಪ್ರಾಕ್ಟೀಸಿಗೆ ಸೇರ್ಕೊಂಡುಬಿಟ್ಟೆ.

**ಹೊಸತು :** ಆ ಕಾಲದಲ್ಲಿ ವಕೀಲೆಯರಾಗಿ ಕೆಲಸ ಮಾಡುವ ಅನುಭವ ಹೇಗಿತ್ತು ?

**ಹೇಮಲತಾ :** ಆವಾಗ ಬೆಂಗಳೂರಿನಲ್ಲಿ ಇದ್ದದ್ದು ಸರ್ಕಾರಿ ಕಾನೂನು ಕಾಲೇಜು ಒಂದೇ. ಇಡೀ ಕಾಲೇಜಿನಲ್ಲಿ ಇದ್ದ ೨೦೦ ಜನ ವಿದ್ಯಾರ್ಥಿಗಳಲ್ಲಿ ಮೂರೂ ವರ್ಷವೂ ಪಾಸ್ ಆಗುತ್ತಾ ಬಂದವರು ಬರೀ ಏಳೇ ಜನ. ಆ ಏಳು ಜನರಲ್ಲಿ ಮೂವರು ಹುಡುಗಿಯರು. ನನಗಿಂತ ಮೊದಲು ಅನುಸೂಯಮ್ಮ ಮತ್ತು ಲಲಿತಮ್ಮ ಹಾಗೂ ಇತರ ಹಿರಿಯ ಮಹಿಳಾ ವಕೀಲರು ಇದ್ದರು.

**ಹೊಸತು :** ನ್ಯಾಯಾಲಯಗಳಲ್ಲಿ ಹೆಣ್ಣುಮಕ್ಕಳಿಗೆ ಅವಕಾಶಗಳು ಸುಲಭವಾಗಿದ್ದವೇ ?

**ಹೇಮಲತಾ :** ಆವಾಗ ಹೆಣ್ಣುಮಕ್ಕಳಿಗೆ ಕಾನೂನು ವೃತ್ತಿ ಸರಿಯಾದುದಲ್ಲ ಎನ್ನುವ ಭಾವನೆ ಇತ್ತು. ಬಂದು ಸೇರಿದವರು ಸಹ ಹಾಗೇ ಮಾಡ್ತಾ ಇದ್ದರು. ಮದುವೆಯಾಗದವರೂ ಇರುತ್ತಿದ್ದರು. ಅನೇಕರು ಒಂದು ನಾಲ್ಕು ದಿವಸ ಬಂದು ನಂತರ ಮದುವೆ ಮಾಡಿಕೊಂಡು ಹೊರಟು ಹೋಗ್ತಿದ್ದರು. ಪ್ರಾಕ್ಟೀಸ್ ಮಾಡುವುದು ಅಂದರೆ ಬೆಳಗ್ಗೆ ಆಫೀಸ್‌ಗೆ ಹೋಗ್ಬೇಕು, ನಂತರ ಕೋರ್ಟ್‌ಗೆ ಹೋಗ್ಬೇಕು, ಆಮೇಲೆ ಸಂಜೆಯ ವೇಳೆಯಲ್ಲಿ ಕಕ್ಷಿದಾರರನ್ನು ನೋಡಬೇಕು. ಇವೆಲ್ಲದ್ದಕ್ಕೂ ಸಮಯ ಹೊಂದಿಸಲು ಮದುವೆಯಾದ ಹೆಣ್ಣುಮಕ್ಕಳಿಗೆ ಸಾಧ್ಯವಾಗುವುದಿಲ್ಲ ಎಂಬ ಭಾವನೆ ಆಳವಾಗಿ ಬೇರೂರಿತ್ತು. ಇವರು ವೃತ್ತಿಯಲ್ಲಿ ನಿಲ್ಲಬಹುದು – ನಿಂತು ಹೆಸರು ಮಾಡಬಹುದು ಅನ್ನುವ ಭಾವನೆ ಇರಲಿಲ್ಲ. ಅನುಸೂಯಮ್ಮ ಅವರದು ಕ್ರಿಮಿನಲ್ ಪ್ರಾಕ್ಟೀಸ್. ಪ್ರಮೀಳಾ ನೇಸರ್ಗಿ ಚುನಾವಣೆ, ಮತ್ತಿತರ ವಿಷಯಗಳನ್ನು ಕುರಿತು ಪ್ರಾಕ್ಟೀಸ್ ಮಾಡ್ತಾ ಇದ್ರು.

**ಹೊಸತು :** ಪ್ರಾರಂಭದಲ್ಲಿ ನಿಮ್ಮದೇ ಆಫೀಸ್ ಮಾಡ್ಕೊಂಡಿದ್ದಿರಾ ?

**ಹೇಮಲತಾ :** ವಕೀಲೆ ವಸುಧಾ ರಾಮಭದ್ರರವರ ಕಚೇರಿಯಲ್ಲಿ ಒಂದು ವರ್ಷ ಕೆಲಸ ಮಾಡಿದೆ. ಅವರು ನನಗೆ ಪೂರ್ಣ ಜವಾಬ್ದಾರಿ ನೀಡಿದ್ದರು. ಹಾಗಾಗಿ ಅಲ್ಲಿ ಚೆನ್ನಾಗಿ ಕೆಲಸವನ್ನು ಕಲಿಯಲು ಸಾಧ್ಯವಾಯಿತು. ನಂತರ ನನ್ನದೇ ಸ್ವಂತ ಪ್ರಾಕ್ಟೀಸ್ ಶುರು ಮಾಡ್ಕೊಂಡೆ. ಹಾಗೇ ನಡೀತಿತ್ತು, ಆಮೇಲೆ ನನ್ನ ಸೀನಿಯರ್ ಕೋತಾವಳೆಯವರು ಸರಕಾರಿ ಪ್ಲೀಡರ್ ಆದರು. ಅವರ ಆಫೀಸಿಗೆ ಸೇರಿಕೊಂಡೆ. ಒಳ್ಳೆ ಆಫೀಸು, ತುಂಬ ದೊಡ್ಡ ಪ್ರಾಕ್ಟೀಸ್ ಇರುತ್ತಿತ್ತು. ಆಗೆಲ್ಲಾ ಭೂ ಸುಧಾರಣೆ ಹಾಗೂ ಸಿವಿಲ್ ವ್ಯಾಜ್ಯಗಳೇ ಹೆಚ್ಚು. ಮೊದಲಿಗೆ ಸ್ವಲ್ಪ

ಕಷ್ಟವಾದರೂ ನಂತರ ಜವಾಬ್ದಾರಿ ವಹಿಸಿಕೊಂಡು ಹೆಚ್ಚು ಓದಿ ಕೆಲಸ ಮಾಡಿದೆ. ಚೆನ್ನಾಗಿ ಅನುಭವ ಆಗಿ, ಧೈರ್ಯವೂ ಬಂತು. ಅಲ್ಲದೆ ನ್ಯಾಯಾಧೀಶರೂ ಸಹ ಜ್ಯೂನಿಯರ್ಸ್‌ಗೆ ಬಹಳ ಚೆನ್ನಾಗಿ, ತುಂಬ ಪ್ರೋತ್ಸಾಹ ನೀಡುತ್ತಿದ್ದರು.

ಮಹಿಳಾ ವಕೀಲರಿಗೆ ಸೂಕ್ತ ಗೌರವ ನೀಡುವುದು ಅಷ್ಟೇ ಅಲ್ಲ, ಓದ್ಕೊಂಡು ಬಂದು ಚೆನ್ನಾಗಿ ಕೆಲಸ ಮಾಡಿದಾಗ ಹೊಗಳುತ್ತಿದ್ದರು. ಹಿರಿಯ ವಕೀಲರೂ ಸಹ ಚೆನ್ನಾಗಿ ಮಾಡ್ತಾರೆ ಅಂತ ಹೇಳಿದಾಗ ಮಹಿಳಾ ವಕೀಲರಿಗೂ ಸ್ವಲ್ಪಮಟ್ಟಿಗೆ ಪ್ರಕಾಶಕ್ಕೆ ಬರುವ ಅವಕಾಶ ಉಂಟಾಯಿತು. ಆಮೇಲೆ ಬೇರೆ ವಕೀಲರೂ ತಮ್ಮ ಮನೆಯ ಹೆಣ್ಣುಮಕ್ಕಳನ್ನು ಕಾನೂನು ಪದವಿಗೆ ಸೇರಿಸಲು ಶುರು ಮಾಡಿದರು. ಹಾಗಾಗಿ ಬರ್ತಾ ಬರ್ತಾ ಹೆಣ್ಣುಮಕ್ಕಳೂ ಚೆನ್ನಾಗಿ ವಕೀಲಿ ವೃತ್ತಿ ಮಾಡ್ತಾರೆ ಅಂತ ಆಯಿತು. ನಂತರ ಈಗ ಎಷ್ಟರಮಟ್ಟಿಗೆ ಬಂದಿದೆ ಎಂದರೆ ಹೆಣ್ಣುಮಕ್ಕಳೇ ಹೆಚ್ಚು ದಕ್ಷತೆಯಿಂದ ಕೆಲಸ ಮಾಡುತ್ತಾರೆ ಎಂಬ ನಂಬಿಕೆ ಬಂದಿದೆ. ಇವತ್ತು ಬೇಕಾದಷ್ಟು ಜನ ಮಹಿಳೆಯರು ಈ ವೃತ್ತಿಯಲ್ಲಿ ಇದ್ದಾರೆ.

**ಹೊಸತು :** ಇಷ್ಟು ಕೆಲಸದ ಒತ್ತಡದ ನಡುವೆಯೂ ನೀವು ಲೇಖಕಿ ಹೇಗೆ ಆದ್ರಿ ? ನಿಮ್ಮ ಇತರ ಚಟುವಟಿಕೆಗಳಿಗೆ ಸಮಯ ಹೇಗೆ ಹೊಂದಿಸಿದಿರಿ ?

**ಹೇಮಲತಾ :** ಬಹುಶಃ ಎಲ್ಲ ಕೆಲಸಗಳೂ ಒಂದಕ್ಕೊಂದು ಪೂರಕ ಆಗುತ್ತೆ ಅಂತ ಕಾಣಿಸುತ್ತದೆ. ಚಟುವಟಿಕೆಯಿಂದ ಇದ್ದು ಹೆಚ್ಚು ಕೆಲಸ ಮಾಡುವವರಿಗೆ ಏನಾದರೂ ಮಾಡುವುದಕ್ಕೆ ಆಗುತ್ತೆ. ಮನಸ್ಸು ಇದ್ದರೆ ಎಲ್ಲಾ ಸಾಧ್ಯ. ಆಗ ಕೋರ್ಟ್‌ನಲ್ಲೂ ತುಂಬ ಕೆಲಸ ಇರುತ್ತಿತ್ತು. ನಂತರ ಚಲನಚಿತ್ರ ಸೆನ್ಸಾರ್ ಬೋರ್ಡ್‌ನಲ್ಲಿ ಕೆಲಸ ಮಾಡಿದೆ. ಅವರು ಯಾವಾಗ ಕರೆದರೆ ಆಗ ಹೋಗಿ ಸಿನಿಮಾ ನೋಡ್ಬೇಕು. ಆಮೇಲೆ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸದಸ್ಯಳಾಗಿ ಕೆಲಸ ಮಾಡಿದೆ. ಹಂಪಿ ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯೆಯಾಗಿದ್ದಾಗ ಹಂಪಿಗೆ ಹೋಗಬೇಕಾಗುತ್ತಿತ್ತು.

**ಹೊಸತು :** ನೀವು ಲೇಖಕಿಯರ ಸಂಘಟನೆಗೆ ಪ್ರವೇಶ ಮಾಡಿದ್ದು ಹೇಗೆ ?

**ಹೇಮಲತಾ :** ಬೆಂಗಳೂರಿಗೆ ಬಂದಮೇಲೆ ಇಲ್ಲಿನ ಲೇಖಕಿಯರ ಪರಿಚಯ





ಆಯಿತು. ಸುಮಾರು ಹದಿನೈದು ಜನ ಲೇಖಕಿಯರು ಒಬ್ಬೊಬ್ಬರ ಮನೆಗಳಲ್ಲಿ ಒಂದೊಂದು ದಿವಸ ಸೇರುತ್ತಿದ್ದೆವು. ಆಗಿನ ಎಲ್ಲಾ ಪ್ರಮುಖ ಲೇಖಕಿಯರೂ ಇರುತ್ತಿದ್ದರು. ನಿರುಪಮಾ, ಅನುಪಮಾ, ಸುನಂದಮ್ಮ, ನೀಳಾದೇವಿ, ಪಂಕಜಾ... ಹೀಗೆ. ಒಟ್ಟಾರೆ, ಸಮಾನ ಮನಸ್ಕರು ಒಂದುಕಡೆ ಸೇರಿ ಸಾಹಿತ್ಯದ ಬಗ್ಗೆ ಚರ್ಚೆ ಮಾಡುತ್ತಿದ್ದೆವು.

ಅದು ಹಲವಾರು ವರ್ಷ ನಡೆಯಿತು. ಆಗ ಶ್ರೀ ಜಿ. ನಾರಾಯಣ ಅವರು ಲೇಖಕಿಯರದೇ ಆದ ಸಂಘ ಮಾಡಿಕೊಳ್ಳಿ ಎಂದು ಸಲಹೆ ನೀಡಿದರು. ಹೀಗೆ ೧೯೭೯ರಲ್ಲಿ ಲೇಖಕಿಯರ ಸಂಘ ಪ್ರಾರಂಭವಾಯಿತು. ಅದರ ಮೊದಲ ಅಧ್ಯಕ್ಷೆ ಟಿ. ಸುನಂದಮ್ಮ ಆದರು. ಅದಾದ ಮೇಲೆ ಎಚ್. ಎಸ್. ಪಾರ್ವತಿಯವರು ಅಧ್ಯಕ್ಷರಾದರು. ನಂತರ ನನ್ನನ್ನು ಅಧ್ಯಕ್ಷಳಾಗುವಂತೆ ಕೇಳಿಕೊಂಡರು. ನಾನು ಕನಸು ಮನಸ್ಸಿನಲ್ಲೂ ಲೇಖಕಿಯರ ಸಂಘದ ಅಧ್ಯಕ್ಷಳಾಗಬೇಕು ಅಂತ ಅಂದುಕೊಂಡಿರಲಿಲ್ಲ. ಹಾಗಾಗಿ ಶ್ರೀ ನಾರಾಯಣ ಅವರ ಮಾತಿಗೆ ಗೌರವ ಕೊಟ್ಟು ಅಧ್ಯಕ್ಷಳಾದೆ.

**ಹೊಸತು :** ನಿಮ್ಮ ಅವಧಿಯಲ್ಲಿ ಲೇಖಕಿಯರ ಸಂಘದ ಮೂಲಕ ಮಹಿಳಾ ಸಾಹಿತ್ಯಕ್ಕೆ ಸಂದ ಕೊಡುಗೆಯ ಬಗ್ಗೆ ಹೇಳುತ್ತೀರಾ ?

**ಹೇಮಲತಾ :** ಸಂಘಟನಾತ್ಮಕವಾಗಿ ಲೇಖಕಿಯರನ್ನು ಹತ್ತಿರ ತಂದದ್ದು ಲೇಖಕಿಯರ ಸಂಘ. ನನ್ನ ಜೊತೆಯಲ್ಲಿ ನೀವು (ಗಾಯತ್ರಿ), ಸುಮಿತ್ರಾಬಾಯಿ, ನೇಮಿಚಂದ್ರ, ಶಾಂತಾ ನಾಗರಾಜ್, ವಿಜಯಾ ದಬ್ಬೆ ಅವರು ತುಂಬ ಕೆಲಸ ಮಾಡಿದರು. ನಮ್ಮದು ಪ್ರಶಸ್ತಿ ಕೊಡುವ ಸಂಘ ಮಾತ್ರವಾಗಿ ಉಳಿಯದೆ, ರಚನಾತ್ಮಕವಾಗಿ ಕೆಲಸ ಮಾಡಬೇಕು ಎಂದು ನಿರ್ಧರಿಸಿದೆವು. ಅಂದಿನ ಕಾಲದಲ್ಲಿ ಪ್ರಚಲಿತವಾಗಿದ್ದ ಸ್ತ್ರೀವಾದದ ಹಿನ್ನೆಲೆಯಲ್ಲಿ ಮಹಿಳಾ ಚಳುವಳಿಯ ಭಾಗವಾಗಿ ಲೇಖಕಿಯರ ಸಂಘದ ಕೆಲಸ ಮಾಡಿದೆವು. ನಮ್ಮಲ್ಲಿದ್ದ ಎಲ್ಲರೂ ಅವರವರ ಕ್ಷೇತ್ರಗಳಲ್ಲಿ ಮಹಿಳಾ ಚಳುವಳಿಯಲ್ಲಿ ತೊಡಗಿದವರೇ ಆಗಿದ್ದರು. ಆಗ ಹಲವಾರು ಸಾಹಿತ್ಯ ಶಿಬಿರಗಳನ್ನು, ವಿಚಾರ ಸಂಕಿರಣಗಳನ್ನು ನಡೆಸಿದೆವು. ಸ್ತ್ರೀವಾದಿ ಪರಂಪರೆಯನ್ನು ಗುರುತಿಸುವ, ಕಟ್ಟಿಕೊಳ್ಳುವ ಪ್ರಯತ್ನವಾಗಿ ಮರೆವಿಗೆ ಸರಿದಿದ್ದ ನಮ್ಮ ಹಿರಿಯ ಲೇಖಕಿಯರ ಬದುಕು–ಬರಹಗಳನ್ನು ಪರಿಚಯಿಸುವ ಕೃತಿಗಳನ್ನು ತಂದೆವು. ಬೆಳಗೆರೆ ಜಾನಕಮ್ಮ, ಶ್ಯಾಮಲಾ ಸಂಚಯ, ಕಲ್ಯಾಣ ಸರಸ್ವತಿ, ಪುಸ್ತಕಗಳು ಪ್ರಕಟವಾದದ್ದು ಹೀಗೆ. ತಿರುಮಲಾಂಬ, ಎಚ್. ವಿ. ಸಾವಿತ್ರಮ್ಮನವರನ್ನು ಕುರಿತ ವಿಚಾರ ಸಂಕಿರಣ ನಡೆಸಿದೆವು. ಗಿರಿಬಾಲೆಯವರು ಉಡುಪಿಯ ಹತ್ತಿರವಿದ್ದ ಬಗ್ಗೆ ಯಾರಿಗೂ ಗೊತ್ತಿರಲಿಲ್ಲ. ಅವರನ್ನು ಲೇಖಕಿಯರ ಸಮ್ಮೇಳನಕ್ಕೆ ಆಹ್ವಾನಿಸಿ ಸನ್ಮಾನಿಸಿದೆವು. ಕಲ್ಯಾಣಮ್ಮನವರ

ಶತಮಾನೋತ್ಸವ, ಸುನಂದಮ್ಮನವರ ಸಮಗ್ರ ಕೃತಿಗಳ ಬಿಡುಗಡೆ, ಎಂ. ಕೆ. ಇಂದಿರಾ ಅವರಿಗೆ ಸನ್ಮಾನ – ಮುಂತಾದ ಕಾರ್ಯಕ್ರಮಗಳನ್ನು ನಡೆಸಿದೆವು. ಅದು ಸಾಹಿತ್ಯದಲ್ಲಿ ಸ್ತ್ರೀವಾದ ಆರಂಭದ ಅಲೆ ಬೀಸಲು ಶುರುವಾದ ಕಾಲ. ಈ ಪರಿಕಲ್ಪನೆಯನ್ನು ಹೆಚ್ಚು ವಿಸ್ತೃತವಾಗಿ ಮತ್ತು ಆಳವಾಗಿ ಚರ್ಚಿಸಲು ಎರಡು ದಿನಗಳ ರಾಜ್ಯಮಟ್ಟದ ಕಾರ್ಯಾಗಾರವನ್ನು ಮಡಿಕೇರಿಯಲ್ಲಿ ನಡೆಸಿದೆವು. ನಂತರ 'ಸ್ತ್ರೀವಾದಿ ಪ್ರವೇಶಿಕೆ' ಯನ್ನು ಪ್ರಕಟಿಸಿದೆವು. ಹೀಗೆ ಲೇಖಕಿಯರ ಪರಂಪರೆಯನ್ನು ಕಂಡುಕೊಳ್ಳುವ ಕೆಲಸವನ್ನು ನನ್ನ ಕಾರ್ಯಾವಧಿಯಲ್ಲಿ ಮಾಡಿದ್ದನ್ನು ನಾನು ಮುಖ್ಯವಾಗಿ ನೆನಪಿಸಿಕೊಳ್ಳುತ್ತೇನೆ. ಆಗ ನಮ್ಮೊಂದಿಗೆ ಕರಾವಳಿ ಲೇಖಕಿಯರು ಮತ್ತು ಉತ್ತರ ಕರ್ನಾಟಕದ ಲೇಖಕಿಯರು ಕೈ ಜೋಡಿಸಿದರು. ಲೇಖಕಿಯರ ಸಂಘದ ಪ್ರತಿಷ್ಠಿತ ಪ್ರಶಸ್ತಿಯಾದ ಅನುಪಮಾ ಪ್ರಶಸ್ತಿ ಸ್ಥಾಪಿತವಾದದ್ದು ನನ್ನ ಅಧ್ಯಕ್ಷತೆಯ ಅವಧಿಯಲ್ಲಿ.

**ಹೊಸತು :** ಮಹಿಳಾ ದಶಕದ ಅವಧಿಯಲ್ಲಿಂದ ಇಲ್ಲಿಯವರೆಗಿನ ಮಹಿಳಾ ಚಳುವಳಿಗೆ ನೀವು ಸಾಕ್ಷಿಯಾಗಿದ್ದೀರ. ಈ ಪ್ರಕ್ರಿಯೆಯ ಬದಲಾವಣೆಯ ಬಗ್ಗೆ ನಿಮಗೇನು ಅನ್ನಿಸುತ್ತೆ ?

**ಹೇಮಲತಾ :** ನಾನು ಈಗ ಮಾತಾಡಿದ್ದು ಅದರ ಭಾಗವೇ. ಆಗ ಮಹಿಳಾ ಚಳುವಳಿ ಯೆಂದರೆ, ಮಹಿಳೆಯರನ್ನು ಒಂದು ಸಮುದಾಯವಾಗಿ ಪರಿಭಾವಿಸುತ್ತಿದ್ದೆವು. ಎಲ್ಲ ಜಾತಿಯ, ಧರ್ಮದ, ವರ್ಗದ ಮಹಿಳೆಯರ ಸಮಸ್ಯೆಗಳನ್ನು ಜೆಂಡರ್ ನೆಲೆಯಿಂದ ನೋಡುತ್ತಿದ್ದೆವು. ಅಂತಹ ಹೇಳಿಕೊಳ್ಳುವ ವೈರುಧ್ಯವಿರುತ್ತಿರಲಿಲ್ಲ. ವರದಕ್ಷಿಣೆಯ ಸಮಸ್ಯೆ, ಅತ್ಯಾಚಾರ – ಎಲ್ಲಾ ಮಹಿಳೆಯರಿಗೆ ಸಂಬಂಧಪಟ್ಟಿದ್ದು. ಆದರೆ ನಂತರದಲ್ಲಿ, ಅಂದರೆ ಈಗ, ಐಡೆಂಟಿಟಿಯ ಸಮಸ್ಯೆ ಬಂದಿದೆ. ಭಿನ್ನ ಭಿನ್ನ ಸಮುದಾಯಗಳು ತಮ್ಮ ತಮ್ಮ ಸಮಸ್ಯೆಗಳನ್ನು ತಾವೇ ನಿರ್ವಹಿಸುತ್ತೇವೆ ಅನ್ನುತ್ತಿದ್ದಾರೆ. ಆದ್ದರಿಂದ ಕೆಲವೊಮ್ಮೆ ಅದನ್ನು ಜೆಂಡರ್ ಸಮಸ್ಯೆಯಾಗಿ ನೋಡದೆ, ಧರ್ಮದ ಸಮಸ್ಯೆಯಾಗಿ, ಜಾತಿಯ ಸಮಸ್ಯೆಯಾಗಿ ನೋಡಲಾಗುತ್ತಿದೆ.

ಅಲ್ಲದೆ, ಈಗಿನ ಸಮಸ್ಯೆಗಳ ಸ್ವರೂಪವೂ ಬೇರೆಯಾಗಿದೆ. ಲಿವ್ ಇನ್ ಸಂಬಂಧ, ಬಾಡಿಗೆ ತಾಯಂದಿರ ವ್ಯವಸ್ಥೆ, ಸಲಿಂಗ ಸಂಬಂಧ, ಲೈಂಗಿಕ ಕಾರ್ಯಕರ್ತರ ಬೇಡಿಕೆ, ಲಿಂಗ ಬದಲಾವಣೆ ವಿಷಯ, ಬಾರ್‌ಗಳಲ್ಲಿ ರಾತ್ರಿ ಪಾಳಿ ಬಯಸುವ ಮಹಿಳೆಯರು – ಹೀಗೆ ಸಮಸ್ಯೆಗಳು ಮಹಿಳೆಯರ ಮೊದಲಿನ ಸರಳ ಕೌಟುಂಬಿಕ ಈಕ್ವೇಷನ್ ಗಳಿಗಿಂತ ಭಿನ್ನವಾಗಿವೆ, ಜಟಿಲವಾಗಿವೆ. ಚೌಕಟ್ಟನ್ನು ಮೀರಿವೆ. ಆದರೆ ಇದರಲ್ಲಿಯೂ ಮಹಿಳೆಯ ಶೋಷಣೆಗೆ ಅವಕಾಶವಿದೆ. ಇಂತಹ ಒಂದೊಂದು ಪ್ರತ್ಯೇಕ ವಿಷಯ ಗಳಿಗಾಗಿಯೇ ಕೆಲಸ ಮಾಡುತ್ತಿರುವ ಸಂಸ್ಥೆಗಳಿವೆ. ಮಹಿಳಾ ಸಂಘಟನೆಗಳಿಗೆ ಇಂತಹ ಹೊಸ ವಿಷಯಗಳ ಬಗ್ಗೆ ನಿಲುವನ್ನು ಖಚಿತಗೊಳಿಸಿಕೊಳ್ಳುವ ಅವಶ್ಯಕತೆಯಿದೆ.

**ಹೊಸತು :** ಮಹಿಳಾ ಜಾಗೃತಿಯನ್ನು ಉಂಟುಮಾಡುವುದರಲ್ಲಿ ಮಹಿಳಾ ದಶಕ ಯಶಸ್ವಿಯಾಯಿತು ಎಂದು ನಿಮಗೆ ಅನ್ನಿಸುತ್ತಿದೆಯಾ ?

**ಹೇಮಲತಾ :** ಖಂಡಿತ ಯಶಸ್ವಿಯಾಗಿದೆ ಎನ್ನಬಹುದು. ಎಲ್ಲಾ ಗುಂಪುಗಳಲ್ಲಿ ಒಂದು ರೀತಿಯ ತಿಳುವಳಿಕೆ ಉಂಟಾಗಿದೆ. ಇದರಿಂದ ತಮ್ಮ ತಮ್ಮದೇ ಸಂಘಗಳನ್ನು ಮಾಡ್ಕೊಂಡರು. ಒಟ್ಟಾರೆಯಾಗಿ, ತಿಳುವಳಿಕೆಯ ವಾತಾವರಣ ಖಂಡಿತವಾಗಿಯೂ ಮೂಡಿತು. ಅವತ್ತು ಎಲ್ಲಾ ಮಹಿಳೆಯರು ಒಟ್ಟಾಗಿ ಕೆಲಸ ಮಾಡಿದ ಕಾರಣ ಸರಕಾರದ ಮೇಲೆಯೂ ಒತ್ತಡ ತರಲು ಸಾಧ್ಯವಾಯಿತು, ಹೊಸ ಕಾಯಿದೆಗಳು, ತಿದ್ದುಪಡಿಗಳು ಆದವು. ಇದರಿಂದ ಸ್ವಲ್ಪವಾದ್ರೂ ಸುಧಾರಣೆ ಆಗಿದೆ. ಸರಕಾರದ ತನಕ ಧ್ವನಿ ಕೇಳಬೇಕು ಅಂದ್ರೆ ಒಂದು ದೊಡ್ಡ ಮಹಾ ಒಕ್ಕೂಟ ಮಾಡಿಕೊಳ್ಳಬೇಕಾಗುತ್ತದೆ. ಆದರೆ ತಾತ್ವಿಕ ಬಹುತ್ವದ ಹಿನ್ನೆಲೆಯಲ್ಲಿ ಇದು ಕಷ್ಟಸಾಧ್ಯ. ಈಗ ಎಲ್ಲಾ ರಾಷ್ಟ್ರೀಯ ಪಕ್ಷಗಳೂ ತಮ್ಮ ತಮ್ಮ ಮಹಿಳಾ ಘಟಕಗಳ ಮೂಲಕ ಮಹಿಳಾ ಸಮಸ್ಯೆಗಳನ್ನು ತಾವೇ ಎತ್ತುತ್ತಿವೆ.

ಆದರೆ ಒಂದಂಶವಂತೂ ನಿಜ. ಎಲ್ಲ ಗುಂಪುಗಳು ಒಟ್ಟಾಗಿ ಸೇರಿ ಕೆಲಸ ಮಾಡಿದರೆ, ಖಂಡಿತವಾಗಿಯೂ ಏನನ್ನಾದರೂ ಸಾಧಿಸಬಹುದು. ಒಂದು ಉದಾಹರಣೆ ಕೊಡಬೇಕೆಂದರೆ, ೧೯೯೬ರಲ್ಲಿ ಅಮಿತಾಭ್ ಬಚ್ಚನ್ ಬೆಂಗಳೂರಿನಲ್ಲಿ ಪ್ರಾಯೋಜಿಸಿದ ವಿಶ್ವ ಸುಂದರಿ ಸ್ಪರ್ಧೆಯನ್ನು ಬೆಂಗಳೂರಿನ ಮಹಿಳಾ ಸಂಘಟನೆಗಳು ವಿರೋಧಿಸಿದ್ದು. ಸ್ಪರ್ಧೆಯನ್ನು ವಿರೋಧಿಸಲಿಕ್ಕೆ ಮೂಲ ಕಾರಣ, ಹೆಣ್ಣನ್ನು ಸರಕಾಗಿ ನೋಡಬಾರದು ಅಂತ. ಅದು ಬಹಳ ಪರಿಣಾಮಕಾರಿಯಾಗಿತ್ತು. ಆವಾಗ ಕ್ಯಾಪ್ಟನ್ ಲಕ್ಷ್ಮೀ, ಸಂಸತ್ ಸದಸ್ಯೆ ಸುಹಾಸಿನಿ ಅಲಿ – ಮುಂತಾದವರು ಈ ಹೋರಾಟದಲ್ಲಿ ನಮ್ಮೊಂದಿಗಿದ್ದರು. ಮಹಿಳೆಯರು ಸಹಸ್ರ ಸಂಖ್ಯೆಯಲ್ಲಿ ಸೇರಿ ಬೀದಿಗಿಳಿದು ಮೆರವಣಿಗೆ ಮಾಡಿ ಪ್ರತಿಭಟಿಸಿದರು. ಆ ಸ್ಪರ್ಧೆಯನ್ನು ನಮಗೆ ಸಂಪೂರ್ಣವಾಗಿ






# ಕತ್ತಲೆಯ ನುಂಗಿದ ದೀಪ

ಅದು ಬೆಳಕು ದೂರಿಟ್ಟ ಕಾರ್ಗತ್ತಲು
ನೋಡಿದೆಲ್ಲೆಡೆ ನಿಶೆಯ ಮೊನಚು
ಮುಟ್ಟಿ ಮೆತ್ತಿಕೊಳ್ಳುವ, ಮತ್ತೆ ನಿಶ್ಶಬ್ದ ಅಲ್ಲಿ
ಬೆಳಕ ಬೈಯ್ಯುವ ಸೊಕ್ಕು ಅದಕೆ

ಅಕ್ಷರ ಗಾಲಿ ಉರುಳಿ ನಡೆದ ಹಾದಿ
ಅಲ್ಲೆಲ್ಲ ಅವರು ನಡೆದ ಹೆಜ್ಜೆಯ ಗುರುತು
ನಡೆದರು ಜನ ಅವರ ಹಿಂದೆ ಅನತಿ ದೂರ
ಬದುಕು ಬೆಳಕೆಂಬುದನ ಹುಡುಕಿ

ಸಾವಿರದ ನುಡಿ ದೀಪ ಹಿಡಿದು
ಬಂದರು ನಾಡಿನೆಲ್ಲೆಡೆ ಶರಣರು
ವಿಚಾರ ಕ್ರಾಂತಿಯ ಬತ್ತಿ ಹುರಿಗೊಳಿಸಿ
ಬಸವನೆಂಬ ಬೆಳಗು ದೀಪ ಹಚ್ಚಿ

ಸನಾತನಿಗಳ ಕೈ ಕಟ್ಟಿ, ಸ್ಪರ್ಧೆ ಇಟ್ಟು
ಹೊಸ ಸಮಾಜ ಕಟ್ಟಬಯಸಿದರು
ವಚನ – ನಿರ್ವಚನಗಳ ಮಂಥನದಲ್ಲಿ
ಹುರಿಗೊಂಡಿತ್ತೊಂದು ಅಕ್ಷರ ಹಗ್ಗ ನೂರ್ಮಡಿಯಲ್ಲಿ

ಬಲ್ಲೆನೆಂಬ ಅಹಂ ಇಲ್ಲದ ಆತ
ಸಮಷ್ಟಿ ಬದುಕಿಗೆ ಮುನ್ನುಡಿ ಬರೆದ
ಇಹದ ಬೆಳಕಿನ ರೂಪ ತಳೆದ
ಬಸವ, ಕತ್ತಲೆಯ ನುಂಗಿದ ದೀಪ

**ಎಸ್ಕೆ ಕೊನೆಸಾಗರ**
ಶಿಕ್ಷಕ ಹಾಗೂ ಪತ್ರಕರ್ತ, ನವನಗರ, ಹುನಗುಂದ – ೫೮೭ ೧೧೮

ನಿಲ್ಲಿಸಲಿಕ್ಕಾಗದಿದ್ದರೂ ನಂತರದ ದಿನಗಳಲ್ಲಿ ಇಂತಹ ಸ್ಪರ್ಧೆಗಳ ವೈಭವೀಕರಣ ನಿಂತಿತು.

**ಹೊಸತು :** ಉದಾರೀಕರಣದ ನಂತರದಲ್ಲಿನ ಮಹಿಳಾ ಚಳುವಳಿಯ ಸ್ವರೂಪವನ್ನು ಹೇಗೆ ವಿವರಿಸುತ್ತೀರ ?

**ಹೇಮಲತಾ :** ೧೯೯೧ರ ನಂತರದಲ್ಲಿ ಜಾಗತೀಕರಣ ದಿಂದಾಗಿ ಮಹಿಳಾ ಸಮಸ್ಯೆಗಳ ಸ್ವರೂಪ ಬೇರೆಯೇ ಆಯಿತು. ಅದರಂತೆ ಚಳುವಳಿಯ ಸ್ವರೂಪವೂ ಬದಲಾಯಿತು. ಮಹಿಳೆ ಇನ್ನೂ ಹೆಚ್ಚು ಹೆಚ್ಚು ಸರಕಾಗುತ್ತಾ ಹೋದಳು. ಅವಳು ಪ್ರತಿಭಟಿಸಿದಂತೆಲ್ಲ ಅವಳ ಮೇಲಿನ ದೌರ್ಜನ್ಯಗಳು ಹೆಚ್ಚಾಗುತ್ತಾ ಹೋದವು. ಉದಾಹರಣೆಗೆ, ಮಹಿಳೆಯರ ಮೇಲೆ ಆ್ಯಸಿಡ್ ದಾಳಿಯನ್ನೇ ತೆಗೆದುಕೊಳ್ಳಿ. ನಾನು ಮಹಿಳಾ ಆಯೋಗದ ಸದಸ್ಯಳಾಗಿದ್ದಾಗ ಒಂದು ಪಬ್ಲಿಕ್ ಹಿಯರಿಂಗ್ ನಡೆಸಿದ್ದೆವು. ಅದರಲ್ಲಿ ಭಾಗವಹಿಸಿದ್ದ ಬಲಿಪಶುಗಳಾಗಿದ್ದ ಆ ಹೆಣ್ಣುಮಕ್ಕಳ ಸ್ಥಿತಿಯನ್ನು ನೋಡಿ, ಕೇಳಿದಾಗ ಮನಕರಗುವಂತಿತ್ತು. ಅದರ ಭೀಕರ ಪರಿಣಾಮವನ್ನು ಸಮಾಜಕ್ಕೆ, ಸರಕಾರಕ್ಕೆ ಮನವರಿಕೆ ಮಾಡಿಕೊಡಲು ಆ ಕುರಿತ ಕಾನೂನಿನ ಕ್ರಮಗಳು ಮತ್ತು ಪರಿಹಾರಗಳನ್ನು ಕುರಿತಂತೆ ಮಹಿಳಾ ಚಳುವಳಿ ಯೋಚಿಸುವಂತಾಯಿತು. ಈಗ ಭಾರತೀಯ ದಂಡಸಂಹಿತೆಯಲ್ಲಿ ಆ್ಯಸಿಡ್ ದಾಳಿಯನ್ನು ಗಂಭೀರವಾದ ಅಪವಾದವೆಂದು ಪರಿಗಣಿಸುವ ತಿದ್ದುಪಡಿ ಸಹ ಆಗಿದೆ.




**ಹೊಸತು :** ಕೆಲಸದ ಸ್ಥಳಗಳಲ್ಲಿ ಲೈಂಗಿಕ ಕಿರುಕುಳಗಳನ್ನು ತಡೆಗಟ್ಟುವ ಕ್ರಮಗಳ ಬಗೆಗೆ ನಿಮ್ಮ ಅನುಭವವನ್ನು ಹಂಚಿಕೊಳ್ಳುತ್ತೀರಾ ?

**ಹೇಮಲತಾ :** ಭಾಂವ್ರಿದೇವಿಯ ಮೇಲೆ ಅತ್ಯಾಚಾರ ನಡೆದು, ಕೆಳ ಹಂತದ ನ್ಯಾಯಾಲಯದಲ್ಲಿ ಅವಳಿಗೆ ನ್ಯಾಯ ದೊರಕದಾದಾಗ ಮಹಿಳಾ ಸಂಘಟನೆಗಳು ಸುಪ್ರೀಮ್ ಕೋರ್ಟ್‌ಗೆ ಇಂತಹ ಸಮಸ್ಯೆಗಳನ್ನು ತಗೊಂಡುಹೋಗಿ, ಕೊನೆಗೆ ೧೯೯೭ರಲ್ಲಿ ವಿಶಾಖ ಕೇಸಿನಡಿ ಮಾರ್ಗದರ್ಶಿ ಸೂತ್ರಗಳನ್ನು ರೂಪಿಸುವುದಕ್ಕೆ ಕಾರಣವಾಯಿತು. ಅದರನ್ವಯ, ದುಡಿಯುವ ಸ್ಥಳಗಳಲ್ಲಿ ನಡೆಯಬಹುದಾದ ಮಹಿಳೆಯರ ಮೇಲಿನ ಲೈಂಗಿಕ ಕಿರುಕುಳಗಳನ್ನು ತಡೆಗಟ್ಟುವುದಕ್ಕಾಗಿ ದೂರು ಸಮಿತಿಗಳನ್ನು ರಚಿಸಲು ಆದೇಶ ನೀಡಲಾಯಿತು. ನಾನೂ ರಿಸರ್ವ್ ಬ್ಯಾಂಕ್, ರಿಸರ್ವ್ ಬ್ಯಾಂಕ್ ನೋಟು ಮುದ್ರಣ ಕೇಂದ್ರ, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು ವಿಶ್ವವಿದ್ಯಾಲಯ, ಹಂಪಿ ವಿಶ್ವವಿದ್ಯಾಲಯ, ಸೆಂಟ್ರಲ್ ಪವರ್ ಇನ್‌ಸ್ಟಿಟ್ಯೂಟ್ ಹಾಗೂ ಜವಾಹರಲಾಲ್ ನೆಹರು ಸೆಂಟರ್ ಫಾರ್ ಅಡ್ವಾನ್ಸ್‌ಡ್ ಸ್ಟಡೀಸ್‌ನಲ್ಲಿರುವ ದೂರು ಸಮಿತಿಗಳಲ್ಲಿ ಹೊರ ಸದಸ್ಯಳಾಗಿ ಕಾರ್ಯ ನಿರ್ವಹಿಸುತ್ತಾ ಇದ್ದೀನಿ.

**ಹೊಸತು :** ನೀವು ಗಾರ್ಮೆಂಟ್ಸ್ ಹೆಣ್ಣುಮಕ್ಕಳ ಸಮಸ್ಯೆಗಳ ಕುರಿತು ಕೆಲಸ ಮಾಡಿದ್ದೀರಲ್ವಾ ? ಅವರ ಹೋರಾಟ, ಅವರ ಸಮಸ್ಯೆಗಳ ಬಗ್ಗೆ ನಿಮ್ಮ ಅನಿಸಿಕೆ ?

**ಹೇಮಲತಾ :** ಗಾರ್ಮೆಂಟ್ಸ್ ಕಾರ್ಖಾನೆಗಳಲ್ಲಿ ದುಡಿಯುವ ಹೆಣ್ಣುಮಕ್ಕಳು ಅವರೇ ಸಂಪಾದಿಸಬೇಕು. ಅವರೇ ಮನೆ ನಡೆಸಬೇಕು. ಅವರ ಗಂಡಂದಿರು ಕೆಲಸ ಮಾಡಿದ್ರೆ ಅವರ ಗಳಿಕೆಯನ್ನು ಅವರ ಚಟಗಳಿಗೇ ಖರ್ಚು ಮಾಡಿಕೊಳ್ತಾರೆ. ಹಾಗಾಗಿ ಆ ಮಹಿಳೆಯರಿಗೆ ತಮಗೆ ಬೇಕಾಗಿದ್ದಕ್ಕೆ ಉಪಯೋಗಿಸಿಕೊಳ್ಳುತ್ತೇನೆ ಅನ್ನೋ ಸ್ವಾತಂತ್ರ್ಯದ ಪ್ರಶ್ನೇನೆ ಇಲ್ಲ. ಮಧ್ಯಮ ವರ್ಗದ ಮಹಿಳೆಯರಿಗೆ ಆರ್ಥಿಕವಾಗಿ ಸ್ವಾತಂತ್ರ್ಯ ಪಡೆಯುವ ಅವಕಾಶವಿದೆ. ಆಗ್ಲೂ ಸ್ವಾತಂತ್ರ್ಯ ತಗೊಳ್ಳಿಲ್ಲಾ ಅಂತಂದ್ರೆ ಇನ್ನು ಅವರಿಗೆ ಯಾವಾಗ್ಲೂ ಸಿಗೋದಿಲ್ಲ, ಅಷ್ಟೇನೆ.

**ಹೊಸತು :** ಈಗಿನ ಯುವತಿಯರು ಚಳುವಳಿಗಳಲ್ಲಿ ಕೆಲಸ ಮಾಡ್ತಾ ಇದ್ದಾರೆಯೇ ?

**ಹೇಮಲತಾ :** ಮೊದಲು ಹೇಗೆ ಇತ್ತೋ ಇವತ್ತಿಗೂ ಹಾಗೆಯೇ. ಕೆಲಸ ಮಾಡೋ ಅಂಥವರು ಮಾಡ್ತಾ ಇರ್ತಾರೆ. ಡೆಲ್ಲಿ ಕೇಸ್‌ನಲ್ಲಿ ನೋಡ್ತಾ ಇದ್ದೀರಲ್ಲ ? ಈಗಿನವರದೆಲ್ಲಾ ಇಂಟರ್‌ನೆಟ್, ಫೇಸ್ ಬುಕ್ ಮೇಲೇ ಹೆಚ್ಚು ಪ್ರೊಟೆಸ್ಟ್‌ಗಳು ಆಗೋದು. ನಾವು ಬೀದಿಗೆ ಇಳಿದು ಮಾಡ್ತಾ ಇದ್ವಿ. ಈಗ ಅದೇ ಒಂದು ಥರದ ಸಂಪರ್ಕ ತಾಣ ಆಗಿಬಿಟ್ಟಿದೆ. ಬೇಕು ಅಂದ್ರೆ ಒಂದು ದಿವಸ ಬೀದಿಗೆ ಇಳಿದುಬಿಡುತ್ತಾರೆ. ಆಗ ನಾವು 'women, unite' ಅನ್ನುತ್ತಿದ್ವಿ. ಈಗ 'women, connect' ಅಂತಾ ಹೇಳ್ತಾರೆ.

**ಹೊಸತು :** ಇವತ್ತು ಸಮಾಜದ ಪ್ರತಿಷ್ಠಿತರು, ಬುದ್ಧಿಜೀವಿಗಳು, ವಿಶ್ವವಿದ್ಯಾಲಯಗಳ ಗಣ್ಯರು, ಈ ಸಮೂಹದವರು ಕೂಡ ಲೈಂಗಿಕ ಕಿರುಕುಳದ ಆರೋಪ ಹೊತ್ತು ನಿಂತಿದ್ದಾರೆ. ಇವರಿಗೆಲ್ಲಾ ಕಾನೂನಿನ ಅರಿವಿದ್ದೂ ಅದರ ಭಯ ಏಕೆ ಉಂಟಾಗಿಲ್ಲ ?

**ಹೇಮಲತಾ :** ಯಾರನ್ನು ವಿವೇಕಿಗಳು, ಪ್ರಗತಿಪರರು ಎಂದು ತಿಳಿದಿದ್ದೆವೋ ಅವರು ಇಂದು ಲೈಂಗಿಕ ಹಗರಣಗಳಲ್ಲಿ ಸಿಕ್ಕಿಬಿದ್ದಿರುವುದನ್ನು ಕಂಡಾಗ ದಿಗ್ಭ್ರಮೆಯಾಗುತ್ತದೆ. ಕೆಳವರ್ಗಗಳ ಜನ, ಅವಿದ್ಯಾವಂತರು, ಉದಾಹರಣೆಗೆ ದೆಹಲಿ ಗುಂಪು ಅತ್ಯಾಚಾರಿಗಳಂತಹವರ ಬಗ್ಗೆ ಯೋಚಿಸಿದಾಗ ಅವರು ಬೆಳೆದ ವಾತಾವರಣ, ಮೌಲ್ಯಗಳ ಹಿನ್ನೆಲೆಯಲ್ಲಿ ಅವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಬಹುದಾದರೂ ಸಮಾಜದ ಪ್ರತಿಷ್ಠಿತರ ಬಗ್ಗೆ ಯೋಚಿಸಿದಾಗ ಪ್ರಶ್ನೆ ಜಟಿಲವಾಗುತ್ತದೆ. ಬಹುಶಃ ಇಲ್ಲಿ ಪುರುಷ ಅಹಂಕಾರದ ಜೊತೆಗೆ, ಅವರ ಸಾಮಾಜಿಕ ಅಧಿಕಾರ, ಅಂತಸ್ತೂ ಸೇರಿ ಅವು ಅವರ ಇಂತಹ ವರ್ತನೆಗೆ ಕಾರಣವಾಗುತ್ತವೆ. ಕಾನೂನು – ನ್ಯಾಯಾಲಯಗಳು ಅವರೊಂದಿಗೆ ಕಠಿಣವಾಗಿ ವರ್ತಿಸಿದಾಗ ಮಾತ್ರ ಇಂತಹ ಪ್ರಕರಣಗಳು ಕಡಿಮೆಯಾಗಬಹುದು. ಸಂಪೂರ್ಣವಾಗಿ ನಿಲ್ಲದಿರಬಹುದು.

**ಹೊಸತು :** ಲೈಂಗಿಕ ಕಿರುಕುಳ ನಿವಾರಣೆ ಕಾಯಿದೆಯ ಸದ್ಯದ ಸ್ವರೂಪವೇನು ?

**ಹೇಮಲತಾ :** ಪಾರ್ಲಿಮೆಂಟಿನ ಎರಡೂ ಸದನಗಳಲ್ಲಿ ಈ ಕಾಯಿದೆ ಪಾಸಾಗಿ ಕಾನೂನಾಗಿದೆ. ಆದರೆ, ಅದಕ್ಕೆ ಬೇಕಾದ ನಿಯಮಗಳನ್ನು ರೂಪಿಸಿದ ಮೇಲೆಯೇ ಅದು ಜಾರಿಗೆ ಬರುತ್ತದೆ. ಅದಿನ್ನೂ ಆಗಿಲ್ಲ. ನ್ಯಾಯಮೂರ್ತಿ ವರ್ಮಾ ಅವರು ಸಂಸ್ಥೆಗಳ ಒಳಗೆ ರಚಿತವಾಗಬೇಕಾದ ಸಮಿತಿಗಳ ಬಗ್ಗೆ ಅವಿಶ್ವಾಸ ವ್ಯಕ್ತಪಡಿಸಿ, ಹೊರಗಿನ ಸಮಿತಿಯ ಬಗ್ಗೆ ಶಿಫಾರಸ್ಸು ಮಾಡಿದ್ದರು. ಆದರೆ ಈ ಒಳಗಿನ ಸಮಿತಿಗಳೂ ಪರಿಣಾಮಕಾರಿಯಾಗಿ ಕೆಲಸ ಮಾಡಬಲ್ಲವು. ಅದು ನನ್ನ ಅನುಭವಕ್ಕೆ ಬಂದ ವಿಷಯ. ಆದರೆ ಇಲ್ಲಿ ಸಂಸ್ಥೆಗಳ ಮುಖ್ಯಸ್ಥರ ಪಾತ್ರ ಬಹಳ ಮುಖ್ಯವಾಗಿರುತ್ತದೆ. ಸಾಮಾನ್ಯವಾಗಿ ಅವರು ದೂರು ಬಂದ ಕೂಡಲೇ ಮೊದಲು ಮಾಡುವ ಕೆಲಸ ಮುಚ್ಚಿ ಹಾಕಲು, ತೇಪೆ ಹಾಕಲು ಮಾಡುವ ಪ್ರಯತ್ನ. ಅವರು ನಿಷ್ಪಕ್ಷಪಾತವಾಗಿ ಕೆಲಸ ಮಾಡಬೇಕಾಗುತ್ತದೆ.

**ಹೊಸತು :** ಮಥುರಾ ಪ್ರಕರಣದಿಂದ ಇವತ್ತಿನ ನಿರ್ಭಯಾ ಪ್ರಕರಣದವರೆಗೆ ವ್ಯಾಪಿಸಿರುವ ನಮ್ಮ ಮಹಿಳಾ ಚಳುವಳಿಯ ಜೊತೆಗೆ ನೀವಿದ್ದೀರಿ. ಅಂದಿಗೂ ಇಂದಿಗೂ ಆಗಿರುವ ಬದಲಾವಣೆಯನ್ನು ಹೇಗೆ ಗುರುತಿಸುತ್ತೀರಾ ?

**ಹೇಮಲತಾ :** ಆಗ ಮಹಿಳಾ ಚಳುವಳಿಗಳು ಕೈಗೆತ್ತಿಕೊಂಡ ಸಮಸ್ಯೆಗಳು ಈಗಲೂ ಇವೆ. ಆದರೆ ಕಾನೂನಿನಲ್ಲಿ ಬದಲಾವಣೆಗಳಾಗಿವೆ, ಮಹಿಳೆಯರಲ್ಲೂ ಜಾಗೃತಿ ಮೂಡಿದೆ. ಸಾಮಾಜಿಕ ಧೋರಣೆಗಳನ್ನು ಬದಲಾಯಿಸುವ ಕಷ್ಟಕರ ಕೆಲಸವೂ ನಡೆದಿದೆ. ಮುಖ್ಯವಾಗಿ ಈಗಿರುವ ಸಮಸ್ಯೆ ಕಾನೂನಿನ ಅನುಷ್ಠಾನದ ಸಮಸ್ಯೆ, ಅದಕ್ಕೆ ಬೇಕಾದ ಸಾಮಾಜಿಕ ಬೆಂಬಲದ ಸಮಸ್ಯೆ, ಮಹಿಳೆಯರ ಸಹಾಯಕ್ಕೆ ನಿಲ್ಲಬೇಕಾದ ವ್ಯವಸ್ಥೆಯ ನಿರ್ಮಾಣದ ಸಮಸ್ಯೆ. ಅದರಲ್ಲೂ ಮುಖ್ಯವಾಗಿ ತಮ್ಮ ಹಕ್ಕುಗಳನ್ನು ಪಡೆಯಲು, ಅನ್ಯಾಯದ ವಿರುದ್ಧ ಪ್ರತಿಭಟಿಸಲು ಮಹಿಳೆ ಪ್ರಯತ್ನಿಸಿದಾಗ ಆಗುತ್ತಿರುವ ಬ್ಯಾಕ್‌ಲ್ಯಾಷ್ ಸಮಸ್ಯೆ. ಮಹಿಳೆ ಬಲಿಪಶುವಾದಾಗಲೂ ಅವಳನ್ನೇ ತಪ್ಪಿತಸ್ಥಳನ್ನಾಗಿ ಮಾಡಲು ಪ್ರಯತ್ನಿಸುವ ವಿರುದ್ಧಶಕ್ತಿಗಳ ಸಮಸ್ಯೆ.

**ಹೊಸತು :** ನಮ್ಮೊಡನೆ ವಿವರವಾಗಿ ನಿಮ್ಮ ವಿಚಾರಗಳನ್ನು ಹಂಚಿಕೊಂಡಿದ್ದೀರ. ಅದಕ್ಕಾಗಿ 'ಹೊಸತು' ಪರವಾಗಿ ವಂದನೆಗಳು.

**ಹೇಮಲತಾ :** ಸಂತೋಷ. ನಮಸ್ಕಾರ.

**ವಾಸಂತಿ ಸಾಗರ್**
ಸಂಖ್ಯೆ ೯, ೩ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು – ೫೬೦ ೦೦೩

# ಕ್ಷ - ಕಿರಣ

ಪ್ರಕಾಶ್ ಎಸ್.




ನೆಲ್ಸನ್ ಮಂಡೇಲಾಗೆ ವಿದಾಯ....




ದಿಲ್ಲಿ ಚುನಾವಣಾ ಫಲಿತಾಂಶ
‘ಆssssಮ್ ಆದ್ಮಿ’



ಸರ್ದಾರ್ ಪ್ರತಿಮೆಗಾಗಿ
ಲೋಹ ಸಂಗ್ರಹ ಅಭಿಯಾನ –ಮೋದಿ

ಹಳೆ ತಗಡೂ.... ಹಳೆ ಕಬ್ಬಿಣಾssss
ಹೊಸ ಮೂರ್ತಿ ಅರೆ ಹೋಯಿ....



# ಹೇಮಂತ ಸಾಹಿತ್ಯ ಪ್ರಕಾಶನದ ಅಮೂಲ್ಯಕೊಡುಗೆ

## ಶ್ರೀಮದ್ ವಾಲ್ಮೀಕಿ ಮಹರ್ಷಿ ಪ್ರಣೀತ ಯೋಗವಾಸಿಷ್ಠ

ಯೋಗವಾಸಿಷ್ಠವು ಅದ್ವೈತ ವೇದಾಂತದ ಪ್ರತಿಪಾದನೆಯಾಗಿದ್ದು ಪುರಾಣಗ್ರಂಥಗಳಲ್ಲೆಲ್ಲ ಬೃಹತ್ ಮತ್ತು ಮಹತ್ ಎಂದು ಪರಿಗಣಿತವಾಗಿದೆ. ಖಂಡವಲ್ಲದ ಅಖಂಡ ಕಲ್ಪನೆಯೇ ಅದ್ವೈತದ ಸಾರ. ಇವುಗಳ ಶ್ಲೋಕಗಳು ಮೂಲ ಸಂಸ್ಕೃತದಲ್ಲಿದ್ದು ಇಕ್ಷ್ವಾಕು ಕುಲ ಪುರೋಹಿತ ವಸಿಷ್ಠಮುನಿ ಶ್ರೀರಾಮಚಂದ್ರನಿಗೆ ಉಪದೇಶಿಸಿದಂತೆ ಗುರು-ಶಿಷ್ಯರ ನಡುವಿನ ಸಂವಾದ ರೂಪದಂತಿವೆ. ಪ್ರಾಪಂಚಿಕ ಬದುಕಿನ ಬಗ್ಗೆ ಗಂಭೀರವಾಗಿ ಹೇಳಲ್ಪಟ್ಟ ಜ್ಞಾನೋಪದೇಶವಾಗಿದೆ. ವಸಿಷ್ಠರು ಇಲ್ಲಿ ಜ್ಞಾನಯೋಗಕ್ಕೆ ಹೆಚ್ಚು ಒತ್ತು ಕೊಟ್ಟು ವಿಶೇಷವಾಗಿ ಹೇಳಿರುವುದರಿಂದಲೇ ಇದು 'ಯೋಗವಾಸಿಷ್ಠ' ಎನಿಸಿದೆ. ಹಿಂದಿನ ಯುಗಗಳಲ್ಲಿ ಅತಿ ಶ್ರೇಷ್ಠರೆಂದು ಮಾನ್ಯರಾದ, ಋಷಿಮುನಿ ಪುಂಗವರೆಂದು ಖ್ಯಾತರಾದ, ಇಂದಿಗೂ ಪೂಜ್ಯರೆಂದು ಗೌರವಿಸಲ್ಪಡುವ ಮಹಾಜ್ಞಾನಿಗಳಿಂದ ಅನಂತ ವಿಶ್ವದ ಬಗ್ಗೆ ಮತ್ತೂ ತಿಳಿಯುವ ಹಂಬಲ ತೀವ್ರವಾಗಿತ್ತು. ಅವರ ವಿಚಾರ-ವಿಶ್ಲೇಷಣೆಗಳು ಬ್ರಹ್ಮಾಂಡದ ಉತ್ಪತ್ತಿ – ಜೀವದ ಉಗಮ – ಜೀವಿಯ ಜನನ-ಜೀವನ-ಮರಣ ಮುಂತಾದ ಅಧ್ಯಾತ್ಮಗಳತ್ತ ಹರಿದಿದ್ದವು. ಅಂದಿನವರು ತಮ್ಮ ಬುದ್ಧಿಗೋ  ದಿವ್ಯದೃಷ್ಟಿಗೋ ಹೊಳೆದುದನ್ನು ಶ್ಲೋಕಗಳಾಗಿ, ಉಪಕಥೆಗಳೊಂದಿಗೆ, ನೀತಿಕಥೆಗಳೊಂದಿಗೆ ತಮ್ಮ ಮುಂದಿನ ಪೀಳಿಗೆಗೆ ದಾಟಿಸುತ್ತ ಬಂದಿದ್ದಾರೆ. ಈ ಜಿಜ್ಞಾಸೆ ಅಂದಿನಿಂದ ಇಂದಿನವರೆಗೂ ನಡೆದಿದೆ. ಪ್ರಾಪಂಚಿಕ ಸುಖಗಳು ಕ್ಷಣಿಕವಾದುವು, ಪರಬ್ರಹ್ಮವೊಂದೇ ಶಾಶ್ವತ ಎಂಬ ತತ್ತ್ವವು ಅಂದು ಮಾನ್ಯವಾಗಿದ್ದು ತತ್ತ್ವಶಾಸ್ತ್ರಗಳು, ದರ್ಶನಗಳು, ವೇದಪುರಾಣಗಳು ಅದನ್ನೇ ಸಾರಿದವು. ಜ್ಞಾನ –ವೈರಾಗ್ಯಗಳು ಮೇಲುಗೈ ಪಡೆದು ವಿವಿಧ ಚಿಂತನೆಗಳಿಂದಾಗಿ ಬಹು ಶಾಖೆಯ ಜ್ಞಾನದರ್ಶನಗಳು ರೂಪುಗೊಂಡವು. ಕೊನೆಗೆ ಇಡೀ ವಿಶ್ವವೇ ಪರಬ್ರಹ್ಮ ಎಂಬ ಅಂತಿಮ ಸತ್ಯದೊಂದಿಗೆ ಐಕ್ಯಗೊಳ್ಳುವುದೆಂದೂ, ಮತ್ತೆ ಉಗಮವಾಗುವುದೆಂದೂ ನಂಬಲಾಯಿತು. ಬುದ್ಧಿ ವಿಕಾಸಗೊಂಡಂತೆಲ್ಲ, ಜ್ಞಾನಶಾಖೆಗಳು ಬೆಳೆದಂತೆಲ್ಲ ಮಾನವ ಮಾತ್ರವಲ್ಲ, ಸಕಲ ಜೀವಿಗಳು, ಅಣು-ರೇಣು ತೃಣ-ಕಾಷ್ಟಗಳಲ್ಲಿಯೂ ಸರ್ವ ಅಂತರಗಾಮಿಯಾದ ಯಾವುದೋ ಶಕ್ತಿ ಎಲ್ಲವನ್ನೂ ನಿಯಂತ್ರಿಸುವುದೆಂಬ ನಿರ್ಧಾರವೇ ಅಂತಿಮವಾಯಿತು. ಮುಂದೆ ಪರಸ್ಪರ ವಿಚಾರ ವಿನಿಮಯ – ಶ್ರೇಷ್ಠರೆಲ್ಲ ಸೇರಿ ಚರ್ಚೆಗಳು – ವಾಗ್ವಾದಗಳು ಬೆಳೆದಂತೆಲ್ಲ ಅತಿಶ್ರೇಷ್ಠರು ಯಾರೆಂದೂ, ಅತ್ಯುನ್ನತ ಜ್ಞಾನಿ ಯಾರೆಂದೂ ಸಕಲ ವಿದ್ಯಾಪಾರಂಗತರೆಲ್ಲ ಸೇರಿ ಚರ್ಚಿಸಿದರು. – ಹೀಗೆ ಕಥೆಗಳು – ಉಪಕಥೆಗಳು ಬೆಳೆದು ಪ್ರಪಂಚದ ಜ್ಞಾನವನ್ನೆಲ್ಲ ಕ್ರೋಢೀಕರಿಸ ತೊಡಗಿದಾಗ ಇಂತಹ ಮಹಾನ್ ವ್ಯಕ್ತಿಗಳಿಂದ ಬೃಹತ್ ಗ್ರಂಥಗಳ ರಚನೆಯಾಯಿತು. ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯತೆಯನ್ನು ಎತ್ತಿ ತೋರಿಸುವ ಈ ದರ್ಶನ ಗ್ರಂಥವು ಏಳು ಸಂಪುಟಗಳಲ್ಲಿ ಸುಮಾರು 5600 ಪುಟಗಳಷ್ಟಿದ್ದು ಜ್ಞಾನಧಾರೆಯೇ ಹರಿದು ಬಂದು ಜನಸಾಗರವನ್ನು ಸೇರುವಷ್ಟು ಅಗಾಧವಾಗಿದೆ. ಹೇಮಂತ ಸಾಹಿತ್ಯದ ಅಗಾಧ ಪರಿಶ್ರಮದ ಪ್ರಕಟಣೆಯಾದ 28,000 ಶ್ಲೋಕಗಳಿರುವ ಇಂಥ ಮಹತ್ವದ ಉದ್ಗ್ರಂಥವನ್ನು ನಾಡಿನ ಶ್ರೇಷ್ಠ ಸಾಹಿತ್ಯ ಪ್ರತಿಭೆಯೆಂದು ಗೌರವಕ್ಕೆ ಪಾತ್ರರಾದ ದೇವುಡು ಕನ್ನಡೀಕರಿಸಿದ್ದಾರೆ.

**ಒಟ್ಟು**
**7 ಸಂಪುಟಗಳ**
**ಬೆಲೆ ₹ 3150/-**



# ಭಾಂವ್ರಿಯ ಭಟೇರಿಗೆ ಒಂದು ಭಾವುಕ ಪಯಣ...



ದಿನಾಂಕ 16 ಡಿಸೆಂಬರ್ 2012, ಇಡೀ ದೇಶವನ್ನೇ ನಡುಗಿಸಿದ ಭೀಕರ ಅತ್ಯಾಚಾರ ದಿಲ್ಲಿಯಲ್ಲಿ ನಡೆಯಿತು. ಸಫ್ದರ್‌ಜಂಗ್ ಆಸ್ಪತ್ರೆಯಲ್ಲಿ ಹಿಂದೆಂದೂ ವೈದ್ಯರು ಕರುಳುಗಳು ಹೊರಬಿದ್ದ ಇಂತಹ ಭಯಾನಕ ಅತ್ಯಾಚಾರದ ಪ್ರಕರಣವನ್ನು ಕಂಡಿರಲಿಲ್ಲ.

ಈ ಭಯಂಕರ ಕ್ರೌರ್ಯ ಕೂಡಾ ಹಲವರನ್ನು ಅಲುಗಾಡಿಸಿಲ್ಲ ಎನ್ನುವುದೇ ವಿಷಾದದ ಚೋದ್ಯ.

ಒಬ್ಬೊಬ್ಬ ರಾಜಕಾರಣಿಗಳದು ತಲೆಗೊಂದು ಮಾತು. ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಮುಖ್ಯಸ್ಥರಾದ ಮೋಹನ್ ಭಾಗವತ್ 'ಪಟ್ಟಣ ಪ್ರದೇಶದ ಇಂಡಿಯಾದಲ್ಲಿ ಮಹಿಳೆಯರ ವಿರುದ್ಧ ಆಗುತ್ತಿರುವ ಅಪರಾಧಗಳು ನಾಚಿಕೆಗೇಡಿನವು. ಆದರೆ ಇವು ಭಾರತದಲ್ಲಿ ಅಂದರೆ ಗ್ರಾಮ ಪ್ರದೇಶದಲ್ಲಿ ನಡೆಯುವುದಿಲ್ಲ. ನೀವು ಹಳ್ಳಿಗಳಿಗೆ, ಕಾಡು ಪ್ರದೇಶಗಳಿಗೆ ಹೋಗಿ ನೋಡಿ, ಸಾಮೂಹಿಕ ಅತ್ಯಾಚಾರದಂತಹ ಲೈಂಗಿಕ ಅಪರಾಧಗಳು ನಡೆಯುವುದಿಲ್ಲ. ಭಾರತ, ಪಾಶ್ಚಾತ್ಯ ಪ್ರಭಾವದಲ್ಲಿ ಇಂಡಿಯಾ ಆಗಿರುವ ಕಾರಣ ಇಂತಹ ಘಟನೆಗಳು ನಡೆಯುತ್ತವೆ' ಎಂದರು. ಈ ಮಾತುಗಳನ್ನು ಓದಿ ದಿಗ್ಭ್ರಮೆಯಾಗಿತ್ತು. ಯಾವ ಭಾರತದಲ್ಲಿ ಇವರಿದ್ದಾರೆ? ಮಹಿಳೆಯರ ಮೇಲಿನ ದೌರ್ಜನ್ಯಗಳ ಅಂಕಿಸಂಖ್ಯೆಗಳನ್ನು ನೋಡಿದರೆ, ಗ್ರಾಮಾಂತರ ಪ್ರದೇಶಗಳಲ್ಲಿ, ದಲಿತ ಹೆಂಗಸರ ಮೇಲೆ, ಬಡ ಹೆಣ್ಣು ಮಕ್ಕಳ ಮೇಲೆ, ಗುಡ್ಡಗಾಡು ಸಮುದಾಯದ ಮಹಿಳೆಯರ ಮೇಲೆ ಸತತವಾಗಿ

ನೇಮಿಚಂದ್ರ

ವಿಶೇಷ ಲೇಖನ

ನಡೆಯುತ್ತಿವೆ. ಅವರಿಗೆ ದಿಲ್ಲಿಯ ಪ್ರತಿಭಟನೆಯಂತಹ ಸ್ವರ ಕೂಡಾ ಕೇಳ ಬರುವುದಿಲ್ಲ. ಅವರ ಅತ್ಯಾಚಾರಗಳು ರಾಷ್ಟ್ರೀಯ ಸುದ್ದಿಯಾಗುವುದಿಲ್ಲ.

ಹೆಣ್ಣಿನ ವಿಷಯ ಬಂದಾಗ, ನಮ್ಮ ರಾಜಕಾರಣಿಗಳಷ್ಟೆ ಅಲ್ಲ ಕೆಲವು 'ಅಧ್ಯಾತ್ಮ ಗುರುಗಳು' ಕೂಡಾ ಉಚಿತ ಉಪದೇಶಕ್ಕೆ ಇಳಿದರು.

ಅಸಾರಾಮ್ ಬಾಪು ಎಂಬ ಗುರು, 'ಆಕೆ ಅತ್ಯಾಚಾರಿಗಳ ಕೈ, ಕಾಲು ಹಿಡಿದು 'ಅಣ್ಣ ನಾನು ಅಬಲೆ, ನನ್ನನ್ನು ಬಿಟ್ಟು ಬಿಡಿ. ಕರುಣೆ ತೋರಿ' ಎಂದು ಅಂಗಲಾಚಿದ್ದರೆ ಹೀಗೆ ಆಗುತ್ತಿರಲಿಲ್ಲ' ಎಂದ.

ಇಂದು ಅಸಾರಾಮ್ ಮತ್ತು ಆತನ ಮಗ ಇಬ್ಬರೂ ಅತ್ಯಾಚಾರದ ಆರೋಪದ ಮೇಲೆ ಜೈಲಿನಲ್ಲಿದ್ದಾರೆ !

ಒಂದು ಅಸುರಕ್ಷಿತವಾದ ಸಮಾಜ, ನಾಗರಿಕ ಸಮಾಜವಾಗಲಾರದು.

ಇದೇ ವರ್ಷ ಜನವರಿ ತಿಂಗಳನಲ್ಲಿ ಕನ್ನಡದ ಅನೇಕ ವಾರಪತ್ರಿಕೆಗಳು ಮಹಿಳೆಯರ ಮೇಲಿನ ಅತ್ಯಾಚಾರವನ್ನು ಕುರಿತು ಮುಖಪುಟ ಲೇಖನಗಳನ್ನು ಪ್ರಕಟಿಸಿದವು. ಅವುಗಳಲ್ಲಿ ಭಾಂವ್ರಿದೇವಿಯ ಹೋರಾಟವನ್ನು ನೆನಪು ಮಾಡಿಕೊಂಡವು. ಪ್ರಸಿದ್ಧ ವಾರಪತ್ರಿಕೆಯೊಂದರಲ್ಲಿ 'ಸಾಥಿನ್ ಭಾಂವ್ರಿದೇವಿ' ಎಂಬ ಅಡಿಬರಹದೊಡನೆ ಅಲ್ಲಿ ಪ್ರಕಟವಾದ ಚಿತ್ರ ನೋಡಿದಾಗ ನನಗೆ ಆಘಾತವಾಯಿತು. ಅದು ಎರಡು ದಶಕಗಳ ಹಿಂದೆಯೇ ನ್ಯಾಯಕ್ಕಾಗಿ ಹೋರಾಡಿದ ಸಾಥಿನ್ ಭಾಂವ್ರಿದೇವಿಯ ಚಿತ್ರವಾಗಿರಲಿಲ್ಲ. 2011ರಲ್ಲಿ ಮಂತ್ರಿಯೊಬ್ಬಾತನೊಡನೆ ಲೈಂಗಿಕ ಸಂಬಂಧದ ಕಾರಣವಾಗಿ ಕಾಣೆಯಾಗಿ ಕೊಲೆಯಾದ ನರ್ಸ್ ಭಾಂವ್ರಿದೇವಿಯ ಚಿತ್ರವಾಗಿತ್ತು !

ಅನೇಕ ಪತ್ರಿಕೆಗಳಲ್ಲಿ ಇದೇ ಬಗೆಯ ಅವಾಂತರವನ್ನು ಕಂಡೆ. ಕಾರಣ ಭಾಂವ್ರಿದೇವಿ ಎಂದು 'ಗೂಗಲ್' ಮಾಡಿ ನೋಡಿದೆ, ಬರೀ ಈ ನರ್ಸ್ ಭಾಂವ್ರಿದೇವಿಯ ಚಿತ್ರಗಳೇ ಮೂಡಿ ಬಂದವು.

ಆದರೆ ನಾವು ನೆನೆಯ ಹೊರಟದ್ದು ಈಕೆಯನ್ನಲ್ಲ.



ಭಟೇರಿಯ ಮನೆಯಲ್ಲಿ ಭಾಂವ್ರಿ ಬದುಕು ಬವಣೆಯ ಕತೆಯನ್ನು ಹೇಳುತ್ತಾ

**ಭಟೇರಿಯ ಭಾಂವ್ರಿ**

೨೧ ವರ್ಷಗಳ ಹಿಂದೆ ಬಾಲ್ಯ ವಿವಾಹವನ್ನು ವಿರೋಧಿಸಿದ ತಪ್ಪಿಗೆ ಸಾಮೂಹಿಕ ಅತ್ಯಾಚಾರಕ್ಕೆ ಒಳಗಾಗಿ ನ್ಯಾಯಕ್ಕಾಗಿ ಹೋರಾಡಿದ ರಾಜಾಸ್ತಾನದ ಭಟೇರಿ ಗ್ರಾಮದ ಭಾಂವ್ರಿದೇವಿ ತನ್ನ ಸೋದರಿಯರ ಬದುಕನ್ನು ಬದಲಿಸಲು ಹೊರಟಾಕೆ. ಆದರೆ ಆ 'ಸಾಥಿನ್' ಭಾಂವ್ರಿದೇವಿಯ ಒಂದು ಚಿತ್ರ ವಿಕಿಪೀಡಿಯಾದಲ್ಲೂ ಇರಲಿಲ್ಲ.

ತನ್ನ ಬದುಕನ್ನೇ ನರಕವಾಗಿಸಿಕೊಂಡರೂ ತನಗೆ ಎರಡು ದಶಕದ ನಂತರವೂ ನ್ಯಾಯ ದೊರೆಯದಿದ್ದರೂ ಸುಪ್ರೀಂ ಕೋರ್ಟಿನ 'ವಿಶಾಖ ತೀರ್ಪಿ'ನ ಮೂಲಕ ದುಡಿವ ಮಹಿಳೆಯರಾದ ನಮ್ಮೆಲ್ಲರಿಗೆ ಕೆಲಸದ ಜಾಗದಲ್ಲಿ ರಕ್ಷಣೆಯನ್ನು ತಂದುಕೊಟ್ಟ ಭಾಂವ್ರಿದೇವಿಯನ್ನು ಲೋಕ ಮರೆತಂತಿತ್ತು.

ಭಾಂವ್ರಿದೇವಿ ರಾಜಾಸ್ತಾನದ ಹಳ್ಳಿಗಾಡಿನ ಓರ್ವ ಬಡ ಕುಂಬಾರ ಹೆಣ್ಣು. ಈಕೆ ರಾಜಾಸ್ತಾನ ಸರ್ಕಾರದ ಮಹಿಳಾ ಅಭಿವೃದ್ಧಿ ಯೋಜನೆಯಡಿ ಸಾಮಾಜಿಕ ಬದಲಾವಣೆಗೆ 'ಸಾಥಿನ್' ಆಗಿ ದುಡಿಯುತ್ತಿದ್ದ ಮಹಿಳೆ. ಈಕೆಯ ಮುಖ್ಯ ಕೆಲಸ ಬಾಲ್ಯವಿವಾಹದ ಪಿಡುಗನ್ನು ತೊಡೆಯುವುದಾಗಿತ್ತು. ತನ್ನ ಕರ್ತವ್ಯವನ್ನು ಗಂಭೀರವಾಗಿ ತೆಗೆದುಕೊಂಡ ಭಾಂವ್ರಿದೇವಿ ೧೯೯೨ರಲ್ಲಿ ಒಂದು ವರ್ಷದ ಕೂಸಿನ ಬಾಲ್ಯವಿವಾಹವನ್ನು ನಿಲ್ಲಿಸಿದಳು. ಈ ಕಾರಣಕ್ಕೆ, ತನ್ನ ಗಂಡನೆದುರಲ್ಲೇ ಸಾಮೂಹಿಕ ಅತ್ಯಾಚಾರಕ್ಕೆ ಗುರಿಯಾದಳು.

ಹೆಣ್ಣನ್ನು ಅಧೀನವಾಗಿಸಲು, ಅಧೀರಳಾಗಿಸಲು ಲೈಂಗಿಕ ಕ್ರೌರ್ಯವನ್ನು ಬಳಸುತ್ತಾ ಬಂದಿರುವ ನಮ್ಮ ಸಮಾಜದಲ್ಲಿ, ಭಾಂವ್ರಿ, ತನ್ನ ಮೇಲಿನ ಹೇಸಿಗೆಯ ಅತ್ಯಾಚಾರದ ಅಪಮಾನವನ್ನು ಮುಚ್ಚಿಟ್ಟು ಸುಮ್ಮನಿರದೆ, 'ನಾಳೆ ಇದು ನನ್ನ ಮಗಳ ಮೇಲೆ, ನನ್ನ ಸೋದರಿಯರ ಮೇಲೆ ನಡೆಯಗೊಡಬಾರದು' ಎಂಬ ದೃಢನಿರ್ಧಾರದಲ್ಲಿ ತನ್ನ ಕತೆಯನ್ನು ಬಹಿರಂಗಪಡಿಸಿ, ನ್ಯಾಯದ ಬಾಗಿಲನ್ನು ಬಡಿದಳು. ಆದರೆ ನವೆಂಬರ್ ೧೯೯೫, ಜಯಪುರ ಡಿಸ್ಟ್ರಿಕ್ಟ್ ಮತ್ತು ಸೆಷನ್ನಿನ ನ್ಯಾಯಾಧೀಶರು ಭಾಂವ್ರಿಯ ಮೇಲೆ ಅತ್ಯಾಚಾರ ಎಸಗಿದ ಆರೋಪದ ಮೇಲೆ ಬಂಧಿಸಿದ್ದ ಐದು ಮಂದಿ ಆರೋಪಿಗಳನ್ನು ಬಿಡುಗಡೆ ಮಾಡಿದರು. ನ್ಯಾಯಾಲಯ 'ಈ ಆರೋಪಿತರು ೫೦ರಿಂದ ೬೦ರ ವಯಸ್ಸಿನಲ್ಲಿದ್ದು, ಗೌರವಾನ್ವಿತ ಕುಟುಂಬದಿಂದ ಬಂದವರು. ಅವರು ಮಾನಭಂಗ ಮಾಡಲು ಸಾಧ್ಯವಿಲ್ಲ. ತಮ್ಮ ವಯಸ್ಸು, ಜಾತಿ ಮರೆತು ಇಂಥಾ ಕೆಲಸ ಮಾಡುವಷ್ಟು ನಮ್ಮ ಭಾರತೀಯ ಸಂಸ್ಕೃತಿ ಅಧೋಗತಿಗಿಳಿದಿಲ್ಲ' ಎಂದು ಹೇಳಿ ಬಿಡುಗಡೆ ಮಾಡಿತ್ತು. ಮಹಿಳಾ ಜಾಗೃತಿಗೆ ಹೋರಾಡುತ್ತಿದ್ದ ಪ್ರತಿಯೊಬ್ಬರಿಗೂ ಆಘಾತ ತಂದ ತೀರ್ಪು. ಎಂಭತ್ತರ ದಶಕದ



ಭಾಂವ್ರಿ ದಂಪತಿಯೊಡನೆ ಲೇಖಕಿ



ಭಾಂವ್ರಿ ದಂಪತಿಯೊಡನೆ ಗೀತಾ, ಕೇಶವ ಮೂರ್ತಿ ಮತ್ತು ರಾಜೇಶ್ವರಿ



ಜಯಪುರದ ಮಹಿಳಾ ಹೋರಾಟಗಾರ್ತಿ ಕವಿತಾ ಶ್ರೀವಾತ್ಸವ, ತಮ್ಮಲ್ಲಿ ಆಶ್ರಯ ಪಡೆದ ಹುಡುಗಿಯೊಬ್ಬಳೊಡನೆ

ಮಹಿಳಾ ಹೋರಾಟದ ಫಲವಾಗಿ ಸಾಧಿಸಿದ್ದ ಮಾನಭಂಗದ ಕೇಸುಗಳಲ್ಲಿಯ ಸುಧಾರಣೆಗಳನ್ನು ನಿರ್ಲಕ್ಷಿಸಿದ ಭಾವ ಕಾಡಿತ್ತು.

ಐದು ಮಂದಿ ಆರೋಪಿಗಳ ಬಿಡುಗಡೆಯಾಗಿತ್ತು.

ಭಾಂವ್ರಿಯ ಕುಟುಂಬ ಬಹಿಷ್ಕರಿಸಲ್ಪಟ್ಟಿತು. ಆರ್ಥಿಕವಾಗಿ, ಸಾಮಾಜಿಕವಾಗಿ ಹಳ್ಳಿಯ ಈ ಏಕೈಕ ಕುಂಬಾರ ಕುಟುಂಬವನ್ನು ದೂರ ಮಾಡಿದರು. ಭಾಂವ್ರಿ ತನ್ನ ೨೦೦ ರೂಪಾಯಿಗಳ 'ಸಾಥಿನ್' ಸಂಬಳದಲ್ಲಿ ಇಡೀ ಮನೆ ಮಕ್ಕಳ ಪೋಷಣೆಯನ್ನು ನಡೆಸಬೇಕಿತ್ತು. ಭಾಂವ್ರಿ ತನ್ನ ಹೋರಾಟದಿಂದ ಹಿಂತೆಗೆಯಲಿಲ್ಲ. ಈಗ ಅದು ತನಗಾಗಿ ಹೊರಟ ಹೋರಾಟವಾಗಿರಲಿಲ್ಲ, ಮಹಿಳೆಯರ ರಕ್ಷಣೆಯ ಹೋರಾಟವಾಗಿತ್ತು.

**ಭಾಂವ್ರಿಗೊಂದು ಭಾವಿ**

ದಿನಾಂಕ ೯ ಮಾರ್ಚ್ ೨೦೧೩, ಭಾಂವ್ರಿದೇವಿ ಬೆಂಗಳೂರಿಗೆ 'ಮಹಿಳಾ ದಿನ'ದ ಕಾರ್ಯಕ್ರಮಕ್ಕೆ ಆಗಮಿಸಿದ್ದರು. ಡು. ಸರಸ್ವತಿ ಅವರ ಸಹೃದಯತೆಯಿಂದ ಅವರ ಮನೆಯಲ್ಲಿ ಭಾಂವ್ರಿದೇವಿಯನ್ನು ಮುಂಜಾನೆಯೇ ಮಾತನಾಡಿಸಲು ಸಾಧ್ಯವಾಗಿತ್ತು.

ಇಂದು ಕೂಡಾ ಭಾಂವ್ರಿಯ ಆರ್ಥಿಕ ಸ್ಥಿತಿ ಅನಾನುಕೂಲಗಳ ನಡುವೆಯೇ ಸಾಗುತ್ತಿರುವುದು ತಿಳಿದುಬಂದಿತ್ತು. ಅವರ 'ಸಾಥಿನ್' ಸಂಬಳ ಇಂದು ೨೦೦೦ಕ್ಕೆ ಮುಟ್ಟಿದೆ. ಅಷ್ಟರಲ್ಲಿ ಅವರ ಬದುಕು ನಡೆಯುತ್ತಿದೆ.

ಭಾಂವ್ರಿಯ ಜೊತೆಯಲ್ಲಿ ಕಿರಿಯ ಮಗಳು ರಾಮೇಶ್ವರಿ ಬಂದಿದ್ದಳು. ಆಕೆ ಜಯಪುರದಲ್ಲಿ ಶಾಲಾ ಶಿಕ್ಷಕಿ. ಗಂಡ ಮತ್ತು ಮಗನೊಡನೆ ಜಯಪುರದಲ್ಲಿ ಆಕೆಯ ವಾಸ. ಭಾಂವ್ರಿಯ ಮಾತುಗಳನ್ನು ಆಕೆ ಹಿಂದಿಗೆ ಅನುವಾದಿಸುತ್ತಿದ್ದಳು.

ವೇದಿಕೆಯ ಮೇಲೆ ಆ ದಿನ ಭಾಂವ್ರಿ ಅಲ್ಲಿ ನೆರೆದ ಮಹಿಳೆಯರನ್ನು ಉದ್ದೇಶಿಸಿ ಹಾಡಿದಳು:

'ಚಾರ್ ದಿನ್ ಕಿ ಸಹೇಲಿ, ಸಹೇಲಿ ನಹೀ
ಉಮ್ರ್ ಭರ್ ಸಾಥ್ ದೇನೇ ಕಾ ವಾದಾ ಕರೋ...'
(ನಾಲ್ಕು ದಿನದ ಗೆಳತಿ, ಗೆಳತಿ ಅಲ್ಲ.
ಬದುಕು ಪೂರಾ ಜೊತೆ ನಿಲ್ಲುವ ವಚನ ಕೊಡು...)

ಭಾಂವ್ರಿ ಹೊರಟಾಗ ಏಕೋ ಮನಸ್ಸಿಗೆ ಪಿಚ್ಚೆನಿಸಿತ್ತು. 'ಕಾರ್ಯಕ್ರಮ ಮುಗಿಯಿತು. ನಾವು ಹಿಂತಿರುಗುತ್ತೇವೆ ಕೈತುಂಬಾ ಬರುವ ನಮ್ಮ ಸಂಬಳದ ಕೆಲಸಕ್ಕೆ, ಆರಾಮದ ಬದುಕಿಗೆ. ಭಾಂವ್ರಿ ಹಿಂತಿರುಗುತ್ತಾಳೆ ತನ್ನ ಬದುಕಿನ ಬಿಸಿಲು ಮರಳುಗಾಡಿಗೆ, ಅಲ್ಪ ಸಂಬಳದಲ್ಲಿ ಬದುಕುವ ಕಷ್ಟದ ಜೀವನಕ್ಕೆ. ಇನ್ನು ಆರೇಳು ವರ್ಷಕ್ಕೆ ನಿವೃತ್ತಳಾದಾಗ ಪಿಂಚಣಿಯಿಲ್ಲದ ಅನಿಶ್ಚಿತ ಬದುಕಿಗೆ. ಭಾಂವ್ರಿ ಒಂದು ದಿನದ ಉತ್ಸವಮೂರ್ತಿಯಾಗಿ ಮರೆತು ಹೋಗಬಾರದು. ಒಂದು ಲೇಖನದ ವಸ್ತುವಾಗಿ ಮುಗಿಯಬಾರದು. ನಾವೇನಾದರೂ ಜೊತೆಯಾಗಿ ಭಾಂವ್ರಿಯ ಭವಿಷ್ಯಕ್ಕೆ ಒಂದು ವ್ಯವಸ್ಥೆ ಮಾಡಬಲ್ಲೆವೆ? ಭಾಂವ್ರಿಯನ್ನು ಅಪ್ಪಿ ಬೀಳ್ಕೊಡುವಾಗ ಈ ಸಂಬಂಧವನ್ನು 'ಉಮ್ರ್ ಭರ್ ನಿಭಾನೆ ಕಾ' ವಚನ ಕೊಡಲು ಮನಸ್ಸು ತುಡಿದಿತ್ತು.

ಭಾಂವ್ರಿಯನ್ನು ಕೇಳಿದ್ದೆ, ಅವರಿಗೆ ಯಾವ ರೀತಿ ಸಹಾಯ ಮಾಡಿದರೆ ಅವರ ಜೀವನಕ್ಕೆ ಒಂದಿಷ್ಟು ಅನುಕೂಲವಾಗಬಹುದು ಎಂದು. ಅವರದು ಎರಡು ಭೀಗಾ ಜಮೀನಿದೆ. ಆದರೆ ನೀರಿನ ಕೊರತೆ. ಬಹುಶಃ ಭಾವಿ ತೋಡಿಸಿದರೆ ಸಹಾಯವಾಗಬಲ್ಲದು ಎಂದರು. 'ಭಾಂವ್ರಿಗೊಂದು ಭಾವಿ' ನನ್ನ ಮನಸ್ಸಿನಲ್ಲಿ ಝೇಂಕರಿಸಿತ್ತು.

ಬೆಂಗಳೂರಿನಲ್ಲಿ ಕುಳಿತು ರಾಜಾಸ್ತಾನದ ಭಟೇರಿ ಗ್ರಾಮದಲ್ಲಿ ಭಾವಿ ತೋಡಿಸುವುದು ಹೇಗೆ? ಯಾರು ನಿಂತು ತೋಡಿಸುವರು? ಆಕೆಗೆ ಬಹಿಷ್ಕಾರ ಹಾಕಿರುವ ಹಳ್ಳಿಯಲ್ಲಿ, 'ಮೇಲ್ಜಾತಿ'ಯ ಆರ್ಭಟ ನಿಂತಿರದ ತಾಣದಲ್ಲಿ, ಆಕೆಗೆ ಭಾವಿ ತೋಡಿಸುವುದು ಸುಲಭದ ಕೆಲಸವೆ? ಇಂತಹ ಅನೇಕ ಪ್ರಶ್ನೆಗಳು ಮೂಡಿದವು. ಅವುಗಳಿಗೆ ಉತ್ತರವನ್ನು ನಾನೇ ಕಂಡುಕೊಳ್ಳಬೇಕಿತ್ತು. ಹಣ ಸಂಗ್ರಹಿಸಿ ಅವರ ಕೈಗಿಟ್ಟರೆ ಅದು ಸಾಧ್ಯವಾಗುವ ಕೆಲಸವಾಗಿರಲಿಲ್ಲ. ಆಕೆಯ ಕುಟುಂಬ ದೊಡ್ಡದಿದೆ. ಕುಟುಂಬದ ಅಗತ್ಯಗಳೂ ನೂರಿವೆ. ಬಂದ ಅನೇಕ ಪ್ರಶಸ್ತಿಯ ಹಣ ಕೈಯಲ್ಲಿ ನಿಲ್ಲದೆ ಕರಗಿಹೋಗಿದೆ.

ಹಾಗೆಂದೇ ಭಾಂವ್ರಿಯ ಭಟೇರಿಗೆ ಭೇಟಿಕೊಡಲು ಯೋಚಿಸಿದೆ. ಆಕೆಯ ಬದುಕು ಮತ್ತು ಪರಿಸರವನ್ನು ಹತ್ತಿರದಿಂದ ಕಂಡುಬರುವ ಆಸೆ ಮೂಡಿತು. ಆಗಸ್ಟ್ ತಿಂಗಳಲ್ಲಿ ಕೆಲವು ದಿನಗಳ ರಜೆ ಹಾಕಿ, ರಾಜಾಸ್ತಾನಕ್ಕೆ ಹೊರಟು ನಿಂತೆ. ಗೆಳತಿ ಗೀತಾ ಅವರಿಗೆ 'ಬರುವಿರಾ?' ಕೇಳಿದೆ. ಉತ್ಸಾಹದಿಂದ ಗೀತಾ, ಅವರ ಪತಿ ಕೇಶವ ಮೂರ್ತಿ ಮತ್ತು ನಾದಿನಿ ರಾಜೇಶ್ವರಿ ಜೊತೆಯಾದರು. ಜಯ್‌ಪುರ್‌ಗೆ ವಿಮಾನದ ಟಿಕೆಟ್ ಬುಕ್ ಮಾಡಿದ ದಿನವೇ ಭಾಂವ್ರಿಗೆ ಫೋನ್ ಮಾಡಿದೆ. ಆಕೆಯ ಮಗಳಿಗೆ ನಾವು ಬರುವ ದಿನಾಂಕವನ್ನು ತಿಳಿಸಿ ಹೇಳಿದೆ.

**ರಾಜಾಸ್ತಾನಕ್ಕೆ ಪಯಣ**

ದಿನಾಂಕ ೧೯ ಆಗಸ್ಟ್ ೨೦೧೩, ಜಯ್‌ಪುರ್ ತಲುಪಿದಾಗ ಏರು ಮಧ್ಯಾಹ್ನವಾಗಿತ್ತು. ಭಾಂವ್ರಿಯ ಮಗಳು ರಾಮೇಶ್ವರಿ 'ನೀವು ಇಳಿದುಕೊಳ್ಳುವ ಹೋಟೆಲಿನ ಹೆಸರು ಹೇಳಿ, ನಾನು ಬಂದು ಭೇಟಿಯಾಗುತ್ತೇನೆ' ಅಂದಿದ್ದರು. 'ಹೋಟೆಲ್ ಬನಿ ಪಾರ್ಕ್ ಪ್ಯಾಲೆಸ್' ಎಂಬ ನಗರ ಮಧ್ಯದಲ್ಲಿಯೇ ಇದ್ದ ಒಂದು ಸಣ್ಣ ಹಳೆಯ ಹವೇಲಿಯಲ್ಲಿ ಇಳಿದುಕೊಂಡೆವು.

ಹೋಟೆಲ್ ತಲುಪಿದ ಮೇಲೆ, ರಾಮೇಶ್ವರಿಗೆ ಫೋನ್ ಮಾಡಿದೆ. ಮೊದಲೇ ತಿಳಿಸಿದಂತೆ ಮರುದಿನ ಭಟೇರಿಗೆ ಹೊರಡುವ ಯೋಜನೆ ನಮ್ಮದಾಗಿತ್ತು. ಇಂದು ಆಕೆ ಬರಬಹುದು ಎಂಬ ನಮ್ಮ ನಿರೀಕ್ಷೆ ಈಡೇರಲಿಲ್ಲ. 'ನಾಳೆ ಆದಷ್ಟು ಬೆಳಗ್ಗೆ ಬೇಗ ಹೊರಡೋಣ. ನಿಮ್ಮ ಅಮ್ಮನೊಡನೆ ಭಟೇರಿಯಲ್ಲಿ ನನಗೆ ಇಡೀ ದಿನವನ್ನು ಕಳೆಯುವ ಇಚ್ಛೆ. ಟ್ಯಾಕ್ಸಿ ಮಾಡಿಕೊಂಡು ಬರುತ್ತೇವೆ. ಎಲ್ಲಿ ನಿಮ್ಮನ್ನು ಭೇಟಿಯಾಗುವುದು?' ಕೇಳಿದೆ. ಬೆಳಗ್ಗೆ ೯ ಗಂಟೆಗೆ 'ಘಾಟ್‌ಗೇಟ್ ಬಸ್ ನಿಲ್ದಾಣ'ದಲ್ಲಿ ಆಕೆ ಬಂದಿರುವುದಾಗಿಯೂ ಅಲ್ಲಿಂದ ಆಕೆಯನ್ನು

# ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ

## ಇವರಿಂದ ರಚಿತವಾದ ಕೃತಿಗಳು

ಸಂಪುಟ 1 ; ರೂ. 320/-




ಸಂಪುಟ 2 ; ರೂ. 250/-




ಸಂಪುಟ 3 ; ರೂ. 425/-




ರೂ. 995/-




ಪ್ರಸ್ತುತ ಭೂಗೋಳ ಸಂಗಾತಿ ಪುಸ್ತಕವನ್ನು ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಕರಿಗೆ ಮತ್ತು ವಿದ್ಯಾರ್ಥಿ ವೃಂದಕ್ಕೆ ವಿಶಾಲವಾದ ವಿಶ್ವ ಸೌರವ್ಯೂಹ ಹಾಗೂ ಮಾನವನ ಆವಾಸ ಸ್ಥಾನವಾದ ಪೃಥ್ವಿಯನ್ನು ಕುರಿತ ಆಳವಾದ ಅಧ್ಯಯನ ಮಾಡಲು ವಿಶೇಷವಾಗಿ ರಚಿಸಲಾಗಿದೆ. ಶಿಲೆಗಳು ಮತ್ತು ಭೂ ಮೇಲ್ಮೈ ಸ್ವರೂಪಗಳನ್ನು ರೂಪಿಸಿ ಹಾಗೂ ಏರ್ಪಡಿಸಿ ವೈವಿಧ್ಯಮಯವಾದ ಸ್ವರೂಪಗಳನ್ನು ಸೃಷ್ಟಿಸುವ ಶಕ್ತಿಗಳಿಂದ ಗೋಚರಿತ ಮತ್ತು ಆಕರ್ಷಣೀಯ ವಿವಿಧ ಮಜಲುಗಳನ್ನು ಈ ಪುಸ್ತಕವು ಪ್ರತಿಬಿಂಬಿಸುತ್ತದೆ.

............ ಈ ಸಂಪುಟದಲ್ಲಿ ನಾವು ಜೀವಮಂಡಲ ಎಂಬ ನಾಲ್ಕನೆಯ ಮಂಡಲದ ಬಗ್ಗೆ ಪರಿಚಯ ಮಾಡಲು ಪ್ರಯತ್ನಿಸಿದ್ದೇವೆ... ಇಲ್ಲಿ ಜೀವ ಮಂಡಲದ ಪ್ರಾಮುಖ್ಯತೆ ಹಾಗೂ ಪರಿಸರದ ಮೇಲೆ ಮಾನವನ ಪ್ರಭಾವದಿಂದ ಉಂಟಾದ ಪರಿಸರದ ನಾಶ ಮತ್ತು ಪರಿಸರ ಮಾಲಿನ್ಯ ಕುರಿತು ಸವಿಸ್ತಾರವಾಗಿ ಬರೆಯಲಾಗಿದೆ.

... 'ಭೂಗೋಳ ಸಂಗಾತಿ ಸಂಪುಟ 3 'ಪೃಥ್ವಿಯ ಮೇಲೆ ದೊರೆಯುವ ವಿವಿಧ ಬಗೆಯ ಸಂಪನ್ಮೂಲಗಳು, ವಿವಿಧ ಪ್ರದೇಶಗಳಲ್ಲಿ ಮಾನವ ಚಟುವಟಿಕೆಗಳಲ್ಲಿನ ವ್ಯತ್ಯಾಸಗಳು ಹಾಗೂ ಅವುಗಳ ಪರಿಣಾಮ ಸ್ವರೂಪ ವಾಗಿ ಮಾನವನ ವಿವಿಧ ಉದ್ಯೋಗ ಗಳ, ಉಂಟಾದ ಸಂಪನ್ಮೂಲಗಳ ಅಭಿವೃದ್ಧಿಗಳನ್ನು ವಿವರಿಸುತ್ತದೆ. ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಸೃಜನಾತ್ಮಕ ಶಕ್ತಿ ಯನ್ನು ಹೆಚ್ಚಿಸಲು ಹಾಗೂ ಭೂಗೋಳ ಶಾಸ್ತ್ರದ ಅಧ್ಯಯನವನ್ನು ಚಟುವಟಿಕೆ ಆಧಾರಿತವನ್ನಾಗಿ ಮಾಡಲು ಸೂಕ್ತ ಚಟುವಟಿಕೆಗಳನ್ನು ಸೂಚಿಸ ಲಾಗಿದೆ... ಮಾನವನ ಚಟುವಟಿಕೆಗಳ ಮೇಲೆ ನೈಸರ್ಗಿಕ ಪರಿಸರವು ಪ್ರಭಾವ ಬೀರುತ್ತದೆ ಹಾಗೂ ಮಾನವನು ನೈಸರ್ಗಿಕ ಪರಿಸರದೊಳಗೆ ತನ್ನ ಲಾಭ ಕ್ಕಾಗಿ ಮಧ್ಯೆ ಪ್ರವೇಶಿಸುತ್ತಾನೆ ಎಂಬುದನ್ನು ಈ ಸಂಪುಟವು ವಿವರಿಸುತ್ತದೆ.

... ಈ ಪುಸ್ತಕದ ವಿಷಯವು ಪ್ರೌಢಶಾಲಾ ಹಂತದ ಪಠ್ಯ ವಸ್ತುವನ್ನು ಒಳಗೊಂಡಿದೆ. ಭೂಮಿಯ ಉಗಮದಿಂದ, ಜೀವಿಗಳ ವಿಕಾಸದಿಂದ ಹಿಡಿದು ಆಧುನಿಕ ಯುಗದ ಘಟನೆಗಳನ್ನು ಒಳಗೊಂಡಿದೆ... ಚಿತ್ರ ನೋಡಿ ನಿರೂಪಣೆ ಓದುತ್ತ ಹೋದರೆ ಗತಕಾಲದ ವಾಸ್ತವ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯುತ್ತದೆ.... ಚರಿತ್ರೆಯ ಸಾಮಾಜಿಕ, ಸಾಂಸ್ಕೃತಿಕ, ಸಾಧನೆಗಳ ದರ್ಶನ, ಜನತೆಯ ಜೀವನ ರೂಪುಗೊಂಡ ವಿಧಾನದ ಪರಿಚಯ, ಮಾನವ ಜನಾಂಗದ ಅಧ್ಯಯನ, ಕಾಲ ದೊಂದಿಗೆ ಮಾನವರ ಪಯಣ ಎಂಬ ಮಹತ್ವದ ಅಂಶಗಳನ್ನು ಮಕ್ಕಳಿಗೆ ತಿಳಿಯಹೇಳಿ, ಚರಿತ್ರೆಯ ಬೋಧನೆಗೆ ಹೊಸ ಆಯಾಮ ಗಳನ್ನೂ ಸೂಚಿಸುವುದು. ವೈಜ್ಞಾನಿಕ ದೃಷ್ಟಿಕೋನವನ್ನು ಮೂಡಿಸುವುದು ಹಾಗೂ ಚರಿತ್ರೆಯ ಅಭ್ಯಾಸವನ್ನು ಸುಸಂಗತಗೊಳಿಸುವುದೇ ಈ ಪುಸ್ತಕ ರಚನೆಯ ಮೂಲ ಆಶಯವಾಗಿದೆ.

## ಶ್ರೀ ಗಾಯತ್ರಿ ಎಂಟರ್‌ಪ್ರೈಸಸ್

285/ಎಫ್ - 6, ಉತ್ತರಾದಿ ಮಠ ರಸ್ತೆ, 5ನೇ ಪಶ್ಚಿಮ ಅಡ್ಡರಸ್ತೆ
ಮೈಸೂರು -570004 ಇ-ಮೇಲ್ : kar_mas56@yahoo.co.in
ಮೊಬೈಲ್ : 9448074435, 9449853308, 9242459332

ಕರೆದುಕೊಂಡು ಭಟೇರಿ ಗ್ರಾಮಕ್ಕೆ ಹೊರಡುವುದೆಂದೂ ತಿಳಿಸಿದರು. 'ಭಟೇರಿ ಎಷ್ಟು ದೂರವಿದೆ ?' ಕೇಳಿದೆ. ಟ್ಯಾಕ್ಸಿಯವನಿಗೆ ಹೇಳಲು ವಿವರಗಳು ಬೇಕಿತ್ತು. 'ಘಾಟ್‌ಗೇಟ್‌ನಿಂದ ಕೇವಲ ೨೫ ಕಿಲೋಮೀಟರ್' ಆಕೆ ಹೇಳಿದರು.

ಭಟೇರಿಯಲ್ಲಿ ಭಾವಿ ತೋಡಿಸಲು ನನಗೆ ಇಲ್ಲೇ ಇರುವ ಯಾರದಾದರೂ ನೆರವು ಬೇಕಿತ್ತು. 'ತಾಯಿಮನೆ'ಯ ಜ್ಯೋತಿ ಅವರ ಪತಿ ಕೇಶವ ಮೂರ್ತಿ ಅವರೊಡನೆ ಮಾತನಾಡಿದ್ದೆ. ಕೇಶವ ಮೂರ್ತಿ ಅವರು ಜಯಪುರದಲ್ಲಿದ್ದ ಸುಹಾಸ್ ಜಿ. ಹಿರೇಮಠ್ ಅವರ ಫೋನ್ ನಂಬರ್ ಕೊಟ್ಟರು. 'ನಾವು ನಿಂತು ಭಾವಿ ತೋಡಿಸಿ ಕೊಡುತ್ತೇವೆ' ಫೋನ್ ಮಾಡಿದಾಗ ಹಿರೇಮಠ್ ಹೇಳಿದರು. 'ಒಂದು ಭಾವಿಗೆ ಎಷ್ಟು ಹಣ ಬೇಕಾಗಬಹುದು?' ಎಂದು ಕೇಳಿದಾಗ 'ಒಂದೂವರೆ ಅಥವಾ ಎರಡು ಲಕ್ಷ ಆಗಬಹುದು. ವಿಚಾರಿಸಿ ಹೇಳುತ್ತೇನೆ' ಎಂದೂ ತಿಳಿಸಿದರು.

ಜ್ಯೋತಿ ನೋವಿನ ಇತಿಹಾಸವನ್ನು ಬೆನ್ನಲ್ಲಿ ಇಟ್ಟುಕೊಂಡು ಹದಿನಾರು ವರ್ಷಗಳ ಹಿಂದೆ ಬೆಂಗಳೂರಿಗೆ ಬಂದ ಹುಡುಗಿ. 'ಸುಮಂಗಲಿ ಸೇವಾಶ್ರಮ'ದಲ್ಲಿ ಆಶ್ರಯ ಪಡೆದಿದ್ದಳು. ನಂತರ ತನ್ನ ಕಾಲ ಮೇಲೆ ನಿಂತು, ದುಡಿದವಳು. ಆರು ವರ್ಷಗಳ ಹಿಂದೆ ನಿರ್ಗತಿಕ ಮಕ್ಕಳಿಗಾಗಿ 'ತಾಯಿಮನೆ' ತೆರೆದವಳು. ವೈಟ್‌ಫೀಲ್ಡ್‌ನ ಜಿಂಕ್‌ಶೀಟ್‌ನ ಒಂದು ಔಟ್‌ಹೌಸ್‌ನಲ್ಲಿ ಹತ್ತಾರು ಮಕ್ಕಳೊಂದಿಗೆ ಆರಂಭಿಸಿದ 'ತಾಯಿಮನೆ', ಈಗ ಊರಾಚೆಯ ಸರ್ಜಾಪುರ ರಸ್ತೆಯ ಒಂದಿಷ್ಟು ತೆರೆದ ಬಾಡಿಗೆ ನೆಲದಲ್ಲಿ ೫೮ ಮಕ್ಕಳಿಗೆ ಆಶ್ರಯ ನೀಡುತ್ತಿದೆ.


'ರಾವಾಸ್' ಗ್ರಾಮದ ತವರಿನಲ್ಲಿ ತನ್ನ ತಮ್ಮನ ಸೊಸೆ ಮತ್ತು ಮೊಮ್ಮಕ್ಕಳೊಡನೆ ಭಾಂವ್ರಿದೇವಿ

* * *

ಮರುದಿನ ಆಗಸ್ಟ್ ೨೦ನೇ ತಾರೀಖು, ಒಂದು ಟ್ಯಾಕ್ಸಿ ಗೊತ್ತು ಮಾಡಿಕೊಂಡು ಭಟೇರಿಗೆ ಹೊರಟೆವು. ಬಲು ಉದ್ವೇಗದಿಂದ ೮.೪೫ಕ್ಕೇ ನಗರದ ನಡುವೆಯೇ ಇರುವ 'ಘಾಟ್‌ಗೇಟ್'ಗೆ ಬಂದೆವು. ಅಲ್ಲಿ ಇಷ್ಟೇ ಅಗಲದ ಅಸಾಧ್ಯ ಕೊಚ್ಚೆಯೆದ್ದ ರಸ್ತೆಯಲ್ಲಿ ಬಂದ ಬಸ್ಸುಗಳೆಲ್ಲವೂ ನಿಲ್ಲುತ್ತಿದ್ದವು. ಮಳೆ ಜಿನುಗುತ್ತಿತ್ತು. ಬೀದಿಯ ಬದಿಯಲ್ಲಿ ತಿಪ್ಪೆಯ ರಾಶಿ. ಕಾಲು ಇಡುವುದಕ್ಕೂ ಕಷ್ಟ. ಗಂಟೆ ಒಂಭತ್ತಾಯಿತು – ರಾಮೇಶ್ವರಿ ಬರಲಿಲ್ಲ. ಒಂಭತ್ತೂವರೆ ಆದರೂ ಆಕೆಯ ಪತ್ತೆ ಇಲ್ಲ. ಈಕೆ ಶಾಲೆಯೊಂದರಲ್ಲಿ ಪ್ರಾಧ್ಯಾಪಕಿ. ಹೆಚ್ಚಿನ ಶಿಸ್ತು, ಜವಾಬ್ದಾರಿಯನ್ನು ಬಹುಶಃ ನಾನು ನಿರೀಕ್ಷಿಸಿದ್ದೆ. ಮೊಬೈಲ್ ನಂಬರಿಗೆ ಫೋನ್ ಮಾಡಿದೆ. 'ಇಗೋ ಈಗ ಬಂದೆ' ಎಂದರು. ಆದರೆ ೧೦ ಗಂಟೆ ದಾಟಿದರೂ ಬರಲಿಲ್ಲ. 'ಈಗ ಬಂದೆ, ಇದೋ ಬಂದೆ' ಎಂದಾಕೆ ಕಡೆಗೂ ಬಂದು ಇಳಿದದ್ದು ೧೦.೩೦ಕ್ಕೆ! ಬೆಳೆದ ಮಗನೊಡನೆ ಬಂದಿದ್ದಳು. ಇನ್ನು ಮೂಡು ಕೆಡಿಸಿಕೊಳ್ಳುವುದು ಬೇಡ ಎಂದು ಹೊರಟೆವು.

ಜಯಪುರದಿಂದ ಹೊರಬಿದ್ದಂತೆ, ಬೆಟ್ಟ ಕಡಿದ ದೊಡ್ಡ ಸುರಂಗದ ಮೂಲಕ ಆಗ್ರಾಗೆ ಹೋಗುವ ಹೆದ್ದಾರಿಗೆ ಬಂದಿದ್ದೆವು. ಈ ರಸ್ತೆ ದಿಲ್ಲಿಗೆ ಹೋಗುವ ಕಾರಣ ಅಚ್ಚುಕಟ್ಟಾಗಿತ್ತು. ಈ ಹಾದಿಯಲ್ಲಿ ಸುಮಾರು ಹದಿನೈದು ನಿಮಿಷ ಸಾಗಿದ್ದೆವು, ಈಗ 'ರಾಜಾಧೋಕ್ ಟಾಲ್ ಪ್ಲಾಸಾ' ಬಂದಿತ್ತು. ಇದಾದ ಕೊಂಚ ದೂರಕ್ಕೆ ಬಲಕ್ಕೆ ಹಳ್ಳಿಯ ಹಾದಿಗೆ ಟ್ಯಾಕ್ಸಿ ತಿರುಗಿತು. ಬಾಜ್ರಾ, ಸಾಸಿವೆ, ಗೋಧಿ ಬೆಳೆಯ ಹೊಲಗಳು. 'ಬಸ್ಸೀಚಕ್ ಕೆ ಪಾಸ್ ಭಟೇರಿ' ಎಂದಿದ್ದರು ಭಾಂವ್ರಿದೇವಿ. 'ಅದು ಹತ್ತಿರವೇ ಇದೆ' ಟ್ಯಾಕ್ಸಿ ಚಾಲಕ ಬೆಳಗ್ಗೆ ಹೇಳಿದ್ದ. ಮೋಡ ಮುಸುಕಿತ್ತು. ನಡು ನಡುವೆ ಮಳೆಯೂ ಸುರಿಯುತ್ತಿತ್ತು. ಕೆಲವೆಡೆ ಟಾರ್ ಇಲ್ಲದಿದ್ದರೂ ರಸ್ತೆ ಹಾಗೂ ಹೀಗೂ ಸಾಗಿತ್ತು. ಆದರೆ ಹೊರಟು ಗಂಟೆಯ ಮೇಲಾದರೂ ಭಟೇರಿಯ ಸುಳಿವಿಲ್ಲ. ಚಾಲಕ ಏನೋ ಕೇಳುತ್ತಿದ್ದ, ರಾಮೇಶ್ವರಿ ತೋರಿಸಿದ ದಾರಿಯಲ್ಲಿ ಗಾಡಿ ಹೊರಳಿಸುತ್ತಾ ನಡೆದಿದ್ದ. ಅವರಿಬ್ಬರೂ ಸ್ಥಳೀಯ ರಾಜಾಸ್ತಾನಿ ಭಾಷೆಯಲ್ಲಿ ಮಾತನಾಡುತ್ತಿದ್ದರಿಂದ ನಮಗೆ ಸರಿಯಾಗಿ ಅರ್ಥವಾಗುತ್ತಿರಲಿಲ್ಲ.

ಗಂಟೆ ೧೨.೩೦ ಆಗಿತ್ತು. ಅರೆ ೨೫ ಕಿ.ಮೀ. ಎಂದದ್ದು, ತುಂಬಾ ದೂರ ಬಂದಿದ್ದೇವಲ್ಲ ಅನಿಸಿತು. ಈಗ ರಸ್ತೆ ವಿಪರೀತ ಕೆಟ್ಟದ್ದಾಗಿತ್ತು. ಇಲ್ಲಿ ದಿಟಕ್ಕೆ ರಸ್ತೆಯೇ ಇರಲಿಲ್ಲ, ನೀರು ತುಂಬಿದ ದೊಡ್ಡ ದೊಡ್ಡ ಹೊಂಡಗಳಲ್ಲಿ ಗಾಡಿಯೇ ಉರುಳಿಹೋಗುವಂತಿತ್ತು. ಚಾಲಕ ವಿಪರೀತ ಏರು ಸ್ವರದಲ್ಲಿ ರೇಗುವುದು ಕಂಡಿತು. 'ರಾಮೇಶ್ವರಿ, ಭಟೇರಿ ಇನ್ನೂ ಎಷ್ಟು ದೂರವಿದೆ ?' ಅನುಮಾನದಿಂದ ನಾನು ಕೇಳಿದೆ. ಟ್ಯಾಕ್ಸಿ ಚಾಲಕ 'ಭಟೇರಿ ಹಿಂದೆ ಹೋಗಿ ಆಗಲೇ ಒಂದು ಗಂಟೆ ಆಯಿತು. ಭಟೇರಿ ಎಂದು ಕರೆದು ತಂದಿರಿ, ಅದರ ಎರಡರಷ್ಟು ದೂರ ಬಂದಿದ್ದೇನೆ. ಇಲ್ಲಿಗೆ ಎಂದಿದ್ದರೆ ನಾನು ಬರುತ್ತಲೇ ಇರಲಿಲ್ಲ' ಎಂದು ತಗಾದೆ ತೆಗೆದಾಗ ನನಗೆ ಅಚ್ಚರಿ. 'ಭಟೇರಿಗೆ ಹೋಗುವುದು ಬಿಟ್ಟು ಎಲ್ಲಿಗೆ ಹೋಗುತ್ತಿದ್ದೇವೆ?' ಕೇಳಿದೆ.

'ಸೋದರ ಮಾವನ ಮನೆಗೆ. ಅಮ್ಮ ಅಲ್ಲಿದ್ದಾಳೆ' ಎಂದಳು. ಅರೆ ನಿನ್ನೆ ಫೋನ್ ಮಾಡಿದಾಗ ಆಗಲೀ, ಬೆಳಗ್ಗೆ ಹೊರಟಾಗ ಆಗಲೀ ಈಕೆ ತಿಳಿಸಿರಲಿಲ್ಲವಲ್ಲ ಅಚ್ಚರಿಗೊಂಡೆ. 'ನೀನು ಹೇಳಬಾರದೇನಮ್ಮ. ಬೆಂಗಳೂರಿನಿಂದ ಭಟೇರಿಗೆ ನಿನ್ನ ಅಮ್ಮನನ್ನು ನೋಡಲು ಹುಡುಕಿ ಬಂದಿದ್ದೇವೆ. ಭಟೇರಿ ೨೫ ಕಿ.ಮೀ. ಆದರೇನು, ನೂರು ಕಿ.ಮೀ. ಆದರೂ ನಮಗೇನೂ ತೊಂದರೆ ಇರಲಿಲ್ಲ. ಆದರೆ ನೀನು ಮೊದಲೇ ಹೇಳಬೇಕಲ್ಲವೆ? ಟ್ಯಾಕ್ಸಿ ಚಾಲಕನಿಗೆ ಸರಿಯಾಗಿ ನಾವು ತಿಳಿಸಲು ಸಾಧ್ಯವಾಗುತ್ತಿತ್ತು. ಇನ್ನೂ ಬೇಗ ಹೊರಡಬಹುದಿತ್ತು' ನಾನು ಹೇಳಿದೆ. ಅದಕ್ಕೆಲ್ಲ ಆಕೆಯಲ್ಲಿ ಉತ್ತರ ಇರಲಿಲ್ಲ. 'ನಾವು ಈ ದಿನ ಭಟೇರಿಗೆ ಬರುತ್ತೇವೆ ಎಂದು ನಿನಗೆ ಮೊದಲೇ ತಿಳಿಸಿದ್ದೆನಲ್ಲ. ಅಮ್ಮನಿಗೆ ನೀನು ಹೇಳಲಿಲ್ಲವೆ ?' ಎಂದೂ ಕೇಳಿದೆ. 'ಸೋದರ ಮಾವನಿಗೆ ಹುಷಾರು ತಪ್ಪಿತು. ಅದಕ್ಕೆ ಹೋಗಿದ್ದಾಳೆ ಅಮ್ಮ' ಎಂದಳು.

**ಭಾಂವ್ರಿಯ ತವರು 'ರಾವಾಸ್'ಗೆ**

ಚಾಲಕ ಬೈಯ್ದುಕೊಂಡು ಹೊರಟಿದ್ದ. ಈಕೆ ಅತ್ತಾ ಇತ್ತಾ ರಸ್ತೆಯನ್ನು ತೋರಿಸಿ, ತಪ್ಪು ಹಾದಿಯಲ್ಲಿ ಮುಂದೆ ಹೋಗಿ ಹಿಂದಕ್ಕೂ ಬರಬೇಕಾಯಿತು. ದಾರಿಯುದ್ದಕ್ಕೆ ಇಲ್ಲಿ ಸರಕಾರಿ ಬಸ್ಸುಗಳು ಕಾಣಲೇ ಇಲ್ಲ. ಖಾಸಗಿ ಜೀಪುಗಳು ಮತ್ತು ವ್ಯಾನುಗಳು ಅಸಾಧ್ಯ ಸಂಖ್ಯೆಯಲ್ಲಿ ಜನರನ್ನು ತುಂಬಿಕೊಂಡು ತುಂಬಿದ ಬಸುರಿಯಂತೆ ತೂಗುತ್ತಾ ಸಾಗಿದ್ದವು. ಗಾಡಿಯ ಮಾಡಿನ ಮೇಲೆ, ಗಾಡಿಯ ಎಡಕ್ಕೆ ಬಲಕ್ಕೆ ಹಿಂದೆ ಮುಂದೆ ನೇತಾಡುತ್ತಿರುವ ಜನ. ಈ ಹಳ್ಳಿಗಳ ಜನರಿಗೆ ಒಂದು ಸುವ್ಯವಸ್ಥಿತ ಸಾರಿಗೆ ವ್ಯವಸ್ಥೆಯನ್ನೂ ಸರಕಾರ ಮಾಡಿದಂತಿರಲಿಲ್ಲ.

ಅಂತೂ ಒಂದು ಗಂಟೆಯ ಸುಮಾರಿಗೆ ಸೋದರ ಮಾವನ ಮನೆಗೆ ಬಂದಿಳಿದಾಗ, ಇದು 'ರಾವಾಸ್' ಎಂಬ ಗ್ರಾಮ ಎಂದು ತಿಳಿದುಬಂದಿತು.

ಒಂದು ಸಣ್ಣ ಕೋಣೆಯಲ್ಲಿ ತಮ್ಮನ ಹೆಂಡತಿಯ ಜೊತೆಯಲ್ಲಿ ಕುಳಿತಿದ್ದ ಭಾಂವ್ರಿ ನನ್ನನ್ನು ನೋಡುತ್ತಲೇ ಸಂಭ್ರಮದಿಂದ ಎದ್ದು ಅಪ್ಪಿದಳು.

ಇದು ಆಕೆಯ ತವರು ಮನೆ. ಈಗಿಲ್ಲಿ ಇಬ್ಬರು ತಮ್ಮಂದಿರ ಕುಟುಂಬಗಳು ವಾಸಿಸುತ್ತಿವೆ. 'ಈತ ಲಲ್ಲೂಜಿ ನನ್ನ ತಮ್ಮ' ಭಾಂವ್ರಿ ಪರಿಚಯ ಮಾಡಿಕೊಟ್ಟಳು. ಆತ ಸಡಗರದಿಂದ ಓಡಾಡಿದ. 'ಇನ್ನೊಬ್ಬ ಸೋದರ ಎಲ್ಲಿ ?' ಕೇಳಿದೆ. 'ಹೊಲಕ್ಕೆ ಹೋಗಿದ್ದಾನೆ' ಭಾಂವ್ರಿ ಮುಗ್ಧವಾಗಿ ಹೇಳಿದಳು. ಬಡೀ ಭಾಭೀ ಕಪೂರಿ, ಛೋಟೀ ಭಾಭೀ ಗೀತಾ. ಅಲ್ಲಿದ್ದ ಆರೇಳು ಮಕ್ಕಳು, ಮೊಮ್ಮಕ್ಕಳು ಪರಿಚಯವಾದರು. ಲಲ್ಲೂಜೀ ನಮಗಾಗಿ ಕೋಲ್ಡ್ ಡ್ರಿಂಕ್‌ನ ಇಷ್ಟೆತ್ತರದ ಬಾಟಲ್ ಹಿಡಿದು ಬಂದರು. 'ಬೇಡಿ ಖಂಡಿತಾ ಬೇಡಿ. ನಾವು ತಂಪು ಪಾನೀಯ ಕುಡಿಯುವುದಿಲ್ಲ. ನೀವೂ ಕುಡಿಯಬೇಡಿ. ಆರೋಗ್ಯಕ್ಕೆ ಒಳ್ಳೆಯದಲ್ಲ' ಎಂದು ಹೇಳುತ್ತಾ 'ದೀದೀ ಭಟೇರಿಗೆ ಹೊರಡೋಣ. ನನಗೆ ನಿಮ್ಮ ಹಳ್ಳಿಯಲ್ಲಿ ನೀವಿರುವ ಜಾಗ ನೋಡಬೇಕು' ಎಂದೆ. 'ಊಟ ಮಾಡಿಕೊಂಡು ಹೊರಡುವಿರಂತೆ' ಒತ್ತಾಯಿಸಿದರು. ಒಂದಿಷ್ಟು ಬೆಳಕಿರುವ ಮತ್ತೊಂದು ಕೋಣೆಗೆ ಬಂದೆವು.

ತಟ್ಟೆಯ ತುಂಬ ಪೂರಿ, ಬೋಂಡಾ, ದೊಡ್ಡ ದೊಡ್ಡ ಮಾವಿನ ಚೂರಿನ ಉಪ್ಪಿನಕಾಯಿ. ಬಟ್ಟಲಿನಲ್ಲಿ ಕಡಿ, ಹಾಲೂ ಸಕ್ಕರೆ ಹಾಕಿದ ಅನ್ನದ ಸಿಹಿ ಪಾಯಸ. ಆದರದಿಂದ ತಂದು ಮುಂದಿಟ್ಟರು. ಭಾಂವ್ರಿ ಬಡಿಸಿದಂತೆ ತೃಪ್ತಿಯಿಂದ ತಿಂದೆವು.

'ನೀವು ಹುಟ್ಟಿದ್ದು ಇಲ್ಲೇ ಏನು ?' ಕೇಳಿದೆ.

ಊಟವಾದ ಮೇಲೆ ಭಾಂವ್ರಿ ಹಸುಗಳನ್ನು ಕಟ್ಟಿದ್ದ ತೆರೆದ ಕೊಟ್ಟಿಗೆಯನ್ನು ತೋರಿಸುತ್ತಾ 'ಅಪ್ಪ ಅಮ್ಮ ಕಡುಬಡವರು. ನಾನು ಹುಟ್ಟಿದಾಗ ಅಲ್ಲಿ ಒಂದು ಹಟ್ಟಿ ಇತ್ತು. ಅದರಲ್ಲೇ ನಾನು ಹುಟ್ಟಿದ್ದು' ಎಂದರು. ಈಗಲೂ ಅವರ ಕುಂಬಾರ ವೃತ್ತಿಯೇ ಮುಂದುವರೆದಿತ್ತು. ತಾರಸಿಯ ಮೇಲೆ ಜೋಡಿಸಿದ್ದ ಮಡಕೆಗಳು. ಆದರೆ ತಮ್ಮಂದಿರ ಆರ್ಥಿಕ ಸ್ಥಿತಿ ಕೊಂಚ ಸುಧಾರಿಸಿದಂತೆ ಕಂಡಿತು. ಕಾಂಕ್ರೀಟಿನ ಮೂರ್ನಾಲ್ಕು ಬಿಡಿ ಬಿಡಿ ಸಣ್ಣ ಕೋಣೆಗಳಿದ್ದ ಮನೆ ಈಗ ಇಲ್ಲಿ ಹರಡಿತ್ತು. ಭಾಂವ್ರಿ ಒಂದು ಪಾಯಿಖಾನೆಯನ್ನೂ ಕಟ್ಟಿಸಿದ್ದಳು. ಇಲ್ಲಿ ಗ್ರಾಮಗಳಲ್ಲಿ ಪಾಯಿಖಾನೆ ಅಪರೂಪದ್ದು !

'ನಾವು ಇಲ್ಲಿಂದ ಹೊರಡೋಣ. ನನಗೆ ಭಟೇರಿಗೆ ನಿಮ್ಮ ಮನೆಗೆ ಹೋಗಬೇಕಿದೆ. ನೀವಿರುವ ಗ್ರಾಮವನ್ನು ನೋಡಬೇಕು' ಮತ್ತೆ ಹೇಳಿದೆ. ಈಗ ಭಾಂವ್ರಿಯೊಡನೆ ರಾವಾಸ್‌ನಿಂದ ಹೊರಟೆವು. ಕೊಂಚವೇ ದೂರ ಬಂದಿದ್ದೆವು. ನಾಂಗಲ್ ಎಂಬಲ್ಲಿ ರಾಮೇಶ್ವರಿ ಗಾಡಿ ನಿಲ್ಲಿಸಿದಳು. ಮಗನೊಡನೆ ಇಳಿದುಬಿಟ್ಟಳು. ನಾನು ಪೂರಾ ಕಕ್ಕಾಬಿಕ್ಕಿಯಾದೆ. ಆಕೆಗೆ ಹಿಂದಿ ಬರುತ್ತಿತ್ತು. ಭಾಂವ್ರಿ ಮಾತನಾಡುವ ಗ್ರಾಮ್ಯ ರಾಜಾಸ್ತಾನಿ ಭಾಷೆ ನನಗೆ ಅರ್ಥ ಮಾಡಿಕೊಳ್ಳಲು ಕಷ್ಟವಾಗಿತ್ತು. ಅದಕ್ಕೆಂದೇ ನನಗೆ ರಾಮೇಶ್ವರಿಯ ಅಗತ್ಯವಿತ್ತು. ರಾವಾಸ್‌ನಲ್ಲಿ ಆಕೆಯ ತಮ್ಮಂದಿರ ಕುಟುಂಬದ ಎದುರಿಗೆ ಮಾತನಾಡದ ನೂರು ಮಾತುಗಳನ್ನು ಭಟೇರಿಯಲ್ಲಿ ಆಡುವುದಿತ್ತು. ಆದರೆ ರಾಮೇಶ್ವರಿ 'ಇಲ್ಲಿ ನನ್ನ ಅತ್ತೆ ಮನೆ ಇದೆ' ಎಂದೇನೋ ಹೇಳಿ ಇಳಿದು ಹೋಗಿಯೇ ಬಿಟ್ಟಳು.

ವಿದ್ಯಾಭ್ಯಾಸದ ಸವಲತ್ತು ಪಡೆದು, ಕೆಲಸ ಹಿಡಿದು, ಜಯ್‌ಪುರದಲ್ಲಿ ನೆಲೆಸಿದ ರಾಮೇಶ್ವರಿಗೆ 'ತನ್ನ ತಾಯಿಯ ಹೋರಾಟದ ಚಾರಿತ್ರಿಕ ಮಹತ್ವದ ಅರಿವು ಇದೆಯೆ ?' ನನ್ನೊಳಗೆ ಪ್ರಶ್ನೆಗಳಿದ್ದವು.

**ಭಾಂವ್ರಿಯ ಭಟೇರಿಗೆ**

ಮತ್ತೆ ಅದೇ ಏಳುಬೀಳಿನ ರಸ್ತೆ. ಗಟಾರದ ನೀರು ತುಂಬಿದ ರಸ್ತೆ. ಮಧ್ಯೆ ಎಲ್ಲೋ ಒಂದಿಷ್ಟು ಹಾದಿ ಸುಧಾರಿಸಿದಾಗ ಗಾಡಿ ಓಡಿತು. ರಾವಾಸ್‌ನಿಂದ ಹೊರಟದ್ದು 'ಟಿಟೋಲಿ', 'ಲಾಡಲೀ ಕಾ ಬಾಸ್' ಎಂಬೆಲ್ಲ ಜಾಗಗಳನ್ನು ದಾಟಿ 'ಪಟಾನ್' ಎಂಬ ಹಳ್ಳಿಗೆ ಬಂದಿದ್ದೆವು. ಅತ್ಯಾಚಾರದ ಆ ಘೋರ ರಾತ್ರಿ ಭಾಂವ್ರಿ ತನ್ನ ಹಳ್ಳಿಯಲ್ಲಿ ಯಾರೂ ಸಹಾಯಕ್ಕೆ ಬಾರದಾಗ, ದೂರು ಸಲ್ಲಿಸಲು ಪತಿಯೊಡನೆ ಈ ಪಟಾನ್ ಹಳ್ಳಿಗೆ ನಡೆದುಬಂದಿದ್ದಳು.

ಕಡೆಗೂ ಏರು ಮಧ್ಯಾಹ್ನ ಭಟೇರಿಗೆ ಬಂದು ತಲುಪಿದೆವು. ಮುಖ್ಯಬೀದಿಯಿಂದ ಬಲಕ್ಕೆ ತಿರುಗಿದರೆ ಹಾದಿಯೇ ಇಲ್ಲದ ಕೊಚ್ಚೆಯ ನೀರು ಉದ್ದಕ್ಕೆ ಹರಡಿತ್ತು. ಅದರಲ್ಲೇ ಗಾಡಿ ಓಡಿತು.

ಒಂದು ಪುರಾತನ ಶಿಥಿಲ ದೇವಾಲಯದ ಎದುರು ಮಳೆ ನೀರು ನಿಂತು ಕಾಲು ಹೂತುಹೋಗುವಂತಹ ಜೌಗು ಪ್ರದೇಶದಲ್ಲಿ ಈಕೆಯ ಮನೆ ಇತ್ತು.

ಭಾಂವ್ರಿಗೆ ಇನ್ನೂ ನ್ಯಾಯ ದೊರೆಯದಿದ್ದರೂ ಅನೇಕ ಸಂಘ, ಸಂಸ್ಥೆಗಳು ಈಕೆಯ ಹೋರಾಟಕ್ಕೆ ಜೊತೆ ನಿಂತು ಬೆಂಬಲಿಸಿವೆ. ಪ್ರಶಸ್ತಿ ಪುರಸ್ಕಾರಗಳು ಹರಿದುಬಂದಿವೆ. ಹಾಗೆಂದೇ ಈ ನೆಲದಲ್ಲಿ, ಒಂದಿಷ್ಟು ಎತ್ತರದ ಬುನಾದಿಯ ಮೇಲೆ ಒಂದು ಗಟ್ಟಿ ಮನೆ ನಿಂತಿದೆ. ಸುಣ್ಣ ಬಳಿದ ಬಾಗಿಲಿಗೆ ನವಿಲಿನ ಚಿತ್ತಾರ. ಅಲ್ಲೇ ಆಕೆಯ ಮನೆಯ ಅಕ್ಕಪಕ್ಕ ಇಷ್ಟುದ್ದ ಬಾಲವನ್ನು ಹರಡಿಕೊಂಡು ಕತ್ತು ಕೊಂಕಿಸಿ ನಡೆದಾಡುವ ನವಿಲನ್ನೂ ಕಂಡೆ. ಈ ಹಳ್ಳಿಯ ಹಾದಿಯುದ್ದಕ್ಕೆ ಅಲ್ಲಲ್ಲಿ ನವಿಲುಗಳು ಕಂಡಿದ್ದವು. ಇಳಿವ ಸೂರ್ಯನ ಕಿರಣಗಳು ಬಾಗಿಲಿನಿಂದ ಒಳ ಹಾದಂತೆ ಭಾಂವ್ರಿಯೊಡನೆ ಮಾತನಾಡತೊಡಗಿದೆ.

ಭಾಂವ್ರಿ ತನ್ನ ಕತೆ ಹೇಳಿದಳು. ನಮಗೆ ತಿಳಿದ ನೋವಿನ ಕತೆ ಅದು. ಆದರೂ ನಮಗೆ ಅರಿವಿರದ ಅನೇಕ ವಿವರಗಳು ಇಲ್ಲಿ ತಿಳಿದುಬಂದಿತ್ತು. ಭಾಂವ್ರಿಯ ಅಮ್ಮನ ಹೆಸರು ರಾಮ್‌ಪುರೀ. ತಂದೆಯ ಹೆಸರು ಡುಂಗಲಾಲ್ ಕುಮಾರ್. ಗಂಡನ ಹೆಸರು ಮೋಹನ್‌ಲಾಲ್ ಪ್ರಜಾಪತ್. ಕುಂಬಾರರ ಸಮುದಾಯದಲ್ಲಿ ಕೆಲವರು ತಮ್ಮನ್ನು 'ಪ್ರಜಾಪತ್' ಅಥವಾ 'ಪ್ರಜಾಪತಿ' ಎಂದು ಕರೆದುಕೊಳ್ಳುತ್ತಾರೆ. ಇವರ ಮುಖ್ಯ ಕಸುಬು ಮಡಕೆ ಮಾಡುವುದು. ಕುಂಬಾರ ಸಮುದಾಯದ ಈ ಒಂದು ವರ್ಗ ತಮ್ಮನ್ನು ಸೃಷ್ಟಿಕರ್ತ ಬ್ರಹ್ಮನ ನೇರ ವಂಶಜರು ಎಂದು ಭಾವಿಸುತ್ತದೆ.

ವಿವಾಹವಾಗಿ ಗಂಡನ ಮನೆಗೆ ಭಟೇರಿಗೆ ಭಾಂವ್ರಿ ಬಂದಿದ್ದಳು. ಭಟೇರಿಯಲ್ಲಿ ಇವರದೊಂದೇ ಕುಂಬಾರ ಕುಟುಂಬ. ಉಳಿದಂತೆ ಬಹುಸಂಖ್ಯೆಯಲ್ಲಿ ಇದ್ದವರು ಗುಜ್ಜಾರರು. ಈ ಪ್ರದೇಶದಲ್ಲಿಯೇ ಗುಜ್ಜಾರ್‌ರದು ಪ್ರಬಲ ಜಾತಿ. ಸಣ್ಣ ಸಂಖ್ಯೆಯಲ್ಲಿ ಬ್ರಾಹ್ಮಣ ಮನೆಗಳು. ಈಕೆಗೆ ಎಷ್ಟು ಮಕ್ಕಳು ಎಂಬುದೂ ಒಂದೊಂದು ಕಡೆ ಒಂದೊಂದು ಬಗೆಯಲ್ಲಿ ಅಚ್ಚಾಗಿತ್ತು. ಈಗ ಆಕೆಯ ಬಾಯಿಂದಲೇ ಕೇಳುವ ಅವಕಾಶ. ಹಿರಿಯ ಮಗಳು ಬಿಮಲಾ. ಗಂಡು ಮಕ್ಕಳು ಸೂರ್ಯನಾರಾಯಣ ಮತ್ತು ಮಹೇಶ್. ಕಿರಿಯ ಮಗಳು ರಾಮೇಶ್ವರಿ.

ಆಕೆಯ ಮೇಲೆ ಅತ್ಯಾಚಾರ ಮಾಡಿದವರಲ್ಲಿ ಓರ್ವ ಬ್ರಾಹ್ಮಣ ಕೂಡಾ ಇದ್ದ. ಆತನ ಹೆಸರು ಒಂದು ಪತ್ರಿಕೆಯಲ್ಲಿ ಶ್ರವನ್ ಪಂಡಾ ಎಂದೂ ಇನ್ನೊಂದರಲ್ಲಿ ಶ್ರವನ್ ಶರ್ಮಾ ಎಂದೂ ಮತ್ತೊಂದರಲ್ಲಿ ಶ್ರೀರಾಮ್ ಶರ್ಮ ಎಂದೂ ಉಲ್ಲೇಖವಾಗಿತ್ತು. ಭಾಂವ್ರಿ ಆತನ ಹೆಸರು 'ಶ್ರವನ್ ಪಂಡಾ' ಎಂದು ಹೇಳಿದಳು. ಆಕೆಯ ಬಾಯಲ್ಲಿ ಅದು 'ಸರವನ ಪಂಡಾ' ಆಗಿತ್ತು. ಐದು ಜನ ಆರೋಪಿಗಳಲ್ಲಿ ರಾಮ್‌ಕರಣ್ ಮತ್ತು ಗ್ಯಾರ್ಸಾ ಈಗಾಗಲೇ ತೀರಿಕೊಂಡಿದ್ದಾರೆ. ನ್ಯಾಯದ ಬಾಗಿಲು ಬಲುದೂರ.

ಇಷ್ಟು ಹೊತ್ತಿಗೆ ಹೊಲಕ್ಕೆ ಹೋಗಿದ್ದ ಪತಿ ಮೋಹನ್‌ಲಾಲ್ ಹಿಂತಿರುಗಿದ್ದರು. ಪತ್ನಿಗೆ ನೋವಿನ ಪ್ರತಿಕ್ಷಣವೂ ಜೊತೆ ನಿಂತ ವ್ಯಕ್ತಿ ಈತ. ಆಕೆಯ ಈ ಹೋರಾಟದಲ್ಲಿ ಸದ್ದಿಲ್ಲದೆ ಬೆನ್ನಿಗೆ ನಿಂತು ಬೆಂಬಲ ನೀಡಿದ ಆ ಸರಳ ವ್ಯಕ್ತಿಗೆ ವಂದಿಸಿದೆ. ಮಾತನಾಡುತ್ತಾ ಈ ಬಂಜರು ನೆಲದಲ್ಲಿ ಭಾವಿ ತೋಡಿದರೂ ನೀರು ಬಾರದಿರುವ ಸಾಧ್ಯತೆಯೂ ಇರಬಹುದು ಎಂದು ಅರಿವಾಗತೊಡಗಿತ್ತು. ಭಾವಿ ಈಕೆಯ ಸ್ಥಿತಿಯನ್ನು ಸುಧಾರಿಸುವುದೆ, ಮನಸ್ಸಿನಲ್ಲಿ ಪ್ರಶ್ನೆ ಮೂಡಿತ್ತು.

ರಾವಾಸ್‌ನಲ್ಲಿಯೇ ಗಮನಿಸಿದ್ದೆ, ಭಾಂವ್ರಿಯ ಆರೋಗ್ಯ ಸರಿ ಇರಲಿಲ್ಲ. ನೂರೊಂದು ಮಾತ್ರೆಗಳು ಆಕೆಯ ಚಾರ್‌ಪಾಯಿಯ ಬಗಲಿಗಿದ್ದವು. ಏನಾಗಿದೆ ಕೇಳಿದ್ದೆ. ಬೆನ್ನಿನಲ್ಲಿ ನೋವು ಎಂದೇನೋ ವಿವರಿಸುತ್ತಿರುವುದು ನನಗೆ ಪೂರ್ತಿ ಅರ್ಥವಾಗಲಿಲ್ಲ. ಆಕೆಯನ್ನು ಅಧಿಕ ರಕ್ತದ ಒತ್ತಡ ಕಾಡುತ್ತಿರುವುದು ಮಾತ್ರ ಸ್ಪಷ್ಟವಾಗಿತ್ತು. ಈಗ ಭಾಂವ್ರಿ ಒಳಹೋಗಿ ಒಂದು ದೊಡ್ಡ ಕವರ್ ಹಿಡಿದು ಬಂದರು. ಅದರಲ್ಲಿ ಅವರ ಎಂ.ಆರ್.ಐ. ರಿಪೋರ್ಟ್ ಕಂಡು ಆತಂಕವಾಯಿತು. ಭಾಂವ್ರಿ ಇದೇ ತಿಂಗಳು ದಿನಾಂಕ ೧೪ರಂದು ಜಯಪುರದ ಎಸ್.ಎಮ್.ಎಸ್. ಆಸ್ಪತ್ರೆಯಲ್ಲಿ ಮಾಡಿಸಿದ ಬೆನ್ನುಹುರಿಯ ಎಂ.ಆರ್.ಐ. ಸ್ಕ್ಯಾನ್ ರಿಪೋರ್ಟ್ ಅದಾಗಿತ್ತು. ಅದರಲ್ಲಿ ತಪಾಸಣೆಯ ನಂತರ 'ಲಂಬರ್ ಸ್ಪಾಂಡಿಲೋಸಿಸ್' ಎಂದು ಬರೆದಿತ್ತು.

'ನಿಮ್ಮದು ಬ್ಯಾಂಕ್ ಅಕೌಂಟ್ ಇದೆಯೆ?' ಭಾಂವ್ರಿಯನ್ನು ಕೇಳಿದೆ. ಪಾಸ್‌ಬುಕ್ ಒಂದನ್ನು ತಂದು ತೋರಿಸಿದರು. 'ಬ್ಯಾಂಕ್ ಆಫ್ ಇಂಡಿಯಾ'ದ ಪಾಸ್‌ಬುಕ್ ಅದು. 'ಶ್ರೀಮತಿ ಭಾಂವ್ರಿ ದೇವಿ, ವೈಫ್ ಆಫ್ ಮೋಹನ್‌ಲಾಲ್ ಪ್ರಜಾಪತ್' ಎಂದಿತ್ತು. ಅಕೌಂಟ್ ನಂಬರ್ ಬರೆದುಕೊಂಡೆ. ತಮ್ಮ 'ಸಾಥಿನ್' ಕೆಲಸವನ್ನು ಅತ್ಯಂತ ಶ್ರದ್ಧೆಯಿಂದ ಮಾಡುವ ಆಕೆ, 'ಬಾಲಿಕಾ ಮಂಡಲ್ ಬೈಠಕ್ ಕಾರ್ಯವಾಹಿ ರಿಜಿಸ್ಟರ್', 'ಸ್ವಯಂ ಸಹಾಯತ ಸಮೂಹ್ ಕಾರ್ಯವಾಹಿ ರಿಜಿಸ್ಟರ್' ನೋಟುಪುಸ್ತಕವನ್ನು ತಂದು ತೋರಿಸಿದರು. ಅದರಲ್ಲಿ ಇವರ ಮೀಟಿಂಗ್‌ಗಳ ಕಾರ್ಯವಾಹಿ ಬರೆದಿತ್ತು. ಬೈಠಕ್‌ಗೆ ಬಂದ ಮಹಿಳೆಯರ ಹೆಸರು, ಅವರ ಗಂಡಂದಿರ ಹೆಸರು ನಮೂದಿಸಿತ್ತು. ಮಹಿಳೆಯರ ಹೆಬ್ಬೆಟ್ಟು ಗುರುತು, ಕೆಲವು ಸಹಿಗಳು ಅಲ್ಲಿದ್ದವು. ಅಲ್ಲಿ ಸಾಥಿನ್ ಹೆಸರಿನ ಜಾಗದಲ್ಲಿ 'ಶ್ರೀಮತಿ ಭಾಂವ್ರಿ ದೇವಿ ಪ್ರಜಾಪತ್' ಎಂದಿತ್ತು. ಆಕೆಯ ಹೆಸರನ್ನು ಭಾಂವ್ರಿದೇವಿ ಎಂದು ಕರೆದರೂ ಬರೆಯುವಾಗ 'ಭೋರಿ ದೇವಿ' ಎಂದು ಬರೆಯುತ್ತಾರೆ. ನನ್ನ ದಾಖಲೆಗೆ ಪಾಸ್‌ಬುಕ್ ಮತ್ತು ರಿಜಿಸ್ಟರ್‌ಗಳ ಫೋಟೋ ತೆಗೆದುಕೊಂಡೆ.



ಭಾಂವ್ರಿ ಮತ್ತು ಆಕೆಯ ತಮ್ಮ ಲಲ್ಲೂಜಿ ಊಟಕ್ಕೆ ಉಪಚರಿಸಿದ ರೀತಿ

**ಭಾಂವ್ರಿಗೊಂದು 'ನಿಧಿ'**

ಜೊತೆ ಬಂದ ಗೆಳತಿ ಗೀತಾ ಹೇಳಿದರು, 'ಈಕೆಯ ಆರೋಗ್ಯದ ಈಗಿನ ಸ್ಥಿತಿಯಲ್ಲಿ ಇಲ್ಲಿ ಭಾವಿ ತೋಡಿಸುವುದರಲ್ಲಿ ಅರ್ಥವಿಲ್ಲ. ಸಾಥಿನ್ ಸಂಬಳ ಸುಮಾರು ೨೦೦೦ ಇದೆ. ಅದರ ಜೊತೆಗೆ ಈಕೆಗೆ ತಿಂಗಳಿಗೆ ಒಂದು, ಒಂದೂವರೆ ಸಾವಿರ ರೂಪಾಯಿ ನಿರಂತರವಾಗಿ ಬರುವಂತಿದ್ದರೆ ಅದು ಹೆಚ್ಚು ಉಪಯೋಗವಾಗಬಲ್ಲದು.' ಆದರೆ ಹಣವನ್ನು ಸಂಗ್ರಹಿಸಿ ಒಟ್ಟಿಗೆ ಅವರಿಗೆ ಕೊಡುವುದರಿಂದ ಅದು ಆಕೆಯ ಕೈಯಲ್ಲಿ ಉಳಿಯದು ಎಂದು ಇಷ್ಟರಲ್ಲಾಗಲೇ ನಮಗೆ ಅರಿವಾಗಿತ್ತು. ಪ್ರಶಸ್ತಿಗಳು ಬಂದಿದ್ದವು. ಬಹುಶಃ ಅದರಿಂದಲೇ ಈ ಸುಧಾರಿತ ಮನೆ ಇಲ್ಲಿ ನಿಂತಿತ್ತು. ಬಹುಶಃ ತಮ್ಮಂದಿರ ಮನೆಗಳೂ ಸುಧಾರಿಸಿದ್ದವು. ಮಗಳಿಗೆ ಮದುವೆ, ಮಗನಿಗೆ ಓದು ಸಾಗಿರಬೇಕು. ಜಯಪುರದ ಮಹಿಳಾ ಸಂಘಟನೆಗಳ ಬೆಂಬಲ ಸದಾ ಭಾಂವ್ರಿದೇವಿಯನ್ನು ಕಷ್ಟದಲ್ಲಿ ಕಾಪಾಡಿತ್ತು. ಆಕೆಯ ಮಗನನ್ನು ಕೆಲವು ಕಾಲ ತಮ್ಮ ಮನೆಯಲ್ಲೇ ಇಟ್ಟುಕೊಂಡು ಓದಿಸಿದ್ದರು ಕವಿತಾ ಶ್ರೀವಾತ್ಸವ. ಮಹಿಳಾ ಹಕ್ಕುಗಳಿಗಾಗಿ, ಮಾನವ ಹಕ್ಕುಗಳಿಗಾಗಿ ಇನ್ನಿಲ್ಲದ ಹಾಗೆ ಹೋರಾಡುತ್ತಿರುವ ಹೋರಾಟಗಾರ್ತಿ ಕವಿತಾ ಈ ಎರಡು ದಶಕಗಳೂ ಭಾಂವ್ರಿಯ ಜೊತೆ ನಿಂತಿದ್ದಾರೆ. ಆಕೆಯ ಆಸ್ಪತ್ರೆಯ ಖರ್ಚನ್ನೂ ಕಳಕಳಿಯ ಮಹಿಳೆಯೊಬ್ಬರು ವಹಿಸಿಕೊಂಡಿದ್ದರು.

ಪುಟ್ಟ ಮಕ್ಕಳು ಬೆಳೆಯುತ್ತಿದ್ದ ವಯಸ್ಸಿನಲ್ಲಿ, ಬಹಿಷ್ಕರಿಸಿ ನಿಂತ ಘಳಿಗೆಯಲ್ಲಿ ಅಗತ್ಯಗಳು ನೂರಿದ್ದವು. ಈಗ ಎಲ್ಲರೂ ನೆಲೆ ನಿಂತಿದ್ದಾರೆ. ಉಳಿದಿರುವುದು ಈಕೆ ಮತ್ತು ಗಂಡನ ಬದುಕು. ದಿನದಿಂದ ದಿನಕ್ಕೆ ಕ್ಷೀಣಿಸಿದ ಆರೋಗ್ಯ, ನ್ಯಾಯದ ನೆರಳಿನ್ನೂ ಕಾಣದ ದೀರ್ಘ ಹೋರಾಟದ ಹಾದಿಯಲ್ಲಿ ನಿಂತ ಪತಿ ಪತ್ನಿಯರು.

'ಈ ಬದುಕಿನ ಸಂಜೆಯ ಸಮಯ ಭಾಂವ್ರಿಗಾಗಿ ೨ ಲಕ್ಷ ಸಂಗ್ರಹಿಸೋಣ. ಅದನ್ನು ಒಂದು 'ಫಿಕ್ಸೆಡ್ ಡಿಪಾಸಿಟ್'ನಲ್ಲಿ ಇಟ್ಟು ಭಾಂವ್ರಿ ಇರುವವರೆಗೂ

ತಿಂಗಳಿನ ಬಡ್ಡಿ ಬಂದು ಸೇರುವಂತೆ ಮಾಡೋಣ' ಗೀತಾ ಅವರ ಸೂಚನೆ ಸೂಕ್ತವಾಗಿ ಕಂಡಿತು. ಹಿಂದೊಮ್ಮೆ ಭಾಂವ್ರಿದೇವಿಯ ಕತೆಯನ್ನು ಅರಿತ ಲಂಡನ್ನಿನ ಮಹಿಳೆಯರು ೨.೫ ಲಕ್ಷ ಹಣ ಸಂಗ್ರಹಿಸಿ ಆಕೆಗೆ ಕಳುಹಿಸಿದ್ದರು. ಆ ಹಣ ಈಕೆಯ ಬದುಕಿಗೆ ಒದಗಿ ಬಂದಂತೆ ಕಾಣಲಿಲ್ಲ. ಮಗ ಮಹೇಶನೊಡನೆ ಈ ಹಣದ ವಿಷಯದಲ್ಲಿ ಮನಸ್ತಾಪವಿದೆ.

ಹಾಗೆಂದೇ 'ಫಿಕ್ಸೆಡ್ ಡಿಪಾಸಿಟ್' ಯಾರ ಹೆಸರಲ್ಲಿ ಇಡುವುದು ಎಂದು ಯೋಚಿಸಿದೆ. ಥಟ್ಟನೆ 'ತಾಯಿಮನೆ'ಯ ಜ್ಯೋತಿಗೆ ಫೋನ್ ಮಾಡಿದೆ. ಜ್ಯೋತಿಗೆ 'ಬ್ಯಾಂಕ್ ಆಫ್ ಇಂಡಿಯಾ'ದಲ್ಲಿ ತನ್ನ ಹೆಸರಿನಲ್ಲಿ ಒಂದು ಪ್ರತ್ಯೇಕ ಅಕೌಂಟ್ ತೆರೆಯಲು ಹೇಳಿದೆ. 'ಜ್ಯೋತಿ, ಇದು ಭಾಂವ್ರಿದೇವಿಯ ಫಂಡ್‌ಗಾಗಿ ತೆರೆಯುವ ಅಕೌಂಟ್. ಇದರಲ್ಲಿ ಸಂಗ್ರಹವಾಗುವ ಹಣವನ್ನು ಫಿಕ್ಸೆಡ್ ಡಿಪಾಸಿಟ್‌ನಲ್ಲಿ ಇಡೋಣ. ಭಾಂವ್ರಿ ಇರುವವರೆಗೂ ಆಕೆಗೆ ಪ್ರತಿ ತಿಂಗಳು ಬಡ್ಡಿಯ ಹಣ ಸೇರುವಂತೆ ವ್ಯವಸ್ಥೆ ಮಾಡೋಣ. ನೀನು ವಯಸ್ಸಿನಲ್ಲಿ ಚಿಕ್ಕವಳು. ಭಾಂವ್ರಿಯ ನಂತರ ಈ ಹಣ 'ತಾಯಿಮನೆ'ಗೆ ಸೇರಬೇಕು' ಎಂದೆ. 'ನಾವೂ ಭಾಂವ್ರಿಗೆ ಹಣ ಸಂಗ್ರಹಿಸಲು ಕೈಗೂಡಿಸುತ್ತೇವೆ' ಎಂದರು. 'ಬೇಡ ಜ್ಯೋತಿ, ತಾಯಿಮನೆಯ ೫೮ ಮಕ್ಕಳಿಗೆ ನೀನು ಹೊಂದಿಸಲು ಎಷ್ಟು ಶ್ರಮ ಪಡುತ್ತೀಯಾ ಎಂದು ನನಗೆ ಗೊತ್ತಿದೆ. ಭಾಂವ್ರಿಯ ಕತೆಯನ್ನು ನಿಮಗೆ ತಿಳಿದಿರುವ ನಾಲ್ಕು ಜನಕ್ಕೆ ಹೇಳಿ. ಅವರಾಗಿ ಅವರೇ ಕೊಡಲು ಮುಂದಾದರೆ ಮಾತ್ರ ತೆಗೆದುಕೊಂಡು ಅಕೌಂಟ್‌ಗೆ ಹಾಕು' ಎಂದು ಹೇಳಿದೆ.

* * *

ಭಟೇರಿಯಿಂದ ಆ ರಾತ್ರಿ ಹಿಂತಿರುಗಿ ಬಂದೆವು. ಬರುವಾಗ, ಭಟೇರಿಯಿಂದ ನಾವಿರುವ ಹೋಟೆಲ್ ತಲುಪಲು ಒಂದು ಗಂಟೆ ಮಾತ್ರ ಹಿಡಿಸಿತ್ತು. ನಂತರದ ದಿನ, ಜಯಪುರದಲ್ಲಿ ಭಾಂವ್ರಿಗೆ ಇನ್ನಿಲ್ಲದ ಹಾಗೆ ನೆರವಿಗೆ ನಿಂತ, ಆಕೆಗೆ ನ್ಯಾಯ ದೊರೆಯಬೇಕೆಂದು ಹೋರಾಡುತ್ತಿರುವ ಕವಿತಾ ಶ್ರೀವಾತ್ಸವ ಅವರ ಮನೆಯನ್ನು ಹುಡುಕಿ ಹೋದೆ. ಅವರ ಮನೆಯಲ್ಲೇ ಅನೇಕ ನಿರ್ಗತಿಕ ಹೆಣ್ಣುಮಕ್ಕಳಿದ್ದರು. ಹಿಂಸೆ, ಅತ್ಯಾಚಾರದಿಂದ ನೊಂದು ರಕ್ಷಣೆ ಬಯಸಿ ಬಂದ ಹೆಣ್ಣುಮಕ್ಕಳಿಗೆ ತಮ್ಮ ಮನೆಯಲ್ಲಿಯೇ ತಾತ್ಕಾಲಿಕ ಆಶ್ರಯ ನೀಡಿ ಕಾಪಿಟ್ಟವರು ಕವಿತಾ. ಸಮಾಜ ಸೇವೆಗೆ ತಮ್ಮ ಬದುಕನ್ನೇ ಮುಡಿಪಿಟ್ಟವರು.

ನಾನು ಕುಳಿತಂತೆ ಓರ್ವ ಹೆಣ್ಣುಮಗಳು ಚಹಾ ತಂದುಕೊಟ್ಟಳು. 'ಈಕೆಯ ಮೇಲೆ ಮೂರು ತಿಂಗಳ ಹಿಂದೆ ಸಾಮೂಹಿಕ ಅತ್ಯಾಚಾರ ನಡೆಯಿತು. ಈಕೆ ಫೋಕ್ ಡಾನ್ಸರ್' ಹೇಳುವಾಗ ಆ ಎಳೆಯ ಹೆಣ್ಣು ಮಗಳನ್ನು ನೋಡಿ, ಹೊಟ್ಟೆಯಲ್ಲಿ ವಿಪರೀತ ಸಂಕಟವಾಯಿತು. ಆಕೆಗೆ ಆಶ್ರಯ ನೀಡಿ, ಬದುಕಿಗೊಂದು ಮಾರ್ಗ ತೋರಿಸಲು ಕವಿತಾ ಶ್ರಮಿಸುತ್ತಿದ್ದಾರೆ. ಇಂದಿಗೂ ರಾಜಾಸ್ತಾನದಲ್ಲಿ ಸಾಮೂಹಿಕ ಅತ್ಯಾಚಾರಗಳು ಎಗ್ಗಿಲ್ಲದೆ ನಡೆಯುತ್ತವೆ. ಅತ್ಯಾಚಾರಿಗಳ ಧನಬಲ, ರಾಜಕೀಯ ಬಲದೆದುರು ಅಸಹಾಯಕ ಹೆಣ್ಣು ಮಕ್ಕಳಿಗೆ ಕೇಸು ದಾಖಲಿಸುವ ಧೈರ್ಯವಿಲ್ಲ. ದಾಖಲಾಗದ ಇಂತಹ ನೂರಾರು, ಸಾವಿರಾರು ಅತ್ಯಾಚಾರಗಳಿಗೆ ಕೊನೆ ಎಲ್ಲಿ? ಭಾಂವ್ರಿ ನಡೆದು ಬಂದಿರುವ ಬೆಂಕಿಯ ಹಾದಿಯ ಜ್ವಲಂತ ಉದಾಹರಣೆ ಎದುರಿಗೆ ಇರುವಾಗ, ನ್ಯಾಯದ ಬಾಗಿಲು ತಟ್ಟುವ ಧೈರ್ಯ ಯಾರು ಮಾಡಬಲ್ಲರು?



ಭಾಂವ್ರಿಯ ಭಟೇರಿ ಮನೆಯತ್ತ ಹೆಜ್ಜೆ

ಕವಿತಾ ಹೇಳಿದರು '೨೧ ವರ್ಷ ಹೈಕೋರ್ಟಿನಲ್ಲಿ ಕೇಸು ಕೊಳೆಯುತ್ತಿದೆ. ನಾವು ಹೋರಾಟ ನಿಲ್ಲಿಸಿಲ್ಲ. ಇನ್ನು ಒಂದು ಅಥವಾ ಎರಡು ವರ್ಷಕ್ಕೆ ತೀರ್ಪು ಬರುವ ಸಂಭಾವ್ಯತೆ ಇದೆ. ಭಾಂವ್ರಿಯ ಪರ ಆದರೂ ಆಕೆಯ ವಿರುದ್ಧವಾಗಿ ಆದರೂ ಭಾಂವ್ರಿಗೆ ಭಟೇರಿಯಲ್ಲಿ ಬದುಕಲು ಬಿಡುವುದಿಲ್ಲ. ಆಕೆಯ ಜೀವಕ್ಕೇ ಅಪಾಯವಿದೆ. ಈಕೆಯ ಮೇಲೆ ಅತ್ಯಾಚಾರ ಮಾಡಿದವರದು ಪ್ರಬಲ ಕುಳ, ರಾಜಕೀಯವಾಗಿ ಅವರು ಶಕ್ತರು. ಅದಕ್ಕೆಂದೇ, ಅಂತಹ ಸಂದರ್ಭಕ್ಕೆ ಭಾಂವ್ರಿ ಮತ್ತು ಆಕೆಯ ಪತಿ ಜಯಪುರಕ್ಕೆ ಬಂದು ನೆಲೆಸಲು ಒಂದು ಸಣ್ಣ ಮನೆ ಮಾಡುವ ಪ್ರಯತ್ನ ನಮ್ಮದು.'

ಹೆಣ್ಣು ಮಕ್ಕಳಿಗೆ ಸುರಕ್ಷಣೆಯೇ ಇಲ್ಲದ ಇಂತಹ ಕೆಟ್ಟ ಸಾಮಾಜಿಕ ಸಂದರ್ಭದಲ್ಲಿ, ಭಾಂವ್ರಿಯ ಈ ಚಾರಿತ್ರಿಕ ಹೋರಾಟ ಮತ್ತೂ ಮಹತ್ವದ್ದಾಗಿದೆ. ಹಣದ ಎಷ್ಟೇ ಆಮಿಷ ತೋರಿದರೂ ಆಕೆ ತನ್ನ ಕೇಸನ್ನು ವಾಪಾಸು ತೆಗೆದುಕೊಂಡಿಲ್ಲ. ಇದು ತನ್ನೊಬ್ಬಳ ಹೋರಾಟ ಅಲ್ಲ ಎಂದು ಆಕೆಗೆ ತಿಳಿದಿದೆ.

ಇದು ನಮ್ಮೆಲ್ಲರ ಹೋರಾಟ ಕೂಡಾ. ಇದು ನಮ್ಮ ಸಮಾಜದ ಪ್ರತಿಯೊಂದು ಹೆಣ್ಣು ಮಗುವೂ ಮರ್ಯಾದೆಯಿಂದ ಬದುಕುವ ಸ್ವಾತಂತ್ರ್ಯವನ್ನು ಬೇಡಿದ ಹೋರಾಟ. ಭಾಂವ್ರಿಯ ಈ ಇಳಿವಯಸ್ಸಿನಲ್ಲಿ ಆಕೆಗೆ ಸಣ್ಣ ರೀತಿಯಲ್ಲಿಯಾದರೂ ಜೊತೆ ನಿಲ್ಲುವುದು ನಮ್ಮೆಲ್ಲರ ಕರ್ತವ್ಯ.

ಹಿಂತಿರುಗಿ ಬಂದು ತಿಂಗಳ ಮೇಲಾಯಿತು. 'ಜ್ಯೋತಿ ಅಕೌಂಟ್ ತೆರೆದೆಯಾ ?' ಫೋನ್ ಮಾಡಿ ಕೇಳಿದೆ. ಭಾಂವ್ರಿಯ ಫಂಡ್‌ಗಾಗಿ ಅಕೌಂಟ್ ತೆರೆದಿದ್ದರು. 'ಅಕೌಂಟ್ ನಂಬರ್ ಏನು ?' ಕೇಳಿದೆ. 'ಅಕೌಂಟ್ ನಂಬರ್: ೮೪೨೬೧೦೧೧೦೦೦೭೧೧೭, ಬ್ಯಾಂಕ್ ಆಫ್ ಇಂಡಿಯಾ, ಎಚ್. ಎಸ್. ಆರ್. ಲೇಔಟ್ ಬ್ರಾಂಚ್, ಬೆಂಗಳೂರು. ಐ.ಎಫ್.ಎಸ್.ಸಿ. ಕೋಡ್ : BKID0008426' ಎಂದರು.

ಎರಡು ದಶಕಗಳ ಹಿಂದೆ ನಾವೇ ಕಟ್ಟಿ ಹಾಡಿದ ಜಾಗೃತಿ ಗೀತೆ ಕಿವಿಯಲ್ಲಿ ಮೊಳಗಿತ್ತು –

*ಮಥುರಾ ಪ್ರಕರಣ, ಕೋಲಾರದನುಸೂಯ*
*ತಿಪಟೂರು ಶಶಿಕಲಾ, ಮಾಯಾತ್ಯಾಗಿ*
*ಕುಷ್ಟಗಿ ಶರಣವ್ವ, ಭಟೇರಿ ಭಾಂವ್ರಿ*
*ಬೆಳೆದಿದೆ ಪಟ್ಟಿ ನಿರಂತರದಿ*

*ನಮ್ಮಕ್ಕ ನಮ್ಮ ತಂಗಿ, ನಮ್ಮವ್ವ ನಮ್ಮ ಸೊಸೆ*
*ನಮ್ಮಂಗಳದೀ ಮೊಗ್ಗುಗಳು*
*ನಿರ್ಭೀತಿಯಿಂದ ಹಸನಾಗಿ ಬದುಕಲು*
*ಬನ್ನಿರಿ ಜೊತೆ ನಿಲ್ಲಿ ಹೋರಾಡುವಾ...*

ಕಡೆಗೂ ಕೋರ್ಟಿನಲ್ಲಿ ಭಾಂವ್ರಿಗೆ ನ್ಯಾಯ ಸಿಗುವುದೋ ಇಲ್ಲವೋ ತಿಳಿಯದು. ಆದರೆ ಆಕೆಗೆ ಬದುಕಿನ ಸಂಜೆಯಲ್ಲಿ ಒಂದಿಷ್ಟು ಆರ್ಥಿಕ ನೆರವು ನೀಡುವುದು ನಮ್ಮಿಂದ ಸಾಧ್ಯ. ಬನ್ನಿ ಭಾಂವ್ರಿಯೊಡನೆ 'ಉಮ್ರ್ ಭರ್ ಸಾಥ್ ನಿಭಾನೆ ಕಾ' ಪ್ರಯತ್ನವನ್ನು ಮಾಡೋಣ. ಭಾಂವ್ರಿಯೊಡನೆ ಆಕೆಯ ಬದುಕಿನುದ್ದಕ್ಕೆ ನಾವು ಕೈಜೋಡಿಸಿ ನಿಲ್ಲೋಣ.

ಸಚಿತ್ರ ಲೇಖನ : **ನೇಮಿಚಂದ್ರ**
ನಂ. ೪೦೧, ವಿಜಯ ಟವರ್, ೨ನೇ ಮುಖ್ಯರಸ್ತೆ, ಆರ್‌ಪಿಸಿ ಬಡಾವಣೆ
ವಿಜಯನಗರ ೨ನೇ ಹಂತ, ಬೆಂಗಳೂರು – ೫೬೦ ೦೪೦

# ಬಡಗರು

**ಪರಂಜ್ಯೋತಿ**

**ನೀಲಗಿರಿ ಬೆಟ್ಟಗಳಲ್ಲಿ ಕೋತ, ತೊದವ, ಇರುಳ, ಕುರುಬ, ಕಾಡುನಾಯಕ, ಪನಿಯ ಮುಂತಾದ ಪೂರ್ವನಿವಾಸಿಗಳು ವಾಸಿಸುತ್ತಾರೆ. ಈ ಪೈಕಿ ಬಡಗರು ಹಿಂದುಳಿದ ಸಮುದಾಯದವರೆಂದು ಗುರುತಿಸಲ್ಪಟ್ಟಿದ್ದಾರೆ. ಬಡಗರ ಬದುಕಿನ ಒಂದು ಕಿರುಪರಿಚಯ ಇಲ್ಲಿದೆ.**

ಕ್ರಿ. ಶ. ಹನ್ನೆರಡನೇ ಶತಮಾನದಲ್ಲಿ ನೀಲಗಿರಿಯ ಮೇಲೆ ದಂಡೆತ್ತಿ ಬಂದ ವಿಷ್ಣುವರ್ಧನನ ಸೈನ್ಯವನ್ನು ಬಡಗರ ಕಾಳರಾಜನು ಎದುರಿಸಿ ಹೋರಾಡಿ ಮಡಿದನೆಂಬುದು ಶಾಸನದ ಆಧಾರದಿಂದ ವ್ಯಕ್ತವಾಗುತ್ತದಷ್ಟೆ. ವಿಷ್ಣುವರ್ಧನನ ಸೈನ್ಯವನ್ನು ಎದುರಿಸುವಷ್ಟು ಸಾಮರ್ಥ್ಯ ಹೊಂದಿದ್ದ ಬಡಗರು ಅದಕ್ಕಿಂತಲೂ ಮುಂಚೆ ಬಂದು ನೆಲೆಸಿದವರು ಎಂದು ಊಹಿಸಬಹುದು. ಆಗ ಕನ್ನಡ ಸೀಮೆಯಲ್ಲಿ ತಲೆದೋರಿರಬಹುದಾದ ಬರಗಾಲ, ಸಾಂಕ್ರಾಮಿಕ ರೋಗರುಜಿನ, ರಾಜಕೀಯ ಕ್ಷೋಭೆ ಇವು ಅವರ ವಲಸೆಗೆ ಕಾರಣವಾಗಿರಬಹುದು.

ಮುಂದೆ ವಿಜಯನಗರದ ರಾಜರು ನೀಲಗಿರಿಯನ್ನು ವಶಪಡಿಸಿಕೊಂಡಾಗ, ಸೈನ್ಯದೊಡನೆ ಬಂದವರೂ ನೀಲಗಿರಿಯಲ್ಲಿ ನೆಲೆಸಿರಬಹುದು. ಅನಂತರ ಮಲ್ಲಿಕಾಫರನು ದಕ್ಷಿಣ ಭಾರತದ ಮೇಲೆ ದಂಡಯಾತ್ರೆ ಕೈಗೊಂಡ ಸಂದರ್ಭದಲ್ಲಿಯೂ ಅನೇಕರು ನೀಲಗಿರಿಯತ್ತ ತಪ್ಪಿಸಿಕೊಂಡು ಬಂದಿರಬಹುದಾದ ಸಾಧ್ಯತೆಗಳಿವೆ. ಮೈಸೂರು ಸೀಮೆಯಲ್ಲಿ ನಡೆದ ರೈತರ ಆಂದೋಳನದ ಸಂದರ್ಭದಲ್ಲಿ ಬಡಗರ ವಲಸೆ ಮುಂದುವರಿದಿರಬಹುದು. ಇನ್ನು ಟಿಪ್ಪು ಕಾಲದಲ್ಲಿಯೂ ಬಂದಿರಬಹುದಾದ ಸಾಧ್ಯತೆಗಳಿರಬಹುದು. ಆದರೆ ೧೭೯೯ರಲ್ಲಿ ಟಿಪ್ಪು ಬ್ರಿಟಿಷರೊಂದಿಗೆ ಮಾಡಿಕೊಂಡ ಶ್ರೀರಂಗಪಟ್ಟಣ ಒಪ್ಪಂದದವರೆಗೂ ನೀಲಗಿರಿ ಟಿಪ್ಪುವಿನ ರಾಜ್ಯದ ಒಂದು ಭಾಗವೇ ಆಗಿತ್ತು ಎಂಬುದನ್ನು ಗಮನಿಸಬೇಕು.

ಒಂದು ನಿರ್ದಿಷ್ಟ ಜಾತಿಯವರು ಮಾತ್ರ ವಲಸೆ ಬಂದರೆಂದು ಹೇಳಲೂ ಸಾಧ್ಯವಿಲ್ಲ. ಎಲ್ಲ ಜಾತಿಗಳವರೂ ಬಂದಿರುವ ಸಾಧ್ಯತೆಗಳಿವೆ. ಆದರೆ ಬಂದವರೆಲ್ಲರೂ ಬಡಗು ದಿಕ್ಕಿನ ಕನ್ನಡ ಸೀಮೆಯಿಂದ ಬಂದವರಾದ್ದರಿಂದ ಎಲ್ಲರೂ 'ಬಡಗ' ಎಂಬ ಸಾಮಾನ್ಯ ಹೆಸರಿನಿಂದ ಗುರುತಿಸಿಕೊಂಡರು.

ಹೀಗೆ ವಲಸೆ ಬಂದವರು ಮೂಲತಃ ಕೃಷಿಕರಾಗಿದ್ದುದರಿಂದ ಹೊಸ ಸ್ಥಳದಲ್ಲಿಯೂ ತಮ್ಮ ಕೃಷಿಯನ್ನು ಮುಂದುವರಿಸಿದರು. ಹೊಸ ಸ್ಥಳದಲ್ಲಿ ಹವಾಮಾನದ ವೈಪರೀತ್ಯವನ್ನು ಎದುರಿಸಬೇಕಾಯಿತು. ಕಾಲ ಸಂದಂತೆ ಹೊಸ ಪರಿಸರಕ್ಕೆ ಹೊಂದಿಕೊಂಡರು. ಜೊತೆಗೆ ಅಲ್ಲಿನ ಮೂಲ ನಿವಾಸಿಗಳಾಗಿದ್ದ ತೊದವ, ಕೋತ ಮತ್ತು ಕುರುಬ ಜನಾಂಗದೊಂದಿಗೆ ಸೌಹಾರ್ದದಿಂದ ಬಾಳುವುದಕ್ಕೆ ಒಗ್ಗಿಕೊಂಡರು.

ಜನಸಂಖ್ಯೆ ಹೆಚ್ಚಾದಂತೆ ಹೊಸ ಹಟ್ಟಿ (ಊರು)ಗಳನ್ನು ಕಟ್ಟಿಕೊಂಡರು. ಬಡಗರು ತಮ್ಮ ವಾಸದ ಸ್ಥಳವನ್ನು ತೊದವನಾಡು, ಪೊರಂಗಾಡು (ಪೆರಂಗನಾಡು), ಮೇಕುನಾಡು, ಕುಂದಾನಾಡು – ಹೀಗೆ ನಾಲ್ಕು ಸೀಮೆಗಳಾಗಿ ಗುರುತಿಸಿಕೊಂಡಿದ್ದಾರೆ. ಇದನ್ನು ಅವರು ನಾಕು ಬೆಟ್ಟ ಅಥವಾ ನಾಕು ಸೀಮೆ ಎಂದು ಕರೆಯುತ್ತಾರೆ. ಈ ನಾಕುಬೆಟ್ಟದ ಹಿರಿಯರು ಸೇರಿ ಬಡಗರಲ್ಲಿ ಉದ್ಭವಿಸಬಹುದಾದ ವಿವಾದಗಳನ್ನು ಬಗೆಹರಿಸಿಕೊಳ್ಳುತ್ತಿದ್ದರು. ಬ್ರಿಟಿಷರು ಬರುವುದಕ್ಕೆ ಮುಂಚೆ ಈ ನಾಕುಬೆಟ್ಟದ ನ್ಯಾಯಮಂಡಲಿ ಬಡಗರ ಸುಪ್ರೀಂ ಕೋರ್ಟ್ ಆಗಿತ್ತು.

ನೀಲಗಿರಿಯ ಮೂಲನಿವಾಸಿಗಳ ಪೈಕಿ ಹೆಚ್ಚು ಸಂಖ್ಯೆಯಲ್ಲಿರುವವರೆಂದರೆ ಬಡಗರು. ಹಲವು ವರ್ಷಗಳ ಕಾಲ ಬುಡಕಟ್ಟು ಜನಾಂಗದವರೆಂದು ಪರಿಗಣಿತರಾಗಿದ್ದ ಬಡಗರು ಈಗ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿದ್ದಾರೆ. ೨೦೧೧ರ ಜನಗಣತಿಯ ಪ್ರಕಾರ ೩೦೬ ಹಟ್ಟಿಗಳಲ್ಲಿ ವಾಸಿಸುತ್ತಿರುವ ಇವರ ಸಂಖ್ಯೆ ೨,೪೫,೦೦೦.

ಇವರು ಬಡಗು ದಿಕ್ಕಿನಿಂದ ಬಂದವರಾದ್ದರಿಂದ ಇವರಿಗೆ 'ಬಡಗರು' ಎಂಬ ಹೆಸರು. ಲಿಪಿ ಇಲ್ಲದ ಇವರ ಭಾಷೆ 'ಬಡಗು'. ಬಹುಮಟ್ಟಿಗೆ ಕನ್ನಡಕ್ಕೆ ಸಮೀಪವಾಗಿರುವ ಭಾಷೆ. ಆದುದರಿಂದ







ಇದನ್ನು 'ಬಡಗು ಕನ್ನಡ' ಎಂದೂ ಹೇಳುವುದುಂಟು. ಬಡಗು ಭಾಷೆಗೆ ಲಿಪಿ ರೂಢಿಸುವ ಪ್ರಯತ್ನಗಳು ಈಗ ನಡೆಯುತ್ತಿವೆ.

ಟಿಪ್ಪುವಿನ ಕಾಲದಲ್ಲಿ ಮೈಸೂರು ಸೀಮೆಯ ಕೆಲವು ಭಾಗಗಳಲ್ಲಿ ಹಿಂದುಗಳ ಮೇಲೆ ನಡೆದ ಕಿರುಕುಳದಿಂದ ತಪ್ಪಿಸಿಕೊಂಡು ಇವರು ಅಲ್ಲಿಂದ ಪಲಾಯನ ಮಾಡಿದರೆಂಬ, ಸರಿಯಾದ ಸಾಕ್ಷ್ಯಾಧಾರವಿಲ್ಲದ ವಿಚಾರ ಪ್ರಚಾರದಲ್ಲಿದೆ. ಸಾಧಾರಣವಾಗಿ ನೀಲಗಿರಿಯ ಬಡಗರ ವಿಷಯ ಪ್ರಸ್ತಾಪಕ್ಕೆ ಬಂದಾಗಲೆಲ್ಲ ಮೇಲಿನ ವಿಷಯಕ್ಕೆ ಒತ್ತುಕೊಟ್ಟು, ಅದು ಇತಿಹಾಸ ಸತ್ಯವೆಂಬ ಭಾವನೆ ಅನೇಕರಲ್ಲಿ ದಟ್ಟವಾಗಿದೆ. ಆದರೆ ಬಡಗರು ಸುಮಾರು ಹನ್ನೆರಡನೇ ಶತಮಾನದ ವೇಳೆಗಾಗಲೇ ನೀಲಗಿರಿಯಲ್ಲಿ ಜೀವಿಸುತ್ತಿದ್ದರೆಂಬುದಕ್ಕೆ ಪುರಾವೆಗಳು ದೊರೆತಿವೆ.

ಬಡಗರಲ್ಲಿ ಒಡೆಯ, ಹಾರುವ, ಅಧಿಕಾರಿ, ಕಣಕ, ಗೌಡ ಮತ್ತು ತೊರೆಯ ಎಂಬ ಆರು ಉಪಪಂಗಡಗಳಿವೆ. ಹಾರುವರು ಜನಿವಾರ ಧರಿಸುವವರು. ಒಡೆಯ ಮತ್ತು ಕಣಕರು ಲಿಂಗಧರಿಸುವ ಲಿಂಗಾಯತರು. ಬಡಗರ ಭಾಷೆಯಲ್ಲಿ 'ಲಿಂಗಕಟ್ಟಿ'ಗಳು. ಈ ಮೂರು ಸಮುದಾಯದವರು ಕನ್ನಡ ಸೀಮೆಯಲ್ಲಿ ಉಮ್ಮತ್ತೂರು ಅರಸರು ಪ್ರಬಲರಾಗಿದ್ದ ಸಂದರ್ಭದಲ್ಲಿ ವಲಸೆ ಬಂದವರು. ಇವರು ಶಾಕಾಹಾರಿಗಳು. ಇವರನ್ನು ಬಡಗ ಸಮುದಾಯ ಒಳಗೊಳಿಸಿ ಕೊಂಡಿದೆ. ೧೭ ಮತ್ತು ೧೮ನೇ ಶತಮಾನಗಳಲ್ಲಿ ವಲಸೆ ಬಂದ ಬೇಡ ಮತ್ತು ಕುರುಬರು ಬಡಗ ಸಮುದಾಯದಲ್ಲಿ ಸೇರುವುದಿಲ್ಲ.

ಬಡಗರಲ್ಲಿ ಶಾಕಾಹಾರ ಮತ್ತು ಮಾಂಸಾಹಾರ ಎರಡೂ ಆಹಾರ ಪದ್ಧತಿ ಬಳಕೆಯಲ್ಲಿದೆ. ಮದುವೆ ವಿಷಯದಲ್ಲಿ ಆಹಾರ ಪದ್ಧತಿ ಗಣನೆಗೆ ಬರುತ್ತದೆ. ಆದರೆ ಕೆಲವು ರಿಯಾಯಿತಿಗಳ ಮೂಲಕ ಅವನ್ನು ನಿವಾರಿಸಿಕೊಳ್ಳಲಾಗುತ್ತದೆ. ಬಡಗರು ಹಿಂದುಗಳು. 'ಹೆತ್ತೆ'ಯ ರೂಪದಲ್ಲಿ ಮಾತೃದೇವತೆಯನ್ನು ಆರಾಧಿಸುವ ಅವರ ಪದ್ಧತಿಯ ವಿಷಯದಲ್ಲಿ ಅವರು ಇತರರಿಗಿಂತ ಬೇರೆಯಾಗುತ್ತಾರೆ.

ಬಡಗರು ಶಿವನ ಆರಾಧಕರಾದರೂ ಧರ್ಮದ ವಿಷಯದಲ್ಲಿ ಅವರು ಉದಾರವಾದಿಗಳು. ಪಿತೃ ಆರಾಧನೆಯ ಹಿಂದಿನ ರೂಢಿಯನ್ನು ಕೈಬಿಡದೆ, ಲೆಕ್ಕವಿಲ್ಲದಷ್ಟು ದೇವರುಗಳನ್ನು ಪೂಜಿಸುತ್ತಾರೆ. ಶೇ. ೨.೫ರಷ್ಟು ಬಡಗರು ಕ್ರೈಸ್ತ ಧರ್ಮಕ್ಕೆ ಮಂತಾಂತರಗೊಂಡಿದ್ದಾರೆ.

ಹಿಂದುಗಳಾದ ಬಡಗರು ಹೆತ್ತೆ ಸ್ವಾಮಿ, ಹೆತ್ತೆ, ಮಹಾಲಿಂಗಸ್ವಾಮಿ, ಮಾದೇಶ್ವರ, ಮಾಂಕಾಳಿ, ಜಡೆಸ್ವಾಮಿ, ನೀಲಗಿರಿ ರಂಗಸ್ವಾಮಿ – ಮುಂತಾದ ದೇವರುಗಳನ್ನು ಪೂಜಿಸುತ್ತಾರೆ. ಕಾರಮಡೈ, ಕೋಯಂಬತ್ತೂರು ಮತ್ತು ನಂಜನಗೂಡು ಶಿವದೇವಾಲಯಗಳಿಗೆ ನಡೆದುಕೊಳ್ಳುತ್ತಾರೆ. ಪಳನಿಮಲೆ, ಶಬರಿಮಲೆಗೆ ಹೋಗುವವರೂ ಉಂಟು.

ಬಡಗರಲ್ಲಿ ಬಹುಪತ್ನಿತ್ವ ರೂಢಿಯಲ್ಲಿದೆ. ಪ್ರತ್ಯೇಕ ಮನೆಗಳಲ್ಲಿ ವಾಸಿಸುವ ಪತ್ನಿಯರು ತಮ್ಮ ಪತಿಗಾಗಿ ದುಡಿಮೆ ಮಾಡುತ್ತಾರೆ. ಬಡಗ ಗಂಡಸರು ಆರಾಮ ಜೀವಿಗಳು. ಪ್ರತಿದಿನ ಪೇಟೆ ಕಡೆಗೆ ಹೋಗಿಬರುವವರು. ಹೆಂಗಸರು ಶ್ರಮಜೀವಿಗಳು. ದಿನವಿಡೀ ಹೊಲಗಳಲ್ಲಿ ದುಡಿಮೆ ಮಾಡುತ್ತಾರೆ. ಕುಟುಂಬದ ಆರ್ಥಿಕ ಮುನ್ನಡೆಗೆ ಇವರ ಪಾಲು ಅಧಿಕ.

ವಿಧವೆಯರ ಮರುಮದುವೆಗೆ ಯಾವುದೇ ಅಡ್ಡಿ ಇರುವುದಿಲ್ಲ. ಗಂಡ ಸತ್ತ ನಂತರ ಹೆಂಗಸು ಗಂಡನ ಸೋದರರನ್ನು ಮದುವೆಯಾಗಬಹುದು. ತೊದವರಲ್ಲಿಯೂ ಈ ರೂಢಿಯಿದೆ.

ಬಡಗರು ಪ್ರತ್ಯೇಕ ಊರುಗಳಲ್ಲಿ ವಾಸ ಮಾಡುತ್ತಾರೆ. ಬಡಗರಲ್ಲದವರಿಗೆ ಅಲ್ಲಿ ವಾಸಿಸುವ ಅವಕಾಶವಿಲ್ಲ. ಹೆಂಗಸರು ಹಟ್ಟಿಗಳಲ್ಲಿರುವಾಗ ಅಥವಾ

## ಕೆಲವು ಬಡಗ ಗಾದೆಗಳು

- **ಮದ್ದು ಹೊತ್ತು ಬಾ ಎಂದಲೆ, ಮರ ಹೊತ್ತು ಬನ್ನನ**
  – ಮದ್ದು ತರಲು ಹೇಳಿದರೆ, ಮರ ಹೊತ್ತು ಬಂದಿದ್ದಾನೆ.
- **ಅವ್ವೋ ಎಣ್ಣು ನಂಬ ಬೇಡ**
  – ಸದಾ ಅಳುತ್ತಿರುವ ಹೆಣ್ಣನ್ನು ನಂಬಬೇಡ.
- **ಓಡುವ ಹಳ್ಳಗ ತೀಟಿಲ್ಲೆ**
  – ಹರಿಯುವ ಹಳ್ಳಕ್ಕೆ ಮೈಲಿಗೆ ಇಲ್ಲ.
- **ಗಂಡಿಸಿಗೆ ಎದೆ ಗಟ್ಟಿ, ಹೆಂಮಾತಿಗ ನಡುಗಟ್ಟಿ**
  – ಗಂಡಸರಿಗೆ ಗುಂಡಿಗೆ ಬಲವಾಗಿರುತ್ತದೆ. ಹೆಂಗಸರ ಟೊಂಕ ಬಲವಾಗಿರುತ್ತದೆ.
- **ಹೆಣ್ಣ ದೂರಂದು ಕೊಳ್ಳು, ದನವರ ಸಾರೆಂದು ಕೊಳ್ಳು**
  – ಹೆಣ್ಣನ್ನು ದೂರದ ಊರಿನಿಂದ ತರಬೇಕು, ಹಸುವನ್ನು ಹತ್ತಿರದ ಊರಿನಿಂದ ಖರೀದಿಸಬೇಕು.
- **ಹಗೆಯೋಗೆ ಹಾಲು ಕುಡಿಪ್ಪದು – ನಾ –ವಿಡ ನಿಮ್ಮದೊ ನೀರ ಕುಡಿ**
  – ಹಗೆತನದಲ್ಲಿ ಹಾಲು ಕುಡಿಯುವ ಬದಲು ಶಾಂತಿಯಲ್ಲಿ ನೀರು ಕುಡಿ
- **ಅಣ್ಣ ತಮ್ಮ ಇಲ್ಲದೆ ದೊಣ್ಣೆಯ ಜಗಳಗ ಹೋಗಬೇಡ**
  – ಸೋದರರು ಜೊತೆಗಿಲ್ಲದೆ ದೊಣ್ಣೆ ಜಗಳಕ್ಕೆ ಹೋಗಬೇಡಿ
- **ತಾಯ ನೋಡಿ ಹೆಣ್ಣು ಕೊಳ್ಳು**
  – ತಾಯಿ ನೋಡಿ ಹೆಣ್ಣು ತರಬೇಕು
- **ಅಣ ಕೊಟ್ಟಯೆಡೆ ಅಗೆ, ಇಟ್ಟು ಕೊಟ್ಟಯೆಡೆ ನಟ್ಟು**
  – ಹಣ ಕೊಟ್ಟ ಕಡೆ ಹಗೆತನ, ಅನ್ನ ಕೊಟ್ಟ ಕಡೆ ನೆಂಟತನ



ಯುವತಿಯರ ಲೋಕಾಭಿರಾಮ



ಮನೆ ನಿಭಾಯಿಸುವಲ್ಲಿ ಮಹಿಳೆಯ ಸಹಕಾರ

ದುಡಿಮೆ ಮಾಡುವಾಗ ಪರಂಪರೆಯ ಉಡುಪು ಧರಿಸುತ್ತಾರೆ. ತಂದೆ–ತಾಯಿಗಳನ್ನು ನೋಡಿಕೊಳ್ಳುವ ಜವಾಬ್ದಾರಿ ಮನೆಯ ಕಿರಿಯ ಮಗನದು.

ಊರಿನ ಯಜಮಾನನನ್ನು ಗುರುವಜ್ಜ ಅಥವಾ ಗೊತ್ತುಕಾರ ಎನ್ನುತ್ತಾರೆ. ಶಿಕ್ಷಣ ನೀಡುವ ವಿಷಯದಲ್ಲಿ ಗಂಡು–ಹೆಣ್ಣು ಎಂಬ ತಾರತಮ್ಯವಿಲ್ಲ. ಬಡಗ ಸಮುದಾಯ ಶೀಘ್ರಗತಿಯಲ್ಲಿ ಅಭಿವೃದ್ಧಿಹೊಂದಲು ಇದೂ ಒಂದು ಕಾರಣ. ಜೊತೆಗೆ ಹೊಸ ಬೆಳವಣಿಗೆಗಳಿಗೆ ಬೇಗನೆ ತಮ್ಮನ್ನು ಹೊಂದಿಸಿಕೊಳ್ಳುವ ನಮ್ಯತೆ.

ಬಡಗರು ಹಿಂದೆ ಪಶುಪಾಲನೆಯ ಜೊತೆಗೆ ಸಣ್ಣಮಟ್ಟದ ರೈತರಾಗಿ ತಮ್ಮ ಸಂಸಾರಕ್ಕೆ ಬೇಕಾದ ಆಹಾರಧಾನ್ಯಗಳನ್ನು, ಮುಖ್ಯವಾಗಿ ನವಣೆ, ಸಾಮೆ, ಹಾರಕ, ರಾಗಿ, ಕೊರಲೀ ಮತ್ತು ಸ್ವಲ್ಪಮಟ್ಟಿಗೆ ಗೋದಿಯನ್ನು ಬೆಳೆದುಕೊಳ್ಳುತ್ತಿದ್ದರು.

ಜಾನ್ ಸಲ್ಲಿವನ್ ಉದಕಮಂಡಲವನ್ನು ನೀಲಗಿರಿ ಜಿಲ್ಲೆಯ ಮುಖ್ಯ ಕೇಂದ್ರವಾಗಿ ಅಭಿವೃದ್ಧಿಪಡಿಸುತ್ತಿದ್ದ ಸಂದರ್ಭದಲ್ಲಿ ಬಡಗರ ವ್ಯವಸಾಯ ಪದ್ಧತಿಯನ್ನು ಗಮನಿಸಿದ್ದ. ಅಲ್ಲಿನ ಹವಾಮಾನಕ್ಕೆ ಹೊಂದಿಕೊಳ್ಳುವ ಬೇರೆ ಬೇರೆ ಧಾನ್ಯಗಳನ್ನು, ತರಕಾರಿಗಳನ್ನು ತಂದು ಬೆಳೆಸುವ ಉದ್ದೇಶದಿಂದ, ಮಿ॥ ಜಾನ್‌ಸ್ಟನ್ ಎಂಬ ತೋಟಗಾರಿಕೆ ತಜ್ಞನನ್ನು ಇಂಗ್ಲೆಂಡಿನಿಂದ ತನ್ನ ಸ್ವಂತ ಖರ್ಚಿನಲ್ಲಿ ಬರಮಾಡಿಕೊಂಡು ಪರಿಸ್ಥಿತಿಯ ಅಧ್ಯಯನ ನಡೆಸಿ, ಆತನ ಮೂಲಕ ಹೊಸ ತಳಿಯ ಓಟ್ಸ್ , ಗೋದಿ, ಬಾರ್ಲಿ – ಮುಂತಾದ ಧಾನ್ಯಗಳ ಹಾಗೂ ನಗದು ಬೆಳೆಗಳಾದ ಬೀಟ್‌ರೂಟ್, ಟರ್ನಿಪ್, ಮೂಲಂಗಿ, ಕೋಸುಗಡ್ಡೆ, ಆಲೂಗಡ್ಡೆ, ಸ್ಟ್ರಾಬೆರಿ, ಪೀಚ್ ಮತ್ತು ಸೇಬು, ಹಾಗೆಯೇ ಹಲವು ಜಾತಿಯ ಹೂವಿನ ಗಿಡಗಳ ಬೀಜಗಳನ್ನು ತರಿಸಿ ಅಲ್ಲಿ ಬೆಳೆಸಲು ಪ್ರೋತ್ಸಾಹಿಸಿದ. ಊಟಿಯಲ್ಲಿ ಸುಮಾರು ೨೦೦ ಎಕರೆಗಳಷ್ಟು ವಿಸ್ತೀರ್ಣದ ತೋಟದಲ್ಲಿ ಸಸಿಗಳನ್ನು ಬೆಳೆಸಿ ಬಡಗರಿಗೆ ಉಚಿತವಾಗಿ ಹಂಚಿದ. ಹುಟ್ಟಿನಿಂದ ಕೃಷಿಕರಾದ ಅವರು ಆ ಬೆಳೆಗಳನ್ನು ಬೆಳೆಸಿ ಲಾಭ ಗಳಿಸತೊಡಗಿದರು. ಆ ಪೈಕಿ ಗಾಂಜಿ ಎಂಬುದೊಂದು ಧಾನ್ಯ. ಬಡಗರು ಅದನ್ನು 'ಸಲ್ಲಿವನ್ ಗಾಂಜಿ' – ಎಂದು



## ಒಂದು ಅಗುಳು ಅನ್ನ ! (ಬಡಗರ ಜನಪದ ಕಥೆ)

ಒಂದಾನೊಂದು ಕಾಲದಲ್ಲಿ ಹಳ್ಳಬೆಳ್ಳಿ ಮತ್ತು ಬೆಳ್ಳಿ ಎಂಬ ಅಣ್ಣ ತಮ್ಮಂದಿರು ವಾಸವಾಗಿದ್ದರು. ಕಿರಿಯ ಬೆಳ್ಳಿ ಇನ್ನೂ ಮಗುವಾಗಿದ್ದಾಗ ಹಳ್ಳಬೆಳ್ಳಿಯ ಮದುವೆ ಮಲ್ಲುಮಾದಿ ಎಂಬ ಯುವತಿಯೊಂದಿಗೆ ನೆರವೇರಿತು. ಒಂದೆರಡು ವರ್ಷಗಳಲ್ಲಿ ಹಳ್ಳಬೆಳ್ಳಿಯ ತಂದೆ ತಾಯಿಗಳೂ ಕಾಲವಾದರು. ಆಗ ಕಿರಿಯ ಬೆಳ್ಳಿಯ ಆರೈಕೆ ಸೇರಿದಂತೆ ಇಡಿ ಸಂಸಾರ ನಿಭಾಯಿಸುವ ಹೊಣೆ ಮಲ್ಲುಮಾದಿಯ ಪಾಲಿಗೆ ಬಂದಿತು.

ಅಣ್ಣ ತಮ್ಮಂದಿರು ತುಂಬ ಅನ್ಯೋನ್ಯವಾಗಿದ್ದರು. ಕಿರಿಯ ಬೆಳ್ಳಿ ಬೆಳೆದು ದೊಡ್ಡವನಾದ. ಅಣ್ಣ ತಮ್ಮಂದಿರು ಸರದಿ ಪ್ರಕಾರ ಹೊಲ ಮನೆ ಕೆಲಸ ನಿರ್ವಹಿಸುತ್ತಿದ್ದರು. ಕಿರಿಯ ಬೆಳ್ಳಿಗೆ ಮದುವೆ ಪ್ರಾಯವಾಯಿತು. ಮದುವೆ ಮಾತು ಬಂದಾಗ ಕಿರಿಯ ಬೆಳ್ಳಿ ಉತ್ಸಾಹ ತೋರಿಸಲಿಲ್ಲ. ಮದುವೆ ಮಾಡಿಕೊಂಡರೆ ತನ್ನ ಅಣ್ಣ ಅತ್ತಿಗೆಯರನ್ನು ಬಿಟ್ಟು ಬೇರೆ ಸಂಸಾರ ಹೂಡಬೇಕಾಗುತ್ತದೆ ಎಂದು ಕಿರಿಯ ಬೆಳ್ಳಿ ಮದುವೆಯನ್ನು ನಿರಾಕರಿಸಿದ. ಮದುವೆಗೆ ಸಂಬಂಧಿಸಿದ ಯಾರ ಬುದ್ಧಿಮಾತುಗಳನ್ನು ಆತ ಕೇಳಲಿಲ್ಲ.

ಒಂದು ದಿನ ಎಂದಿನಂತೆ, ಅಣ್ಣ ಮನೆಯಲ್ಲಿ ಊಟ ಮುಗಿಸಿ ಹೊಲಕ್ಕೆ ಹೋದ ನಂತರ ಬೆಳ್ಳಿ ಊಟ ಮಾಡಿ ಹೋಗಲು ಮನೆಗೆ ಬಂದ. ಊಟಕ್ಕೆ ಕುಳಿತಾಗ ನೆಲದ ಮೇಲೆ ಒಂದು ಅನ್ನದ ಅಗುಳು ಬಿದ್ದಿರುವುದು ಆತನ ಗಮನಕ್ಕೆ ಬಂತು. ಆಶ್ಚರ್ಯ ಮತ್ತು ಸಂತೋಷ ತುಂಬಿದ ದನಿಯಲ್ಲಿ ಆತ ಹೇಳಿದ : "ಅತ್ತಿಗೆ ನೋಡಿಲ್ಲಿ ! ದೇವರು ನಮಗೆ ಒಂದು ಅಗುಳು ಅನ್ನ ಕರುಣಿಸಿದ್ದಾನೆ!" ಮಲ್ಲುಮಾದಿ ಆತನ ಮಾತಿಗೆ ಕಿವಿಗೊಡಲಿಲ್ಲ. ಕಾಗೆಯೋ ಗುಬ್ಬಚ್ಚಿಯೋ ಹಾರುವಾಗ ಅದನ್ನ ಕೆಳಗೆ ಬೀಳಿಸಿರಬಹುದು ಎಂದಳು ಉಪೇಕ್ಷೆಯ ದನಿಯಲ್ಲಿ. ಆದರೂ ಕಿರಿಯ ಬೆಳ್ಳಿಗೆ ತನಗಾದ ಸಂಭ್ರಮವನ್ನು ಹತ್ತಿಕ್ಕಿಕೊಳ್ಳಲಾಗಲಿಲ್ಲ. ನೆಲದಲ್ಲಿ ಸಿಕ್ಕಿದ ಅನ್ನದ ಅಗುಳನ್ನು ಹಣೆಗೆ ಅಂಟಿಸಿಕೊಂಡು ಅದನ್ನು ಅಣ್ಣನಿಗೆ ತೋರಿಸಲೆಂದು ಹೊಲದ ಕಡೆಗೆ ಓಡಿದ.

ಅಣ್ಣ ಏನೆಂದು ವಿಚಾರಿಸುವ ಮುಂಚೆಯೇ ಕಿರಿಯ ಬೆಳ್ಳಿ ಸಂಭ್ರಮದ ದನಿಯಲ್ಲಿ ಹೇಳಿದ : "ಅಣ್ಣಾ ಇಷ್ಟೂ ದಿನ ನಮಗೆ ಅನ್ನಭಾಗ್ಯ ಇರಲಿಲ್ಲ ಎಂಬುದನ್ನು ಕಂಡು ದೇವರೇ ನಮಗೆ ಅನ್ನದ ಅಗುಳೊಂದನ್ನು ಕರುಣಿಸಿದ್ದಾನೆ!"

ಅಣ್ಣನಿಗೆ ಗೊಂದಲವಾಯಿತು. "ಅಪ್ಪೀ... ನೀನೆಂದೂ ಅನ್ನವನ್ನೇ ಉಂಡಿಲ್ಲ ಎಂದು ನಿನ್ನ ಮಾತಿನ ಅರ್ಥವೇ? ಹಾಗಾದರೆ ಮನೆಯಲ್ಲಿ ನೀನು ಉಂಡದ್ದೇನು?"

ತಮ್ಮ ಉತ್ತರಿಸಿದ : "ನಾನು ಅನ್ನ ಉಂಡಿರಲು ಹೇಗೆ ಸಾಧ್ಯ ? ನಾವು ಪ್ರತಿದಿನ ರಾಗಿ ಅಂಬಲಿಯನ್ನಷ್ಟೇ ಕುಡಿಯುತ್ತಿರುವುದಲ್ಲವೇ?"

ಮನೆಯಲ್ಲಿ ನಡೆದಿರಬಹುದಾದುದನ್ನು ಅರ್ಥಮಾಡಿಕೊಂಡ ಹಳ್ಳಬೆಳ್ಳಿ ರೋಷದಿಂದ ಕುದಿಯುತ್ತ ಹೆಂಡತಿಯನ್ನು ವಿಚಾರಿಸುವ ಸಲುವಾಗಿ ಮನೆಗೆ ಓಡಿದ "ದ್ರೋಹಿ ! ನಾನು ಕಿರಿಯಬೆಳ್ಳಿ ಇಬ್ಬರೂ ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದವರು. ಇಬ್ಬರೂ ಒಟ್ಟಿಗೇ ಹೊಲ ತೋಟದ ಕೆಲಸ ಮಾಡುತ್ತ ಬಂದಿದ್ದೇವೆ. ಆದರೆ ನೀನು ನನಗೆ ಮಾತ್ರ ಅನ್ನ ನೀಡುತ್ತ, ತಮ್ಮನಿಗೆ ಬರೀ ರಾಗಿ ಅಂಬಲಿ ನೀಡುತ್ತ ಬಂದಿದ್ದೀಯೆ. "ಹೆಣ್ಣೇ ನೀನೆಷ್ಟು ಕ್ರೂರಿ ! ಅಣ್ಣ–ಅತ್ತಿಗೆಯರನ್ನು ಬಿಟ್ಟಿರಬೇಕಾಗುತ್ತದೆಂದು ನನ್ನ ತಮ್ಮ ಮದುವೆಯನ್ನೂ ನಿರಾಕರಿಸಿದ. ಭೂಮಿ ಪಾಲು ಮಾಡುವುದನ್ನೂ ಬೇಡವೆಂದ. ನೀನೆಂಥಾ ನಂಬಿಕೆ ದ್ರೋಹಿ ! ನಮಗೆ ಒಂದು ದಿನವಾದರೂ ಒಂದೇ ಪಂಕ್ತಿಯಲ್ಲಿ ಊಟ ಹಾಕಲಿಲ್ಲ. ನಿನ್ನ ವಂಚನೆ ಇಷ್ಟು ದಿನ ಮುಂದುವರಿಯಿತು. ಇದಕ್ಕಾಗಿ ನಿನ್ನನ್ನು ದೂರುವುದಿಲ್ಲ. ಇದರ ಸಂಪೂರ್ಣ ಹೊಣೆ ನನ್ನದು. ನಾನೇ ಅಪರಾಧಿ. ನೀನು ನನ್ನ ಹೆಂಡತಿಯಲ್ಲ. ಇನ್ನು ಮುಂದೆ ನಿನ್ನ ಮುಖ ನೋಡುವುದು ಮಹಾಪಾಪ." ಎಂದವನೆ ಹಳ್ಳಬೆಳ್ಳಿ ಅಪರಾಧಿ ಭಾವನೆಯಿಂದಲೂ ಪಶ್ಚಾತ್ತಾಪದಿಂದಲೂ ಕುದಿಯುತ್ತ ತನ್ನ ಬಿಳಿ ಕುದುರೆ ಏರಿ ಕುದುರೆ ಹಳ್ಳದತ್ತ ದೌಡಾಯಿಸಿದ. ನೀರು ಧುಮ್ಮಿಕ್ಕುವ ಸದ್ದಿಗೆ ಕುದುರೆ ಒಂದು ಕ್ಷಣ ತಡೆದು ನಿಂತಿತು. ಆತ ತನ್ನ ಮತ್ತು ಕುದುರೆಯ ಕಣ್ಣಿಗೆ ಬಟ್ಟೆ ಬಿಗಿದುಕೊಂಡು ಜಲಪಾತಕ್ಕೆ ಕುದುರೆ ಸಹಿತ ಜಿಗಿದ.

ತನ್ನ ಅಣ್ಣನನ್ನು ತಡೆಯುವಲ್ಲಿ ವಿಫಲವಾದ ತಮ್ಮನೂ ಜಲಪಾತಕ್ಕೆ ಧುಮುಕಿದ. ಇಬ್ಬರು ಅಣ್ಣ ತಮ್ಮಂದಿರ ದುರಂತ ಸಾವಿಗೆ ಕಾರಣಳಾದ ಮಲ್ಲುಮಾದಿ ಈ ಆಘಾತದಿಂದ ಚೇತರಿಸಿಕೊಳ್ಳಲಾಗದೆ ಸಾವನ್ನಪ್ಪಿದಳು.

ಕ್ಯಾಥರಿನ್ ಫಾಲ್ಸ್ ಎಂದು ಕರೆಸಿಕೊಳ್ಳುವ ಹಳ್ಳವನ್ನು ಬಡಗರು ಕುದುರೆ ಹಳ್ಳ ಎನ್ನುತ್ತಾರೆ. ಬೆಳ್ಳಿ ಸೋದರರ ಮರಣದ ನಂತರ ಬಂದದ್ದು ಆ ಹೆಸರು.

(ಜಲಪಾತ ಕೋತಗಿರಿಯ ಸಮೀಪದಲ್ಲಿದೆ)

ಸ್ಮರಿಸಿಕೊಳ್ಳುತ್ತಾರೆ. ಸಣ್ಣಮಟ್ಟಿನ ಟೀ ತೋಟಗಳನ್ನು ಅಭಿವೃದ್ಧಿ ಪಡಿಸುವಲ್ಲಿಯೂ ಬಡಗರು ಮುಂದಿದ್ದಾರೆ.

ಬಡಗರನ್ನು ಶಿಕ್ಷಣದತ್ತ ಆಕರ್ಷಿಸಲು ಸಹ ಸಲ್ಲಿವನ್ ಸಹಾಯಕನಾದನು. ದೇನಾಡು ಎಂಬ ಗ್ರಾಮದಲ್ಲಿ ಆತ ಪ್ರಾರಂಭಿಸಿದ ಮೊತ್ತ ಮೊದಲ ಶಾಲೆಯಲ್ಲಿ ಕನ್ನಡ ಮತ್ತು ತಮಿಳು ಭಾಷೆಗಳನ್ನು ಬೋಧಿಸಲಾಗುತ್ತಿತ್ತು. ಅನಂತರ ಅನೇಕ ಕಡೆ ಶಾಲೆಗಳು ಪ್ರಾರಂಭವಾದವು. ಶಿಕ್ಷಣ ಕ್ಷೇತ್ರದಲ್ಲಿ ಸೇವೆ ಮಾಡಲು ಆತ ಕ್ರೈಸ್ತ ಮಿಷನರಿಗಳಿಗೂ ಪ್ರೋತ್ಸಾಹ ನೀಡಿದ. ಬಡಗರು ಶಿಕ್ಷಣದ ಅವಕಾಶವನ್ನು ಬಹುಮಟ್ಟಿಗೆ ಚೆನ್ನಾಗಿ ಬಳಸಿಕೊಂಡರು.

## ಕೆಲವು ಬಡಗು ನುಡಿಗಳು – ಕನ್ನಡ ಅರ್ಥಗಳು.

**ಒಳಂಗಿದ್ದಿರಾ** – ಚೆನ್ನಾಗಿದ್ದೀರಾ,
**ಬಾನೆ** – ಬಾರೆ, **ಕೂಸು** – ಹುಡುಗ
**ಇಟ್ಟು ತಿಂದಿಯಾ** – ಊಟ ಆಯಿತೆ
**ಕೂ ತಿಂದಿಯಾ** – ಅನ್ನ ಉಣ್ಣುತ್ತೀರಾ
**ಏನು ತಿಂದ್ರ** – ಏನಾದರೂ ತಿನ್ನುತ್ತೀಯಾ
**ಇಟ್ಟುತಿಂಬೊ ಬಾರಿವಿ** – ಊಟ ಮಾಡೋಣ ಬನ್ನಿ
**ಒಳ್ಳಂಗೆ ಓದು** – ಚೆನ್ನಾಗಿ ಓದು
**ಎಂಗ ಮನೆಗೆ ಬಾರಿವಿ** – ನಮ್ಮ ಮನೆಗೆ ಬನ್ನಿ
**ನೀ ಏಗುವ ಬಂದೆ** – ನೀನು ಯಾವಾಗ ಬಂದೆ
**ಮೇ ಬಂದ** – ಮಳೆ ಬಂತು
**ಮೇ ಬಪ್ಪಿಲ್ಲೆ** – ಮಳೆ ಬಂದಿಲ್ಲ
**ಗಾಯಿ ಬೀಸರ** – ಗಾಳಿ ಬೀಸುತ್ತಿದೆ
**ಚಪೇನೆ ಇರು** – ಸುಮ್ಮನಿರು
**ಗಂಡು ಮನೆಗೆ ಹೋಪ** – ಗಂಡಿನ ಮನೆಗೆ ಹೋಗೋಣ
**ಹೆಣ್ಣು ನೋಡಿದಿಯಾ?** – ಹುಡುಗಿ ನೋಡಿದ್ದೀಯಾ ?
**ಗಂಡು ನೋಡಿದಿಯಾ** – ಹುಡುಗನನ್ನು ನೋಡಿದ್ದೀಯಾ ?
**ನಾ ಅಲ್ಲಿಂದು ಹೆಣ್ಣು ಕಟ್ಟಿದ್ದೆ** – ನಾನು ಅಲ್ಲಿಂದ ಹೆಣ್ಣು ತಂದಿದ್ದೇನೆ
**ಏರ** – ಮೇಲಕ್ಕೆ **ಎರ** – ಕೆಳಕ್ಕೆ **ದಡ** – ಹಾದಿ
**ಏ ಚಿಟಿ ಮುಟ್ರಿಯಾ?** – ಸ್ವಲ್ಪ ಕುಡೀತಿಯಾ?!



*ಬಡಗ ದಂಪತಿಗಳು*

ನೀಲಗಿರಿಯ ಮೂಲನಿವಾಸಿಗಳ ಪೈಕಿ ಆಧುನಿಕ ಜಗತ್ತಿನ ಬದಲಾವಣೆಗಳಿಗೆ ತಮ್ಮನ್ನು ತೆರೆದುಕೊಂಡು ಪ್ರಗತಿ ಸಾಧಿಸಿದವರು ಬಡಗರು. ಸರಕಾರಿ, ಖಾಸಗಿ ಹಾಗೂ ಆಡಳಿತ ಕ್ಷೇತ್ರಗಳಲ್ಲಿ ಉದ್ಯೋಗ ಗಳಿಸುವ ಮೂಲಕ ಜೀವನಮಟ್ಟವನ್ನು ಸುಧಾರಿಸಿಕೊಂಡರು. ಈಗ ಸಾವಿರಾರು ಮಂದಿ ಬಡಗರು ಸರಕಾರಿ ಹುದ್ದೆಗಳಲ್ಲಿದ್ದಾರೆ, ಶಿಕ್ಷಕರಾಗಿ, ವೈದ್ಯರಾಗಿ, ವಕೀಲರುಗಳಾಗಿ, ಎಂಜಿನಿಯರುಗಳಾಗಿ, ಸೈನ್ಯಸೇವೆಯಲ್ಲಿ ದೇಶದ ಬೇರೆ ಬೇರೆ ಭಾಗಗಳಲ್ಲಿದ್ದಾರೆ. ವಿದೇಶದಲ್ಲಿಯೂ ನೆಲೆಸಿದ್ದಾರೆ.

ಹುಬ್ಬತಲೆ ಬೆಳ್ಳಿ (ಎಚ್. ಬಿ) ಆರಿಗೌಡರ್ ಮದರಾಸು ಕ್ರಿಶ್ಚಿಯನ್ ಕಾಲೇಜಿನಿಂದ ಪದವಿ ಪಡೆದ ಮೊದಲ ಬಡಗ ವ್ಯಕ್ತಿ. ೧೯೩೩ರಲ್ಲಿ ಇವರು ಮದರಾಸು ಲೆಜಿಸ್ಲೇಟಿವ್ ಅಸೆಂಬ್ಲಿಗೆ ಆಯ್ಕೆಯಾಗಿದ್ದರು. ಹಲವಾರು ಸಾಮಾಜಿಕ ಕಾರ್ಯಗಳಲ್ಲಿ ಸಕ್ರಿಯರಾಗಿ ತೊಡಗಿ ಕೊಂಡಿದ್ದರು. ಕರ್ನಾಟಕ–ನೀಲಗಿರಿ ಎಲ್ಲೆ ರೇಖೆಯಾಗಿ ಹರಿಯುವ ಮಾಯಾರು ನದಿಗೆ ಕಕ್ಕನಳ್ಳ ಎಂಬಲ್ಲಿ ನಿರ್ಮಿಸಿರುವ ಸೇತುವೆಗೆ ಇವರ ಸ್ಮರಣಾರ್ಥ ಆರಿಗೌಡ ಸೇತುವೆ ಎಂಬ ಹೆಸರನ್ನಿಡಲಾಗಿದೆ.

ಜೀವನ ಶೈಲಿ ಬದಲಾದಂತೆ ಹಳೆಯ ಕಟ್ಟುಪಾಡುಗಳು, ಸಂಪ್ರದಾಯಗಳು ಸಡಿಲ ಗೊಳ್ಳುತ್ತಿವೆ. ಹೆಣ್ಣಿಗೆ 'ತೆರ' ಕಟ್ಟಿ ಮದುವೆ ಮಾಡಿಕೊಳ್ಳುತ್ತಿದ್ದ ಕಾಲ ಬದಲಾಗಿ ಬಡಗರಲ್ಲಿ 'ವರದಕ್ಷಿಣೆ' ಪಿಡುಗು ಹರಡುತ್ತಿದೆ ! ಅದೇ ರೀತಿ ವಿವಾಹ ವಿಚ್ಛೇದನ ಪ್ರಕರಣಗಳು ಸಹ.

ಸ್ಥಳೀಯ ಬಡಗರು ಹೇಳುವಂತೆ, ಆರ್ಥಿಕತೆ ಸುಧಾರಿಸಿದಂತೆ ಮೋಜಿನ ಬದುಕಿನ ಕಡೆಗೂ ಬಡಗರು ಆಕರ್ಷಿತರಾಗುತ್ತಿದ್ದಾರೆ. ಮದ್ಯಪಾನದ ಚಟ ಹಾಗೂ ಆಲ್ಕೋಹಾಲಿಸಂ ಪ್ರಕರಣಗಳೂ ಹೆಚ್ಚಾಗುತ್ತಿವೆ. ಬಡಗು ಭಾಷೆಯನ್ನು ಕನ್ನಡದ ಉಪಭಾಷೆ ಎಂದು ಪರಿಗಣಿಸಿ 'ಬಡಗುಕನ್ನಡ' ಎಂದು ಕರೆಯಲಾಗುತ್ತಿತ್ತು. ಇದು ಶತಮಾನಗಳ ಕಾಲದ ಹಳಗನ್ನಡ, ಮೂಲಭಾಷೆಯೊಂದಿಗೆ ಸಂಪರ್ಕ ಕಳೆದುಕೊಂಡು ಹಾಗೆಯೇ ಉಳಿದುಕೊಂಡಿದೆ ಎಂದೂ ತೀರ್ಮಾನಕ್ಕೆ ಬರಲಾಗಿತ್ತು. ಭಾಷಾಶಾಸ್ತ್ರಜ್ಞರು ಈ ಬಗ್ಗೆ ಪುನರಾಲೋಚನೆ ಅಗತ್ಯವೆಂದು ಸೂಚಿಸುತ್ತಾರೆ. ಬಡಗು ಭಾಷೆಯನ್ನು ಆಳವಾಗಿ ಅಭ್ಯಾಸ ಮಾಡಿರುವ ಮತ್ತು ಬಡಗು ಇಂಗ್ಲಿಷ್ ನಿಘಂಟಿನ ಸಹ ಲೇಖಕರಾಗಿರುವ ಕ್ರಿಸ್ಟೀನ್ ಪೈಲೆಟ್ ರಾಯಚೂರು ಅವರು 'ಬಡಗು ಭಾಷೆಯನ್ನು ಕನ್ನಡದ ಉಪಭಾಷೆ ಎಂದು ಪರಿಗಣಿಸದೆ ಅದನ್ನು ಪ್ರತ್ಯೇಕ ಭಾಷೆ ಎಂದು ಪರಿಗಣಿಸಬೇಕು' – ಎಂದು ಅಭಿಪ್ರಾಯಪಡುತ್ತಾರೆ.

*(ಪ್ರಕಟವಾಗಲಿರುವ 'ನೀಲಗಿರಿ : ಸಾಮಾಜಿಕ, ಸಾಂಸ್ಕೃತಿಕ ಕಣ್ಣೋಟ' ಕೃತಿಯ ಒಂದು ಅಧ್ಯಾಯ)*



*ಪೂರ್ವಜರ ಸ್ತಂಭ*

**ಪರಂಜ್ಯೋತಿ**
ನಂ. ೧೦, ೧ನೇ ಮಹಡಿ, ಶ್ರೀರಾಮ ದೇವಾಲಯದ ರಸ್ತೆ
ಶ್ರೀರಾಮ ದೇವಾಲಯದ ಎದುರು, ಈಜಿಪುರ, ವಿವೇಕನಗರ ಅಂಚೆ, ಬೆಂಗಳೂರು– ೦೪೭

# ಘಾತಗಳು ಮತ್ತು ಪೆರೆಲ್ಮನ್



$$u = \frac{-b \pm \sqrt{b^2 - 4ac}}{2a}$$

$$\int 3y^2 - 4y + 8$$

ಡಾ॥ ಬಿ. ಎಸ್. ಶೈಲಜಾ




ಈಗ್ಗೆ ಐವತ್ತು ವರ್ಷಗಳ ಹಿಂದೆ ವಿಜ್ಞಾನದ ಪುಸ್ತಕಗಳೆಂದರೆ ರಷಿಯನ್ ಪುಸ್ತಕಗಳೇ ಆಗಿದ್ದವು. ಅವೆಲ್ಲ ಸಾಕಷ್ಟು ಜನಪ್ರಿಯವೂ ಆಗಿದ್ದವು. Arithmetic for Fun, Mechanics for Entertainment, Physics Everywhere - ಹೀಗೆ ಆಕರ್ಷಕ ಶಿರೋನಾಮೆ ಹೊತ್ತು ಬರುತ್ತಿದ್ದ ಇವು ವಿದ್ಯಾರ್ಥಿಗಳಲ್ಲಿ ಮತ್ತು ಶಿಕ್ಷಕರಲ್ಲಿ ಸಾಕಷ್ಟು ಜನಪ್ರಿಯವಾಗಿದ್ದವು. ಇವುಗಳಲ್ಲಿ ಕೆಲವಾದರೂ ಕನ್ನಡಭಾಷೆಯಲ್ಲಿ ದೊರಕುತ್ತಿದ್ದವು. ಈ ಪುಸ್ತಕಗಳಲ್ಲಿ ಉದಾಹರಣೆಗಾಗಿ ಹೆಸರಿಸುತ್ತಿದ್ದ ಪಾತ್ರಗಳ ಹೆಸರುಗಳು ನಾಲಿಗೆ ತಿರುಚುವಂತಿದ್ದು ವಿಚಿತ್ರವಾಗಿ ಕೇಳಿಸುತ್ತಿದ್ದರೂ ಆಕರ್ಷಕ ಚಿತ್ರಗಳು ಮತ್ತು ಸರಳ ನಿರೂಪಣೆ ಇವುಗಳೇ ಜೀವಾಳವಾಗಿದ್ದವು. ಈ ಪುಸ್ತಕಗಳ ಕರ್ತೃ ಯಾಕೋವ್ ಪೆರೆಲ್ಮನ್ (೧೮೮೨–೧೯೪೨). ಈತನ "ಮನರಂಜನೆಗಾಗಿ ಭೌತಶಾಸ್ತ್ರ" ಮತ್ತು "ಮನರಂಜನೆಗಾಗಿ ಗಣಿತ" – ಈ ಎರಡೂ ಅನುವಾದಗಳು ಈಗಲೂ ಬಹಳ ಜನಪ್ರಿಯವಾಗಿವೆ.

ರಾಕೆಟ್‌ನ ಜನಕ ಎಂದೇ ಖ್ಯಾತಿ ಪಡೆದ ಕಾನ್ಸ್‌ಟೆಂಟಿನ್ ತ್ಸಿಯೋಲ್ಕೋವ್‌ಸ್ಕಿ ಸಹ ಪೆರೆಲ್ಮನ್‌ನ ಪುಸ್ತಕಗಳನ್ನು ಮೆಚ್ಚಿದ್ದಾರೆ. ಹೀಗೆ ಜನಸಾಮಾನ್ಯರನ್ನೂ ಮತ್ತು ವಿಜ್ಞಾನಿಗಳನ್ನೂ ತೃಪ್ತಿಗೊಳಿಸಿದ್ದೇ ಪೆರೆಲ್ಮನ್ ಅವರ ಹೆಗ್ಗಳಿಕೆ ಎನ್ನಬಹುದು. ಪೆರೆಲ್ಮನ್ ಕೃತಿಗಳು ಸೋವಿಯತ್ ರಷ್ಯಾದಲ್ಲಿ ಬಹಳ ಜನಪ್ರಿಯವಾಗಿದ್ದವು. ಪಠ್ಯಪುಸ್ತಕಗಳು, ಜನಪ್ರಿಯ ಲೇಖನಗಳು ಮತ್ತು ಪುಸ್ತಕಗಳು ವಿದ್ವತ್‌ಪೂರ್ಣವಾಗಿರುತ್ತಿದ್ದವು.

ಇವರೇ ಬರೆದ "ಮನರಂಜನೆಗಾಗಿ ಬೀಜಗಣಿತ" ಇದೀಗತಾನೇ ಗಣಿತವರ್ಷದ ಪುಸ್ತಕಮಾಲೆಯಲ್ಲಿ ನವಕರ್ನಾಟಕದಿಂದ ಪ್ರಕಟಗೊಂಡಿದೆ. ಶ್ರೀಯುತ ಅಡ್ಡೂರು ಕೃಷ್ಣರಾವ್ ಅವರು ಇದನ್ನು ಸಮರ್ಥವಾಗಿ ಅನುವಾದಿಸಿದ್ದಾರೆ. ಇದರ ಆರಂಭಿಕ ಅಧ್ಯಾಯದಲ್ಲಿ ಘಾತಗಳ ಅವಶ್ಯಕತೆಯನ್ನು ವಿವರಿಸುತ್ತಿದ್ದಾರೆ. ಜನಸಾಮಾನ್ಯರು ಬಳಸುವುದು ಎರಡೇ ಘಾತಗಳು – ೨ ಮತ್ತು ೩ – ವಿಸ್ತೀರ್ಣ ಹಾಗೂ ಘನ – ಈ ಅಳತೆಗಳಿಗೆ ಅಗತ್ಯವಾದವು. ಆದರೆ, ಇನ್ನೂ ಹೆಚ್ಚಿನ ಘಾತಗಳೂ ಇರುವುದು ಗಣಿತ ಪಠ್ಯದಲ್ಲಿ ಮಾತ್ರವಲ್ಲ ಎಂಬುದನ್ನು ವಿವರಿಸಲು ಈ ಪುಸ್ತಕದಲ್ಲಿ ಎರಡು ಉದಾಹರಣೆಗಳಿವೆ. "ಹರಿಯುವ ನೀರು ಕಲ್ಲುಗಳನ್ನು ಸಾಗಿಸುವ ಬಲದ ಬಗ್ಗೆ ಅಧ್ಯಯನ ಮಾಡುವ ಜಲಶಕ್ತಿ ಇಂಜಿನಿಯರು ಆರನೆಯ ಘಾತ ಸಂಬಂಧಿ ಲೆಕ್ಕಾಚಾರಗಳನ್ನು ಮಾಡಬೇಕಾಗುತ್ತದೆ. ಒಂದು ನದಿಯ ಪ್ರವಾಹದ ವೇಗ ಇನ್ನೊಂದರ ಪ್ರವಾಹಕ್ಕಿಂತ ನಾಲ್ಕು ಪಟ್ಟು ಅಧಿಕ ಎಂದುಕೊಳ್ಳೋಣ. ಅಧಿಕ ವೇಗದ ನದಿಯು, ಕಡಿಮೆ ವೇಗದ ನದಿಯು ಒಯ್ಯುವ ಕಲ್ಲುಗಳಿಗಿಂತ ೪$^{೬}$ ಅಂದರೆ ೪೦೯೬ರಷ್ಟು ಅಧಿಕ ತೂಕದ ಕಲ್ಲುಗಳನ್ನು ಒಯ್ಯಬಲ್ಲುದು." ಈ ಉದಾಹರಣೆ ಸುಲಭವಾಗಿ ಅರ್ಥವಾಗುತ್ತದೆ. ಆದರೆ ಮುಂದಿನದು ಹಾಗಲ್ಲ.

"ಇದಕ್ಕಿಂತಲೂ ಅಧಿಕ ಘಾತದ ಸಂಖ್ಯೆಗಳ ಪರಿಚಯ ನಮಗಾಗುವುದು ಪ್ರಜ್ವಲಿಸುವ ವಸ್ತುವಿನ (ಉದಾಹರಣೆಗೆ, ವಿದ್ಯುತ್ ದೀಪದ ತಂತು) ಪ್ರಕಾಶ ಹಾಗೂ ಅದರ ಉಷ್ಣತೆ ಇವುಗಳ ಸಂಬಂಧವನ್ನು ಲೆಕ್ಕಹಾಕುವಾಗ ತಾಪದ ೧೨ನೆಯ ಘಾತಕ್ಕೆ ಅನುಗುಣವಾಗಿ ಅದರ ದೀಪ್ತಿ ಹೆಚ್ಚುತ್ತದೆ. ಕೆಂಪು–ಉಷ್ಣದ ೩೦ನೆಯ ಘಾತಕ್ಕೆ ಅನುಗುಣವಾಗಿ ಅದರ

ಪ್ರಕಾಶ ಹೆಚ್ಚುತ್ತದೆ (ಇಲ್ಲಿ – ೨೭೩° ಸೆ. ಇಂದ ಆರಂಭವಾಗುವ ನಿರಪೇಕ್ಷ ಉಷ್ಣತೆಯನ್ನು ಪ್ರಸ್ತಾಪಿಸಲಾಗಿದೆ). ಒಂದು ವಸ್ತುವನ್ನು ೨೦೦೦ದಿಂದ ೪೦೦೦ದವರೆಗೆ ಕಾಯಿಸಿದೆ ಎಂದು ಕೊಳ್ಳೋಣ. ಅಂದರೆ, ಅದರ ಉಷ್ಣತೆ ೨ಪಟ್ಟು ಹೆಚ್ಚಾಯಿತು. ಆಗ ಅದರ ಪ್ರಕಾಶವು ೨$^{೧೨}$ – ಅಂದರೆ ೧೨ರ ಘಾತದಷ್ಟು ಹೆಚ್ಚುತ್ತದೆ. ಅಂದರೆ ಪ್ರಕಾಶವು ೪೦೦೦ಕ್ಕಿಂತ ಅಧಿಕಪಟ್ಟು ಹೆಚ್ಚಾಗುತ್ತದೆ.......”

ಮುಂದೆ ಪುಟ ೧೮೬ರಲ್ಲಿ ಇದನ್ನೇ ಆಧರಿಸಿದ ಲೆಕ್ಕವೊಂದನ್ನು ಬಿಡಿಸಿ ತೋರಿಸಲಾಗಿದೆ. “ಒಂದು ನಿಯಮದ ಪ್ರಕಾರ, ಬಿಸಿ ತಂತುವಿನಿಂದ ಚಿಮ್ಮುವ ಬಿಳಿ ಪ್ರಕಾಶದ ಒಟ್ಟು ಪ್ರಮಾಣವು ನಿರಪೇಕ್ಷ ಉಷ್ಣತೆಯ ೧೨ನೆಯ ಘಾತಕ್ಕೆ ಅನುಸಾರವಾಗಿ ಹೆಚ್ಚಾಗುತ್ತದೆ” ಎಂಬ ವಾಕ್ಯವಿದೆ. ಇಂಗ್ಲಿಷ್ ಮೂಲದಲ್ಲಿ "By a rule that has been established in physics" ಎಂದಿದೆ. ಆದರೆ, ಆ ಸಂಬಂಧ ಯಾವುದೇ ಆಕರವನ್ನು ಸೂಚಿಸಿಲ್ಲ.

**ಅಸಮಾನತೆ**

**ಹೆಣ್ಣಿನ ಅಸಮಾನತೆಯ ವಿರುದ್ಧ**
**ಗಂಟೆಗಟ್ಟಲೆ**
**ಭಾಷಣ ಬಿಗಿದಳು !**
**ತನ್ನ ಸೊಸೆಯೇ ಹೆಣ್ಣು ಹೆತ್ತಾಗ**
**ಬಾಯಿ ಬಾಯಿ ಬಡೆದುಕೊಂಡಳು !**

ಅಂಬಾದಾಸ ವಡೆ, ಬಾಗಲಕೋಟೆ – ೫೮೭ ೧೦೧

ಈ ಉದಾಹರಣೆ ಆಶ್ಚರ್ಯವನ್ನುಂಟುಮಾಡುವಂತಹುದೇ, ಏಕೆಂದರೆ ನಕ್ಷತ್ರಗಳ ಆಂತರಿಕ ಬೈಜಿಕ ಕ್ರಿಯೆಗಳ ಪರಿಸರದಲ್ಲಿ ಮಾತ್ರ ೩೦, ೧೮ ಇಂತಹ ಘಾತಗಳೂ ಅವಶ್ಯವಾಗುತ್ತವೆ. ಉಳಿದ ಪ್ರಯೋಗಗಳಲ್ಲಿ ೧೦ ಎಂಬ ಘಾತವೂ ಅನೂಹ್ಯವೇ ಎನ್ನಬಹುದು. ಈಗ ನಮಗೆ ತಿಳಿದಿರುವಂತೆ ೧೨ ಅಥವಾ ೩೨ರ ಘಾತದಲ್ಲಿ ವ್ಯತ್ಯಾಸವಾಗುವ ಯಾವುದೇ ಸೂತ್ರ ಇಲ್ಲ. ಹಾಗಾದರೆ ಪೆರೆಲ್ಮನ್ ಸೂಚಿಸುತ್ತಿರುವ ಸೂತ್ರ ಯಾವುದು ಇರಬಹುದು ?

ವಾನ್ ಹಾರ್ನ್ ಎಂಬುವರು ೧೯೬೫ರಲ್ಲಿ ಪ್ರಕಟಿಸಿರುವ ಪ್ರಬಂಧದಲ್ಲಿ ಬಲ್ಬ್‌ಗಳಲ್ಲಿ ನಿರ್ವಾತ ವಿದ್ದರೆ ಒಳ್ಳೆಯದೋ ಅಥವಾ ನಿಷ್ಕ್ರಿಯವಾದ ಅನಿಲವನ್ನು ತುಂಬಿದ್ದರೆ ಒಳ್ಳೆಯದೋ ಎಂದು ಚರ್ಚಿಸಲಾಗಿದೆ. ಇಲ್ಲಿ ಪ್ರಕಾಶ ಮತ್ತು ತಾಪದ ಸಂಬಂಧವನ್ನು ಸೂಚಿಸುವ ಘಾತ ೩.೨ರಿಂದ ೪ರವರೆಗೆ ಮಾತ್ರ ಇದೆ. ಇದರ ಆಕರ ಪ್ರಬಂಧಗಳನ್ನು ಕೆದಕಿ, ಅವುಗಳಲ್ಲಿ ಹಿಂದಿನ ಆಕರಗಳನ್ನು ಹುಡುಕುತ್ತಾ ಹುಡುಕುತ್ತಾ ಹೀಗೆ ಈ ಬಗ್ಗೆ ಹಲವಾರು ಸಂಶೋಧನಾ ಪ್ರಬಂಧಗಳನ್ನು ಹುಡುಕಿ ಮೂಲವನ್ನು ಕೆದಕಿದಾಗ ಸ್ವಾರಸ್ಯಕರವಾದ ಅಂಶ ಬೆಳಕಿಗೆ ಬಂದಿತು.

೧೯೩೬ರಲ್ಲಿ ಪ್ರಕಟವಾದ ಒಂದು ಆಕರ ಪ್ರಬಂಧ ಬಹುಮುಖ್ಯ ಸುಳಿವನ್ನು ಕೊಟ್ಟಿತು. ಇದರ ಕರ್ತೃ ಡೀನ್. ಬಿ. ಜಡ್ (೧೯೦೦–೧೯೭೨) ಹೆಸರಾಂತ ವಿಜ್ಞಾನಿ. ಟಂಗ್‌ಸ್ಟನ್ ಕುರಿತು ವಿಶೇಷ ಅಧ್ಯಯನ ಮಾಡಿದಾತ. ವೋಲ್ಟೇಜ್‌ಅನ್ನು ಸ್ಥಿರವಾಗಿರಿಸಿ, ಟಂಗ್‌ಸ್ಟನ್ ತಂತಿಯ ತಾಪವನ್ನು ಹೆಚ್ಚಿಸುತ್ತಾ ಬಂದಂತೆ ಬಣ್ಣವೂ ಹೇಗೆ ವ್ಯತ್ಯಾಸವಾಗುತ್ತದೆ ಎಂಬುದನ್ನು ಪ್ರಯೋಗಗಳ ಮೂಲಕ ತೋರಿಸಿಕೊಟ್ಟ ವಿಜ್ಞಾನಿ. ಮುಂದೆ ಟಂಗ್‌ಸ್ಟನ್‌ನ ಬಳಕೆಯಲ್ಲಿ ಈ ಪ್ರಯೋಗಗಳು ಮಹತ್ವದ ಪಾತ್ರವಹಿಸಿದವು. ಟಂಗ್‌ಸ್ಟನ್ ತಂತಿಯ ವ್ಯಾಸ ತಂತಿಯುದ್ದಕ್ಕೂ ಒಂದೇ ಸಮನಾಗಿ ಇರದೆ ಸೂಕ್ಷ್ಮ ವ್ಯತ್ಯಾಸಗಳಿದ್ದರೂ ಸಹ ತಾಪ ಮತ್ತು ಪ್ರಕಾಶದ ಸೂತ್ರ ಅನ್ವಯವಾಗುವುದಿಲ್ಲ ಎಂಬುದರ ವಿವರಣೆ ಇಲ್ಲಿ ದೊರಕುತ್ತದೆ. ಅಲ್ಲದೆ ಬಳಕೆ ಹೆಚ್ಚಾದಂತೆ ಕಂಡುಬರುವ ಕಂದು ಬಣ್ಣದ ಲೇಪವೊಂದು ಪ್ರಕಾಶದ ಇಳಿತಕ್ಕೆ ಮೂಲ ಕಾರಣ ಎಂಬ ಮಹತ್ವದ ವಿಷಯವೂ ಈ ಪ್ರಬಂಧದಲ್ಲಿದೆ. ಇಲ್ಲಿ ತಾಪದ ಕಾರಣ ಪ್ರಕಾಶದ ಇಳಿಕೆಯ ೩೨ನೇ ಘಾತದ ಸೂತ್ರವಿದೆ. ಇಂತಹ ವೈಪರೀತ್ಯಗಳು ಬಹಳ ಅಪರೂಪ ಎನ್ನಬಹುದು, ೨, ೩, ............ ಏಕೆ ೧೦ರವರೆಗೂ ಘಾತಗಳು ಪ್ರಯೋಗ ಗಳಲ್ಲಿ ಕಂಡುಬರುತ್ತವೆ. ಆದರೆ ೩೨ ನಂಬಲಸಾಧ್ಯವಾದ ಸಂಖ್ಯೆ. ಟಂಗ್‌ಸ್ಟನ್ ಬಳಸುವಾಗ ಇನ್ನೊಂದು ಅಂಶವೂ ಪ್ರಾಮುಖ್ಯತೆ ಪಡೆಯುತ್ತದೆ. ತಂತಿಯ ತಾಪ ಹೆಚ್ಚಿದಂತೆ ಬಣ್ಣದ ತಾಪ (ಅಂದರೆ ಬಣ್ಣದ ವ್ಯತ್ಯಾಸದಿಂದ ಲೆಕ್ಕಹಾಕುವ ತಾಪ) ೨೩ರ ಘಾತಕ್ಕನುಗುಣವಾಗಿ ಬದಲಾಗುತ್ತದೆ. ಅಂದರೆ, ತಂತಿಯ ಬಾಷ್ಪೀಕರಣ ಇಲ್ಲಿ ಮುಖ್ಯವಾಗುತ್ತದೆ. ಹೀಗೆ ಬಹು ದೊಡ್ಡ ಅಂಕೆಗಳು ಘಾತದಲ್ಲಿ ಕಂಡುಬರುತ್ತವೆ.

೧೯೩೬ರ ಈ ಪ್ರಬಂಧದಲ್ಲಿ ಪ್ರಕಟವಾದ ಫಲಿತಾಂಶಗಳು ಬಹು ಚರ್ಚಿತವಾದವು. ಕೇವಲ ೩೦೫೦ರಿಂದ ೩೧೪೦ ಕೆಲ್ವಿನ್ ಉಷ್ಣತೆಯ ಹಲವು ದತ್ತಾಂಶಗಳಿಂದ ಪಡೆದ ಈ ಫಲಿತಾಂಶಗಳನ್ನು ಪುನಃ ಪುನಃ ಪ್ರಯೋಗಗಳಿಂದ ಪುನರ್ವಿಮರ್ಶಿಸಲಾಯಿತು. ಕಂದು ಬಣ್ಣದ ಲೇಪವನ್ನು ತಡೆಗಟ್ಟುವತ್ತ ಪ್ರಯೋಗಗಳು ನಡೆದು ಬಲ್ಬ್ ತಯಾರಿಕಾ ಘಟಕಗಳು ಯಶಸ್ಸು ಕಂಡವು.

ಪೆರೆಲ್ಮನ್ ಈ ಪುಸ್ತಕವನ್ನು ಸುಮಾರು ೧೯೪೦ರ ಹೊತ್ತಿಗೆ ಬರೆದಿರ ಬಹುದು ಎಂದು ಊಹಿಸಬಹುದು. ಆಗ ಹೊಸ ಫಲಿತಾಂಶಗಳನ್ನು ಬರೆಯುವಾಗ ಹೊಸದಾಗಿ ಪ್ರಕಟವಾಗಿದ್ದ ಜಡ್ ಅವರ ಈ ಪ್ರಬಂಧವೇ ಅವರನ್ನು ಆಕರ್ಷಿಸಿದ್ದು ಸಹಜ ಎನ್ನಬಹುದು. ಈ ಫಲಿತಾಂಶಗಳ ಮುಂದಿನ ಬೆಳವಣಿಗೆಯನ್ನು ನೋಡಲು ಅವರಿಗೆ ಸಾಧ್ಯವಾಗಲಿಲ್ಲ.

ಪೆರೆಲ್ಮನ್ ಅವರ ಪುಸ್ತಕ ಹಲವಾರು ಮುದ್ರಣಗಳನ್ನು ಕಂಡಿತು. ಹಲವಾರು ಭಾಷೆಗಳಿಗೆ ತರ್ಜುಮೆಗೊಂಡಿತು. ಆದರೆ, ಘಾತಗಳ ಈ ವಾಕ್ಯವನ್ನು ಯಾರೂ ತಿದ್ದಲು ಪ್ರಯತ್ನಿಸಲಿಲ್ಲ. ಏಕೆಂದರೆ ಇದನ್ನು ಆಧರಿಸಿದ ಲೆಕ್ಕ ಬಹಳ ಸ್ವಾರಸ್ಯಕರವಾಗಿದೆ.

**ಡಾ|| ಬಿ. ಎಸ್. ಶೈಲಜಾ**
ಜವಾಹರ್‌ಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ನಿನ್ನಾಕವೆನಗಿರಲಿ ನೀನೆ ನನಗಿರಲಿ

ವೀಣಾ ಹಾಸನ್

ತನ್ನ ಹತ್ತಿರ ಒಟ್ಟು ಎಷ್ಟು ಸಂಪತ್ತಿದೆ ಅಂತ ಗೊತ್ತಿಲ್ಲವಂತೆ ಅವನಿಗೆ. ಅದಕ್ಕೆ ಲೆಕ್ಕ ಬರೆಯಲು ನನ್ನಂಥವರನ್ನು ಕೆಲಸಕ್ಕಿಟ್ಟುಕೊಂಡಿದ್ದಾನೆ. ಅವನಿಗೇ ಗೊತ್ತಿಲ್ಲ ಅಂದರೆ ನಂಬುವ ಮಾತಾ ? ಅದೂ ಈಗಿನ ಗಣಕಯುಗದಲ್ಲಿ ? ಕಾಲ–ಜೀವನ ಬದಲಾದಷ್ಟು ವೇಗದಲ್ಲಿ ಮಾತು ಬೆಳೆಯುತ್ತಿಲ್ಲವಾ ? ಅಥವಾ ಮನಸ್ಸಿಗೆ ಆ ಬಗ್ಗೆ ಪುರುಸೊತ್ತಿಲ್ಲವಾ? ಆದರೆ ಒಳ್ಳೆಯವನು. ಯಾರನ್ನೂ ಒರಟಾಗಿ ಮಾತಾಡಿಸುವುದಿಲ್ಲ. ನನ್ನ ಸ್ವಭಾವಕ್ಕೆ ಸರಿ. ದಿನಾ ಮನೆಗೆ ನಡೆದೇ ಹೋಗುವಷ್ಟು ದೂರ ನನ್ನ ಕಛೇರಿ.

ಈಗ ಎರಡು ದಿನಗಳಿಂದ ಹಾದಿಯಲ್ಲಿ ನನ್ನನ್ನಾರೋ ಕರೆದಂತೆನಿಸುತ್ತಿದೆ. ಇವತ್ತು ಕರೆಯನ್ನು ಸರಿಯಾಗಿ ಅನುಸರಿಸಿದೆ. ಕಾಲುದಾರಿಯಲ್ಲಿ ಒಂದು ಬಂಡೆ. ಎಲ್ಲಿಂದಲೋ ಬಂದುಬಿದ್ದಿರಬೇಕು. ಓಡಾಡಲು ಅಡ್ಡ. ಹತ್ತಿರ ನಿಂತೆ. ಹೌದು. ಕರೆದದ್ದು ಇದೇ ಬಂಡೆಯೇ. ನನಗೆ ಗಾಬರಿ. ಬೇಗ ಬೇಗ ಮನೆಗೆ ನಡೆದೆ. ರಾತ್ರಿ ನಿದ್ದೆ ಹತ್ತಲಿಲ್ಲ. ಮೈ ಸರಿ ಇಲ್ವಾ? ಅಂದಳು. ನಾನು ಏನೂ ಹೇಳಲಿಲ್ಲ. ಸುಮ್ಮನೇ ಅವಳನ್ನು ನೋಡಿದೆ. ಏನನಿಸಿತೋ, ಹೊರಳಿ ನಿದ್ದೆಹೋದಳು.

ಮಾರನೆ ಸಂಜೆ ಮತ್ತೆ ಅದೇ ಸೆಳೆತ. ಯಾರಿಗೂ ಬೇಡದ್ದು. ನಗರಸಭೆಗೂ. ಓಡಾಡುವ ಜನ ಕೂಡ ಗೊಣಗುತ್ತಿದ್ದರೇನೋ. ಬಂಡೆಯಾಗಿದ್ದು ಸಾಕಾಗಿ ನನ್ನ ಕರೆದಿರಬೇಕು. ಅಂತೂ ಇಂತು ಮನೆಗೆ ಬಂತು. ಉಳಿ, ಸುತ್ತಿಗೆ ಪೆಟ್ಟಿಗೆ ಅಟ್ಟ ಇಳಿಯಿತು. ಸಂಜೆ, ರಜೆ ಎಂದು ಕೈಗೆ ಬಂದ ಪರಿಕರಗಳು ಬರಬರುತ್ತಾ ಕೈ ಬಿಡಲೊಲ್ಲದಾದವು.




ಲೆಕ್ಕ ಬರೆಯುವುದು ಕೈ ತಪ್ಪಿತು. "ಅಪ್ಪಾ, ಆಫೀಸು ಬಿಟ್ಟುಬಿಟ್ಟೆಯಾ ?" ಮಗಳು ಕೇಳಿದಳು.

ಗೆಳೆಯ, ಎರಡು ಮನೆ ಆಚೆಯವ. "ಏನೋ ಶುರು ಹಚ್ಕಂಡಿದೀಯಾ ?" ಅಂದ. ಆಗಾಗ ಬಂದು ಸ್ವಲ್ಪ ಹೊತ್ತು ಇದ್ದು ಹೋಗತೊಡಗಿದ. ಅವನಿಗೆ ಮಾತು ತುಂಬ. ನಾನು ಹೂಂ, ಉಹೂಂ, ಹೌದಾ ಅಂದರೆ ಅದೇ ಹೆಚ್ಚು. ಮೊದಮೊದಲು ಬರೀ ಕೈಲಿ ಏನು ಬರೋದು ಅಂತ ಹಣ್ಣು ಹಂಪಲು ಹಿಡ್ಕೊಂಡು ಬರುತ್ತಿದ್ದ. ಸ್ವಲ್ಪ ದಿನದ ನಂತರ ಮೊದಮೊದಲು ಆಗಾಗ, ಆಮೇಲೆ ಮೇಲೆ ಮೇಲೆ ಗುಂಡೂ ಹಿಡಕೊಂಡು ಬರಹತ್ತಿದ. ಅವನೊಬ್ಬನೇ ತರುವುದೇಕೆ ಅಂತ ನಾನೂ ಆಗಾಗ ತಂದಿಡಹತ್ತಿದೆ. ನನ್ನವಳ ಕೆಂಗಣ್ಣು ಅವನಿಗೆ ಕಾಣಲೇ ಇಲ್ಲ. ಬರಬರುತ್ತಾ ನನಗೂ. ಅವನಿಲ್ಲದಾಗ "ಹೆಚ್ಚಾಯಿತು" ಅಂದಳು. ನಾನು, "ಹೂಂ, ಹೌದು" ಅಂದೆ. ಅವನು, "ಪರವಾಗಿಲ್ಲ ತಗೊಳೋ ಎಷ್ಟು ಅದ್ಭುತವಾಗಿ ಕೆಲಸ ಮಾಡ್ತಾ ಇದೀಯ" ಅನ್ನುತ್ತಿದ್ದ. ಅವನಿಗೆ ವಾಲುವುದೇ ಸುಲಭ.

ನನ್ನ ಮಗನ ನಿದ್ರಿಸುವಾಗಿನ ಅರೆಮುಚ್ಚಿದ ಕಣ್ಣುಗಳು, ಮಗಳ ಚಂದದ ಮೂಗು, ನನ್ನವಳ ಶಾಂತ ನಗೆಯ ತುಟಿಗಳು ಬಂಡೆಯಲ್ಲರಳಿದವು. ಜೊತೆಗೇ ನನಗೇ ಹೆಮ್ಮೆ ಎನಿಸುವ, ನನ್ನವಳು ಹೋಗ್ತಾಬರ್ತಾ ಬೆರಳಾಡಿಸುವ ನನ್ನ ಸುರುಳಿ ಕೂದಲೂ. ನನ್ನ ಗೆಳೆಯ, "ಅದ್ಭುತ, ಅದ್ಭುತ,..." ಅಂತ ಇನ್ನೂ ಏನೇನೋ ಹೊಗಳುತ್ತಿದ್ದ. ನನ್ನವಳಿಗೂ ಮಾತು ಕಮ್ಮಿ. ಕಣ್ಣು, ನಗೆಯಲ್ಲೇ ಬೇಕಾದಷ್ಟು ಹೇಳುತ್ತಿದ್ದಳು. ಹಿಗ್ಗಿ ಅಪ್ಪಿಕೊಳ್ಳುತ್ತಿದ್ದಳು. ಮಕ್ಕಳಿಗೆ ಕುತೂಹಲ. "ಅಪ್ಪಾ, ಇದನ್ನೆಲ್ಲಾ ಎಲ್ಲಿ ಕಲಿತೆ ?" ಎಂದಳು ಮಗಳು. "ನಿನ್ನ ನೋಡುತ್ತಾ ಮಗಳೇ" ಎನ್ನುತ್ತ ಕೆನ್ನೆ ತಟ್ಟಿದೆ. ಕೃತಿಗೆ ನಾಜೂಕುತನ ತಟ್ಟಿತು. ಮಗಳ ಕಣ್ಣಿನ ಹೊಳಪು, ಕೆನ್ನೆಯ



ಗುಳಿ ಕೃತಿ ಹೀರಿತು! "ನನ್ನಪ್ಪನಿಗೆ ಎಷ್ಟು ಶಕ್ತಿ ಗೊತ್ತಾ?" ಎಂದು ಯಾರಲ್ಲೋ ಕೊಚ್ಚಿಕೊಳ್ಳುತ್ತಿದ್ದ ಮಗ. ಕೃತಿಯ ತೋಳು, ಭುಜ, ಬೆರಳು, ಉಗುರುಗಳು ಚೆಂದವಾಗುತ್ತಾ ಹೋದವು...

* * *

"ನಿಂಗಿಂತ ಓದು ಕಡಿಮೆ. ಆಗ್ಲೇ ಹೇಳಿದೆ, ಯೋಚ್ನೆ ಮಾಡು ಅಂತ. ಈಗ ನೋಡಿದ್ರೆ ಕೆಲಸವನ್ನೂ ಬಿಟ್ಟು, ಹೀಗೆ ಮನೆಯಲ್ಲಿ ಕೊಟ ಕೊಟ ಅಂತ... ಏನಾಯ್ತೇ ನಿನ್ನ ಗಂಡನಿಗೆ?"

"ಮನೆಗೆ ನನ್ನ ಓದು ಸಾಕಲ್ವಾ? ಅಕ್ಕಾ, ಅವರನ್ನ ನೋಡು ಎಷ್ಟು ಖುಶೀಲಿದಾರೆ!"

"ಅಲ್ವೇ ಈ ಥರ ಏನೋ ಮಾಡ್ಕೊಂಡು, ಆದಾಯ್ವೂ ಇಲ್ದೆ, ಎಲ್ಲಾ ಜವಾಬ್ದಾರಿ ನಿನ್ ಮೇಲೇ ಬೀಳಲ್ವಾ?"

"ಇದುವರ್ಗೂ ಏನೂ ಕಷ್ಟ ಅನ್ನಿಸ್ತಿಲ್ಲ ಅಕ್ಕಾ. ಹಾಗಾದಾಗ ನೀನಿದ್ಯಲ್ಲಾ!"

"ಇದಕ್ಕೇನೂ ಕಮ್ಮಿ ಇಲ್ಲ ಬಿಡು... ನಿನ್ ಗಂಡನ್ನ ನೋಡಕೊಳ್ಳೋ ಹಣೆಬರ ನಂಗೇನೇ?"

"ಅವಳನ್ನ ನೋಡ್ಕೊಳಿ ಸಾಕು. ಅವಳು ನನ್ನ ನೋಡ್ಕೊತಾಳೆ!"

"ಭಂಡತನದ ಪರಮಾವಧಿ ನೀವು! ಬಂಡೆಗೆ ತಲೆ ಚಚ್ಕೋಬೇಕು!"

"ನೋಡಿದ್ರಾ? ಬಂಡೆ ನಿಮ್ಮನ್ನೂ ಬಿಡ್ಲಿಲ್ಲ!"

"ಸರಿಸರಿ. ನಾ ಹೊರಡ್ತೀನಿ ಕಣೆ. ನಿನ್ ಗಂಡ ಮಾಡೋ ಕಾಫಿ ಹುಚ್ಚಿಗೆ ಇಲ್ಲಿ ತನಕ ಬರ್ಬೇಕು. ಕಾಫಿ ಬಿಡೋದೇ ಒಳ್ಳೆಯದು ಅನ್ಸುತ್ತೆ!"

"ದೊಡ್ಡಮ್ಮ, ಮತ್ತೆ ಯಾವಾಗ ಬರ್ತೀರಿ? ಅಪ್ಪ, ಅಮ್ಮ ಈಗ ಎಲ್ಲೂ ಕರ್ಕೊಂಡೇ ಹೋಗಲ್ಲ" ಅಂದಳು ಮಗಳು.

" ನಿಮ್ಮಪ್ಪ ಅಮ್ಮಂಗೆ ಬುದ್ಧಿ ಬಂದ್ಮೇಲೆ ಬರ್ತೀನಿ" ಉತ್ತರ ಬಂತು.

* * *

ಬೆಳಿಗ್ಗೆ ಏಳುತ್ತಲೇ ಎಲ್ಲರಿಗೂ ಸಂಭ್ರಮ. ಕೃತಿ ಮೈತಳೆದು ನಿಂತಿತ್ತು. ಮಕ್ಕಳು ಅದನ್ನು ಮುದ್ದು ಮಾಡಿದ್ದೇ ಮಾಡಿದ್ದು. ಇವಳು ನನ್ನನ್ನು. ನಾನು ಅವಳನ್ನು. ಮತ್ತೆ ಮಕ್ಕಳನ್ನೂ. ನಾನು ಯಾವ ಪ್ರಪಂಚದಲ್ಲಿದ್ದೆನೋ ತಿಳಿಯದು, ತೇಲುತ್ತಿದ್ದ ಹಾಗಿತ್ತು. ಇವಳು "ಸಂಜೆ ಬೇಗ ಬರ್ತೀನಿ. ಮಕ್ಕಳನ್ನು ಕರೆದುಕೊಂಡು ಹೊರಗೆ ಹೋಗೋಣ" ಅಂದಾಗಲೇ ಎಚ್ಚರ. ತಲೆಯಾಡಿಸಿದೆ. ಕೂದಲಲ್ಲಿ ಬೆರಳಾಡಿಸಿ ಹೊರಟಳು.

"ನಿನಗೆ ಸರ್‌ಪ್ರೈಸ್ ಕಣೋ" ಎನ್ನುತ್ತಾ ಗೆಳೆಯ ಒಳಗೆ ಬಂದ. ಹಿಂದೆಯೇ ಒಬ್ಬ ವ್ಯಕ್ತಿ ಬಂದರು. ಬಹಳ ದೊಡ್ಡವರೇನೋ.

"ಬನ್ನಿ ಒಳಗೆ. ಕೂತ್ಕೊಳ್ಳಿ. ಏನ್ ತಗೋತೀರಿ? ಇವ್ರು ಕಾಫಿ ಫಸ್ಟ್ ಕ್ಲಾಸಾಗಿ ಮಾಡ್ತಾರೆ!" ಅವನ ಧಾರ್ಷ್ಟ್ಯ ಇಷ್ಟ ಆಗ್ಲಿಲ್ಲ ನನಗೆ. ಏನು ಮಾಡಬೇಕೋ ತೋಚದೆ ಪೆದ್ದುಪೆದ್ದಾಗಿ ನಕ್ಕೆ.

"ಇವರು... ದೊಡ್ಡ ಕಲಾಭಿಮಾನಿ. ಇಲ್ಲಿ, ವಿದೇಶಗಳಲ್ಲೂ ಇವರ ಅಂಗಡಿಗಳಿವೆ, ನಿನಗೆ ಸಹಾಯ ಮಾಡಬೇಕು ಅಂತ ಕಷ್ಟಪಡುತ್ತಿದ್ದಾಗ ಸಿಕ್ಕರು. ನಿನ್ನ ಅದೃಷ್ಟ ಬಹಳ ಚೆನ್ನಾಗಿದೆ. ಸರ್, ನಾನು ಹೇಳುತ್ತಿದ್ದೆನಲ್ಲ ಅವನೇ ಇವನು..."

"ಹೀಗೆ ಬನ್ನಿ ಸಾರ್. ಇದೇ ನೋಡಿ ನಿಮಗೆ ನಾನು ಹೇಳಿದ್ದು. ಪಾಪ. ಒಳ್ಳೆ ಮನುಷ್ಯ ಸಾರ್. ಮಾತು ಕಮ್ಮಿ. ಅದಕ್ಕೇ ನನ್ ಸಹಾಯ ಬೇಕು ಅವ್ನಿಗೆ. ಆದ್ರೆ ಕೆಲ್ಸ ನೋಡಿ ಸಾರ್. ಅಮೋಘವಾಗಿದೆ. ಮೊದಲ್ನೇದು ಅನ್ಸೋದೇ ಇಲ್ಲ. ಅಮೋಘವಾಗಿದೆ!"

ನನಗೆ ಸ್ವಲ್ಪ ಸ್ವಲ್ಪ ಈಗ ಅರ್ಥವಾಗತೊಡಗಿತ್ತು. ಇದು ನನ್ನ ಮೊದಲ ಕೃತಿ ಅಂತ ಇವನಿಗ್ಯಾರು ಹೇಳಿದರು? ಇವನು ನನ್ನನ್ನೆಷ್ಟು ನೋಡಿದಾನೆ? ಇವನ ಸಹಾಯ ನಾನೆಲ್ಲಿ ಕೇಳಿದ್ದೆ? ಒಳಗಿನ ಕರೆ ಅಲ್ಲವೇ ಈ ಕೆಲಸ ಮಾಡಿಸಿದ್ದು? "ಸುಮ್ನಿರೋ ಸಾಕು !!!" ಅಂತ ಕೂಗಬೇಕೆನಿಸಿತು.

ಅಷ್ಟರಲ್ಲಿ ನನ್ನನ್ನು ಪಕ್ಕಕ್ಕೆ ಎಳೆದು, "ನಿಂಗೇನೂ ತಿಳ್ಯಲ್ಲ. ಸುಮ್ನಿರೋ. ನಾನೆಲ್ಲ ಮಾತಾಡ್ತೀನಿ. ದೊಡ್ಡ ಕುಳ. ಸರಿಯಾಗಿ ಲಾಭ ಮಾಡ್ಕೋಬಹುದು. ನಿಂಗೇ ಬಿಟ್ರೆ ನಿಂಗೇ ನೀನು ಅನ್ಯಾಯ ಮಾಡಿಕೊಂಡುಬಿಡ್ತೀಯ. ಎಲ್ಲಾ ನಂಗೆ

ಬಿಟ್ಬಿಡು !" ಅಂದ.

ಆತ ನೇರವಾಗಿ ನನ್ನತ್ರ ಮಾತನಾಡಲು ಪ್ರಯತ್ನಪಟ್ರೂ ಇವನು ಬಿಟ್ರೆ ಅಲ್ವಾ ? ನನ್ನ ಬಗ್ಗೆ ಒಳ್ಳೆ ಮಾತಾಡಿದರು. ಸೌಜನ್ಯದ ವ್ಯಕ್ತಿ. ಇವನದ್ಯಾಕೋ ಅತಿ ಆಯ್ತು. ನಾನೇಕೆ ಇಷ್ಟು ಅಸಹಾಯಕ ?

* * *

ಅವತ್ತು ಸಂಜೆ ನಾಲ್ವರೂ ಹೊರಟೆವು. ಮಕ್ಕಳ ಬೇಕುಗಳ ಉದ್ದ ಪಟ್ಟಿಯೇ ಇತ್ತು. ಅವಳೇ ಉತ್ತರ ಕೊಡುತ್ತಿದ್ದಳು. ಮೂವರಿಗೂ ಸಂಭ್ರಮ. ನನಗೇಕೋ ಅನ್ಯಮನಸ್ಕತೆ. ಏನೂ ಬೇಡ ಅನ್ನಿಸ್ತಿದ್ರೂ ಬಲವಂತವಾಗಿ ಮೂವರ ಜೊತೆ ಸೇರಲು ಪ್ರಯತ್ನಿಸುತ್ತಿದ್ದೆ.

"ಯಾಕೆ ಹೀಗಿದ್ದೀರಾ ? ರಾಯ್ರಿಗೆ ಹೊರಗಿನ ಪ್ರಪಂಚಕ್ಕೆ ಬಂದಿದ್ದು ಸರಿ ಹೋಗ್ಲಿಲ್ವಾ ?"

"ಏನಿಲ್ಲ."

"ಮತ್ಯಾಕೆ ಹೀಗಿದೀರಿ ? ಗೆಳೆಯನ ಜೊತೆ ಲೋಟ ಹಿಡ್ಕೊಂಡು ಕೂರೋ ಅಭ್ಯಾಸ ಎಳೀತಿದ್ಯಾ?" ನಕ್ಕಂತೆ ಕೇಳಿದಳು.

* * *

ಹೆಂಡತಿ ಮಕ್ಕಳು ಆಫೀಸು, ಶಾಲೆ ಅಂತ ಹೊರಗೆ ಹೋದ ಮೇಲೆ ಒಬ್ಬನೇ ಸುಮ್ಮನೇ ಕುಳಿತಿದ್ದೆ.

"ದೇವ್ರು ದೊಡ್ಡೋನು ಮಾರಾಯಾ !" ಅಂದುಕೊಂಡೇ ಒಳಗೆ ಬಂದ.

"ಅದೇ ಆತ ದೇವರು ಸಿಕ್ಕ ಹಾಗೆ ಸಿಕ್ಕರು ನೋಡು. ನಿನ್ನ ಕೃತಿಗೆ ಒಳ್ಳೆ ಬೆಲೆನೇ ಕೊಟ್ರು. ನಿನ್ನ ತಿಳುವಳಿಕೇಲಿ ನೀನು ಅಷ್ಟು ಸಂಪಾದ್ಸಕ್ಕೆ ಆಗ್ತಿರಲಿಲ್ಲ. ನೋಡು. ನನ್ನ ಓಡಾಟಕ್ಕೂ ಬೆಲೆ ಬಂದ ಹಾಗೆ ಆಯ್ತು. ತಗೋ ಅರ್ಧ ನಿನಗೆ. ಇನ್ನರ್ಧ ನನಗೆ. ನಾನಾಗೋ ಹೊತ್ತಿಗೆ ಇಷ್ಟು ಬೇಗ ನಿನ್ನ ಕೈಗೆ ದುಡ್ಡು ಬಂದಿದೆ. ಇನ್ಯಾರಾದ್ರೂ ಆಗಿದ್ರೆ ಆಟ ಆಡ್ಸಿಬಿಡ್ತಿದ್ರು.........." ಒಂದೇ ಸಮನೆ ಮಾತಾಡಿ ನನ್ನ ಕೈಗೆ ದುಡ್ಡಿತ್ತ. ನನಗೆ ಗಲಿಬಿಲಿಯೋ ಗಾಬರಿಯೋ ಗೊತ್ತಿಲ್ಲ. ಸುಮ್ಮನೇ ಅವನನ್ನು ನೋಡುತ್ತಾ ನಿಂತೆ.

"ಏನೂ ತಿಳ್ಕೋಬೇಡ ಕಣೋ. ಹಾಗೆ ನೋಡಿದ್ರೆ ನಾವಿಬ್ರೂ ಇವತ್ತು ಸೆಲೆಬ್ರೇಟ್ ಮಾಡ್ಬೇಕಿತ್ತು. ನಿನಗೆ ನಿಮ್ಮಾಕೆ ಜೊತೆನೂ ಖುಷಿ ಹಂಚ್ಕೋಬೇಕು ಅನ್ಸತ್ತಲ್ವಾ? ಹ್ಯಾವ್ ಎ ನೈಸ್ ಟೈಮ್" ಎಂದು ಕಣ್ಣು ಮಿಟುಕಿಸಿದ. ನನಗೆ ಅಸಹ್ಯ ಎನಿಸಿತು. "ನಾನು ನನ್ನ ಮಗನ ಇಂಜಿನೀರಿಂಗ್ ಸೀಟಿಗೆ ಓಡಾಡಬೇಕು. ಸ್ವಲ್ಪ ಅರ್ಜಂಟು. ಏನೂ ತಿಳ್ಕೋಬೇಡ" ಅಂದು ನಡೆದೇ ಬಿಟ್ಟ. ನಾನು ಕುಸಿದೆ. ಅವನನ್ನು ಕೂಗಿ ಜೋರಾಗಿ ಬಾಯಿಗೆ ಬಂದದ್ದನ್ನೆಲ್ಲಾ ಬೈಯಬೇಕೆನಿಸಿತು. ನಾಲಿಗೆಯೇ ಹೊರಳಲಿಲ್ಲ. ಸ್ವರವೂ. ಅವನು ನನ್ನ ಕೃತಿಯನ್ನು ಟ್ರಕ್ಕಿಗೆ ಏರಿಸುವಾಗಲೂ ಗರಬಡಿದವನಂತೆ ನಿಂತಿದ್ದೆ. ಏನಾಗಿತ್ತೋ ?

ಸಂಜೆ ಮನೆಗೆ ಬಂದವಳೇ ಸುತ್ತ ಕಣ್ಣಾಡಿಸಿದಳು. "ಅರೆ! ಆಗ್ಲೇ ಕೊಟ್ಬಿಟ್ರಾ ? ಇನ್ನೆರಡು ದಿನನಾದ್ರೂ ಇರ್ಬೇಕಿತ್ತು. ನನಗೆ ಅದನ್ನು ನೋಡಿದ್ದೇ ಸಾಕಾಗ್ಲಿಲ್ಲ. ಅದಕ್ಕೆ ಇಡೋಕೆ ಅಂತ ಹೆಸರುಗಳನ್ನೂ ಆರಿಸಿಟ್ಟಿದ್ದೆ..." ಅಂದಳು. "ಸುಲಭವಾಗಿ ಹೆಸರು ಇಡೋಕೆ ಬಂದ್ಲು." ಮಾತಾಡದೇ ಹಲ್ಲು ಕಡಿದೆ. ಅವಳಿಗೆ ಗೊತ್ತಾಗದ ಹಾಗೆ.

* * *

"ಇವತ್ತು ರಾಯರ ಪ್ರೋಗ್ರಾಮ್ ಏನು ? ಪ್ಲಾನಿಂಗ್ ಮೀಟಿಂಗ್ ಇಲ್ದಿದ್ರೆ ನಾನೂ ರಜ ಹಾಕಿ ಮನೇಲಿರ್ತಿದ್ದೆ."

"............... " ಕತ್ತುಕೆಳಗೆ ಹಾಕಿ ಸುಮ್ಮನೇ ಕೂತಿದ್ದೆ.

"ಮುಂದಿನ ವಾರ ಮಕ್ಕಳ ಪರೀಕ್ಷೆ ಮುಗಿದಮೇಲೆ ಎಲ್ಲಾದ್ರೂ ಪ್ರವಾಸ ಹೋಗಿಬರೋಣ್ವಾ ?"

" ಸುಮ್ಮನೆ ನಿನ್ನ ಕೆಲಸ ನೀನು ನೋಡ್ಕೋಬಾರ್ದಾ ?"

" ಅಪ್ಪಾ ಮತ್ತೆ ಆಫೀಸಿಗೆ ಹೋಗ್ತೀಯಾ ?" ಮಗಳು.

" ಅದೆಲ್ಲ ನಿಂಗ್ಯಾಕೆ ?" ದನಿ ಏರಿಸಿದೆ. "ತಲೆಹರಟೆ !" ಅಂತ ಗೊಣಗಿದೆ.

ಹೊರಡುವಾಗ ಸಮಾಧಾನ ಮಾಡುವಂತೆ ಕೂದಲಲ್ಲಿ ಬೆರಳಾಡಿಸಿದಳು. ನನಗೆ ಏನೂ ಬೇಡ.

ಮನೆ ಇರಲಿ. ನಾನೂ ಖಾಲಿಖಾಲಿ. ಅಂಕೆಗೆ ಸಿಗದ ಯೋಚನೆಗಳು. ಏನೂ ಕೈಲಾಗದವ. ಇವಳ ಮುಂದೆ ನಾನು ತುಂಬಾ ಚಿಕ್ಕವ. ಅಷ್ಟೊಂದು ಓದಿದವಳಿಗೆ ನನ್ನಲ್ಲೇನು ಕಂಡಿತೋ ?... ನನ್ನ ಆಲೋಚನೆಗಳು ನನ್ನನ್ನು ಹೈರಾಣಾಗಿಸಿದವು. ಬಾಟಲಿಯಲ್ಲಿ ಉಳಿದಿದ್ದನ್ನು ಖಾಲಿ ಮಾಡಿದೆ. ಅವಳನ್ನು ಎದುರಿಸಲಾರೆ ಎನಿಸಹತ್ತಿತು. ಯಾರನ್ನೂ ಹುಡುಕಿಕೊಂಡು ಹೋಗಿ ಮಾತಾಡಿಸಿದವನೇ ಅಲ್ಲ. ಈಗ ಗೆಳೆತನದ ಬಗ್ಗೆಯೇ ಬೇಸರ. ಗೆಳೆಯನ ಕೃಪೆ. ಇದೊಂದು ಅಂಗಡಿಗೆ ಹೋಗುವುದು ಅಭ್ಯಾಸವಾಗಿತ್ತು.

ಸಂಜೆ ಬಂದವಳು ತರಕಾರಿ ಹಣ್ಣುಗಳನ್ನು ಒಪ್ಪ ಮಾಡುತ್ತಾ ಅವುಗಳ ಬೆಲೆ ಹೇಳುತ್ತಿದ್ದಳು. ಅವಳಷ್ಟಕ್ಕೆ ಅವಳು. ಮುಖ ತೊಳೆದು ಬಟ್ಟೆ ಬದಲಿಸಿ ಬಂದವಳು ನನ್ನ ನೋಡಿ ಸುಮ್ಮನೇ ನಿಂತುಬಿಟ್ಟಳು. "ಅಮ್ಮಾ, ಅಪ್ಪನ ಹತ್ರ ಏನೋ ವಾಸ್ನೆ" ಅಂದ ಮಗ. ಅವನನ್ನು ಬಾಚಿ ಎತ್ತಿಕೊಂಡು ಹೊರನಡೆದುಬಿಟ್ಟಳು.

ಬೆಳಿಗ್ಗೆ ಸಿಡಿಯುವ ತಲೆ ಹಿಡಕೊಂಡು ಎದ್ದೆ. ನನ್ನ ಕಣ್ಣುಗಳು ಕೆಂಪಗಿದ್ದವು. ಅವಳವು ಊದಿಕೊಂಡಿದ್ದವು. ನೋಡಲು ಭಯವಾಯ್ತು.

"ಯಾಕೋ ಇದ್ದಕ್ಕಿದ್ದ ಹಾಗೇ ಮೈ ಸರಿ ಇಲ್ಲ ಕಣೇ. ಎರಡು ದಿನ ರಜಹಾಕ್ತಿದೀನಿ. ಏನಾದ್ರೂ ಅರ್ಜಂಟ್ ಇದ್ರೆ ಫೋನ್ ಮಾಡು. ಮನೆಯಿಂದಲೇ ಮಾಡಿಕೊಡ್ತೀನಿ..." ಯಾರಿಗೋ ಫೋನಿನಲ್ಲಿ ಹೇಳುತಿದ್ದಳು. ಮಕ್ಕಳನ್ನು ತಯಾರುಮಾಡಿ ನನ್ನ ನೋಡಿದಳು. ನಾನು ಸುಮ್ಮನೇ ಇದ್ದೆ. ಅವಳೇ ಹೋಗಿ ಬಿಟ್ಟುಬಂದಳು.

ನನ್ನ ತಲೆ ಸಿಡಿತ ಹಾಗೇ ಇತ್ತು. ಅವಳು ಸಹಜವಾಗೇ ಮಾತಾಡುತಿದ್ದಳೋ ಏನೋ. ಮೌನ ಸಿಡುಕು ಎರಡೇ ನನ್ನಲ್ಲಿದ್ದುದು. ಅಕ್ಕಿಯ ಗಂಜಿ ಮಾಡಿ ಉಪ್ಪು, ಮಜ್ಜಿಗೆ ಸೇರಿಸಿ ಕೊಟ್ಟಳು. ಕುಡಿದ ಸ್ವಲ್ಪ ಸಮಯದ ನಂತರ ಹಗುರೆನಿಸಿತು.

* * *

ಪಕ್ಕದಲ್ಲಿ ಬಂದು ಕೂತಳು. ಮಾತಿಲ್ಲ. ನಾನೇ ಮಾತಾಡಲಿ ಅಂತ ಕಾಯುತ್ತಿದ್ದಳೇನೋ. ನನಗೇನೂ ಇಲ್ಲ ಹೇಳೋಕೆ. ಆದ್ರೆ ಅವಳು ಹತ್ತಿರ ಹೀಗೇ ಕೂತಿರಲಿ. ಮಕ್ಕಳನ್ನು ಅಕ್ಕನ ಮನೇಲಿ ಬಿಟ್ಟಿರಬೇಕು.

"ಮತ್ತೆ ಕೆಲಸಕ್ಕಾದ್ರೂ ಹೋಗ್ಬೇಕಿತ್ತು"

"ಹೂಂ. ನನಗ್ಯಾರು ಕೊಡ್ತಾರೆ ಈಗ ಕೆಲಸ? ಚಿಕ್ಕಪುಟ್ಟ ಸಂಬಳಕ್ಕೆ ದುಡಿಯೋದು ಸರಿ ಹೋಗಲ್ಲ."

"ಮತ್ತೆ ಯಾವ್ದಾದ್ರೂ ಕಲ್ಲು ಕರೆಯುತ್ತಾ ನೋಡಬೇಕಿತ್ತು."

"ಯಾಕೆ ? ನಾನು ನಿನಗೆ ಹೊರೆಯಾಗಿಬಿಟ್ಟೆ ಅಲ್ವಾ? ಈಗ ಖರ್ಚು ಮಾಡ್ತಿರೋದೆಲ್ಲ ನನ್ನದೇ."

"ಯಾಕೆ ಹೀಗೆ ಮಾತಾಡ್ತೀರಿ ? ನನ್ನದು ನಿನ್ನದು ಯಾವಾಗಿಂದ ? ದುಡ್ಡಿನ ಬಗ್ಗೆ ನಾನೇನೂ ಹೇಳ್ತಾ ಇಲ್ಲ."

"ಹೌದಲ್ವಾ ? ದೊಡ್ಡ ಓದಿನ ದೊಡ್ಡ ಹುದ್ದೆಯಲ್ಲಿರುವವಳು ನೀನು ! ನನ್ನ ಹಣ ನಿನ್ನದರ ಮುಂದೆ ಪುಡಿಗಾಸು ಅಲ್ವಾ !"

"ಮತ್ತೆ ಅದೇ... ಹೋಗ್ಲಿಬಿಡಿ. ಹೀಗೇ ಸುಮ್ನೆ ಕೂತಿದ್ರೆ ಮೈ, ಮನಸ್ಸು ಎರಡೂ ಕೆಡತ್ತಲ್ವಾ ?"

"ನಿನ್ನದು ಸರಿ ಇರತ್ತಲ್ಲ...ಯಾವಾಗಲೂ !"

"ಮಕ್ಕಳು ಕಷ್ಟ ಪಡ್ತಿದಾರೆ. ನೀವು ಖುಷಿಯಾಗಿಲ್ದೆ ಇದ್ರೆ ನನಗೂ ಸಂಕಟ"

"ಸೊ ? ನಾನು ನಿಮ್ಮೆಲ್ಲರಿಗೂ ಕಷ್ಟ ಕೊಡ್ತಿದೀನಿ ಅಂತಾಯ್ತು. ಆಚೆ ಹಾಕಿಬಿಡಿ. ಇಲ್ದಿದ್ರೆ ನಾನೇ ಎಲ್ಲಾದರೂ ತೊಲಗ್ತೀನಿ..."

"ನಾನೆಲ್ಲಿ ಹಾಗಂದೆ ?" ಅಳತೊಡಗಿದಳು. ಅವಳು ಹಾಗೆ ಅತ್ತದ್ದು ನೋಡೇ ಇರಲಿಲ್ಲ. ಕಣ್ಣೊರೆಸಲಾ? ಅಷ್ಟು ಸಾಕು ಅವಳಿಗೆ. ನನಗೆ ಗೊತ್ತು. ಆದ್ರೆ ನಾನು ಸೋಲಬಾರದು. ಕನಿಷ್ಠ ಇವಳ ಬಳಿಯಾದರೂ. ಎಲ್ಲೆಲ್ಲೂ ಸೋತುಬಿಟ್ಟರೆ ನನ್ನ ಅಸ್ತಿತ್ವಕ್ಕೆ ಬೆಲೆಯೇ ಇರುವುದಿಲ್ಲ.

ಮಕ್ಕಳು ಬರುವ ಹೊತ್ತಾಯಿತೇನೋ. ಕಣ್ಣಿಗೆ ತಣ್ಣೀರೆರಚಿಕೊಳ್ಳತೊಡಗಿದಳು. ಆದರೂ ಅತ್ತಿದ್ದು ಗೊತ್ತಾಗುತಿತ್ತು. ಮಗ ಒಳಗೆ ಬರುತ್ತಲೇ, "ಅಮ್ಮಾ ದೊಡ್ಡಮ್ಮನ ಮನೇಲಿ ಅಕ್ಕ..." ಅಂತ ಹೇಳತೊಡಗಿದ. ಅವಳಿಗೆ ಬಹಳ ಸಹನೆ. ಬಲವಂತವಾಗಿಯೋ ಸಹಜವಾಗಿಯೋ ನಸುನಗುತ್ತಾ ಅವನ ಮಾತು ಕೇಳತೊಡಗಿದಳು. ಮಗಳು ತುಂಬಾ ದಿನಕ್ಕೆ ಹತ್ತಿರ ಬಂದು, "ಅಪ್ಪ, ಪ್ರಾಜೆಕ್ಟ್ ವರ್ಕಿಗೆ ಡ್ರಾಯಿಂಗ್ ಮಾಡಿ ಕೊಡ್ತೀಯಾ ?" ಅಂದಳು. ನಾನೇನೂ ಹೇಳಲಿಲ್ಲ.

ಪುಸ್ತಕ ಪೆನ್ಸಿಲ್ ಡಬ್ಬಿ ಹಿಡ್ಕೊಂಡು ಬಂದಳು. ಪರಿಸರ ಸಂರಕ್ಷಣೆ ಬಗ್ಗೆ. ಯಾವ ಪರಿಸರ ? ಯಾವ ಸಂರಕ್ಷಣೆ ? ಮಕ್ಕಳಿಗೇಕೆ ಇವೆಲ್ಲ ? ಲೆಕ್ಕ ಕಾಗುಣಿತ ಹೇಳಿಕೊಟ್ಟು ಆಟ ಆಡಿಸಿ ಕಳಿಸಿದರೆ ಸಾಲದೇ ? "ಈ ವಿಷ್ಯದ ಬಗ್ಗೆ ನನಗೆ ಗೊತ್ತಿಲ್ಲ. ಅಲ್ಲದೆ ನೀನೇ ಕೆಲಸ ಮಾಡೋದು ಕಲೀಬೇಕು." ನಾನು ಹೇಳಿದ್ದು ಒರಟಾಯಿತೇನೋ. ಮಗಳ ಮುಖ ಸಪ್ಪೆಯಾಯಿತು. ನೋಡಲಾರದೆ ಅಲ್ಲಿಂದ ಎದ್ದೆ. ಕತ್ತೆತ್ತಿ ನನ್ನನ್ನೇ ನೋಡಿದಳು. ಅವಳ ಕಣ್ಣುಗಳೂ ತುಂಬಿದ್ದವು. ಸಾಕಪ್ಪಾ ಈ ಹೆಂಗಸರ ಸಹವಾಸ. ಮಾತು ಮಾತಿಗೆ ಅಳುವುದು. ಅವಳಾಯ್ತು. ಈಗ ಇವಳು. ಬೈಯಲು ಬಾಯಿ ಬರಲಿಲ್ಲ. ಹತ್ತಿರ ಹೋದರೆ ತಾನೇ ಸಮಸ್ಯೆ ?

* * *

ಯಾಕೋ ಮನೆಗೆ ತಗೊಂಡು ಹೋಗುವ ತಾಳ್ಮೆ ಇಲ್ಲ. ಸ್ವಲ್ಪ ಕೂತಿದ್ದು ನಂತರ ಹೋದರಾಯ್ತು. ಟೇಬಲ್ ಹುಡುಕಿ ಕೂತೆ. ಇವತ್ತು ಕೌಂಟರಿನಲ್ಲಿ ಕೂತವನೂ ನನ್ನನ್ನು ವಿಚಿತ್ರವಾಗಿ ನೋಡ್ತಾ ಇದ್ದ. ಜನರ ಪರಿಚಯ ಆಗುವುದೇ ತಪ್ಪು. ಎದ್ದು ಹೊರಟಾಗ ಟೇಬಲ್ ಮೂಲೆ ತಗುಲಿ ನೋವಾಯಿತು. ಸಾವರಿಸಿಕೊಂಡೆ. ಮನೆಗೆ ಹೊರಟೆ...

"ಯಾರೋ ಹುಡುಗನ ಗಾಡಿಗೆ ಅಡ್ಡ ಬಂದ್ನಂತೆ. ಆ ಹುಡುಗನೇ ಬಂದು ಇಲ್ಲಿ ಸೇರ್ಸಿ ಹೋದ್ನಂತೆ"

"ನನಗೂ ಫೋನ್ ಮಾಡಿ ಹೇಳಿದ. ಗೊತ್ತಿರುವ ಹುಡುಗನೇ ಏನೋ"

"ಅಕ್ಕ. ಮಕ್ಕಳನ್ನು ಇವರು ಮನೆಗೆ ಬರುವವರೆಗೂ ನಿಮ್ಮನೇಲೇ ಇಟ್ಕೊತೀಯಾ ? ಭಾವ ಹೇಗೂ ಊರಲಿಲ್ವಲ್ಲ. ನೀನು ಆಸ್ಪತ್ರೆಗೆ ಬರ್ಬೇಡ. ನಿನ್ನನ್ನೂ ಯಾರಾದ್ರೂ ನೋಡ್ಕೋಬೇಕಾಗತ್ತೆ."

* * *

ಡ್ರಿಪ್ಸ್ ತೆಗೆದರು. ಅವಳದು ಅದೇ ಶಾಂತ ಮುಖ. ಆದ್ರೆ ಆ ಕಣ್ಣುಗಳು... ಎದುರಿಸಲು ಆಗಲೇ ಇಲ್ಲ. ಪಕ್ಕಕ್ಕೆ ತಿರುಗಿದೆ. ಕೂದಲಲ್ಲಿ ಬೆರಳಾಡಿಸಿದಳು.



ಅದರಲ್ಲೇನೋ ಹೊಸತನವಿದೆ ಎನಿಸಿತು. ನಿಧಾನವಾಗಿ ಕಣ್ಣು ತೆರೆದೆ. ಅವಳ ಮಡಿಲಿನಲ್ಲಿ ಮುಖವಿಟ್ಟು ಮನಸಾರೆ ಅತ್ತುಬಿಟ್ಟೆ. ಕತ್ತೆತ್ತಿ ಅವಳನ್ನು ನೋಡಿದೆ. ಅವಳೂ ಅತ್ತಂತಿತ್ತು. ನೀರು ಕುಡಿಯಲು ಕೈ ಚಾಚಿದೆ. ಬೀಳುವಂತಾಯ್ತು. ಬೀಳದಂತೆ ಹಿಡಿದಳು.

ಡ್ಯೂಟಿ ಡಾಕ್ಟರ್ ಇನ್ನೂ ಚಿಕ್ಕ ಹುಡುಗ. "ಹೇಗಿದ್ದೀರಿ ?" ಅಂತ ಮಾತು ತೆಗೆಯುತಿದ್ದ. ಅವನ ಬಳಿ ಮಾತಾಡುತ್ತಾ ಏನೇನು ತೋಡಿಕೊಂಡೆನೋ ? ನನ್ನ ಕಡಿಮೆ ಮಾತಿನ ವ್ಯಕ್ತಿತ್ವದಲ್ಲಿ ಇಷ್ಟೊಂದು ಒಳಗೆ ತುಂಬಿತ್ತಾ ? ನನ್ನ ಖಾಲಿತನ ಕಾಡಿದ್ದು ಎಲ್ಲಿಂದ ? ಹಾಗಂತ ಡಾಕ್ಟರೇನು ಜಾಸ್ತಿ ಮಾತಾಡುತ್ತಿರಲಿಲ್ಲ. ನನ್ನ ಮುಂಗೈ ಸವರುತ್ತಾ "ಓ ಹೌದಾ, ಹಾಗಾ..." ಅನ್ನುತ್ತಿದ್ದ. "ಆಸ್ಪತ್ರೆ ಒಳಗೆ ಓಡಾಡಿ ಎಲ್ಲವನ್ನೂ ನೋಡಿಕೊಂಡು ಬನ್ನಿ" ಅಂದ ಒಂದುದಿನ. ಹೊರಗೆ ಬಣ್ಣಬಣ್ಣದ ಹೂವಿನ ತೋಟ. ಧ್ಯಾನ ಮಂದಿರ. ಯೋಗ ಕೇಂದ್ರ. ಇನ್ನೂ ಓದುತ್ತಿರುವ ಡಾಕ್ಟರುಗಳು. "ಎಷ್ಟು ಹಾಂಡ್ಸಮ್ಮಾಗಿದಾರೆ !" ಯಾರೋ ಇನ್ನೂ ವಿದ್ಯಾರ್ಥಿನಿ ಇರಬೇಕು. ನಾನು ನಕ್ಕೆ. ನನ್ನ ಬಗ್ಗೆ ನನಗೇ ಮುಜುಗರ ಆಯಿತು. ಇದೇನೋ ಹೋಲಿಸ್ಟಿಕ್ ಆಸ್ಪತ್ರೆ ಅಂತೆ. ತುಪ್ಪ ಕುಡಿಸಿದರು. ಅಭ್ಯಂಜನವೂ ಇತ್ತು. ಇಂಜೆಕ್ಷನ್ನೂ ಕೊಟ್ಟರು. "ಇಷ್ಟು ರ್‍ಯಾಪಿಡ್ ರೆಸ್ಪಾನ್ಸ್ ಅಪರೂಪ" ಅಂತ ಮಾತಾಡಿಕೊಳ್ತಾ ಇದ್ರು. ಮುಖ ಮೊದಲಿದ್ದಿದ್ದಕ್ಕಿಂತ ಹೊಳಪಾಗಿದೆ ಅಂತ ಕನ್ನಡಿ ಹೇಳಿತು.

ಹೊರಡುವಾಗ "ಗುಡ್‌ಲಕ್ ಸರ್. ಇನ್ನು ಟ್ರೀಟ್‌ಮೆಂಟ್ ಅಂತ ನೀವು ಇಲ್ಲಿಗೆ ಬರುವ ಸಂಭವ ಇಲ್ಲ. ನಮ್ಮ ಕೆಲವು ವಿದ್ಯಾರ್ಥಿನಿಯರು ನಿಮ್ಮನ್ನ ಮಿಸ್ ಮಾಡಕೋತಾರೇನೋ" ಅಂದರು ಹಿರಿಯ ವೈದ್ಯರು. ನಗುತ್ತಾ. ನನ್ನವಳ ಕಡೆ ನೋಡಿದೆ. ಅವಳು ನಗುತ್ತಾ, "ಅವರಿಗೆ ಬೇಕಾದಾಗ ನಮ್ಮ ಮನೆಗೆ ಕಳಿಸಿ" ಅಂದಳು. "ಸರಿಸರಿ. ನಿಮಗೆ ನನ್ನಂತಹವರೆಷ್ಟೋ. ಅವರ ಮನೇಗೆಲ್ಲ ಸ್ಟೂಡೆಂಟ್ಸ್ ಹೋಗ್ತಾ ಇದ್ರೆ ಅವರ ಓದು ಮುಗಿದ ಹಾಗೇ" ಎಲ್ಲರೂ ನಕ್ಕೆವು.

ಮನೆ ಒಳಗೆ ಬರುತ್ತಲೇ ಕೈ ಅಗಲಿಸಿ ನಿಂತೆ. ನನ್ನ ಎದೆಯಲ್ಲಿ ಮುಖ ಹುದುಗಿಸಿದಳು. ಇಷ್ಟು ದಿನ ನನ್ನ ಕೈಯಾರೆ ಈ ಸುಕೃತ ಕಳಕೊಂಡಿದ್ದೆ. ಎದೆ ಒದ್ದೆಯಾದಂತೆನಿಸಿ ಅವಳ ಮುಖ ಹಿಡಿದೆತ್ತಿದೆ. "ಇನ್ನು ನಿನ್ನನ್ನು ಅಳಿಸುವುದಿಲ್ಲ" ಮನಸ್ಸಿನಲ್ಲೇ ಹೇಳಿದೆ. ಅವಳೂ "ಸರಿ" ಎಂದಳು ಬಾಯಿಬಿಡದೇ.

"ನಿಮಗೊಂದು ಸರ್‌ಪ್ರೈಸ್..."

"ಏನದು ?"

"ನಿಮ್ಮನ್ನು ಕೇಳದೆ ಒಂದು ಕೆಲ್ಸ ಮಾಡಿದೀನಿ."

"ನೀನು ಕೇಳಿದ್ರೂ ಕೇಳಿಸ್ಕೊಳ್ಳೋ ಸ್ಥಿತೀಲಿ ನಾನೆಲ್ಲಿದ್ದೆ ಬಿಡು !"

" ನಂಗೇನು ಅದು ತಮಾಷೆ ಅನ್ನಿಸ್ತಿಲ್ಲ."

"ತಪ್ಪಾಯ್ತು."

"ಅಯ್ಯೋ ಮನೆಗೆ ಬಂದಾಗಿಂದ ಹೇಳ್ತಾನೇ ಇದೀರಿ. ಅದೆಷ್ಟು ಸ್ಟಾಕ್ ಇಟ್ಕೊಂಡಿದೀರಿ ?"

"ಅದನ್ನೇ ಎಲ್ಲಿ ಹೇಳಿದೆ ? ಆಗ ಸಾರಿ ಅಂದಿದ್ದೆ. ಈಗ..."

" ಸಾಕು. ನೀವು ಹೇಳ್ತಾ ಇದ್ರಲ್ಲ ಹಾಗೇ ಏಕವಚನದಲ್ಲಿ ಮಾತಾಡಿಸಿದ್ರೆ ಹೇಗೆ ಅನ್ಕೊತಾ ಇದೀನಿ."

"ವಾವ್ ! ಅದೇನಾ ಸರ್‌ಪ್ರೈಸ್ ?"

"ಅದಲ್ಲ. ಬೇರೆ..."

"ಇದ್ದಕ್ಕಿದ್ದ ಹಾಗೆ ಇದೇನು ? ಇಷ್ಟೆಲ್ಲ ಆದ್ಮೇಲೆ ಚಿಕ್ಕೋನಾಗಿಬಿಟ್ಟೆ ಅಲ್ವಾ ?"

"ಅಯ್ಯೋ ! ಹಾಗಲ್ಲ. ಬಹುವಚನ ಉಪಯೋಗಿಸಿ ನಿಮ್ಮನ್ನು ದೊಡ್ಡವರನ್ನಾಗಿಸಿ ಸಲ್ಲದ ಹಿರಿತನ ನಿಮ್ಮ ಮೇಲೆ ಹೇರಿದ್ದೇನೋ. ನಿಮ್ಮನ್ನ ಮೇಲೆ ಕೂರಿಸಿ ಜೊತೆಯಾಗ್ಲಿಲ್ವೇನೋ ಅಂತ.."

"ಥಿಯರಿ ಕಾಂಪ್ಲಿಕೇಟೆಡ್. ನನಗೆ ಅರ್ಥ ಆಗೋಕೆ ಸ್ವಲ್ಪ ಸಮಯ ಬೇಕು. ಅಲ್ಲಾ ನೀವು ಹೆಂಗಸರಿಗೆ ಗಿಲ್ಟ್ ಹೇರ್ಕೊಳ್ಳೋದರಲ್ಲಿ ಏನು ಅಷ್ಟು ಖುಷಿ ?"

"ಎಷ್ಟು ಹೆಂಗಸರನ್ನ ನೋಡಿರೋದು ತಾವು ? ನಮ್ಮಮ್ಮ ಅಕ್ಕನ ನೋಡಿ, ಅವರ ಹಾಗೆ ಇದ್ರೆ ನಾನೂ ಒಳ್ಳೆಯವಳು ಅನಿಸಿಕೊಳ್ತೀನೇನೋ ಅಂತಾನೋ, ಹಾಗೆ ಮಾತಾಡುವುದು ಸಹಜ ಅಂತಾನೋ ಇರ್ಬೇಕು. ಒಳ್ಳೆಯವಳು ಅನಿಸಿಕೊಳ್ಳುವುದು ನನ್ನ ಈ ಜನ್ಮದ ಸಾಧನೆ ಆಗಲಾರದು ಅಂತ ಗೊತ್ತಾಗ್ತಿದೆ.

ಅಂದ್ವಾಗೆ, ನಿಮಗೆ ಫೋನ್ ಮಾಡಿದ್ರು. ನೀವೂ ಫೋನ್ ಮಾಡಿ ಚೆನ್ನಾಗಿದೀನಿ ಅಂತ ಹೇಳಿ."

"ನೀನು ಫೋನ್ ಮಾಡು !"

"ನಾನು ಮಾತಾಡಿದ್ದು ಆಯ್ತು. ನಿಮ್ಮ ಸರದಿ ಈಗ."

"ನಿನ್ನ ಸರದಿ."

"ಏನಿದು ಹೀಗೆ ?"

"ನಿನ್ನ ಮಾತು ತಿದ್ದುತಾ ಇದೀನಿ !"

"ಅಬ್ಬಾ ! ಸರಿ. ಫೋನ್ ಮಾಡು !"

" ಅವಳಿಗ್ಯಾರು ಹೇಳಿದ್ರು ನನ್ನ ವಿಷ್ಯ ?"

"ಸರಿ ಹೋಯ್ತು. ಕದ್ದು ಮದ್ವೆ ಮಾಡ್ಕೋತೀನಿ, ಬಗ್ಗಿ ವಾಲ್ಗ ಊದು ಅಂದ್ರಂತೆ !"

* * *

"ಏನು ? ಮನೆ ಖಾಲಿ ಮಾಡ್ತಾ ಇದೀರ ? ಎಲ್ಲಿ ಹೊಸಾ ಮನೆ ? ಈ ಮನೇನ ಏನ್ಮಾಡ್ತೀರಾ ?" ಗೆಳೆಯ ಆತಂಕದ ಧ್ವನಿಯಲ್ಲಿ ಕೇಳಿದ. ನನ್ನ ಮುಖ ನೇರವಾಗಿ ನೋಡಲೊಲ್ಲ. ಅವನ ಉಸಾಬರಿ ಅದು.

"ಹೂಂ. ಈ ಮನೆಗೆ ಕಾಲೇಜು ಹುಡುಗರು ಬಾಡಿಗೆಗೆ ಬರ್ತಿದಾರೆ. ನಾವು ಇಲ್ಲೇ ಸ್ವಲ್ಪ ಮುಂದೆ ಹೊಸಾ ಮನೆಗೆ ಹೋಗ್ತಾ ಇದೀವಿ."

"ಓ ! ಹೌದಾ ? ... ಏನೂ ಯೋಚ್ನೆ ಮಾಡ್ಬೇಡ. ಹುಡುಗ್ರು ಏನ್ ಗಲಾಟೆ ಮಾಡಿದ್ರೂ ನಾನು ಸುಧಾರಿಸ್ತೀನಿ."

"ತುಂಬಾ ಥ್ಯಾಂಕ್ಸ್. ತಗೋ ಇದು ನನ್ನ ಹೊಸಾ ಮನೆ ವಿಳಾಸ."

* * *

"ಎಷ್ಟ್ ದೊಡ್ ಮನೆ ಅಮ್ಮಾ" ಮಕ್ಕಳಿಬ್ಬರಿಗೂ ಖುಷಿಯೋ ಖುಷಿ. "ಆದ್ರೆ ಇಲ್ಲಿ ಯಾರೂ ಫ್ರೆಂಡ್ಸೇ ಇಲ್ಲ..." ಅಂದಳು ಮಗಳು.

"ನಿಧಾನವಾಗಿ ಸಿಗ್ತಾರೆ ಬಿಡು. ಅಲ್ಲೀವರ್ಗೂ ನಾನೇ ನಿಮ್ಮ ಜೊತೆ ಆಡ್ತೀನಿ. ಹೇಗೂ ಕೆಲಸವಿಲ್ಲವಲ್ಲ !" ಅಂದೆ.

"ಏನ್ ಮಾತು ಅಂತ ಆಡ್ತೀ ? ನೀನು ತುಂಬ ದಿನ ಖಾಲಿ ಇರಲ್ಲ ಅಂತ ನನ್ ಮನ್ಸು ಹೇಳ್ತಾ ಇದೆ" ಅಂದಳು.

"ಹೌದಾ ? ಇನ್ನೂ ಏನೇನ್ ಹೇಳ್ತಿದೆ ನಿನ್ ಮನ್ಸು ?"

ಅಷ್ಟರಲ್ಲಿ ಮೊಬೈಲ್ ಕರೆಯಿತು. "ಓ ! ಹೌದಾ ? ನಂ ಹೊಸಾ ಮನೆಗೆ ದಾರಿ ಗೊತ್ತಾಗತ್ತಾ ?... ಬೇಡ ನಾನು ಸ್ಟೇಷನ್ಗೇ ಬರ್ತೀನಿ. ಬೋಗಿ ನಂಬರ್ ಏನು ? ಸರಿ. ಸರಿ."

ಅಕ್ಕ ಇಳಿದಳು. ಅಮ್ಮನಿಗೆ ಸಹಾಯ ಬೇಕು. ವೀಲ್ ಚೇರ್ ತಳ್ಳಿಕೊಂಡು ಹೊರಬಂದೆವು.

"ನೀನೇ ಕಾರು ನಡೆಸ್ತೀಯೇನೋ ? ಆಗತ್ತಾ ?... ಏನಿಲ್ಲಾ ಹಾಗೆಲ್ಲ ಆಗಿ, ಮಲಗಿ ಎದ್ದಿದೀಯ, ಜೋಪಾನವಾಗಿ ಕರ್ಕೊಂಡು ಹೋಗ್ತೀಯಾ ತಾನೇ ? ನಿನ್ಹೆಂಡ್ತಿನೇ ಬರ್ಬೋದಿತ್ತು. ಹೊಸಾ ಮನೆ ಅಂತ ರಜ ಎಲ್ಲ ಖಾಲಿ ಮಾಡ್ಕೊಂಡಿದಾಳೋ ಏನೋ... ಮೊದಲೇ ಸರಿ..."

ಕಾರು ಪಕ್ಕದಲ್ಲಿ ನಿಲ್ಸಿ ಕೇಳ್ದೆ, "ಸರಿ. ಈಗ ಏನು ಮಾಡೋದು ? ನನ್ನ ಜೊತೆ ಬರೋಕೆ ಹೆದ್ರಿಕೆ ಆಗೋದಿದ್ರೆ, ನಿಮ್ಮ ಆಟೋ ಹತ್ಸಿ ನಾನು ಹಿಂದೆ ಬರ್ತೀನಿ !" ಶಾಂತವಾಗಿ ಹೇಳಿದೆ. ತಣ್ಣಗಲ್ಲ.

"ಯಾಕೋ ಬೇಜಾರು ಮಾಡ್ಕೊತ್ಯಾ? ಮಾತಿಗೆ ಹಾಗಂದೆ. ಅಮ್ಮಂಗೆ ಆಟೋ ಹತ್ತೋದು, ಅದೆಲ್ಲ ಆಗತ್ತೋ ಇಲ್ವೋ ಅನ್ನೋದೂ ಹೊಳ್ಯಲ್ವೇನೋ ?"

"ನಾನು ಬಂದಿದ್ದು ನಿಂಗೆ ಸರಿ ಹೋಗ್ಲಿಲ್ವಾ ? ನೀನೂ ಹೆಂಡ್ತಿ ಥರ ಆದೆ ಅನ್ಸು. ಹೊರಡಲ್ಲ ಅಂತ ಇನ್ನಿಲ್ದ ಹಾಗೆ ಹೇಳ್ದೆ. ನನ್ನ ಮಾತು ಕೇಳೋರ್ಯಾರಿದಾರೆ ?" ಅಮ್ಮ ಅಂದಳು.

"ಹಾಗೇನಿಲ್ಲಮ್ಮ. ಏನು ? ತತ್ಕಾಲಲ್ಲಿ ಟಿಕೆಟ್ ಸಿಕ್ಬಿಟ್ಟಿದೆ ! ಒಳ್ಳೆದೇ ಆಯ್ತು. ಅಮ್ಮ ನಿಂಗೆ ಜಾಸ್ತಿ ಸುಸ್ತಾಗಿಲ್ಲ ತಾನೇ ?" ಮಾತು ಬದಲಿಸಿದೆ.

ಅವರು ಇದ್ದಕ್ಕಿದ್ದ ಹಾಗೇನೂ ಹೊರಟಿರಲಿಲ್ಲ. ಟಿಕೆಟ್ಟು ಮಾಡಿಸಿ ತಿಂಗಳಾಗಿತ್ತು. ನನಗೆ ಹೇಳಿರಲಿಲ್ಲ ಅಷ್ಟೆ. ಅಮ್ಮನನ್ನು ನನ್ನಲ್ಲಿಗೆ ಕರೆತರಲು ಅವರು ಕೊಟ್ಟ ಕಾರಣಗಳು ನಿಜವಾದುವುಗಳೋ ? ಸಬೂಬುಗಳೋ ? ಏನಾದ್ರೇನು ? ಅಮ್ಮ ನಮ್ಮನೆಯಲ್ಲಿರೋದು ಇವಳಿಗೂ ಇಷ್ಟವೇ. ಅವಳನ್ನು




# ಬರಬೇಡ ನಲ್ಲ

**ನೀ** ಬರಲೇ ಇಲ್ಲ ನಲ್ಲ ...
ಕತ್ತಲಾವರಿಸುವ ಮುನ್ನ ಮುತ್ತಿಕೊಳ್ಳುವ
ಭಯವ
ಮಡಿಲಲ್ಲಿ ಅಡಗಿಸಿ ಸುತ್ತ ಕಣ್ಣಾಡಿಸಿದೆ
ನೆರಳೂ ನನ್ನ ಜೊತೆಗಿಲ್ಲ
ಹೆಜ್ಜೆಗಳೂ ಹೆಣಭಾರ ಉಸಿರು ಮಣಭಾರ
ಹೊಸ್ತಿಲಲ್ಲಿ ಕುಸಿದು ಕುಳಿತಿದ್ದೆ ದಾರಿಯಲಿ ಕಣ್ಣಿಟ್ಟು
ಮತ್ತೆ ಮೇಲೇಳುವೆನೆ, ಪ್ರಶ್ನೆ ಇತ್ತು ನನ್ನೊಳಗೆ
ಉತ್ತರಿಸಬೇಕಾದ ನೀನು...
ಮಿಸುಕಾಡುತಿಹ ನೆನಪುಗಳ ಮೇಲೆ ಮೋಡದಾ ಮುಸುಕು
ನಾ ನಡೆದಾಡುವ ಹೆಣ, ಎತ್ತಲೋ ನಿನ್ನ ಪಯಣ
ಅರ್ಥವಾಗಿತ್ತು ಕಣ್ಣೀರಿರುವುದು ಹಂಚಿಕೊಳ್ಳಲಲ್ಲ
ನೀ ಸರಿದಾಗ ಕಂಡಿತ್ತು ನಿನ್ನ ಹಿಂದಿನ ವಿಶಾಲ ವಿಶ್ವ,
ನಡೆದಷ್ಟು ಪಥ ನೆಗೆದಷ್ಟು ಆಕಾಶ.
ನಿನಗೆ ಗೊತ್ತಾ ನಲ್ಲ
ಮೇಲೆ ಏರಿದ ಮೇಲೆ ಸೂರ್ಯ ಮುಳುಗುವುದೇ ಇಲ್ಲ.
ಧನುಸ್ಸು ಮುರಿದ ಮೇಲೆ ಸತಿಯ ಪಡೆದ ರಾಮ
ಮನಸ್ಸು ಮುರಿದ ಮೇಲೆ ಸ್ವಾತಂತ್ರ್ಯ ಪಡೆದ ಸೀತೆ
ಹೀಗೂ ನೋಡಬಹುದು ಆದರ್ಶದ ಅಂತರಂಗವ.
ನೀ ಮತ್ತೆ ಬರಬೇಡ ನಲ್ಲ
ಬದುಕ ಪಥದಲ್ಲಿ ನಾನು ನಾನಾಗುತ್ತಿರುವೆ.

**ದಾಕ್ಷಾಯಿಣಿ ರಮೇಶ ಬಿರಾದಾರ**
ದರಬಾರ ಗಲ್ಲಿ, ಬಾಗಲಕೋಟೆ ಕ್ರಾಸ್, ವಿಜಾಪೂರ



ಕೇಳದಿದ್ದರೂ ಅದು ನನಗೆ ಗೊತ್ತು.

"ಇಷ್ಟು ದೊಡ್ಡ ಮನೆ! ಎಲ್ಲಿಟ್ಟಿದ್ನೋ ಅಷ್ಟು ದುಡ್ಡು? ನಿನ್ಹೆಂಡ್ತಿಗೂ ಬೇಕಾದ ಹಾಗೆ ಬರುತ್ತಲ್ವಾ? ಅದೇನೋ ಕೆತ್ತನೆಗಿತ್ತನೆ ಅಂತ ಶುರು ಹಚ್ಕಂಡಿದೀಯಂತೆ. ಅದ್ರಲ್ಲಿ ಇಷ್ಟೊಂದು ದುಡ್ ಬರತ್ತಾ? ಹಳೆ ಮನೇನೂ ಮಾರಲಿಲ್ವಂತೆ?"

" ಈ ಮನೆ ನಮ್ಮದಲ್ಲ ಅಕ್ಕ"

" ಮತ್ತೆ?"

"ಇವಳ ಫ್ರೆಂಡ್ ಒಬ್ರು ಭಾರತದಲ್ಲಿ ಸೆಟ್ಲ್ ಆಗೋಕೆ ಅಂತ ಕಟ್ಟಿಸಿಕೊಂಡ್ರಂತೆ. ಅವರ ಹೆಂಡತಿ ಅಮೆರಿಕ ಬಿಟ್ಟು ಬರೊಲ್ಲ ಅಂದ್ರು. ಬೇರು ಕಡಿದುಕೊಳ್ಳಲು ಇಷ್ಟ ಇಲ್ದೆ ಅವರು ಭಾರತಕ್ಕೆ ಬಂದಾಗ ಇರೊಕೆ ಅಂತ ಇಟ್ಕೊಂಡಿದಾರೆ. ನೀವು ಬಂದಿರ್ತೀರಾ ಅಂತ ಕೇಳಿದ್ರಂತೆ. ಬಂದ್ವಿ. ಅಷ್ಟೆ."

"ಬಾಡಿಗೆನೋ? ಲೀಸೋ?"

"ಎರಡೂ ಅಲ್ಲ. ಬಿಟ್ಟಿ."

"ಹುಂ. ನನಗೇನೂ ಗೊತ್ತಾಗಲ್ಲ ಅಂದ್ಕೊಂಡ್ಯಾ? ಇಂಥಾ ಮನೆ ಸುಮ್ನೆ ಇರಿ ಅಂತ ಯಾರೂ ಕೊಡಲ್ಲ. ತಗೊಂಡ್ವಿ ಅಂತ ಹೇಳಿದ್ರೆ ನಾವೇನು ಪಾಲಿಗೆ ಬಂದ್ಬಿಡ್ತೀವಾ?"

"ನಿಜ ಹೇಳತಿದೀನಿ."

"ಬಿಡೇ ಅವನ್ಹತ್ರ ಏನು ನಿಜ ಸುಳ್ಳು ಅಂತ ಮಾತು! ನಮ್ಮ ಮಾತು ಕೇಳ್ದೆ ಆ ಬ್ರಾಂಬ್ರ ಹುಡ್ಗೀನ ಮದ್ವೆ ಆದಾಗ್ಲೇ ದೂರಾಗ್ಬಿಟ್ಟ. ಎಲ್ರೂ ಸೇರಿ ಅವಳ ಕೈ ಕೆಳಗೆ ಬಂದು ಬೀಳೋ ಹಾಗೆ ಮಾಡ್ಬಿಟ್ರೆ!"

ಸಂಕಟ ಆಯ್ತು. "ಅಮ್ಮಾ..." ಎಂದೆ. ಏನೂ ಹೇಳಬೇಕು ಅನ್ನಿಸಲಿಲ್ಲ. ಕಾಫಿ ಮಾಡಿಕೊಟ್ಟೆ. ಇವಳ ಕೈಲಿ ಮಶೀನು ಇದ್ಯೇನೋ! ಆಫೀಸಿಗೆ ಹೋಗುವುದರೊಳಗೆ ಮಕ್ಕಳ ರೂಮನ್ನು ಅಮ್ಮನಿಗೆ ಅಣಿ ಮಾಡಿ ಹೋಗಿದ್ದಳು.

ಅಕ್ಕ ಎರಡು ದಿನ ಇದ್ದು ಹೋದಳು. ಅವಳು ಹೋಗುತ್ತಲೇ ಅಮ್ಮ ನಾನು ರೂಮಲ್ಲಿ ಒಬ್ಬಳೇ ಇರಲ್ಲ. ಪಡಸಾಲೆಲಿ ಮಲಗ್ತೀನಿ ಅಂದ್ಲು. ವ್ಯವಸ್ಥೆ ಮಾಡಿದೆವು. ಮಕ್ಕಳಿಗೇನೋ ಹಿಗ್ಗು. "ಅಜ್ಜಿ ಕಥೆ ಹೇಳ್ತಾರಾ? ಕೈತುತ್ತು ಹಾಕ್ತಾರಾ?" ಅಂತೆಲ್ಲ ಕೇಳಿದ್ರು. ಅಮ್ಮ ನಂಗಲ್ಲ ಅನ್ನುವ ಹಾಗೆ ಇದ್ದಳು. ಬಹಳ ದಿನಗಳ ನಂತರ ಬಂದಿದ್ಲು. ಸೋತುಹೋಗಿದಾಳೆ ಅನ್ನಿಸಿತು. ಮಗ ಅಜ್ಜಿಯ ಕೈ ಮುಟ್ಟಿ ಮುಟ್ಟಿ "ಯಾಕೆ ಮೆತ್ತಗಿದೆ?" ಎಂದು ಕೇಳಿದ. "ವಯಸ್ಸಾಯ್ತುಕಣಪ್ಪ" ಅಂದಳು. "ಹಾಗಾದ್ರೆ ನೀವೂ ಸತ್ತೋಗ್ತೀರ!" ಅಂದ. ಆಮೇಲೆ ಅಮ್ಮನನ್ನು ಸಮಾಧಾನ ಮಾಡಲು ಹರಸಾಹಸ ಪಡಬೇಕಾಯ್ತು. ತಪ್ಪು ನನ್ನದೇ. ಪಕ್ಕದ್ ಮನೆ ಅಜ್ಜ ಸತ್ತಾಗ ಅವನ ಯಾಕೆ ಸತ್ತರು ಅನ್ನೋ ಪ್ರಶ್ನೆಗೆ ವಯಸ್ಸಾಗಿತ್ತು ಅಂದಿದ್ದೆ.

"ನನಗೆ ಬರೋ ಸಂಬಳದಲ್ಲಿ ಮನೆ ನಡ್ಸೋದು ಕಷ್ಟ ಆಗಲ್ಲ. ನೀನು ಈಗ್ಲೇ ಕೆಲ್ಸ ಅಂತ ಹೊರಡ್ಬೇಡ. ಸ್ವಲ್ಪ ದಿನ ಮನೇಲೆ ಇದ್ದು ಅಮ್ಮನ್ನ ನೋಡ್ಕೋ." ಅಂದಳು.

"ಆದೇಶವೋ? ಬೇಡಿಕೆನೋ?"

"ಆದೇಶಾನೇ. ಆಗಮ ಕೂಡಾ!"

ಇವಳಿಗೆ ಕೇಳಿಸುವ ಹಾಗೆಯೇ "ಇದೇನೋ ಇದು? ನಿನ್ನ ಹೋಗು ಬಾ ಅಂತ ಏಕವಚನದಲ್ಲಿ ಮಾತಾಡಿಸ್ತಾಳೆ? ಓದಿನ ಹಮ್ಮು ಅವಳಿಗೆ. ಜಾತಿ ಬುದ್ಧಿ ಎಲ್ ಹೋಗತ್ತೆ? ನೀನೂ ಮನೇಲಿ ಕೂರೋ ಗಂಡಸಾಗಿಬಿಟ್ಟೆ. ಎಲ್ಲ ನನ್ ಕರ್ಮ. ಇದ್ನ ನೋಡೋಕೆ ಎಲ್ರೂ ಸೇರಿ ನನ್ನ ಇಲ್ಲಿ ದಬ್ಬಿದ್ರು! ಕೈಲಾಗೋವರ್ಗೂ ದುಡುಸ್ಕೊಂಡು ಹೊರಗಟ್ಟಿದ್ರು. ಕೈಲಾಗಿದ್ದಿದ್ರೆ ಒಬ್ಳೇ ಇದ್ಬಿಡ್ತಿದ್ದೆ..." ಅಂತ ಬೇರೆ ಬೇರೆ ವರ್ಶನ್ನಲ್ಲಿ ಗೊಣಗುತ್ತಿದ್ದಳು.

"ಅವರೆದುರಿಗೆ ಹೋಗಿ ಬನ್ನಿ ಅನ್ನೋದು, ಇಲ್ದೆ ಇದ್ದಾಗ ಏಕವಚನ ಎರಡೇ ದಿನಕ್ಕೆ ತಲೆ ಚಿಟ್ಟುಹಿಡಿದಿದೆ. ಸಾಕಾಯ್ತು ಮಾರಾಯಾ ನಾಟ್ಕ ಮಾಡಿ, ಮಾಡಿ..." ಅಂದಳು.

"ನಿನಗೆ ಹೇಗೆ ಬೇಕೋ ಹಾಗಿರು. ನೀನು ಏನು ಮಾಡಿದ್ರೂ ನಮ್ಮ ಜಾತಿಯ ವಳೇನೂ ಆಗುವುದಿಲ್ಲ" ಅಂದು ನಾಲಿಗೆ ಕಚ್ಚಿದೆ. ಅವಳ ಕಣ್ಣಲ್ಲಿ ನೀರಾಡಿತು.

“ಅಮ್ಮ ಒಬ್ಳೇ ತಾನೆ ನಿನ್ನ ಅನ್ನೋದು ? ಬೇಜಾರು ಮಾಡ್ಕೋಬೇಡ. ನಿನ್ನ ಮೆಚ್ಕೊಳೋ ಜನ ಸಾಕಷ್ಟಿದಾರೆ ಪರ್‌ಪಂಚದಲ್ಲಿ !” ಸಮಾಧಾನ ಮಾಡಲು ಯತ್ನಿಸಿದೆ.

“ ನಿಮ್ಮನೇಲಿ ಎಲ್ರೂ ನನ್ನ ದ್ವೇಷಿಸ್ತಾರೆ, ಮತ್ತೆ ನನ್ನಣ್ಣ... ನನ್ನ ಹೆಸರೆತ್ತಿದರೇ ಕಿಡಿಕಾರ್‍ತಾನೆ...” ಕಣ್ಣೊರೆಸಿಕೊಂಡಳು.

“ಸಾರಿ. ಇನ್ನು ಸಾಧ್ಯವಾದಷ್ಟೂ ನಿನಗೆ ಅದೆಲ್ಲ ಮನಸ್ಸಿಗೆ ಬರೋ ಹಾಗೆ ಮಾತಾಡಲ್ಲ.”

“ಹೋಗ್ಲಿ ಬಿಡು. ಬದುಕಿನಲ್ಲಿ ಅಷ್ಟು ಎಚ್ಚರಿಕೆ ಯಿಂದ ಇರೋಹಾಗಾದರೆ ದೇವರಾಗಿ ಬಿಡ್ತೀವಿ !” ನಕ್ಕಳು. ಇವಳ ಚೆಲುವಿಗೆ ನನ್ನಲ್ಲಿ ಮಾತುಗಳಿಲ್ಲ.

“ ಮಾತಿನಲ್ಲೇ ಎಲ್ಲಾ ಇದೆಯೇನೋ ?”

“ಅರೆ ? ನನ್ನ ಮನಸ್ಸಿನಲ್ಲಿರೋದು ನಿನಗ್ಹೇಗೆ ತಿಳೀತು ?”

“ ದೇವರು ಸುಮ್ಮನೆ ನನ್ನನ್ನು ನಿನಗೆ ಗಂಟು ಹಾಕಿಲ್ಲ !”

*  *  *

“ಅಮ್ಮ ವೀಲ್ ಚೇರ್ ಬಿಟ್ಟು ಓಡಾಡ್ತಾ ಇದಾಳೆ ಗಮನಿಸಿದ್ಯಾ ?”

“ಕೆಲ್ಸ ಹುಡುಕೋಣ ಅನ್ಕೊತಿದೀಯಾ ?”

“ಹಾಗೇನಿಲ್ಲ...”

“ಹೇಳಿಬಿಡಬಾರ್‍ದಾ ?”

“ಮತ್ತೆ ಅಕ್ಕನ ಮನೇಗೋ ಅಣ್ಣನ ಮನೇಗೋ ಹೋಗ್ತೀನಿ ಅಂತ ಅವರಿಬ್ಬರಿಗೂ ಫೋನ್ ಮಾಡಿದ್ಳು...”

“ಹೂಂ”

“ಅವರಿಬ್ಬರೂ ಅವಳಿಗೆ ಏನು ಹೇಳಿದರೋ ಗೊತ್ತಿಲ್ಲ. ನನಗೆ ಫೋನ್ ಮಾಡಿದ್ರು. ಒಂದು ಕೆಟ್ ಬುದ್ಧಿ ತೋರಿಸ್ದೆ. ಮೊಬೈಲಲ್ಲಿ ಮಾತಾಡಕ್ಕೆ ಕಷ್ಟ ಲ್ಯಾಂಡ್ ಲೈನಿಗೆ ಫೋನ್ ಮಾಡಿ ಅಂತ ಹೇಳಿ ಸ್ಪೀಕರ್ ಆನ್ ಮಾಡಿದೆ... ಎಲ್ಲಾ ಫೋನ್ ಸಮೇತ ಮನೆ ಕೊಟ್ಟ ನಿನ್ನ ಗೆಳೆಯನ ಕೃಪೆ !”

“ಅದಿರ್ಲಿ... ಏನಾಯ್ತು ಹೇಳು...”

“ಅಮ್ಮನಿಗೆ ಗೊತ್ತಾಗಲ್ಲ ಅಂತ ಅನ್ಕೊಂಡು ಅವರು ಮಾತಾಡಿದ್ದೆಲ್ಲ ಅವಳಿಗೂ ಕೇಳಿಸ್ತು... ಮಾತೇ ಇಲ್ಲದೆ ಸುಸ್ತಾಗಿ ಮಲಗಿ ಎದ್ದು ಸುಮ್ಮನೆ ಕೂತಿದ್ದಳು. ಕಾಫಿ ಮಾಡಿಕೊಟ್ಟೆ... ಏನು ಮಾಡಿದ್ರೂ ನಿನ್ನ ಹೆಂಡತಿ ಒಬ್ಬಳೇ ಮನೆಯಿಂದ ಆಚೆ ಹಾಕದೆ ಇರೋಳು... ಅಂದಳು”

“ವಾವ್ ! ನಿನ್ ಕಾಫಿಗೆ ಜ್ಞಾನೋದಯ ಮಾಡಿಸುವ ಶಕ್ತಿ ಇದೆ ಅಂದ ಹಾಗಾಯ್ತು !”

“ಆದ್ರೆ ಅವಳಿಗೆ ಕಾಫಿ ಹುಚ್ಚಿಲ್ಲ. ಇಲ್ಲಿರಲಾರೆ ಅಂತ ಮತ್ತೆ ಮತ್ತೆ ಹೇಳ್ತಾ ಇದಾಳೆ...”

“ಆರೋಗ್ಯವಾಗಿದಾರೆ ಅಂದ್ರೆ ಕಾಶಿ, ಹರಿದ್ವಾರಕ್ಕೆ ಕಳಿಸಬಹುದಲ್ವಾ ?”

“ಜೊತೆಗೆ ?”

“ನೀನು ?”

“ಊಹುಂ”

“ನಾನು ?”




“ನೀನ್ ಮಾತ್ರ ಬೇಡ”

“ಅವರಿಗೆ ಸರಿಹೋಗಲ್ಲ ಅಂತಾನಾ ?”

“ಹಾಗೇ ಅನ್ಕೋ. ಜೊತೆಗೆ ನನಗೂ.”

“ಯಾಕೆ ? ಅತ್ತೆ ಸೊಸೆ ಸರಿ ಹೋಗೋದು ಗಂಡಸರಿಗೂ ಇಷ್ಟ ಆಗಲ್ಲ ಅಲ್ವಾ ?”

“ಚೀಪ್ ಜೋಕ್. ನೀನು ಅಲ್ಲಿಗೆಲ್ಲ ಹೋದ್ರೆ ವಾಪಸ್ ಬರ್ತೀಯ ಅನ್ನೋ ನಂಬಿಕೆ ಇಲ್ಲ ನನಗೆ. ಇದ್ದಕ್ಕಿದ್ದ ಹಾಗೇ ತುಂಬಾ ಬೆಳೆದುಬಿಟ್ಟಿದೀಯ.”

“ಹಾಗೆಲ್ಲ ಮಾತಾಡಿ ನನ್ನ ದೂರ ಮಾಡ್ಬೇಡ. ನೀನು ಹೇಗಿದ್ರೂ ನಿನ್ನ ಬಿಟ್ಟು ದೂರ ಹೋಗ್ಬೇಕು ಅನ್ಸಿಲ್ಲ ನನಗೆ. ನಿನಗೆ ಗೊತ್ತು. ಆದ್ರೂ ಹೇಳ್ತೀನಿ ಕೇಳು. ನೀನು ಮಕ್ಕಳು ಇಲ್ಲದೆ ನನ್ನನ್ನು ನಾನು ಊಹಿಸಿಕೊಳ್ಳೋ ಪ್ರಯತ್ನಕ್ಕೂ ಹೋಗಲ್ಲ.”

“ನನಗೆ ಲೋಕಕಲ್ಯಾಣ ಗೊತ್ತಿಲ್ಲ. ಸಖೀ, ನನ್ನ ಹರವಾದ ಎದೆ, ನೀಳ್ತೋಳುಗಳು, ಸುರುಳಿ ಕುರುಳು ಗಳು ಇದ್ದೂ ಇಲ್ಲದಂತಾಗಬಾರದು. ಅವುಗಳ ಪೂರ್ಣ ಅಸ್ತಿತ್ವಕ್ಕೆ ನಿನ್ನ ಇರುವಿಕೆ ಅತಿ ಅವಶ್ಯ.”

“............”

“ನಾಟಕ ಮಾಡಿದ್ರೂ ಸಂತೋಷಾನಾ ?”

“ನಿಜವೇ ಅಲ್ವಾ ?” ಇವಳು ತೇಲುವ ಬೀಜವನ್ನೂ ಬೇರೂರಿಸಿಬಿಡುತ್ತಾಳೆ!

“ಅಮ್ಮ ಎದ್ದಿರಬಹುದು. ಒಳಗೆ ನಡಿ. ನಿನ್ನ ಹೆಲ್ತ್ ಡ್ರಿಂಕ್ ಅವಳಿಗೆ ಇಷ್ಟವಾಗಿದೆ. ಮಾಡಿಕೊಡು.”

ಗಂಜಿ ಮಾಡಿಕೊಂಡು ಹೊರಬಂದಾಗ ಬೆರಗಾಗಿ ನಿಂತುಬಿಟ್ಟಳು. ತಂಬೂರಿ ಹಿಡಕೊಂಡು ಕೂತಿದ್ದೆ.

“ಆಸ್ಪತ್ರೆ ಬಿಡುವ ಎರಡು ದಿನದ ಹಿಂದೆ ಅಲ್ಲಿನ ಧ್ಯಾನ ಮಂದಿರದಲ್ಲಿ ತಂಬೂರಿ ನೋಡಿದೆ. ಶೃತಿ ಮಾಡಿ ನನಗರಿವಿಲ್ಲದೆ ಹಾಡಿದೆ. ಈಗಲೂ ನನಗೆ ಮನಸ್ಸು ಬಂದಾಗ ಅಲ್ಲಿ ಹೋಗಿ ಹಾಡ್ತೀನಿ. ಅಲ್ಲಿನ ಡಾಕ್ಟರುಗಳ ಅಪೇಕ್ಷೆ ಮೇರೆಗೆ.”

“ವಾವ್ ! ಅಕ್ಕನಿಗೆ ಬರಕ್ಕೆ ಹೇಳ್ಲಾ ?”

“ನಾನು ನಿನಗೊಬ್ಬಳಿಗೇ ಹಾಡಬೇಕು. ಆಸ್ಪತ್ರೆ ಹುಡ್ಗೀರನ್ನೆಲ್ಲಾ ಮನೆಗೆ ಕರೀತೀಯ. ಈಗ ಅಕ್ಕ. ನನ್ನನ್ನೇನು ಅಂದ್ಕೊಂಡಿದೀ ? ನಾನೇನು ಶೋಕೇಸ್ ಪೀಸಾ ?”

ಮಧುವಂತಿ.

ಹಾಡು ಮುಗಿದರೂ ಕೇಳಿಸಿಕೊಳ್ಳುವುದು ಮುಗಿಯಲು ಸ್ವಲ್ಪ ಹೊತ್ತೇ ಹಿಡಿಯಿತು. ಅವಳ ಮುಖದಲ್ಲಿ ಮಂದಹಾಸ.

“ಇವಳು ನಿಮ್ಮನ್ನು ಯಾಕೆ ಹುಚ್ಚುಚ್ಚಾಗಿ ಪ್ರೀತಿಸ್ತಾಳೆ ಅಂತ ಈಗ ಗೊತ್ತಾಯ್ತು. ಕಾಫಿ ಕುಡ್ಯಕ್ಕೆ ಬಂದ್ರೆ ಅಮೃತ ಸಿಕ್ತು ಬಿಡಿ. ಹೇಳ್ದೆ ಬಂದು ಇವಳನ್ನು ಖುಶಿಪಡ್ಸೋಣಾ ಅನ್ಕೊಂಡ್ರೆ...” ಇವಳ ಅಕ್ಕ.

ಇವಳು ನಗಹತ್ತಿದಳು.

“ಅಂದಹಾಗೆ, ಮರೆತುಬಿಟ್ಟೆ. ಹೊರಗೆ ಯಾರೋ ಕೂತಿದಾರೆ. ದೊಡ್ಡ ಮನುಷ್ಯರ ಹಾಗೆ ಅನ್ಸಿದ್ರು..... ಬಾ ಮಾರಾಯ್ತಿ, ನಿಂಗೆ ಅರ್ಜೆಂಟಾಗಿ ಹೇಳೋ ವಿಷಯಗಳಿವೆ.....” ಎಂದು ಇವಳನ್ನು ಕರಕೊಂಡು ಒಳಗೆ ನಡೆದರು. ಅವಳಿಗೆ ಇನ್ನೂ ನಗು. ಅದರಲ್ಲಿ ಗೆದ್ದ, ನಾನೇ ಸರಿ ಅನ್ನುವ ಅಹಂ ಇತ್ತೇ ?

ಹೊರಗೆ ಬಂದರೆ ನನ್ನ ಕೃತಿಯನ್ನು ಕರೆದುಕೊಂಡು ಹೋದವರು.

“ಕ್ಷಮಿಸಿ. ಒಳಗೆ ಯಾರೋ ಅಮೋಘವಾಗಿ ಹಾಡ್ತಾ ಇದ್ರು. ಹಾಗಾಗಿ ಬಾಗಿಲು ತಟ್ಟಲಿಲ್ಲ...”

“ಬನ್ನಿ ಒಳಗೆ... ಕೂತ್ಕೊಳ್ಳಿ. ಹೇಳಿ...”

“ಯಾರು ಹಾಡ್ತಾ ಇದ್ದಿದ್ದು ?”

“ಹೀಗೇ ಒಬ್ಬರು. ಹೇಳಿ. ನನ್ನ ನೆನಪಾದದ್ದು ಹೇಗೆ ? ನನ್ನ ಮನೆ ಹೇಗೆ ಗೊತ್ತಾಯ್ತು ?”

“ನಿಮ್ಮನ್ನು ಮರೆಯುವ ಪ್ರಮೇಯವೇ ಇಲ್ಲ. ನಿಮ್ಮ ಕೃತಿ ನನಗೆ ಎಷ್ಟು ಹೆಸರು ತಂದಿತೆಂದರೆ, ಅದನ್ನು ಹಂಚಿಕೊಳ್ಳದೆ ಇರಲಾಗದೇ ಹುಡುಕಿ ಕೊಂಡು ಬಂದೆ. ನಿಮ್ಮ ಮುಂಚಿನ ಮನೆಯ ಹುಡುಗರು ವಿಳಾಸ ಕೊಟ್ರು.”

“.......”

“ಒಂದು ವಿಷಯ ಹೇಳಿಬಿಡ್ತೀನಿ. ನೀವು ಆಗ ಇದ್ದದ್ದಕ್ಕಿಂತ ಖಳೆಖಳೆಯಾಗಿದ್ದೀರಿ. ಗುಟ್ಟು ತಿಳಿಸಿದರೆ ನಾನೂ ಪ್ರಯತ್ನ ಮಾಡಬಹುದು...”

“ .......”

“ನಿಮಗೆ ಸಂಕೋಚ ಆಯ್ತೇನೋ... ನೇರ ವಿಷಯಕ್ಕೆ ಬರ್ತೀನಿ. ನೀವು ವಿದೇಶಕ್ಕೆ ಹೊರಡಬೇಕು”

“.......”

“ನಿಮಗೆ ಆಶ್ಚರ್ಯ ಆಯ್ತಾ ? ಲಂಡನ್ನಿನಲ್ಲಿ ಈ ವರ್ಷದ ಕಲಾಮೇಳಕ್ಕೆ ನಿಮ್ಮ ಕೃತಿ ಆಯ್ಕೆ ಆಗಿದೆ. ನಾನು ಹೋಗ್ತಾ ಇದೀನಿ. ನೀವೂ ಜೊತೆಗೆ ಬಂದ್ರೆ ನೀವು ಅಂತರ್‍ರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಲ್ಪಡ್ತೀರಿ ! ಆದ್ರೆ ನೀವು ಇನ್ನೊಂದು ಕೃತಿ ತಯಾರಿಸಬೇಕಾಗ ಬಹುದು, ಆ ಹೊತ್ತಿಗೆ... ಹೆದರಬೇಡಿ. ಇನ್ನೂ ಹತ್ತು ತಿಂಗಳ ಸಮಯವಿದೆ.”

“.....”

“.....”

“ಅದು ತಯಾರಾದದ್ದಲ್ಲ... ಮೂಡಿದ್ದು.”

“ಹಾಗೆ ಹೇಳುವುದು ನಿಮ್ಮ ದೊಡ್ಡತನ...”

"ಇಲ್ಲ, ಸೌಜನ್ಯಕ್ಕೆ ಹಾಗೆ ಹೇಳ್ತಿಲ್ಲ. ನಾನು ಏನನ್ನೂ ಕ್ರಮದಲ್ಲಿ ಕಲಿತವನಲ್ಲ. ತುಡಿತಗಳ ಹಿಂಬಾಲಿಸಿದವನು. ಹೀಗೇ ಪರಿಣಿತರು ಸಿಕ್ಕಾಗ ಅವರನ್ನು ನೋಡಿ, ಆಲಿಸಿ, ಹೇಳಿಸಿಕೊಂಡು, ಪ್ರಯೋಗಿಸಿ ಕಲಿತವನು. ಆರು, ಹತ್ತು ತಿಂಗಳಲ್ಲಿ ಏನೂ ಆಗಬಹುದು. ಏನೂ ಆಗದೆಯೂ ಇರ್ಬೋದು... ಹೇಗೆ ಹೇಳ್ಲಿ ?"

"ಯಾವುದಕ್ಕೂ ಪಾಸ್ ಪೋರ್ಟ್ ಮಾಡಿಸಿಕೊಳ್ಳಿ. ಅದು ನಿರ್ದಿಷ್ಟ ಸಮಯದಲ್ಲಿ ಆಗುತ್ತೆ..."

"ಹ್ಹ...ಹ್ಹ ... ಹೌದಲ್ಲವಾ ?"

"ಆಮೇಲೆ ಏನಾದರೂ ಆದರೆ ನನಗೆ ತಿಳಿಸಿ... ನಿಮ್ಮನ್ನು ನೋಡಿದರೆ ತಿಳಿಸುವವರ ಹಾಗೆ ಕಾಣುವುದಿಲ್ಲ... ನಾನೇ ತಿಳಿದುಕೊಳ್ಳುತ್ತೇನೆ ಬಿಡಿ."

ಚಪ್ಪಲಿ ತೊಟ್ಟು ಹೊರಟವರು ನಿಂತು ಹಿಂತಿರುಗಿ, "ಹಾಡಿದವರು ನೀವೇನಾ ?" ಅಂದರು. ನಸುನಗೆಯಷ್ಟೆ ನನ್ನ ಪ್ರತಿಕ್ರಿಯೆ.

✳ ✳ ✳

"ನನ್ನನ್ನು ದೂರ ಇಡಕ್ಕೆ ಎಲ್ರೂ ಪ್ರಯತ್ನ ಪಡ್ತಿದೀರ, ಹಾಗೇ ಬೃಂದಾವನಕ್ಕೆ ತಳ್ಳಿಬಿಡ್ತೀರ, ನಿನ್ಹಂಡ್ತಿ ಒಬ್ಳು ಪರ್ವಾಗಿಲ್ಲ ಅಂದ್ಕೊಂಡಿದ್ದೆ, ಜಾತಿ ಬುದ್ಧಿ ತೋರುಸ್ಬಿಟ್ಳು..." ಅಂತೆಲ್ಲ ರಾಮಾಯಣ ಮಾಡಿ ಕೊನೆಗೆ ಅದೇನು ಅನ್ನಿಸಿತೋ ಇವಳ ಅಕ್ಕನ ಭಜನಾ ಮಂಡಳಿ ಜೊತೆ ಅಮ್ಮ ಕಾಶಿಗೆ ಹೊರಟಳು. ಆ ಗುಂಪಿನವರೂ "ಬಿಡಿ, ಯೋಚ್ನೆ ಮಾಡ್ಬೇಡಿ. ನಾವೆಲ್ಲ ಇದೀವಲ್ಲ, ನೋಡ್ಕೊತೀವಿ, ಈ ವಯಸ್ಸಲ್ಲಿ ಅವರು ಬರ್ತ್ತಿರೋದೇ ಹೆಚ್ಚು" ಅಂತ ಧೈರ್ಯ ಹೇಳಿದ್ರು. ಗಲಾಟೆ ಮಾಡಿದೋರು ಅಂದ್ರೆ ಅಕ್ಕಂದಿರು, ಅಣ್ಣ. "ನಿನಗೇನು ಬುದ್ಧಿ ಇಲ್ವಾ ? ನಾವು ಇಲ್ಲಿದ್ದಾಗ ಎಷ್ಟು ಚೆನ್ನಾಗಿ ನೋಡ್ಕೊಂಡಿದ್ವಿ. ನಮಗೆ ಸಮಯ ಇಲ್ಲ ಅಂತ ನಿನ್ಹತ್ರ ಬಿಟ್ಟರೆ... ಒಂದ್ ಪೈಸಾನೂ ಕೊಡಲ್ಲ, ಏನಾದ್ರೂ ಆದ್ರೆ ನೀನೇ ಜವಾಬ್ದಾರಿ..." ಅಂತೆಲ್ಲ ಏನೇನೋ ಮಾತುಗಳು. ನಾನು ಸುಮ್ಮನಿರಲಾರದೆ "ಏನಾದ್ರೂ ಆದ್ರೆ ಅಂದ್ರೆ ?" ಅಂತ ಕೇಳಿದೆ. "ನಿನ್ಹಂಡ್ತಿ ಬುದ್ಧಿ ನೀನೂ ತೋರಿಸ್ಬೇಡ!" ಅನ್ನೋ ಉತ್ತರ ಬಂತು. "ಹಾಗಂದ್ರೇನು ?" ಅಂತ ಕೇಳಬೇಕೆನ್ನಿಸಿದರೂ ಕೇಳಲಿಲ್ಲ. ಅಮ್ಮ ಹೊರಡುವಾಗ ಸಮಾಧಾನ ವಾಗಿದ್ದಳು. ತನ್ನ ಇರ್ಸರಿಕೆ ಉಳಿದವರಿಗೆ ಹೇಗನ್ನಿಸುತ್ತೋ ಅನ್ನುವ ಆತಂಕ ಎಲ್ಲೋ. ಇಡೀ ಗುಂಪಿನಲ್ಲಿ ಬೇರೆ ಬೇರೆ ಜಾತಿಯವರು ಇದಾರೆ ಅಂದ ಮೇಲೆ ಒಂಚೂರು ನಿರಾಳವಾಯ್ತೇನೋ. ನನ್ನಮ್ಮ ಅವಳ ಸಾಮಾನು ಜೋಪಾನ ಮಾಡಿಕೊಳ್ಳುವುದರಲ್ಲಿ, ಸೀರೆ ಬ್ಲೌಸು ಎಲ್ಲದರಲ್ಲೂ ಬಹಳ ಅಚ್ಚುಕಟ್ಟು.

✳ ✳ ✳

ಬೆಳಿಗ್ಗೆ ಐದಕ್ಕೇ ಎಚ್ಚರ ಆಯ್ತು. ರಾತ್ರಿ ಸ್ವಲ್ಪ ಮಳೆ ಬಂದಿತ್ತು. ಹಿತವಾದ ಬೆಳಗು. ರಸ್ತೆ, ಗಿಡ, ಮರ ಹೂಗಳು ಧೂಳು ಕಳೆದು ನಳನಳಿಸುತ್ತಿರುತ್ತವೆ. ಇದನ್ನು ತಪ್ಪಿಸಿಕೊಂಡರೆ ಏನೋ ನಿಧಿ ಕಳಕೊಂಡ ಹಾಗೆ. ಹೊರಗೆ ತಿರುಗಾಡಲು ಹೊರಟೆ. ಇವಳಾಗಲೇ ಸೂರ್ಯನಮಸ್ಕಾರ ಶುರುಮಾಡಿದ್ದಳು. ಅವಳಿಗೆ ಕೈಬೀಸಿ ಹೊರಟೆ.

ಎರಡು ಹೊಳ್ಳೆಗಳೂ ತುಂಬಿ ಮುಚ್ಚಿಹೋಗುವಷ್ಟು ಗಾಳಿ ಒಳಗೆಳೆದುಕೊಂಡೆ. ಆಹಾ ! ಅದ್ಭುತ ! ಎಲ್ಲಾ ಹಕ್ಕಿಗಳು ನನ್ನ ಹೆಸರು ಕರೆದವು. ಎಲೆಗಳು ನನಗೆಂದೇ ಹಿತವಾಗಿ ನೀರು ಸಿಂಪಡಿಸಿದವು. ಕಿವಿ ಕಾಲಿಗೆ ದಾರಿ ತೋರಿಸಿತು.

ಅವು ನಿಂತಾಗ, "ನನ್ನ ಕಣ್ಣುಗಳು ಏನು ತೋರಿಸುತ್ತಿವೆ ?" ಅರ್ಥವಾಗುತ್ತಿಲ್ಲ. ಹತ್ತಿರ ಹೋಗಿ ಮುಟ್ಟಿದೆ. ಅಲ್ಲಲ್ಲಿ ನುಣುಪಾಗಿರೋ ಬಂಡೆ. ಎರಡು ಹೆಜ್ಜೆ ಹಿಂದೆ ಇಟ್ಟು ನೋಡಿದೆ. ಅದರಲ್ಲಿ ಅಸ್ಪಷ್ಟವಾದ ಆಕಾರ. ಸುತ್ತಲೂ ನೋಡಿದೆ. ಯಾರಿಗೋ ಅಲಾಟಾಗಿರುವ ಸೈಟಿರಬೇಕು. ಅಲ್ಲೊಂದು ಇಲ್ಲೊಂದು ಮನೆಗಳು. ಮೊಬೈಲು ಕೂಗಿತು. ನನ್ನ ಹಳೆಯ ಧಣಿ. "ಏನ್ ಮಾಡ್ತಿದೀಯಾ ಮಾರಾಯಾ ? ನೀನಿದ್ದಾಗ ತಲೆ ಬಿಸಿ ಇರಲಿಲ್ಲ. ಬಂದವರ್‍ಯಾರೂ ಸರಿ ಹೋಗ್ತಾ ಇಲ್ಲ. ಮತ್ತೆ ಬಾ ಮಾರಾಯಾ. ನಿನ್ನನ್ನು ಕಳಿಸಿ ತಪ್ಪು ಮಾಡಿದೆ. ಮೊದಲಿನದಕ್ಕಿಂತ ಎರಡು ಪಟ್ಟು ಸಂಬಳ ಕೊಡ್ತೀನಿ. ಈ ಹಾಳು ಬಿಪಿ ಇಂದ ಒದ್ದಾಡೋಕ್ಕಿಂತ ನಿನಗೆ ಕೊಡುವುದೇ ಮೇಲು" ಒಂದೇ ಉಸುರಿಗೆ ಮಾತಾಡಿದ. ನನ್ನ ಮೌನ ಏನನಿಸಿತೋ "ಇಲ್ಲ ಅನ್ನಬೇಡ. ಬಂದುಬಿಡು" ಅಂದ. ನನಗೆ ಏನು ಹೇಳಬೇಕೋ ತಿಳಿಯದೆ, "ಹೂಂ. ಬರೋಕೆ ಮುಂಚೆ ಫೋನ್ ಮಾಡ್ತೀನಿ" ಅಂದು ಫೋನ್ ಡಿಸ್‌ಕನೆಕ್ಟ್ ಮಾಡಿದೆ. ಮಾರನೇ ದಿನ ಬೆಳಿಗ್ಗೆ ಇವಳನ್ನೂ ಎಳೆತಂದೆ. ಬೆಳಗಿನ ಅಡಿಗೆ ಮನೆಯಿಂದ ಇವಳನ್ನು ಬಿಡಿಸಿಕೊಂಡು ಬರುವುದು ಸುಲಭವಲ್ಲ. ಇವಳಿಗೆ ಯಾವ ಆಕಾರವೂ ಕಾಣಲಿಲ್ಲ. ಮನೆಗೆ ಹಿಂತಿರುಗಲು ಅವಸರ ಮಾಡಿದಳು. ನನಗೆ ಸಿಟ್ಟು. "ಏನು ಓದಿ ಎಂಥಾ ಕೆಲಸ ಮಾಡಿದರೂ ನೀವು ಹೆಂಗಸರಿಗೆ ಅಡಿಗೆ ಮನೆ ಬಿಟ್ಟಿರಕ್ಕೆ ಆಗಲ್ಲ ಅಲ್ವಾ"

"ಗೆಳತಿಗೆ ಹೆರಿಗೆಯ ದಿನಗಳು. ಒಬ್ಬಳೇ ಇದ್ದಾಳೆ. ಮಕ್ಕಳನ್ನು ಶಾಲೆಗೆ ಕಳಿಸಿ ಅವಳ ಮನೆಗೆ ಹೋಗಬೇಕು."

" ಆಫೀಸಿಗೆ ಹೋಗಲ್ವಾ ?"

" ಇಲ್ಲ."

"ಎಲ್ಲೆಲ್ಲೋ ಹೇಗ್ಹೇಗೋ ಪರಿಚಯ ಆದವ್ರನ್ನೆಲ್ಲಾ ಅಷ್ಟೊಂದು ನೋಡ್ಕೊಳೊ ಪ್ರಮೇಯ ಏನು ?"

"ಮಗು ಪ್ರಪಂಚಕ್ಕೆ ಬರ್ತೀನಿ ಅಂದಾಗ ಸ್ವಾಗತಿಸೋದು ಅವಶ್ಯ. ಯಾರ ಮಗು ಆದ್ರೇನು? ಜೀವಕ್ಕಿಂತ ದುಡ್ಡು ದೊಡ್ಡದಾಗ್ಬಾರ್ದು. ಲಾಸ್ ಆಫ್ ಪೇ ಇವತ್ತು."

"ನಿನ್ನ ಮಕ್ಕಳ ಗತಿ ?"

"ನೀವು ಮಲಗಿ ಏಳೋ ಹೊತ್ತಿಗೆ ಮಗಳು ತುಂಬಾ ದೊಡ್ಡವಳಾಗಿಬಿಟ್ಳು. ತಮ್ಮನನ್ನೂ ನೋಡ್ಕೋತಾಳೆ. ಆದರೆ ಖುಶಿಯಾಗೂ ಇದಾಳೆ !"

"ನನ್ನ ಸ್ಥಿತಿಯೂ ಹೆರಿಗೆಗಿಂತ ಏನು ಕಮ್ಮಿ ?" ನಾನು ತಮಾಷೆ ಮಾಡುತ್ತಿಲ್ಲ. ಅವಳಿಗೆ ಗೊತ್ತಾಯಿತು. "ನನ್ನನ್ನೂ ಎಲ್ಲರಿಗೂ ಹಂಚಿ ನಿನ್ನನ್ನೂ ಎಲ್ಲರಿಗೂ ಹಂಚಿಕೊಂಡು ಏನು ಸಾಧಿಸಲು ಹೊರಟಿದಿಯಾ ?" ಅಂದೆ. ನನ್ನನ್ನೇ ದಿಟ್ಟಿಸಿದಳು. ನನ್ನ ಎದೆಯಲ್ಲಿ ಅವಳ ತಲೆ ಒರಗಿತು. ನನ್ನ ಕೈಗಳು ಅವಳ ಸುತ್ತ. ನಮ್ಮ ಸುತ್ತ ಬರೇ ಬಯಲು.


**ವೀಣಾ ಹಾಸನ್**

ಜಿ–೧, ಶ್ರೀ ಹರಿನಿವಾಸ ರೆಸಿಡೆನ್ಸಿ, ನಂ.೧೩೪, ೨ನೇ ಮುಖ್ಯ ರಸ್ತೆ

೧ನೇ ಅಡ್ಡರಸ್ತೆ, ಆವಲಹಳ್ಳಿ, ಬೆಂಗಳೂರು – ೫೬೦ ೦೨೬

# ಬಿಡಿಎ ಆಧುನಿಕ ಬೆಂಗಳೂರಿನ ಶಿಲ್ಪಿ






ಶ್ರೀ ಸಿದ್ದರಾಮಯ್ಯ
ಸನ್ಮಾನ್ಯ ಮುಖ್ಯಮಂತ್ರಿಗಳು

ಬೆಂಗಳೂರು ಜಗತ್ತಿನಲ್ಲೇ ಅತ್ಯಂತ ವೇಗವಾಗಿ ಬೆಳೆಯುತ್ತಿರುವ ಕೆಲವೇ ಮಹಾ ನಗರಗಳಲ್ಲೊಂದು. 2021ರ ವೇಳೆಗೆ ಇಲ್ಲಿಯ ಜನಸಂಖ್ಯೆ 1 ಕೋಟಿ ತಲುಪಲಿದೆ. ಭಾರತದ ತಂತ್ರಜ್ಞಾನ ರಾಜಧಾನಿ, ಸಿಲಿಕಾನ್ ವ್ಯಾಲಿ ಬೆಂಗಳೂರು ರಾಷ್ಟ್ರದ ಆರ್ಥಿಕ ಬೆಳವಣಿಗೆಯಲ್ಲಿ ಅತಿ ಮುಖ್ಯ ಪಾತ್ರ ವಹಿಸುತ್ತಿದೆ. ಬೆಂಗಳೂರಿನ ಈ ಭಾರೀ ಮುನ್ನಡೆಗೆ ಇಲ್ಲಿನ ಔದ್ಯಮಿಕ–ಬೌದ್ಧಿಕ ಸಾಮರ್ಥ್ಯಗಳು, ನಿರಂತರ ಪ್ರಗತಿಪರ ಖಾಸಗೀ, ಸರ್ಕಾರೀ ಕಾರ್ಯಚಟುವಟಿಕೆಗಳೇ ಕಾರಣ.

ಇಂದು ಅಂತರರಾಷ್ಟ್ರೀಯ ಮಹಾನಗರವಾಗುತ್ತಿರುವ ಬೆಂಗಳೂರಿನ ರಭಸದ ಬೆಳವಣಿಗೆಗೆ ಅಗತ್ಯವಾದ ಭಾರಿ ಪ್ರಮಾಣದ ವಸತಿ ಸೌಲಭ್ಯ, ರಸ್ತೆ, ಉತ್ತಮ ಸಾರಿಗೆ ವ್ಯವಸ್ಥೆ, ಮೌಲ್ಯಾಧಾರಿತ ಸೇವೆ ಸೌಕರ್ಯಗಳನ್ನು ಒದಗಿಸುವ ಕಾರ್ಯಗಳು ನಿರಂತರವಾಗಿ ಅಷ್ಟೇ ರಭಸದಿಂದ ಸಾಗುತ್ತಿವೆ.

ಬೆಂಗಳೂರಿನ ಸಮರ್ಪಕ ಬೆಳವಣಿಗೆ, ಅಭಿವೃದ್ಧಿ ಹಾಗೂ ನಿರ್ವಹಣೆಗಾಗಿಯೇ 1976ರಲ್ಲಿ ಜನ್ಮ ತಳೆದ ಬಿಡಿಎ (ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ) ಮಹಾನಗರದ ಬೆಳವಣಿಗೆಗೆ ಹೊಸ ತಿರುವು ನೀಡಿ, ಬೆಂಗಳೂರಿನ ಸರ್ವಾಂಗೀಣ ಅಭಿವೃದ್ಧಿಯ ಆಧಾರ ಸ್ತಂಭವಾಗಿ ಬೆಳೆದು ನಿಂತಿದೆ.

### ನಿವೇಶನ ಹಂಚಿಕೆಯಲ್ಲಿ ಸಾಧನೆ

- ನಿರ್ಮಿಸಿರುವ ಬಡಾವಣೆಗಳು–79
- ರಚಿಸಲಾದ ನಿವೇಶನಗಳ ಸಂಖ್ಯೆ–1,44,453
- ರಚಿಸಲಾದ ನಾಗರಿಕ ಸೌಲಭ್ಯ ನಿವೇಶನಗಳು–1,272
- ಒಟ್ಟು ಉದ್ಯಾನ ಮತ್ತು ಆಟದ ಮೈದಾನಗಳು–416

### ವಸತಿ ಯೋಜನೆ

- ವಿವಿಧ ವಿಸ್ತೀರ್ಣದ ಮತ್ತು ವಿವಿಧ ಆದಾಯ ವರ್ಗದ ಜನರಿಗಾಗಿ ಒಟ್ಟು 30,000 ವಸತಿ ಘಟಕಗಳ ನಿರ್ಮಾಣಕ್ಕೆ ಚಾಲನೆ.
- ನಗರದ ಒಟ್ಟು 12 ವಿವಿಧ ಸ್ಥಳಗಳಲ್ಲಿ ವಸತಿ ಸಮುಚ್ಚಯ ನಿರ್ಮಾಣ.
- ಈಗಾಗಲೇ 784 ವಸತಿ ಘಟಕಗಳ ಹಂಚಿಕೆ ಪೂರ್ಣ.
- 6013 ಮನೆಗಳ ನಿರ್ಮಾಣ ಶೀಘ್ರವೇ ಪೂರ್ಣ.
- ಒಂದು, ಎರಡು ಮತ್ತು ಮೂರು ಕೊಠಡಿಗಳ ವಸತಿ ಗೃಹಗಳು.
- ಆರ್ಥಿಕವಾಗಿ ಹಿಂದುಳಿದ ವರ್ಗಗಳಿಗೆ ವಿಶೇಷ ರಿಯಾಯಿತಿ ದರದಲ್ಲಿ ಒಂದು ಕೊಠಡಿಯ ವಸತಿ ಗೃಹಗಳು.

### ಕೆಂಪೇಗೌಡ ಬಡಾವಣೆ ನಿರ್ಮಾಣ

- ಪ್ರಾಧಿಕಾರದ ನೂತನ ವಸತಿ ಬಡಾವಣೆ.
- ಒಟ್ಟು 4043 ಎಕರೆಯಲ್ಲಿ ನಿರ್ಮಿಸುವ ಗುರಿ.
- ಸುಮಾರು 63,000 ನಿವೇಶನಗಳ (ಭೂಮಾಲೀಕರ ಪಾಲು ಸೇರಿದಂತೆ) ರಚನೆಗೆ ಅವಕಾಶ.

### ಮೂಲಸೌಕರ್ಯ ಅಭಿವೃದ್ಧಿಗೆ ಆದ್ಯ ಗಮನ

- ಸುಗಮ ಸಂಚಾರಕ್ಕಾಗಿ ಆಯಕಟ್ಟಿನ ಜಂಕ್ಷನ್‌ಗಳಲ್ಲಿ 25ಕ್ಕೂ ಹೆಚ್ಚು ಗ್ರೇಡ್ ಸೆಪರೇಟರ್‌ಗಳ ನಿರ್ಮಾಣ.
- ಇಂದಿರಾನಗರ, ಬನಶಂಕರಿ, ಎಚ್.ಎಸ್.ಆರ್. ಬಡಾವಣೆ, ಎಚ್.ಬಿ.ಆರ್. ಬಡಾವಣೆ ಮುಂತಾದ ವಿವಿಧ ಬಡಾವಣೆಗಳಲ್ಲಿ 14 ವಾಣಿಜ್ಯ ಸಂಕೀರ್ಣಗಳ ನಿರ್ಮಾಣ.

### ದೂರದೃಷ್ಟಿಯ ಯೋಜನೆಗಳು

- ಪೆರಿಫೆರಲ್ ವರ್ತುಲ ರಸ್ತೆ ನಿರ್ಮಾಣದ ಮೂಲಕ ಸಂಚಾರ ವ್ಯವಸ್ಥೆಯಲ್ಲಿ ಕ್ರಾಂತಿಕಾರಕ ಪರಿವರ್ತನೆ ತರುವ ನಿಟ್ಟಿನಲ್ಲಿ ಬಿ.ಡಿ.ಎ. ಕಾರ್ಯೋನ್ಮುಖವಾಗಿದೆ.

### ಕೆರೆಗಳ ಸಮಗ್ರ ಅಭಿವೃದ್ಧಿ

- ಕೆರೆಗಳ ಸಮಗ್ರ ಅಭಿವೃದ್ಧಿಗಾಗಿ ಸಣ್ಣ ನೀರಾವರಿ ಮತ್ತು ಜಿಲ್ಲಾ ಪಂಚಾಯತ್ ಒಟ್ಟು 123 ಕೆರೆಗಳನ್ನು ಬಿ.ಡಿ.ಎ.ಗೆ ವಹಿಸಿದೆ.
- ಮೊದಲನೇ ಹಂತದಲ್ಲಿ 13 ಕೆರೆಗಳ ಸಮಗ್ರ ಅಭಿವೃದ್ಧಿ ಸಾಧಿಸಲಾಗಿದೆ.
- ಎರಡನೇ ಹಂತದಲ್ಲಿ 32 ಕೆರೆಗಳ ಅಭಿವೃದ್ಧಿ ಕೈಗೆತ್ತಿಕೊಳ್ಳಲಾಗಿದೆ.
- 3ನೇ ಹಂತದಲ್ಲಿ 78 ಕೆರೆಗಳ ಅಭಿವೃದ್ಧಿಯನ್ನು ಕೈಗೆತ್ತಿಕೊಳ್ಳಲಾಗುವುದು.

### ನಗರದ ಪರಂಪರೆ ಸಂರಕ್ಷಣೆ–ನಿರ್ಮಾಣಕ್ಕೆ ಕೊಡುಗೆ

- ಪಾರಂಪಾರಿಕ ತಾಣಗಳಾದ ಲಾಲ್‌ಬಾಗ್ ಕೆರೆ, ಗಾಜಿನ ಮನೆ, ಬ್ಯಾಂಡ್‌ಸ್ಟ್ಯಾಂಡ್, ಗಾಂಧೀಭವನ ಮತ್ತು ಶ್ರೀ ಕಂಠೀರವ ಒಳಾಂಗಣಕ್ಕೆ ಕಾಯಕಲ್ಪ.
- ಬೆಂಗಳೂರಿನ ಹೃದಯ ಭಾಗದಲ್ಲಿ ಹುತಾತ್ಮ ಯೋಧರಿಗೆ ಶ್ರದ್ಧಾಂಜಲಿ ಅರ್ಪಿಸುವ **"ರಾಷ್ಟ್ರೀಯ ಸೈನಿಕ ಸ್ಮಾರಕ"** ನಿರ್ಮಾಣ.
- ಎಂಟು ಎಕರೆ ವಿಸ್ತೀರ್ಣದಲ್ಲಿ ವಿನೂತನ **"ಶಿಲ್ಪೋದ್ಯಾನ"**.

### ಪರಿಷ್ಕೃತ ಮಾಸ್ಟರ್ ಯೋಜನೆ 2015

- ಮುಂಬರುವ ಹತ್ತು ವರ್ಷಗಳಿಗೆ ಈ ಯೋಜನೆ 1,219.50 ಚ.ಕಿ.ಮೀ.ಗಳ ಸ್ಥಳೀಯ ಯೋಜನಾ ಪ್ರದೇಶ ಈ ಯೋಜನೆಗೆ ಸೇರ್ಪಡೆ. ಗ್ರೇಟರ್ ಬೆಂಗಳೂರು ಪ್ರದೇಶವೂ ಇದಕ್ಕೆ ಸೇರ್ಪಡೆ.




**ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ**
ಟಿ. ಚೌಡಯ್ಯ ರಸ್ತೆ, ಕುಮಾರ ಪಾರ್ಕ್ ಪಶ್ಚಿಮ, ಬೆಂಗಳೂರು –20
www.bdabangalore.org
ಬಿಡಿಎ ಮುಂದಾಳತ್ವದಲ್ಲಿ ಬೆಂಗಳೂರು ಅಭಿವೃದ್ಧಿ ಪಥದಲ್ಲಿ

ಸುಶ್ರುತ



# ನಾಲ್ಕು ಜೇಡಗಳು ಹಾಗೂ ಅಸಹಾಯಕ ಹುಳುವು !

ವಿಶ್ವ ಆರೋಗ್ಯ ಸಂಸ್ಥೆಯು ಮನುಷ್ಯನ ಆರೋಗ್ಯ ಹೇಗಿರಬೇಕು ಹಾಗೂ ಏನೆಲ್ಲವನ್ನು ಒಳಗೊಳ್ಳಬೇಕು ಎನ್ನುವುದಕ್ಕೆ ಒಂದು ವ್ಯಾಖ್ಯೆಯನ್ನು ನೀಡಿದೆ. ಭಾರತವೂ ಸಹಾ ಈ ವ್ಯಾಖ್ಯೆಯನ್ನು ಒಪ್ಪಿ, ಪ್ರತಿಯೋರ್ವ ಭಾರತೀಯನಿಗೆ ದೈಹಿಕ ಆರೋಗ್ಯ, ಮಾನಸಿಕ ಆರೋಗ್ಯ ಹಾಗೂ ಸಾಮಾಜಿಕ ಆರೋಗ್ಯಗಳನ್ನು ನೀಡಲು ತಾತ್ವಿಕವಾಗಿ ಒಪ್ಪಿದೆ. ಇವುಗಳ ಜೊತೆಗೆ ಲೈಂಗಿಕ ಆರೋಗ್ಯ ಹಾಗೂ ಆಧ್ಯಾತ್ಮಿಕ ಆರೋಗ್ಯವನ್ನು ನೀಡುವ ಗುರುತರ ಜವಾಬ್ದಾರಿಗೆ ಬಾಧ್ಯವಾಗಿದೆ. ಕೇವಲ ರೋಗಗಳ ಅನುಪಸ್ಥಿತಿ ಅಥವಾ ಅಂಗಾಂಗಗಳ ಸಮಗ್ರ ಉಪಸ್ಥಿತಿಯೇ ಆರೋಗ್ಯವಲ್ಲ ಎನ್ನುವ ಕಟುವಾಸ್ತವವನ್ನು ಅರಿತಿದೆ. ಈ ಹಿನ್ನೆಲೆಯಲ್ಲಿ ನಾವು ಇಂದಿನ ಆರೋಗ್ಯ ಕ್ಷೇತ್ರದ ಸ್ಥಿತಿಗತಿಗಳನ್ನು ಕುರಿತು ವಿಚಾರ ಮಾಡಬೇಕಿದೆ. ವಿಶ್ವಸಂಸ್ಥೆಯ ಆರೋಗ್ಯ ವ್ಯಾಖ್ಯೆ ಹೇಗೆ ಗಗನಕುಸುಮವಾಗಿಯೇ ಉಳಿಯಲಿದೆ ಎನ್ನುವುದನ್ನು ಮನಗಾಣಬೇಕಿದೆ.

ನಮ್ಮ ಆರೋಗ್ಯ ಕ್ಷೇತ್ರವನ್ನು ನಾಲ್ಕು 'ಉದ್ಯಮ'ಗಳು ನಿಯಂತ್ರಿಸುತ್ತವೆ. ಮೊದಲನೆಯ ಉದ್ಯಮ ವೈದ್ಯರು ಹಾಗೂ ವೈದ್ಯರನ್ನು 'ಉತ್ಪಾದಿಸುವ' ವೈದ್ಯಕೀಯ ಮಹಾವಿದ್ಯಾಲಯಗಳು. ಎರಡನೆಯ ಉದ್ಯಮ ಪಂಚತಾರಾ ಹೋಟೆಲುಗಳ ವೈಭವವನ್ನು ನಾಚಿಸುವ ಬಹುರಾಷ್ಟ್ರೀಯ/ಸರಣಿಯ ಆಸ್ಪತ್ರೆಗಳು ಹಾಗೂ ನರ್ಸಿಂಗ್ ಹೋಮ್‌ಗಳು. ಮೂರನೆಯ ಉದ್ಯಮ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಶ್ರೀಸಾಮಾನ್ಯನ ಆರೋಗ್ಯ ವೆಚ್ಚದ ಜವಾಬ್ದಾರಿಯನ್ನು 'ಹೊರುವೆವು' ಎಂದು ಆಶ್ವಾಸನೆ ನೀಡುವ ವಿಮಾ ಸಂಸ್ಥೆಗಳು ಹಾಗೂ ನಾಲ್ಕನೆಯ ಉದ್ಯಮ ರೋಗ ನಿವಾರಣೆ ಹಾಗೂ ನಿಗ್ರಹಕ್ಕಾಗಿ ಅಗತ್ಯ ಔಷಧಗಳನ್ನು, ಲಸಿಕೆಗಳನ್ನು, ವೈದ್ಯಕೀಯ ಉಪಕರಣಗಳನ್ನು, ಸ್ಟೆಂಟ್ಸ್ ಮುಂತಾದ ಚಿಕಿತ್ಸಾ ಸಾಧನಗಳನ್ನು ಉತ್ಪಾದಿಸುವ ಕಾರ್ಖಾನೆಗಳು. ಇಂದು ಈ ನಾಲ್ಕು ಉದ್ಯಮಗಳು (ಹಾಗೂ ಈ ಉದ್ಯಮದಲ್ಲಿರುವವರು) ತಮಗೆ ಇಷ್ಟವಿರಲಿ ಅಥವಾ ಇಲ್ಲದಿರಲಿ ಒಂದನ್ನೊಂದು ಅವಲಂಬಿಸಿಕೊಂಡು ಬದುಕಬೇಕಾದ ಅನಿವಾರ್ಯತೆ ಸೃಷ್ಟಿಯಾಗಿದೆ. ಈ ಜೇಡಜಾಲದಲ್ಲಿ ಭಾರತೀಯ ಶ್ರೀಸಾಮಾನ್ಯನು ಅನಿವಾರ್ಯ ಹುಳುವಾಗಿ ಸಿಕ್ಕಿಹಾಕಿಕೊಂಡಿದ್ದಾನೆ. ಈ ನಾಲ್ಕೂ ಜೇಡಗಳು ಈ ಹುಳುವನ್ನು ಸಾವಕಾಶವಾಗಿ ಭಕ್ಷಿಸುತ್ತಾ ನಡೆದಿವೆ.

**ವೈದ್ಯರು**

ವೈದ್ಯರು ಎಂದಾಗ ಆಧುನಿಕ ವೈದ್ಯವಿಜ್ಞಾನ ಪದವೀಧರರನ್ನು ಮಾತ್ರ ಇಲ್ಲಿ ಪರಿಗಣಿಸಬೇಕಾಗಿದೆ. ಪರ್ಯಾಯ ವೈದ್ಯಕೀಯ ವಿಜ್ಞಾನಗಳ ಪದವೀಧರರನ್ನು ಇಲ್ಲಿ ಪರಿಗಣಿಸಿಲ್ಲ. ಭಾರತದಲ್ಲಿ ವೈದ್ಯಕೀಯ ಶಿಕ್ಷಣವನ್ನು

ನಮ್ಮ ಆರೋಗ್ಯ ಕ್ಷೇತ್ರವನ್ನು ನಾಲ್ಕು 'ಉದ್ಯಮ'ಗಳು ನಿಯಂತ್ರಿಸುತ್ತವೆ. ಮೊದಲನೆಯ ಉದ್ಯಮ ವೈದ್ಯರು ಹಾಗೂ ವೈದ್ಯರನ್ನು 'ಉತ್ಪಾದಿಸುವ' ವೈದ್ಯಕೀಯ ಮಹಾ ವಿದ್ಯಾಲಯಗಳು. ಎರಡನೆಯ ಉದ್ಯಮ ಪಂಚತಾರಾ ಹೋಟೆಲುಗಳ ವೈಭವವನ್ನು ನಾಚಿಸುವ ಬಹುರಾಷ್ಟ್ರೀಯ/ ಸರಣಿಯ ಆಸ್ಪತ್ರೆಗಳು ಹಾಗೂ ನರ್ಸಿಂಗ್ ಹೋಮ್‌ಗಳು. ಮೂರನೆಯ ಉದ್ಯಮ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಶ್ರೀಸಾಮಾನ್ಯನ ಆರೋಗ್ಯ ವೆಚ್ಚದ ಜವಾಬ್ದಾರಿಯನ್ನು 'ಹೊರುವೆವು' ಎಂದು ಆಶ್ವಾಸನೆ ನೀಡುವ ವಿಮಾ ಸಂಸ್ಥೆಗಳು ಹಾಗೂ ನಾಲ್ಕನೆಯ ಉದ್ಯಮ ರೋಗ ನಿವಾರಣೆ ಹಾಗೂ ನಿಗ್ರಹಕ್ಕಾಗಿ ಅಗತ್ಯ ಔಷಧಗಳನ್ನು, ಲಸಿಕೆಗಳನ್ನು, ವೈದ್ಯಕೀಯ ಉಪಕರಣಗಳನ್ನು, ಸ್ಟೆಂಟ್ಸ್ ಮುಂತಾದ ಚಿಕಿತ್ಸಾ ಸಾಧನ ಗಳನ್ನು ಉತ್ಪಾದಿಸುವ ಕಾರ್ಖಾನೆಗಳು. ಇಂದು ಈ ನಾಲ್ಕು ಉದ್ಯಮಗಳು ತಮಗೆ ಇಷ್ಟವಿರಲಿ ಅಥವಾ ಇಲ್ಲದಿರಲಿ ಒಂದನ್ನೊಂದು ಅವಲಂಬಿಸಿಕೊಂಡು ಬದುಕಬೇಕಾದ ಅನಿವಾರ್ಯತೆ ಸೃಷ್ಟಿಯಾಗಿದೆ. ಈ ಜೇಡಜಾಲದಲ್ಲಿ ಭಾರತೀಯ ಶ್ರೀಸಾಮಾನ್ಯನು ಅನಿವಾರ್ಯ ಹುಳುವಾಗಿ ಸಿಕ್ಕಿಹಾಕಿಕೊಂಡಿದ್ದಾನೆ. ಈ ನಾಲ್ಕೂ ಜೇಡಗಳು ಈ ಹುಳುವನ್ನು ಸಾವಕಾಶವಾಗಿ ಭಕ್ಷಿಸುತ್ತಾ ನಡೆದಿವೆ.

ಭಾರತೀಯ ವೈದ್ಯಕೀಯ ಮಂಡಳಿ ನಿಯಂತ್ರಿಸುತ್ತಿದೆ. ಎಲ್ಲ ಸರ್ಕಾರಿ ಹಾಗೂ ಖಾಸಗಿ ಕಾಲೇಜುಗಳು ಈ ಮಂಡಳಿಯ ವ್ಯಾಪ್ತಿಯಲ್ಲಿ ಬರುತ್ತವೆ.

ಕರ್ನಾಟಕದಲ್ಲಿ ಎಂ.ಬಿ.ಬಿ.ಎಸ್. ಶಿಕ್ಷಣವನ್ನು ೧೨ ಸರ್ಕಾರಿ ವೈದ್ಯಕೀಯ ವಿದ್ಯಾಲಯಗಳು ಹಾಗೂ ೩೪ ಖಾಸಗಿ ವೈದ್ಯಕೀಯ ವಿದ್ಯಾಲಯಗಳು ನೀಡುತ್ತಿವೆ. ಈ ವಿದ್ಯಾಲಯಗಳು ಪ್ರತಿವರ್ಷ ಕನಿಷ್ಠ ೬,೯೦೦ ವೈದ್ಯರನ್ನು 'ಉತ್ಪಾದಿಸುತ್ತಿವೆ' (ಒಂದು ಕಾಲೇಜಿಗೆ ೧೫೦ ವೈದ್ಯರಂತೆ ೩೪ ಕಾಲೇಜುಗಳಿಂದ ೬,೯೦೦ ವೈದ್ಯರು). ಈ ೬,೯೦೦ ವೈದ್ಯರೂ ಉನ್ನತ ಶಿಕ್ಷಣವನ್ನು ಪಡೆಯಲು ಇಷ್ಟಪಡುತ್ತಾರೆ. ಯಾರೂ ಎಂ.ಬಿ.ಬಿ.ಎಸ್. ಅಷ್ಟಕ್ಕೆ ಮಾತ್ರ ತಮ್ಮ ಶಿಕ್ಷಣವನ್ನು ಮೊಟಕುಗೊಳಿಸಲು ಬಯಸುವುದಿಲ್ಲ. ಎಂ.ಬಿ.ಬಿ.ಎಸ್. ಪೂರ್ಣಗೊಳಿಸಿದ ಪ್ರತಿಯೊಬ್ಬ ವೈದ್ಯನೂ ಶತಾಯು ಗತಾಯು ಸ್ನಾತಕೋತ್ತರ ಶಿಕ್ಷಣವನ್ನು ಪೂರ್ಣಗೊಳಿಸಲು ಹರಸಾಹಸ ಮಾಡುತ್ತಾನೆ.

ಕರ್ನಾಟಕದಲ್ಲಿ ಎಂ.ಡಿ. ಅಥವಾ ಎಂ.ಎಸ್.ನಂತಹ ಸ್ನಾತಕೋತ್ತರ ಪದವಿಯನ್ನು ೨೮ ವೈದ್ಯಕೀಯ ವಿಷಯಗಳಲ್ಲಿ, ಸ್ನಾತಕೋತ್ತರ ಡಿಪ್ಲೋಮಾವನ್ನು ೬೧ ವಿಷಯಗಳಲ್ಲಿ ಪಡೆಯಬಹುದು. ಸ್ನಾತಕೋತ್ತರ ಶಿಕ್ಷಣದ ನಂತರ ೪೫ ವಿಷಯಗಳಲ್ಲಿ ಪಿಎಚ್.ಡಿ. ಪದವಿಯನ್ನು ಹಾಗೂ ೫೧ ವಿಷಯಗಳಲ್ಲಿ ಎಂ.ಸಿಎಚ್. ಅಥವಾ ಡಿ.ಎಂ. ಪದವಿಯನ್ನು ಪಡೆಯಬಹುದು. ಸಾಮಾನ್ಯವಾಗಿ ಸ್ನಾತಕೋತ್ತರ ವಿಷಯಗಳಿಗೆ ಸಂಬಂಧಿಸಿದ ಹಾಗೆ ಸೀಟುಗಳು ಕೇವಲ ಬಿಡಿ ಸಂಖ್ಯೆಯಲ್ಲಿ ಮಾತ್ರ ಇರುತ್ತವೆ. ಈ ವೈದ್ಯಕೀಯ ವಿಷಯಗಳಲ್ಲಿ ಕೆಲವು ವಿಷಯಗಳು 'ರಾಜವಿದ್ಯೆ'ಗಳಾಗಿವೆ. ಈ ರಾಜವಿದ್ಯೆಗಳನ್ನು ಕಲಿಯುವವರು ತಮ್ಮ ವೃತ್ತಿ ಬದುಕಿನಲ್ಲಿ ಅಪಾರ ಹಣವನ್ನು ಸಂಪಾದಿಸಬಹುದು. ರೇಡಿಯಾಲಜಿ, ಸರ್ಜರಿ, ಆರ್ಥೋಪೆಡಿಕ್ಸ್, ಮೆಡಿಸಿನ್, ಪೀಡಿಯಾಟ್ರಿಕ್ಸ್ ಮುಂತಾದವು ರಾಜವಿದ್ಯೆಗೆ ಕೆಲವು ಉದಾಹರಣೆಗಳು. ವೈದ್ಯರು, ವೈದ್ಯರನ್ನು ಹೆತ್ತವರು, ವೈದ್ಯರನ್ನು ಅಳಿಯರನ್ನಾಗಿ ಮಾಡಿಕೊಳ್ಳಲು ತುದಿಗಾಲಲ್ಲಿ ನಿಂತಿರುವ 'ಕಪಿಗಳು' (ಕನ್ಯಾಪಿತೃಗಳು) ಈ ರಾಜವಿದ್ಯೆಗಳನ್ನು ಕಲಿಯಲು ಅಗತ್ಯವಾದ ಸೀಟುಗಳನ್ನು ದಕ್ಕಿಸಿಕೊಳ್ಳಲು ಮುಗಿಬೀಳುತ್ತಾರೆ. ಈ ಸೀಟುಗಳು ಕೇವಲ ಕೋಟಿಗಳಲ್ಲಿ ಮಾತ್ರ ಹರಾಜಿಗೆ ಬರುತ್ತವೆ. ಮಕ್ಕಳು ಬೋಟಿಗಳನ್ನು ಕೊಳ್ಳುವಂತೆ, ಇವರು ಕೋಟಿಗಳನ್ನು ಚೆಲ್ಲಿ ಈ ರಾಜವಿದ್ಯೆಯ ಸೀಟುಗಳನ್ನು ಕೊಳ್ಳಬಲ್ಲರು! ರಾಜವಿದ್ಯೆಗಳ ನಂತರ ಉಳಿಯುವ ಸ್ನಾತಕೋತ್ತರ ವಿಷಯಗಳಿಗೆ ಬೆಲೆಯು ಕೋಟಿಗಳಿಂದ ಕ್ರಮೇಣ ದಶಲಕ್ಷಗಳಿಗೆ ಇಳಿಯುತ್ತದೆ. ದಶಲಕ್ಷದಿಂದ ಕೊನೆಗೆ ಫಿಸಿಯಾಲಜಿಯಂತಹ ವಿಷಯಗಳಂತಹ ವಿಷಯಗಳು ೫೦,೦೦೦ ರೂಪಾಯಿಗಳವರೆಗೂ ಮಾರಾಟವಾಗುತ್ತವೆ. ಯಾವ ವಿಷಯಗಳಲ್ಲಾದರೂ ಸರಿ, ಒಂದು ಸ್ನಾತಕೋತ್ತರ ಪದವಿಯನ್ನು ಪಡೆಯಲೇಬೇಕು ಎಂದು ಹಠವಿರುವ ವೈದ್ಯರು ಫಿಸಿಯಾಲಜಿಯಂತಹ ವಿಷಯವನ್ನು ಆರಿಸಿಕೊಳ್ಳುತ್ತಾರೆ. ರೋಗಿಗಳಿಗೆ ನೇರ ಚಿಕಿತ್ಸೆ ನೀಡಲು ಅವಕಾಶವಿರದ ಇಂತಹ 'ಪುಡಿ' ವಿಷಯಗಳನ್ನು ಬಹಳಷ್ಟು ವೈದ್ಯರು ಅಧ್ಯಯನ ಮಾಡಲು ಇಷ್ಟಪಡುವುದಿಲ್ಲ. ಅವರು ಎಂ.ಬಿ.ಬಿ.ಎಸ್. ಮಟ್ಟದಲ್ಲಿಯೇ ಉಳಿಯುವ ಕಠಿಣ ತೀರ್ಮಾನವನ್ನು ತೆಗೆದುಕೊಳ್ಳುತ್ತಾರೆ.

ಹೆತ್ತವರು ತಮ್ಮ ಮಕ್ಕಳ ಎಂ.ಬಿ.ಬಿ.ಎಸ್. ಹಾಗೂ ಸ್ನಾತಕೋತ್ತರ ಶಿಕ್ಷಣಗಳಿಗೆ ಹಣವನ್ನು ಹೂಡುತ್ತಾರೆ. ಈ ಒಳ್ಳೆಯ ಹೂಡಿಕೆ (ಇನ್ವೆಸ್ಟ್‌ಮೆಂಟ್) ನಾಳೆ ಅವರಿಗೆ ಅಪಾರ ಲಾಭವನ್ನು ತರುತ್ತದೆ. ಇಷ್ಟು ಹಣವನ್ನು ತೆತ್ತು ಓದಿ ಸ್ನಾತಕೋತ್ತರ ಪದವಿಯನ್ನು ಪಡೆದ ತಜ್ಞವೈದ್ಯರನ್ನು 'ತಿಪ್ಪಾರಳ್ಳಿ'ಗೆ ಹೋಗಿ ಅಲ್ಲಿ ನಿಮ್ಮ ವೈದ್ಯಕೀಯ ವೃತ್ತಿಯನ್ನು ನಡೆಸಿ ಎಂದರೆ, ಅವರು ಹೇಗೆ ತಾನೇ ಹೋಗಬಲ್ಲರು ? ಅವರು, ಅವರ ಹೆತ್ತವರು ಹಾಗೂ 'ಕಪಿ'ಗಳು, ತಮ್ಮ ಹುಡುಗ ವಿದೇಶಕ್ಕೆ ಹೋಗಿ ಹೆಚ್ಚಿನ ಶಿಕ್ಷಣವನ್ನು ಪಡೆಯಲಿ ಅಥವಾ ರಾಜಧಾನಿಯಲ್ಲಿ ದೊಡ್ಡ ದೊಡ್ಡ ಆಸ್ಪತ್ರೆಗಳಲ್ಲಿ ಕನ್ಸಲ್ಟೆಂಟ್ ಆಗಲಿ ಇಲ್ಲವೇ ತನ್ನದೇ ನರ್ಸಿಂಗ್ ಹೋಮ್ ಇಲ್ಲವೇ ಆಸ್ಪತ್ರೆಯನ್ನು ಕಟ್ಟಿ ಹಣ ಮಾಡಲಿ ಎನ್ನುವ ಒತ್ತಡದಲ್ಲಿರುತ್ತಾರೆ. ಹಣವನ್ನು ಬಿತ್ತಿ ಆಗಿದೆ! ಉತ್ತಮ ಬೆಳೆಯನ್ನು ಪಡೆಯುವುದು ಹೇಗೆ ಎನ್ನುವುದರತ್ತ ಮಾತ್ರ ಅವರ ಗಮನ ಕೇಂದ್ರೀಕೃತವಾಗಿರುತ್ತದೆ. ಇಂತಹ

ವೈದ್ಯರಿಗಾಗಿಯೇ ಆರೋಗ್ಯ ಕ್ಷೇತ್ರದ ಉಳಿದ ಮೂರು ಉದ್ಯಮಗಳು ಕಾತರಿಸುತ್ತಿರುತ್ತವೆ!

**ಆಸ್ಪತ್ರೆಗಳು**

ಭಾರತದಲ್ಲಿ ಶ್ರೀಮಂತ ವೈದ್ಯರು 'ಆರೋಗ್ಯ ಉದ್ದಿಮೆ'ಯನ್ನು ಆರಂಭಿಸಿದ್ದಾರೆ. ಈ ಆರೋಗ್ಯ ಉದ್ಯಮದ ಹಿನ್ನೆಲೆಯಲ್ಲಿ ಆರೋಗ್ಯ ಪ್ರವಾಸೋದ್ಯಮವು (ಮೆಡಿಕಲ್ ಟೂರಿಸಂ) ಭಾರತದಲ್ಲಿ ಬಲವಾಗಿ ಬೇರು ಬಿಡುತ್ತಿದೆ. ಮೆಡಿಕಲ್ ಟೂರಿಸಂ ಲಾಭವನ್ನು ಪಡೆಯಲು ಭಾರತೀಯ ಉದ್ಯಮಪತಿಗಳು ಅಂತರರಾಷ್ಟ್ರೀಯ ಗುಣಮಟ್ಟದ ಆಸ್ಪತ್ರೆಗಳನ್ನು ಹಾಗೂ ವೈದ್ಯರನ್ನು ಸಿದ್ಧ ಪಡಿಸುತ್ತಿದ್ದಾರೆ. ಅಪೋಲೊ ಸಮೂಹ ಆಸ್ಪತ್ರೆಗಳನ್ನು ಚೆನ್ನೈ ಮೂಲದ ಡಾ॥ ಪ್ರತಾಪ್ ಸಿ. ರೆಡ್ಡಿಯವರು ೧೯೮೩ರಲ್ಲಿ ಆರಂಭಿಸಿದರು. ಇವರ ಆಸ್ಪತ್ರೆಗಳು ಭಾರತದ ಜೊತೆಗೆ ಶ್ರೀಲಂಕಾ, ಬಾಂಗ್ಲಾದೇಶ, ಘಾನ, ನೈಜೀರಿಯ, ಮಾರಿಶಸ್, ಕಟಾರ್, ಓಮನ್, ಕುವೈಟ್ ಮುಂತಾದ ದೇಶಗಳಲ್ಲಿ ಇವೆ. ಇವರು ತಮ್ಮ ಆಸ್ಪತ್ರೆಗಳಲ್ಲಿ ಅಂತರರಾಷ್ಟ್ರೀಯ ಗುಣಮಟ್ಟದ ಚಿಕಿತ್ಸೆಯನ್ನು ನೀಡಲು, ಅಂತರರಾಷ್ಟ್ರೀಯ ಆಸ್ಪತ್ರೆಗಳ ಗುಣಮಟ್ಟವನ್ನು ನಿರ್ಣಯಿಸಿ ಪ್ರಮಾಣಪತ್ರವನ್ನು ನೀಡುವ (ಇಂಟರ್‌ನ್ಯಾಶನಲ್ ಹೆಲ್ತ್ ಕೇರ್ ಅಕ್ರಿಡಿಶನ್) ಅಮೆರಿಕನ್ ಮೂಲದ 'ಜಾಯಿಂಟ್ ಕಮಿಶನ್ ಇಂಟರ್ ನ್ಯಾಶನಲ್' (ಜೆಸಿಐ) ಮಾನ್ಯತೆಯನ್ನು ಮೊದಲು ಪಡೆದರು. ಭಾರತದಲ್ಲಿ ೭೧ ಟೆಲಿ ಮೆಡಿಸಿನ್ ಕೇಂದ್ರಗಳನ್ನು ಸ್ಥಾಪಿಸಿರುವರು. ೨೦೦೭ರಲ್ಲಿ ಭಾರತದ ಪ್ರಥಮ 'ಹೆಲ್ತ್ ಸಿಟಿ'ಯನ್ನು ಹೈದರಾಬಾದಿನಲ್ಲಿ ಆರಂಭಿಸಿದರು. ಈ ಆರೋಗ್ಯ ನಗರಿಯಲ್ಲಿ ಒಂದು ವೈದ್ಯಕೀಯ ವಿದ್ಯಾಲಯ ಹಾಗೂ ಎಲ್ಲ ಪ್ರಮುಖ ಆಸ್ಪತ್ರೆಗಳು ಹಾಗೂ ಸಹಾಯಕ ಆರೋಗ್ಯ ಕ್ಷೇತ್ರಗಳ ಸೇವೆಗಳು ಒಂದೇ ಕಡೆ ದೊರೆಯುತ್ತವೆ.




ಭಾರತದಲ್ಲಿ ಆರೋಗ್ಯ ಉದ್ಯಮವನ್ನು ಸ್ಥಾಪಿಸಿ ವಿವಿಧ ದೇಶಗಳ ರೋಗಿಗಳನ್ನು ಭಾರತದ ಪ್ರಮುಖ ನಗರಗಳಾದ ಮುಂಬೈ, ದಿಲ್ಲಿ, ಕೋಲ್ಕತ್ತ, ಹೈದರಾಬಾದ್, ಬೆಂಗಳೂರು, ಚೆನ್ನೈನತ್ತ ಸೆಳೆಯಲು ಎಲ್ಲ ಉದ್ಯಮಪತಿಗಳು ತಮ್ಮದೇ ಆದ ಜಾಗತಿಕ ಗುಣಮಟ್ಟದ ಆಸ್ಪತ್ರೆಗಳನ್ನು ನಿರ್ಮಿಸಿವೆ. ನಾರಾಯಣ ಹೃದಯಾಲಯ, ಮಣಿಪಾಲ ಆಸ್ಪತ್ರೆಗಳು ತಮ್ಮದೇ ಆದ ಹೆಲಿಪ್ಯಾಡ್‌ಗಳನ್ನು ಹೊಂದಿವೆ. ಜಾಗತಿಕ ಆಸ್ಪತ್ರೆಗಳಲ್ಲಿ ಆಗುವ ಖರ್ಚಿಗಿಂತಲೂ ಕಡಿಮೆ ವೆಚ್ಚದಲ್ಲಿ ಜಾಗತಿಕ ಗುಣಮಟ್ಟದ ಚಿಕಿತ್ಸೆಯನ್ನು ನೀಡುತ್ತಿವೆ. ಒಂದು ಲೆಕ್ಕದಲ್ಲಿ ಇದು ಒಳ್ಳೆಯ ಬೆಳವಣಿಗೆ ಎನ್ನಬಹುದು. ಆದರೆ ಇಂತಹ ಆಸ್ಪತ್ರೆಗಳನ್ನು ನೋಡುವ ಭಾರತೀಯ ಶ್ರೀಮಂತರು, ಈ ಆಸ್ಪತ್ರೆಗಳು ವಿಧಿಸುವ (ಭಾರತೀಯರ ಮಟ್ಟಿಗೆ ದುಬಾರಿಯಾದ) ಶುಲ್ಕವನ್ನು ಸಂತೋಷದಿಂದ ತೆತ್ತು ಚಿಕಿತ್ಸೆಯನ್ನು ಪಡೆಯುತ್ತಾರೆ.

| ವೈದ್ಯಕೀಯ ಉದ್ಯಮದ ಮುಂಚೂಣಿಯಲ್ಲಿರುವ ಆಸ್ಪತ್ರೆಗಳು | | | |
|---|---|---|---|
| ಅಪೋಲೊ ಆಸ್ಪತ್ರೆಗಳು | ೪೦ | ಶಂಕರ ನೇತ್ರಾಲಯ | ೯ |
| ಫೋರ್ಟಿಸ್ ಆಸ್ಪತ್ರೆಗಳು | ೫೦ | ನಾರಾಯಣ ಹೃದಯಾಲಯ | ೧೧ |
| ವಾತ್ಸಲ್ಯ ಹೆಲ್ತ್ ಕೇರ್ | ೧೭ | ವೊಕಾರ್ಡ್ ಆಸ್ಪತ್ರೆಗಳು | ೧೭ |
| ಮ್ಯಾಕ್ಸ್ ಹೆಲ್ತ್ ಕೇರ್ | ೧೦ | ಕೊಲಂಬಿಯ ಏಷಿಯ ಆಸ್ಪತ್ರೆಗಳು | ೦೪ |
| ಮಣಿಪಾಲ್ ಆಸ್ಪತ್ರೆಗಳು | ೧೭ | ಗ್ಲೋಬಲ್ ಆಸ್ಪತ್ರೆಗಳು | ೫ |

ದೀಪದ ಕೆಳಗೆ ನೆರಳು ಇರುವ ಹಾಗೆ, ನಮ್ಮ ಭಾರತದಲ್ಲಿರುವ ಮಧ್ಯಮ, ಕೆಳಮಧ್ಯಮ ಹಾಗೂ ಸಾಮಾನ್ಯ ಮಟ್ಟದ ಆಸ್ಪತ್ರೆಗಳು ಹಾಗೂ ನರ್ಸಿಂಗ್ ಹೋಮ್‌ಗಳು, ನವಿಲನ್ನು ಕಂಡ ಕೆಂಬೂತದಂತೆ, ಈ ಬೃಹತ್ ಸರಪಳಿ ಆಸ್ಪತ್ರೆಗಳಿಗೆ ಸರಿ ಸಮನಾದ ಗುಣಮಟ್ಟ ಚಿಕಿತ್ಸೆಯನ್ನು ನೀಡಲು ವಿಫಲವಾಗಿದ್ದರೂ ಶುಲ್ಕವನ್ನು ಮಾತ್ರ ಅದೇ ಮಟ್ಟದಲ್ಲಿ ವಸೂಲಿ ಮಾಡುವುದರಲ್ಲಿ ಹಿಂದೆ ಬಿದ್ದಿಲ್ಲ. ಪ್ರಧಾನವಾಗಿ ಇಂತಹ ಆಸ್ಪತ್ರೆಗಳು ಭಾರತೀಯ ಶ್ರೀಸಾಮಾನ್ಯನ ಪಾಲಿಗೆ 'ಅನಿವಾರ್ಯ ಶನಿ'ಗಳಾಗಿ (ನೆಸಸರಿ ಈವಿಲ್) ಕಾಡುತ್ತಿವೆ. ಇಂತಹ ಆಸ್ಪತ್ರೆಗಳಲ್ಲಿ ಕೆಲಸ ಮಾಡುವ ಕನ್ಸಲ್ಟೆಂಟ್ ಪ್ರಜ್ಞಾಪೂರ್ವಕವಾಗಿ ತನ್ನ ವೈದ್ಯಕೀಯ ನೀತಿಸಂಹಿತೆಗಳನ್ನು ಮನೆಯಲ್ಲಿ ಕಟ್ಟಿಟ್ಟು ಆಸ್ಪತ್ರೆಗೆ ಬರಬೇಕಾಗುತ್ತದೆ.

ಒಬ್ಬರು ಒಂದು ಪ್ರತಿಷ್ಠಿತ ಆಸ್ಪತ್ರೆಯಲ್ಲಿ ಕನ್ಸಲ್ಟೆಂಟ್ ಆಗಿ ಕೆಲಸ ಮಾಡಬೇಕಾದರೆ, ಅವರ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಕೆಳಕಂಡ ಅರ್ಹತೆಗಳೂ ಇರಬೇಕಾಗುತ್ತದೆ :

* ನಿಗದಿತ ಪ್ರಮಾಣದ ಹೊರರೋಗಿಗಳನ್ನು ನೋಡಬೇಕು.
* ನಿಗದಿತ ಪ್ರಮಾಣದ ರೋಗಿಗಳನ್ನು ಆಸ್ಪತ್ರೆಯಲ್ಲಿ ದಾಖಲು ಮಾಡಬೇಕು.
* ನಿಗದಿತ ಪ್ರಮಾಣದ ಶಸ್ತ್ರಚಿಕಿತ್ಸೆಗಳನ್ನು ನಡೆಸಬೇಕು.
* ನಿಗದಿತ ಪ್ರಮಾಣದ ಪ್ರಯೋಗಶಾಲಾ ಪರೀಕ್ಷೆಗಳನ್ನು ಮಾಡಿಸಬೇಕು.
* ನಿಗದಿತ ಪ್ರಮಾಣದ ಔಷಧಗಳನ್ನು ಬರೆಯಬೇಕು.

ಕನ್ಸಲ್ಟೆಂಟ್ ವೈದ್ಯನ ಮೇಲೆ ಮೇಲ್ಕಂಡ 'ಡೆಮೋಕ್ಲೀಸ್ ಖಡ್ಗ'ಗಳು ಸದಾ ತೂಗುಬಿದ್ದಿರುತ್ತವೆ. ಪ್ರತಿ ತಿಂಗಳು ಕನ್ಸಲ್ಟೆಂಟ್ ವೈದ್ಯನ 'ರಿಪೋರ್ಟ್ ಕಾರ್ಡ್' ಅವನ ಕೈಗೆ ಬರುತ್ತದೆ. ಅದರಲ್ಲಿ ಅವನ ಆ ತಿಂಗಳ ಸಾಧನೆಯಿರುತ್ತದೆ. ಮೇಲ್ಕಂಡ ನಿಗದಿತ ಪ್ರಮಾಣದ ಸೇವೆಯನ್ನು ಸಲ್ಲಿಸದಿದ್ದರೆ 'ಎಚ್ಚರಿಕೆ'ಯ ಕೆಂಪು ದೀಪ ಕಾಣುತ್ತದೆ. ಎರಡು ಎಚ್ಚರಿಕೆಗಳ ನಂತರವೂ ಕನ್ಸಲ್ಟೆಂಟ್ ತನ್ನ 'ನಡತೆ'ಯನ್ನು ಸರಿಪಡಿಸಿಕೊಳ್ಳದಿದ್ದರೆ, ಆತನನ್ನು ಕನ್ಸಲ್ಟೆಂಟ್ ಹುದ್ದೆಯಿಂದ ವಜಾ ಮಾಡುತ್ತಾರೆ. ಆಗ ಆ ಕನ್ಸಲ್ಟೆಂಟ್ ಹೊಟ್ಟೆಪಾಡಿಗಾಗಿ ಇನ್ನಾವುದೋ ಆಸ್ಪತ್ರೆ ಇಲ್ಲವೇ ನರ್ಸಿಂಗ್ ಹೋಮ್ ಹುಡುಕಿಕೊಂಡು ಹೋಗಬೇಕಾಗುತ್ತದೆ.

ಕನ್ಸಲ್ಟೆಂಟುಗಳು ಆಯಕಟ್ಟಿನ ಆಸ್ಪತ್ರೆಯಲ್ಲಿರುವ ಹುದ್ದೆಯನ್ನು ಬಿಟ್ಟುಕೊಡಲು ಇಷ್ಟಪಡುವುದಿಲ್ಲ. ಹಾಗಾಗಿ 'ದಿನಾ ಸಾಯೋವರಿಗೆ ಅಳೋವರ್ಯಾರು' ಎಂದು ರೋಗಿಗೆ ಭರಿಸುವ ಶಕ್ತಿ ಇದೆಯೋ ಇಲ್ಲವೋ, ತನ್ನ ಕೋಟಾವನ್ನು ಪೂರ್ಣಗೊಳಿಸುವತ್ತ ಗಮನ ಹರಿಸುತ್ತಾನೆ. ಅಗತ್ಯವಿರಲಿ ಅಥವಾ ಇಲ್ಲದಿರಲಿ ಸಿ.ಟಿ. ಸ್ಕ್ಯಾನ್, ಎಂ.ಆರ್.ಐ. ಸ್ಕ್ಯಾನುಗಳನ್ನು ಸೂಚಿಸುತ್ತಾನೆ. ಬಾರ್ಡರ್ ಲೈನ್ ಕೇಸುಗಳ ಆಂಜಿಯೋಪ್ಲಾಸ್ಟಿ ಅಥವಾ ಬೈಪಾಸುಗಳನ್ನು ನಡೆಸುತ್ತಾನೆ. 'ಅನಗತ್ಯ' ಗರ್ಭಕೋಶಗಳನ್ನು ಕಿತ್ತೆಸೆಯುತ್ತಾನೆ. ಸಿಸೇರಿಯನ್ ಶಸ್ತ್ರಚಿಕಿತ್ಸೆಗಳು ಸರ್ವೇಸಾಮಾನ್ಯವಾಗಿ ನಡೆಯುತ್ತವೆ. ತನ್ನ ಮಗ ಇಲ್ಲವೇ ಮೊಮ್ಮಗ 'ನಿರ್ದಿಷ್ಟ' ನಕ್ಷತ್ರದಲ್ಲೇ ಹುಟ್ಟಬೇಕೆಂದು ಬಯಸುವವರು ಸಿಸೇರಿಯನ್ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳಲು ಹಾತೊರೆಯುತ್ತಾರೆ. ಹಾಗೆಯೇ "ಯಾವ ಮುಟ್ಠಾಳಿ ಹೆರಿಗೆ ನೋವನ್ನು ತಿನ್ನುತ್ತಾಳೆ, ಸಿಸೇರಿಯನ್ ಮಾಡಿಬಿಡಿ ಡಾಕ್ಟ್ರೆ" ಎಂದು ಆಜ್ಞಾಪಿಸುವ ಅಮ್ಮಣ್ಣಿಯಂದಿರ ಪ್ರಮಾಣವೂ ಹೆಚ್ಚುತ್ತಿದೆ. ಹಾಗಾಗಿ ಕನ್ಸಲ್ಟೆಂಟ್ ಎನ್ನುವ 'ಕಟುಕ'ನು ಸದಾ ಸೂಕ್ತ "ಕುರಿ"ಯನ್ನು ಹುಡುಕುತ್ತಲೇ ಇರುತ್ತಾನೆ.

ಏನು ಮಾಡುವುದು? ತಜ್ಞವೈದ್ಯನಾಗಲು ಕೋಟಿಗಳನ್ನು ಬಿತ್ತಿರುವ ವೈದ್ಯ, ಆದಷ್ಟು ಬೇಗ ಕೋಟಿಕೋಟಿಗಳನ್ನು ಬೆಳೆದು ಹಣವನ್ನು ಕಟಾವು ಮಾಡಿಸಲು ಆಸ್ಪತ್ರೆಯವರು ಹೇಳಿದಂತೆ ಕೇಳಲೇಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸಿಕೊಂಡಿರುತ್ತಾನೆ.

**ವಿಮಾ ಸಂಸ್ಥೆಗಳು**

ಭಾರತ ಸರ್ಕಾರವು ೧೯೭೨ರಲ್ಲಿ, ಭಾರತದ ೫೫ ವಿಮಾ ಸಂಸ್ಥೆಗಳನ್ನು ವಿಲೀನಗೊಳಿಸಿ 'ಜನರಲ್ ಇನ್‌ಶ್ಯೂರನ್ಸ್ ಕಾರ್ಪೊರೇಶನ್ ಆಫ್ ಇಂಡಿಯ' ಸ್ಥಾಪಿಸಿತು. ಇದರ ವ್ಯಾಪ್ತಿಯಲ್ಲಿ ನ್ಯಾಶನಲ್ ಇನ್‌ಶ್ಯೂರನ್ಸ್ ಕಂಪನಿ ಲಿಮಿಟೆಡ್, ದಿ ನ್ಯೂ ಇಂಡಿಯ ಅಶ್ಯೂರನ್ಸ್ ಕಂಪನಿ ಲಿಮಿಟೆಡ್, ದಿ ಓರಿಯೆಂಟಲ್ ಇನ್‌ಶ್ಯೂರನ್ಸ್ ಕಂಪನಿ ಲಿಮಿಟೆಡ್ ಹಾಗೂ ಯುನೈಟೆಡ್ ಇಂಡಿಯಾ ಇನ್‌ಶ್ಯೂರನ್ಸ್ ಕಂಪನಿ ಲಿಮಿಟೆಡ್ ಎಂಬ ನಾಲ್ಕು ವಿಮಾ ಸಂಸ್ಥೆಗಳು ಆರಂಭವಾದವು. ಈ

ಸಂಸ್ಥೆಗಳು ಆರೋಗ್ಯ ವಿಮೆಯನ್ನೂ ಒಳಗೊಂಡಂತೆ ಎಲ್ಲ ರೀತಿಯ ವಿಮಾ ಚಟುವಟಿಕೆಗಳನ್ನು ನಿಯಂತ್ರಿಸಿದವು. ಇಸವಿ ೨೦೦೦ದಲ್ಲಿ 'ಇನ್‌ಶ್ಯೂರನ್ಸ್ ರೆಗ್ಯುಲೇಟರಿ ಅಂಡ್ ಡೆವಲಪ್‌ಮೆಂಟ್ ಅಥಾರಿಟಿ ಆಕ್ಟ್ – ೧೯೯೯' ಅಸ್ತಿತ್ವಕ್ಕೆ ಬಂದಿತು. ಅದುವರೆಗೂ ಕೇವಲ ನಾಲ್ಕು ವಿಮಾ ಸಂಸ್ಥೆಗಳ ಆಡಳಿತದಲ್ಲಿದ್ದ ವಿಮಾ ಚಟುವಟಿಕೆಗಳ ಕ್ಷೇತ್ರಕ್ಕೆ ಈಗ ಖಾಸಗಿ ಸಂಸ್ಥೆಗಳ ಪ್ರವೇಶವಾಯಿತು. ಇಂದು ಆರೋಗ್ಯ ವಿಮೆಯನ್ನು ಅನೇಕ ಖಾಸಗಿ ಸಂಸ್ಥೆಗಳು ನೀಡುತ್ತಿವೆ.

ಆರೋಗ್ಯ ವಿಮೆಯು ಉಳಿದ ವಿಮೆಗಳಂತೆ ಅಲ್ಲ. ವಿಮೆ ಮಾಡಿಸುವವ ಮೊದಲು ತನಗೆ ಹಾಗೂ ತನ್ನ ಕುಟುಂಬಕ್ಕೆ ಅಗತ್ಯವಿರುವ ವಿಮಾ ಮೊತ್ತವನ್ನು ನಿರ್ಧರಿಸುತ್ತಾನೆ. ಇದಕ್ಕೆ ಸೂಕ್ತ ಪ್ರೀಮಿಯಂ ಕಟ್ಟುವಂತೆ ವಿಮಾ ಸಂಸ್ಥೆ ಹೇಳುತ್ತದೆ. ಆ ವರ್ಷದಲ್ಲಿ ಪಾಲಿಸಿದಾರನು ಅನಾರೋಗ್ಯ ಪೀಡಿತನಾದರೆ ಆಸ್ಪತ್ರೆಗೆ ದಾಖಲಾಗಬೇಕಾಗುತ್ತದೆ. ಚಿಕಿತ್ಸೆಯನ್ನು ಪಡೆಯಬೇಕಾಗುತ್ತದೆ. ಅನಂತರ ಎಲ್ಲ ವೈದ್ಯಕೀಯ ದಾಖಲೆಗಳು ಹಾಗೂ ಖರ್ಚುವೆಚ್ಚದ ಬಿಲ್ಲುಗಳನ್ನು ವಿಮಾ ಸಂಸ್ಥೆಗೆ ಸಲ್ಲಿಸಬೇಕಾಗುತ್ತದೆ. ಅವುಗಳ ನಿಜಾಯತಿಯನ್ನು ಪರೀಕ್ಷಿಸಿ ವಿಮಾ ಸಂಸ್ಥೆ ಖರ್ಚಾದ ಹಣವನ್ನು ಹಿಂದಕ್ಕೆ ಕೊಡುತ್ತದೆ. ಇದು ಮೇಲುನೋಟಕ್ಕೆ ಅತ್ಯಂತ ಸರಳ ಎಂದು ಕಾಣಿಸುತ್ತದೆ. ಆದರೆ ಇದೂ ತೀರಾ ಸಂಕೀರ್ಣ ಪ್ರತಿಕ್ರಿಯೆ.

ವಿಮಾ ಸಂಸ್ಥೆಯ ನೀತಿ ನಿಯಮಗಳು ಎಲ್ಲರ ಕಣ್ಣಿಗೆ ಕಾಣದ ಸಣ್ಣಕ್ಷರಗಳು. ಅಲ್ಲಿರುವ ಮಾಹಿತಿ ಆರೋಗ್ಯಕ್ಕೆ ಸಂಬಂಧಪಟ್ಟದ್ದು. ತಾಂತ್ರಿಕ ಮಾಹಿತಿ. ಪಾರಿಭಾಷಿಕಮಯವಾಗಿರುವಂತಹದ್ದು. ಆಸ್ಪತ್ರೆಗಳು ನೀಡುವ ಸಂಕ್ಷಿಪ್ತ ಚಿಕಿತ್ಸಾ ವಿವರಗಳು, ಪ್ರಯೋಗಾಲಯ ಫಲಿತಾಂಶಗಳು, ಔಷಧ ವಿವರಗಳು, ಚಿಕಿತ್ಸೆಯನ್ನು ನಿರಂತರವಾಗಿ ಮುಂದುವರಿಸಬೇಕಾದ ಅಗತ್ಯಗಳು ಇತ್ಯಾದಿಗಳೆಲ್ಲ ತಾಂತ್ರಿಕಮಯವಾದುವೆ! ಈ ಎಲ್ಲ ವಿವರಗಳು ಹಣವನ್ನು ಬಿಡುಗಡೆ ಮಾಡುವ ವಿಮಾ ಅಧಿಕಾರಿಗಳಿಗೆ ಸುಲಭವಾಗಿ ಅರ್ಥವಾಗದಂತಹವು. ಸಂದಿಗ್ಧತೆಯಲ್ಲಿ ಅವರು ವೈದ್ಯರ ನೆರವನ್ನು ಪಡೆಯುವುದುಂಟು. ಆದರೆ ಪಾಲಿಸಿದಾರನು ಹೊತ್ತಲ್ಲದ ಹೊತ್ತಿನಲ್ಲಿ 'ತಲೆ ತಿನ್ನುವ' ಪ್ರಶ್ನೆಗಳನ್ನು ಕೇಳಿದಾಗ, ಉತ್ತರವನ್ನು ಕೊಡುವುದು ವಿಮಾ ಅಧಿಕಾರಿಗಳಿಗೆ ಭರಿಸಲಾಗದ 'ಹಿಂಸೆ'ಯಾಗುತ್ತದೆ. ಈ ರಗಳೆಗಳನ್ನು ತಡೆದುಕೊಳ್ಳಲು ಸಾಧ್ಯವಾಗದ ವಿಮಾ ಸಂಸ್ಥೆಗಳು 'ಥರ್ಡ್ ಪಾರ್ಟಿ ಅಡ್ಮಿನಿಸ್ಟ್ರೇಟರ್' (ಟಿಪಿಎ)ಗಳನ್ನು ಆಹ್ವಾನಿಸಿದವು.

ಭಾರತದಲ್ಲಿ ಕನಿಷ್ಠ ೩೧ ಅಧಿಕೃತ ಟಿಪಿಎಗಳಿವೆ. ಈ ಟಿಪಿಎಗಳು ವಿಮಾ ಸಂಸ್ಥೆಯ ಪರವಾಗಿ ಎಲ್ಲ ಕೆಲಸಗಳನ್ನು ಮಾಡುತ್ತವೆ. ಪಾಲಿಸಿದಾರನ ಎಲ್ಲ ಅಗತ್ಯಗಳನ್ನು ಪೂರೈಸಲು ದಿನದ ೨೪ ಗಂಟೆಗಳ ಕಾಲವೂ ಸಿದ್ಧವಾಗಿರುತ್ತವೆ. ಟಿಪಿಎಗಳು 'ಕ್ಯಾಶ್ ಲೆಸ್ ಫೆಸಿಲಿಟಿ' ಯೋಜನೆಯನ್ನು ಜಾರಿಗೆ ತಂದವು. ಬೆಂಗಳೂರನ್ನು ಒಳಗೊಂಡಂತೆ ಭಾರತದ ಎಲ್ಲ ನಗರಗಳಲ್ಲಿ ಹಲವು ಆಸ್ಪತ್ರೆಗಳನ್ನು ಗುರುತಿಸಿದವು. ಪಾಲಿಸಿದಾರನು ತನ್ನ ಗುರುತಿನ ಚೀಟಿಯನ್ನು ತೆಗೆದುಕೊಂಡು ಈ ಆಸ್ಪತ್ರೆಗಳಲ್ಲಿ ದಾಖಲಾದರಾಯಿತು. ಚಿಕಿತ್ಸೆಯನ್ನು ಮುಗಿಸಿಕೊಂಡು ತನ್ನ ಪಾಡಿಗೆ ತಾನು ಮನೆಗೆ ಬರಬಹುದು. ಆಸ್ಪತ್ರೆಯು ಪಾಲಿಸಿದಾರನ ಖರ್ಚು ವಿವರಗಳನ್ನು ವಿಮಾ ಸಂಸ್ಥೆಗೆ ನೀಡಿ, ಅವರಿಂದ ತನ್ನ ರೋಗಿಯ ಚಿಕಿತ್ಸಾ ವೆಚ್ಚವನ್ನು ಪಡೆಯಲಾರಂಭಿಸಿದವು.

ಟಿಪಿಎ ಒಂದು ರೀತಿಯಲ್ಲಿ 'ಔಟ್ ಸೋರ್ಸಿಂಗ್'! ಈ ಟಿಪಿಎಗಳು ವಿಮಾ ಸಂಸ್ಥೆಗಳ ಪರವಾಗಿ ಪಾಲಿಸಿದಾರರು ನೀಡುವ ಎಲ್ಲ ತಲೆನೋವುಗಳನ್ನು ಭರಿಸುವ ಕಾರಣ, ವಿಮಾ ಸಂಸ್ಥೆಗಳು ಟಿಪಿಎಗಳಿಗೆ ನಿಗದಿತ ಶುಲ್ಕವನ್ನು ನೀಡುತ್ತವೆ. ಈ ಹೆಚ್ಚುವರಿ ಶುಲ್ಕವು ಪ್ರೀಮಿಯಂ ರೂಪದಲ್ಲಿ ವಿಮಾದಾರನ ಮೇಲೆಯೇ ಬೀಳುತ್ತದೆ. ಇದು ಬಹಳಷ್ಟು ಸಂದರ್ಭಗಳಲ್ಲಿ ಪಾಲಿಸಿದಾರನ ಗಮನಕ್ಕೆ ಬರುವುದೇ ಇಲ್ಲ.

ಭಾರತೀಯ ವಿಮಾ ಕ್ಷೇತ್ರದಲ್ಲಿ ಟಿಪಿಎಗಳ ಅಧಿಕೃತ ಪ್ರವೇಶವಾಗುವುದರ ಮೂಲಕ ಮೂರನೆಯ 'ಜೇಡ'ನ ಅಧಿಕೃತ ಆಗಮನವಾಯಿತು ಎನ್ನಬಹುದು. ವೈದ್ಯರು ಹಾಗೂ ಆಸ್ಪತ್ರೆಗಳು ಈ ವಿಮಾ ವ್ಯವಸ್ಥೆಯ ಪರಿಪೂರ್ಣ ಲಾಭವನ್ನು ಪಡೆಯಲಾರಂಭಿಸಿದವು. ಒಬ್ಬ ರೋಗಿಯು ಆಸ್ಪತ್ರೆಗೆ ಹೋಗುತ್ತಿರುವಂತೆಯೇ 'ಕ್ಯಾಶಾ ? ಇನ್‌ಶ್ಯೂರನ್ಸಾ ?' ಎಂದು ಕೇಳುತ್ತಾರೆ. ನೀವೇನಾದರೂ 'ಇನ್‌ಶ್ಯೂರನ್ಸ್' ಎಂದು ಹೇಳಿಬಿಟ್ಟರೆ ನಿಮಗೆ 'ರಾಜಮರ್ಯಾದೆ' ದೊರೆಯುತ್ತದೆ. ನೀವು

ಚಿಕಿತ್ಸೆಗಾಗಿ ಜನರಲ್ ವಾರ್ಡ್ ಅಥವಾ ಸೆಮಿ ಪ್ರೈವೇಟ್ ವಾರ್ಡ್ ತೆಗೆದುಕೊಳ್ಳೋಣ ಎಂದು ಭಾವಿಸಿದ್ದರೆ, ರಿಸೆಪ್ಷನ್‌ನಲ್ಲಿ ಇರುವವರು, "ಯಾಕೆ ಸರ್, ಜನರಲ್ ವಾರ್ಡಿಗೆ ಹೋಗ್ತೀರಿ? ಸ್ಪೆಶಲ್ ವಾರ್ಡಿಗೆ ಹೋಗಿ. ಹೇಗಿದ್ದರೂ ಇನ್‌ಶ್ಯೂರನ್ಸ್ ಇದೆಯಲ್ವ? ನೀವೇನು ಕೈಯಿಂದ ಕಟ್ಟೋದಿಲ್ವಲ್ಲ? ಅಲ್ಲಿ ಟಿ.ವಿ. ಇರುತ್ತೆ ಸಾರ್! ಏರ್ ಕಂಡೀಷನ್ಡ್ ರೂಮು" ಎಂದು ಪುಸಲಾಯಿಸಿ ಸ್ಪೆಶಲ್ ವಾರ್ಡಿಗೆ ಅಟ್ಟುತ್ತಾರೆ. ಸಾಮಾನ್ಯವಾಗಿ ಚಿಕಿತ್ಸಾ ವೆಚ್ಚಗಳು ರೋಗಿ ದಾಖಲಾಗುವ ವಾರ್ಡನ್ನು ಅವಲಂಬಿಸಿ ಇರುತ್ತದೆ. ಜನರಲ್ ವಾರ್ಡಿನಲ್ಲಿ ರೂ. ೧೦೦ ವೆಚ್ಚವಾಗುವುದಾದರೆ ಸೆಮಿ ಪ್ರೈವೇಟ್ ವಾರ್ಡಿನಲ್ಲಿ ರೂ. ೩೦೦ ಆಗುತ್ತದೆ ಹಾಗೂ ಪ್ರೈವೇಟ್ ವಾರ್ಡಿನಲ್ಲಿ ರೂ. ೫೦೦ ಆಗುತ್ತದೆ. ಇದು ಶೋಷಣೆಯ ಮೊದಲ ಹಂತ. ಚಿಕಿತ್ಸಾ ವೆಚ್ಚವನ್ನು ಇನ್‌ಶ್ಯೂರನ್ಸ್ ಕಂಪನಿ ಭರಿಸುವ ಕಾರಣ, ಅನಗತ್ಯ ಪರೀಕ್ಷೆಗಳು, ಅನಗತ್ಯ ಶಸ್ತ್ರಚಿಕಿತ್ಸೆಗಳು ಸದ್ದಿಲ್ಲದ ಹಾಗೆ ನಡೆದುಹೋಗುತ್ತವೆ. ಆಸ್ಪತ್ರೆಯವರು ನೀಡುವ ಬಿಲ್ಲನ್ನು ಈ 'ಡುಬ್ಬಾ' ಬಿಲ್ಲನ್ನು ಟಿಪಿಎಗಳು ತೆರಬೇಕಾಗುತ್ತದೆ.

# ಅವ್ವ

ಹಾಜರಿ ಕೆಲಸ ಮಾಡಿ
ಹಾಜರಿಯೊಳಗೆ ಅಪ್ಪನ ಹೆಸರಿಲ್ಲದೇ
ಓದಿ ಬಡತನದಿಂದ ಬೀದಿಗೆ ಬಿದ್ದ
ನಮಗೆಲ್ಲಾ...
ನಾನಿರದಿದ್ದರೆ ನೀವೆಲ್ಲಾ ಬೀದಿಪಾಲಾಗುತ್ತಿದ್ದಿರೆಂಬ
ಅಪ್ಪನ ಮಾತನ್ನು ಕೇಳಿದಾಗೊಮ್ಮೆ
ನಿನ್ನ ನೆನಪಾಗುತ್ತದೆ ಅವ್ವ!

**ಬಸವರಾಜ ಜಾಲವಾದಿ**
ಉಪನ್ಯಾಸಕರು, ಕಾಡಸಿದ್ದೇಶ್ವರ ಕಾಲೋನಿ
೭ನೇ ಕ್ರಾಸ್, ಕೆನಾಲರೋಡ್, ಜಮಖಂಡಿ

ಭಾರತದಲ್ಲಿ ಆರೋಗ್ಯ ವಿಮೆಯನ್ನು ವೈಯಕ್ತಿಕ ಮಟ್ಟದಲ್ಲಿ ತೆಗೆದುಕೊಳ್ಳುವವರು ಕಡಿಮೆ. ಸಾಮಾನ್ಯವಾಗಿ ಸಂಸ್ಥೆಗಳು ತಮ್ಮಲ್ಲಿ ಕೆಲಸ ಮಾಡುವ ನೌಕರರಿಗೆ ಆರೋಗ್ಯ ವಿಮೆಯನ್ನು ಒದಗಿಸುತ್ತವೆ. ಹಾಗಾಗಿ ನೌಕರರಿಗೆ ಹಾಗೂ ನೌಕರನ ಮನೆಯವರಿಗೆ 'ಪ್ರೀಮಿಯಂ' ಕಟ್ಟುವ ಬಿಸಿ ತಾಗುವುದಿಲ್ಲ. ಹಾಗಾಗಿ ಆಸ್ಪತ್ರೆಗಳು ನೀಡುವ 'ಪ್ರೈವೇಟ್ ರೂಮ್' ಅನುಕೂಲವನ್ನು ತುಂಬ ಪ್ರೀತಿಯಿಂದ ಸ್ವೀಕರಿಸುತ್ತಾರೆ. ನೆಂಟರಿಷ್ಟರಲ್ಲಿ ಇಂತಹ ಪಂಚತಾರಾ ಆಸ್ಪತ್ರೆಯ ಪ್ರೈವೇಟ್ ರೂಮಿನಲ್ಲಿ ಚಿಕಿತ್ಸೆ ಪಡೆದೆ ಎಂದು ಜಂಬ ಕೊಚ್ಚಿಕೊಂಡು, ಸಮಾಜದಲ್ಲಿ ತಮ್ಮ ಘನತೆಯನ್ನು ಹೆಚ್ಚಿಸಿಕೊಳ್ಳುತ್ತಾರೆ. ಸಂಸ್ಥೆಯು ನೌಕರನ ಸಂಬಳದಲ್ಲಿಯೇ ಹಣವನ್ನು ಕಡಿದುಕೊಂಡು ಆರೋಗ್ಯ ವಿಮೆಯ ಪ್ರೀಮಿಯಂ ಕಟ್ಟುತ್ತದೆ ಎನ್ನುವ ಪರಿಕಲ್ಪನೆ ಅವರಿಗೆ ಇರುವುದೇ ಇಲ್ಲ. ಇಂತಹ ಸಂಸ್ಥೆಗಳಲ್ಲಿ ಪ್ರೀಮಿಯಂ ಯಾವಾಗಲೂ ಮೊತ್ತಕ್ಕಿಂತ ಕ್ಲೈಮ್ ಮೊತ್ತವೇ ಅಧಿಕವಾಗಿರುತ್ತದೆ. ವಾಸ್ತವದಲ್ಲಿ ವಿಮಾ ಸಂಸ್ಥೆಗಳು ನಷ್ಟದಲ್ಲಿ ಆರೋಗ್ಯ ವಿಮೆಯನ್ನು ನಡೆಸುತ್ತವೆ. ಇದು ಸತ್ಯ. ಆದರೆ ವಿಮಾ ಸಂಸ್ಥೆಗಳು, ಸಂಸ್ಥೆಯ ಇತರ ವಿಮಾ ಬಾಬ್ತುಗಳಲ್ಲಿ ಸಾಕಷ್ಟು ಲಾಭವನ್ನು ಗಳಿಸುವ ಕಾರಣ, 'ಹೇಗೋ ಸರಿದೂಗಿಸಿಕೊಂಡು' ಆರೋಗ್ಯ ವಿಮೆ ಸೌಲಭ್ಯವನ್ನು ಒದಗಿಸುತ್ತವೆ.

ಮಾನವನ ಆಸೆಗೆ ಮಿತಿಯಿಲ್ಲ ಅಲ್ಲವೆ! ಆಸ್ಪತ್ರೆಗಳು ಹಾಗೂ ನರ್ಸಿಂಗ್ ಹೋಮ್‌ಗಳು ಇನ್‌ಶ್ಯೂರನ್ಸ್ ಸಂಸ್ಥೆಗಳನ್ನು ಅಕ್ಷರಶಃ ಸೂರೆಮಾಡಹೊರಟಾಗ, ಟಿಪಿಎಗಳು ಎಚ್ಚೆತ್ತವು. ವೈದ್ಯರನ್ನು ನೇಮಿಸಿಕೊಂಡವು. ಆಸ್ಪತ್ರೆಗೆ ದಾಖಲಾಗುವ ಮೊದಲು (ತುರ್ತು ಸಂದರ್ಭಗಳನ್ನು ಬಿಟ್ಟು) ಪೂರ್ವಾನುಮತಿಯನ್ನು ಪಡೆಯಬೇಕೆಂಬ ಹೊಸ ನಿಯಮವನ್ನು ಜಾರಿಗೆ ತಂದವು. ಆಸ್ಪತ್ರೆಯ ವೈದ್ಯರು ಆರೋಗ್ಯ ವಿಮಾ ಪಾಲಿಸಿದಾರನನ್ನು ಪರೀಕ್ಷಿಸಿ, ಚಿಕಿತ್ಸಾ ಯೋಜನೆಯನ್ನು ರೂಪಿಸಿ, ಅದಕ್ಕೆ ತಗಲುವ ಅಂದಾಜು ವೆಚ್ಚವನ್ನು ನೀಡಬೇಕು. ಈ ಪೂರ್ವಾನುಮತಿಯನ್ನು ಕೋರಿ ಬರುವ ವಿವರವನ್ನು ವಿಮಾ ವೈದ್ಯರು ಪರಿಶೀಲಿಸಿ, ಚಿಕಿತ್ಸೆ ನೀಡಲು ಅನುಮತಿಯನ್ನು ಕೊಡಬೇಕು. ಒಂದು ವೇಳೆ ಅನುಮಾನ ಬಂದರೆ, ಚಿಕಿತ್ಸಾ ವೈದ್ಯರನ್ನು ಟಿಪಿಎ ವೈದ್ಯರು ಪ್ರಶ್ನಿಸಲಾರಂಭಿಸಿದರು. ಸೂಕ್ತ ಉತ್ತರ ದೊರೆಯಲಿಲ್ಲವೆಂದರೆ ಚಿಕಿತ್ಸೆಗೆ ಅನುಮತಿಯನ್ನು ಕೊಡುತ್ತಿರಲಿಲ್ಲ. ಅನೇಕ ಸಂದರ್ಭಗಳಲ್ಲಿ ಆಸ್ಪತ್ರೆಯ ವೈದ್ಯ ಹಾಗೂ ಟಿಪಿಎ ವೈದ್ಯರ ನಡುವೆ ವೈದ್ಯಕೀಯ ಸೂಕ್ಷ್ಮತೆಗಳ ಬಗ್ಗೆ ಯುದ್ಧಗಳೇ ನಡೆಯುತ್ತವೆ. ಇವರಿಬ್ಬರ ಜಗಳದಲ್ಲಿ ರೋಗಿಯು ನರಳುವುದು ಅನಿವಾರ್ಯವಾಗುತ್ತದೆ. ಈ ಸ್ಥಿತಿಯಲ್ಲಿ ರೋಗಿಯು ಸ್ವಂತ ವೆಚ್ಚದಲ್ಲಿ ಚಿಕಿತ್ಸೆಯನ್ನು ಪಡೆಯ ಬೇಕು ಇಲ್ಲವೇ ಮತ್ತೊಂದು ಆಸ್ಪತ್ರೆಗೆ ಹೋಗಬೇಕು. ವಿಮಾ ಸಂಸ್ಥೆಯವರು ನೀಡುವ ನಿರಾಕರಣ ವಿವರ ತಾಂತ್ರಿಕಮಯವಾಗಿರುವ ಕಾರಣ ರೋಗಿಗಳಿಗೆ ಎಂದಿಗೂ ಅರ್ಥವಾಗುವುದಿಲ್ಲ.

ಕೆಲವು ಆಸ್ಪತ್ರೆ ಹಾಗೂ ನರ್ಸಿಂಗ್ ಹೋಮ್‌ನವರು ವಿಮಾ ಸಂಸ್ಥೆಯಲ್ಲಿ ಪೂರ್ವಾನುಮತಿಯನ್ನು ನೀಡುವ ಮುಖ್ಯ ವ್ಯಕ್ತಿಗಳು ಯಾರು ಎಂದು ಪತ್ತೆ ಹಚ್ಚಿದವು. ಅವರ ಜೊತೆಯಲ್ಲಿ ಮಾತುಕತೆ ಯಾಡಿದವು. ಕೆಲವರು ತಿಂಗಳ ವಂತಿಗೆಗೆ ಒಪ್ಪಿದರೆ, ಬಹಳಷ್ಟು ಜನರು 'ಕೇಸ್ ಟು ಕೇಸ್' ಪದ್ಧತಿಯನ್ನು ಒಪ್ಪಿದರು. ಈಗ ಜೇಡಗಳು ಪರಸ್ಪರ ಸಹಕರಿಸುತ್ತಿವೆ. ನೋವು ನಲಿವುಗಳನ್ನು ಹಂಚಿಕೊಂಡು ಸಂತೃಪ್ತ ಬದುಕನ್ನು ನಡೆಸುತ್ತಿವೆ.

**ಸಹಾಯಕ ವೈದ್ಯಕೀಯ ಉದ್ಯಮಗಳು**

ಸಹಾಯಕ ವೈದ್ಯಕೀಯ ಉದ್ಯಮಗಳಲ್ಲಿ ಔಷಧಗಳನ್ನು ತಯಾರಿಸುವ ಕಾರ್ಖಾನೆಗಳು, ಲಸಿಕೆಗಳನ್ನು ತಯಾರಿಸುವ ಉದ್ಯಮಗಳು, ಬಯೋಟೆಕ್ ಸಂಸ್ಥೆಗಳು, ವಿವಿಧ ತಪಾಸಣೆಗಳನ್ನು ನಡೆಸುವ ಪ್ರಯೋಗಾಲಯಗಳು, ನಾನಾ ನಮೂನೆಯ ಸ್ಕ್ಯಾನುಗಳನ್ನು ಮಾಡುವ ಸಂಸ್ಥೆಗಳು, ಪೇಸ್ ಮೇಕರ್, ಇಸಿಜಿ, ಅಲ್ಟ್ರಾಸೌಂಡ್, ಎಕೊ, ಸ್ಪೈರೋಮೆಟ್ರಿ ಮುಂತಾದ ವೈದ್ಯಕೀಯ ಉಪಕರಣಗಳನ್ನು ತಯಾರಿಸುವ ಸಂಸ್ಥೆಗಳು, ಆಂಜಿಯೋಪ್ಲಾಸ್ಟಿಯಲ್ಲಿ ಬಳಸುವ 'ಸ್ಟೆಂಟ್'ಗಳನ್ನು, ಮೂಳೆ ಮುರಿತದಲ್ಲಿ ಉಪಯೋಗಿಸುವ ನಟ್, ಬೋಲ್ಟ್, ಪ್ಲೇಟ್‌ಗಳನ್ನು ತಯಾರಿಸುವ ಹಾಗೂ ಇತರ ಚಿಕಿತ್ಸೆಗಳನ್ನು ಬಳಸುವ ನಾನಾ ವಸ್ತುಗಳನ್ನು ತಯಾರಿಸುವ ಉದ್ಯಮಗಳು ಎಲ್ಲವೂ ಸೇರುತ್ತವೆ. ಇವೆಲ್ಲವೂ ಸಾಮೂಹಿಕವಾಗಿ ನಾಲ್ಕನೆಯ ಜೇಡವನ್ನು ಪ್ರತಿನಿಧಿಸುತ್ತವೆ ಎನ್ನಬಹುದು.

ಭಾರತದಲ್ಲಿ ಇಂದು ಸುಮಾರು ೪೬೫೫ ಔಷಧ ತಯಾರಿಕಾ ಸಂಸ್ಥೆಗಳಿವೆ. ಇವುಗಳಲ್ಲಿ 'ಪರಿಪೂರ್ಣ ಭಾರತೀಯ ಮೂಲ'ದ ಸಂಸ್ಥೆಗಳು ಕಡಿಮೆ. ಬಹುಪಾಲು ಸಂಸ್ಥೆಗಳು ವಿದೇಶಗಳ ನಾನಾ ಸಂಸ್ಥೆಗಳ ಶಾಖೆಗಳಾಗಿರುತ್ತವೆ ಇಲ್ಲವೇ ಕೃಪಾಪೋಷಿತ ಸಂಸ್ಥೆಗಳಾಗಿರುತ್ತವೆ. ಇವುಗಳಲ್ಲಿ ಸುಮಾರು ೨೫೦ ಬೃಹತ್ ಔಷಧ ಸಂಸ್ಥೆಗಳು ಭಾರತೀಯ ಮಾರುಕಟ್ಟೆಯ ೭೦% ಔಷಧ ವಹಿವಾಟನ್ನು ನಿಯಂತ್ರಿಸುತ್ತವೆ. ಭಾರತೀಯ ಔಷಧ ಉದ್ಯಮವು ವಿಶ್ವದಲ್ಲಿ ಮೂರನೆಯ ಸ್ಥಾನದಲ್ಲಿದೆ. ಈಗ ಸುಮಾರು ೧೨ ಬಿಲಿಯನ್ ಅಮೆರಿಕನ್ ಡಾಲರುಗಳ ವಹಿವಾಟನ್ನು ನಡೆಸುತ್ತಿದ್ದು, ೨೦೨೦ರ ಹೊತ್ತಿಗೆ ಇದು ೨೦ ಬಿಲಿಯನ್ ಡಾಲರುಗಳ ಮಟ್ಟಕ್ಕೆ ಏರಲಿದೆ.

ಭಾರತೀಯ ಔಷಧ ಉದ್ಯಮವು ಕೇವಲ ಔಷಧಗಳ ಉತ್ಪಾದನೆಯತ್ತ ಮಾತ್ರ ಗಮನ ಹರಿಸುತ್ತಿದೆ. ಡಾ॥ ರೆಡ್ಡೀಸ್ ಲ್ಯಾಬ್, ರ್‍ಯಾನ್‌ಬಾಕ್ಸಿಗಳಂತಹ ಪ್ರಮುಖ ಸಂಸ್ಥೆಗಳು ತಮ್ಮ ಲಾಭದ ೫–೧೦% ಲಾಭವನ್ನು ಮಾತ್ರ 'ಸಂಶೋಧನೆ ಹಾಗೂ ಅಭಿವೃದ್ಧಿ' (ಆರ್ ಆ್ಯಂಡ್ ಡಿ) ಕ್ಷೇತ್ರದಲ್ಲಿ ತೊಡಗಿಸುತ್ತವೆ. ಭಾರತದಲ್ಲಿರುವ ಎಲ್ಲ ಸಂಸ್ಥೆಗಳು ಸಂಶೋಧನೆ ಹಾಗೂ ಅಭಿವೃದ್ಧಿ ಕ್ಷೇತ್ರದಲ್ಲಿ ತೊಡಗಿಸಿರುವ ಒಟ್ಟು ಬಂಡವಾಳ, ಫೈಜರ್ ಎನ್ನುವ ಒಂದು ಸಂಸ್ಥೆ ತೊಡಗಿಸಿರುವ ಬಂಡವಾಳದ ಸಮಕ್ಕೆ ಬರುವುದಿಲ್ಲ. ಭಾರತದಲ್ಲಿ ಆರ್ ಆ್ಯಂಡ್ ಡಿ ಬಹುಪಾಲು ಶೂನ್ಯ ಎಂದೇ ಹೇಳಬೇಕಾಗುತ್ತದೆ. ಹಾಗಾಗಿ ಹೊಸ ಹೊಸ ಔಷಧಗಳೆಲ್ಲ ವಿದೇಶಿ ಮೂಲದ ಸಂಸ್ಥೆಗಳಿಂದಲೇ ಬರಬೇಕಾಗುತ್ತದೆ.

ಒಂದು ಹೊಸ ಔಷಧವನ್ನು ಕಂಡುಹಿಡಿದು, ಅದು ಶ್ರೀಸಾಮಾನ್ಯನ ಉಪಯೋಗಕ್ಕೆ ಬರಬೇಕಾದರೆ ಅದಕ್ಕೆ ಸುಮಾರು ೧೦–೧೫ ವರ್ಷಗಳು ಬೇಕಾಗುತ್ತವೆ. ಮಿಲಿಯಗಟ್ಟಲೆ ಡಾಲರುಗಳು ಖರ್ಚಾಗಿರುತ್ತವೆ. ಹೀಗೆ ಬಂದ ಔಷಧಗಳೆಲ್ಲ ವ್ಯಾಪಾರಿ ಮಟ್ಟದಲ್ಲಿ ಯಶಸ್ವಿಯಾಗುತ್ತವೆ ಎನ್ನಲು ಸಾಧ್ಯವೇ ಇಲ್ಲ. ಕೆಲವು ಔಷಧಗಳು ಮಾರುಕಟ್ಟೆಗೆ ಬರುತ್ತಿದ್ದ ಹಾಗೆಯೇ ಅವನ್ನು

ಹಿಂತೆಗೆದುಕೊಳ್ಳಬೇಕಾಗುತ್ತದೆ. ಔಷಧ ಸಂಸ್ಥೆಗಳು ತಮ್ಮ 'ಆರ್ ಆ್ಯಂಡ್ ಡಿ'ಗಾಗಿ ಬೇಕಾಗುವ ಹಣವನ್ನು ಬಂದ ಲಾಭದಿಂದಲೇ ಹೂಡಬೇಕಾಗುತ್ತದೆ. ಹಾಗಾಗಿ ಒಂದು ಔಷಧವನ್ನು ಮಾರುಕಟ್ಟೆಗೆ ಬಿಡುಗಡೆ ಮಾಡಿದಾಗ, ಆ ಔಷಧದ ಬೆಲೆಯಲ್ಲಿ 'ಆರ್ ಆ್ಯಂಡ್ ಡಿ' ವೆಚ್ಚವೂ ಮಿಳಿತವಾಗಿರುತ್ತದೆ. ಈ ಔಷಧದ ಬೆಲೆ ಭಾರತೀಯರ ಪಾಲಿಗೆ ತೀರಾ ದುಬಾರಿಯಂತೆ ಕಾಣುತ್ತದೆ. ನಿಗದಿತ ಔಷಧದ ಅಗತ್ಯವಿರುವ ಭಾರತೀಯ ಪ್ರಜೆ ಈ ದುಬಾರಿ ವೆಚ್ಚವನ್ನು ಭರಿಸಿ ಔಷಧವನ್ನು ಸೇವಿಸಬೇಕಾಗುತ್ತದೆ ಇಲ್ಲವೇ ಆರಾಮವಾಗಿ ಸಾವನ್ನು ಸ್ವಾಗತಿಸಬೇಕಾಗುತ್ತದೆ. ಇದಕ್ಕೆ ಬೇರೆ ದಾರಿಯಿಲ್ಲ.

ನಾವು ದಿನನಿತ್ಯ ಬಳಸುವ ಸರ್ವೇಸಾಮಾನ್ಯ ಔಷಧಗಳನ್ನು ಉತ್ಪಾದಿಸಿ, ಮಾರಾಟ ಮಾಡುವ ಉದ್ಯಮವು ನಿಜವಾದ ಜೇಡಗಳು! ಉದಾಹರಣೆಗೆ, ಜ್ವರವನ್ನು ಇಳಿಸುವ 'ಪ್ಯಾರಾಸಿಟಮಾಲ್' ಔಷಧ. ಇಂದು ಯಾವ ಸಂಸ್ಥೆ ಬೇಕಾದರೂ ಪ್ಯಾರಾಸಿಟಮಾಲ್‌ಅನ್ನು ಉತ್ಪಾದಿಸಬಹುದು. ಪ್ರತಿಯೊಂದು ಸಂಸ್ಥೆಯು ಪ್ಯಾರಾಸಿಟಮಾಲ್‌ಗೆ ತನ್ನದೇ 'ವ್ಯಾಪಾರಿ' ಹೆಸರನ್ನು ನೀಡುತ್ತದೆ. ಭಾರತದಲ್ಲಿ ಈ ಪ್ಯಾರಾಸಿಟಮಾಲ್ ಕ್ಯಾಲ್ಪಾಲ್, ಕ್ರೋಸಿನ್, ಡೋಲೊ, ಡೋಲೋಪರ್, ಫೆಬ್ರೆಕ್ಸ್, ಫೆಬ್ರೆನಿಲ್, ಫೆನೇಸ್, ನಿಯೋಮಾಲ್, ಪ್ಯಾಸಿಮಾಲ್, ರೆಗಾಮಾಲ್, ಥರ್ಮಾಲ್, ಅಲ್ಟ್ರಾಜಿನ್, ವಿನೋಪರ್ ಮುಂತಾದ ಹೆಸರುಗಳಲ್ಲಿ ಮಾರಾಟವಾಗುತ್ತಿವೆ.

ವೈದ್ಯರು ಜ್ವರವಿಳಿಸಲು 'ಪ್ಯಾರಾಸಿಟಮಾಲ್'ನ್ನು ತೆಗೆದುಕೊಳ್ಳುವಂತೆ ತಮ್ಮ ಸಲಹಾ ಚೀಟಿಯನ್ನು ಬರೆಯಬೇಕಾಗುತ್ತದೆ. ಆದರೆ ಔಷಧ ಸಂಸ್ಥೆಗಳು ಹಾಗೆ ಬರೆಯಲು ಬಿಡುವುದಿಲ್ಲ. "ಡಾಕ್ಟ್ರೆ, ನಮ್ಮ ಸಂಸ್ಥೆಯ ಗುಳಿಗೆಯ ಹೆಸರನ್ನು ಬರೆಯಿರಿ. ನಿಮಗೆ ಪೆನ್ ಕೊಡುತ್ತೇವೆ, ಟಾರ್ಚ್ ಕೊಡುತ್ತೇವೆ, ಕ್ಯಾಲ್ಕ್ಯುಲೇಟರ್ ಕೊಡುತ್ತೇವೆ, ಮೊಬೈಲ್ ಫೋನ್ ಕೊಡುತ್ತೇವೆ, ಟಿ.ವಿ. ಕೊಡುತ್ತೇವೆ, ಕಾಶ್ಮೀರ್ ಪ್ರವಾಸಕ್ಕೆ ಕಳುಹಿಸುತ್ತೇವೆ, ಹೊಸ ಕಾರ್ ನೀಡುತ್ತೇವೆ....." ಹೀಗೆಲ್ಲಾ ವಿವಿಧ ಆಮಿಷಗಳನ್ನು ಒಡ್ಡುತ್ತಾರೆ. ಡಾಕ್ಟರ್ ಸಹ ಮನುಷ್ಯರೇ ಅಲ್ಲವೆ! ಹಾಗಾಗಿ ಅವರು ಇಂತಹ 'ಕೊಡುಗೆ'ಗಳನ್ನು ಖುಷಿಯಿಂದ ಸ್ವೀಕರಿಸಿ, ಅವರ ಸಂಸ್ಥೆಯ ಔಷಧಗಳನ್ನೇ ಬರೆಯುತ್ತಾರೆ. ಆ ಸಂಸ್ಥೆಯ ವ್ಯಾಪಾರ ವಹಿವಾಟು ಚೆನ್ನಾಗಿ ನಡೆದು ಲಾಭವಾಗುತ್ತದೆ. ಹೀಗೆ ಕೊಡುಗೆಗಳನ್ನು ನೀಡಲಾಗದ ಪ್ರಾಮಾಣಿಕ ಔಷಧ ಸಂಸ್ಥೆಗಳು ತಮ್ಮ ಉದ್ಯಮವನ್ನು ಬಂದ್ ಮಾಡಬೇಕಾಗುತ್ತದೆ. ಅಪಾರ ಹಣವನ್ನು ಹೂಡಿದ ಔಷಧ ಸಂಸ್ಥೆಗಳು ಹೇಗೆ ತಾನೆ 'ಹಾಗೆ ಸುಮ್ಮನೇ' ಬಾಗಿಲು ಹಾಕಿಕೊಂಡು ಹೋದಾವು? ಅವರೂ ಸಹ ವೈದ್ಯರನ್ನು ಸೆಳೆಯುವ ಸ್ಪರ್ಧೆಗೆ ಇಳಿಯುತ್ತಾರೆ. ಔಷಧ ಸಂಸ್ಥೆಗಳು ಹಾಗೂ ವೈದ್ಯರ ನಡುವೆ 'ಅನೈತಿಕ ಬಾಂಧವ್ಯ' ಬಲವಾಗಿ ಬೇರು ಬಿಡುತ್ತಾ ಹೋಗುತ್ತದೆ. ಆದರೆ ಎಲ್ಲ ವೈದ್ಯರೂ ಹೀಗೆ ಔಷಧಗಳ ಕಂಪನಿಗಳ ಆಮಿಷಕ್ಕೆ ತುತ್ತಾಗುವುದಿಲ್ಲ. ಅಂತಹವರಿಗೆ ಔಷಧ ಕಂಪನಿಗಳು ಆಮಿಷದ ಹಾಗೆ ಕಾಣದ ಆಮಿಷಗಳನ್ನು ಒಡ್ಡುತ್ತವೆ. ದೇಶ ವಿದೇಶಗಳಲ್ಲಿ ನಡೆಯುವ ವೈದ್ಯಕೀಯ ಸಮಾವೇಶಗಳಿಗೆ ಹೋಗಿ ಬರುವ ವೆಚ್ಚವನ್ನು ಭರಿಸಲು ಮುಂದಾಗುತ್ತವೆ. ದೊಡ್ಡ ದೊಡ್ಡ ಆಸ್ಪತ್ರೆಗಳು ಇಲ್ಲವೇ ವೈದ್ಯಕೀಯ ವಿದ್ಯಾಲಯಗಳಲ್ಲಿ, ವೈದ್ಯರು ರಾಜ್ಯ/ದೇಶ/ಅಂತರ್ದೇಶ ವೈದ್ಯಕೀಯ ಸಮಾವೇಶಗಳನ್ನು ನಡೆಸುವಾಗ ಅವರಿಗೆ ಅಗತ್ಯವಾದ ಹಣವನ್ನು ನೀಡುತ್ತವೆ. ಇಂತಹ ಸಮಾರಂಭಗಳಲ್ಲಿ ಕೆಲವು ಪ್ರತಿಷ್ಠಿತ ವೈದ್ಯರು 'ಈ ಔಷಧ ರಾಮಬಾಣ! ಇದೇ ಔಷಧವನ್ನೇ ಬಳಸಿ' ಎಂದು ನಿಗದಿತ ಕಂಪನಿಯ ಔಷಧವನ್ನು ಪ್ರತ್ಯಕ್ಷವಾಗಿ ಇಲ್ಲವೇ ಪರೋಕ್ಷವಾಗಿ ಶಿಫಾರಸು ಮಾಡುವುದುಂಟು. ಹೀಗೆ ವೈದ್ಯರಿಗೇ ನಿಗದಿತ ಔಷಧವನ್ನು ಶಿಫಾರಸು ಮಾಡಲು ಸೂಕ್ತ ಸಂಭಾವನೆಯನ್ನು ಪಡೆಯುವರು. ಇಂತಹ ಅನೇಕ ಒಪ್ಪಂದಗಳು ವೈದ್ಯ ಹಾಗೂ ಔಷಧ ಸಂಸ್ಥೆಗಳ ನಡುವೆ ನಡೆಯುವುದುಂಟು.

ಒಂದು ಅಧ್ಯಯನದ ಅನ್ವಯ, ಭಾರತೀಯ ಔಷಧ ಕಂಪನಿಗಳು ತಮ್ಮ ಲಾಭದ ೨೫% ರಷ್ಟು ಹಣವನ್ನು ಕೇವಲ 'ಪ್ರಮೋಶನ್'ಗೆ ಬಳಸುತ್ತವೆ ಹಾಗೂ 'ಸಂಶೋಧನೆ ಹಾಗೂ ಅಭಿವೃದ್ಧಿ'ಗೆ ಬರೀ ೫–೧೦% ರಷ್ಟು ಹಣವನ್ನು ಮಾತ್ರ ಖರ್ಚು ಮಾಡುತ್ತವೆಯಂತೆ!

ಈ ಹಿನ್ನೆಲೆಯಲ್ಲಿ ಭಾರತೀಯ ವೈದ್ಯಕೀಯ ಮಂಡಳಿಯು 'ಇಂಡಿಯನ್ ಮೆಡಿಕಲ್ ಕೌನ್ಸಿಲ್ (ಪ್ರೊಫೆಶನಲ್ ಕಾಂಡಕ್ಟ್, ಎಟಿಕ್ವಿಟಿ ಆ್ಯಂಡ್ ಎಥಿಕ್ಸ್) (ಅಮೆಂಡ್‌ಮೆಂಟ್) ರೆಗ್ಯುಲೇಶನ್ – ೨೦೦೯' ಅನ್ನು ಜಾರಿಗೆ ತಂದಿತು. ಈ ಹೊಸ ಕಾನೂನು ವೈದ್ಯರು ಹಾಗೂ ಔಷಧ ಕಂಪನಿಗಳ ನಡುವೆ ಇರಬಹುದಾದ 'ಅನೈತಿಕ' ಸಂಬಂಧಗಳಿಗೆ ಕೊನೆ ಹಾಕಿತು. ವೈದ್ಯರು ಔಷಧ ಕಂಪನಿಗಳಿಂದ ಉಡುಗೊರೆಗಳನ್ನು ಸ್ವೀಕರಿಸುವುದು, ಪ್ರಯಾಣ ಸೌಲಭ್ಯಗಳನ್ನು ಪಡೆಯುವುದು, ಆತಿಥ್ಯವನ್ನು ಸ್ವೀಕರಿಸುವುದು, ಹಣ ಅಥವಾ ಬೆಲೆಬಾಳುವ ವಸ್ತುಗಳನ್ನು ಪಡೆಯುವುದು, ಔಷಧವನ್ನು ಶಿಫಾರಸು ಮಾಡುವುದು – ಇತ್ಯಾದಿಗಳನ್ನು ಅನೈತಿಕ ಎಂದು ಸಾರಿತು. ಇಂತಹ ಚಟುವಟಿಕೆಗಳಲ್ಲಿ ತೊಡಗುವ ವೈದ್ಯರನ್ನು ಕಠಿಣ ಶಿಕ್ಷೆಗೆ ಗುರಿ ಮಾಡುವುದಾಗಿ ಹೇಳಿತು. ಎಂ.ಸಿ.ಐ. ಜಾರಿಗೆ ತಂದ ಈ ನಿಯಮವು ಔಷಧ ಕಂಪನಿಗಳು ಹಾಗೂ ವೈದ್ಯರ ನಡುವೆ ಬಹಿರಂಗವಾಗಿ ನಡೆಯುತ್ತಿದ್ದ ವಹಿವಾಟುಗಳನ್ನು ಒಮ್ಮೆಲೆ ನಿಗ್ರಹಿಸಿತು. ಜೊತೆಗೆ ಎಂ.ಸಿ.ಐ., ವೈದ್ಯರು ಸಾಧ್ಯವಾದಷ್ಟು ವ್ಯಾಪಾರೀ ನಾಮದ ಔಷಧಗಳನ್ನು ಸಲಹೆ ಮಾಡುವ ಬದಲು 'ರಾಸಾಯನಿಕ ನಾಮದ' ಜೆನೆರಿಕ್ ಔಷಧಗಳನ್ನೇ ಬರೆಯುವಂತೆ ಸೂಚಿಸಿತು.

ಎಂ.ಸಿ.ಐ. ನಿಯಮದಿಂದ ಅನೈತಿಕ ಸಂಬಂಧಗಳು ಬಹುಪಾಲು ನಿಂತಿವೆ ಯಾದರೂ ಸಹ ಕೆಲವು ವೈದ್ಯರಿಗೆ ಹಾಗೂ ವೈದ್ಯಕೀಯ ಕ್ಷೇತ್ರಕ್ಕೆ ನಷ್ಟವಾಗಿದೆ ಎನ್ನುವುದನ್ನು ಒಪ್ಪಬೇಕಾಗುತ್ತದೆ. ಔಷಧ ಕಂಪನಿಗಳು ನೀಡುವ ಹಣವನ್ನು ಸದುಪಯೋಗಪಡಿಸಿಕೊಂಡು ಗಂಭೀರವಾಗಿ ವೈದ್ಯಕೀಯ ಸಂಶೋಧನೆ ಗಳನ್ನು ನಡೆಸುತ್ತಿದ್ದ ಕೆಲವರಿಗಾದರೂ ಅನ್ಯಾಯವಾಗಿದೆ ಎನ್ನುವುದು ಸುಳ್ಳಲ್ಲ. ಈಗ ನಡೆಯುವ ವೈದ್ಯಕೀಯ ಸಮಾವೇಶಗಳೂ ಸಪ್ಪೆಯಾಗುತ್ತಿವೆ. ಈ ಹಿನ್ನೆಲೆಯಲ್ಲಿ ಎಂ.ಸಿ.ಐ. ತಂದಿರುವ ನಿಯಮವನ್ನು ಸಡಿಲಿಸಬೇಕು ಅಥವಾ ತಿದ್ದುಪಡಿಯನ್ನು ತರಬೇಕು ಎನ್ನುವ ಕೂಗು ಎದ್ದಿದೆ. ಮುಂದೇನಾಗಲಿದೆ ಎನ್ನುವುದನ್ನು ಬೆಳ್ಳಿಯ ಪರದೆಯ ಮೇಲೆ ನೋಡಿ ಆನಂದಿಸಬೇಕಾಗುತ್ತದೆ.

**ಸುಶ್ರುತ**
ನಂ. ೧೫, ಕ್ರೆಸೆಂಟ್ ರಸ್ತೆ, ಬೆಂಗಳೂರು–೫೬೦ ೦೦೧

ಒಂದೆರಡು ವಾರಗಳ ಹಿಂದೆ ಯೂಟ್ಯೂಬ್‌ನಲ್ಲಿ ಈ ಚಿತ್ರವನ್ನು ನೋಡಿ ಹನಿಗಣ್ಣಿನವನಾಗಿಯೂ ಆನಂದಿಸಿದ್ದೇನೆ. ಆಸಕ್ತರು ಈ ಚಿತ್ರವನ್ನು ಈಗಲೂ ನೋಡಬಹುದು. ಪ್ರಗತಿಶೀಲ ಮನಸ್ಸುಗಳು ನೋಡಲೇಬೇಕಾದ ಚಿತ್ರ ಪ್ಯಾಸಾ.



# ಪ್ಯಾಸಾ ಒಂದು ದೃಶ್ಯ ಪ್ರೇಮಕಾವ್ಯ

**ಭಾ**ರತೀಯ ಅಥವಾ ಬಾಲಿವುಡ್ ಸಿನಿಮಾ ಪ್ರಪಂಚ ಈಗ ಶತಮಾನೋತ್ಸವವನ್ನು ಆಚರಿಸುತ್ತಿದೆ. ಇಂಥ ಸಂಭ್ರಮದ ಸಮಯದಲ್ಲಿ ಕೆಲವು ಅತ್ಯುತ್ತಮ ಚಿತ್ರಗಳ ಕುರಿತು ಮೆಲುಕುಹಾಕುವದು ಇತಿಹಾಸದ ದೃಷ್ಟಿಯಿಂದ ಅವಶ್ಯಕ ಹಾಗೂ ನಮ್ಮ ಸಿನಿಮಾ ಪ್ರಪಂಚಕ್ಕೆ ಗೌರವ ಸಲ್ಲಿಸಿದಂತಾಗುತ್ತದೆ.

ನನ್ನ ದೃಷ್ಟಿಯಿಂದ ಗುರುದತ್ತ್ ಈ ಶತಮಾನದ ಅತಿಶ್ರೇಷ್ಠ ನಿರ್ಮಾಪಕ ಹಾಗೂ ನಿರ್ದೇಶಕರಲ್ಲಿ ಒಬ್ಬರು. ಅವರ ಹಲವಾರು ಚಿತ್ರಗಳನ್ನು ೧೯೫೬–೧೯೬೦ರ ಅವಧಿಯಲ್ಲಿ ನೋಡಿ ಮೆಚ್ಚಿಕೊಂಡಿದ್ದೇನೆ. ಆಗಿನ್ನೂ ನಾನು ೧೬–೨೦ರ ತರುಣ. ಆದರೆ ಇಂದಿಗೂ ಅವರ ಕೆಲ ಚಿತ್ರಗಳನ್ನು ನೋಡಿ ಆನಂದಿಸಿದ್ದೇನೆ. ಅಂಥ ಚಿತ್ರಗಳಲ್ಲಿ "ಪ್ಯಾಸಾ" (ಬಾಯಾರಿದವನು) ಒಂದು.

ಗುರುದತ್ತ್ ಆರಂಭದಲ್ಲಿ 'ಬಾಜಿ' (ಜೂಜುಗಾರ), 'ಜಾಲ್' (ಬಲೆ) , 'ಆರ್ ಪಾರ್' (ಈ ಕಡೆಯಿಂದ ಆ ಕಡೆ), ಮತ್ತು 'ಸಿ.ಐ.ಡಿ.' ಚಿತ್ರಗಳನ್ನು ನಿರ್ಮಿಸಿ, ನಿರ್ದೇಶಿಸಿ ಹಣ ಮತ್ತು ಹೆಸರನ್ನು ಗಳಿಸಿದ್ದರು. ಈ ಬಾಕ್ಸ್ ಆಫೀಸ್ ಚಿತ್ರಗಳು ಕವಿ ಮನಸ್ಸಿನ ಗುರುದತ್ತರನ್ನು ತೃಪ್ತಿಪಡಿಸಲಿಲ್ಲ. ಈ ಅತೃಪ್ತಿಯ ಫಲವೇ ೧೯೫೭ರಲ್ಲಿ ಬಿಡುಗಡೆಯಾದ 'ಪ್ಯಾಸಾ'. ಈ ಚಿತ್ರ ಒಬ್ಬ ಪ್ರತಿಭಾವಂತ ಯುವ ಕವಿಯ ನೋವು ನಲಿವುಗಳನ್ನು ಕಾವ್ಯಾತ್ಮಕವಾಗಿ ಚಿತ್ರಿಸುತ್ತದೆ. ೧೯೫೦ರ ದಶಕದ ಪ್ರಗತಿಶೀಲ ಚಳುವಳಿಯ ಪ್ರಮುಖ ಉರ್ದು ಕವಿಯಾಗಿದ್ದ ಸಾಹಿರ್ ಲೂಧಿಯಾನ್ವಿ ಮತ್ತು ಅವರ ಸಹಪಾಠಿಯಾಗಿದ್ದ ಸುಪ್ರಸಿದ್ಧ ಹಿಂದಿ ಲೇಖಕಿ ಅಮೃತಾ ಪ್ರೀತಮ್ ಅವರ ಭಗ್ನಪ್ರೇಮದ ನೈಜ ಕಥೆಯೇ, ಈ ಚಿತ್ರ ಕಥೆಗೆ ಪ್ರೇರಣೆ.

**ಡಾ॥ ಎಚ್. ಚಂದ್ರಶೇಖರ**

**ಸಂಕ್ಷಿಪ್ತ ಕಥೆ**

ನಿರುದ್ಯೋಗಿಯಾಗಿದ್ದ ಕವಿ ವಿಜಯ್ (ಗುರುದತ್ತ್) ತನ್ನ ಕವನ ಸಂಗ್ರಹವನ್ನು ಪ್ರಕಟಿಸುವ ಪ್ರಯತ್ನದಲ್ಲಿ ಯಶಸ್ವಿಯಾಗದೆ ನೊಂದುಕೊಂಡಿರುತ್ತಾನೆ. ಈ ಮಧ್ಯೆ ಅವನ ಧನಪಿಶಾಚಿ ಸೋದರರು ಅವನ ಕವನ ಸಂಗ್ರಹದ ಫೈಲ್‌ಅನ್ನು ರದ್ದಿಕಾಗದದೊಂದಿಗೆ ವ್ಯಾಪಾರಿಗೆ ಮಾರುತ್ತಾರೆ. ಆದರೆ, ಅಕಸ್ಮಾತ್ ಈ ಫೈಲು ಕವಿಹೃದಯಿ ಗಾಯಕಿಯಾದ ವೇಶ್ಯೆ ಗುಲಾಬೋ (ವಹಿದಾ ರೆಹಮಾನ್)ಳ ಕೈಗೆ ಸಿಗುತ್ತದೆ. ನಗರದ ಉದ್ಯಾನದಲ್ಲಿ ಗಿರಾಕಿಗಳಿಗಾಗಿ ಕಾಯುತ್ತ ಗುಲಾಬೋ, ಕವಿ ವಿಜಯನ ಗಝಲ್ ಒಂದನ್ನು ಹಾಡುತ್ತಾ ವಿಜಯನ ಗಮನ ಸೆಳೆಯುತ್ತಾಳೆ. ಆಗ ಇಬ್ಬರ ಮಧ್ಯೆ ಸಣ್ಣ ಜಗಳವಾಗುತ್ತದೆ. ಮುಂದೆ, ಪರಿಚಯ ಪ್ರೇಮವಾಗಿ ಮೊಳಕೆಯೊಡೆಯುತ್ತದೆ. ಕಾರಣಾಂತರಗಳಿಂದ ದೂರವಾಗುತ್ತಾರೆ. ಇಬ್ಬರಲ್ಲಿಯೂ ವಿರಹವೇದನೆ ವ್ಯಕ್ತವಾಗುತ್ತದೆ.

ಕೊನೆಯ ಭಾಗದಲ್ಲಿ ವಿಜಯ್ ರೇಲ್ವೆ ಹಳಿಗೆ ಸಿಕ್ಕು ಸತ್ತು ಹೋದನೆಂದು ಪತ್ರಿಕೆಗಳಲ್ಲಿ ಸುದ್ದಿ ಪ್ರಕಟವಾದದ್ದನ್ನು ಓದಿದ ಗುಲಾಬೋ ತಾನು ಗಳಿಸಿದ ಚಿನ್ನದ ಆಭರಣಗಳನ್ನು ಪ್ರಕಾಶಕರಿಗೆ ಕೊಟ್ಟುಬಿಡುತ್ತಾಳೆ. 'ಪರ್‌ಛಾಯಿಯಾ' ಎಂಬ ಶೀರ್ಷಿಕೆಯಲ್ಲಿ (ನೆರಳುಗಳು) ಕವನ ಸಂಗ್ರಹ ಪ್ರಕಟವಾಗಿ ಒಂದೇ ದಿನದಲ್ಲಿ ಸಾವಿರಾರು ಪ್ರತಿಗಳು ಮಾರಾಟವಾಗುತ್ತವೆ. ಆದರೆ ಧನದಾಹಿ ಪ್ರಕಾಶಕ



ಘೋಶನು (ರಹಮಾನ್) ಗುಲಾಬೋಗೆ ಒಂದು ಪೈಸೆಯನ್ನೂ ಕೊಡುವದಿಲ್ಲ. ಒಂದು ವರ್ಷ ಕಳೆದ ನಂತರ ಕವಿ ವಿಜಯ್‌ನ ಪ್ರಥಮ ಪುಣ್ಯ ತಿಥಿಯಂದು ಪುತ್ಥಳಿಯನ್ನು ಅನಾವರಣಗೊಳಿಸಿ ಪುನಃ ಕವನ ಸಂಗ್ರಹವನ್ನು ಪ್ರಕಟಿಸಲು ನಗರದ ಸಭಾಭವನದಲ್ಲಿ ಸಭೆ ಸೇರಿರುತ್ತದೆ. ಆಗ ಜೀವಂತ ಇರುವ ಕವಿ ವಿಜಯ್ ಹೆಬ್ಬಾಗಿಲಿನಿಂದ ಪ್ರವೇಶಿಸಿ ಒಂದು ಹೃದಯ ಕಲಕುವ ಗೀತೆಯನ್ನು (ಜಲಾದೋ ಎ ದುನಿಯಾ) ಹಾಡುತ್ತಾನೆ. ಗುಲಾಬೋ ಮತ್ತು ಅವಳ ಸ್ನೇಹಿತೆ ವಿಜಯ್‌ನನ್ನು ಸಂರಕ್ಷಿಸುತ್ತಾರೆ. ಕೊನೆಯ ಹಂತದಲ್ಲಿ ವಿಜಯ್ ಗುಲಾಬೋಳ ಮನೆಗೆ ಬಂದು, ತನ್ನ ಜೀವನ ಸಂಗಾತಿಯಾಗಲು ಕೋರಿ, ಆ ನಗರವನ್ನು ಬಿಟ್ಟು ಬೇರೆ ಊರಿಗೆ ಹೋಗುತ್ತಾನೆ. ಚಿತ್ರ ಸುಖಾಂತ್ಯಗೊಳ್ಳುತ್ತದೆ.

**ಚಿತ್ರದ ಯಶಸ್ಸು**

ಇಡೀ ಚಿತ್ರದ ಜೀವಾಳ ಗುರುದತ್ತ್ ಮತ್ತು ವಹೀದಾರ ಮನೋಜ್ಞ ಅಭಿನಯ. ಪ್ರತಿ ಸನ್ನಿವೇಶಗಳಿಗೆ ಸಾಹಿರ್ ಅವರ ಅರ್ಥಪೂರ್ಣ ಕವನಗಳನ್ನು, ಗಜ಼ಲ್‌ಗಳನ್ನು ಜೋಡಿಸಲಾಗಿದೆ. ಅಷ್ಟೇ ಅರ್ಥಪೂರ್ಣ ಸಂಗೀತವನ್ನು ಎಸ್.ಡಿ. ಬರ್ಮನ್ ಅಳವಡಿಸಿದ್ದಾರೆ. ಈ ಚಿತ್ರದ ಯಶಸ್ಸಿಗೆ ಕನ್ನಡಿಗ ವಿ. ಕೆ. ಮೂರ್ತಿ ಅವರ ಫೋಟೋಗ್ರಾಫಿಯೂ ಕಾರಣ. "ಜಲಾದೋ


ವಿ. ಕೆ. ಮೂರ್ತಿ

ಜಲಾದೋ" ಎಂದು ಹಾಡುವ ದೃಶ್ಯ ಕ್ರಿಸ್ತನನ್ನು ಸಿಲುಬೆಗೇರಿಸುವ ದೃಶ್ಯವನ್ನು ನೆನಪಿಗೆ ತರುತ್ತದೆ. ಆದ್ದರಿಂದಲೇ ಇದೊಂದು ಸುಂದರ ದೃಶ್ಯ ಕಾವ್ಯ.

ಈ ಚಿತ್ರವನ್ನು 'ಟೈಮ್ ಮ್ಯಾಗಜೀನ್' ಪತ್ರಿಕೆಯು ಜಗತ್ತಿನ ಅತ್ಯುತ್ತಮ ೧೦ ರೋಮ್ಯಾಂಟಿಕ್ ಚಿತ್ರಗಳಲ್ಲಿ ಒಂದು ಎಂದು ಅಭಿಪ್ರಾಯ ವ್ಯಕ್ತಪಡಿಸಿತು (೨೦೦೫). ಸೈಟ್ಸ್ ಆ್ಯಂಡ್ ಸೌಂಡ್ಸ್ ಕ್ರಿಟಿಕ್ಸ್ ೨೦೦೨ರಲ್ಲಿ ಸಂಸ್ಥೆಯು ಇದಕ್ಕೆ ಜಗತ್ತಿನ ಅತ್ಯುತ್ತಮ ೧೬೦ ಚಿತ್ರಗಳಲ್ಲಿ ಒಂದು ಎಂದು ಪರಿಗಣಿಸಿತು. ಕಪ್ಪು–ಬಿಳುಪು ಚಿತ್ರಗಳ ಕಾಲದಲ್ಲಿ ಇಂಥ ಹೆಗ್ಗಳಿಕೆ ಪಡೆದ ಚಿತ್ರವಿದು. ಈ ಚಿತ್ರದ ಸಿನೆಮಾಟೋಗ್ರಾಫರ್ ವಿ. ಕೆ. ಮೂರ್ತಿ ಬೆಂಗಳೂರಿನಲ್ಲಿ ನಿವೃತ್ತ ಜೀವನ ನಡೆಸುತ್ತಿದ್ದಾರೆ. ಒಂದು ಸಭೆಯಲ್ಲಿ ಅವರು ಗುರುದತ್ತರನ್ನು ತುಂಬಾ ಗೌರವದಿಂದ ಸ್ಮರಿಸಿದರು. ಗುರುದತ್ತರ ಎಲ್ಲ ಚಿತ್ರಗಳಿಗೆ ಇವರೇ ಕ್ಯಾಮೆರಾಮನ್. ಆದರೆ ಈ ಚಿತ್ರದ ಯಶಸ್ಸಿನಿಂದಾಗಿ ಈ ತಂಡದಿಂದ ಸಾಹಿರ್ ಅವರು ಹೊರ ನಡೆದಿದ್ದು ಒಂದು ದುರಂತವೆಂದು ನಾನು ಭಾವಿಸುತ್ತೇನೆ.

ಒಂದೆರಡು ವಾರಗಳ ಹಿಂದೆ ಯೂಟ್ಯೂಬ್‌ನಲ್ಲಿ ಈ ಚಿತ್ರವನ್ನು ನೋಡಿ ಹನಿಗಣ್ಣಿನವನಾಗಿಯೂ ಆನಂದಿಸಿದ್ದೇನೆ. ಆಸಕ್ತರು ಈ ಚಿತ್ರವನ್ನು ಈಗಲೂ ನೋಡಬಹುದು. ಪ್ರಗತಿಶೀಲ ಮನಸ್ಸುಗಳು ನೋಡಲೇಬೇಕಾದ ಚಿತ್ರ ಪ್ಯಾಸಾ.


ಚಿತ್ರಲೇಖನ : **ಡಾ॥ ಎಚ್. ಚಂದ್ರಶೇಖರ**
'ಸಂಗಮ', ಎಮ್.ಐ.ಜಿ. – ೭೭, ೬ನೇ ಕ್ರಾಸ್,
೬ನೇ ಮೇನ್, ಕೆ.ಹೆಚ್.ಬಿ. ಕಾಲೋನಿ, ೨ನೇ ಹಂತ,
ಬಸವೇಶ್ವರ ನಗರ, ಬೆಂಗಳೂರು – ೫೬೦ ೦೭೯

# ಕನ್ನಡ ಕಾವ್ಯತತ್ವ ಮತ್ತು...

ನಮ್ಮ ಪ್ರಾಚೀನ ಸಾಹಿತ್ಯವನ್ನು ನೋಡಿದರೆ ಅಲ್ಲಿ ಕಾವ್ಯ, ಅದರಲ್ಲೂ ಮಹಾಕಾವ್ಯದ ಯಜಮಾನಿಕೆ ಎದ್ದು ಕಾಣುತ್ತದೆ. ಕಾವ್ಯ ಎಂದರೆ ಅದೇನೋ ಒಂದು ಶ್ರೇಷ್ಠವಾದ, ಪೂಜ್ಯಾರ್ಹವಾದ ಕೆಲಸ, ದೈವಾಯತವಾದ, ಋಷಿಸಮುದಾಯ ಮಾತ್ರ ರಚಿಸ ಬಹುದಾದ ಅದ್ಭುತವದು; ಅದು ಪ್ರಶ್ನಾತೀತವಾದುದು ಎಂಬ ನಂಬಿಕೆ ಚಾಲ್ತಿಯಲ್ಲಿದ್ದದ್ದು ಕಾಣುತ್ತದೆ. (ಆದರೆ ನಮ್ಮ ಜನಪದರಲ್ಲಿ ಹಾಗಲ್ಲ. ಅದು ಮುಕ್ತವಾದದ್ದು. ಯಾರು ಬೇಕಾದರೂ ಒಳಬರಬಹುದಾದ ರಚನೆಗಳವು. ಒಳಗೊಳ್ಳಬಹುದಾದ ರಚನೆಗಳವು.) ಯಾವುದೇ ವಸ್ತು ಆಗಿರಲಿ ಅಶ್ವಶಾಸ್ತ್ರ, ಗಜಶಾಸ್ತ್ರ, ಅಲಂಕಾರಶಾಸ್ತ್ರ, ನಿಘಂಟು, ಜೀವನಚರಿತ್ರೆ, ಸಂಪಾದನೆ, ಸೂಕ್ತಿ ಸಂಗ್ರಹ, ಟೀಕು–ಟಿಪ್ಪಣಿ–ಪಂಚಿಕೆ ಹೀಗೆ ಯಾವುದೇ ಕೆಲಸ ಆಗಿರಲಿ ಅದೆಲ್ಲವೂ ಕಾವ್ಯಪ್ರಕಾರದಲ್ಲೇ ರಚನೆಯಾಗಬೇಕು ಎಂಬ ನಂಬಿಕೆ ನಮ್ಮಲ್ಲಿ ಬಲವಾಗಿ ಆಚಾರದಲ್ಲಿ ಇದ್ದದ್ದು ಕಾಣುತ್ತದೆ. ಗದ್ಯ ಬರೆದರೂ ಅದು ಗದ್ಯಕಾವ್ಯವೆ ಆಗಿರಬೇಕು ! ವಡ್ಡಾರಾಧನೆಯು ಕಾವ್ಯವೆ, ಪಂಚತಂತ್ರವೂ ಕಾವ್ಯವೆ ! ಹೀಗಾಗಿ ನಮ್ಮಲ್ಲಿ ಪ್ರಕಾರ ದೃಷ್ಟಿಯಿಂದ ಇರುವುದು ಎರಡೇ ಪ್ರಕಾರ. ಒಂದು ಗದ್ಯ ಕಾವ್ಯ ಮತ್ತೊಂದು ಪದ್ಯ ಕಾವ್ಯ.

**ಡಾ॥ ರಾಮಲಿಂಗಪ್ಪ ಟಿ. ಬೇಗೂರು**

ಕನ್ನಡದ ಒಂದು ಕಾವ್ಯಮೀಮಾಂಸೆ ಎಂಬುದು ಇದೆಯೊ? ಭಾರತೀಯ ಕಾವ್ಯಮೀಮಾಂಸೆ ಎಂಬ ಒಂದು ಕಾವ್ಯಮೀಮಾಂಸೆ ಹೇಗೆ ಇಲ್ಲವೋ ಹಾಗೆಯೆ ಕನ್ನಡ ಕಾವ್ಯ ಮೀಮಾಂಸೆ ಎಂಬ ಒಂದು ಕಾವ್ಯಮೀಮಾಂಸೆ ಇಲ್ಲ. ನಮ್ಮ ಕಾವ್ಯತತ್ವಗಳನ್ನು ನೋಡಿದರೆ ಅಲ್ಲಿ ಎಷ್ಟು ಕವಿಗಳಿದ್ದಾರೋ ಅಷ್ಟು ಬಗೆಯ ಚಿಂತನೆಗಳಿವೆ. ಅಲ್ಲದೆ ನಮ್ಮಲ್ಲಿ ಹಲವು ತೆರನ ಪರಂಪರೆಗಳು ಇವೆ. ಅವುಗಳನ್ನೆಲ್ಲ ಒಂದು ಏಕಸೂತ್ರದಲ್ಲಿ ಕಟ್ಟಲು ಆಗುವುದಿಲ್ಲ. ಕಟ್ಟಿದರೂ ಅದು ಕೇವಲ ದರ್ಶನಶಾಸ್ತ್ರ–ತತ್ವಶಾಸ್ತ್ರ ಆದೀತೆ ಹೊರತು ಸಾಹಿತ್ಯದ ಓದಿನ, ಇಲ್ಲವೆ ರಚನೆಯ ಆಚಾರದಲ್ಲಿ ಬಳಸಬಹುದಾದ ಕೈಪಿಡಿ ಆಗಲಾರದು. ಒಂದು ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯನ್ನು ಕಟ್ಟಿಕೊಳ್ಳಲು ಯತ್ನಿಸಿ ನಮ್ಮವರು ಅಂಥದ್ದನ್ನು ಕಟ್ಟಿ ಕಟ್ಟಿ ಸೋತುಹೋಗಿದ್ದಾರೆ. ಅನೇಕ ಚರಿತ್ರೆಗಳನ್ನು ಕಟ್ಟಿದ್ದರೂ ಇನ್ನೂ ಅವುಗಳ ಹೊರಗೆ ಉಳಿದಂಥವು ಬೇಜಾನು ಇವೆ. ಮೀಮಾಂಸೆಯ ವಿಚಾರದಲ್ಲಾದರೋ ಯಾವ ಮೀಮಾಂಸೆಯ ಚರಿತ್ರೆಯನ್ನೂ ನಾವು ಕಟ್ಟಿಕೊಂಡಿಲ್ಲ. ಕಾವ್ಯತತ್ವಗಳನ್ನು ಕಟ್ಟಿಕೊಳ್ಳುವ ಯತ್ನಗಳು ನಮ್ಮಲ್ಲಿ ಬಿಡಿಬಿಡಿಯಾಗಿ ನಡೆದಿವೆ. (ಅಂತಹ ಯತ್ನಗಳದ್ದೆ ಒಂದು ಚರಿತ್ರೆಯನ್ನು ನಾವು ಇಂದು ಕಲ್ಪಿಸಿಕೊಳ್ಳಬಹುದು ಎಂಬಷ್ಟು ಯತ್ನಗಳು ನಡೆದಿವೆ) ಆದರೆ ಅವೂ ಕೂಡ ಎಲ್ಲ ಅಪೂರ್ಣಗಳೆ. ಅರೆಕೊರೆಗಳೆ. ಸಾಕಷ್ಟು ತಮ್ಮ ತಮ್ಮ 'ನಮ್ಮ'ಅನ್ನು ಒಳಗೊಳ್ಳುವ ಮತ್ತು ಬೇರೆಯ 'ಅನ್ಯ'ಗಳನ್ನು ಹೊರಗಿಡುವ ರಾಜಕಾರಣಗಳು ಇಲ್ಲೆಲ್ಲ ಸಂಭವಿಸಿವೆ. ಏನಾದರೂ ನಮ್ಮದೆ ಆದ ಒಂದು ಕಾವ್ಯಮೀಮಾಂಸೆಯನ್ನು ಕಟ್ಟಿಕೊಳ್ಳುವುದು ಎಂದು ಯಾರು ಹೊರಟರೂ ಆ ಪ್ರಯತ್ನವು ಇನ್ನೆಷ್ಟನ್ನೋ ಹೊರಗಿಡುವುದು ಎಂದೇ ಆಗುತ್ತದೆ. ಹಾಗೆಂದು ಆ ರೀತಿಯ ಕಟ್ಟಾಣಿಕೆಗಳನ್ನು ಬೇಡ ಎನ್ನುವಂತಿಲ್ಲ. ಹಲವು ಚರಿತ್ರೆಗಳು–ಪರಂಪರೆಗಳು ಇರುವಾಗ ಹಲವು ಮೀಮಾಂಸೆಗಳು ಇರುವುದೂ ಸಹಜವೇ.

ಕಾವ್ಯತತ್ವ ಅಥವಾ ಕಾವ್ಯಮೀಮಾಂಸೆ ಅಂದರೆ ಅದು ಅಂತಿಮವಾಗಿ ಜೀವನತತ್ವ ಅಥವಾ ಜೀವನ ಮೀಮಾಂಸೆಯೇ ಅಲ್ಲವೆ ? ಕಾವ್ಯಮೀಮಾಂಸೆ ಎಂಬುದು ತತ್ವಶಾಸ್ತ್ರ ಅಥವಾ ದರ್ಶನದ ಒಂದು ಭಾಗವೇ ಆಗಿದೆಯಲ್ಲವೆ? ನಮ್ಮಲ್ಲಿ ಜೈನ ದರ್ಶನ ಅನ್ನುವುದು ಇದೆ, ಹಾಗೆಯೆ ಬೌದ್ಧ ದರ್ಶನ, ಶೈವ ದರ್ಶನಗಳೂ ಇವೆ. ಇಂತಹ ದರ್ಶನಗಳನ್ನು ಕುರಿತು ಮಾತನಾಡುವಾಗಲೂ ನಾವು ಬಹುವೇಳೆ ಸಂಸ್ಕೃತ ಪಠ್ಯಗಳನ್ನೆ ಆಧರಿಸಿ ಮಾತನಾಡುತ್ತ ಇರುತ್ತೇವೆ. ಈ ಜೈನ, ಬೌದ್ಧ, ಶೈವ, ವೈದಿಕ ದರ್ಶನಾದಿಗಳಂತೆ ಕನ್ನಡ ದರ್ಶನ ಎಂಬುದೊಂದು ಇದೆಯೊ? ಅಥವಾ ಕನ್ನಡ ಜೈನ, ಕನ್ನಡ ಬೌದ್ಧ, ಕನ್ನಡ ಶೈವ ದರ್ಶನಗಳು ನಮ್ಮಲ್ಲಿ ಇವೆಯೊ? ಹಾಗೆಯೆ ಜೈನ ಕಾವ್ಯಮೀಮಾಂಸೆ, ಬೌದ್ಧ ಕಾವ್ಯಮೀಮಾಂಸೆ, ಶೈವ ಕಾವ್ಯಮೀಮಾಂಸೆ, ವೈದಿಕ ಕಾವ್ಯಮೀಮಾಂಸೆ ಎಂಬುವು ಕನ್ನಡದಲ್ಲಿ ಇವೆಯೊ? ಹಾಗಾದರೆ ಧರ್ಮ ಮತ್ತು ಕಾವ್ಯ ಧರ್ಮಗಳ ಸಂಬಂಧದಂತೆ ಧರ್ಮ ಮತ್ತು ಮೀಮಾಂಸಾಧರ್ಮಗಳ ಸಂಬಂಧ ನಮ್ಮಲ್ಲಿ ಎಂಥದ್ದು?

ನಮ್ಮ ಕಾವ್ಯತತ್ವಗಳ ಕ್ರೋಡೀಕರಣದ ಯತ್ನಗಳಲ್ಲಿ ಮುಖ್ಯವಾಗಿ ನಾಲ್ಕು ರೀತಿಯ ನಂಬಿಕೆ ಮತ್ತು ಆಚಾರಗಳು ಇರುವಂತೆ ಕಾಣುತ್ತವೆ:

೧. ಕನ್ನಡದ್ದೆ ಆದ ಒಂದು ಕಾವ್ಯತತ್ವ ಪರಂಪರೆ–ಧಾರೆ ಇದೆ. ಅದನ್ನು ಕಟ್ಟಿಕೊಳ್ಳಬಹುದು ಮತ್ತು ಕಟ್ಟಿಕೊಳ್ಳಬೇಕು ಎಂಬ ನಂಬಿಕೆ ಮತ್ತು ಆಚಾರ.

೨. ನಮ್ಮಲ್ಲಿ ಹಲವು ತತ್ತ್ವ ಪರಂಪರೆಗಳು–ಮೀಮಾಂಸಾ ಪರಂಪರೆಗಳು ಇವೆ. ಉದಾಹರಣೆಗೆ ಜನಪದ ಕಾವ್ಯಮೀಮಾಂಸೆ, ಮಹಿಳಾ ಕಾವ್ಯಮೀಮಾಂಸೆ, ವಚನ ಕಾವ್ಯಮೀಮಾಂಸೆ, ಕೀರ್ತನ ಕಾವ್ಯಮೀಮಾಂಸೆ, ಪ್ರಾಚೀನ ಕಾವ್ಯ ಮೀಮಾಂಸೆ, ಆಧುನಿಕ ಸಾಹಿತ್ಯ ಮೀಮಾಂಸೆ ಹೀಗೆ ಹಲವು ತತ್ವಪರಂಪರೆಗಳು ಇವೆ. ಈ ಒಂದೊಂದು ಮೀಮಾಂಸೆಗಳನ್ನು ಕಟ್ಟಿಕೊಳ್ಳಬೇಕು ಎಂಬ ನಂಬಿಕೆ ಮತ್ತು ಆಚಾರ.

೩. ನಮ್ಮಲ್ಲಿ ಕವಿ–ಕೃತಿಗಳು ಎಷ್ಟು ಇವೆಯೊ ಅಷ್ಟು ಬಗೆಯ ಕಾವ್ಯತತ್ತ್ವ, ಮೀಮಾಂಸೆಗಳೂ ಇವೆ. ಅವನ್ನು ಕಟ್ಟಿಕೊಳ್ಳಬೇಕು ಮತ್ತು ಬಹುರೂಪಿಯಾದ ಅವನ್ನೆಲ್ಲ ಕ್ರೋಡೀಕರಿಸಿ ಕನ್ನಡದ್ದೇ ಆದ ಒಂದು ಕಾವ್ಯಮೀಮಾಂಸೆಯನ್ನು ರಚಿಸಿಕೊಳ್ಳಬೇಕು ಎಂಬ ನಂಬಿಕೆ ಮತ್ತು ಆಚಾರ.

೪. ಕಾವ್ಯಮೀಮಾಂಸೆ ಎಂದರೆ ಗತದಿಂದ ಎತ್ತಿ ತರುವ ಇಲ್ಲವೆ ಕಳೆದು ಹೋದದ್ದನ್ನು ಕಟ್ಟಿಕೊಳ್ಳುವ ಸಂಗತಿಯಲ್ಲ. ಅಥವಾ ಅದು ಆಗಿಹೋದ ಸಂಗತಿಗಳ ಕ್ರೋಡೀಕರಣ ಅಲ್ಲ, ಅದು ನಿರಂತರ ಆಗುವ ಪ್ರಕ್ರಿಯೆ. ಇದೊಂದು ಚಲನಶೀಲ ಶಿಸ್ತು, ದರ್ಶನ ಎಂಬ ನಂಬಿಕೆ ಮತ್ತು ಆಚಾರ.

ಈ ಮೇಲಿನ ಎಲ್ಲವುಗಳಲ್ಲೂ ಭಿನ್ನ ಭಿನ್ನವಾದ ಬಿಕ್ಕಟ್ಟುಗಳಿವೆ. ಜನಪದ ಕಾವ್ಯಮೀಮಾಂಸೆಯನ್ನೇ ತೆಗೆದುಕೊಂಡರೆ ನಮ್ಮಲ್ಲಿ ಒಂದು ಜನಪದ ಕಾವ್ಯಮೀಮಾಂಸೆಯನ್ನು ಕಟ್ಟಲು ಸಾಧ್ಯವೊ? ಜನಪದ ಕಾವ್ಯಪ್ರಕಾರಗಳೇ ಅಸಂಖ್ಯ. ಗಾದೆ, ಒಗಟು, ಒಡಪು, ತತ್ವಪದ, ಗೀಗೀ ಪದ, ಕಿರು ಕಥನಕಾವ್ಯ, ಮಹಾ ಕಥನಕಾವ್ಯ, ಅರ್ಜುನಜೋಗಿ ಹಾಡು, ಲಾವಣಿ, ಸೋಬಾನೆ ಪದ, ಗುಮಟೆ ಪದ, ದೇಸಿದುಂದುಮೆ ಪದ, ಸೋಬಾನೆ ಪದ, ಸವಾಲ್–ಜವಾಬ್, ಗಬ್ಬಿಯಾಲೊ, ಬಯಲಾಟ, ಯಕ್ಷಗಾನ, ಹೀಗೆ ಒಂದೇ ಎರಡೇ ಇವು ಅಸಂಖ್ಯ. ಹೀಗಿರುವಾಗ ಜನಪದ ಕಾವ್ಯತತ್ವಗಳು ಇವು ಎಂದು ಒಂದು ಕಾವ್ಯ ಮೀಮಾಂಸೆಯನ್ನು ಕಟ್ಟಲು ಸಾಧ್ಯವೊ? ಹಾಗೆಯೆ ವಚನಗಳಿಗೂ ಇದೇ ಮಾತು ಅನ್ವಯಿಸುತ್ತದೆ. ವಚನ ಮೀಮಾಂಸೆ ಅಂದ ಕೂಡಲೆ ತ್ರಿವಿಧಿ, ತಾರಾವಳಿ, ಕಾಲಜ್ಞಾನ, ಬೆಡಗಿನ ವಚನ, ಸರ್ವಜ್ಞ ವಚನ, ಸ್ವರಪದ, ತತ್ವಪದಗಳೆಲ್ಲ ಆಚೆ ಉಳಿದುಬಿಡುತ್ತವೆ. ಒಳಗೊಳ್ಳುವ ಕಾಳಜಿಯ ಬಿಕ್ಕಟ್ಟು ಎದುರಾಗುವುದು ಇಲ್ಲೆ. ಸಾಧಾರಣೀಕರಣ ಮತ್ತು ನಿರ್ದಿಷ್ಟೀಕರಣ/ಗುಡಿಸಿಹಾಕುವುದು ಮತ್ತು ಅನ್ವಯೀಕರಣಗಳ ಬಿಕ್ಕಟ್ಟು ಎದುರಾಗುವುದು ಇಲ್ಲೆ. ಸ್ತ್ರೀ ಕಾವ್ಯಮೀಮಾಂಸೆ, ಕೀರ್ತನ ಕಾವ್ಯಮೀಮಾಂಸೆ, ಆಧುನಿಕ ಸಾಹಿತ್ಯತತ್ತ್ವ ಇಂತಹ ಯಾವುದನ್ನು ತೆಗೆದುಕೊಂಡರೂ ಹೀಗೆ ಭಿನ್ನ ಸಮಸ್ಯೆಗಳು ಎದ್ದೇ ಏಳುತ್ತವೆ. ಹಾಗಾದರೆ ಎಲ್ಲವನ್ನೂ ಕ್ರೋಡೀಕರಿಸಿ ಒಂದೇ ಕನ್ನಡ ಕಾವ್ಯಮೀಮಾಂಸೆ ಕಟ್ಟಬಹುದೊ ? ಅದು ಸಾಧ್ಯವೊ ? ಆಗ ಒಳಗೊಳ್ಳುವ ಮತ್ತು ಹೊರಗಿಡುವ ರಾಜಕಾರಣ ಗಳಿಂದ ಪಾರಾಗುವುದು ಹೇಗೆ ? ಒಂದುತನವನ್ನು ಸಾಧಿಸುವುದು ಹೇಗೆ ? ಸರಿ, ಹಾಗಾದರೆ ಎಷ್ಟೆಷ್ಟು ಕವಿ ಕೃತಿಗಳಿವೆಯೋ ಅಷ್ಟಷ್ಟು ಮೀಮಾಂಸೆಗಳನ್ನು ಕಟ್ಟೋಣವೊ ? ಇದೇ ಯುಕ್ತವೆಂದು ಕಾಣುತ್ತದೆ. ಈಗ ಆಗುತ್ತಿರುವುದೂ ಹಾಗೆಯೇ. ಆದರೆ ನಮ್ಮಲ್ಲಿ ಈ ಮೂರೂ ರೀತಿಯ ಆಚಾರಗಳು ಇವೆ ಎಂಬುದು ಮಾತ್ರ ನಿಜ. ಇಷ್ಟಕ್ಕೂ ನಮಗೆ ಕಾವ್ಯಮೀಮಾಂಸೆ ಬೇಕಾಗಿರು ವುದಾದರೂ ಏತಕ್ಕೆ ? ಶೈಕ್ಷಣಿಕ ಅಧ್ಯಯನದ ಆಚೆಗೆ ಅದರ ಅಗತ್ಯ ಎಷ್ಟಿದೆ ?

ಈ ಎಲ್ಲ ಮಾತುಗಳ ಹಿನ್ನೆಲೆಯಲ್ಲಿ ಒಂದು ಪ್ರಮೇಯ ಕಟ್ಟಿಕೊಳ್ಳಬಹುದು. ನಮ್ಮಲ್ಲಿ ಒಂದು ಕಾವ್ಯಮೀಮಾಂಸೆ ಎನ್ನುವುದು ಇಲ್ಲ. ಹಾಗೆ ನೋಡಿದರೆ ಕಾವ್ಯಮೀಮಾಂಸೆ ಅನ್ನುವುದೇ ಇಲ್ಲ. ಇರುವುದು ಬರೀ ಕಾವ್ಯತತ್ತ್ವವೂ ಅಲ್ಲ. ಕಾವ್ಯತತ್ವಗಳು, ಸಾಹಿತ್ಯ ತತ್ವಗಳು. ಸಾಹಿತ್ಯದ ಅನುಸಂಧಾನದ ಮತ್ತು ಓದಿನ ವಿಭಿನ್ನ ದಾರಿಗಳು ಮಾತ್ರ. ಈ ವಿಭಿನ್ನ ದಾರಿಗಳೂ ಕೂಡ ಯಾವುವೂ ಸ್ವಯಂಪೂರ್ಣ ಅಲ್ಲ. ಕಾಲಾತೀತ, ದೇಶಾತೀತ, ಭಾಷಾತೀತ, ಶಾಶ್ವತ ಅಲ್ಲ. ಕನಿಷ್ಠ ಪ್ರಕಾರಾತೀತವೂ ಅಲ್ಲ. ಆದರೆ ಕೆಲವು ತತ್ವಗಳನ್ನು ನಾವು ಹಾಗೆ ಭಾವಿಸುತ್ತೇವೆ ಮಾತ್ರ. ಹತ್ತು ಹಲವು ಅನ್ವಯಿಕ ತತ್ವಗಳು ಇದ್ದರೂ ಆಚರಣೆಯಲ್ಲಿ ಇಂದು ಇರುವುದು ವಿಮರ್ಶೆ ಮಾತ್ರ. ಮೀಮಾಂಸೆ ಎನ್ನುವುದು ಆದರ್ಶ, ಆಚರಿಸಬಹುದಾದ ತತ್ವ. ವಿಮರ್ಶೆ ಅಂತಹ ತತ್ವದ ಆಚಾರ. ವಿಮರ್ಶೆ ಹೊಸ ಹೊಸ ಸಾಹಿತ್ಯ ಬಂದಂತೆಲ್ಲ ತಾನು ಬದಲಾಗುತ್ತದೆ. ಬದಲಾಗಲೇಬೇಕು. ಹಾಗಾದರೆ ಮೀಮಾಂಸೆ ಬದಲಾಗಬೇಡವೊ?

ಮೀಮಾಂಸೆ ಎನ್ನುವುದು ಎಲ್ಲಕ್ಕೂ ಅನ್ವಯಿಸಲು ಬಾರದ ಒಂದು ಅಸಮಗ್ರ ಮತ್ತು ಆಂಶಿಕ ಸೈದ್ಧಾಂತಿಕ ಕಟ್ಟುಗಳ ಕಂತೆ. ಸಿದ್ಧಾಂತಗಳು ಒಮ್ಮೆ ಕಟ್ಟಲ್ಪಟ್ಟರೆ ಅವು ಸಿದ್ಧಸೂತ್ರಗಳಾಗಿ ಉಳಿಯುತ್ತವೆ. ಅವುಗಳನ್ನು ಅನ್ವಯಿಕವಾಗಿ ನಿರಂತರವಾಗಿ ಬಳಸಲಾಗದು. (ಆದರೆ ನಾವು ಹಾಗೆ ಬಳಸುತ್ತಿದ್ದೇವೆ. ನಿರಚನವಾದ, ಓದುಗ ಸ್ಪಂದನ ಸಿದ್ಧಾಂತ, ಧ್ವನಿ ಸಿದ್ಧಾಂತ ಇತ್ಯಾದಿಗಳನ್ನು ಈ ಹಿನ್ನೆಲೆಯಲ್ಲಿ ನೋಡಬಹುದು) ಜೀವನವೂ ನಿರಂತರ ಬದಲಾಗುತ್ತ ಇರುತ್ತದೆ. ಸಾಹಿತ್ಯವೂ ಕಾಲಕಾಲಕ್ಕೆ ಬದಲಾಗುತ್ತ ಇರುತ್ತದೆ. ಹಾಗೆಯೇ ಸಾಹಿತ್ಯದ ಓದು–ಪರಿಶೀಲನೆ ಕಾಲಕಾಲಕ್ಕೆ ಬದಲಾಗಬೇಕಲ್ಲವೇ? ಸಾಹಿತ್ಯ ಮೀಮಾಂಸೆಯೂ ಬದಲಾಗುತ್ತ ಇರಬೇಕು ಅಲ್ಲವೇ? ಇಲ್ಲವಾದರೆ ಮೀಮಾಂಸೆ ಆಚಾರಹೀನ ತತ್ವಗಳ ಮೊತ್ತ ವಾಗಿಯೂ ವಿಮರ್ಶೆ ನಿತ್ಯ ಬದಲಾಗುವ ಆಚರಣೆಗಳ ಲೋಕವಾಗಿಯೂ ಆಗಬಹುದು. ಅಲ್ಲದೆ ನಮ್ಮಲ್ಲಿ ಮೀಮಾಂಸೆಯು ವಿಮರ್ಶೆಯಾಗಿ ಬಳಕೆ ಆಗಲು ಹವಣಿಸುವುದೂ ಹಾಗೆ ಬಳಕೆಯಾದ ವಿಮರ್ಶೆಯೇ ಕಟ್ಟುಪಾಡಾಗಿ ಸಂಭವಿಸಿ ತಾನೇ ಮೀಮಾಂಸೆ ಆಗಲು ಹವಣಿಸುವುದೂ ನಡೆಯುತ್ತ ಬಂದಿದೆ. ಅಲ್ಲದೆ ನಮ್ಮಲ್ಲಿ ಹಿಂದಿನ ಕಾವ್ಯಗಳು ಮುಂದಿನ ಕವಿಗಳಿಗೆ ಮಾದರಿ ಆಗುತ್ತ ಬರುವುದು ಹಾಗೆಯೆ, ನೆನ್ನೆಯ ಓದುಗಳು ನಾಳೆಯ ಓದುಗಳಿಗೆ ದಾರಿದೀಪ ಆಗುತ್ತ ಇರುವುದು ಸಾಹಿತ್ಯದ ಮತ್ತು ಜೀವನ ದರ್ಶನದ ಯಥಾಸ್ಥಿತಿಯ ಸಂಕೇತವೆ ಅಲ್ಲವೆ? ಕೆಲವರು ಎಲ್ಲ ಕಾಲಕ್ಕೂ ದೇಶಕ್ಕೂ ಭಾಷೆಗೂ ಒಂದು ಸಮಾನ ಜೀವನ ಕ್ರಮ, ಕೆಲವು ಸಾಮಾನ್ಯ ಅಂಶಗಳು ಇರುತ್ತವಲ್ಲವೆ ಎನ್ನಬಹುದು. ಹಾಗೆಂದ ಮಾತ್ರಕ್ಕೆ ಎಲ್ಲ ಕಾಲಕ್ಕೂ ಎಲ್ಲ ಭಾಷೆಗೂ ಯಾವುದೊ ಒಂದು ಭಾಷೆ ದೇಶದ ತತ್ವವನ್ನೆ ಅನ್ವಯ ಮಾಡುವುದು ಇಲ್ಲವೆ ಪರೀಕ್ಷಾ ಕೈಪಿಡಿಯಾಗಿ ಬಳಸುವುದು ಎಷ್ಟರಮಟ್ಟಿಗೆ ಸರಿ?

ಸಾಹಿತ್ಯ ಚರಿತ್ರೆ ರಚನೆಯನ್ನು ಸಾಹಿತ್ಯ ವಿಮರ್ಶೆಯ ಒಂದು ಧಾರೆ ಯಾಗಿಯೇ ನಾವು ಭಾವಿಸುತ್ತೇವೆ. ಹಾಗೆಯೇ ಕಾವ್ಯತತ್ವ ಕೂಡ ನಮ್ಮ ಸಾಹಿತ್ಯ

## ಸುದ್ದಿ ಚಿತ್ರ



ಸಮಾರಂಭದಲ್ಲಿ ಶ್ರೀ ಕೋಚೆ ಅವರಿಗೆ ಗೌರವಾರ್ಪಣೆ



ಪುಸ್ತಕ ಬಿಡುಗಡೆ ಸಮಾರಂಭ

ದಿನಾಂಕ ೧೦-೧೨-೨೦೧೭ರಂದು ಬೆಂಗಳೂರಿನಲ್ಲಿ ಗುಬ್ಬಿ ತೋಟದಪ್ಪ ಶತಮಾನೋತ್ಸವ ಭವನದಲ್ಲಿ ಕೋಚೆ ಅವರ ಕೃತಿ "ಅಪ್ರತಿಮ ದೇಶಭಕ್ತ ಟೀಪೂ ಸುಲ್ತಾನ್" ಎಂಬ ಅಮೂಲ್ಯ ಗ್ರಂಥವೊಂದನ್ನು ಕರ್ನಾಟಕದ ಮಾಜಿ ಲೋಕಾಯುಕ್ತ ಶ್ರೀ ಎನ್. ಸಂತೋಷ್ ಹೆಗ್ಡೆ ಲೋಕಾರ್ಪಣೆ ಮಾಡಿದರು. ನವಕರ್ನಾಟಕ ಪ್ರಕಾಶನದ ಈ ಪುಸ್ತಕ ಬಿಡುಗಡೆ ಸಮಾರಂಭವನ್ನು ಗುಬ್ಬಿ ತೋಟದಪ್ಪ ಧರ್ಮಸಂಸ್ಥೆ ಹಾಗೂ ನವಕರ್ನಾಟಕ ಜಂಟಿಯಾಗಿ ಆಯೋಜಿಸಿದ್ದವು. ಸಮಾರಂಭದ ಅಧ್ಯಕ್ಷತೆಯನ್ನು ನಿವೃತ್ತ ಐ.ಪಿ.ಎಸ್. ಶ್ರೀ ಎಲ್. ರೇವಣಸಿದ್ದಯ್ಯ ವಹಿಸಿದ್ದರು. ಮುಖ್ಯ ಅತಿಥಿಯಾಗಿ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರಾದ ಡಾ॥ ಚಂದ್ರಶೇಖರ ಕಂಬಾರ ವೇದಿಕೆಯಲ್ಲಿದ್ದರು. ಸಾಹಿತಿ ಡಾ॥ ಕೆ. ಮರುಳಸಿದ್ದಪ್ಪ ಗ್ರಂಥದ ಕುರಿತು ಸಭೆಗೆ ಪರಿಚಯಿಸಿದರು. ಇದೇ ಸಂದರ್ಭದಲ್ಲಿ ಕೃತಿಯ ಲೇಖಕರಾದ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಪಡೆದ ಕೋಚೆ ಅವರಿಗೆ ಗೌರವಾರ್ಪಣೆ ಸಲ್ಲಿಸಲಾಯಿತು.

ವಿಮರ್ಶೆಯ ಒಂದು ಧಾರೆಯೆ. ಕನ್ನಡ ಪ್ರಾಚೀನ ಕಾವ್ಯಗಳಲ್ಲಿ ಕಾವ್ಯರೂಪದಲ್ಲಿ ಪ್ರಕಟವಾಗಿರುವ ಕಾವ್ಯತತ್ವವೆಲ್ಲವೂ ಕನ್ನಡ ವಿಮರ್ಶೆಯ ಪ್ರಾಗ್ರೂಪವೆಂದೇ ನನ್ನ ಭಾವನೆ. ವಿಮರ್ಶೆ (ಮತ್ತು ಮೀಮಾಂಸೆ) ಕಾವ್ಯರೂಪದಲ್ಲಿ ಇರಬಾರದು ಎಂದೇನಿಲ್ಲವಲ್ಲ? ನಮ್ಮಲ್ಲಿ ಕನ್ನಡ ಕಾವ್ಯತತ್ವಗಳ ಕ್ರೋಡೀಕರಣ ಮತ್ತು ಚರ್ಚೆಯ ಒಂದು ಚರಿತ್ರೆಯೆ ಇದೆ. ಸಂಸ್ಕೃತ ಕಾವ್ಯಮೀಮಾಂಸೆಗಿಂತ ಭಿನ್ನವಾದ ಕನ್ನಡದ ಸ್ವಂತಿಕೆ–ಅನನ್ಯತೆಗಳನ್ನು ಗುರ್ತಿಸುವ ಕೆಲಸ ಈ ಚರಿತ್ರೆಯಲ್ಲಿ ಸಾಕಷ್ಟು ಆಗಿದೆ. ಆದರೆ ಇಲ್ಲಿ ಕನ್ನಡ ಕಾವ್ಯತತ್ವವನ್ನು ಸಂಸ್ಕೃತದ ಮೀಮಾಂಸೆಯ ಕನ್ನಡಕದ ಮೂಲಕ ನೋಡಲಾಗಿದೆಯೇ ವಿನಾ ಕನ್ನಡ ಸಾಹಿತ್ಯದ ಅನುಸಂಧಾನದ ಹಿನ್ನೆಲೆಯಲ್ಲಿ ನೋಡಿಲ್ಲ. ಹಾಗಾಗಿ ಇದು ನಮಗೆ ಮೀಮಾಂಸೆಯಾಗಿ ಕಂಡಿದೆಯೆ ವಿನಾ ವಿಮರ್ಶೆಯಾಗಿ ಕಂಡಿಲ್ಲ. ಅದನ್ನೆಲ್ಲ ನಾವು ನಮ್ಮ ವಿಮರ್ಶೆಯ ಚರಿತ್ರೆಯ ಭಾಗ ಆಗಿಯೂ ಕಾಣಬೇಕಿದೆ.

ಕಾವ್ಯತತ್ವವಾಗಲೀ ಮೀಮಾಂಸೆಯಾಗಲೀ ಈ ನೂರು ವರ್ಷಗಳಲ್ಲಿ (ಭಾರತೀಯ ಕಾವ್ಯಮೀಮಾಂಸೆ ಎಂಬ ಹೆಸರಿನಲ್ಲಿ ಸಂಭವಿಸಿದ ಮೇಲೆ) ಒಂದು ಶೈಕ್ಷಣಿಕ ಶಿಸ್ತಾಗಿ ಅಧ್ಯಯನ ಕಲಿಕೆಗಳಿಗೆ ಗುರಿಯಾಗುತ್ತ ಬಂದಿದೆಯೇ ವಿನಾ ಅದು ನಮ್ಮ ಒಟ್ಟಾರೆ ಬಾಳಿನ ಭಾಗ ಆಗಿಲ್ಲ. ಓದು, ಕೇಳು, ನೋಡು ಕ್ರಿಯೆಗಳಿಗೆ ಅನ್ವಯಿಸಿಕೊಳ್ಳಬಹುದಾದ ಹಲವು ತತ್ವಗಳನ್ನು ನಮ್ಮ ಕಾವ್ಯಗಳು

*೧ ವಚನ ಕಾಲದಲ್ಲಿ ಮುವ್ವತ್ತಕ್ಕೂ ಹೆಚ್ಚು ಮಹಿಳೆಯರು ಕಾವ್ಯ ಬರೆದಿದ್ದಾರೆ. ಅನಂತರವೂ ಅನೇಕರು ಕಾವ್ಯ ಬರೆಯುತ್ತ ಬಂದಿದ್ದಾರೆ. ಹಲವಾರು ಅಜ್ಞಾತ ಕೀರ್ತನಕಾರ್ತಿಯರೂ ಇದ್ದಾರೆ. ಕನ್ನಡ ಸಾಹಿತ್ಯದ ಕತ್ತಲ ಕಾಲ ಎಂದು ಏನು ಹದಿನೇಳು ಹದಿನೆಂಟನೆ ಶತಮಾನಗಳನ್ನು ಕರೆಯುತ್ತ ಬಂದಿದ್ದಾರೊ ಆ ಕಾಲದಲ್ಲೆ ಇಪ್ಪತ್ತಕ್ಕೂ ಹೆಚ್ಚು ಮಹಿಳೆಯರು ಅನುಭಾವೀ ಕಾವ್ಯ ರಚನೆ ಮಾಡಿದ್ದಾರೆ. ಇತ್ತೀಚೆಗೆ ಜನಪದ ಸಾಹಿತ್ಯದ ಆಪೀಕರಣ ಮಾಡುತ್ತಿರುವಾಗ ನಾವು ದರೋಜಿ ಈರಮ್ಮ, ಸಿರಿಯಜ್ಜಿ, ಸುಕ್ರಿ ಬೊಮ್ಮಗೌಡ ಇಂತಹ ಅನೇಕ ಕವಿಗಳನ್ನು ಕಂಡಿದ್ದೇವೆ. ಇವರನ್ನೆಲ್ಲ ಚರಿತ್ರೆಗಳಲ್ಲಿ ಒಳಗೊಳ್ಳುವ ಇಲ್ಲವೆ ಅಲಕ್ಷಿತ ಚರಿತ್ರೆಗಳಾಗಿ ಕಟ್ಟಿಕೊಳ್ಳುವ ಅಗತ್ಯವಿದೆ.

*೨ ವಡ್ಡಾರಾಧನೆಗೆ ಬಂದರೆ ಅಲ್ಲಿ ಮತ್ತೆ ಮತ್ತೆ ಕೆಲವು ನುಡಿಕಂತೆಗಳು ಪುನರಾವರ್ತನೆ ಆಗುತ್ತವೆ: ೧. ಗ್ರಾಮ ನಗರ ಮಡಂಬ ಪಟ್ಟಣ ಖೇಡ ಖರ್ವಡ ದ್ರೋಣಾಭಿಮುಖಂಗಳೊಳ್ ಸಂಚರಿಸುತ್ತುಂ; ೨. ಗ್ರಾಮೇ ಏಕರಾತ್ರೇ ನಗರೇ ಪಂಚರಾತ್ರೇ, ಅಟವ್ಯಾಂ ದಶರಾತ್ರೇ ಎಂದಿಂತು ಸಂಚರಿಸುತ್ತುಂ; ೩. ಇಷ್ಟವಿಷಯ ಕಾಮಭೋಗಂಗಳಂ ಪಲಕಾಲಂ ಅನುಭವಿಸುತ್ತುಂ ಇರೆ ೪. ರೂಪ ಲಾವಣ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳಂ – ಹೀಗೆ ಹಲವಾರು ನುಡಿಕಂತೆಗಳು ಪುನರಾವರ್ತನೆ ಆಗುತ್ತವೆ. ನಮ್ಮ ಪ್ರಾಚೀನ ಮಹಾಕಾವ್ಯ ಅಥವಾ ಕಥನಗಳಲ್ಲಿ ಪುನರಾವರ್ತನೆ ಆಗುವುದು ಒಂದು ಕಾವ್ಯದೋಷ. ಆದರೆ ವಡ್ಡಾರಾಧನೆಯಲ್ಲಿ ಹಾಗಲ್ಲ. ಪುನರಾವರ್ತನೆ ಅದರ ಒಂದು ಲಕ್ಷಣ. ಹಾಗೆ ನೋಡಿದರೆ ಇದು ಜನಪದ ಕಾವ್ಯಗಳ ಲಕ್ಷಣ. ನಮ್ಮ ಮಹಾಕಥನಗಳ ಲಕ್ಷಣ ಅಲ್ಲ. ಜನಪದ ಕಥನಗಳನ್ನೆ ಅಕ್ಷರಕ್ಕೆ ತಿರುಗಿಸಿದರೆ ಹೇಗಾಗಬಹುದು ಎಂಬುದಕ್ಕೆ ವಡ್ಡಾರಾಧನೆ ಒಂದು ಉದಾಹರಣೆ. ಜನಪದವನ್ನು ಒಳಗೊಳ್ಳುವ ಕಾಳಜಿಗಿಂತ ಜನಪದವನ್ನೆ ರೂಪಾಂತರಿಸುವ ಕ್ರಿಯೆ ಇಲ್ಲಿ ಕಾಣುತ್ತದೆ. ಶೈಲಿ, ಸಾಹಿತ್ಯ ರೂಪ, ಪದಬಳಕೆ ಹೀಗೆ ಹಲವು ನೆಲೆಯಲ್ಲಿ ವಡ್ಡಾರಾಧನೆಯ ಪರಂಪರೆಯನ್ನು ಅನುಸರಿಸಿದ ಪರಂಪರೆಯೊಂದು ನಮ್ಮಲ್ಲಿ ಬೆಳೆದಂತೆ ಕಾಣುವುದಿಲ್ಲ. ಯಾಕಿರಬಹುದು?



ಪ್ರಕಟಿಸಿದ್ದರೂ ಅವುಗಳು ಸಿದ್ಧಾಂತಗಳಾಗಿ ಎಲ್ಲೂ ಮಂಡನೆಯಾಗಿಲ್ಲ. ಅನಂತರದಲ್ಲಿ ಅವುಗಳನ್ನು ಸೈದ್ಧಾಂತೀಕರಿಸುವ ಕೆಲಸ ಕೂಡ ಆಗಿಲ್ಲ. (ರಹಮತ್ ಈ ನಿಟ್ಟಿನಲ್ಲಿ ಸ್ವಲ್ಪ ಪ್ರಯತ್ನ ಮಾಡಿದ್ದಾರೆ) ಹಾಗಾಗಿ ಬಾಳಿನಲ್ಲಿ ಅವುಗಳ ಬಳಕೆ ಕೂಡ ಆದಂತಿಲ್ಲ. ಬದಲಾಗಿ ಮೀಮಾಂಸೆಯು ಕಲಿಕೆಯ ವಿಷಯ–ಶಿಸ್ತು ಆಗಿ ಮಾತ್ರ ಬಳಕೆಯಾಗುತ್ತ ಬಂದಿದೆ. ಅದರಲ್ಲೂ ಪರೀಕ್ಷೆಗಾಗಿ ಓದುವ, ಓದಿಸುವ ಶಿಸ್ತಾಗಿ ಬಳಕೆಯಾಗುತ್ತ ಬಂದಿದೆ. ಅಲ್ಲದೆ ಈ ತತ್ವಲೋಕಕ್ಕೆ ಆಧುನಿಕ ಕಾಲದಲ್ಲೂ ಹೊಸ ಹೊಸ ತತ್ವಗಳು ಸೇರ್ಪಡೆಯಾಗುತ್ತ ಇದು ಮತ್ತಷ್ಟು ಹೊರೆ ಆಗುತ್ತ ಬರುತ್ತಿದೆಯೇ ವಿನಾ ನಮ್ಮ ಓದುವ ದಾರಿಗಳನ್ನು ಅದು ಸುಲಭ ಮಾಡುತ್ತಿಲ್ಲ. ಅಲ್ಲದೆ ನಮ್ಮ ಜನಸಾಮಾನ್ಯರು ಯಾರೂ ಇವುಗಳ ಬಗ್ಗೆ ತಲೆಕೆಡಿಸಿಕೊಳ್ಳುತ್ತಿಲ್ಲ. ನಮ್ಮ ಕಾವ್ಯತತ್ವಗಳು ಹೇಳಿರುವ ಓದಿನ ದಾರಿಗಳನ್ನು ನಾವಾದರೂ ಬಳಸುತ್ತಿದ್ದೇವೆಯೊ? ಬಳಸಲೇಬೇಕೋ? ಹಳೆಯದನ್ನು ಒಂದೋ ರೂಪಾಂತರಿಸಬೇಕು ಇಲ್ಲವೆ ಹೊಸದನ್ನು ಕಟ್ಟಬೇಕು. ಇಲ್ಲವಾದರೆ ಕೇವಲ ಚರಿತ್ರೆಯ ಹೊರೆಯನ್ನು ನಮ್ಮ ಜೀವನಕ್ಕೆ ಬೇಕಿಲ್ಲದ ಚರಿತ್ರೆಯ ಹೆಣವನ್ನು ವಿದ್ಯಾರ್ಥಿಗಳ ಹೆಗಲಮೇಲೆ ನಿತ್ಯ ಹೇರುವ ಕೆಲಸ ಆದೀತು, ಅಷ್ಟೆ.

ಈ ಕಾವ್ಯತತ್ವದ ಓದುಗ ಟಾರ್ಗೆಟ್; ಉದ್ದೇಶಿತ ಸಮುದಾಯ ಯಾವುದು ? ಇದು ಯಾರಿಗಾಗಿ ರಚನೆಯಾಗಿದೆ ? ಕಾವ್ಯವನ್ನು ರಚಿಸುವ ಮತ್ತು ಸಂಗೋಪನೆ ಮಾಡುವ ಕಿರು ಸಮುದಾಯಕ್ಕೆ ಮಾತ್ರ ಇದು ರಚನೆಯಾಗಿದೆ. ಹೀಗಾಗಿ ಇದರ ಒಳಗೊಳ್ಳುವ ವಲಯ ಅಥವಾ ಉದ್ದೇಶಿತ ವಲಯ ತುಂಬ ಕಿರಿದಾದದ್ದು. ವಚನಗಳನ್ನು, ತತ್ವಪದ–ಸ್ವರಪದಗಳನ್ನು, ಕೀರ್ತನೆಗಳನ್ನು ನಮ್ಮ ಜನಸಮುದಾಯಗಳು ತಮ್ಮ ಬಾಳಿನ ಭಾಗವನ್ನಾಗಿ ಮಾಡಿಕೊಂಡಂತೆ ಈ ಕಾವ್ಯತತ್ವಗಳನ್ನು ತಮ್ಮ ಬಾಳಿನ ಭಾಗ ಮಾಡಿಕೊಂಡಿಲ್ಲ. ಇದಕ್ಕೆ ಆ ರೀತಿಯ ವ್ಯಾಪ್ತಿಯೂ ಇಲ್ಲ ಬಿಡಿ. ಕವಿಗಳು, ಗಮಕಿಗಳು, ವಾಗ್ಮಿ, ವಾದಿ, ಪಂಡಿತ, ವಿಮರ್ಶಕ, ಬುಧ, ಸುಜನ ಇತ್ಯಾದಿ ಸಾಹಿತ್ಯ ರಚನಾ ಮತ್ತು ಸಂಗೋಪನಾ ಸಮುದಾಯ ಏನಿದೆ ಅವರಿಗೆ ಹೇಳಿರುವ ನೀತಿ ನಿರ್ದೇಶಕ ತತ್ವಗಳಿವು. ಹಾಗಾಗಿ ಇವುಗಳ ಉದ್ದೇಶಿತ ಸಮುದಾಯ ಬಹಳ ಕಿರಿದು.

ನಮ್ಮ ಕಾವ್ಯತತ್ವವು ಕವಿ–ಕೃತಿ–ಓದುಗ–ಸಮಾಜ ಈ ನಾಲ್ಕರ ಚತುರ್ಮುಖ ಸಂಬಂಧಗಳ ಚರ್ಚೆಯನ್ನು ಪ್ರಧಾನವಾಗಿ ನಿರ್ವಹಿಸಿದೆ. ಕೃತಿಗೆ ಮುಂಚೆ, ಕೃತಿ ರಚನೆಯ ಸಂದರ್ಭ, ಕೃತಿ ರಚನೆಯ ನಂತರ ಹೀಗೆ ಮೂರು ಸಂದರ್ಭಗಳು ನಮ್ಮ ಕಾವ್ಯತತ್ವದಲ್ಲಿ ಚರ್ಚಿತವಾಗಿವೆ. ಇಲ್ಲಿ ಒಳಗೊಳ್ಳುವ ಅಥವಾ ಹೊರಗಿಡುವ ರಾಜಕಾರಣಗಳು ಯಾವ ಸಂಗತಿಗಳ ಮೇಲೆ ಅವಲಂಬಿಸಿವೆ? ಒಳಗೊಳ್ಳುವ ಕಾಳಜಿ ಎಂದಾಗ ಯಾವ ಸಂಗತಿಗಳನ್ನು ಕಾವ್ಯತತ್ವದ ನೆಲೆಯಲ್ಲಿ ಚರ್ಚೆಗೆ ಎತ್ತಿಕೊಳ್ಳಬಹುದು?

೧. ಲಿಂಗ ೨. ಭಾಷೆ–ಕಾವ್ಯಪದ್ಧತಿಗಳು ೩. ಜಾತಿ–ಧರ್ಮ ೪. ಕಾವ್ಯ ಪರಿಕರಗಳು ೫. ಸಾಹಿತ್ಯಪ್ರಕಾರಗಳು ೬. ಪ್ರಾದೇಶಿಕತೆ–ನಗರ–ಗ್ರಾಮ ೭. ಶಿಕ್ಷಿತ

ಅಶಿಕ್ಷಿತ ಎಂಬ ಭೇದ ಇತ್ಯಾದಿ ಕೆಲವು ಮುಖ್ಯವಾದ ವಲಯಗಳನ್ನು ಎತ್ತಿಕೊಳ್ಳಬಹುದು ಎನ್ನಿಸುತ್ತದೆ.

ಲಿಂಗದ ದೃಷ್ಟಿಯಿಂದ ನಮ್ಮ ಕಾವ್ಯಚರಿತ್ರೆಯನ್ನು ನೋಡಿದರೆ ಕವಿಗಳ ನೆಲೆಯಲ್ಲಿ, ಓದುಗರ ನೆಲೆಯಲ್ಲಿ ಹೀಗೆ ಎರಡೂ ನೆಲೆಯಲ್ಲಿ ಮಹಿಳೆಗೆ ಪ್ರಾತಿನಿಧ್ಯ ತುಂಬ ಕಡಿಮೆ. ಒಬ್ಬ ಅಕ್ಕಮಹಾದೇವಿ, ಒಬ್ಬ ಸಂಚಿಯ ಹೊನ್ನಮ್ಮ, ಒಬ್ಬ ಹರಪನಹಳ್ಳಿ ಭೀಮವ್ವರನ್ನು ಬಿಟ್ಟರೆ ಮಿಕ್ಕವರು ಬೆರಳೆಣಿಕೆಯಷ್ಟು ಮಾತ್ರ. ಇಡೀ ಸಾಹಿತ್ಯ ಚರಿತ್ರೆಯೆ ಪುರುಷಮಯ ಎಂಬಷ್ಟು ನಮ್ಮ ಪ್ರತಿಷ್ಠಿತ ಚರಿತ್ರೆ ನಿರ್ಮಾಣವಾಗಿದೆ. ಮಹಿಳಾ ಸಾಹಿತ್ಯ ಚರಿತ್ರೆ, ಜನಪದ ಸಾಹಿತ್ಯ ಚರಿತ್ರೆಗಳೆಲ್ಲ ಇನ್ನೂ ರಚನೆ ಆಗಬೇಕಾಗಿದೆ. ಈಗ ರಚನೆಯಾಗಿರುವ ಮಹಿಳಾ ಸಾಹಿತ್ಯ ಚರಿತ್ರೆ ಕೂಡ ಸಾಲದು. ನಮ್ಮ ಕನ್ನಡ ಕಾವ್ಯತತ್ವದಲ್ಲಿನ ಕವಿಗಳ, ಓದುಗರ ಕಲ್ಪನೆಯಲ್ಲಿ ಮಹಿಳೆ ಗೈರುಹಾಜರಾಗಿದ್ದಾಳೆ. ಇಡೀ ಕಾವ್ಯತತ್ವದ ಭಾಷೆ ಮತ್ತು ಪರಿಭಾಷೆ ಪೂರಾ ಪುರುಷಭಾಷೆಯೇ ಆಗಿದೆ. ಇಲ್ಲಿನ ಸುಜನ, ಸತ್ಕವಿ, ಕುಕವಿ, ಬುಧ, ನಾಣಿಲಿ ಹೀಗೆ ಯಾವುದೇ ನಾಮಪದ, ಗುಣಪದಗಳನ್ನು ತೆಗೆದುಕೊಂಡರೂ ಇಲ್ಲೆಲ್ಲ ಭಾಷೆ ಪರಿಭಾಷೆಗಳು ಪುರುಷಮುಖಿಯೆ ಆಗಿವೆ. ನಮ್ಮಲ್ಲಿ ಹುಡುಕಿದರೂ ಒಬ್ಬಳು ಶಾಸ್ತ್ರ ಕವಿ ಮಹಿಳೆಯರಲ್ಲಿ ಸಿಗುವುದಿಲ್ಲ. ಲಕ್ಷಣಗ್ರಂಥ ಬರೆದವಳು ಇಲ್ಲ. ಇಲ್ಲವೋ ಅಥವಾ ಇದ್ದೂ ದೊರಕಿಲ್ಲವೋ ? ದೊರಕದ ಹಾಗೆ ಮಾಡಲಾಗಿದೆಯೊ ? ಆ ಕ್ಷೇತ್ರ ಪ್ರವೇಶಿಸದಂತೆ ಮಾಡಲಾಗಿದೆಯೊ? ಹೆಣ್ಣುಗಳ ಸಾಹಿತ್ಯವನ್ನೆ ಹೊರಗಿಟ್ಟರೆ ಇನ್ನು ಮೀಮಾಂಸೆಯನ್ನು ಒಳಗೊಳ್ಳುವುದು ಹೇಗೆ?[೧*]

ಇನ್ನು ಸಂಸ್ಕೃತ ಕಾವ್ಯಮೀಮಾಂಸೆಗೆ ಕನ್ನಡ ಕವಿಗಳು ನೀಡಿರುವ ಕೊಡುಗೆಯನ್ನು ಕುರಿತು ನಮ್ಮ ವಿಮರ್ಶಕರು ಮಾತನಾಡುವಾಗ ಸರಸ್ವತಿ ರೂಪದ ಕಾವ್ಯಕಲ್ಪನೆ ಬಗೆಗೆ ಪ್ರಸ್ತಾಪಿಸಿದ್ದಾರೆ. ಇಲ್ಲೂ ಕೂಡ ವಿದ್ಯಾನಟಿ, ವಚೋವಧು, ಕಾವ್ಯನರ್ತಕಿ, ಕಾವ್ಯಕನ್ನಿಕೆ, ಕಾವ್ಯಕಾಂತೆ ಹೀಗೆ ಸ್ತ್ರೀ ರೂಪದಲ್ಲಿ ಕಾವ್ಯವನ್ನು ನಮ್ಮವರು ಕಲ್ಪಿಸಿಕೊಂಡಿರುವ ಕಲ್ಪನೆಗಳೆಲ್ಲವೂ ಹೆಣ್ಣನ್ನು ಗಂಡಿಗೆ ಅಧೀನಳಾಗಿ ಇರಿಸುವ ಕಲ್ಪನೆಗಳೆ ಆಗಿವೆ. ಒಟ್ಟಾರೆ ಸಮಾಜದ ಲಿಂಗತಾರತಮ್ಯವೆ ಕಾವ್ಯತತ್ವ–ಮೀಮಾಂಸೆಗಳಲ್ಲೂ ಪ್ರಕಟವಾಗಿದೆ ಎಂದೇ ಹೇಳಬೇಕು. ಸೋ, ಇಂತಹ ಕಡೆ ಒಳಗೊಳ್ಳುವುದು ಎಂದರೆ ಅಸಮಾನವಾಗಿ ಒಳಗೊಳ್ಳುವುದು ಎಂದೇ ಅರ್ಥ. ಸ್ಥಾನೀಕರಣದ ಪ್ರಶ್ನೆಗಳು ಇಲ್ಲಿ ಮುಖ್ಯವಾಗುತ್ತವೆ.

ಭಾಷಿಕ ದೃಷ್ಟಿಯಿಂದ ಯೋಚಿಸುವುದಾದರೆ 'ದೇಸೆ ಬೇರೆವೇರೆಯಪ್ಪುದರಿಂ ವಾಸುಗಿಯುಂ ಬೇಸರಿಸುಗುಂ' ಎಂದು ಶ್ರೀವಿಜಯ ಹೇಳಿರುವ ಹಾಗೆ ದೇಸಿ ಕಾವ್ಯಕ್ರಮಗಳು–ಪ್ರಾದೇಶಿಕ ಭಾಷಾಬಳಕೆಗಳನ್ನು ಆದಷ್ಟು ನಿಯಂತ್ರಿಸಿ ಒಂದು ಮಾನಕ ಕಾವ್ಯಭಾಷೆಯನ್ನು ರೂಪಿಸುವುದನ್ನೆ ಒಂದು ಮುಖ್ಯ ಸವಾಲನ್ನಾಗಿ ನಮ್ಮ ಲಕ್ಷಣ–ಕವಿಮಾರ್ಗ ಗ್ರಂಥಗಳು ಎದುರಿಸಿದಂತೆ ಕಾಣುತ್ತದೆ. ನಮ್ಮ ಆಚರಣೆಯಲ್ಲಿರುವ ಕಾವ್ಯತತ್ವವು ಆದಷ್ಟೂ ಸಂಸ್ಕೃತಭೂಯಿಷ್ಠವಾದ ಭಾಷೆಯನ್ನು ಕನ್ನಡ ಕಾವ್ಯಗಳಿಗೆ ರೂಢಿಸಿದೆ. (೧) ಕನ್ನಡದ ಪ್ರಾದೇಶಿಕ ಒಳಭೇದಗಳನ್ನು ಮತ್ತು (೨) ಭಿನ್ನ ಜನರ ವೃತ್ತಿಜೀವನದ ರೂಪಕ ಸಾಧ್ಯತೆಯನ್ನು ಹಾಗೂ (೩) ಜನಪದ ಸಾಹಿತ್ಯರೂಪಗಳ ಭಿನ್ನ ಭಿನ್ನ ಶೈಲಿಗಳನ್ನು ಹೊರಗೆ ಇಟ್ಟಿತು ಎಂಬುದು ಸ್ಪಷ್ಟವಾಗಿ ಕಾಣುತ್ತದೆ. ಬಹುರೂಪಿ ಚೌಡಯ್ಯ, ಅಂಬಿಗರ ಚೌಡಯ್ಯರು ತಮ್ಮ ವೃತ್ತಿ ಹಿನ್ನೆಲೆಯ ರೂಪಕ ಉಪಮೆಗಳನ್ನು ತಮ್ಮ ವಚನಗಳಲ್ಲಿ ಬಳಸಿಕೊಂಡಂತೆ ರನ್ನನಿಗೆ ತನ್ನ ಬಳೆಗಾರ ವೃತ್ತಿಯ ಉಪಮೆ ರೂಪಕಗಳನ್ನು ಬಳಸಲು ಆಗಲಿಲ್ಲ. ಯಾಕೆಂದರೆ ಆತ ಬಳೆಗಾರನಾಗಿ ಉಳಿದು ಕಾವ್ಯ ಬರೆಯದೆ ಜೈನನಾಗಿದ್ದ ಮತ್ತು ಆತ ನಂಬಿದ್ದ ಕಾವ್ಯತತ್ವವೆ 'ಬೇರೆ' ಆಗಿತ್ತು. ಅವನು ನಂಬಿದ ಕಾವ್ಯಪ್ರಮಾಣ ಬೇರೆಯೇ ಆಗಿತ್ತು. ಅವನ ಟಾರ್ಗೆಟ್ ಆಡಿಯನ್ಸ್–ರೀಡರ್ಸ್ ಕೂಡ ಬೇರೆಯೇ ಇದ್ದರು.

ಅದೇ ಬಳೆಗಾರ ಕುಲದ ಕೈವಾರ ನಾರಣಪ್ಪ ತನ್ನ ಗ್ರಾಮೀಣ ಜನರಿಗೆ ತೀರಾ ಹತ್ತಿರ ಇದ್ದದ್ದರಿಂದ ಆತನ ಕಾವ್ಯ ಸ್ವರೂಪವೇ ಬೇರೆ ಆಯಿತು. ಅವನ ಕಾವ್ಯ ದ್ವಿಭಾಷಾ ಪರಿಸರದಲ್ಲಿ ಸೃಷ್ಟಿ ಆದದ್ದರಿಂದ ತಾನೂ ದ್ವಿಭಾಷಿ ಆಯಿತು.




ನಮ್ಮ ವಚನಕಾರರು ತಮ್ಮ ಕಾವ್ಯತತ್ವಗಳಿಗೆ ವಚನ ಭಾಷೆ–ಶೈಲಿಗಳನ್ನು ರೂಢಿಸಿಕೊಂಡು ಜನರನ್ನು ಆದಷ್ಟು ಒಳಗೊಂಡರು. ಅನಂತರದಲ್ಲಿ ಕೀರ್ತನಕಾರರು, ತತ್ವಪದಕಾರರು, ಸ್ವರಪದಕಾರರು, ನಾಗಲಿಂಗ, ಶಿಶುನಾಳನಂತಹ ಸಂತರು ತಮ್ಮ ಕಾವ್ಯತತ್ವಗಳನ್ನು ರೂಪಿಸಿಕೊಳ್ಳಲು ಸಾಮಾನ್ಯ ಜನಪದರ ಹತ್ತಿರವೇ ಹೋದರು. ದೇಶ ತಿರುಗುತ್ತ ಜನರ ಅಭಿವ್ಯಕ್ತಿ ಕ್ರಮಗಳನ್ನು ತಮ್ಮ ಪದಗಳಿಗೆ ತೆಗೆದುಕೊಂಡರು ಮತ್ತು ಆ ಮೂಲಕ ಜನರನ್ನೂ ತಮ್ಮ ಕಾವ್ಯದೊಳಕ್ಕೆ ಒಳಗೊಂಡರು. ಆದರೆ ರನ್ನನಂಥವರು ಮಹಾಕಾವ್ಯ ಶೈಲಿಯನ್ನು ತಮ್ಮದನ್ನಾಗಿ ಮಾಡಿಕೊಳ್ಳಲು ಹವಣಿಸಿದರು ಮತ್ತು ಪಂಡಿತರ ಕಿರುಸಮುದಾಯವನ್ನು ಮಾತ್ರ ಒಳಗೊಂಡರು. ಇನ್ನು ಕನಕದಾಸ, ಹರಿಹರ, ಲಕ್ಷ್ಮೀಶ, ರತ್ನಾಕರವರ್ಣಿ ಇಂತಹವರು ಎರಡೂ ದೋಣಿಗಳಲ್ಲಿ ಕಾಲು ಇಡಲು ಯತ್ನಿಸಿದ್ದು ಈಗ ಇತಿಹಾಸ. ಹೀಗೆ ಹಲವು ರೀತಿಯ ಚಲನೆಗಳು ನಮ್ಮ ಕಾವ್ಯಪರಂಪರೆಗಳಲ್ಲಿ ಇರುವುದು ಕಾಣುತ್ತದೆ. ಇದನ್ನು ಸಾಮಾಜಿಕವಾಗಿ ಒಂದು ಸೂತ್ರದಲ್ಲಿ ವ್ಯಾಖ್ಯಾನ ಮಾಡಲು ಆಗುವುದಿಲ್ಲ. ನಮ್ಮ ಕಾವ್ಯಸಮಾಜ ಇರುವುದೇ ಹಾಗೆ– ಬಹುಮುಖಿಯಾಗಿ. ಆದಾಗ್ಯೂ ನಾವು ಕಟ್ಟಿಕೊಂಡಿರುವ ಮಹಾಕಾವ್ಯ ಪರಂಪರೆ ಏನಿದೆಯಲ್ಲ ಅದನ್ನು ನೋಡಿದರೆ ಅಲ್ಲಿ ಕಾವ್ಯರೂಪದ ಯಜಮಾನಿಕೆಯೆ ಎದ್ದು ಕಾಣುತ್ತದೆ. ಹಾಗಾಗಿಯೇ ಮೀಮಾಂಸೆಯೂ ಬರಿ ಕಾವ್ಯಮೀಮಾಂಸೆಯೇ ಆಗಿದೆ.

ನಮ್ಮ ಪ್ರಾಚೀನ ಸಾಹಿತ್ಯವನ್ನು ನೋಡಿದರೆ ಅಲ್ಲಿ ಕಾವ್ಯ, ಅದರಲ್ಲೂ ಮಹಾಕಾವ್ಯದ ಯಜಮಾನಿಕೆ ಎದ್ದು ಕಾಣುತ್ತದೆ. ಕಾವ್ಯ ಎಂದರೆ ಅದೇನೋ ಒಂದು ಶ್ರೇಷ್ಠವಾದ, ಪೂಜ್ಯಾರ್ಹವಾದ ಕೆಲಸ, ದೈವಾಯತವಾದ, ಋಷಿ ಸಮುದಾಯ ಮಾತ್ರ ರಚಿಸಬಹುದಾದ ಅದ್ಭುತವದು; ಅದು ಪ್ರಶ್ನಾತೀತವಾದುದು ಎಂಬ ನಂಬಿಕೆ ಚಾಲ್ತಿಯಲ್ಲಿದ್ದದ್ದು ಕಾಣುತ್ತದೆ. (ಆದರೆ ನಮ್ಮ ಜನಪದರಲ್ಲಿ ಹಾಗಲ್ಲ. ಅದು ಮುಕ್ತವಾದದ್ದು. ಯಾರು ಬೇಕಾದರೂ ಒಳಬರಬಹುದಾದ ರಚನೆಗಳವು. ಒಳಗೊಳ್ಳಬಹುದಾದ ರಚನೆಗಳವು.) ಯಾವುದೇ ವಸ್ತು ಆಗಿರಲಿ ಅಶ್ವಶಾಸ್ತ್ರ, ಗಜಶಾಸ್ತ್ರ, ಅಲಂಕಾರಶಾಸ್ತ್ರ, ನಿಘಂಟು, ಜೀವನಚರಿತ್ರೆ, ಸಂಪಾದನೆ, ಸೂಕ್ತಿಸಂಗ್ರಹ, ಟೀಕು–ಟಿಪ್ಪಣಿ–ಪಂಚಿಕೆ ಹೀಗೆ ಯಾವುದೇ ಕೆಲಸ ಆಗಿರಲಿ ಅದೆಲ್ಲವೂ ಕಾವ್ಯಪ್ರಕಾರದಲ್ಲೇ ರಚನೆಯಾಗಬೇಕು ಎಂಬ ನಂಬಿಕೆ ನಮ್ಮಲ್ಲಿ ಬಲವಾಗಿ ಆಚಾರದಲ್ಲಿ ಇದ್ದದ್ದು ಕಾಣುತ್ತದೆ. ಗದ್ಯ ಬರೆದರೂ ಅದು ಗದ್ಯಕಾವ್ಯವೆ ಆಗಿರಬೇಕು ! ವಡ್ಡಾರಾಧನೆಯು ಕಾವ್ಯವೆ, ಪಂಚತಂತ್ರವೂ ಕಾವ್ಯವೆ ! ಹೀಗಾಗಿ ನಮ್ಮಲ್ಲಿ ಪ್ರಕಾರ ದೃಷ್ಟಿಯಿಂದ ಇರುವುದು ಎರಡೇ ಪ್ರಕಾರ. ಒಂದು ಗದ್ಯ ಕಾವ್ಯ ಮತ್ತೊಂದು ಪದ್ಯ ಕಾವ್ಯ. ಎರಡೂ ಕಾವ್ಯದ ಪ್ರಭೇದಗಳೇ. ಅಲ್ಲಲ್ಲಿ ನಡೆದಿರುವ ಪ್ರಯೋಗಗಳು ಕೂಡ ವಚನ, ಸ್ವರವಚನ, ತತ್ವಪದ, ಸುಳಾದಿ – ಉಗಾಭೋಗ ಇತ್ಯಾದಿ ಸಮುದಾಯ ಕಾವ್ಯಗಳೂ ಕೂಡ ಕಾವ್ಯಗಳೇ. ಇವು ಮಹಾಕಾವ್ಯಗಳಲ್ಲ ಕಿರುಕಾವ್ಯಗಳು ಮಾತ್ರ. ಇನ್ನು ರಗಳೆಯ ಕವಿ ಹರಿಹರನಂತಹ ಹರಿಹರ ಚಂಪೂ ಕಾವ್ಯ, ಗಿರಿಜಾ ಕಲ್ಯಾಣ ಬರೆಯುವ ಒತ್ತಡಕ್ಕೆ ಯಾಕೆ ಒಳಗಾದ ? ಗದ್ಯದಲ್ಲಿ ಸುಂದರವಾದ ಜೀವನಚರಿತ್ರೆಗಳನ್ನು ಬರೆಯಬಹುದಾದ ಸಾಧ್ಯತೆಯನ್ನು ಬಿಟ್ಟುಕೊಟ್ಟು ರಗಳೆಯಂತಹ ಕಾವ್ಯಪ್ರಕಾರವನ್ನೆ ರೂಡಿಸಿಕೊಳ್ಳಬೇಕಾದ ಒತ್ತಡ ಅವನಿಗೆ ಏನಿತ್ತು ? ಅಂತೂ ನಮ್ಮಲ್ಲಿ ಕಾವ್ಯದ ಯಜಮಾನಿಕೆ ಇನ್ನಿಲ್ಲದಂತೆ ನಡೆದಿದೆ. ಇದರಿಂದ ಛಂದಸ್ಸನ್ನು ತಿಳಿಯದ ಕವಿಗಳು ಸಾಹಿತ್ಯ ರಚಿಸುವ ಕೆಲಸದಿಂದ ದೂರ ಉಳಿಯುವಂತೆ ಆದುದು ಮಾತ್ರ ನಿಜ. ಇದರಿಂದ ಇಡೀ ಸಮಾಜದಲ್ಲಿ ಬೇರೆ ರೀತಿಯ ಸಾಹಿತ್ಯವೆ ರಚನೆ ಆಗಲಿಲ್ಲ ಎಂದೇನೂ ಅಲ್ಲ. ಆ ಎಲ್ಲ 'ಬೇರೆ'ಯವುಗಳನ್ನು ಈ ಕಾವ್ಯಧಾರೆ ಒಳಗೊಳ್ಳದೆ ಹೊರಗಿಟ್ಟಿತು ಎಂಬುದು ಮಾತ್ರ ನಿಜ.[*೨]

**ಡಾ॥ ರಾಮಲಿಂಗಪ್ಪ. ಟಿ. ಬೇಗೂರು**
ನಂ. ೫೧/೫೨, 'ಸಾವಿತ್ರಿ ರೆಸಿಡೆನ್ಸಿ', ಬಿ–೩, ೧ನೇ ಅಡ್ಡರಸ್ತೆ, ಯಲ್ಲಪ್ಪ ಗಾರ್ಡನ್
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

**ಹೊ**ಸ ವರ್ಷದ ಶುಭಾಶಯಗಳು. ಚಳಿಗಾಲದ ಉಡುಗೊರೆಯಾಗಿ ಶುಭ್ರ ಆಕಾಶ ನಮಗೀಗ ದೊರಕಿದೆ. ನೆತ್ತಿಯಲ್ಲಿ ಕಾಣುವ ತ್ರಿಕೋಣವೇ ಮೇಷ; ಅದರ ಪಶ್ಚಿಮಕ್ಕೆ ಇರುವ ಚೌಕ ಪೆಗಸಸ್ – ನಕುಲ. ಪೂರ್ವಕ್ಕೆ ವೃಷಭ. ರೋಹಿಣಿಯ ಸುತ್ತಲಿನ ಹೈಯಡೆಸ್ ಗುಚ್ಛ. ಏಳುನಕ್ಷತ್ರಗಳು ಒತ್ತಟ್ಟಿಗೆ ಅಂಟಿಕೊಂಡಂತೆ ಕಾಣುವ ಕೃತ್ತಿಕಾ ಅಥವಾ ಪ್ಲೆಯಡಿಸ್. ಇದರ ಉತ್ತರಕ್ಕಿರುವ ಪಂಚಕೋಣಾ ಕೃತಿಯೇ ಆರಿಗಾ ಅಥವಾ ವಿಜಯ ಸಾರಥಿ. ಅದರ ಪಕ್ಕದ ಪಾರ್ಥ (ಪರ್ಸಿಯಸ್) ಇನ್ನೂ ಉತ್ತರಕ್ಕೆ ಕುಂತಿ (ಕೆಸಿಯೋಪಿಯಾ) ಇವುಗಳನ್ನು ಗುರುತಿಸಬಹುದು. ನೈಋತ್ಯ ದಿಕ್ಕಿನಲ್ಲಿ ಬಕ ಪುಂಜದ ಎರಡು ನಕ್ಷತ್ರಗಳು ಮಾತ್ರ ಕಾಣಬಹುದು. ನೈಋತ್ಯದ ಅಂಚಿನಲ್ಲಿ ವೈತರಣೀಮುಖ ನಕ್ಷತ್ರ ಆಗ್ನೇಯದಲ್ಲಿ ಅಗಸ್ತ್ಯ ಪ್ರಕಾಶಮಾನವಾದ ನಕ್ಷತ್ರಗಳು.

ಕಳೆದ ತಿಂಗಳು ಸಂಜೆಯ ಆಕಾಶದಲ್ಲಿ ಬೆಳಗುತ್ತಿದ್ದ ಶುಕ್ರ ಮೊದಲ ವಾರ ಮಾತ್ರ ನೋಡಲು ಸಿಗಬಹುದಷ್ಟೇ. ೧೧ರಂದು ಯುತಿ ಅಂದರೆ ಸೂರ್ಯನ ಜೊತೆ ಗೂಡುತ್ತದೆ. ಆ ಮುಂದೆ ಬೆಳಗಿನ ಆಕಾಶಕ್ಕೆ ಜಾರುತ್ತದೆ. ತಿಂಗಳ ಕೊನೆಗೆ ಬೆಳಗಿನ ಜಾವ ಸೂರ್ಯೋದಯಕ್ಕೆ ಮುಂಚೆ ದಿಗಂತದ ಅಂಚಿನಲ್ಲಿ ಕಾಣುತ್ತದೆ.

ಸಂಜೆಯ ಆಕಾಶದಲ್ಲಿ ಶುಕ್ರ ಇಲ್ಲದ ಕೊರತೆಯನ್ನು ಪೂರೈಸಲೋ ಎಂಬಂತೆ ಪೂರ್ವದಲ್ಲಿ ಇನ್ನೊಂದು ಪ್ರಕಾಶಮಾನ ಚುಕ್ಕೆ ಕಾಣಿಸಿಕೊಳ್ಳುತ್ತದೆ. ಇದೇ ಗುರು ಗ್ರಹ. ೫ ರಂದು ಇದರ ವಿಯುತಿ. ಅಂದರೆ ಸೂರ್ಯಾಸ್ತವಾಗುವಾಗ ಇದರ ಉದಯ; ರಾತ್ರಿ ಇಡೀ ನೋಡಲು ಸಿಗುತ್ತದೆ. ದೂರದರ್ಶಕ ಇರುವವರು ಅದರ




# ಚಾಂದ್ರಮಾನದ ಆರಂಭ

ಮೇಲ್ಮೈನ ಕೆಂಪು ಮಚ್ಚೆಯನ್ನು ಹುಡುಕಬಹುದು. ವಿಯುತಿಯ ಕಾರಣ ಭೂಮಿ–ಗುರು ಗ್ರಹಗಳ ಅಂತರ ಕನಿಷ್ಠ; ಅಂದರೆ ಅದರ ಪ್ರಕಾಶ ಗರಿಷ್ಠ.

ಪೂರ್ವದ ಆಕಾಶದಲ್ಲಿ ಗುರುಗ್ರಹವಲ್ಲದೆ ಇತರ ಪ್ರಕಾಶಮಾನ ನಕ್ಷತ್ರ ಪುಂಜಗಳಿವೆ. ಗುರುಗ್ರಹ ಇರುವುದೇ ಮಿಥುನರಾಶಿಯ ಆಯತಾಕಾರದ ಚೌಕಟ್ಟಿನಲ್ಲಿ. ಅದರ ದಕ್ಷಿಣಕ್ಕೆ ಒರೈಯನ್ – ಮಹಾವ್ಯಾಧ. ಇನ್ನೂ ದಕ್ಷಿಣಕ್ಕೆ ಸಿರಿಯಸ್ – ಲುಬ್ಧಕ ಮತ್ತು ಕೆನೋಪಸ್ – ಅಗಸ್ತ್ಯ.

ಚಾಂದ್ರಮಾನದ ತಿಂಗಳು ಆರಂಭವಾಗುವುದೇ ಅಮಾವಾಸ್ಯೆಯಿಂದ. ಈ ತಿಂಗಳೂ ಹಾಗೆಯೇ ಆಗಿದೆ. ೧ನೇ ತಾರೀಖು ಅಮಾವಾಸ್ಯೆಯೇ ಆಗಿದೆ. ೧೬ಕ್ಕೆ ಹುಣ್ಣಿಮೆ; ಪುನಃ ೩೧ಕ್ಕೆ ಅಮಾವಾಸ್ಯೆ. ಹಾಗಾಗಿ ಮುಂದಿನ ತಿಂಗಳಿನಿಂದ ಈ ಲೆಕ್ಕ ತಾರೀಖಿನೊಂದಿಗೆ ತಾಳೆಯಾಗುವುದಿಲ್ಲ. ಈ ಹುಣ್ಣಿಮೆ ಅಮಾವಾಸ್ಯೆಗಳಲ್ಲಿ ವಿಶೇಷವೊಂದಿದೆ. ೧ನೇ ತಾರೀಖು ಅಮಾವಾಸ್ಯೆ ಆದ ೧೦ ಗಂಟೆಯನಂತರ ಚಂದ್ರ ಪುರಭೂ ಬಿಂದುವಿನಲ್ಲಿ ಇರುತ್ತದೆ. ಅಂದರೆ ಭೂಮಿಗೆ ಕನಿಷ್ಠ ದೂರದಲ್ಲಿರುತ್ತದೆ. ಭರತ–ಇಳಿತಗಳು ಎಂದಿಗಿಂತ ಜೋರು ಎಂದು ಊಹಿಸಬಹುದು. ೧೬ರಂದು ಹುಣ್ಣಿಮೆಯಾದ ೫ ಗಂಟೆಗಳ ನಂತರ ಚಂದ್ರ ಅಪಭೂ ಬಿಂದುವಿನಲ್ಲಿರುತ್ತದೆ. ಅಂದರೆ ಭೂಮಿಯಿಂದ ಗರಿಷ್ಠ ದೂರದಲ್ಲಿರುತ್ತದೆ. ಭರತ–ಇಳಿತಗಳು ಬಹಳ ಕಡಿಮೆ ಪ್ರಮಾಣದ್ದು. ಪುನಃ ೩೧ರಂದು ಪುರಭೂಗೆ ಚಂದ್ರ ಬಂದ ಹತ್ತು ಗಂಟೆಗಳ ನಂತರ ಅಮಾವಾಸ್ಯೆ. ಆದ್ದರಿಂದ ಪುನಃ ಭರತ ಗರಿಷ್ಠ ಮುಟ್ಟುತ್ತದೆ. ತಿಂಗಳುದ್ದಕ್ಕೂ ಭರತದ ಪ್ರಮಾಣವನ್ನು ಗುರುತಿಸಿಕೊಂಡಲ್ಲಿ ಈ ಸೂಕ್ಷ್ಮ ವ್ಯತ್ಯಾಸವನ್ನು ಗಮನಿಸಬಹುದು.

**23ರಂದು ಮಂಗಳ ಚಂದ್ರ ಜೋಡಿ**

ಐಸನ್ ಧೂಮಕೇತುವಿನ ಕಣಗಳು ಅದರ ಕಕ್ಷೆಯುದ್ದಕ್ಕೂ ಹರಡಿಕೊಂಡಿವೆ. ಭೂಮಿ ಈ ತಿಂಗಳ ೧೨ರಂದು ಕಕ್ಷೆಯ ಸಮೀಪವೇ ಹಾದುಹೋಗಲಿದೆ. ಆದ್ದರಿಂದ ಉಲ್ಕೆಗಳಾಗಿ ಈ ಕಣಗಳು ಭೂಮಿಯ ವಾತಾವರಣವನ್ನು ಪ್ರವೇಶಿಸುವ ಸಾಧ್ಯತೆ ಇದೆ. ಅಂದರೆ ಉಲ್ಕೆಗಳು ಹೆಚ್ಚಾಗಿ ಕಾಣಬಹುದು.

೨೫ರಂದು ಚಂದ್ರ ಶನಿಗ್ರಹವನ್ನು ಮರೆ ಮಾಡುವ ಆಚ್ಛಾದನೆ ನಡೆಯಲಿದೆ. ಆದರೆ ಅದು ನಮಗೆ ಅನುಕೂಲಕರವಾಗಿಲ್ಲ. ಅಂದು ಬೆಳಗಿನ ಜಾವ ಚಂದ್ರ ಶನಿಯ ಸಮೀಪ ಕಾಣುವುದು.

ಮಂಗಳ ಗ್ರಹ ಬೆಳಗಿನ ಜಾವ ಕಾಣುವುದು. ೨೮ರಂದು ಚಿತ್ರಾ ನಕ್ಷತ್ರವನ್ನು ಹಾದು ಹೋಗುವುದು. ಪ್ರಕಾಶಮಾನವಾದ ನಕ್ಷತ್ರಗಳು ಹೆಚ್ಚಾಗಿ ಇಲ್ಲದ ಕನ್ಯಾರಾಶಿಯಲ್ಲಿ ನೀಲಿ ನಕ್ಷತ್ರವನ್ನು, ಕೆಂಪು ಮಂಗಳವನ್ನು ಸ್ಪಷ್ಟವಾಗಿ ಗುರುತಿಸಬಹುದು.

ತಿಂಗಳ ಕೊನೆಗೆ ಸಂಜೆ ಬುಧ ಗ್ರಹ ಗರಿಷ್ಠ ಎತ್ತರದಲ್ಲಿ ಕಾಣುವುದು. ಆಕಾಶ ಶುಭ್ರವಾಗಿರುವುದರಿಂದ ಗುರುತಿಸುವ ಪ್ರಯತ್ನ ಮಾಡಬಹುದು.

**ಡಾ॥ ಬಿ. ಎಸ್. ಶೈಲಜಾ**

ತನ್ನ ಕಕ್ಷೆಯಲ್ಲಿ ಮುಖ್ಯ ಹಂತವೊಂದನ್ನು ಭೂಮಿ ದಾಟುವ ಘಟನೆ ೪ರಂದು ನಡೆಯಲಿದೆ. ಭೂಮಿ ಪುರರವಿಯನ್ನು ಹಾದು ಹೋಗುತ್ತದೆ. ಅಂದರೆ ಭೂಮಿ – ಸೂರ್ಯರ ನಡುವಿನ ಅಂತರ ಕನಿಷ್ಠ – ೧,೪೭,೦೦,೦೦೦ ಕಿ. ಮೀ. ಹರಡಿಕೊಂಡಿವೆ.

**ಖಗೋಳ ದಿನಚರಿ :** ಜನವರಿ

೧ ಅಮಾವಾಸ್ಯೆ ೧೬:೩೪ಕ್ಕೆ

೨ ಚಂದ್ರ ಪುರಭೂ ಬಿಂದುವಿನಲ್ಲಿ ೦೨:೩೦ಕ್ಕೆ ಚಂದ್ರ – ಶುಕ್ರ ೨ ಡಿಗ್ರಿ ಅಂತರದಲ್ಲಿ

೪ ಪುರರವಿಯಲ್ಲಿ ಭೂಮಿ; ಭೂಮಿ – ಸೂರ್ಯರ ಅಂತರ ಕನಿಷ್ಠ

೫ ಗುರುಗ್ರಹ ವಿಯುತಿ* (ಸೂರ್ಯಾಸ್ತವಾಗುವಾಗ ಗುರು ಉದಯ)

೭ ಬುಧ – ಶುಕ್ರ ೬ ಡಿಗ್ರಿ ಅಂತರದಲ್ಲಿ

೮ ಚಾಂದ್ರಮಾಸದ ಮೊದಲ ಪಾದ

೧೧ ಶುಕ್ರಗ್ರಹದ ಯುತಿ (ಸೂರ್ಯನೊಡನೆ ಉದಯ ಮತ್ತು ಅಸ್ತಮಾನ)

೧೫ ಗುರು – ಚಂದ್ರ ೭ ಡಿಗ್ರಿ ಅಂತರದಲ್ಲಿ *

೧೬ ಚಂದ್ರ ಅಪಭೂ ಬಿಂದುವಿನಲ್ಲಿ ೧೬:೭೫ಕ್ಕೆ

೧೬ ಹುಣ್ಣಿಮೆ ೧೦:೨೨ಕ್ಕೆ

೨೩ ಮಂಗಳ – ಚಂದ್ರ ೫ ಡಿಗ್ರಿ ಅಂತರದಲ್ಲಿ *

೨೪ ಚಾಂದ್ರಮಾಸದ ಕೊನೆಯ ಪಾದ

೨೫ ಶನಿ –ಚಂದ್ರ ೫ ಡಿಗ್ರಿ ಅಂತರದಲ್ಲಿ (ಆಚ್ಛಾದನೆ ಕಾಣುವುದಿಲ್ಲ)*

೨೮ ಚಿತ್ರಾ – ಮಂಗಳ ನಡುವೆ ಕನಿಷ್ಠ ಕೋನ (೪ ಡಿಗ್ರಿ)*

೨೯ ಶುಕ್ರ – ಚಂದ್ರ ನಡುವೆ ೩ ಡಿಗ್ರಿ

೩೦ ಚಂದ್ರ ಪುರಭೂ ಬಿಂದುವಿನಲ್ಲಿ ೧೬:೨೫ಕ್ಕೆ

೩೧ ಅಮಾವಾಸ್ಯೆ ೦೩:೯ಕ್ಕೆ
ಬುಧಗ್ರಹದ ಗರಿಷ್ಠ ಕೋನೋನ್ನತಿ*

(*ಛಾಯಾಗ್ರಹಣಕ್ಕೆ ಸದವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧




# ಸಂಕ್ರಮಣ

**ಪಾಡು**

ಮಾಸಕೊಮ್ಮೆ ಮಾಸದಂಥ ಹಾಸಭಾಸ ಪೃಥಿವಿಗೆ
ರಾಶಿಯಿಂದ ರಾಶಿಯೆಡೆಗೆ ಹೊರಟ ಸೂರ್ಯ ಮೈತ್ರಿಗೆ.
ತನ್ನ ಅಕ್ಷದೊಡನೆ ಸುತ್ತಿ ಭೂಮಿ ಸೂರ್ಯನತ್ತಲು
ಹಗಲು – ಇರುಳು ಅದೇ ಕಾರ್ಯ, ಅದೇ ಬೆಳಕು – ಕತ್ತಲು.

ಮಾರ್ಗಶೀರ್ಷ ಮಾರ್ಗದಲ್ಲಿ ಮೈಲುಗಲ್ಲು ದಾಟಿತು
ಪೌಷ್ಯದ ಹೊಸ ವೇಷದಲ್ಲಿ ಬೇರೆ ತಿರುವು ಮೀಟಿತು.
ವಿಷುವದಿಂದ ದೂರ ದೂರ ದಕ್ಷಿಣಕ್ಕೆ ಅಯನವು,
ಸುಕರವಾಗಿ ಮಕರದೆಡೆಗೆ ಹೊರಳೆ ದೇವನಯನವು.

ಇಳೆಯು ತಲೆಯ ಬಾಗಿಸುತ್ತ ಬಂತು ರವಿಯ ಕೆಲದಲಿ
ಒಲಿದು ಒಲಿಯೆ ಬೇರೆ ಹೊಳಪು, ಬೇರೆ ಭಾವ ನೆಲದಲಿ.
ದಾಕ್ಷಿಣ್ಯದ ಮೂಕ ಪ್ರಶ್ನೆ ಉತ್ತರಕ್ಕೆ ಕಾಡಿತು :
ಉತ್ತರಾಯಣಕ್ಕೆ ತಿರುಗಿ ಸಂಕ್ರಮಣವೆ ಮೂಡಿತು.



**ಹಾಡು**

ಎಳ್ಳೀಗೆ ಎಣ್ಣೀಗೆ, ಮಿಂಚುವ ಕಣ್ಣೀಗೆ
ಹಂಚುವ ಬೆಲ್ಲದ ಕಣ್ಣಿಯಿದೆ;
ಮಿರಿಮಿರಿ ಮಿಂಚುವ ಸೀರೆಯು ಕುಪ್ಪಸ
ತರತರದೊಡವೆಯ ಬಣ್ಣವಿದೆ,
ಎಳೆಯರು ಗೆಳೆಯರು ಕುಲುಕುಲು ನಗುವರು
ಕಲಕಲ ಹಚ್ಚಿದ ಹೆಂಗಸರು;
ಹಳಬರು ಹೊಸಬರು, ಮಕ್ಕಳು ಮರಿಗಳು
ಚಕ್ಕಂದವಾಡುತ ಕುಳಿತಿಹರು.

**ಹೆಂಗಸರು**

ಹಳ್ಳೀಗೆ ದಿಳ್ಳೀಗೆ ಬಳ್ಳಿಬಳ್ಳಿಯಾಗಿ
ನೇಹದ ನಂಟನು ಸುರಿದವರು,
ಹಸುರೀಗೆ ಕುಸುರೀಗೆ, ಹಲವಾರು ಹೆಸರೀಗೆ
ಪ್ರೀತಿಯ ಮಳೆಯನು ಕರೆದವರು.
ಎಳ್ಳು–ಬೆಲ್ಲಾ ಕೊಳ್ಳಿ, ಒಳ್ಳೊಳ್ಳೆ ಮಾತಾಡಿ
ಸುಳ್ಳೀಗೆ – ಸೊಟರೀಗೆ ಕಿವಿಗೊಡದೆ,
ಕಳ್ಳು – ಬಳ್ಳೀಗೊಗೆದ ಹೂವಾಗಿ ಬಾಳೋಣ
ಜಳ್ಳನು ಗಾಳೀಗೆ ತೂರೋಣ.

**ಗಂಡಸರು**

ತಮಿಳಿನ ಪೊಂಗಲ ನಾಡೀಗೆ ಮಂಗಲ
ಹಾಲು ಬೆಲ್ಲದಕ್ಕಿ ಪಾಯಸವು,
ಸಕ್ಕದವಾದರು ಸಂಕ್ರಾಂತಿ ಕನ್ನಡ –
ಹತ್ತು ದಿನ ನಸಿ ನಡಿಗೆ ಹೊಸ ರುಚಿಯು.
ಬಾಲ್ಯದ ಚಿಗುಳೀಯ, ಹರೆಯದ ಮರೆಯದ
ಒನಪು ಒಯ್ಯಾರದ ಸಂಗತಿಯ
ನೆನೆಯುತ ನಲಿಯೋಣ, ಹೊಸತನು ಕಲಿಯೋಣ
ಸಂಸಾರದೊಗಟನ್ನು ಒಡೆಯೋಣ.

**ಚೆನ್ನವೀರ ಕಣವಿ**
'ಚೆಂಬೆಳಕು', ಕಲ್ಯಾಣನಗರ, ಧಾರವಾಡ – ೫೮೦ ೦೦೭




## HIGH PERFORMANCE

## FX greenblock® & FX greencarbon®

## with EPC™ Technology

**(Enhanced Physisorption & Chemisorption)**



**FILTREX** has pioneered effective ways to surface modify and imperegnate carbon with functonal groups for chemisorption and yet retaining all the basic inherent physisorption capacity of the carbon.

We have developed various EPC (Enhanced Physisorption and Chemisorpton) carbons to increase the performance of **FX® greencarbon®** and **FX® greenblock®** to remove difficult contaminants and also to increase the total adsorption capacity of common contaminants.

***We customize EPC™ carbon to remove specific contaminates in your liquid and gases steam***

*Offers Industries Leading Performances For :*

- **VOC**
- **HEAVY METALS**
- **CHLORAMINES**
- **FLUORIDES**
- **NITRATES**
- **BIOSTATIC**

**GAC & Carbon Blocks Certified By**








*Write to us for details :*

**FILTREX TECHNOLOGIES PVT. LTD :**
**email : vgaur@filtrex.co.in**
**or : info@filtrextechnologies.com**
**http://www.filtrextechnologies.com**



***- BRAND INSIDE THE BRANDS***

# ನಿಧಿಶೋಧದ ಕನಸುಗಳು ಮತ್ತು ವಾಸ್ತವ

ತಿರುವನಂತಪುರದ ಅನಂತಪದ್ಮನಾಭ ದೇವಾಲಯದ ನೆಲಮಾಳಿಗೆಯಲ್ಲಿ ದೇವರಿಗೆ ಅರ್ಪಿತವಾದ ಆಭರಣ, ಹಣ ಇತ್ಯಾದಿ ಬೆಲೆ ಬಾಳುವ ವಸ್ತುಗಳು ಶೇಖರವಾಗಿರುವಂತೆಯೇ ಯಾವುದೇ ಶ್ರೀಮಂತ ದೇವಾಲಯದಲ್ಲಿ ಅಂತಹ ವ್ಯವಸ್ಥೆ ಇದ್ದರೆ ಆಶ್ಚರ್ಯಪಡಬೇಕಾಗಿಲ್ಲ. ಅದು ಅಚ್ಚರಿಯ ವಿಷಯವೂ ಅಲ್ಲ. ಅದು ನಿಧಿಯ ವರ್ಗಕ್ಕೆ ಸೇರುವುದಿಲ್ಲ. ಅಕಸ್ಮಾತ್ತಾಗಿ ನಿಧಿ ಎನ್ನುವುದಿದ್ದರೆ ಅದು ಅಕಸ್ಮಾತ್ತಾಗಿ ಗೋಚರಿಸಬೇಕಷ್ಟೆ ಹೊರತು, ಜ್ಯೋತಿಷಿಗಳ ಭವಿಷ್ಯವಾಣಿಯಿಂದ ತಿಳಿಯುವಂತಹುದಲ್ಲ. ಯಾರ ಕನಸಿನಲ್ಲೂ ಅವು ಗೋಚರಿಸುವುದಿಲ್ಲ. ಅಕಸ್ಮಾತ್ ಕನಸಿನಲ್ಲಿ ನಿಧಿ ಇರುವಂತೆ ಕಂಡರೆ, ಅದರ ಅರ್ಥ ಬೇರೆಯೇ ಇರುತ್ತದೆ. ಕನಸುಗಳನ್ನು ಅರ್ಥೈಸಬಲ್ಲ ತಜ್ಞರು ಆ ಒಗಟನ್ನು ಬಿಡಿಸಬಲ್ಲರು.

**ಡಾ॥ ಎಚ್. ಎಸ್. ಗೋಪಾಲ ರಾವ್**

**ಕೊ**ಪ್ಪಳ ಜಿಲ್ಲೆಯ ಕಾರಟಗಿಯ ಬಳಿ ತೊರೆಯೊಂದರಲ್ಲಿ ಮರಳು ತೆಗೆಯುತ್ತಿದ್ದಾಗ ೩೬೯ ಚಿನ್ನದ ನಾಣ್ಯಗಳಿದ್ದ ಮಡಕೆಯೊಂದು ದೊರೆತ ವಿಷಯವು ೭–೧೦–೨೦೧೩ರ ಬಹುತೇಕ ಪತ್ರಿಕೆಗಳಲ್ಲಿ ವರದಿಯಾಯಿತು. ಅದನ್ನು ಅನುಸರಿಸಿ, ೯–೧೦–೨೦೧೩ರಂದು ಒಂದು ಖಾಸಗಿ ದೂರದರ್ಶನ ಕೇಂದ್ರವು ಚರ್ಚೆಯನ್ನು ನಡೆಸಿ ಮತ್ತಷ್ಟು ಕುತೂಹಲ ಹೆಚ್ಚಿಸಿತು. ೬–೧೦–೨೦೧೩ರಂದು ಒಂದು ಪತ್ರಿಕೆಯು ನಿಧಿಯ ಆಸೆಗೆ ಚಿಕ್ಕಮಗಳೂರಿನ ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ದೇವರಮನೆಯ ಕಾಲಭೈರವೇಶ್ವರ ದೇವಾಲಯದ ಎದುರಿನ ಬ್ರಹ್ಮ ದೇವಾಲಯದಲ್ಲಿ ಗುಂಡಿ ತೋಡಿದ ಘಟನೆಯ ಬಗ್ಗೆ ವರದಿ ಮಾಡಿತು. ಇದಕ್ಕೂ ಮೊದಲು ಕಳೆದ ತಿಂಗಳು ಉತ್ತರ ಪ್ರದೇಶದ ಗ್ರಾಮವೊಂದರ ಕೋಟೆಯ ಬಳಿ ಚಿನ್ನ ಇದೆ ಎಂಬ ಕನಸಿನ ಬೆನ್ನು ಹತ್ತಿ ಕೇಂದ್ರ ಪುರಾತತ್ವ ಇಲಾಖೆಯೇ ಉತ್ಖನನ ಕಾರ್ಯ ಕೈಗೊಂಡು ಕೆಲವು ದಿನಗಳ ನಂತರ ನಿರಾಶೆಯಿಂದ ಉತ್ಖನನವನ್ನು ಸ್ಥಗಿತಗೊಳಿಸಿದ ವಿಷಯವೂ ವರದಿಯಾಗಿದೆ. ಕೆಲವು ತಿಂಗಳುಗಳ ಹಿಂದೆ ತಿರುವನಂತಪುರದ ಅನಂತಪದ್ಮನಾಭ ದೇವಾಲಯದ ನೆಲಮಾಳಿಗೆಯ ಕೆಲವು ಕೋಣೆಗಳಲ್ಲಿ ಅಪಾರ ಪ್ರಮಾಣದ ಬೆಲೆ ಬಾಳುವ ಆಭರಣಗಳು ಮತ್ತು ಪುರಾತನ ನಾಣ್ಯಗಳು ಇದ್ದ ವಿಷಯವನ್ನು ಮಾಧ್ಯಮಗಳು ಬೆಳಕಿಗೆ ತಂದಿದ್ದವು. ತರ್ಕಕ್ಕೆ ಸಿಗದ ಇಂತಹ ವಿಚಾರಗಳನ್ನು ಆಸಕ್ತಿಯಿಂದ ಓದಿ/ ನೋಡಿ ಖುಷಿ ಪಡುವವರು ಎಲ್ಲ ಕಾಲದಲ್ಲೂ ಇರುತ್ತಾರೆ. ಎಲ್ಲಾದರೂ ಯಾರಿಗಾದರೂ ಖಚಿತವಾಗಿ ಮಣ/ಕೊಪ್ಪರಿಗೆಗಟ್ಟಲೆ ನಿಧಿ ಸಿಕ್ಕಿದೆಯೇ ಎಂಬ ಪ್ರಶ್ನೆಗೆ ಹೌದು ಎಂದು ಉತ್ತರ ಕೊಟ್ಟವರನ್ನು ನಾನು ಈವರೆಗೂ ಕಂಡಿಲ್ಲ. ಮಡಕೆ / ಕುಡಿಕೆ / ಚೆಂಬು / ಬಿಂದಿಗೆ ಇತ್ಯಾದಿ ಸಣ್ಣ ಗಾತ್ರದ ಪಾತ್ರೆಗಳಲ್ಲಿ ನಾಣ್ಯ / ಆಭರಣಗಳು ದೊರೆತಿರುವ ಅಪರೂಪದ ಪ್ರಸಂಗಗಳು ತಿಳಿದಿವೆ.

ನಿಧಿಯ ಬಗೆಗಿನ ಕುತೂಹಲ, ನಿರೀಕ್ಷೆ ಮತ್ತು ಹೇಳಿಕೆಗಳು ಹೊಸವೇನಲ್ಲ. ಈ ಹೇಳಿಕೆಗಳಲ್ಲಿ ಹುರುಳಿಲ್ಲ ಎನ್ನುವುದೂ ಹಳೆಯ ಮತ್ತು ಖಚಿತವಾದ ಮಾತು. ಆದರೂ ಹೇಳಿಕೆಗಳು ಮತ್ತು ಹುಡುಕಾಟಗಳು ನಿಂತಿಲ್ಲ. ಪುರಾತತ್ವ ವಿಚಾರಗಳ ಬಗ್ಗೆ ಸ್ವಲ್ಪ ಮಟ್ಟಿನ ತಿಳಿವಳಿಕೆ ಇರುವವರಿಗೂ ನಿಧಿಯ ಕನಸು ಬೀಳುವುದಿಲ್ಲ. ಆದರೆ ನಿಧಿಗೆ ಸಂಬಂಧಿಸಿದಂತೆ ಕತೆಗಳು ಕಿವಿಗೆ ಬೀಳುತ್ತಲೇ ಇರುತ್ತವೆ. ಭೂಮಿಯಲ್ಲಿ ಮಾತ್ರವಲ್ಲದೆ, ಹಳೆಯ ಕಟ್ಟಡಗಳ ಗೂಡು, ಗೋಡೆಗಳಲ್ಲಿ ನಾಣ್ಯ ಅಥವಾ ಆಭರಣಗಳು ತುಂಬಿದ್ದ ಚೆಂಬು / ಮಡಕೆ / ಕುಡಿಕೆಗಳು ಸಿಕ್ಕಿರುವುದನ್ನು ಅಲ್ಲಗಳೆಯಲಾಗುವುದಿಲ್ಲ. ಅಂತಹ ಮಡಕೆ/ಕುಡಿಕೆಗಳಲ್ಲಿ ತಾಮ್ರ ಶಾಸನಗಳನ್ನು ರಕ್ಷಿಸಿ ಇಟ್ಟಿದ್ದುದೂ ಪತ್ತೆಯಾಗಿದೆ. ಆದರೆ ಇವು ಯಾವುವೂ ನಿಧಿಯ ವರ್ಗಕ್ಕೆ ಸೇರುವುದಿಲ್ಲ. 'ನಿಧಿ' ಎಂದರೆ ಹುದುಗಿಟ್ಟ ಧನ, ದ್ರವ್ಯ, ನಿಕ್ಷೇಪ ಎಂಬ ಅರ್ಥ ಇದೆ.

ಸಾಮಾನ್ಯವಾಗಿ ಶಾಸನಗಳು ಇರುವೆಡೆ ನಿಧಿ ಇದೆ ಎಂಬುದು ಸಾಮಾನ್ಯ ಹೇಳಿಕೆ. ಅದು ಸುಳ್ಳು ಎಂದು ಎಲ್ಲ ಶಾಸನತಜ್ಞರಿಗೂ ತಿಳಿದಿದೆ. ಯಾವ ಶಾಸನತಜ್ಞರಿಗೂ ಈವರೆಗೆ ಯಾವುದೇ ನಿಧಿ ದೊರೆತಿಲ್ಲ. ಶಾಸನವನ್ನು ಸರಿಯಾಗಿ ಓದಿದರೆ ಓದಿದವರಿಗೆ ಏಳು ಕೊಪ್ಪರಿಗೆ ಹಣ ದೊರೆಯುತ್ತದೆ ಮತ್ತು ಓದಲು ಪ್ರಯತ್ನಿಸಿ ಸೋತವರ ತಲೆ ಏಳು ಸಹಸ್ರ ಹೋಳಾಗುತ್ತದೆ ಎಂಬ ಕಾಗಕ್ಕ – ಗುಬ್ಬಕ್ಕನ ಕತೆಯು ಬಹುತೇಕ ಎಲ್ಲ ಕಡೆ ಚಾಲ್ತಿಯಲ್ಲಿದೆ. ಇದು ಹೆದರಿಕೆ ಹುಟ್ಟಿಸುವ ಮಾತು ಎಂದೂ ತಿಳಿದಿದೆ. ನಮ್ಮ ಹಳ್ಳಿಯಲ್ಲಿ ಒಂದು ಹಾಸುಬಂಡೆಯ ಮೇಲೆ ಒಂದು ಶಾಸನ ಇತ್ತು. ಚಿಕ್ಕವನಾಗಿದ್ದಾಗ ನಾನೂ ಅದರ ಬಗ್ಗೆ ಕೆಲವು ಹೇಳಿಕೆಗಳನ್ನು ಕೇಳಿದ್ದೆ. ಬೆಳಿಗ್ಗೆ ಎದ್ದ ತಕ್ಷಣ ಯಾರ ಮುಖವನ್ನೂ ನೋಡದಂತೆ, ಯಾರನ್ನೂ ಮಾತನಾಡಿಸದಂತೆ ಶಾಸನ ಇರುವ ಸ್ಥಳವನ್ನು ತಲುಪಿ, ಶಾಸನವನ್ನು ಸರಿಯಾಗಿ ಓದಿದರೆ ಓದಿದವನಿಗೆ ಏಳು ಕೊಪ್ಪರಿಗೆ ಹಣ

ಸಿಗುತ್ತದೆ. ಓದದಿದ್ದರೆ ತಲೆ ಏಳು ಸಹಸ್ರ ಹೋಳಾಗುತ್ತದೆ ಎಂಬ ಹೇಳಿಕೆ ಆ ಶಾಸನದ ಜೊತೆಗೂ ಇತ್ತು. ನನಗೆ ತಿಳಿದಂತೆ ಅದನ್ನು ಯಾರೂ ಓದುವ ಪ್ರಯತ್ನ ಮಾಡಿರಲಿಲ್ಲ. ಯಾರದೋ ಹೇಳಿಕೆಯ ಪ್ರಕಾರ ಶಾಸನವನ್ನು ಓದಲು ಕೆಲವರು ಪ್ರಯತ್ನ ನಡೆಸಿ, ಶಾಸನ ಇದ್ದ ಸ್ಥಳವನ್ನು ತಲುಪುವ ಮೊದಲೇ ಎಡವಿಯೋ, ಬಿದ್ದೋ ಏನೋ ಅಡಚಣೆಯಾಗಿ ಓದಲು ವಿಘ್ನ ಆಗುತ್ತಿತ್ತಂತೆ. ಆದ್ದರಿಂದ ನನ್ನ ಬಾಲ್ಯದಲ್ಲಿ ನಮಗೆಲ್ಲ ಆ ಶಾಸನ ಒಂದು ಒಡೆಯಲಾಗದ ಮತ್ತು ಒಡೆಯಲಾರದ ಒಗಟಾಗಿತ್ತು. ಒಗಟನ್ನು ಒಡೆಯಲಾಗದಿದ್ದರೂ ಹಾಸುಬಂಡೆಯನ್ನು ಒಡೆಯಲು ಸಾಧ್ಯವಾಯಿತು. ಜಲ್ಲಿಗೋ, ಚಪ್ಪಡಿಗೋ ಬಂಡೆಯನ್ನು ಒಡೆಯಲಾಯಿತು. ಜೊತೆಗೆ ಶಾಸನವೂ ಮರೆಯಾಯಿತು. ನಿಧಿಯ ಹಂಬಲ ಇದ್ದವರಿಗೆ ಬೇಸರವಾದರೂ ಅದು ತಮಗಿಲ್ಲವಾದರೂ ಬೇರೆಯವರ ಪಾಲಾಗಲಿಲ್ಲ ಎಂಬ ಹುಸಿ ಸಂತೋಷವಾದರೂ ಆಗಿರಬೇಕು. ಅದೃಷ್ಟವಶಾತ್ ಶಾಸನವು ಬಿ. ಎಲ್. ರೈಸ್ ಅವರ ಕಾಲದಲ್ಲೇ ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟದಲ್ಲಿ ಪ್ರಕಟವಾಗಿತ್ತು. ಅದರಲ್ಲಿ ಅಂತಹ ಮಹತ್ವದ ಯಾವುದೇ ಐತಿಹಾಸಿಕ ಅಥವಾ ಸಾಂಸ್ಕೃತಿಕ ವಿಚಾರವೂ ಇಲ್ಲ ; ನಿಧಿಯ ಪ್ರಸ್ತಾಪವಂತೂ ಇಲ್ಲ.

ಶಾಸನ ಶೋಧ ಮತ್ತು ಅಧ್ಯಯನದ ಸಂದರ್ಭದ ಕ್ಷೇತ್ರಕಾರ್ಯದಲ್ಲಿ ಹಲವು ಶಾಸನಗಳ ಬಳಿ ನಿಂಬೆಹಣ್ಣು, ಅರಿಶಿನ, ಕುಂಕುಮ, ಅಡಕೆ ಸಹಿತ ವೀಳ್ಯದೆಲೆ ಮತ್ತು ಕೆಲವು ಸಂದರ್ಭದಲ್ಲಿ ರಕ್ತದ ಗುರುತುಗಳು ಇದ್ದುದನ್ನು ಕಂಡಿದ್ದೇನೆ. ಆಗ ಭಯವಾಗಿಲ್ಲ. ಕುತೂಹಲ ಹೆಚ್ಚಿಲ್ಲ. ಮೂಢನಂಬಿಕೆಯ ಬಗ್ಗೆ ನಕ್ಕಿದ್ದೇನೆ. ಕೆಲವು ಸಂದರ್ಭಗಳಲ್ಲಿ ಶಾಸನವಿರುವ ಸ್ಥಳದಲ್ಲಿ ಅಥವಾ ಆಸುಪಾಸಿನಲ್ಲಿ ದೊಡ್ಡ ದೊಡ್ಡ ಗುಂಡಿಗಳನ್ನು ತೋಡಿರುವುದನ್ನು ಕಂಡಿದ್ದೇನೆ. ಗುಂಡಿಗಳನ್ನು ತೋಡಿ ವೃಥಾ ಬೆವರು ಸುರಿಸಿದ ಮುಗ್ಧರ ಬಗ್ಗೆ ಕನಿಕರಪಟ್ಟಿದ್ದೇನೆ. ನಿಧಿಯಾಸೆಗೆ ಪೂಜೆ ಮಾಡಿದ, ಬಲಿ ನೀಡಿದ, ಗುಂಡಿ ತೋಡಿದ ಜನರ ಪ್ರಯತ್ನ ವಿಫಲವಾಯಿತು ಎಂಬ ಮಾತುಗಳು ಅಲ್ಲೆಲ್ಲಾ ಹರಿದಾಡುತ್ತಿದ್ದುದನ್ನು ಕಿವಿಯಾರೆ ಕೇಳಿದ್ದೇನೆ.

ವಿಜಯನಗರ ಮತ್ತು ವಿಜಯನಗರೋತ್ತರ ಕಾಲದ ಐತಿಹ್ಯ ಅಥವಾ ವಾಗ್ಮೂಲ ಮತ್ತು ಇವುಗಳನ್ನು ಆಧರಿಸಿದ ಶಾಸನಸ್ಥ ಮತ್ತು ಸಾಹಿತ್ಯಿಕ ದಾಖಲೆಗಳ ಪ್ರಕಾರ ರಾಜ್ಯ ಸ್ಥಾಪನೆಯ ಸಂದರ್ಭದಲ್ಲಿ ರಾಜನಾಗುವ ಯೋಗವಿರುವ ರಾಜಪುರುಷನಿಗೆ ನಿಧಿ ದೊರಕಿದ ವಿಷಯ ಪ್ರಸ್ತಾಪವಾಗಿದೆ. ಇಂತಹ ಹೇಳಿಕೆಗಳ ಮೂಲಕ ಬೆಳಕಿಗೆ ಬಂದ ಯಾವುದೇ ನಿಧಿಯ ವಿಷಯ ಈವರೆಗೆ ಬೆಳಕಿಗೆ ಬಂದಿಲ್ಲ. ಎಲ್ಲವೂ ಹೇಳಿಕೆಗಳ ಮಟ್ಟಿಗಷ್ಟೇ ನಿಜ ಎನಿಸಿಕೊಂಡಿವೆ. ವಿಜಯನಗರೋತ್ತರ ನಾಯಕರು, ಪಾಳೆಯಗಾರರು, ನಾಡಪ್ರಭುಗಳು ಇತ್ಯಾದಿ ಅಧಿಕಾರ ಪಡೆದ ಬಹುತೇಕ ಎಲ್ಲರಿಗೆ ಕೊಪ್ಪರಿಗೆಗಟ್ಟಲೆ ನಿಧಿ ದೊರೆತ ವಿಷಯ ಮೌಖಿಕವಾಗಿ ತಿಳಿದಿದೆ; ಇಂತಹ ಮೌಖಿಕ ಹೇಳಿಕೆಗಳೇ ಶಾಸನ ಅದರಲ್ಲೂ ತಾಮ್ರಶಾಸನಗಳಲ್ಲಿ ಪ್ರಸ್ತಾಪವಾಗಿವೆ. ಎಲ್ಲ ಪಾಳೆಯಗಾರರಿಗೆ ದೊರೆತಿರಬಹುದಾದ ನಿಧಿಯ ಮೊತ್ತವನ್ನು ಊಹಿಸಿದಾಗ, ಆ ಕಾಲದಲ್ಲಿ ಬಡತನ ಎಂಬುದೇ ಇರಲಿಲ್ಲ ಎಂದು ತೀರ್ಮಾನಿಸಲೂ ಅವಕಾಶಗಳಿವೆ. ನಿಧಿಯ ಹಿಂದಿನ ಕಥೆಗಳಿಗೆ ಯಾವ ತಾರ್ಕಿಕ ಆಧಾರವನ್ನೂ ಒದಗಿಸಲು ಸಾಧ್ಯವಿಲ್ಲ. ಜೊತೆಗೆ ಬುದ್ಧಿವಂತರಾದ ಯಾರೂ ಎಲ್ಲಿಯೂ ಘೋಷಣೆ ಮಾಡಿ ನಿಧಿಯನ್ನು ಬಚ್ಚಿಡುವ ಮೂರ್ಖ ಕೆಲಸವನ್ನು ಮಾಡಿರುವುದಿಲ್ಲ ಎಂಬ ತಾರ್ಕಿಕ ಅರಿವು ನನ್ನದು.

ಗಳಿಸಿದ ನಿಧಿಯನ್ನು ಹೇಗೆ ವಿನಿಯೋಗಿಸಬೇಕೆಂಬ ಬಗ್ಗೆ ಕಲ್ಯಾಣ ಚಾಲುಕ್ಯರ ಕಾಲದ ಕನ್ನಡ ಶಾಸನವೊಂದು ವಿವರಿಸಿದೆ.

*ಗಿಡುಗಡಿದುರ್ತ್ತು ಬಿತ್ತಿ ಫಲಮಂ ಪಡೆದುಣ್ಣದೆ ಲಾಭಲೋಭದಿಂ*
*ಮಡಗಿ ಬಳಿಕ್ಕೆ ಗಾವಣಿಗೆ ಗಂಟಿಗೆ ಟೊಪ್ಪರವಿಟ್ಟುಕೊಳ್ವನಿ*
*ಗ್ಗಡಿ ನಿಪಜ್ಜತ್ತ ತೆತ್ತು ಬಜೆದಾಗಿ ಬೆಗಳ್ದೊಗದಿಂದವಿರ್ಪ್ಪಬೆ*
*ಳ್ಗುಡಿಯರನೇಕೆ ಪೋಲಿಸುವೆ ಬರ್ಮ್ಮಣನೊಳು ಹಿತಧರ್ಮ್ಮಕಾರ್ಯ್ಯನೊಳ್ ॥*

*ತಾನುಣ್ಣದೆ ಪೆಜಗ್ಗಿರ್ಕ್ಕದೆ*
*ಪೇನಿಯ ಪೆರ್ವುಡುಕೆಯೆನಿಸಿ ಮಡಗದೆ ಧನಮಂ।*
*ಮಾನವರತ್ನಂ ಬರ್ಮ್ಮಣ*
*ನಾನಂದದೆ ವಿಷ್ಣುಭವನಮಂ ಮಾಡಿಸಿದಂ॥*

ಕಷ್ಟಪಟ್ಟು ಕಾಡನ್ನು ಕಡಿದು, ಉತ್ತು ಬಿತ್ತು ಫಲವನ್ನು ಪಡೆದು ತಾನು ತಿನ್ನದೆ, ಲಾಭದ ದುರಾಸೆಯಿಂದ ರಕ್ಷಿಸಿಟ್ಟು, ನಂತರ ಕಳ್ಳರ ಪಾಲು ಮಾಡಿ ಟೋಪಿ ಹಾಕಿಕೊಳ್ಳುವ ಅಥವಾ ರಾಜನಿಗೆ ತೆತ್ತು ಬರಿದು ಮಾಡಿಕೊಂಡು ಚಕಿತರಾಗುವ ದಡ್ಡರಿಗೆ, ಹಿತಧರ್ಮಕಾರ್ಯದಲ್ಲಿ ಬರ್ಮ್ಮಣನನ್ನು ಹೋಲಿಸಬೇಡ ಎನ್ನುವ ಶಾಸನವು ಮುಂದುವರಿದು, ತಾನೂ ತಿನ್ನದೆ, ಪರರಿಗೂ ಕೊಡದೆ ಭೂತದ ಉಡುಗೆ ಎಂಬಂತೆ ಹಣವನ್ನು ಇಡದೆ ಆನಂದದಿಂದ ವಿಷ್ಣುಭವನವನ್ನು ಮಾಡಿಸಿದ ಎಂದು ತಿಳಿಸುತ್ತದೆ.

ಬೆವರು ಸುರಿಸಿ, ಗಳಿಸಿದ ಹಣವನ್ನು ಯಾರೂ ವೃಥಾ ಕೂಡಿಡುತ್ತಿರಲಿಲ್ಲ; ಕೆರೆ, ಕಟ್ಟೆಗಳನ್ನು, ಶಾಲೆಗಳನ್ನು, ದೇವಾಲಯಗಳನ್ನು, ಛತ್ರಗಳನ್ನು ಕಟ್ಟಿಸುವ, ಕಷ್ಟದಲ್ಲಿರುವವರಿಗೆ ನೀಡಿ ಉಪಕರಿಸುವ ಮನೋಭಾವ ಎಂದಿನಿಂದಲೂ ಜನರಿಗಿತ್ತು. ಆದ್ದರಿಂದ ಯಾರಾದರೂ ಗಳಿಸಿದ ಹಣವನ್ನು ಭೂಮಿಯಲ್ಲಿ ಇಟ್ಟಿದ್ದಾರೆ ಎಂದರೆ ಅಂತಹವರು ದಡ್ಡರು ಅಥವಾ ಮೂರ್ಖರು ಎಂದೇ ತಿಳಿಯಬೇಕಾಗುತ್ತದೆ. ಭೂಮಿಯ ಒಳಗೆ ನಿಧಿಯನ್ನು ಹೂತಿಟ್ಟಿದ್ದಾರೆ ಎಂಬ ಹೇಳಿಕೆಯೇ ಅಸಂಗತ. ಅಂತಹುದರಲ್ಲಿ ಅದನ್ನು ಹುಡುಕಹೊರಡುವ ಸಾಹಸವಂತೂ ವ್ಯರ್ಥ. ಆದರೆ ಇದನ್ನು ಯಾರೂ ಒಪ್ಪಲು ಸಿದ್ಧರಿಲ್ಲ. ಜನಮಾನಸದಲ್ಲಿ ಕೆಲವು ಹೇಳಿಕೆಗಳು, ನಂಬಿಕೆಗಳಾಗಿ ಎಷ್ಟರ ಮಟ್ಟಿಗೆ ಬೇರುಬಿಟ್ಟಿವೆ ಎಂದರೆ ಅದು ತಪ್ಪು ಎಂದು ಹೇಳುವವರೇ ಮೂರ್ಖರೆನಿಸಿಕೊಳ್ಳುತ್ತಾರೆ. ಶಾಸನಗಳ ಶೋಧ ಕಾರ್ಯಕ್ಕೆ ಹೋದ ಬಹುತೇಕ ಶಾಸನತಜ್ಞರಿಗೆ ಇಂತಹ ಬಿರುದುಗಳು ಉದಾರವಾಗಿ ಬರುತ್ತವೆ.

ದೇವಾಲಯಗಳಿಗೆ ಯಾವುದೇ ಉದ್ದೇಶದಿಂದ ನೀಡಿರುವ ದಾನ ಅಥವಾ ಕಾಣಿಕೆಗಳು ಅಕಸ್ಮಾತ್ತಾಗಿ ಉಳಿದಿದ್ದರೆ ಅವು ನಿಧಿ ಎನಿಸಿಕೊಳ್ಳುವುದಿಲ್ಲ. ಅವು ಭೂಮಿಯಲ್ಲಿ ಹೂತಿಟ್ಟ ವಸ್ತುಗಳಲ್ಲ. ಅವುಗಳನ್ನು ರಕ್ಷಿಸಿರಬಹುದು. ಆದರೂ ಅವು ನಿಧಿ ಎನಿಸಿಕೊಳ್ಳುವುದಿಲ್ಲ. ಕೆಲವು ತಿಂಗಳುಗಳ ಹಿಂದೆ ತಿರುವನಂತಪುರದ ಪದ್ಮನಾಭ ದೇವಾಲಯದಲ್ಲಿ ಕಂಡದ್ದೂ ಅಂತಹ ಸುರಕ್ಷಿತ ಹಣ ಮತ್ತು ಆಭರಣಗಳಷ್ಟೆ; ಆದರೆ ಅದು ಬಹಿರಂಗಗೊಂಡ ನಂತರ ಕೆಲವು ಕಾಲ ಹಬ್ಬಿದ್ದ ಅಪ್ರಬುದ್ಧ ನಂಬಿಕೆಗಳು ಎಂತಹ ವಿಚಾರವಂತರನ್ನೂ ಬೆರಗುಗೊಳಿಸುತ್ತಿದ್ದವು. ಶಯನಾಸನದಲ್ಲಿ ಪ್ರತಿಷ್ಠಿತವಾಗಿದ್ದ ಬಹುತೇಕ ಎಲ್ಲ ಮೂರ್ತಿಗಳು, ವಿಶೇಷವಾಗಿ ವಿಷ್ಣು ಮೂರ್ತಿಗಳನ್ನು ನಿಧಿ ಶೋಧಕರು ಕಾಡಿ, ಕಂಗಾಲು ಮಾಡಿದರು.

ಸಾಮಾನ್ಯವಾಗಿ ದೇವಾಲಯಗಳ ಗರ್ಭಗೃಹದಲ್ಲಿ ಅಥವಾ ಮತ್ತಾವುದೋ ಭಾಗದಲ್ಲಿ ನಿಧಿಯನ್ನು ಇಟ್ಟಿರುತ್ತಾರೆ ಎಂಬ ಮೂಢನಂಬಿಕೆ ಇದೆ. ನಮ್ಮ ಊರಿಗೆ ಸಮೀಪದ ಒಂದು ಶಿವಾಲಯದಲ್ಲಿ ನಿಧಿ ಇದೆ ಎಂಬ ಸುದ್ದಿಯನ್ನು ಯಾರೋ ಮಹಾನುಭಾವರು ಹಬ್ಬಿಸಿದ್ದರು. ಸುಮಾರು ಮೂವತ್ತು ವರ್ಷಗಳಿಗೂ ಹಿಂದೆಯೇ ಆ ನಿಧಿಗಾಗಿ ಹುಡುಕಾಟ ನಡೆದು, ಪ್ರತಿಷ್ಠಾಪಿತವಾಗಿದ್ದ ಆಗಮೋಕ್ತ ಶಿವಲಿಂಗವನ್ನೇ ಎತ್ತುವ ಪ್ರಯತ್ನ ನಡೆದಿತ್ತು. ಇಡೀ ಗರ್ಭಗೃಹ ಗುಂಡಿಯಾಗಿತ್ತು. ಶಿವಪ್ಪ ಮಾತ್ರ ಜಗ್ಗಿರಲಿಲ್ಲ. ನಿಧಿ ಸಿಗಲಿಲ್ಲ ಎಂಬ ಸಿಟ್ಟಿಗೆ ವಿಫಲ ನಿಧಿಶೋಧಕರು ಲಿಂಗವನ್ನೇ ಒಡೆದು ಪರೀಕ್ಷೆ ಮಾಡಿ, ಅಲ್ಲೂ ಯಾವುದೇ ನಿಧಿ ಇಲ್ಲ ಎಂಬ ವ್ಯಥೆಯಿಂದ ಲಿಂಗವನ್ನು ಸೀಳಿ ಹೋದರು. ವಿಫಲ ನಿಧಿಶೋಧಕರ ಸುಳಿವೇನೂ ಸಿಗಲಿಲ್ಲ; ಭಿನ್ನವಾದ ಲಿಂಗವನ್ನು ಪೂಜಿಸಲು ಕಣ್ಣಪ್ಪನ ಬದಲು ಯಾರೋ ಒಬ್ಬ ಭಕ್ತ ಸಿಕ್ಕಿ, ಅವರಿಂದಲೇ ಭಿನ್ನಲಿಂಗಕ್ಕೆ ಪೂಜೆಯ ಭಾಗ್ಯ ಲಭಿಸಿತು. ದೇವಾಲಯದ ಸಂರಕ್ಷಣೆಯ ಸಂದರ್ಭದಲ್ಲಿ ಇಡೀ ದೇವಾಲಯವನ್ನು ಬಿಡಿಸಿ, ಪುನಃ ಜೋಡಣೆ ಮಾಡುವ ಸಂದರ್ಭದಲ್ಲಿ ನಿಧಿಯ ಬಗೆಗಿನ ಆಸಕ್ತಿ ಮತ್ತೆ

## ಸುದ್ದಿ ಚಿತ್ರ




### ಲೋಕಾರ್ಪಣೆಗೊಂಡ ಕೃತಿಗಳು

1. **You too can learn the art of counselling**
   *- Dr. C. R. Chandrashekar*
೨. **ಸಂಬಾರ ಪದಾರ್ಥಗಳು**
   *– ಡಾ॥ ವಸುಂಧರಾ ಭೂಪತಿ*
೩. **ದೈಹಿಕ ಕಾಯಿಲೆಗಳು ಮತ್ತು ಕಣ್ಣು**
   *– ಡಾ॥ ಎಚ್. ಎಸ್. ಮೋಹನ್*
೪. **ಏಳುಸಾವಿರ ವರ್ಷ ಬದುಕಿದ ಮನುಷ್ಯ**
೫. **ಮನಸುಗಳ ನಡುವೆ ಪುಷ್ಪಕ ವಿಮಾನ**
೬. **ಅಗಣಿತ ವಿಸ್ಮಯ**
೭. **ದೇವಕೀಟದ ರತಿರಹಸ್ಯ**
   *– ರೋಹಿತ್ ಚಕ್ರತೀರ್ಥ*

ನಗರದ ಕನ್ನಡ ಸಾಹಿತ್ಯ ಪರಿಷತ್ತಿನ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ದಿನಾಂಕ ೨೪–೧೧–೨೦೧೩ರಂದು ನವಕರ್ನಾಟಕ ಪ್ರಕಾಶನದ ಏಳು ಕೃತಿಗಳನ್ನು ಲೋಕಾರ್ಪಣೆ ಮಾಡಲಾಯಿತು. ಡಾ॥ ಎನ್. ಎಸ್. ಲೀಲಾ ಅವರು ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿ ಕೃತಿಗಳನ್ನು ಲೋಕಾರ್ಪಣೆ ಮಾಡಿದರು. ಕಾರ್ಯಕ್ರಮ ನಿರ್ವಹಣೆಯೊಂದಿಗೆ ಶ್ರೀಮತಿ ಬಿ. ಕೆ. ಸುಮತಿ ಅವರು ಎಲ್ಲ ಏಳೂ ಕೃತಿಗಳ ಪರಿಚಯ ಮಾಡಿಕೊಟ್ಟರು. ಕೃತಿಗಳ ಲೇಖಕರು ತಮ್ಮ ಪುಸ್ತಕಗಳ ರಚನೆಯ ದಾರಿಯಲ್ಲಿನ ಅನುಭವಗಳನ್ನು ಸಭಿಕರೊಂದಿಗೆ ಹಂಚಿಕೊಂಡರು. ಎಲ್ಲ ಕೃತಿಗಳ ಲೇಖಕರು, ನವಕರ್ನಾಟಕ ಪ್ರಕಾಶನದ ವ್ಯವಸ್ಥಾಪಕ ನಿರ್ದೇಶಕ ಶ್ರೀ ಆರ್. ಎಸ್. ರಾಜಾರಾಮ್ ಅವರೊಂದಿಗೆ ವೇದಿಕೆಯಲ್ಲಿ ಉಪಸ್ಥಿತರಿದ್ದರು.

*ಚಿತ್ರದಲ್ಲಿ ಬಲದಿಂದ :* ಶ್ರೀ ಆರ್. ಎಸ್. ರಾಜಾರಾಮ್, ಡಾ॥ ಸಿ. ಆರ್. ಚಂದ್ರಶೇಖರ್, ಡಾ॥ ಎನ್. ಎಸ್. ಲೀಲಾ, ಡಾ॥ ವಸುಂಧರಾ ಭೂಪತಿ, ಡಾ॥ ಎಚ್. ಎಸ್. ಮೋಹನ್, ಶ್ರೀ ರೋಹಿತ್ ಚಕ್ರತೀರ್ಥ.



ಕೆಲವರಲ್ಲಿ ಗರಿಗೆದರಿತು. ಪ್ರತಿ ದಿನ ತಪ್ಪದೆ, ಸಂರಕ್ಷಣಾಕಾರ್ಯದ ಚಟುವಟಿಕೆಗಳನ್ನು ಗಮನಿಸುತ್ತಿದ್ದರು. ಸಂರಕ್ಷಣಾ ಕಾರ್ಯದ ಜವಾಬ್ದಾರಿ ಹೊತ್ತಿದ್ದ ವ್ಯಕ್ತಿಗೆ, ಅಕಸ್ಮಾತ್ ದೇವಾಲಯದ ಯಾವುದೇ ಭಾಗವನ್ನು, ವಿಶೇಷವಾಗಿ ಗರ್ಭಗೃಹವನ್ನು ಕಳಚುವಾಗ ವಿಶೇಷವಾದ ಏನು ಕಂಡರೂ ತಕ್ಷಣ ಕೆಲಸ ನಿಲ್ಲಿಸಿ, ವಿಷಯ ತಿಳಿಸಲು ಸೂಚನೆ ನೀಡಲಾಗಿತ್ತು. ಅದು ನಿಧಿಯ ಬಗೆಗಿನ ಕುತೂಹಲವಲ್ಲ; ಬದಲಿಗೆ, ಅದು ಶಿವಾಲಯವಾದ್ದರಿಂದ ಅದು 'ಪಳ್ಳಿಪ್ಪಡೈ' ಎಂದರೆ ಸಮಾಧಿಯ ಮೇಲೆ ನಿರ್ಮಾಣವಾದ ದೇವಾಲಯ ಆಗಿರಬಹುದು ಎಂಬ ಅನುಮಾನ. ಸಂರಕ್ಷಣೆಯ ಕೆಲಸದ ಒಂದು ಹಂತದಲ್ಲಿ ದೇವಾಲಯದ ಗರ್ಭಗೃಹದ ಬದಲು, ದೇವಾಲಯದ ಮುಂಭಾಗದ ಗೋಡೆಗೆ ಹೊಂದಿಕೊಂಡಂತೆ ಅಧಿಷ್ಠಾನದ ಭಾಗದಲ್ಲಿ ಒಂದರ ಮೇಲೊಂದನ್ನಿಟ್ಟು ಸಮಾಧಿ ಮಾಡಲ್ಪಟ್ಟಿದ್ದ ಎರಡು ಅಸ್ಥಿಪಂಜರಗಳು ಕಂಡವು. ಅವು ಬಹುತೇಕ ೪೦೦ ವರ್ಷಗಳ ಹಿಂದೆ ಧಾರ್ಮಿಕ ಕಾರಣಗಳಿಂದ ಸಮಾಧಿ ಆಗಿದ್ದ ಗುರು ಮತ್ತು ಶಿಷ್ಯರ ಅಸ್ಥಿಪಂಜರಗಳು ಎಂಬ ಅಭಿಪ್ರಾಯದಿಂದ, ಅವುಗಳನ್ನು ಬೇರೊಂದೆಡೆ ಸಮಾಧಿ ಮಾಡಿ, ಕೆಲಸ ಮುಂದುವರಿಸಲಾಯಿತು. ನಿಧಿಯ ಬದಲು ಅಲ್ಲಿ ದೊರೆತದ್ದು ಸಮಾಧಿಯಾಗಿದ್ದ ಗುರು–ಶಿಷ್ಯರ ಅಸ್ಥಿಪಂಜರಗಳು. ನಿಧಿಯ ಬಗ್ಗೆ ಕುತೂಹಲವಿದ್ದವರಿಗೆ ಬಹಳ ನಿರಾಶೆಯಾದರೂ ಇನ್ನೂ ಅವರ ಕುತೂಹಲ ತಣಿದಿಲ್ಲ. ದೇವಾಲಯದ ಆಸುಪಾಸಿನಲ್ಲೆಲ್ಲೋ ನಿಧಿ ಇದೆ ಎಂದೇ ಅವರು ನಂಬಿದ್ದಾರೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನಿಧಿಯ ಆಸೆಯಿಂದ ನಾಶಗೊಂಡಿರುವ ಮತ್ತು ವಿರೂಪಗೊಂಡಿರುವ ಹಲವು ದೇವಾಲಯಗಳನ್ನು ಕಂಡಿದ್ದೇನೆ. ವಿಚಿತ್ರ ಎಂದರೆ ಕಲ್ಲಿನ ಮೂರ್ತಿಗಳ ಮುಖ, ಹೊಟ್ಟೆ ಇತ್ಯಾದಿಗಳನ್ನೂ ಒಡೆದು ನಿಧಿಯನ್ನು ಶೋಧಿಸಿರುವ ಮೂರ್ಖರಿದ್ದಾರೆ ಎನ್ನುವುದು. ಬಳ್ಳಾರಿ ಜಿಲ್ಲೆಯ ಕುರುಗೋಡಿನಲ್ಲಿ ಇಂತಹ ಹುಚ್ಚು ಸಾಹಸವನ್ನು ಕಂಡಿದ್ದೇನೆ. ಇಂತಹ ಹುಚ್ಚು ಪ್ರಯತ್ನಗಳು ದೇವಾಲಯಗಳಿಗೆ, ಶಿಲ್ಪಗಳಿಗೆ ಮಾತ್ರವಲ್ಲದೆ, ಬೃಹತ್ ಶಿಲಾಯುಗದ ಸಮಾಧಿಗಳಿಗೂ ವಿಸ್ತರಿಸಿ, ಆತಂಕ ಹುಟ್ಟಿಸಿದೆ. ಇತಿಹಾಸದ ಕುರುಹುಗಳು ಯಾವುದೇ ಕಾರಣದಿಂದ ನಾಶವಾಗಬಾರದು. ಸಮಾಧಿಗಳಲ್ಲಿ ಅಕಸ್ಮಾತ್ ಸಿಕ್ಕರೂ ಅಸ್ಥಿಪಂಜರ, ಅದರ ಜೊತೆಗಿಟ್ಟಿರಬಹುದಾದ ಮಡಕೆ, ಕುಡಿಕೆ, ಆಯುಧ ಇತ್ಯಾದಿ ವಸ್ತು ವಿಶೇಷಗಳು ಮಾತ್ರ ದೊರೆಯುತ್ತವೆ. ಅಲ್ಲಿ ಯಾವುದೇ ರೀತಿಯ ನಿಧಿ ಇರುವುದಿಲ್ಲ. ದೊರೆತದ್ದನ್ನೇ ನಿಧಿ ಎಂದು ಪುರಾತತ್ವಜ್ಞರು ಪರಿಗಣಿಸುತ್ತಾರೆ.

ಭೂಮಿಯ ಒಳಗೆ ಮತ್ತು ಮೇಲ್ಮೈನ ಯಾವುದೇ ಭಾಗದಲ್ಲಿ ನಾಣ್ಯಗಳು ಮತ್ತು ಆಭರಣಗಳು ಸಿಗುವುದಿಲ್ಲ ಎಂದು ಹೇಳಲಾಗುವುದಿಲ್ಲ. ಆದರೆ ಅವು ಯಾವುವೂ ಹೆಚ್ಚಿನ ಪ್ರಮಾಣದಲ್ಲಿರುವುದಿಲ್ಲ ಹಾಗೂ ಹಾಗೆ ದೊರೆತ ಯಾವುದೂ ದೊರೆತವರ ಪಾಲಿನದಲ್ಲ. ಅದು ಸರ್ಕಾರದ ಆಸ್ತಿ. ಅಕಸ್ಮಾತ್ ಅಂತಹ ಯಾವುದೇ ನಾಣ್ಯ ಸಂಪತ್ತು ಅಥವಾ ಆಭರಣಗಳು ದೊರೆತರೂ ಅದನ್ನು ಸರ್ಕಾರದ ವಶಕ್ಕೆ ಒಪ್ಪಿಸಬೇಕು.

ಇತಿಹಾಸದ ಅಧ್ಯಯನದಲ್ಲಿ ನಾಣ್ಯಶಾಸ್ತ್ರದ ಪಾತ್ರವೂ ಪ್ರಮುಖ. ಆಗಾಗ ಪ್ರಾಚೀನ ನಾಣ್ಯಗಳು ದೊರೆಯುತ್ತವೆ. ಇವು ಆರ್ಥಿಕ, ಇತಿಹಾಸ, ಮಾತ್ರವಲ್ಲದೆ, ರಾಜಕೀಯ ಇತಿಹಾಸದ ಮೇಲೂ ಹೊಸಬೆಳಕು ಬೀರುತ್ತವೆ. ಶಾಸನಶಾಸ್ತ್ರದಂತೆ ಪುರಾತತ್ವ ಶಾಸ್ತ್ರದಲ್ಲಿ ನಾಣ್ಯಶಾಸ್ತ್ರವೂ ಒಂದು ಪ್ರಮುಖ ಭಾಗ. ಈ ಬಗ್ಗೆ ಡಾ॥ ಎಂ. ಎಚ್. ಕೃಷ್ಣ ಅವರ ಕೊಡುಗೆ ಅಪಾರ. ನಂತರ ಪ್ರೊ॥ ಎ. ವಿ. ನರಸಿಂಹಮೂರ್ತಿ, ಡಾ॥ ಎಂ. ವಿ. ಕೃಷ್ಣಪ್ಪ, ಡಾ॥ ಆರ್. ಗೋಪಾಲ್ ಅವರುಗಳಲ್ಲದೆ, ಗಣೇಶ್, ಗಿರಿಜಾಪತಿ, ನಿತ್ಯಾನಂದ ಪೈ ಮುಂತಾದವರು ಗಣನೀಯ ಕೆಲಸ ಮಾಡಿದ್ದಾರೆ. ಇವರಲ್ಲಿ ಯಾರಿಗೂ ಯಾವುದೇ ನಿಧಿಯ ಕನಸು ಬಿದ್ದಂತಿಲ್ಲ.

ನಾಣ್ಯಗಳು, ಅವುಗಳ ತಯಾರಿಕೆಗೆ ಬಳಸಿದ ಉಪಕರಣಗಳು ಅಲ್ಲಲ್ಲಿ ದೊರೆತಿವೆ ಮತ್ತು ದೊರೆಯುತ್ತಲೇ ಇರುತ್ತವೆ. ಬಹುತೇಕ ಎಲ್ಲ ಕಾಲದ ನಾಣ್ಯಗಳು ದೊರೆತಿವೆ.

ಇವು ಯಾವುದೂ ರಹಸ್ಯದ ವಿಚಾರಗಳೂ ಅಲ್ಲ ಮತ್ತು ಈ ಬಗ್ಗೆ ಪುಸ್ತಕಗಳೂ ಪ್ರಕಟಗೊಂಡಿವೆ. ಆದ್ದರಿಂದ ನಾಣ್ಯಗಳ ವಿಚಾರದಲ್ಲಿ ಇಲ್ಲಸಲ್ಲದ ಕುತೂಹಲಕ್ಕೆ ಎಡೆಯಿಲ್ಲ. ಆದರೆ ಕೊಪ್ಪರಿಗೆಗಟ್ಟಲೆ ನಿಧಿ, ಮಣಗಟ್ಟಲೆ ಚಿನ್ನ ಅಥವಾ ಮತ್ತಾವುದೇ ಬೆಲೆಬಾಳುವ ಲೋಹದ ಗಟ್ಟಿ ದೊರೆತ ಉದಾಹರಣೆ ಇಲ್ಲ. ಪ್ರಾಚೀನ ಐತಿಹಾಸಿಕ ನೆಲೆಗಳ ಶಾಸ್ತ್ರೀಯ ಉತ್ಖನನದ ಸಂದರ್ಭದಲ್ಲಿ ನಾಣ್ಯಗಳು ಲಭಿಸಿರುವ ಉದಾಹರಣೆಗಳಿವೆ. ಕೆಲವು ಸಂದರ್ಭಗಳಲ್ಲಿ ಅಕಸ್ಮಾತ್ತಾಗಿ ನಾಣ್ಯಗಳು ದೊರೆತಿರುತ್ತವೆ. ಅದಕ್ಕೆ ಕೆಲವು ಉದಾಹರಣೆಗಳನ್ನು ಗಮನಿಸಬಹುದು.

೧೮೯೧ರಲ್ಲಿ ಬೆಂಗಳೂರಿನ ಯಶವಂತಪುರದ ಬಳಿ ರೈಲ್ವೆ ಮಾರ್ಗದ ಕಾಮಗಾರಿ ನಡೆದಿದ್ದಾಗ ಬೆಂಗಳೂರು ನಗರ ಮತ್ತು ಯಶವಂತಪುರದ ಮಾರ್ಗಮಧ್ಯದಲ್ಲಿ ದೊರೆತ ಒಂದು ಕುಡಿಕೆಯಲ್ಲಿ ದೊರೆತ ಬೆಳ್ಳಿ ನಾಣ್ಯಗಳ ಬಗ್ಗೆ ಆಗಲೇ 'ವಿಜ್ಞಾನ ದೀಪಿಕೆ' ಪತ್ರಿಕೆಯಲ್ಲಿ ಬರೆದಿದ್ದ ಡಾ॥ ಬಿ. ಎಲ್. ರೈಸರ ಮಾತುಗಳು ಈ ಕೆಳಕಂಡಂತಿವೆ.

'ಸನ್ ೧೮೯೧ನೇ ಇಸವಿ ಏಪ್ರಿಲ್ ೧೬ನೇ ತಾರೀಕಿನ ದಿವಸ ಬೆಂಗಳೂರು–ಹಿಂದೂಪುರ ರೈಲ್ವೆ ಮಾರ್ಗದ ಹತ್ತಿರ ಬೆಂಗಳೂರು ರೈಲ್ವೆಸ್ಟೇಷನಿಗೆ ೩॥ ಮೈಲಿ ದೂರದಲ್ಲಿ ರೈಲ್‌ರಸ್ತೆಗೂ, ಯಶವಂತಪುರ ಗ್ರಾಮಕ್ಕೂ ನೆಲದಲ್ಲಿ ೧॥ ಅಡಿ ಆಳದಲ್ಲಿ ಒಂದು ಮಡಕೆಯಲ್ಲಿ ಒಂದು ನಿಕ್ಷೇಪವು ಸಿಕ್ಕಿತು. ಕೆಲಸ ಮಾಡುತ್ತಿದ್ದವನ ಪಿಕಾಸಿಪೆಟ್ಟಿನಿಂದ ಮಡಕೆ ಒಡೆದು ಹೋಯಿತು. ಈ ನಿಕ್ಷೇಪವನ್ನು ಸ್ಟೋರ್ ಕೀಪರ್ ಮೆ॥ ಮೆಯಿಲ್ ಸಾಹೇಬರು ಆರ್‌ಕಿಯೋಲಾಜಿಕಲ್ ಡೈರೆಕ್ಟರಾದ ಮೆ॥ ಎಲ್. ರೈಸ್ ಸಿ. ಪಿ. ಐ. ಸಾಹೇಬರ ಬಳಿಗೆ ಕಳುಹಿಸಿದರು. ಮೆ॥ ರೈಸ್ ಸಾಹೇಬರು ಇದನ್ನು ಚೆನ್ನಾಗಿ ಪರೀಕ್ಷಿಸಿ ತಮ್ಮ ತಾತ್ಪರ್ಯವನ್ನು ಸೂಚಿಸಿ ರಿಪೋರ್ಟು ಮಾಡಿದ್ದಾರೆ. ಆ ರಿಪೋರ್ಟಿನ ಸಾರಾಂಶವು ವಸ್ತು ಪಾಠಗಳನ್ನೂ ಚಮತ್ಕಾರವಾದ ಕಥೆಗಳನ್ನೂ ಹೇಳುವ ಉಪಾಧ್ಯಾಯರಿಗೆ ಉಪಯೋಗವಾಗಿರುವುದರ ಕಾರಣ ಅದನ್ನು ಈ ಕೆಳಗೆ ಬರೆದಿದ್ದೇವೆ:

'ಈ ನಿಕ್ಷೇಪದಲ್ಲಿ ಸಿಕ್ಕಿದುದೆಲ್ಲ ೧೬೩ ಬೆಳ್ಳಿ ನಾಣ್ಯಗಳು. ಇದರ ಸಮೀಪದಲ್ಲೇ ಒಂದು ಕಬ್ಬಿಣದ ಭಾಲೆಯ ಮೊನೆಯೂ ಒಂದು ಸೌಟೂ ಸಿಕ್ಕಿದುವು. ಈ ನಾಣ್ಯಗಳನ್ನು ಪರೀಕ್ಷಿಸುವಲ್ಲಿ ಅವುಗಳೆಲ್ಲ ರೋಂ ಚಕ್ರಾಧಿಪತ್ಯದ ಅಗಸ್ಟಸ್, ಟೈಬೀರಿಯಸ್, ಕಾಲಿಗುಲ, ಕ್ಯಾಡಿಯಸ್, ಆಂಟೋನಿಯೋ ಈ ಚಕ್ರವರ್ತಿಗಳ ಕಾಲದ ನಾಣ್ಯಗಳಾಗಿ ಕಂಡುಬಂದವು. ಆದ ಕಾರಣ ಇವು ಕ್ರಿ. ಪೂ. ೨೬ರಿಂದ ಕ್ರಿ. ಶ. ೫೧ರವರೆಗಿನ ಕಾಲದವುಗಳೆಂದೂ ಸುಮಾರು ೧೯೦೦ ವರ್ಷಗಳ ಹಿಂದಿನವೆಂದೂ ಗೊತ್ತಾಯಿತು.'

ಈ ನಿಕ್ಷೇಪದ ಬಗ್ಗೆ ಬಿ. ಎಲ್. ರೈಸ್ ಮತ್ತು ನಂತರದ ಹಲವು ವಿದ್ವಾಂಸರ ಪ್ರಕಾರ ಅವೆಲ್ಲವೂ ವ್ಯಾಪಾರಿಗಳ ಬಳಿ ಇದ್ದ ನಾಣ್ಯಗಳು. ಯಾವುದೇ ಪ್ರದೇಶದಲ್ಲಿ ಲಭಿಸಿರುವ ರೋಮನ್ ನಾಣ್ಯಗಳನ್ನು ಆಯಾ ಕಾಲದ ವ್ಯಾಪಾರಿಗಳ ಬಳಿ ಇದ್ದ ನಾಣ್ಯಗಳು




ಎಂದು ತಿಳಿಯಬೇಕಾಗುತ್ತದೆ. ಇವು ಯಾವುವೂ ನಿಧಿಗಳಲ್ಲ.

೧೯೩೫ರಲ್ಲಿ ರಾಯಚೂರು ನಗರದ ರೈಲ್ವೆ ನಿಲ್ದಾಣದ ಬಳಿ ನೆಲವನ್ನು ಅಗೆಯುತ್ತಿದ್ದಾಗ ೬೩ ಬೆಳ್ಳಿಯ ನಾಣ್ಯಗಳು ಪತ್ತೆಯಾಗಿವೆ. ೧೯೪೦ರಲ್ಲಿ ಗುಲಬರ್ಗಾ ತಾಲ್ಲೂಕಿನ ಹೆಬ್ಬಾಳ ಎನ್ನುವ ಗ್ರಾಮದಲ್ಲಿ ದೊರೆತ ೨೨೫ ಬೆಳ್ಳಿಯ ಪಂಚ್ ನಾಣ್ಯಗಳನ್ನು ಒಂದು ಬಟ್ಟೆಯಲ್ಲಿ ಕಟ್ಟಿ, ಮಡಕೆಯಲ್ಲಿ ಇಡಲಾಗಿತ್ತು. ಈ ಬಗ್ಗೆ ಅಧ್ಯಯನ ನಡೆದಿದೆ. ಇಲ್ಲಿ ಮೌರ್ಯರ ಕಾಲದ ನಾಣ್ಯಗಳ ಜೊತೆಗೆ ಇನ್ನೂ ನಂತರದ ಮೂರು ಕಾಲದ ನಾಣ್ಯಗಳು ದೊರೆತಿವೆ. ರಾಯಚೂರು ಜಿಲ್ಲೆಯ ಚಿಕ್ಕಸಿಂದೋಗಿ ಎಂಬ ಗ್ರಾಮದಲ್ಲಿ ಒಬ್ಬ ರೈತ ಹೊಲ ಉಳುತ್ತಿದ್ದಾಗ ಒಂದು ತಾಮ್ರದ ಪಾತ್ರೆಯ ಒಳಗೆ ಚಿಕ್ಕಮಡಕೆಯಲ್ಲಿ ಹಾಕಿ ಇಟ್ಟಿದ್ದ ಪಂಚ್ ಮಾಡಿದ್ದ ೫೫೩೪ ನಾಣ್ಯಗಳು ಪತ್ತೆಯಾದವು. ತಾಮ್ರದ ಪಾತ್ರೆಯ ಮೇಲೆ 'ಚಂತಸ' ಎಂಬ ಬರಹವಿದ್ದು, ಅದು ಮಡಕೆಯ ಮಾಲೀಕನ ಹೆಸರಾಗಿರಬೇಕು ಎಂದು ಊಹಿಸಲಾಗಿದೆ. ಮಡಕೆಯಲ್ಲಿ ಇಡಲಾಗಿದ್ದ ೧೪೪ ಬೆಳ್ಳಿಯ ನಾಣ್ಯಗಳು ಬಳ್ಳಾರಿ ಜಿಲ್ಲೆಯ ಹಲವಾಗಿಲು ಎಂಬ ಗ್ರಾಮದಲ್ಲಿ ದೊರೆತ ವಿಷಯ ತಿಳಿದಿದೆ. ಅಶೋಕನ ಶಿಲಾಶಾಸನವಿರುವ ರಾಯಚೂರು ಜಿಲ್ಲೆಯ ಮಸ್ಕಿಯಲ್ಲಿ ಎರಡನೆಯ ಬಾರಿ ಉತ್ಖನನ ನಡೆದಾಗ ಒಂಬತ್ತು ಪಂಚ್ ಮಾರ್ಕ್ ನಾಣ್ಯಗಳು ದೊರೆತಿವೆ. ಬಹುತೇಕ ಪಂಚ್ ಮಾರ್ಕ್ ನಾಣ್ಯಗಳು ಇತಿಹಾಸ ಆರಂಭ ಕಾಲದ, ವಿಶೇಷವಾಗಿ ಮೌರ್ಯರ ಕಾಲಕ್ಕೂ ಮೊದಲಿನ ನಾಣ್ಯಗಳು.

೧೯೭೭ರಲ್ಲಿ ಉತ್ತರ ಕನ್ನಡ ಜಿಲ್ಲೆಯ ಬನವಾಸಿಯಲ್ಲಿ ಉತ್ಖನನ ನಡೆದಾಗ ಗಜಪೃಷ್ಠಾಕಾರದ ಇಟ್ಟಿಗೆಯ ಕಟ್ಟಡದ ಎರಡು ಗೋಡೆಗಳ ನಡುವೆ ಒಂದು ಬೆಳ್ಳಿಯ ನಾಣ್ಯ ಸಿಕ್ಕಿತು. ವಿಶೇಷವೆಂದರೆ ಅದು ನಿರೀಕ್ಷಿಸಿದ್ದಂತೆ ಶಾತವಾಹನರ ಕಾಲದ ನಾಣ್ಯವಾಗಿರಲಿಲ್ಲ. ಬದಲಿಗೆ ಅದಕ್ಕಿಂತ ಹಿಂದಿನ ಮೌರ್ಯರ ಕಾಲದ್ದು. ಇದರಿಂದ ಆ ಭಾಗದಲ್ಲಿ ಶಾತವಾಹನರಿಗಿಂತ ಮೊದಲು ಮೌರ್ಯರ ಸಂಪರ್ಕವಿತ್ತು ಎಂಬ ಮಹತ್ವದ ಸಾಂಸ್ಕೃತಿಕ ಅಂಶ ತಿಳಿಯಿತು.

ಯಾರೂ ನಿಧಿಯನ್ನು ನೆಲದಲ್ಲಿ ಹೂಳಿ ರಕ್ಷಿಸುವ ಮೂರ್ಖತನದ ಕೆಲಸ ಮಾಡುವುದಿಲ್ಲ. ಅಕಸ್ಮಾತ್ತಾಗಿ ನೆಲದಲ್ಲಿ ಬಿದ್ದ ಅಥವಾ ಕೈತಪ್ಪಿ ನೆಲದಲ್ಲಿ ಸೇರಿಕೊಂಡ ಒಂದಷ್ಟು ನಾಣ್ಯಗಳು ದೊರಕಬಹುದು. ವಿಜಯನಗರದ ಕೋಟೆಯ ಕೆಲವು ಬಾಗಿಲುಗಳ ಬಳಿ ಉತ್ಖನನ ನಡೆದಾಗ ಒಂದಷ್ಟು ನಾಣ್ಯಗಳು ಸಿಕ್ಕಿವೆ. ಅವು ಅಕಸ್ಮಾತ್ತಾಗಿ ಬಿದ್ದಿದ್ದ ನಾಣ್ಯಗಳು ಎಂದು ಮೇಲ್ನೋಟಕ್ಕೇ ತಿಳಿಯುತ್ತದೆ. ಚಂದ್ರವಳ್ಳಿಯಲ್ಲಿ ಮಳೆಬಿದ್ದ ಸಮಯದಲ್ಲಿ ಭೂಮಿಯ ಮೇಲ್ಮೈನಲ್ಲೇ ಸೀಸ ಅಥವಾ ಪೋಟಿನ್ ನಾಣ್ಯಗಳು ದೊರೆಯುತ್ತಿದ್ದ ವಿಷಯವನ್ನು ವಿದ್ವಾಂಸರು ತಿಳಿಸಿದ್ದಾರೆ.

ಈ ಎಲ್ಲ ವಿಚಾರಗಳನ್ನು ಗಮನಿಸಿದಾಗ ಭೂಮಿಯ ಅದೆಷ್ಟೋ ಆಳದಲ್ಲಿ ಕೊಪ್ಪರಿಗೆಗಟ್ಟಲೆ ನಿಧಿ ಹುದುಗಿದೆ ಎನ್ನುವ ಮಾತು ಬಾಲಿಶ ಮಾತ್ರವಲ್ಲ ತಾರ್ಕಿಕವಾಗಿ ನಂಬಲನರ್ಹ. ತಿರುವನಂತಪುರದ ಅನಂತಪದ್ಮನಾಭ ದೇವಾಲಯದ ನೆಲಮಾಳಿಗೆಯಲ್ಲಿ ದೇವರಿಗೆ ಅರ್ಪಿತವಾದ ಆಭರಣ, ಹಣ ಇತ್ಯಾದಿ ಬೆಲೆ ಬಾಳುವ ವಸ್ತುಗಳು ಶೇಖರವಾಗಿರುವಂತೆಯೇ ಯಾವುದೇ ಶ್ರೀಮಂತ ದೇವಾಲಯದಲ್ಲಿ ಅಂತಹ ವ್ಯವಸ್ಥೆ ಇದ್ದರೆ ಆಶ್ಚರ್ಯ ಪಡಬೇಕಾಗಿಲ್ಲ. ಅದು ಅಚ್ಚರಿಯ ವಿಷಯವೂ ಅಲ್ಲ. ಅದು ನಿಧಿಯ ವರ್ಗಕ್ಕೆ ಸೇರುವುದಿಲ್ಲ. ಅಕಸ್ಮಾತ್ತಾಗಿ ನಿಧಿ ಎನ್ನುವುದಿದ್ದರೆ ಅದು ಅಕಸ್ಮಾತ್ತಾಗಿ ಗೋಚರಿಸಬೇಕಷ್ಟೆ ಹೊರತು, ಜ್ಯೋತಿಷಿಗಳ ಭವಿಷ್ಯವಾಣಿಯಿಂದ ತಿಳಿಯುವಂತಹುದಲ್ಲ. ಯಾರ ಕನಸಿನಲ್ಲೂ ಅವು ಗೋಚರಿಸುವುದಿಲ್ಲ. ಅಕಸ್ಮಾತ್ ಕನಸಿನಲ್ಲಿ ನಿಧಿ ಇರುವಂತೆ ಕಂಡರೆ, ಅದರ ಅರ್ಥ ಬೇರೆಯೇ ಇರುತ್ತದೆ. ಕನಸುಗಳನ್ನು ಅರ್ಥೈಸಬಲ್ಲ ತಜ್ಞರು ಆ ಒಗಟನ್ನು ಬಿಡಿಸಬಲ್ಲರು.

ಪ್ರಚಾರವೇ ಪ್ರಮುಖವಾಗುತ್ತಿರುವ ಇತ್ತೀಚಿನ ದಿನಗಳಲ್ಲಿ, ಪ್ರತಿ ನಿತ್ಯ ಬೆಳಗಾದರೆ ಜ್ಯೋತಿಷಿಗಳ ಮಾತುಗಳಿಗೆ ಮರುಳಾಗುವ ಜನರಿಗೆ ಸುಲಭವಾಗಿ ಯಾವುದೇ ಹಣ ದೊರೆಯುತ್ತದೆ ಎಂದರೆ ಆಸಕ್ತಿ ಹೆಚ್ಚುತ್ತದೆ. ಇದರಿಂದ ಕೆಲವು ಜ್ಯೋತಿಷಿಗಳು ಮತ್ತು ಅರ್ಥಹೀನ ವಾಮಾಚಾರಿಗಳ ಹೊಟ್ಟೆಗೆ ದಾರಿಯಾಗುತ್ತದೆ. ಅದಕ್ಕಿಂತ ಹೆಚ್ಚಿಗೆ ಯಾವ ಉಪಯೋಗವೂ ಇಲ್ಲ ಎನ್ನುವುದು ಸ್ಪಷ್ಟ.



**ಡಾ॥ ಎಚ್. ಎಸ್. ಗೋಪಾಲ ರಾವ್**
೧೪೪, 'ಸ್ವಸ್ತಿಶ್ರೀ ಸ್ಕಂದ', ಐ.ವೈ.ಡಿ.ರಸ್ತೆ
ಅರಸಿನಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ – ೫೬೨ ೧೨೩










# ಮತ್ತೊಂದು ಗಣರಾಜ್ಯ ದಿನ ಒಂದಿಷ್ಟು ಚಿಂತೆ ಚಿಂತನೆಗಳು

ಮತ್ತೊಂದು ಗಣರಾಜ್ಯ ದಿನ ಬಂದಿದೆ. ಈ ರಾಜ್ಯದ ಆರೋಗ್ಯ ಎಷ್ಟು ಸಮರ್ಪಕವೆಂದು ಒಂದು ತಪಾಸಣೆ ಮಾಡಿಕೊಳ್ಳಬೇಕಾದ ಸಮಯ. ಒಂದು ರಾಷ್ಟ್ರದ ಜೀವನದಲ್ಲಿ, ಅದು ಗಣರಾಜ್ಯವಾದ ೬೩ ವರ್ಷ ಮನುಷ್ಯರ ಜೀವನದಂತೆ ಮುದಿತನದ ಪ್ರಾರಂಭವೇನಲ್ಲ. ಆದರೆ ಅದು ಇನ್ನೂ ಅಂಬೆಗಾಲು ಇಕ್ಕುವ ಶಿಶುವಂತೂ ಅಲ್ಲ. 'ಸ್ವಾತಂತ್ರ್ಯ' ಬಂದ ದಿವಸದಿಂದ ಲೆಕ್ಕ ಹಾಕಿದರೆ ಅದು ಇನ್ನೂ ಮೂರು ವರ್ಷ ಹೆಚ್ಚು. ಆದರೆ, ಈ ರಾಜ್ಯ, ಬ್ರಿಟಿಷ್ ಇಂಡಿಯಾ ರೂಪದಲ್ಲಿ, ೧೮೫೭ರಿಂದ ಲೆಕ್ಕ ಹಾಕಿದರೆ ೧೫೬ ವರ್ಷಗಳ ಕೂಡಿಬಾಳಿದ ಅನುಭವ ಪಡೆದಿದೆ. ಅದಕ್ಕೆ ಹಿಂದೆ ಎಂದೂ ಅಷ್ಟೊಂದು ವಿಸ್ತಾರವಾಗಿ ಒಂದೇ ಆಡಳಿತಕ್ಕೆ ಒಳಗಾಗಿರಲಿಲ್ಲ, ಈ ಪ್ರದೇಶ. ೧೯೪೭ರಲ್ಲಿ ಇದು ವಿಸ್ತಾರದಲ್ಲಿ ಸ್ವಲ್ಪ ಕುಗ್ಗಿತು. ಆದರೂ ಈಗಿರುವ ವಿಸ್ತಾರವೂ ಈ ಪ್ರದೇಶದಲ್ಲಿ ಹಿಂದೆಂದೂ ಇಲ್ಲದಷ್ಟು ಇದೆ. ಇದು ಬ್ರಿಟಿಷರು ನಮಗಾಗಿ ಮಾಡಿದ ಉಪಕಾರವೇನೂ ಅಲ್ಲ; ಅದು ಚಾರಿತ್ರಿಕ ಆಕಸ್ಮಿಕ. ಆದರೆ ೧೯೪೭ರಿಂದ ನಾವೇ ಪ್ರಜ್ಞಾಪೂರ್ವಕವಾಗಿ ಈ ರಾಜ್ಯವನ್ನು ಘಟಿಸಿಕೊಂಡಿದ್ದೇವೆ. ಸ್ವಾತಂತ್ರ್ಯ ಬಂದ ಮುಂಜಾನೆ ೫೦೦ಕ್ಕೂ ಮಿಕ್ಕ ಸಂಖ್ಯೆಯ ಬಿಡಿ ಬಿಡಿ ರಾಜ್ಯಗಳಿದ್ದವಲ್ಲವೆ ಇಲ್ಲಿ? ಈಗಿರುವಂತೆ ಸಂಘಟಿಸಿಕೊಂಡ ಇದು ಕ್ಷೇಮವಾಗಿ ಹೀಗೇ ಮುಂದುವರಿಯುವುದೇ? ಅರುಣಾಚಲದಿಂದ ಕಾಥೆವಾಡದವರೆಗೆ, ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ನಾವೆಲ್ಲ ಒಂದು ಎನ್ನುವ ಭಾವುಕ ತಿಳಿವು ಬಂದಿದೆಯೇ? ಬರುತ್ತಿದೆಯೇ? ಕೇವಲ **ಆಡಳಿತಾತ್ಮಕ ಅನಿವಾರ್ಯದ ಒಕ್ಕೂಟವಾಗಿರುವ ಈ ರಾಷ್ಟ್ರಕ್ಕೆ ಶ್ರೇಷ್ಠವೆನಿಸಿಕೊಳ್ಳುವ ಸಾಮರ್ಥ್ಯ ತರುವುದಿಲ್ಲ**. ಅದು ಜನಮನದ ಪ್ರಜ್ಞಾಪೂರ್ವಕ ಭಾಗವಾಗಬೇಕು.

**ಸಂಸ್ಕೃತಿಗೆ ಒಂದು ವಿವರಣೆ: ಬಹಳ ಕಾಲ ಒಂದು ಜನಸಮೂಹ ಭೌಗೋಳಿಕವಾಗಿ ಒಂದೆಡೆ ಬಾಳಿ ಬದುಕಿ, ಅವರ ಜೀವನದ ಭಾಗವಾಗಿ ಸ್ವೀಕರಿಸಿ, ಆಚರಿಸುವ, ನಂಬುವ ಮೌಲ್ಯಗಳು. ಅದೇ ಬಹುಕಾಲ ಕೂಡಿ ಬಾಳುವ ಅಗತ್ಯ ರಾಷ್ಟ್ರವೆನಿಸಿಕೊಳ್ಳುವುದಕ್ಕೂ ಅಗತ್ಯ** (ಅಂದರೆ ಇನ್ನೂ ಆ ಅಗತ್ಯ ಆಗಿಲ್ಲವೇ?) ಅಂದರೆ ಒಂದು ರೀತಿ ಸಂಸ್ಕೃತಿ ಪರಂಪರೆಗೂ ರಾಷ್ಟ್ರೀಯತೆಗೂ ಥಳಕು ಹಾಕಬಹುದು. ಈ ಇಡೀ ಭೌಗೋಳಿಕ ಪ್ರದೇಶದಲ್ಲಿ ಒಂದೇ ಆಡಳಿತ–ಏಕ ಛತ್ರ– ಈ ಹಿಂದೆ ಇಲ್ಲದಿದ್ದರೂ ಇಡೀ ಪ್ರದೇಶಕ್ಕೆ ಅನ್ವಯಿಸುವ ದೀರ್ಘಕಾಲೀನ ಸಾಂಸ್ಕೃತಿಕ ಪರಂಪರೆ ಇದೆ ಎಂದು ತೋರುತ್ತದಲ್ಲ? ರಾಷ್ಟ್ರವಾಗಲು ಈ ಎರಡೂ, ಅಂದರೆ ಏಕಛತ್ರ ಮತ್ತು ಸಾಂಸ್ಕೃತಿಕ ಪರಂಪರೆ ಒಟ್ಟಿಗೇ ಬಹಳ ಕಾಲ ಇರಬೇಕೇ? ಅಥವಾ ಕೇವಲ ಸಂಸ್ಕೃತಿ ಸಾಕೆ? ಒಂದಿಲ್ಲದಿದ್ದರೆ ಇನ್ನೊಂದು ಇರುವುದಿಲ್ಲವೇ? ಸಂಸ್ಕೃತಿ ಪರಂಪರೆಯೆಂದೊಡನೆ ಮತಧರ್ಮ ಸಮರ್ಥಕರು ತಮ್ಮ ಪಾಲೂ ಇದೆ ಎನ್ನಬಹುದು. ಹಲವಾರು ಸಂಸ್ಕೃತಿಯ ಪರಂಪರೆಗಳು ಮತಧರ್ಮೀಯ ಚೌಕಟ್ಟನ್ನು ಮೀರಿ, ಅಲ್ಲಿ ವಾಸಿಸುವ ಎಲ್ಲರಿಗೂ ಸಮಾನವಾಗಿ ಇರುವುದು ಸಾಧ್ಯ. ಹಾಗೆಯೇ ಮತಧರ್ಮದ ಆಚರಣೆಗಳೇ ಸಂಸ್ಕೃತಿಯಂತೆ ಭಾಸವಾಗಬಹುದು. ಆದರೆ ಮತಧರ್ಮದ ನಂಬಿಕೆ ವಿಶ್ವಾಸಗಳು ಅದರ ಅನುಯಾಯಿಗಳಿಗೆ ಮಾತ್ರ ಅನ್ವಯಿಸುತ್ತವೆ. **ವಾಸ್ತವದಲ್ಲಿ ಎಲ್ಲ ಮತಗಳ ಮೂಲಸೂತ್ರಗಳ ನಡುವೆಯೂ ವಿಶಿಷ್ಟವಾದ ಸಾಮ್ಯತೆಗಳಿವೆ**. ಅದನ್ನು ಬಿಟ್ಟು

**ಕೆ. ಎಸ್. ಪಾರ್ಥಸಾರಥಿ**

ಮತಸ್ಥಾಪಕರೇ ಹೇಳದ ಅಥವಾ ಪ್ರಮುಖವೇ ಅಲ್ಲದ ಕೆಲವು ಅನಿಸಿಕೆಗಳ ಸುತ್ತ ಮೂಲಭೂತವಾದ ತನ್ನ ರಾಜಕೀಯವನ್ನು ಕಟ್ಟಿಕೊಳ್ಳುತ್ತದೆಯೇ ವಿನಾ ಅಂತಹ ಸಮ್ಮಿಳನ ಸಾಧಿಸಲಾರದ ತೀವ್ರ ಅಸಾಂಗತ್ಯಗಳು ಮತಧರ್ಮಗಳ ನಡುವೆ ಇಲ್ಲವೇ ಇಲ್ಲ ಅನ್ನಬಹುದು. ಅಂಥ ಮೂಲಭೂತವಾದಿಗಳ ಸಂಖ್ಯೆ ನಿಕೃಷ್ಟವೆನ್ನುವಷ್ಟು ಅಲ್ಪವಾದರೂ ಮೂಲಭೂತವಾದದೊಡನೆ ಅಧಿಕಾರದ ರಾಜಕೀಯ ಬೆರೆತಾಗ ಒಣಹುಲ್ಲಿಗೆ ಬೆಂಕಿ ಇಟ್ಟಂತಾಗಿ ಜನರನ್ನು ಹಾದಿ ತಪ್ಪಿಸುತ್ತದೆ. ಆಡಳಿತಾತ್ಮಕವಾಗಿ ಇವನ್ನು ನಿರ್ಬಂಧಿಸಬೇಕು, ಹತ್ತಿಕ್ಕಬೇಕು ಹಾಗೂ ಆಯಾಯ ಮತ ಧರ್ಮೀಯ ಬಹುಸಂಖ್ಯಾತರಲ್ಲಿ ತಮ್ಮೊಳಗೇ ತಾವೇ ಅವರನ್ನು ನಿಗ್ರಹಿಸಿಕೊಳ್ಳುವ ಪರಿಪಕ್ವತೆ ಬೆಳೆಯಬೇಕು. ಇದು ಯಾಕೆ ಅಗತ್ಯವೆಂದರೆ ಕೂಡಿಬಾಳುವ ಇರಾದೆಗೆ ಇದು ಪೂರಕವಾಗುವುದರಿಂದ. ಮೂಲಭೂತವಾದಕ್ಕೆ ರಾಜಕೀಯದ ಸಂಬಂಧ ಸಿಗದಂತೆ ಮಾಡಿದರೆ, ತಂತಾನೆ ಅದರ ವಿನಾಶಕಾರೀ ಪ್ರವೃತ್ತಿ – ಒಡಕು ಉಂಟುಮಾಡುವ ಪ್ರವೃತ್ತಿ ನಿರ್ವೀರ್ಯವಾಗುತ್ತದೆ. ಹಾಗೆಯೇ ಈ ರಾಷ್ಟ್ರೀಯತೆಯ ಹಿಂದೆ **ಒಂದೇ ಭಾಷೆ ಮಾತನಾಡುವುದು** ಮೇಲ್ನೋಟಕ್ಕೆ ಕಂಡುಬಂದರೂ ಅದರ ಅಗತ್ಯವೇ ಇಲ್ಲ ಎಂದೆನಿಸುತ್ತದೆ. ಇಸ್ಲಾಂ ಮತ್ತು ಕ್ರಿಶ್ಚಿಯನ್ ಮತಕ್ಕೆ ಸೇರಿದವರು ಜಾಗತಿಕವಾಗಿ ಹರಡಿದ್ದು, ವಿಭಿನ್ನ ಭಾಷೆಗಳಲ್ಲಿ ಮಾತನಾಡುತ್ತಾರೆ. ಮತಧರ್ಮಗಳ ಸಾಮ್ಯತೆಯಿಂದಾಗಿ ತಾವೆಲ್ಲ ಒಂದೇ ಅಂತ ಪೋಪನನ್ನ ನೋಡಹೋದಾಗ ಅಥವಾ ಮೆಕ್ಕಾ ಯಾತ್ರೆಗೆ ಹೋದಾಗ ಒಂದು ಕ್ಷಣ ಅಂದುಕೊಂಡರೂ ಒಂದೇ ಮತ, ಭಾಷೆ, ಬಣ್ಣ, ಬುಡಕಟ್ಟು ಜನಾಂಗಕ್ಕೆ ಸೇರಿದವರೂ ತಮ್ಮ ತಮ್ಮ ಭೌಗೋಳಿಕ ಎಲ್ಲೆಯನ್ನು ರಕ್ಷಿಸಿಕೊಳ್ಳಲು ವಿಸ್ತರಿಸಿಕೊಳ್ಳಲು ತಮ್ಮೊಳಗೇ ಯುದ್ಧ ಮಾಡಿದ್ದಾರೆ; ಮಾಡುತ್ತಿದ್ದಾರೆ. ಹಾಗೆಯೇ ಇಸ್ಲಾಂ, ಕ್ರಿಶ್ಚಿಯನ್, ಹಿಂದೂ, ಬೌದ್ಧ ಮತಸ್ಥರ ನಡುವೆಯೂ ತಮ್ಮ ಮತಧರ್ಮದ ಮೂಲ ಸಂವೇದನೆಯನ್ನು ವಿಶ್ಲೇಷಿಸುವ ಹಂತದಲ್ಲೇ ಭಿನ್ನಾಭಿಪ್ರಾಯಗಳು ಉಂಟಾಗಿ ಹಲವು ಶಾಖೆಗಳಾಗಿ ಒಡೆದುಹೋಗಿದ್ದಾರೆ. ಆ ಶಾಖೆಗಳು, ತಾವು ಒಂದೇ ಮತದವರು ಎನ್ನುವುದನ್ನೂ ಲೆಕ್ಕಿಸದೆ ಪರಸ್ಪರ ಕಾದಾಡುತ್ತವೆ. ಷಿಯಾ, ಸುನ್ನಿ, ಕ್ಯಾಥೊಲಿಕ್, ಪ್ರಾಟಿಸ್ಟಂಟ್, ಶೈವ, ವೈಷ್ಣವ, ಲಿಂಗಾಯತ, ವೀರಶೈವ... ಒಂದೇ ಎರಡೇ ! ಹೀಗೆ ಒಂದು ಜನಾಂಗೀಯ ಅಥವಾ ಮತಧರ್ಮೀಯ ಗುಂಪಿನೊಳಗೆ ಕೂಡ ಈ ಯಾವುವುಗಳ ಆಧಾರದ ಮೇಲೂ ಶಾಶ್ವತ ಐಕಮತ್ಯವನ್ನು ಕಾಪಾಡಿಕೊಳ್ಳಲು ಜನ ವಿಫಲರಾಗಿದ್ದಾರೆ. ಅಂಥ ವಿಶಿಷ್ಟ ಐಕ್ಯತೆಗಳನ್ನು ಸಮೂಹದ ಜನರ ಸಂಖ್ಯೆ ಕಡಿಮೆಯಾದಷ್ಟೂ ಅದರೊಳಗೆ ಹೆಚ್ಚು ಕಾಣಬಹುದು ಅಥವಾ ಸಮಾನ ಶತ್ರುವಿನ ವಿರುದ್ಧ ಹೋರಾಡಬೇಕಾದಾಗ ಕೆಲವೊಮ್ಮೆ ಒಗ್ಗಟ್ಟು ತೋರಿ, ಅದು ಒಮ್ಮೆ ನಿವಾರಣೆಯಾದಂತೆ, ಪುನಃ ಪರಸ್ಪರ ಕಾದಾಡುತ್ತಾರೆ. ತಮ್ಮಿಬ್ಬರಿಗೂ ಶತ್ರುವಾಗ ಬಹುದಾದವನ ಗೆಳೆತನ ಪಡೆದು ತಮ್ಮ ಸಮೀಪದ ಶತ್ರುವನ್ನು ಸದೆಬಡಿದು, ತಾವೇ ಅಂತಿಮವಾಗಿ ಆ ಹೊರಗಿನ ಶತ್ರುವಿನಿಂದ ಹಾಳಾದ ಚರಿತ್ರೆ ನಮ್ಮಲ್ಲೇ ತುಂಬಿದೆ. ಹಾಗಾದರೆ ರಾಷ್ಟ್ರವೆಂಬುದು ಒಂದು ಅಸಾಧ್ಯ ಕಲ್ಪನೆಯೇ ? ಯಾಕೆ ಬೇಕು ಇದು ? ಬಯಸಿದರೆ ಸಿಕ್ಕಿಬಿಡುತ್ತದೆಯೇ ? ಉದ್ದೇಶಪೂರ್ವಕವಾದರೆ ಮಾತ್ರ ದಕ್ಕುತ್ತದೆಯಷ್ಟೆ ?

ವೈಯಕ್ತಿಕ ನೆಲೆಯಲ್ಲಿ ವ್ಯಕ್ತಿ ಅಥವಾ ತಾನು, ತನ್ನ ಸಂಸಾರಕ್ಕೆ ಸೀಮಿತವಾಗಿ, ಏಕಾಂಗಿ ಎನಿಸುತ್ತದೆ. ಹೌದು, ಅವನು ಸಂಘಜೀವಿ. ಆದರೆ ಯಾವುದೇ ಸಂಗವನ್ನು ಒಂದು ವಿಶಿಷ್ಟ ಅಗತ್ಯಕ್ಕಾಗಿ ಮಾಡಿಕೊಳ್ಳುತ್ತಾನೆ. ಹಲವು ಅಗತ್ಯಗಳಿಗೆ ಹಲವು ಸಂಗಡಿಗರು. ಆದರೆ ಈ ಸಂಗಕ್ಕೆಲ್ಲ ಮೀರಿದ ವೈಯಕ್ತಿಕತೆಯ ವಿಶಿಷ್ಟತೆಯನ್ನು ಉಳಿಸಿಕೊಂಡಿದ್ದರೆ ವ್ಯಕ್ತಿಗೆ ಸಮಾಧಾನ ಎಂದೆನಿಸುತ್ತದೆ.



### ಏಳೂವರೆ ಶನಿ

ಏಳೂವರೆ ಶನಿ ಎಲ್ಲಿ ಉಂಟೆಂದು ಹೇಳಿ?
ಮೇಲಿಲ್ಲ ಕೆಳಗಿಲ್ಲ ಹೇಳುವೆನು ತಾಳಿ
ಇಲ್ಲದುದ ಇದೆಯೆಂಬ
ಬೊಗಳೆಯವ ಮತ್ತೆ
ನಮ್ಮಿಂದ ಮತ ಪಡೆದು
ಹೋದವನು ಗೊತ್ತೆ?

– ವಿಡಂಬಾರಿ

ಹೀಗಾಗಿ **ಸಮೂಹವೆಂಬುದು ಹಲವಾರು ಬಿಡಿ ಬಿಡಿ ವ್ಯಕ್ತಿಗಳ ಒಕ್ಕೂಟ**. ಅದೊಂದು ಸಂಘಜೀವನ. ವ್ಯಕ್ತಿಯ ನೆಲೆಯಲ್ಲಿ ಮಾಡಿಕೊಳ್ಳಲಾಗದ ಅಗತ್ಯಗಳಿಗಾಗಿ ಸಂಘವನ್ನು ಸಂಘಟಿಸಿಕೊಳ್ಳುತ್ತಾನೆ. ರಾಜ್ಯಾಂಗ ಸಂಘಟನೆಯ – ಕಾನ್ಸ್ಟಿಟ್ಯೂಷನ್ – ಆಧಾರದ ಸಂಘಗಳು – ಅದರಲ್ಲಿ ಸಂಘದ ಛಾಯೆ ಇದೆ. ಸಂಘದ ಅಗತ್ಯವನ್ನು ಮನಗಂಡಾಗ, ಮುಂದುವರಿದು, ಅದರ ಅಗತ್ಯವನ್ನು ಮನಗಂಡವರೆಲ್ಲಾ ಸೇರಿ ಹಲವು ನಿಲುವು, ಷರತ್ತುಗಳನ್ನು ಹಾಕಿಕೊಂಡು, ಸಂಘ ರಚಿಸಿಕೊಳ್ಳುತ್ತಾರೆ. ಆ ಸಂಘ ಉಳಿಯಬೇಕಾದರೆ, ಅದನ್ನು ಸಂಘಟಿಸಿಕೊಂಡ ಉದ್ದೇಶಗಳೂ ಕೈಗೂಡುತ್ತಿರುವ ಸುಳಿವು ಇರಬೇಕು; ಅದಕ್ಕೆ ಎಲ್ಲರೂ ತಾವೇ ಹಾಕಿಕೊಂಡ ನಿಯಮಗಳ ಪಾಲನೆ ಮತ್ತು ಷರತ್ತುಗಳನ್ನು ಗೌರವಿಸುವುದು ಅಗತ್ಯ. ಹಾಗಾಗದೆ ಇದ್ದಾಗ ಸಂಘಟನೆ ವಿಘಟನೆಗೊಳ್ಳುತ್ತದೆ. ಒಟ್ಟಾಗಿರುವ ಹಲವಾರು ವ್ಯಕ್ತಿಗಳಲ್ಲಿ ಯಾರೋ ಒಬ್ಬರೋ ಇಬ್ಬರೋ ನಿಯಮಗಳನ್ನು ಪಾಲಿಸದೆ, ಷರತ್ತುಗಳನ್ನು ಗೌರವಿಸದೆ ಹೋದಾಗ, ಸಂಘದ ಒಟ್ಟು ಹಿತಕ್ಕಾಗಿ ಅಂಥವರನ್ನು ಶಿಕ್ಷಿಸಿ, ರಕ್ಷಿಸುವ, ಸರಿಪಡಿಸುವ ವ್ಯವಸ್ಥೆಯೂ ಅದರ ಭಾಗವಾಗುತ್ತದೆ. ಆ ವ್ಯವಸ್ಥೆ ನಡೆಯುವಂತೆ ನೋಡಿಕೊಳ್ಳುವ ಆಡಳಿತ ವ್ಯವಸ್ಥೆಯೂ ಬರುತ್ತದೆ. ಆಡಳಿತ ನಡೆಸಬಲ್ಲ ಅರ್ಹರನ್ನು ನಿಯಮಿಸಬೇಕಾಗುತ್ತದೆ. ತರಬೇತಿ ನೀಡಬೇಕಾಗುತ್ತದೆ. **ಅದೊಂದು ಸರ್ಕಾರ. ಪ್ರಭುತ್ವಕಲ್ಪನೆ ತಲೆಹಾಕುತ್ತದೆ.** ಹೀಗೆ ಗಮನಿಸಬಹುದೇ ನಾವು ೧೯೫೦ರಲ್ಲಿ ಮಾಡಿಕೊಂಡ ಸಂವಿಧಾನ ವ್ಯವಸ್ಥೆಯನ್ನು ? ಮೇಲ್ನೋಟಕ್ಕೆ ಬಹಳ ಸರಳವೆನಿಸುವ ಇದು ತೀರ ಜಟಿಲವಾದುದು; ಕಷ್ಟ ಸಾಧ್ಯವಾದುದು. ಇದನ್ನು ಸಮರ್ಥವಾಗಿ ನಿಭಾಯಿಸಲು ಹಲವು ಮುತ್ಸದ್ದಿಗಳೂ ಇರಬೇಕು; ಸ್ಟೇಟ್ಸ್‌ಮನ್ ಅನ್ನುತ್ತಾರಲ್ಲ ಅಂಥವರು. ಅವರು ಕೇವಲ ಪಕ್ಷ ರಾಜಕಾರಣಿಗಳಲ್ಲ ಎಂದೂ ಭಾಸವಾಗುತ್ತದೆ. ಕಾರಣ ಇದು ನೂರಾರು ವ್ಯತ್ಯಾಸಗಳ ವಿವಿಧ ಜನಸಮೂಹವನ್ನು ಒಳಗೊಂಡ ೧೨೫ ಕೋಟಿ ಜನರನ್ನು, ಜಗತ್ತಿನ ಜನಸಂಖ್ಯೆಯ ಶೇ. ೨೦ರಷ್ಟನ್ನು ಅವರ ಒಕ್ಕೂಟ ವ್ಯವಸ್ಥೆಯನ್ನು, ನಿಭಾಯಿಸುವ ವಿಷಯ. **ಇಂಥದೊಂದು ಪ್ರಯೋಗ ಇತಿಹಾಸದಲ್ಲಿ ಹಿಂದೆಂದೂ ಆಗಿಲ್ಲ**. ಹಲವಾರು ದೊಡ್ಡ ದೊಡ್ಡ ಯುದ್ಧಗಳನ್ನು ಮಾಡುತ್ತಾ ಉಳಿದಿದ್ದು , ಶತಮಾನಗಳ ಕಾಲ ಇಂದೂ ಪ್ರಕ್ಷುಬ್ಧವಾಗೇ ಇರುವ ಯೂರೋಪ್ ಖಂಡದ ಛಪ್ಪನ್ನಾರು ದೇಶಗಳು ಈಗಲೂ ಒಂದು ಒಕ್ಕೂಟ ವ್ಯವಸ್ಥೆಗೆ ಹೆಣಗಾಡುತ್ತಿವೆ. ಯೂರೋ ಯೂನಿಯನ್ ಕಲ್ಪನೆ ನಮ್ಮ ಸಂವಿಧಾನ ರಚನೆಯ ಕಾಲಕ್ಕೇ ಆರಂಭವಾದದ್ದು ; ಎರಡನೆಯ ಮಹಾಯುದ್ಧ ಕಲಿಸಿದ ಪಾಠವಾಗಿ ಸಮಾಜವಾದೀಯ ಆದರ್ಶದಲ್ಲಿ ಅದನ್ನೇ ಯತ್ನಿಸಿದ ಸೋವಿಯತ್ ಒಕ್ಕೂಟವೂ ಒಕ್ಕೂಟ ರಾಜಕೀಯವನ್ನು ಪ್ರಾಮಾಣಿಕವಾಗಿ ಸಮರ್ಥವಾಗಿ ನಿರ್ವಹಿಸಲಾರದೆ, ನಿರ್ವಹಿಸದೆ ಮುರಿದು ಬಿತ್ತು. ಮುಸ್ಲಿಂ ಬಹುಮತದ ರಾಷ್ಟ್ರವಾಗಿ ಉಂಟಾದ ಪಾಕಿಸ್ತಾನ, ತಾನಾಶಾಹಿ ನಡೆಸಿದರೂ ಅದರ ಅಂತಸ್ಥ ನಾಲ್ಕೈದು ವಿಚ್ಛಿದ್ರಕಾರಿ ಉಪ ಹಾಗೂ ರಾಷ್ಟ್ರೀಯತೆಗಳ ಶಕ್ತಿಗಳಿಂದಾಗಿ – ಬುಡಕಟ್ಟು, ಜನಾಂಗ, ಇಸ್ಲಾಂ ಒಳಗಿನ ಪ್ರಭೇದಗಳು, ಸಾಂಸ್ಕೃತಿಕ ವ್ಯತ್ಯಾಸಗಳು – ಒಂದಾಗಿ ಉಳಿಯಲು ಹೆಣಗಾಡುತ್ತಿದೆ. ರಾಷ್ಟ್ರೀಯತೆ, ಐಕ್ಯತೆಗಳನ್ನು ಕಾಯಲು ತಾನಾಶಾಹಿಗಿಂತ ಪ್ರಜಾಪ್ರಭುತ್ವ ಮೇಲು ಎನ್ನುವ ತಿಳಿವಳಿಕೆ ಅಲ್ಲಿ ಇತ್ತೀಚೆಗೆ ಬರುತ್ತಿರುವಂತಿದೆ. ಇಸ್ಲಾಂ ಮತದ ಆಧಾರದ ಬಾಂಗ್ಲಾದೇಶವನ್ನು ಮುಸ್ಲಿಂ ದೇಶವೇ ಆದ ಪಾಕಿಸ್ತಾನ ತನ್ನೊಳಗೇ ಉಳಿಸಿಕೊಳ್ಳಲಾಗಲಿಲ್ಲ. ಅಲ್ಲಿ ಮೂಲ ಜನಾಂಗೀಯ, ಭಾಷೆಯ ವ್ಯತ್ಯಾಸಗಳು ವಿಚ್ಛಿದ್ರತೆಗೆ ಕಾರಣವಾದುವು. ಇವೆಲ್ಲ ನಮ್ಮದೇ ರಾಷ್ಟ್ರ–ರಾಷ್ಟ್ರೀಯತೆ ಕುರಿತ

ಪ್ರಕ್ರಿಯೆಯ ಸಮಸ್ಯೆಯ ಜಟಿಲತೆಯನ್ನು ಹೇಳುತ್ತವೆ. ಇಲ್ಲೆಲ್ಲ ಇರುವ ಜನಸಂಖ್ಯೆಯ ಪ್ರಮಾಣ ನಮ್ಮದಕ್ಕೆ ಹೋಲಿಸಿದರೆ ತೀರ ಕಡಿಮೆ. ಅಮೆರಿಕ ಸಂಯುಕ್ತ ಸಂಸ್ಥಾನದ್ದೂ ನಮ್ಮ ಸಮಸ್ಯೆಗೆ ಸಾಟಿಯಲ್ಲ. ಅದು ಸ್ವತಂತ್ರವಾಗಿ ಎರಡೂವರೆ ಶತಮಾನಗಳು ಆಗಲಿವೆ. ಈಗಷ್ಟೆ ೩೦ ಕೋಟಿ ಜನಸಂಖ್ಯೆ ತಲುಪಿದೆ. ಬಹುಜನ ಇಂಗ್ಲಿಷ್ ಮಾತನಾಡುವ, ಒಂದೇ ಜನಾಂಗೀಯ ಮತಧರ್ಮದ ಹಿನ್ನೆಲೆಯ, ನಮ್ಮ ದೇಶದ ನಾಲ್ಕರಷ್ಟು ಭೂಸಂಪತ್ತು ತುಂಬಿರುವ ಆ ದೇಶದ ಐಕ್ಯತೆಯ ಪ್ರಯೋಗದಲ್ಲೂ ಪ್ರತ್ಯೇಕತೆಯ ಹೋರಾಟ ಒಂದು ಶತಮಾನವೇ ನಡೆಯಿತು. ಭೀಕರ ಅಂತರ್ಯುದ್ಧದಿಂದ ಹೊರಬಂದ ದೇಶ ಅದು. ರಾಜ್ಯಗಳ, ಅದರಲ್ಲೂ ದಕ್ಷಿಣದ ರಾಜ್ಯಗಳ ಸ್ವಾಯತ್ತತೆಯ ಸಂವೇದನೆ ಬಹಳ ತೀಕ್ಷ್ಣವಾದುದು. ಅಲ್ಲಿಯ ಹಲವು ರಾಜ್ಯಗಳು ಇಂದೂ ಪ್ರತ್ಯೇಕತೆಯ ಚಿಹ್ನೆಯಾಗಿ ಬಳಸಿದ್ದ ಬಾವುಟವನ್ನು ಉಳಿಸಿಕೊಂಡಿವೆ; ಎಲ್ಲ ರಾಜ್ಯಗಳೂ ತಮ್ಮದೇ ಪ್ರತ್ಯೇಕ ಬಾವುಟ ಬಳಸುತ್ತವೆ. ಕೇಂದ್ರಕ್ಕೆ ಕೆಲವೇ ವಿಷಯಗಳನ್ನು ಬಿಟ್ಟುಕೊಟ್ಟಿವೆ. ಅಲ್ಲಿಯದು ಒಕ್ಕೂಟದ ಸಂವಿಧಾನ. ಪ್ರತಿರಾಜ್ಯವೂ ತನ್ನದೇ ಸಂವಿಧಾನವನ್ನು ಹೊಂದಿದೆ. ಅವರ ಲೆಕ್ಕದಲ್ಲಿ ನೋಡಿದರೆ ನಮ್ಮ ಸಂಘಟನೆ ಗಟ್ಟಿಯಾಗಲು ಇನ್ನೂ ನೂರು ವರ್ಷ ಬೇಡವೇ! ಈ ವಿಶಾಲ ಚಿತ್ರದ ಹಿನ್ನೆಲೆಯಲ್ಲಿ ಭಾರತದ ಒಕ್ಕೂಟ ಸುಭದ್ರವಾಗಿ ಉಳಿದು, ಐಕ್ಯತೆ ಗಟ್ಟಿಯಾಗಿ ನಾವು ಒಂದು ರಾಷ್ಟ್ರವಾಗಿ ಉಳಿಯುವ ಸಾಧ್ಯತೆಗಳೇನು? ಅದಕ್ಕೆ ಬೇಕಾದ ಅಗತ್ಯಗಳೇನು? ಅವೆಲ್ಲವನ್ನು ಗುರುತಿಸಿದ್ದೇವೆಯೇ? ಅವಕ್ಕೆ ಅವಕಾಶ ಮಾಡಿಕೊಟ್ಟಿದ್ದೇವೆಯೆ? ನಮ್ಮ ವರ್ತನೆ ಆ ನಿಟ್ಟಿನಲ್ಲಿದೆಯೇ?

ಇದೇಕೆ ಈ ಪ್ರಶ್ನೆ ಈವಾಗ? ನಾವು ಈಗಾಗಲೆ ಇದನ್ನು ಸಾಧಿಸಿಲ್ಲವೇ ಅನ್ನುವವರೂ ಇದ್ದಾರೆ. ಇದನ್ನು ಚರ್ಚಿಸುವುದೇ ತಪ್ಪು; ಅದು ಹಾಗೆ ಸ್ಥಾಪಿತ ಅಂತ ಅಂದುಕೊಂಡು ವರ್ತಿಸಿದರೆ ಎಲ್ಲ ಸರಿಯಾಗುತ್ತದೆ ಅಂತಲೂ ಹೇಳಬಹುದು. ಆದರೆ ಇದಕ್ಕೆ ಆಗಾಗ್ಗೆ ಒದಗಿಬರುವ ಆತಂಕಗಳನ್ನು ಗುರುತಿಸಿ, ಕಾಲಕಾಲಕ್ಕೆ ಅವುಗಳನ್ನು ಪರಿಹರಿಸಿಕೊಂಡು ಹೋಗುವುದು ವಿವೇಕವಾದೀತು. “ಯು ಕಾಂಟ್ ಟೇಕಿಟ್ ಫಾರ್ ಗ್ರಾಂಟೆಡ್” ಎನ್ನುವ ಎಚ್ಚರಿಕೆ ಒಳ್ಳೆಯದೇನೋ? ಕಳೆದ ಶತಮಾನದ ಅರವತ್ತರ ದಶಕದಷ್ಟು ಇತ್ತೀಚೆಗೂ ಅಮೆರಿಕದ ಕೇಂದ್ರ ಸರ್ಕಾರ ರಾಜ್ಯ ಒಂದನ್ನು ಶಿಸ್ತಿಗೆ ತರಲು ಸೈನ್ಯ ಕಳುಹಿಸಬೇಕಾಯ್ತು.

ನಮ್ಮ ರಾಷ್ಟ್ರನೌಕೆಯನ್ನು ಸುರಕ್ಷಿತವಾಗಿ ಉದ್ದೇಶಿತ ದಡಕ್ಕೆ ತಲುಪಿಸಬೇಕಾದರೆ, ಅಂದರೆ, ಐಕ್ಯತೆಗೆ ಒಳಗಿನದ್ದೋ, ಹೊರಗಿನದ್ದೋ ಯಾವುದೇ ಕಾರಣಕ್ಕೂ ಧಕ್ಕೆ ಇಲ್ಲ ಎಂದು ಹೇಳಿಕೊಳ್ಳಬೇಕಾದರೆ, ಕೇಂದ್ರ ಮತ್ತು ರಾಜ್ಯ ಸರ್ಕಾರಗಳು, ರಾಜಕೀಯ ಪಕ್ಷಗಳು, ಭದ್ರತಾ ಪಡೆಗಳು, ಹಲವಾರು ಸಾಮೂಹಿಕ ಚಳುವಳಿಗಳು, ಬುದ್ಧಿಜೀವಿಗಳು, ಸೃಜನಶೀಲರು, ಮತ–ಮಠ–ಮಸೀದಿ ಚರ್ಚು–ವಿಹಾರಗಳು, ತಾವು **ಏನೇ ಮಾಡಿದರೂ ಅವನ್ನು ಈ ಮುಖ್ಯ ರಾಷ್ಟ್ರೀಯ ಉದ್ದೇಶಕ್ಕೆ ಧಕ್ಕೆ ಉಂಟುಮಾಡದ ಮಿತಿಯೊಳಗೆ ನಡೆಸಬೇಕಾಗುತ್ತದೆ.** ನಾನಿಷ್ಟಪಟ್ಟಿದ್ದು ಆಗಲಿಲ್ಲ ಅಂದರೆ, ನನಗೇಕೆ ಈ ದೇಶದ ಉಸಾಬರಿ ಎನ್ನುವ ಅನಿಸಿಕೆಯ ಹಿಂದೆ ಅಸಹಾಯಕತೆ ಮತ್ತು ಅರಾಜಕತೆ, ಏಕೆ ಸರಿಯಲ್ಲ ಅನ್ನುವ ತಿಳಿವು ಕೈಬಿಟ್ಟದ್ದು ಕಂಡುಬರುತ್ತದೆ. ಇದು ಕ್ರಾಂತಿಕಾರೀ ಸಮಾಜವಾದಿ ರಾಜ್ಯವಾಗಲಿಲ್ಲ ಅಥವಾ ಇದು ಶುದ್ಧ ಹಿಂದೂ ರಾಜ್ಯ ಆಗಲಿಲ್ಲ ಅಥವಾ ಇದು ಖಾಲಿಸ್ತಾನ, ದಲಿತಸ್ತಾನ ಆಗಲಿಲ್ಲ – ಮುಂತಾದ ಅತೃಪ್ತಿಗಳು ಸಮಾಧಾನಕರವಾಗಿ ಬಿಡಿಸಿಕೊಳ್ಳುವ ಬೆಳವಣಿಗೆಯೂ ಮುಖ್ಯ. ಅಂಥವರು ಅವುಗಳ ಬೆನ್ನು ಬಿದ್ದವರು ಅದು **ಹಾಗೆ ಆಗದಿದ್ದರೆ ಈ ಐಕ್ಯತೆ ಏಕೆ ಅನ್ನುವ ಅವಿವೇಕಿಗಳಾದಾರು.** ಆ ಬೆಳವಣಿಗೆಯನ್ನು ವಿಚಾರ – ಆಚಾರ – ಆಡಳಿತಗಳ ಮಾರ್ಗದಲ್ಲಿ ನಿಭಾಯಿಸಬೇಕು.

ಸಾಮಾಜಿಕವಾಗಿ ಪ್ರಗತಿಪರವಾದ ಚಳುವಳಿಯಾಗಿ ಪ್ರಾರಂಭವಾದ ದ್ರಾವಿಡ ಚಳುವಳಿ, ಮುಂದೆ ಪ್ರತ್ಯೇಕತಾ ಸ್ವರೂಪವನ್ನು ಪಡೆದು, ಹಾದಿಯಲ್ಲಿ ಬಹುಶಃ ಅದರ ತಪ್ಪಿನ ಅರಿವಾಗಿ, ಅದನ್ನು ಕೈಬಿಟ್ಟಂತೆ ಕಂಡರೂ ಆಗಾಗ್ಗೆ ಆ ಪ್ರತ್ಯೇಕತಾ ಅನಿಸಿಕೆಯನ್ನು ಸದ್ಯದ ರಾಜಕೀಯ ಲಾಭಕ್ಕಾಗಿ ತಾತ್ಕಾಲಿಕವೆಂಬಂತೆ ಪ್ರಯೋಗಿಸುವ ಚಪಲ ಬಿಟ್ಟಿಲ್ಲ. ಆ ವರ್ತನೆ ಅದಕ್ಕೆ ರಾಜಕೀಯ ಲಾಭ ಗಳಿಸಿಕೊಡುವುದಿಲ್ಲ ಅಂತ ಅವರಿಗೆ ಮನದಟ್ಟಾದರೆ ಅದನ್ನು ಕೈಬಿಟ್ಟಾರು. ತಮಿಳರೂ ಸೇರಿ ಭಾರತೀಯರು ಚಾರಿತ್ರಿಕ, ಆರ್ಥಿಕ, ಹಲವೊಮ್ಮೆ ಸಾಮಾಜಿಕ

ವೈವಿಧ್ಯತೆಯು ಯಾವಾಗಲೂ ಇದ್ದದ್ದೇ. ಅದು ನಮ್ಮ ದೇಶಕ್ಕೆ ಮಾತ್ರ ವಿಶಿಷ್ಟವಲ್ಲ ಮತ್ತು ಯಾವುದೋ ನಿರ್ದಿಷ್ಟ ಕಾಲಾವಧಿಗೆ ಮಾತ್ರ ಅನ್ವಯವಾಗುವಂಥದೂ ಅಲ್ಲ. ವೇದಗಳ ಕಾಲದಲ್ಲಿ ಸಹ ಬುಡಕಟ್ಟು ಜೀವನದ ವಿವಿಧ ಹಂತಗಳು ಪ್ರಾತಿನಿಧ್ಯ ಪಡೆದಿದ್ದವು. ವೈವಿಧ್ಯತೆಯನ್ನು ಅಂಗೀಕರಿಸಿ ಮನಸಾ ಸ್ವಾಗತಿಸಿದರೆ 'ಮತಧರ್ಮ ನಿರಪೇಕ್ಷತೆ' ಎಂಬ ಕಲ್ಪನೆ ಅನಗತ್ಯವೆನಿಸಲು ಸಾಧ್ಯ. ವೈವಿಧ್ಯತೆಯನ್ನು ಸಹಸಾ ಅಳಿಸಿಹಾಕಿ ಏಕತೆಯನ್ನು ಪ್ರತಿಷ್ಠಾಪಿಸಬೇಕೆಂಬ ಹುನ್ನಾರದ ಸಾಧ್ಯತೆಗಳಿರುವಾಗ, ಆ ಅಳಿಸಿಹಾಕುವ ಕ್ರಿಯೆಗೆ ಪ್ರತಿಬಂಧಕಗಳನ್ನೊಡ್ಡಬೇಕಾಗುತ್ತದೆ. ಪ್ರಭುತ್ವವು ಕಾರ್ಯತಃ ವೈವಿಧ್ಯತೆಯನ್ನು ಪೂರ್ಣಾರ್ಥದಲ್ಲಿ ಅನುಷ್ಠಾನಕ್ಕೆ ತರಬೇಕೆಂಬ ಸಂಕಲ್ಪವು ಮತಧರ್ಮನಿರಪೇಕ್ಷತೆಯ ನಿರೂಪಣೆಯಲ್ಲಿ ಸೇರಿದೆ. ಅದರ ಅಂಗವಾಗಿ ಪ್ರಭುತ್ವವು ಮಾಡಬೇಕಾದ ಒಂದು ಕೆಲಸವೆಂದರೆ ತಾನು ಯಾವೊಂದು ಮತಧರ್ಮದ ಬಣದೊಡನೆಯೂ ವಿಶೇಷ ಸಂಬಂಧ ಬೆಳೆಸಿಕೊಳ್ಳದಿರುವುದು. ಅಲ್ಲದೆ ನಮ್ಮ ಸಂವಿಧಾನದಲ್ಲಿ 'ವೈವಿಧ್ಯತೆಯನ್ನು ಕಾಪಾಡಿಕೊಳ್ಳಬೇಕು' ಎಂಬ ಸೂತ್ರವನ್ನು ಅಡಕಗೊಳಿಸಿಲ್ಲ; ಮತಧರ್ಮನಿರಪೇಕ್ಷತೆಯ ಸಂಕಲ್ಪವು ಅದನ್ನು ಆಗುಮಾಡುತ್ತದೆ. ನಮ್ಮ ದೇಶದಲ್ಲಿ ಯಾವ ಪರಿಹಾರವನ್ನು ನೀಡಿದರೂ ಅದು ಸಕಲ ಜನರಿಗೂ ನೀಡುವಂಥದೇ ಆಗಬೇಕೆಂಬುದು ಸಹಜ ನಿರೀಕ್ಷೆ. ಆದರೆ ಚಾರಿತ್ರಿಕ ಕಾರಣಗಳಿಂದ ಬೇರೆಬೇರೆ ರೀತಿಯ ಸಾಮಾಜಿಕ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಅಡಚಣೆಗಳನ್ನೆದುರಿಸುತ್ತಾ ಬಂದಿರುವವರನ್ನು ಇತರರ ಸಾಲಿಗೆ ತಂದು ನಿಲ್ಲಿಸಿಕೊಳ್ಳಲು ಒಂದು ಪ್ರತ್ಯೇಕ ನಿಯಮಾವಳಿಯ ಅಗತ್ಯವುಂಟಾಗಿದೆ. ಆದರೆ ಆ ಪ್ರತ್ಯೇಕ ನಿಯಮಾವಳಿಯ ದುರುಪಯೋಗವನ್ನು ತಡೆಯುವ ಕೆಲಸವೂ ಏಕಕಾಲಕ್ಕೆ ನಡೆಯಬೇಕು. ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಗಳ ಪ್ರತ್ಯೇಕ ಸೌಲಭ್ಯಗಳನ್ನು ಕುರಿತು ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿ ದಾಸ್ ಈ ಬಗ್ಗೆ ಎಚ್ಚರ ನೀಡಿದ್ದರು: "ಅಲ್ಪಸಂಖ್ಯಾತ ಸಂಸ್ಥೆಗಳ ಸ್ವಾಯತ್ತ ಆಡಳಿತ ಹಕ್ಕೆಂಬುದು ದುರಾಡಳಿತದ ಹಕ್ಕನ್ನು ಒಳಗೊಳ್ಳುವುದಿಲ್ಲ" ಎಂದು. ವೈವಿಧ್ಯತೆಯು ಸಾರಭೂತವಾಗಿ ಜೀವಂತವಾಗಿರಲು ನಮಗೆ ನಾವೇ ವಿಧಿಸಿಕೊಂಡಿರುವ ಕಟ್ಟಳೆಗಳನ್ನು ಅಪ್ರಸ್ತುತವೆಂದು ತಳ್ಳಿಹಾಕಲಾಗದು.

ಇಂದು ಅಲ್ಪಸಂಖ್ಯಾತರಾಗಿರುವವರು ಕೆಲವು ಶತಮಾನಗಳ ಹಿಂದೆ ಅಂತಹ ಹಣೆಪಟ್ಟಿ ಧರಿಸಿರಲಿಲ್ಲವಲ್ಲ ಎಂಬ ಮಾತು ಹಿಂದಿನ ವಾಸ್ತವವನ್ನು ಗುರುತಿಸುತ್ತದೆ, ಆದರೆ ಚರಿತ್ರೆಯಲ್ಲಿ ಘಟಿಸಿರುವ ಬದಲಾವಣೆಗಳನ್ನು ಗಮನಿಸದೆ ಹೋದರೆ ಇಂದಿನ ವಾಸ್ತವದ ಪೂರ್ಣ ತಿಳಿವಳಿಕೆ ಮೂಡುವುದಿಲ್ಲ. ಸಹಸ್ರಾರು ವರ್ಷಗಳಿಂದ ನಮ್ಮ ಭೌಗೋಳಿಕ ಪ್ರದೇಶದಲ್ಲಿ ಅದೆಷ್ಟು ಬದಲಾವಣೆಗಳಾಗಿವೆಯೆಂಬುದನ್ನು ವಿವರಿಸಿ ಹೇಳಬೇಕಾಗಿಲ್ಲ. ಬುಡಕಟ್ಟು ರಚನೆಯಿದ್ದ ಋಗ್ವೇದದ ಆದಿಕಾಲದಲ್ಲಿ ವರ್ಣ ವಿಭಜನೆ ಇರಲಿಲ್ಲ, ಆದರೆ ಮುಂದಿನ ಒಂದು ಘಟ್ಟದಲ್ಲಿ ಅದು ಅಸ್ತಿತ್ವಕ್ಕೆ ಬಂತು. ಕಣ್ಣುಮುಚ್ಚಿ ಅಂಥದೇನೂ ನಡೆದೇ ಇಲ್ಲವೆಂದು ಭ್ರಮಿಸಿದರೆ ಚರಿತ್ರೆಯಲ್ಲಿನ ವಸ್ತುಸ್ಥಿತಿ ಗೋಚರವಾಗುವುದಿಲ್ಲ. ಬೇರೊಂದು ನಿದರ್ಶನ ನೋಡೋಣ: ಶಂಕರಾಚಾರ್ಯರ ಕಾಲಕ್ಕಿಂತಲೂ ಮುಂಚೆ ಬ್ರಾಹ್ಮಣ ವರ್ಣದವರಲ್ಲಿ ಸ್ಮಾರ್ತ–ವೈಷ್ಣವ ಎಂಬ ಭೇದವಿರಲಿಲ್ಲವಲ್ಲವೆ? ಹಾಗಿದ್ದರೆ ಇಂದು ಅವರನ್ನು ಆ ರೀತಿ ಗುರುತಿಸುವುದು ಯೋಗ್ಯವಲ್ಲ ಎನ್ನೋಣವೆ? ಇದೇ ಮಾತು ಮುಸಲ್ಮಾನರಿಗೆ, ಕ್ರೈಸ್ತರಿಗೆ, ಬೌದ್ಧರಿಗೆ, ಸಿಕ್ಖರಿಗೆ, ಎಲ್ಲಾ ಅನ್ವಯಿಸುತ್ತದೆ. ಬುದ್ಧನ ಮುಂಚೆ ಬೌದ್ಧರಿರಲಿಲ್ಲವೆಂಬ ಕಾರಣಕ್ಕೆ ಇಂದಿನ ಬೌದ್ಧರನ್ನು ಅ–ಬೌದ್ಧರೆಂದು ಪರಿಗಣಿಸಿ ಸಮಾಜದ ಏಕತ್ವವನ್ನು ಸಾರಲು ಬಂದೀತೆ? ಬುದ್ಧನ ಕಾಲದಲ್ಲಿ ಬೌದ್ಧ ಸಂಘಕ್ಕೆ ಅಂದಿನ ಜನಸಮುದಾಯದ ಒಂದು ಭಾಗ ಸೇರಿದ್ದೇಕೆ ಎಂಬುದನ್ನು ಅಧ್ಯಯನ ಮಾಡಬಹುದು. ಅಂತೆಯೇ ೧೨ನೆಯ ಶತಮಾನದ ತರುವಾಯದಲ್ಲಿ ಇಸ್ಲಾಂ ಧರ್ಮಕ್ಕೆ, ೧೮ನೆಯ ಶತಮಾನದ ತರುವಾಯ ಕ್ರೈಸ್ತಧರ್ಮಕ್ಕೆ, ನಮ್ಮ ಜನ ಸೇರಿಕೊಂಡಿದ್ದಾರೆ. ಯಾವ ಕಾರಣದಿಂದ ಸೇರಿಕೊಂಡರೆಂಬುದನ್ನು ಅಧ್ಯಯನ ಮಾಡೋಣ, ಆದರೆ ಸೇರಿಕೊಂಡಿದ್ದನ್ನು ಇಂದು ಇಲ್ಲವಾಗಿಸಲಾಗುವುದಿಲ್ಲ. ಇತಿಹಾಸದ ಗತಿಯಲ್ಲಿ ಸಂಭವಿಸಿರುವ ಹತ್ತಾರು ಘಟನೆಗಳನ್ನು ನಿರಾಕರಿಸಲಾಗುವುದಿಲ್ಲ, ಆದರೆ ಅಂತಹ ಅಹಿತಕರ ಘಟನೆಗಳು ಮರುಕಳಿಸದಂತೆ ತಡೆಯಬಹುದು. ಅದು ಸಮಷ್ಟಿಯ ಐಕ್ಯತೆಯತ್ತ ಹೆಜ್ಜೆಹಾಕಲು ನಮ್ಮನ್ನು ಸಮರ್ಥರನ್ನಾಗಿಸುತ್ತದೆ. ಚರಿತ್ರೆಯನ್ನು ನಿರಾಕರಿಸಿ ಎಂದೂ ಇರದಿದ್ದ ಐಕ್ಯತೆಯನ್ನು ಈ ಕ್ಷಣದಲ್ಲಿ ಏಕರೂಪದ ವ್ಯವಸ್ಥೆಯಿಂದ ಸೃಷ್ಟಿಸಿಕೊಳ್ಳುತ್ತೇವೆಂಬುದು ಆಂತರಿಕ ಪ್ರಕ್ಷುಬ್ಧತೆಗೆ ನಮ್ಮನ್ನು ಕೊಂಡೊಯ್ಯುತ್ತದೆ, ಸಹನೆಯ ಸಹಬಾಳ್ವೆಯೆಡೆಗಲ್ಲ. ಆದ್ದರಿಂದ ಸಹನೆಯ ಸಹಬಾಳ್ವೆಗೆ ಪರಿಕರಗಳನ್ನು ಸಿದ್ಧಪಡಿಸಿಕೊಳ್ಳೋಣ. ವೈವಿಧ್ಯತೆಗೆ ಇಂಬುಕೊಡುವ ಮತಧರ್ಮನಿರಪೇಕ್ಷತೆಯು ಅಂತಹ ಒಂದು ಪರಿಕರ, ಅಷ್ಟೆ.

**– ಜಿ. ರಾಮಕೃಷ್ಣ**

ಕಾರಣಗಳಿಂದಾಗಿ ದೇಶ ಬಿಟ್ಟು ಎಲ್ಲೆಲ್ಲೋ ನೆಲಸಿದ ಮಾತ್ರಕ್ಕೆ ಅವರಿರುವ ಆ ದೇಶವನ್ನೂ ಸೇರಿಸಿಕೊಂಡ ರಾಷ್ಟ್ರೀಯ ಕಲ್ಪನೆ ಅಸಾಧುವಾದುದು. **ರಾಷ್ಟ್ರೀಯ ಕಲ್ಪನೆ ಸ್ವಾಯತ್ತವಲ್ಲ.** ಅದಕ್ಕೆ ರಾಜಕೀಯದ ಬೆಂಬಲವಿಲ್ಲದೆ ನಿಲ್ಲುವುದಿಲ್ಲ. ದಂಡೆತ್ತಿ ಹೋಗುವ ಕಾಲ ಮುಗಿದಿದೆ. ಸಿಲೋನಿನಲ್ಲಿ ಮುಸ್ಲಿಮರಿರಬಹುದು. ಆದರೆ ಅವರು ಮೆಕ್ಕಾ ಇರುವ ದೇಶದ ಪ್ರಜೆಗಳಲ್ಲ. ಅವರು ಸಿಲೋನಿನ ಪ್ರಜೆಗಳು. ಹಾಗೆಯೇ ಕಾಶ್ಮೀರದ ಪ್ರಶ್ನೆ ಬಂದಾಗಲೆಲ್ಲ ಒಂದು ಚಾರಿತ್ರಿಕ ಸಂದರ್ಭ ಅದನ್ನು ನಮ್ಮೊಡನೆ ಗಂಟುಹಾಕಿದ್ದು ಅನ್ನುವ ಪ್ರಜ್ಞೆ ಮರೆತು ಮಾತನಾಡುವುದು ಅವಿವೇಕ. ಅಲ್ಲಿಯ ಜನತೆ ತಮ್ಮ ಸ್ವಾಯತ್ತತೆಯನ್ನು ಪ್ರೀತಿಸುತ್ತಾರೆ. ಆ ಜನರೇ ತೀರ್ಮಾನಿಸಲಿ ಎಲ್ಲಿದ್ದರೆ ತಮಗೆ ಒಳಿತು ಅಂತ. ಅವರ ಮನವೊಲಿಸಿ ನಮ್ಮೊಳಗೇ ಇರುವಂತೆ ವಿಶ್ವಾಸಗಳಿಸುವಂಥ ಆಡಳಿತ ನೀಡಿದ್ದೇವೆಯೇ? ಅರುಣಾಚಲದಲ್ಲಿ ಆ ಗಡಿನಾಡಿನಲ್ಲೇ ಇರುವ ಜನ, ಜನಾಂಗೀಯವಾಗಿ ಆ ಗಡಿಯಾಚೆಗಿನ ಜನರನ್ನು ಹೋಲುತ್ತಾರೆ ಅನ್ನುವುದು ಸಾಲದು, ಅವರು ಚೀನಕ್ಕೆ ಸೇರಬೇಕೆಂದು ಒತ್ತಾಯಿಸಲು. ನಮ್ಮ ಸಂಸ್ಕೃತಿ, ನಮ್ಮ ಆಡಳಿತದೊಡನೆಯೇ ಅವರ ಶತಮಾನಗಳ ಸಂಬಂಧ. ಗಡಿಯಲ್ಲಿರುವ ಜನರ ಆರ್ಥಿಕ, ಸಾಮಾಜಿಕ, ಆತಂಕಗಳನ್ನು ನಿವಾರಿಸುವಲ್ಲಿ ಕೇಂದ್ರ ಯಶಸ್ವಿಯಾಗುವುದು ಮುಖ್ಯ. ಇದರಲ್ಲಿ ವಿಫಲವಾಗುವ ಯಾವುದೇ ಕೇಂದ್ರವೂ ಗಡಿಯನ್ನು ಅಭದ್ರಗೊಳಿಸಿ ಕಳೆದುಕೊಳ್ಳುತ್ತದೆ. ಭಾರತದ ಇತಿಹಾಸದ ತುಂಬ ಈ ವಿಫಲತೆ ತುಂಬಿದೆ.

ಆಂತರಿಕವಾಗಿ ಭಾಷಾವಾರು ಪ್ರಾಂತಗಳನ್ನು ನಮ್ಮ ಒಕ್ಕೂಟ ವ್ಯವಸ್ಥೆಗೆ ರಕ್ಷೆಯಾಗಿ ಸ್ವೀಕರಿಸಿದೆವು. ಇದರ ಹಿಂದಿನ ಚಿಂತನೆ ಏನಿದ್ದಿರಬಹುದು? ಭಾಷೆ ಕೇವಲ ಸಂಪರ್ಕ ಮಾಧ್ಯಮ ಅಂತ ಮಾತ್ರವೇ? ಅದೂ ಅದರದೇ ಆದ ರಾಷ್ಟ್ರೀಯತೆಯ ಸೊಗಡನ್ನು, ಅದರ ಮೆರುಗನ್ನು ಸೂಸುತ್ತದೆ ಅಲ್ಲವೇ?

ಆದರೆ ಬರೇ ಭಾಷೆ ಸಾಕೆ ಅಂದರೆ ನೃಪತುಂಗ ಹಾಗಲ್ಲ ಅಂತ ನಮಗೆ, ಕನ್ನಡಿಗರಿಗೆ, ತಿಳಿಸಿದ್ದಾನೆ. ರಾಷ್ಟ್ರದ ಪರಿಕರಗಳನ್ನು ಹೇಳಿದ್ದಾನೆ. ಆಂಧ್ರದಲ್ಲಿ ಆಗಲಿರುವ ವಿಭಜನೆ, ಮಹಾರಾಷ್ಟ್ರದಲ್ಲಿ ವಿಭಜನೆಗೆ ಒತ್ತಾಯ; ಕರ್ನಾಟಕದಲ್ಲಿ, ಅಷ್ಟೇಕೆ ತಮಿಳುನಾಡಿನಲ್ಲೇ ಸ್ಪಷ್ಟವಾಗಿ ನಾಲ್ಕು ವಿಂಗಡಣೆಗಳಿಗೆ ಒಮ್ಮೆ ಒಲುಮೆ ಇತ್ತು. ಮಧ್ಯಪ್ರದೇಶ, ಬಿಹಾರ, ಉತ್ತರಪ್ರದೇಶಗಳಲ್ಲಿ ಆಗಿರುವ, ಇನ್ನೂ ಆಗಲಿರುವ ವಿಂಗಡಣೆಗಳಿಗೆ ಕೇವಲ ಆಡಳಿತಾತ್ಮಕ ಕಾರಣಗಳು ಮಾತ್ರವಲ್ಲ. ಅಲ್ಲಿ ಸಣ್ಣ ಸಣ್ಣ ಉಪರಾಷ್ಟ್ರೀಯತೆಗಳ ಸಂವೇದನೆ ಇದೆ. ನಮ್ಮ ಕೊಡವ, ತುಳು, ಕೊಂಕಣಿ ಭ್ರಾತೃ ಜನರಿಗೆ ಸಾಂಸ್ಕೃತಿಕ ಸ್ವಾಯತ್ತತೆಯ ಸಂವೇದನೆ ಇದೆ. ಬಂಗಾಳದ ವಿಭಜನೆ ನೂರು ವರ್ಷಗಳ ಕೆಳಗೆ ಎಬ್ಬಿಸಿದ ರಾಷ್ಟ್ರೀಯತೆಯ ಅಲೆ ಇಡೀ ರಾಷ್ಟ್ರದಲ್ಲೇ ಮಾರ್ದನಿಗೊಂಡು, ನಮ್ಮ ಸ್ವಾತಂತ್ರ್ಯಾಪೇಕ್ಷೆಗೆ ಇಂಬು ಗೊಟ್ಟಿತ್ತು. ಸಿಕ್ಖರಲ್ಲಿ ಕೆಲವರಿಗೆ ಸ್ವಾಯತ್ತ ಖಾಲಿಸ್ತಾನದ ಕನಸು; ಅವರಿಗೆ ಅವರ ಮತಧರ್ಮ ತೀವ್ರ ಭಾವುಕತೆಯ ವಿಷಯ. ಅವರ ಮತಧರ್ಮದ ಅಭಿವ್ಯಕ್ತಿಗೆ ನಮ್ಮ ಐಕ್ಯತೆಯೊಳಗಿನ ಅವಕಾಶ ಸಾಲಲಿಲ್ಲವೆ? ಒಂದು ಸಣ್ಣ ಪ್ರದೇಶ ಕಾಶ್ಮೀರದಲ್ಲೇ ಮೂರು ರಾಷ್ಟ್ರೀಯತೆಗಳು ಅಡಗಿದ್ದು, ಆ ಮೂರನ್ನೂ ಆ ದೇಶ ಸ್ವತಂತ್ರವಾಗಿ ಸೆಕ್ಯುಲರ್ ರಾಜನೀತಿಯ ಮೂಲಕ ಶತಮಾನಗಳ ಕಾಲ ನಿರ್ವಹಿಸಿಕೊಂಡಿತ್ತು. ಅವನ್ನು ನಿಭಾಯಿಸಲು, ಭಾರತದಂತಹ ಹಿರಿಯ ಒಕ್ಕೂಟದಲ್ಲಿ ಬೆರೆಯುವುದು ಪರಿಹಾರವಾಗಬಹುದು. ಈ ನಮ್ಮ ಚರ್ಚೆಯೊಳಗೆ ಎಷ್ಟೊಂದು ಒಳತೋಟಗಳು, ಪದರುಗಳು!

**ಈ ನಮ್ಮ ದೇಶ ಹಲವಾರು – ಹಳೆಯ ಭಾಷೆಯಲ್ಲಿ ಛಪ್ಪನ್ನಾರು – ರಾಷ್ಟ್ರೀಯತೆಗಳ ವಿಶಿಷ್ಟ ಸಂಗಮ.** ಇತಿಹಾಸಕಾರರಿಗೆ ಸತತ ಆಕರ್ಷಣೆ ನೀಡುವ ನಾಗರಿಕತೆಯ ಮೂಸೆ. ಸಹಸ್ರಾರು ವರ್ಷಗಳ ಇತಿಹಾಸ. ಇಂಗ್ಲಿಷಿನಲ್ಲಿ 'ಮೆಲ್ಟಿಂಗ್ ಪಾಟ್' ಅನ್ನುತ್ತಾರೆ. ಹಲವು ವಿಭಿನ್ನ ಸಾಮಗ್ರಿಗಳನ್ನು ವಿಶಿಷ್ಟ ರೀತಿಯಲ್ಲಿ ಬೆರೆಸಿ ಕುದಿಸಿ ಪಾಕ ಇಳಿಸಿದ ಖಾದ್ಯ–ಸಾಂಬಾರ್ – ಅದರೊಳಗೆ ಮೂಲವಸ್ತುಗಳ ಎಲ್ಲ ಸೊಗಡೂ, ಸೊಗಸೂ ಇದ್ದರೂ, ಆಖೈರಾಗಿ ಹೊರಹೊಮ್ಮಿದ ಮಿಶ್ರವಾದ ರುಚಿ, ಸುವಾಸನೆ, ಗಮನ, ಎಲ್ಲವೂ ಸೇರಿದ, ಆದರೂ ಏನೋ ಅನಿರ್ವಚನೀಯ ಹೊಸ ರುಚಿ–ರಸಪಾಕ–ಕುದಿಯುವ ಮಡಿಕೆ – ಭಾರತ ಉಪಖಂಡ – ಸಾಕಪ್ಪ ಕುದ್ದಿದ್ದು – ಸ್ವಲ್ಪ ಇದನ್ನು ಮುಗಿಸಿ, ಸಮಾಧಾನವಾಗಿ ಊಟಕ್ಕೆ ಕೂರೋಣ ಅನ್ನುವ ಒತ್ತಡವೇ ನಮ್ಮ ಇಡೀ ಸ್ವಾತಂತ್ರ್ಯ ಹೋರಾಟದ ಹಿಂದಿದ್ದ ಒತ್ತಡ. ಇವುಗಳು ಎಲ್ಲವೂ ಬೇಕು; ಒಂದು ಕಣ ಹಿಂಗೂ; ಆದರೆ ಅವುಗಳ ಪ್ರಮಾಣ, ಪ್ರಾಧಾನ್ಯ, ಮೀರಬಾರದು. ಮಡಕೆ ನೀಡುವ ರುಚಿ ಬೇರಾವ ಲೋಹದ ಪಾತ್ರೆಗಳಲ್ಲೂ ಬರದು! ಆದರೆ ಮಡಕೆ ಸೂಕ್ಷ್ಮ. ಜತನದಿಂದ ಬಳಸಬೇಕು. ನಮ್ಮ ರಾಷ್ಟ್ರದ ರಚನೆ–ರಾಜ್ಯಾಂಗ ಘಟನೆ–ಮತಧರ್ಮನಿರಪೇಕ್ಷ, ಸಮಾಜವಾದಿ, ಸಾರ್ವಭೌಮ ಗಣರಾಜ್ಯ ಇದು. ಎಲ್ಲವನ್ನೂ ಒಳಗೊಂಡು ಎಲ್ಲವಕ್ಕೂ ತಮ್ಮ ವಿಶಿಷ್ಟತೆಯನ್ನು ಮೆರೆದುಕೊಳ್ಳಬಲ್ಲ ಅವಕಾಶವುಳ್ಳ ಆಶಯದ್ದು. 'ಯೂನಿಟಿ ಇನ್ ಡೈವರ್ಸಿಟಿ' (ಬಹುತ್ವದಲ್ಲಿ ಏಕತೆ) ಅನ್ನುವ ಪರಿಕಲ್ಪನೆಯನ್ನು ಜಾಗತಿಕ ಇತಿಹಾಸದಲ್ಲಿ

## ಎದೆ ತುಂಬಿ ಹಾಡಿದ ಕವಿಗೆ – ಹೃದಯ ತುಂಬಿದ ನಮನ



ತಮ್ಮ ಕಾವ್ಯದ ಮೂಲಕ ಜನತೆಯ ಮನೆಮನ ತಲುಪಿದ ಕವಿ ಡಾ॥ ಜಿ. ಎಸ್. ಶಿವರುದ್ರಪ್ಪನವರು ನಿಧನರಾಗಿದ್ದಾರೆ. ಮನಸು–ಮನಸುಗಳ ಬೆಸೆವ ಕಾರ್ಯವನ್ನು ಬದುಕಿನುದ್ದಕ್ಕೂ ಮಾಡಿಕೊಂಡು ಬಂದ ಜಿ. ಎಸ್. ಎಸ್., ಮನುಷ್ಯ–ಮನುಷ್ಯನನ್ನು ದೂರಮಾಡುವ ಕಲ್ಲುಮಣ್ಣಿನ ದೇವರು, ದೇವಾಲಯಗಳನ್ನು ನಿರಾಕರಿಸಿ ಸುತ್ತಲಿನ ಪರಿಸರ, ಮನುಷ್ಯರ ನಡುವಿನ ಪ್ರೀತಿ–ವಿಶ್ವಾಸಗಳನ್ನೇ ದೇವರೆಂದು ತಿಳಿದು, ಹೇಳಿ, ಬಾಳಿದವರು. ಕವಿಯಾಗಿ, ಶಿಕ್ಷಕರಾಗಿ, ಆಡಳಿತಗಾರರಾಗಿ ಎಲ್ಲಕ್ಕಿಂತ ಮಿಗಿಲಾಗಿ ಮಾನವೀಯ ವ್ಯಕ್ತಿಯಾಗಿದ್ದವರು ಜಿ. ಎಸ್. ಎಸ್. ಎದೆ ತುಂಬಿ ಹಾಡಿ ಹಾಡು ನಿಲ್ಲಿಸಿದ ಕವಿಗೆ ಹೃದಯ ತುಂಬಿದ ನಮನಗಳನ್ನು 'ಹೊಸತು' ತನ್ನ ಎಲ್ಲ ಓದುಗರ ಪರವಾಗಿ ಸಲ್ಲಿಸುತ್ತದೆ. ಅರ್ಥಪೂರ್ಣ ಬದುಕನ್ನು ಸಾಗಿಸಿ 'ರಾಷ್ಟ್ರಕವಿ' ಗೌರವಕ್ಕೆ ಘನತೆ ತಂದುಕೊಟ್ಟ ಜಿ. ಎಸ್. ಎಸ್. ಅವರನ್ನು ಸ್ಮರಿಸುತ್ತಾ ಅವರ ಕುಟುಂಬ ಹಾಗೂ ಬಂಧು–ಬಳಗದ ದುಃಖದಲ್ಲಿ ಹೊಸತು ಭಾಗಿಯಾಗುತ್ತದೆ.

*– ಸಂಪಾದಕ*

### ಜಿ. ಎಸ್. ಎಸ್.ಗೆ ಕಾವ್ಯಾಂಜಲಿ – ಡಾ॥ ಜಿ. ಎಸ್. ಶಿವರುದ್ರಪ್ಪನವರು

**ಕಾ**ಲಕತ್ತಲದೆದೆಗೆ ಹೊಂಬೆಳಕಿನ ಹಣತೆ ಹಚ್ಚಿದವರು
ಕತ್ತಲೆಯೊಡನೆ ಬೆಳಕಿಗಾಗಿ ಸೆಣಸಾಡಿದವರು ॥

ದೂರವಿದ್ದವರ ಹತ್ತಿರ ಸೆಳೆದು
ಪ್ರೀತಿ–ಸ್ನೇಹದ ಬೀಜ ಬಿತ್ತಿದವರು
ಮಲೆನಾಡ ಮರವಾಗಿ ಎತ್ತರದ ಕಾಡಾಗಿ
ಬಾನೆತ್ತರದ ಬದುಕು ಹತ್ತಿದವರು ॥

ಎದೆ–ಎದೆಯ ನಡುವಿನ ಕದಗಳ ತೆರೆದು
ಹೃದಯ ಸಂವಾದ ನಡೆಸಿದವರು
ಮಾನವಲೋಕದ ಕ್ಷಿತಿಜವ ಮೀರಿ
ಪೂರ್ವ–ಪಶ್ಚಿಮಗಳ ನಕ್ಷತ್ರವಾದವರು ॥

ಎದೆಯೊಳಗಿನ ಹಾಡ ಹೊರಹೊಮ್ಮಿಸುತ
ಭಾಷೆ–ಭಾವ ನವೀನಗೊಳಿಸಿದವರು
ನವ್ಯ, ನವೋದಯ, ಪ್ರಗತಿಶೀಲ, ಬಂಡಾಯಗಳಲ್ಲೂ
ಕಾವ್ಯಕಟ್ಟುತ ಸಾಮಗಾನ ಹಾಡಿದವರು ॥

ನೊಂದ ಬೀದಿಗಳಲ್ಲಿ ಅಮೃತ ಬಡಿಸುತ
ಮುಗಿಲ ದೀಪಗಳಲ್ಲಿ ಹೊಸ ಬೆಳಕು ಅರಳಿಸಿದವರು
ಸೌಂದರ್ಯ ಸಮೀಕ್ಷೆ, ಮಹಾಕಾವ್ಯ ಸ್ವರೂಪ
ಜಂಗು ಹತ್ತದ ಹಾಗೆ ಬಳಸಿದವರು ॥

ಸ್ವಾರ್ಥ ದುರಾಶೆಯ ಭಾರಿ ಬಲೂನಿಗೆ
ಮಾನವತೆಯ ಮೊನೆ ಚುಚ್ಚಿದವರು
ಇದ್ದುದೇ ಸಾಕೆಂಬ ಇಚ್ಛೆಗಳ ದೂರ ನೂಕೆಂಬ
ಶುದ್ಧ ವೈರಾಗ್ಯ ಸಮಚಿತ್ತ ಯೋಗಿಯಾದವರು ॥

ಸಾರಸ್ವತ ಲೋಕದಲ್ಲಿ ಬೆಳೆಯುವ ಸಸಿಗಳಿಗೆ
ನಿರಂತರ ನೀರು ಸುರಿದು ಬೆಳೆಸಿದವರು
ಜೀವಗೀತೆಯ ಸಾವಿರಾರು ಹಾಡಿಗೆ ನಾಡಿಯಾಗಿ
ನಾಡು–ರಾಷ್ಟ್ರ ಬೆಳಗಿದ ಸಾಧಕರು ॥

**ಸಿ. ಎಸ್. ಭೀಮರಾಯ್**
ಆಂಗ್ಲ ಉಪನ್ಯಾಸಕರು, ಕೇರಾಫ್ : ಸಿದ್ಧಣ್ಣ ಬಿ. ಪೂಜಾರಿ, 'ಅಪೂರ್ವ ನಿವಾಸ'
ಯಮುನಾ ನಗರ, ಕುಸನೂರ ರಸ್ತೆ, ಗುಲಬರ್ಗಾ–೫೮೫ ೧೦೫

ಪ್ರಪ್ರಥಮ ನೀಡಿದವರೂ ನಮ್ಮ ನಾಯಕರೇ. ಇದೇನೂ ಭಾವುಕ ಆದರ್ಶವೂ ಅಲ್ಲ ; ಯಾರೋ ದೊಡ್ಡ ಮನಸ್ಸಿನಿಂದ ನೀಡಿದ ಕೊಡುಗೆಯೂ ಅಲ್ಲ. ಒಂದು ಐತಿಹಾಸಿಕ ಪರಿಸ್ಥಿತಿಯ ಘಟ್ಟದಲ್ಲಿ, ಸಹಜವೆಂಬಂತೆ, ಮಜ್ಜಿಗೆಯೊಳಗಿನ ಬೆಣ್ಣೆಯಂತೆ ಬಂದ ಮಥಿತ ಅನಿವಾರ್ಯ; ಏಕೈಕ, ಸಂಭವನೀಯ ಪರಿಕಲ್ಪನೆ. "ಬಹುತ್ವದಲ್ಲಿ" ಎಂಬುದರಲ್ಲಿ ಅಂತರ್ಗತವಾಗಿ ಅಪಾರ ಸಂಖ್ಯೆಯ ಬಿಡಿಬಿಡಿಗಳು ತುಂಬಿವೆ. ಅದು ಸಂಸ್ಕೃತಿ, ಮತಧರ್ಮ, ಜನಾಂಗೀಯ, ಬುಡಕಟ್ಟು, ಭಾಷೆ, ಹಲವು ರೀತಿಯ ನಡೆನುಡಿ, ವೇಷಭೂಷಣ, ಆಹಾರ, ಧಾನ್ಯ ಕೃಷಿ, ಬೌದ್ಧಿಕ ಫಲವತ್ತತೆ, ಹವಾಮಾನ, ವಿಶಿಷ್ಟ ಭೂಗೋಳ, ಆರ್ಥಿಕತೆ... ಹೀಗೆ ಒಂದೇ ಎರಡೇ – ಲೆಕ್ಕಹಾಕುತ್ತ ಹೋಗಬಹುದು : ನಮ್ಮ ಲಂಬಾಣಿ ಮಹಿಳೆಯರ ಉಡುಪಿನ ಬಿರುಸಿನ ಬಿಡಿಬಿಡಿ ಬಣ್ಣಗಳಂತೆ; ಹಲವು ಹೂವುಗಳನ್ನೂ ಪಚ್ಚೆತೆನೆಯ ಹಸಿರನ್ನು ಬೆರೆಸಿ ಬಾಳೆಯ ಒಂದೇ ನಾರಿನಲ್ಲಿ ಕೋದ ಕದಂಬ ಪುಷ್ಪಮಾಲೆಯಂತೆ; ಇಷ್ಟೊಂದು ಭಾವುಕ ಸುಂದರ ಕಲ್ಪನೆಯನ್ನು ನೀಡಿದ ಆ ಅವರೆಲ್ಲ ಮಹನೀಯರೆ ಸರಿ! ಈ ಮಾಲೆಯ ಉದ್ದಕ್ಕೂ ಇರುವ ನಾರು ನಮ್ಮ ರಾಜ್ಯಾಂಗ, ಸಂವಿಧಾನ. ಇದರ ಅಂಗೀಕಾರದ ದಿನವನ್ನು ಸಂಭ್ರಮದಿಂದ ಆಚರಿಸುವುದೇ ಗಣರಾಜ್ಯ ದಿನ.

"ವೈವಿಧ್ಯತೆ ಅನ್ನುವ ಪದ ಸಾಕಲ್ಲ, ವಿವಿಧಾರ್ಥವಾಗಿ ಗೊಂದಲ ಉಂಟುಮಾಡುವ ಈ ಸೆಕ್ಯುಲರ್ ಪದ ಯಾಕೆ ? ಹಾಗೆಯೇ ಅಲ್ಪ ಅಥವಾ ಬಹುಸಂಖ್ಯಾತ ಪದಗಳ ಬಳಕೆಯೂ ಬೇಡ. ನಾವೆಲ್ಲರೂ ಭಾರತೀಯರು ಅಂದರೆ ಸಾಲದೇ ? ಮೊಘಲರ ಕಾಲದಲ್ಲಿ ಮುಸ್ಲಿಮರು ಅಲ್ಪಸಂಖ್ಯಾತರಾಗಿದ್ದರೆ ?" – ಹೀಗೆನ್ನುತ್ತಾರೆ ಕೆಲವರು. ದೇಶ ವಿಭಜನೆಗೆ ಮೊದಲೇ ಹೊಸ ಸ್ವತಂತ್ರ್ಯ ರಾಜ್ಯದಲ್ಲಿ ಕೆಲವಾರು ಅಲ್ಪಸಂಖ್ಯಾತರು. ಹಿಂದೂ ಎನ್ನುವವರ ಬಹುಸಂಖ್ಯೆಯ ಮಧ್ಯೆ ಬದುಕುವ ಪರಿಸ್ಥಿತಿ ಬಂದು, ಬಹುಮತ ತತ್ವದ ಪ್ರಜಾಪ್ರಭುತ್ವದಡಿ ಅದು ಅವರಿಗೆ ಆತಂಕವಾಗಬಹುದು ಅಂತ ಕಳಕಳಿ ವ್ಯಕ್ತಪಡಿಸಿದ್ದರು. ಇದಕ್ಕೆ ಉತ್ತರವಾಗಿ ಅಲ್ಪಸಂಖ್ಯಾತರಿಗೆ ಕೆಲ ಆಶ್ವಾಸನೆಗಳನ್ನು ಸಂವಿಧಾನದಲ್ಲೇ ನೀಡುವ ವ್ಯವಸ್ಥೆಯೂ ಆಯ್ತು. ಇನ್ನು ಮೊಘಲರ ಕಾಲದಲ್ಲಿ "ಜೋ ಜೀತಾ ವೋ ಸಿಕಂದರ್" ಅನ್ನುವಂತೆ ಇದ್ದ ವ್ಯವಸ್ಥೆಯಲ್ಲಿ ಪ್ರಜಾಪ್ರಭುತ್ವವಂತೂ ಇರಲಿಲ್ಲವಲ್ಲ ಅನ್ನಬಹುದು. ಇಂತಹ ಕೆಲ ಆಶ್ವಾಸನೆಗಳನ್ನು ಖಾತ್ರಿಯಾಗಿ ಸ್ವೀಕರಿಸುವುದು ಮತ್ತು ಪ್ರಜಾಪ್ರಭುತ್ವ ಮಾರ್ಗವನ್ನೇ ಆರಿಸಿಕೊಂಡಿದ್ದು, ಇವೆಲ್ಲ ಈ ಹೊಸ ರಾಷ್ಟ್ರವನ್ನು ಕಟ್ಟುವ ಬಹು ಮುಖ್ಯ ಪರಿಕರಗಳಾದುವು. ಈ ಪ್ರಶ್ನೆಯನ್ನು ಸಂಗಾತಿ ಜಿ. ರಾಮಕೃಷ್ಣ ಅವರು ತಮ್ಮದೇ ಶೈಲಿಯಲ್ಲಿ ಉತ್ತರಿಸಿದ್ದನ್ನು ಬಾಕ್ಸ್‌ನಲ್ಲಿ ೨೧೭ನೇ ಪುಟದಲ್ಲಿ ನೀಡಲಾಗಿದೆ ಗಮನಿಸಿ.

* * *

ಈ ಭೂಖಂಡ ಪದೇ ಪದೇ ವಿದೇಶೀ ಆಕ್ರಮಣಕ್ಕೆ ತುತ್ತಾಗಿ, ಬಂದವರು

---




# ದಶಾವತಾರಗಳು – ತಾಯಿ

ದಶಾವತಾರಗಳನೆತ್ತಿ, ಲೋಕೋದ್ಧಾರವ ಗೈದೆವು
'ಸಮನಾರು ನಮಗೆಂಬ' ಅಹಮಿಕೆಯ ದೇವರೇ
ಇಂಥ ಪೌರುಷದ ಅಹಂಕಾರ–ಹೂಂಕಾರ–ಠೇಂಕಾರ
ಎಲ್ಲಾ ನಿಮಗೇ ಇರಲಿ
ನಿಮ್ಮನ್ನು ಹೆತ್ತು–ಹೊತ್ತು– ಪಾಲಿಸಿದ ತಾಯ್ತನದ ದಿವ್ಯ ಸುಖ
ಮಾತ್ರ ನಮಗಿರಲಿ ಬಿಡಿ.

ಎಂಥಾ ತುಂಟರಿದ್ದಿರಿ ನೀವು ಬಾಲ್ಯದಲ್ಲಿ?
ಬೆಳ್ಳಂಬೆಳಗು ನಿದ್ದೆಗೆಟ್ಟು ಲಾಲಿ ಹಾಡಿದೆವು
ರಟ್ಟೆ ಸೋತರೂ ಸಹಿಸಿ ತೊಟ್ಟಿಲವ ತೂಗಿದೆವು
ಎದೆಹಾಲನುಣಿಸಿ ಮಲ–ಮೂತ್ರವ ಬಳಿದು
ಕಣ್ಣರೆಪ್ಪೆಯಲ್ಲಿಟ್ಟು ಕಾಪಾಡಿದೆವು ನಾವು.

ಮಣ್ಣಲ್ಲಿ ಆಡಿ ಮೈ ಕೆಸರಾದರೂ ಜರಿಯದೇ
ನಸುನಕ್ಕು, ಜಳ–ಜಳ ಜಳಕವ ಮಾಡಿಸಿ
ಒಗೆದ ವಸ್ತ್ರಗಳನುಡಿಸಿ, ಗಂಧದೆಣ್ಣೆಯ ಪೂಸಿ
ತಲೆಬಾಚಿ ಸಿಂಗರಿಸಿ, 'ಮಮ್ಮು' ಉಣಿಸಿದೆವು.
'ಆಡೀ ಬಾ ನನಕಂದಾ' ಎಂದು ಅಂಗಳಕೆ ಬಿಟ್ಟೆವು
ಬಿದ್ದು, ಮೊಳಕಾಲ ಚಿಪ್ಪೊಡೆದು 'ಅಮ್ಮಾ'
ಎಂಬ ಕರೆ ಕಿವಿದೆರೆಗೆ ಬಿದ್ದಾಗ
ಎದ್ದೆವೋ ಬಿದ್ದೆವೋ ಎಂಬುದನೂ ನೋಡದೆ
ಓಡೋಡಿ ಬಂದೆವು. 'ಅಯ್ಯೋ ಕಂದಾ' ಎಂದು
ಕನಿಕರಿಸಿ, ಕಣ್ದುಂಬಿ, ಸೆರಗ ತುದಿ ಹರಿದು
ಗಾಯಕ್ಕೆ ಕಟ್ಟಿ, ತಟ್ಟಿ ಮಲಗಿಸಿದೆವು ಎದೆಗೆ ಅಪ್ಪಿ.

ನಮ್ಮ ಕಸುವನ್ನೆಲ್ಲ ಕುಡಿ–ಕುಡಿದು ಬೆಳೆ–ಬೆಳೆದಿರಿ
ಈರೇಳು ಲೋಕವನೂ ವ್ಯಾಪಿಸಿ ಉದ್ಧರಿಸಿದಿರಿ ಜಗವ
ಉದ್ಧಾರದ ಗರ್ವ ನಿಮಗಿದ್ದರೆ ದೇವಾನುದೇವಾ
ನಿಮಗೆ ತಾಯಾಗಿ ಮೊಲೆಹಾಲನುಣಿಸಿ ಬೆಳೆಸಿದ
ನಿಗರ್ವ ಶಾಂತಿ ನಮಗಿರಲಿ.
ಆದರೊಂದೇ ಬೇಜಾರು ದಶ ದೇವಶಿಶುಗಳೇ
ನೀವೆಲ್ಲಾ, ಕಾಲಾನುಕಾಲಕ್ಕೆ ಅವತರಿಸಿದಿರಿ
ಲೋಕ–ಲೋಕಗಳನು ಉದ್ಧರಿಸಿದಿರಿ
ಅನಂತರವೂ ಇಲ್ಲಿ ನೋಡಿ––
ತಾಯಿಭ್ರೂಣಹತ್ಯೆ, ತಾಯಿಯ ಅತ್ಯಾಚಾರ
ತಾಯಂದಿರ ತುಳಿದು ಕೇಕೆ ಹಾಕುವ
ಈ ಪರಿ ಸರಿಯೇ?
ಎದೆಹಾಲನುಣಿಸಿದ ಎದೆಗೇ ಬರ್ಬರ ಒದೆ ಯಾಕೆ?
ಉದ್ಧಾರ ಮಾಡಿದ್ದು ಸಾಕು, ದಣಿದಿದ್ದೀರೇನೋ ಪಾಪ
ನಿಮಗೆ ಬೇಕೇ ಬೇಕೀಗ ವಿಶ್ರಾಂತಿ
ನಾನು ನಿಮ್ಮ ತಾಯಿ, ಕೈಗೆತ್ತಿಕೊಂಡಿದ್ದೇನೆ
ಅವತಾರದ ಮಹಾವ್ರತ.
ಗಂಡು ಕೂಸಿಗೂ–ಹೆಣ್ಣು ಕೂಸಿಗೂ
ಭೇದವಿಲ್ಲದೇ ಮೊಲೆಹಾಲನಿತ್ತು ಕಾಯುವೆನು
ಯಾಕೆಂದರೆ ನಾನು ತಾಯಿ – ಕೇವಲ ತಾಯಿ ಮಾತ್ರ
ತಾಯ್ತನದ ನಮ್ರತೆಯಲಿ ಜಗವ ಪೊರೆಯುವೆನು



**ಶಶಿಕಲಾ ವೀರಯ್ಯಸ್ವಾಮಿ**
ಮನೆ ಸಂಖ್ಯೆ ೮೯, ಬಸವ ಚಂದ್ರಿಕೆ, ಟೀಚರ್ಸ್ ಕಾಲೋನಿ, ಬೀದರ – ೫೮೫ ೪೦೩

ಇಲ್ಲೇ ನೆಲಸಿ, ನಮ್ಮವರೇ ಆಗಿ, ಪರಿವರ್ತಿತವಾದುದು ನಮ್ಮ ಚರಿತ್ರೆಯಲ್ಲಿ ಗಮನಿಸಬೇಕಾದ ಒಂದು ಮುಖ್ಯ ವಿಷಯ. ಆರ್ಥಿಕವಾಗಿ ಈ ದೇಶ ಒಂದು ಸಮೃದ್ಧ ವ್ಯವಸ್ಥೆಯಾಗಲು ಸಾಧ್ಯವೇ ? **ಸಮೃದ್ಧಿಯ, ಸ್ವಾವಲಂಬನೆಯ ಬೆನ್ನು ಇಲ್ಲದೆ ಸ್ವಾಯತ್ತತೆ, ಸ್ವಾತಂತ್ರ್ಯ ಉಳಿಯುವುದಿಲ್ಲ**. ಈ ಹಿಂದೆ ನಾವು ಆರ್ಥಿಕವಾಗಿ ಸಾಕಷ್ಟು ಸಮರ್ಥರಾಗಿ ಇಲ್ಲದ್ದೇ ಕಾರಣ ಪರಕೀಯರ ದಾಳಿಗೆ : ನಮ್ಮಲ್ಲಿದ್ದ ಅಲ್ಪಸ್ವಲ್ಪ ಸಂಪತ್ತಿಗಾಗಿ. ಅವರಿಗೇ ಇಲ್ಲದ ಸಮಾಧಾನದ ಜೀವನ ನಡೆಸುವ ಅವಕಾಶಕ್ಕಾಗಿ ನಡೆದದ್ದು. ಅಮೇರಿಕಕ್ಕೆ ವಲಸೆ ಹೋಗುವ ಬಯಕೆಗೆ ಇದೇ ಕಾರಣ. ಬ್ರಿಟಿಷರ ಆಡಳಿತದ ಕಾಲದಲ್ಲಿ ಮಾತ್ರ, ಆಕ್ರಮಣ ಮಾಡಿದವರು, ಇಲ್ಲೇ ಉಳಿದುಕೊಳ್ಳದೆ ಇಲ್ಲಿಯ ಸಂಪತ್ತನ್ನು ವೃದ್ಧಿಮಾಡುವ ಬದಲು ಲೂಟಿ ಮಾಡಿದರು. ಅದರ ಉದ್ದೇಶ ಪ್ರಥಮತಃ ಲೂಟಿಯಷ್ಟೆ. ತನ್ಮೂಲಕ ನಮ್ಮನ್ನು ನಿರ್ವೀರ್ಯಗೊಳಿಸುವುದು. ಎಲ್ಲ ಖಾಲಿಯಾದ ಮೇಲೆ, ಪರೋಪಜೀವಿಗಳಂತೆ, ಬೆಳೆಯನ್ನು ಆಕ್ರಮಿಸಿದ ಮಿಡತೆಗಳ ಹಿಂಡಿನಂತೆ, ಹಾರಿಹೋಗುವುದು. ನಾವು ೧೯೪೭ರಲ್ಲಿ ಬೊಕ್ಕಸ ಖಾಲಿಯಾದ ರಾಷ್ಟ್ರವೊಂದನ್ನು ಪಡೆದವು. ಈ ೬೦ ವರ್ಷಗಳೂ ನಮ್ಮ ಆರ್ಥಿಕ ಪುನಶ್ಚೇತನವನ್ನು ಸಾಧಿಸಲು, ಆ ಮಾರ್ಗದಲ್ಲೇ ಸಾಮಾಜಿಕ ನ್ಯಾಯದ ಆಧಾರದಲ್ಲಿ ಸಂಪತ್ತನ್ನು ಹಂಚುವುದು ಮುಂತಾದ ಕೆಲಸಗಳಲ್ಲಿ ತೊಡಗಿದ್ದೇವೆ. ಈ ಬೆಳವಣಿಗೆಯು ಹೇಗಿರಬೇಕೆಂದು ಸ್ವಾತಂತ್ರ್ಯ ಪೂರ್ವದಲ್ಲೇ ನೀಲಿನಕ್ಷೆ ಹಾಕಲಾಗಿತ್ತು. ಅದರಲ್ಲಿ ಸ್ವಾತಂತ್ರ್ಯ ಹೋರಾಟದ ನಾಯಕರಲ್ಲದೆ ಉದ್ಯಮಪತಿಗಳೂ ಭಾಗವಹಿಸಿದ್ದರು. ಭಾರತದ ಪರಿಸ್ಥಿತಿಯಲ್ಲಿ ಸ್ವಾತಂತ್ರ್ಯಾನಂತರ ಯೋಜನಾಬದ್ಧ ಆರ್ಥಿಕ ಬೆಳವಣಿಗೆಯೇ ಸರಿಯಾದ ಮಾರ್ಗ ಎಂದು ನಿರ್ಧರಿಸಲಾಗಿತ್ತು. ಅದರನ್ವಯ ಹಲವು ಯೋಜನೆಗಳು, ತನ್ಮೂಲಕ ಮಂದಗತಿಯದಾದರೂ ಸ್ಪಷ್ಟವಾದ ಬೆಳವಣಿಗೆಯೂ ಆಗಿತ್ತು. ಆ ವೇಳೆಗೆ ಸ್ವಾತಂತ್ರ್ಯ ಹೋರಾಟದಲ್ಲಿ ನೇರವಾಗಿ ಭಾಗವಹಿಸಿದ್ದ ನಾಯಕರೂ, ಅವರೊಂದಿಗೇ ಅಂದಿನ ಆರ್ಥಿಕ, ಸಾಮಾಜಿಕ ಕನಸುಗಳೂ ಮರೆವಿಗೆ ಸರಿಯುತ್ತಿದ್ದ ಸಂದರ್ಭದಲ್ಲಿ ಭಾರತ ಯೋಜನಾಬದ್ಧ ಮಾರ್ಗವನ್ನು ಬಿಟ್ಟು 'ಮುಕ್ತ ಮಾರುಕಟ್ಟೆ' ಹೆಸರಿನ ಬಂಡವಾಳ ವ್ಯವಸ್ಥೆಯ ಆರ್ಥಿಕ ನೀತಿಗೆ ಎರವಲಾಗಿದೆ. ಇದರ ಹಾದಿ ಈಗಾಗಲೇ ಎರಡು ದಶಕಗಳಷ್ಟು ಸವೆದಿದೆ. **ಜಿಡಿಪಿ ಹೆಚ್ಚಿದೆಯಂತೆ. ಬಡತನವೂ ಹೆಚ್ಚಿದೆ. ಸಂಪತ್ತಿನ ಕೇಂದ್ರೀಕರಣವೂ ಹೆಚ್ಚಿದೆ. ರಾಜಕೀಯ ಅಸ್ಥಿರತೆಯೂ ಹೆಚ್ಚಿದೆ. ಇವಕ್ಕೆಲ್ಲಾ ಪರಸ್ಪರ ಕಾರಣ–ಪರಿಣಾಮ ಸಂಬಂಧಗಳಿಲ್ಲವೇ** ? ಈ ಬೆಳವಣಿಗೆ ಈ ದೇಶದ ಬಹು ಸಂಖ್ಯೆಯ ಸಾಧಾರಣ ಜನರನ್ನು ಹತಾಶರನ್ನಾಗಿಸಿದೆ. ವಿಶ್ವಾಸ ಕಳೆದುಕೊಳ್ಳುತ್ತಿದ್ದಾರೆ. ಇದು **ಒಕ್ಕೂಟದ ರಕ್ಷೆಯಾದ ನ್ಯಾಯಯುತ ಆರ್ಥಿಕ ವ್ಯವಸ್ಥೆಗೆ ಧಕ್ಕೆ ಉಂಟುಮಾಡಿದೆ. ಅದರ ಬೆನ್ನಿಗೇ ಫ್ಯಾಸೀ ಮನೋಭಾವನೆಯ ಬಂಡವಾಳದ ಏಕಸ್ವಾಮಿತ್ವ ಬೆಳೆದಿದೆ.** ಜಾತ್ಯತೀತತೆಗೆ ಪೆಟ್ಟುಬೀಳುವ ಮತಧರ್ಮೀಯ ಅಸಹಿಷ್ಣುತೆ ಹೆಚ್ಚುತ್ತಿದೆ. ರಾಷ್ಟ್ರೀಯ ಸಂಸ್ಕೃತಿಗೆ ಸ್ಥಳೀಯ ಪರಂಪರೆಗೆ ಜಾಗತೀಕರಣದ ಪೆಟ್ಟು ಬಿದ್ದಿದೆ. ಎಲ್ಲೋ ಏನೋ ನಮ್ಮ ಹಾದಿ ತಪ್ಪಿದೆ. ಇದು ಇಂದು ನಮ್ಮ ಗಣರಾಜ್ಯ ಎದುರಿಸುತ್ತಿರುವ ಬಹು ದೊಡ್ಡ ಅಪಾಯ. ಬಂಡವಾಳ ವ್ಯವಸ್ಥೆ ಇಡೀ ರಾಷ್ಟ್ರಕ್ಕೆ ಸುಂಕದ ಕಟ್ಟೆ ಇಲ್ಲದ ಮುಕ್ತ ಮಾರಾಟದ ವಾಣಿಜ್ಯದ ಹಾದಿಯನ್ನು ತೆರೆಯುತ್ತಿದೆ. ಆದರೆ ಅದರ ಬೆನ್ನಿಗೇ ರಾಜ್ಯ ಮತ್ತು ಕೇಂದ್ರಗಳ ನಡುವೆ ಸ್ವಾಯತ್ತತೆಯ ತಿಕ್ಕಾಟವೂ ತೀವ್ರವಾಗುತ್ತಿದೆ. **ರಾಜ್ಯಗಳು ಬಲಿಷ್ಠವಾಗಿಲ್ಲ. ಆದರೆ ಕೇಂದ್ರ ದುರ್ಬಲವಾಗುತ್ತಿದೆ. ನಮ್ಮ ಇತಿಹಾಸದ ಹಳೆಯ ಕತೆ ಇದು**. ಇಂತಹ ಆಂತರಿಕ ಪರಿಸ್ಥಿತಿಯ ಸಂದರ್ಭದಲ್ಲೇ ಪರಕೀಯ ಆಕ್ರಮಣಕಾರಿ ಶಕ್ತಿಗಳು ತಮ್ಮ ಬಾಲ ಬಿಚ್ಚುವುದು. ಇವೆಲ್ಲವನ್ನು ಕುರಿತು ಗಂಭೀರ ಚರ್ಚೆ ಇಂದಿನ ಅಗತ್ಯ. ಕೇವಲ ಪರಸ್ಪರ ಬೆಸೆದ ಆರ್ಥಿಕ ಹಿತಾಸಕ್ತಿ ತಂತಾನೇ ಐಕ್ಯತೆಗೆ ಸಾಕಾಗುವುದಿಲ್ಲ. ಅದು ನಮ್ಮ ಸ್ಥಳೀಯ ರಾಷ್ಟ್ರೀಯತೆಗೆ, ಇಡೀ ರಾಷ್ಟ್ರೀಯತೆಗೆ, ಆ ಸಂಸ್ಕರಣಗಳಿಗೆ ಪೋಷಕವೇ ಅಥವಾ ಮಾರಕವೇ ಎನ್ನುವುದು ನಿರ್ಣಾಯಕವಾಗುತ್ತದೆ. ಸಂಸ್ಕೃತಿಯ ಪ್ರಾಧಾನ್ಯತೆಯನ್ನು ಎತ್ತಿ ಹಿಡಿಯುವ ಮಾರ್ಗಗಳು ಆರ್ಥಿಕ ಬೆಳವಣಿಗೆಗೆ ಧಕ್ಕೆ ಉಂಟುಮಾಡಿದರೆ, ಅದು ಮತಾಂಧ ಮೂಲಭೂತವಾದದ ಮಾರ್ಗಕ್ಕೆ ಹಾದಿ ಮಾಡಿಕೊಡುವ ಅಪಾಯವಾಗುತ್ತದೆ. ಹೀಗೆ ಹೇಳುವುದು 'ಎಕನಾಮಿಕ್ ಡಿಟರ್‌ಮಿನಿಸಂ' ಅಲ್ಲ. ಅಂದರೆ, ಎಲ್ಲವೂ ಆರ್ಥಿಕತೆಯಿಂದಷ್ಟೇ ನಿರ್ಧರಿತವಾಗುವುದಿಲ್ಲ, ಆದರೆ ಆರ್ಥಿಕತೆಯ ಪಾತ್ರ ಇದ್ದೇ ತೀರುತ್ತದೆ. ನ್ಯಾಯಯುತವಾದ ಹಂಚಿಕೆಯ ಅಭಿವೃದ್ಧಿ ಎಂದಾಗ ದಾರಿ ತಪ್ಪಿಸಲು ಬಳಸುವ ಆಪಾದನೆ ಅದು. ರಾಷ್ಟ್ರೀಯತೆಯನ್ನು ವ್ಯಾಖ್ಯಾನಿಸುವಾಗ ಸಂಸ್ಕೃತಿ, ಭೌಗೋಳಿಕತೆ, ಮತಧರ್ಮ, ಭಾಷೆ, ಜನಾಂಗ ಮುಂತಾದವುಗಳ ಜತೆಜತೆಗೇ, ಅವೆಲ್ಲವುಗಳೊಡನೆ ಹಾಸುಹೊಕ್ಕಾಗಿಸುವ ಪ್ರಭಾವಿ **ನ್ಯಾಯಯುತ ಆರ್ಥಿಕ ಅಭಿವೃದ್ಧಿಯೂ** ಇದೆ ಎನ್ನುವ ಸ್ಪಷ್ಟನೆ ಇದು. ಇವೆಲ್ಲವುಗಳ ಬೆಳವಣಿಗೆಯ ಮೇಲೂ ಸತತ ನಿಗಾ ಇಡಬೇಕು, ಸ್ವಾತಂತ್ರ್ಯ ಕಾಪಾಡಿಕೊಳ್ಳಲು. ಅದನ್ನೇ ಇಂಗ್ಲಿಷ್‌ನಲ್ಲಿ 'ಪ್ರೈಸ್ ಆಫ್ ಲಿಬರ್ಟಿ ಈಸ್ ಎಟರ್‌ನಲ್ ವಿಜಿಲೆನ್ಸ್' ಅನ್ನುವುದು. ಆ ವಿಜಿಲೆನ್ಸ್ ಸ್ವಲ್ಪ ಕಮ್ಮಿಯಾಗಿರುವುದರಿಂದ ಆತಂಕ ಉಂಟಾಗುತ್ತದೆ.

ಪ್ರಗತಿಪರ ಚಿಂತನೆಯು ಸಂಸ್ಕೃತಿಯ ಕ್ಷೇತ್ರವನ್ನು ಮತಧರ್ಮದೊಡನೆ ತಪ್ಪಾಗಿ ಗ್ರಹಿಸಿ, ಪ್ರಮಾದ ಮಾಡಿ, ಸಂಪೂರ್ಣವಾಗಿ ಮೂಲಭೂತವಾದಿಗಳ ಪ್ರಭಾವಕ್ಕೆ ಆ ಕ್ಷೇತ್ರವನ್ನು ಒಪ್ಪಿಸಿಬಿಟ್ಟಿತೆ ಎಂದು ನಮ್ಮ ಕಾಲದ ಅದ್ಭುತ ಇತಿಹಾಸಜ್ಞ ಕೆ. ಎಂ. ಪಣಿಕ್ಕರ್ ಅವರು ಪ್ರಶ್ನಿಸುತ್ತಾರೆ. ಮತಧರ್ಮವೇ ಪ್ರಭುತ್ವ ಶಕ್ತಿಯೂ ಆಗಿದ್ದ ಕಾಲದಲ್ಲಿ ಈ ಮಿಶ್ರಣದ ಬೆಳವಣಿಗೆ ಆಗಿದ್ದಿರಬಹುದು. ಆದರೆ ಮೂಲತಃ ಸಂಸ್ಕೃತಿ ಮತಧರ್ಮದಿಂದ ಸ್ವಾಯತ್ತವಾಗೇ ಬೆಳೆದಿದ್ದು ಅಂತ ಅನ್ನಿಸುತ್ತದೆ. ತನ್ನದೇ ಅಧಿಕಾರ ಸಾಧನೆಗೆ ಮತಧರ್ಮವು, ಸಂಸ್ಕೃತಿಯನ್ನು ತನ್ನ ವಲಯಕ್ಕೆ ಆವಾಹಿಸಿಕೊಂಡಿರಬಹುದು. ಹಾಗೆಯೇ ಯಾವುದೇ ಕಾಲದಲ್ಲೂ ಅಧಿಕಾರರಾಜಕೀಯ ತನಗೆ ತಾತ್ಕಾಲಿಕವಾಗಿ ಬೆಂಬಲವಾಗುವ ಎಲ್ಲ ಲಭ್ಯ ಪರಿಕರಗಳನ್ನೂ, ಸಂಸ್ಕೃತಿಯನ್ನೂ, ಮತಧರ್ಮವನ್ನೂ ಸೆಳೆದುಕೊಳ್ಳುತ್ತದೆ. ಪಣಿಕ್ಕರ್ ಅವರ ಈ ಪ್ರಗತಿಪರ ರಾಜಕೀಯ ಆಲೋಚನೆಯನ್ನು ತೀವ್ರವಾಗಿ ಪರಿಗಣಿಸಬೇಕು. ಈ ಸಂದರ್ಭ ಪಿ. ಸಿ. ಜೋಶಿಯವರ ಕೊಡುಗೆ ನೆನಪಿಗೆ ಬರುತ್ತದೆ.

**ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ವನಸಿರಿ', ಟೆಲಿಕಾಂ ಬಡಾವಣೆ, ವಿದ್ಯಾನಗರ, ಬೆಂಗಳೂರು – ೫೬೨ ೧೫೭








# ಒಡಲ ದಂಡಿಗೆಯ ಮಾಡಿ

ಕೃತಿ : **ಹರದೇಶಿ – ನಾಗೇಶಿ ಕಲೆ ಮತ್ತು ಕಲಾವಿದರು** – ಲಿಂಗ ಸಂಬಂಧಿ ಅಧ್ಯಯನ
ಲೇಖಕರು : **ಡಾ॥ ಶೈಲಜಾ ಹಿರೇಮಠ**
ಬೆಲೆ : ರೂ. 200/–
ಪ್ರಕಾಶಕರು : **ಪ್ರಸಾರಾಂಗ**, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ

**ಡಾ॥ ಸಬಿತಾ ಬನ್ನಾಡಿ**

"ದೇವದಾಸೇರ ಪೆನ್‌ಶನ್ ಕೊಡತೇವ ಅಂದ್ರು, ಅದನ್ನ ಬ್ಯಾಡಾ ಅಂದೆ. ದೇವದಾಸೇರು ಅಂದ್ರ ಸೂಳೆತನ ಮಾಡವ್ರು ಅಂತಾರಲ್ಲ; ಅಂಥಾ ದಗದ ನಾ ಮಾಡಿಲ್ಲ ತಂಗಿ. ನಾನ್ಯಾಕ ದೇವದಾಸಿ ಪೆನ್‌ಶನ್ ತಗೋಬೇಕ್ಹೇಳು ? ಎಪ್ಪತ್ತು ವರ್ಷಗಂಟಲೆ ಈ ಕಲಾದಾಗ ದುಡದೇನು. ಸರಸತಿ ನನಗ ಕಲಿಸ್ಯಾಳ; ಸಾಕ್ಯಾಳ; ಸಲುವ್ಯಾಳ, ಸಾಯುವದರಾಗ ಆಕಿ ಹೆಸರ್‍ಲಿ ಪೆನ್‌ಶನ್ ತಗೋಬೇಕಂತ ಆಸಿ." – ಇದು ನಾಗೇಶಿ ಹಾಡುಗಾರ್ತಿ ದ್ರೌಪದಿಯ ಮಾತುಗಳು.

ಕಲೆ ಮತ್ತು ಕಲಾವಿದರ ಅಧ್ಯಯನವೆಂದರೆ ಅವರ ಕಲಾ ಸಾಮರ್ಥ್ಯವನ್ನು ಒರೆಗೆ ಹಚ್ಚುವುದು, ವಿಶ್ಲೇಷಿಸುವುದು ಎಂದೇ ಭಾವಿಸಲಾಗುತ್ತದೆ. ಅದರಲ್ಲೂ ಇತ್ತೀಚಿನ ದಿನಗಳಲ್ಲಿ ಎಂ.ಫಿಲ್, ಪಿಎಚ್.ಡಿ. ಅಧ್ಯಯನಗಳಿಗೆ ಇವೆಲ್ಲಾ ಯಾಂತ್ರಿಕವಾಗಿ ಅಧ್ಯಯನ ಮಾಡಬೇಕಾದ 'ಟಾಪಿಕ್'ಗಳಾಗಿ ಮಾರ್ಪಟ್ಟಿವೆ. ಬಹುಶಃ ಈ ಕಾರಣಕ್ಕೇ ಇರಬಹುದು, ಡಾ॥ ಶೈಲಜಾ ಹಿರೇಮಠರ 'ಹರದೇಶಿ – ನಾಗೇಶಿ ಕಲೆ ಮತ್ತು ಕಲಾವಿದರು ಲಿಂಗ ಸಂಬಂಧಿ ಅಧ್ಯಯನ' ಎಂಬ ಕೃತಿಯನ್ನು ಓದಿಗೆ ಎತ್ತಿಕೊಳ್ಳಲು ನಾನು ಕೆಲವು ಸಮಯವನ್ನೇ ತೆಗೆದುಕೊಂಡೆ. ಆದರೆ ಒಮ್ಮೆ ಓದಿಗೆ ತೆರೆದುಕೊಂಡಂತೆ ಇದು ಬೇರೆಯೇ ಆವರಣಕ್ಕೆ ನಮ್ಮನ್ನು ಕೊಂಡೊಯ್ಯುತ್ತದೆ. ಅದಕ್ಕೆ ಕಾರಣ ಅದು ಕಾದಂಬರಿಯಂತೆ ಓದಿಸಿಕೊಂಡು ಹೋಗಬಲ್ಲ ಶೈಲಿಯನ್ನು ಹೊಂದಿರುವುದಷ್ಟೇ ಅಲ್ಲ. ಬದಲಿಗೆ, ನಾವು ಬದುಕುತ್ತಿರುವ ಈ ಜಗತ್ತಿನಲ್ಲಿ ನಮ್ಮ ಸುತ್ತಿನ ಜೀವಿಗಳು ಹೇಗೆಲ್ಲಾ ಬದುಕುತ್ತಿದ್ದಾರೆ ಎಂಬ ಪರಿವೆಯೇ ನಮಗಿಲ್ಲದಿರುವುದನ್ನು ಚುಚ್ಚಿತೋರುತ್ತಿದೆ ಎನ್ನುವುದೂ ಆಗಿದೆ.

ಉತ್ತರ ಕರ್ನಾಟಕದ ಭಾಗದಲ್ಲಿ ಅತ್ಯಂತ ಜನಪ್ರಿಯವಾಗಿರುವ ಹರದೇಶಿ–ನಾಗೇಶಿ ಕಲೆಯ ಕುರಿತು ಕರ್ನಾಟಕದ ಇತರ ಭಾಗದ ಜನರಿಗೆ ಅಷ್ಟೇನೂ ಮಾಹಿತಿಯಿಲ್ಲ. ಇದೊಂದು ಸವಾಲ್ – ಜವಾಬ್ ಮಾದರಿಯ ಹಾಡುಗಾರಿಕೆಯಾಗಿದ್ದು ಇದರಲ್ಲಿ ಭಾಗವಹಿಸುವ ಕಲಾವಿದರು ರಾತ್ರಿಯಿಡೀ ನಿಂತುಕೊಂಡೇ ಇದನ್ನು ಹಾಡುತ್ತಾರೆ. ಹರದೇಶಿ ಹಾಡುವವರು ಶಿವನನ್ನು ಪ್ರತಿನಿಧಿಸುತ್ತಾ ಗಂಡ್ಹೆಚ್ಚು ಎಂದು ವಾದಿಸಿದರೆ, ನಾಗೇಶಿ ಕಲಾವಿದರು ಪಾರ್ವತಿಯನ್ನು ಪ್ರತಿನಿಧಿಸುತ್ತಾ ಹೆಣ್ಹೆಚ್ಚು ಎಂದು ವಾದಿಸುತ್ತಾರೆ. ಇದು ಕೇವಲ ಶಿವ ಪಾರ್ವತಿಯರ ಕತೆಗಳಿಗಷ್ಟೇ ಸಂಬಂಧಿಸಿರುವುದಿಲ್ಲ. ಆಧುನಿಕ ಬದುಕಿನ ಜೀವನ ಶೈಲಿಯ ಲೇವಡಿಯಿಂದ ತೊಡಗಿ ಹಲವು ಮಾದರಿಯ ಕಟ್ಟುಕತೆಗಳನ್ನೂ ಈ ಹಾಡುಗಳಲ್ಲಿ ಬಳಸಿಕೊಳ್ಳಲಾಗುತ್ತದೆ. ಆದರೆ ಅಂತಿಮವಾಗಿ ಇದು ಗಂಡ್ಹೆಚ್ಚೋ ಹೆಣ್ಹೆಚ್ಚೋ ಎಂಬ ವಾದಕ್ಕೇ ಮರಳಿ, ಇಬ್ಬರಲ್ಲಿ ಒಬ್ಬರು ಗೆಲ್ಲುತ್ತಾರೆ. ಹೀಗೆ ಗೆಲ್ಲುವುದಕ್ಕಾಗಿ ಎದುರು ಹಾಡುಗಾರರ ವೈಯಕ್ತಿಕ ನಿಂದೆಗೂ ಅಶ್ಲೀಲ ಮಾತುಗಳಿಗೂ ಕಲಾವಿದರು ಇಳಿಯುವುದಿದೆ. ಇಲ್ಲಿ ಹೆಣ್ಹೆಚ್ಚು ಎಂದು ವಾದಿಸುವ ಹಾಡುಗಾರರು ಹೆಚ್ಚಾಗಿ ಹೆಂಗಸರೇ ಆಗಿರುತ್ತಾರೆ ಮತ್ತು ಇವರೆಲ್ಲಾ ದೇವದಾಸಿಯರೇ ಆಗಿರುತ್ತಾರೆ. ಈ ಕಲೆಯ ಕುರಿತು ಈಗಾಗಲೇ ಹಲವರು ಅಧ್ಯಯನ ಮಾಡಿದ್ದರೂ ಅದು ಈ ಹಾಡುಗಳ ಸಂಗ್ರಹ ಮತ್ತು ಹಾಡುಗಳ ವಿಶ್ಲೇಷಣೆಗಳಿಗಷ್ಟೇ ಸೀಮಿತವಾಗಿದೆ. ಶೈಲಜಾ ಅವರು ಈ ಕಲಾವಿದರನ್ನು ಮುಖತಃ ಸಂದರ್ಶಿಸಿ ಈ ಕಲೆಯ ಸಾಮಾಜಿಕ ಮುಖವನ್ನು ಅನಾವರಣ ಮಾಡುವೆಡೆಗೆ ಆಸಕ್ತಿ ತೋರಿದ್ದಾರೆ. ಈ ಸಂದರ್ಭದಲ್ಲಿ ಅವರು ಕಂಡುಕೊಂಡ ಸತ್ಯಗಳ ಅನಾವರಣವನ್ನು ಅಕಾಡೆಮಿಕ್ ಭಾಷೆಯಲ್ಲಿ ನಿರೂಪಿಸದೆ ಕಲಾವಿದರ ಭಾಷೆಯಲ್ಲೇ ಮಾಡಿರುವುದು ಈ ಕೃತಿಯ ಮಹತ್ವವನ್ನು ಇನ್ನಷ್ಟು ಹೆಚ್ಚಿಸಿದೆ. ಜೊತೆಗೆ, ಇಲ್ಲಿ ಅನಾವರಣವಾದ ಸತ್ಯಗಳು ನಮ್ಮನ್ನು ಬೆಚ್ಚಿಬೀಳಿಸುವಂತಿವೆ.

ಇದನ್ನೊಂದು ಪಾತಿವ್ರತ್ಯದಲ್ಲಿ ನಂಬಿಕೆ ಇರುವ ದೇವದಾಸಿಯರ ಕಥಾನಕ ಎನ್ನಬಹುದು. ಅಥವಾ ಪತಿವ್ರತೆಯರನ್ನು ದೇವದಾಸಿಯರನ್ನಾಗಿಸುವ ಸಾಮಾಜಿಕ ಕ್ರೌರ್ಯದ ಕಥಾನಕ ಎಂದೂ ಕರೆಯಬಹುದು. ಅಥವಾ ದೇವದಾಸಿಯರಾಗಿದ್ದರೂ ಸೂಳೆಯರಲ್ಲದವರು ತಮ್ಮ ಘನತೆಯನ್ನು ತಮಗೆ ದೊರಕಿಸಿಕೊಡಿ ಎಂದು ಸಮಾಜಕ್ಕೆ ಮಾಡುತ್ತಿರುವ ಆರ್ದ್ರ ಮೊರೆಯ ಕಥಾನಕ ಎಂದೂ ಕರೆಯಬಹುದು. ಹೆಣ್ಣನ್ನು ಹಣಿಯುವ

> ಇದೊಂದು ಲಿಂಗಸಂಬಂಧಿ ಅಧ್ಯಯನವಾಗಿದೆ. ಹಾಡಿಕೆಯ ಕ್ಷೇತ್ರದಲ್ಲಿನ ಪುರುಷ ಮತ್ತು ಮಹಿಳೆಯ ಅನುಭವಗಳನ್ನು ಲಿಂಗಸಂಬಂಧಿ ನೆಲೆಯಲ್ಲಿ ನಿರ್ವಚಿಸುವ ಉದ್ದೇಶದಿಂದ ಹೊರಟ ಈ ಅಧ್ಯಯನ ಹೊರಹಾಕುವ ವಿಚಾರಗಳು ನಾಗರಿಕ ಸಮಾಜಕ್ಕೆ ಕೆಲವು ಪ್ರಶ್ನೆಗಳನ್ನು ಎಸೆಯುತ್ತವೆ. ಇದೇ ಹಾಡಿಕೆಯ ರಂಗದಲ್ಲಿರುವ ಪುರುಷರು ಬಡತನದ ನೋವನ್ನು ಅನುಭವಿಸಿದವರೇ ಆದರೂ ಅವರು ಎದುರಿಸುವ ಅವಮಾನದ ಸ್ವರೂಪ ಮಾತ್ರ ಮಹಿಳೆಯರ ಅನುಭವಕ್ಕಿಂತ ಭಿನ್ನವಾಗಿರುತ್ತವೆ. ಇಲ್ಲಿ ಹೆಂಗಸರು ಹೊಟ್ಟೆಯ ತಾಪಕ್ಕಾಗಿ, ಹಾಡಿಕೆ ಕಲಿಸಲು ಬರುವ ಗುರು ಎನಿಸಿಕೊಂಡವನ ಅತ್ಯಾಚಾರಕ್ಕೆ ಬಲಿಯಾಗಬೇಕಾಗುತ್ತದೆ. ಮೈನೆರೆದು ಎರಡು ಮೂರು ತಿಂಗಳಲ್ಲೇ ಇಂತಹ ದಾಳಿಗೆ ಬಲಿಯಾಗುವ ಇವರು ಆ ಕಾರಣಕ್ಕೆ ಅವರೊಂದಿಗೇ ಉಡಿಕೆ ಶಾಸ್ತ್ರವನ್ನೂ ಮಾಡಿಕೊಳ್ಳಬೇಕಾಗುತ್ತದೆ. (ಈ ಹಾಡಿಕೆಯ ಹೆಂಗಸರು ಮದುವೆ ಮಾಡಿಕೊಳ್ಳುವಂತಿಲ್ಲ. ಉಡಿ ತುಂಬುವವನನ್ನೇ ಗಂಡನೆಂದು ಭಾವಿಸಿ ಅವನೊಂದಿಗೇ ಬದುಕುತ್ತಾರೆ ಮತ್ತು ಅವನಿಗೇ ನಿಯತ್ತು ತೋರುತ್ತಾರೆ.) ಈ ಕೃತಿಯೊಳಗಣ ವಿವರಗಳು ದೇವದಾಸಿಯರ ಕುರಿತಾಗಿ ಇರುವ ಕೆಲವು ಸಾಮಾನ್ಯ ನಂಬಿಕೆಗಳನ್ನು ಮುರಿದುಹಾಕುತ್ತವೆ.

ಅಸ್ತ್ರವಾಗಿ ಶೀಲ ನಿರಂತರವಾಗಿ ಬಳಕೆಯಾಗುವುದನ್ನೂ ಆ ಇರಿತದಿಂದ ಹೆಣ್ಣು ಮಾನಸಿಕವಾಗಿ ಘಾಸಿಗೊಳಗಾಗಿ ನಲುಗುವುದನ್ನೂ ಇನ್ನೂ ಮುಂದುವರಿಸಿದ್ದಾಳೆ. ಅದಕ್ಕಾಗಿ ಹಲವು ರಾಜಿಗಳನ್ನು ಮಾಡಿಕೊಳ್ಳುತ್ತಲೇ ಇದ್ದಾಳೆ. ಅವಳು ಹಾಗೆ ನಲುಗುವುದಕ್ಕೆ ಪುರುಷ ಚಿಂತನೆಯ ಮೂಸೆಯಲ್ಲಿ ಹುಟ್ಟಿದ ಈ ಪಾತಿವ್ರತ್ಯದ ಬಾಣವನ್ನು ಅದೇ ಪುರುಷನೆಲೆಯಲ್ಲೇ ಗ್ರಹಿಸಿರುವುದೂ ಕಾರಣವಾಗಿದೆ. ಹೀಗಾಗಿ ಸುಳ್ಳು ಸುಳ್ಳೇ ತನ್ನ ಮೇಲೆ ಇಂತಹ ಆರೋಪಗಳು ಬಂದರೆ ಎಂದು ಹೆದರುವುದೂ ಸುಳ್ಳೇ ಇಂತಹ ಆರೋಪ ಬಂದಾಗ ಅದನ್ನು ಸುಳ್ಳೆಂದು ಸಾಕ್ಷಿ ಸಮೇತ ನಿರೂಪಿಸಲಾಗದೇ ಒದ್ದಾಡುವುದೂ ನಡೆದುಕೊಂಡೇ ಬಂದಿದೆ. ಬಹುಶಃ ಈ ಆರೋಪಕ್ಕೆ ಹೆಣ್ಣು ಸೊಪ್ಪು ಹಾಕದೇ ಹೋದ ದಿನ ಈ ಜಗತ್ತಿನ ಎಷ್ಟು ಪುರುಷರು ಮತ್ತು ಪುರುಷ ಚಿಂತನೆಯನ್ನೇ ಹಾಸಿ ಹೊದ್ದಿರುವ ಮಹಿಳೆಯರು ನಿದ್ದೆಗೆಡುತ್ತಾರೋ ಗೊತ್ತಿಲ್ಲ. ಆದರೆ ದೇವದಾಸಿ ಪಟ್ಟ ಹೊತ್ತ ಹೆಂಗಸರೂ ಈ ಆರೋಪದೆದುರು ಹೊಟ್ಟೆಯಲ್ಲಿ ಮುಳ್ಳು ಹೊಕ್ಕಂತೆ ರೋದಿಸುವುದು ಮತ್ತು ಇತ್ತೀಚೆಗೆ ಶಿಕ್ಷಣಕ್ಕೆ ತೆರೆದುಕೊಳ್ಳುತ್ತಿರುವ ಇವರ ಮಕ್ಕಳು ತಾಯಿಯ ಮೇಲೆ ಬರುತ್ತಿರುವ ಇಂತಹ ಆರೋಪದಿಂದ ಕಂಗಾಲಾಗುವುದನ್ನು ನೋಡುವಾಗ ಹೆಣ್ಣು ಈ ಶಾಪದಿಂದ ಬಿಡುಗಡೆ ಹೊಂದಲು ಇನ್ನೂ ಎಷ್ಟು ಕಾಲ ಕಾಯಬೇಕೋ ಎಂಬ ಪ್ರಶ್ನೆ ಹಾಗೇ ಉಳಿಯುತ್ತದೆ.

ಇದೊಂದು ಲಿಂಗಸಂಬಂಧಿ ಅಧ್ಯಯನವಾಗಿದೆ. ಹಾಡಿಕೆಯ ಕ್ಷೇತ್ರದಲ್ಲಿನ ಪುರುಷ ಮತ್ತು ಮಹಿಳೆಯ ಅನುಭವಗಳನ್ನು ಲಿಂಗಸಂಬಂಧಿ ನೆಲೆಯಲ್ಲಿ ನಿರ್ವಚಿಸುವ ಉದ್ದೇಶದಿಂದ ಹೊರಟ ಈ ಅಧ್ಯಯನ ಹೊರಹಾಕುವ ವಿಚಾರಗಳು ನಾಗರಿಕ ಸಮಾಜಕ್ಕೆ ಕೆಲವು ಪ್ರಶ್ನೆಗಳನ್ನು ಎಸೆಯುತ್ತವೆ. ಇದೇ ಹಾಡಿಕೆಯ ರಂಗದಲ್ಲಿರುವ ಪುರುಷರು ಬಡತನದ ನೋವನ್ನು ಅನುಭವಿಸಿದವರೇ ಆದರೂ ಅವರು ಎದುರಿಸುವ ಅವಮಾನದ ಸ್ವರೂಪ ಮಾತ್ರ ಮಹಿಳೆಯರ ಅನುಭವಕ್ಕಿಂತ ಭಿನ್ನವಾಗಿರುತ್ತವೆ. ಇಲ್ಲಿ ಹೆಂಗಸರು ಹೊಟ್ಟೆಯ ತಾಪಕ್ಕಾಗಿ, ಹಾಡಿಕೆ ಕಲಿಸಲು ಬರುವ ಗುರು ಎನಿಸಿಕೊಂಡವನ ಅತ್ಯಾಚಾರಕ್ಕೆ ಬಲಿಯಾಗಬೇಕಾಗುತ್ತದೆ. ಮೈನೆರೆದು ಎರಡು ಮೂರು ತಿಂಗಳಲ್ಲೇ ಇಂತಹ ದಾಳಿಗೆ ಬಲಿಯಾಗುವ ಇವರು ಆ ಕಾರಣಕ್ಕೆ ಅವರೊಂದಿಗೇ ಉಡಿಕೆ ಶಾಸ್ತ್ರವನ್ನೂ ಮಾಡಿಕೊಳ್ಳಬೇಕಾಗುತ್ತದೆ. (ಈ ಹಾಡಿಕೆಯ ಹೆಂಗಸರು ಮದುವೆ ಮಾಡಿಕೊಳ್ಳುವಂತಿಲ್ಲ. ಉಡಿ ತುಂಬುವವನನ್ನೇ ಗಂಡನೆಂದು ಭಾವಿಸಿ ಅವನೊಂದಿಗೇ ಬದುಕುತ್ತಾರೆ. ಮತ್ತು ಅವನಿಗೇ ನಿಯತ್ತು ತೋರುತ್ತಾರೆ.) ಈ ಕೃತಿಯೊಳಗಣ ವಿವರಗಳು ದೇವದಾಸಿಯರ ಕುರಿತಾಗಿ ಇರುವ ಕೆಲವು ಸಾಮಾನ್ಯ ನಂಬಿಕೆಗಳನ್ನು ಮುರಿದುಹಾಕುತ್ತವೆ. ಸಾಧಾರಣವಾಗಿ ಕೆಳ ವರ್ಗದ ಮಹಿಳೆಯರಿಗೆ ಸ್ವಾತಂತ್ರ್ಯವಿರುತ್ತದೆ ಎಂದು ಹೇಳಲಾಗುತ್ತದೆ. ಆದರೆ ಅವರಿಗೆ ಆರ್ಥಿಕ ಸ್ವಾತಂತ್ರ್ಯದಂತೆ ಉಳಿದ ಸ್ವಾತಂತ್ರ್ಯ ಕೂಡ ಗಗನ ಕುಸುಮವೇ ಎಂಬುದನ್ನು ಈ ಕೃತಿ ಸಾಕ್ಷಿ ಸಮೇತ ಎತ್ತಿ ಹಿಡಿಯುತ್ತದೆ. ತಾವು ದೇವದಾಸಿಯರು ಎಂದೆನಿಸಿಕೊಂಡೂ ಪುರುಷರನ್ನು ಎದುರಿಸಲಾಗದೆ ಮುದುಡಿಹೋಗುವ ಇಲ್ಲಿನ ಮಹಿಳೆಯರು ಗರತಿಯರಿಗಿಂತ ಭಿನ್ನರೇನಲ್ಲ. ತಾವು ಕಲಾವಿದೆಯರು, ತಮ್ಮ ಕಲೆಗೆ ಈ ಸಮಾಜದಲ್ಲಿ ಬಹಳ ಬೆಲೆಯಿದೆ ಎಂದು ತಮ್ಮನ್ನು ತಾವೇ ನಂಬಿಸಿಕೊಂಡು ಒಂದು ಹುಸಿ ನಂಬಿಕೆಯಲ್ಲಿ ಬಾಳುವ ಇವರಿಗೆ, ವೇದಿಕೆಯಲ್ಲಿ ನೇರವಾಗಿ ಸಾಹಿತ್ಯದ ಹೆಸರಿನಲ್ಲಿ ಆಗುವ ಅವಮಾನವನ್ನು ಪ್ರತಿಭಟಿಸಲೂ ಆಗುವುದಿಲ್ಲ, ಸಾಹಿತ್ಯವನ್ನೇ ಅಸ್ತ್ರವಾಗಿಸಿಕೊಂಡು ಇದಿರಿನವರನ್ನು ಹಳಿಯಲೂ ಆಗುವುದಿಲ್ಲ. ಇದಕ್ಕೆ ಅವರು ಕೊಡುವ ಕಾರಣ ಪುರುಷರನ್ನು ಹಳಿಯುವುದಕ್ಕೆ ತಮಗೆ ಅವಕಾಶವಿಲ್ಲ ಎಂಬುದು ಒಂದಾದರೆ ಇನ್ನೊಂದು, ಆ ಸಾಹಿತ್ಯವನ್ನು ರಚಿಸುತ್ತಿರುವುದು ಪುರುಷರು ಮಾತ್ರ. ಹೀಗಾಗಿ ಸಹಜವಾಗಿ ಅಲ್ಲಿ ಬೇಕಾಬಿಟ್ಟಿ ಬೈಗುಳಗಳು ಪುರುಷ ಸಂಬಂಧಿತವಾಗಿ ಇಲ್ಲ! ಆದರೆ ಈ ಹೆಂಗಸರು ತಮ್ಮನ್ನು ತಾವು ಬಚಾವು ಮಾಡಿಕೊಳ್ಳಲು ಬಳಸುವ ಅಸ್ತ್ರವೆಂದರೆ ತಾಯ್ತನ. ತಾಯ್ತನದ ಭಾವುಕ ನೆಲೆಯನ್ನು ಉಪಯೋಗಿಸಿಕೊಂಡು ಎದುರಿನವನು ತನ್ನ ಮೇಲೆ ಇನ್ನಷ್ಟು ಅಶ್ಲೀಲ ಹೋಲಿಕೆಯನ್ನು ಮಾಡದಂತೆ ತಡೆಯುವ ಪ್ರಯತ್ನ ಮಾಡುತ್ತಾರೆ.

ಇಲ್ಲಿ ಸಾಹಿತ್ಯ ರಚಿಸುವವರು ಮಾತ್ರ ಪುರುಷರಲ್ಲ, ಈ ಹಾಡನ್ನು ಕೇಳಲು ಬರುವ ಪ್ರೇಕ್ಷಕರೂ ಪುರುಷರೇ ಆಗಿರುತ್ತಾರೆ ಮತ್ತು ಅವರು ಅಶ್ಲೀಲತೆಯ ಲೇಪ ಇರುವ ಕಥನ ನಿರೂಪಣೆಯನ್ನೇ ಹೆಚ್ಚು ಬಯಸುತ್ತಾರೆ. ಇದರಿಂದಾಗಿ ಯಾರು ಹೆಚ್ಚು ಅಶ್ಲೀಲ ಕತೆ ನಿರೂಪಿಸುತ್ತಾರೋ ಅವರಿಗೇ ಹೆಚ್ಚು ಬಕ್ಷೀಸು ಸಿಗುತ್ತದೆ. ಈ ಬಕ್ಷೀಸಿನ ಆಸೆಗೆ ಸ್ಪರ್ಧೆಗೆ ಬಿದ್ದವರಂತೆ ಇವರು ಹಾಡುತ್ತಾರೆ. ಹೆಂಗಸರಿಗೆ ಹೆಚ್ಚು ಬಕ್ಷೀಸು ಸಿಗುತ್ತಿದ್ದಂತೆ ಗಂಡಸರು ಹೆಂಗಸರ ಶೀಲವನ್ನೇ ಹರಾಜಿಗೆ ಹಾಕತೊಡಗುತ್ತಾರೆ. ಇಲ್ಲೇ ಇರುವುದು ದುರಂತ. ತಮ್ಮ ವೈಯಕ್ತಿಕ ಜೀವನದಲ್ಲಿ ಪಾತಿವ್ರತ್ಯವನ್ನು ಕಾಪಾಡಿಕೊಂಡು ಬಂದರೂ ದೇವದಾಸಿ ಎಂಬ ಪಟ್ಟ ಹೊತ್ತ ಏಕೈಕ ಕಾರಣಕ್ಕೆ ಸಮಾಜ ಇವರ ಮೇಲೆ ಬರುವ ಈ ಸಾರ್ವಜನಿಕ ಅಪವಾದವನ್ನು ನಂಬಿಬಿಡುತ್ತದೆ. ಇದೊಂದು ಪ್ರತಿಭಟಿಸಬೇಕಾದ ವಿಷಯವೇ ಅಲ್ಲ ಎಂಬ ಒಪ್ಪಿತ ಸ್ಥಿತಿ ನಿರ್ಮಾಣವಾಗಿರುವುದರಿಂದ ಅವರ ಗಂಡಂದಿರೂ ಅಪಮಾನವನ್ನು ನುಂಗಿಕೊಂಡು ಸುಮ್ಮನಿರುತ್ತಾರೆ. ಅವರ ಮಕ್ಕಳೂ



# ಬೀದಿ ಹಾಡು



ಮೊದಲು ಬದುಕಲು ಕಲಿ
ಯಾರೊ ಕುಂಡೆಗೆ ಝಾಡಿಸಿ
ಒದ್ದಂತಾಗಿ
ಮಾನದ ಕಡೆಯ ಗೋಡೆ ದಾಟಿ
ಗಾಳಿಗೂಡುತ್ತದೆ ಹರಿದ ಜಂಪರಿನ ಚೂರು
ಹೊಟ್ಟೆಯ ಸಂಧಾನಕೆ
ನೆಲ ಕಚ್ಚಿವೆ ಜೋಡು ಜಡೆ
ಬೀದಿಗೆ ಚಾಚಿದ ನೆರಳ ಮೇಲೆ

ಕುಣಿಕುಣಿದು ಚಲಿಸುತ್ತಿವೆ ಧನಿಕರ ಕಾರು
ಕುಪ್ಪಳಿಸುತಿದೆ ಹಸಿದ ಜೀವದ ಹೋರಾಟ

ಎಚ್ಚರವಾದ ಜೋಳಿಗೆಗೆ ಒತ್ತರಿಸಿ ಬರುವ ಬಿಕ್ಕಳಿಕೆ
ತೆರೆದೆದೆಯ ಮೇಲೆ ನಿರ್ದಯಿ ನಾಯಿ ನಾಲಿಗೆ
ಬರಡು ನೆಲದೊಡಲಿಗೆ ನಾಲ್ಕು ಹನಿ ಕಣ್ಣೀರು
ಭಯವಿರದ ಹಾದಿಯಲಿ ಎಲ್ಲ ಸಲೀಸು

ಮಾನ ಪ್ರಾಣ ನ್ಯಾಯ ಮಂಡಿಯೂರಿದ ಗುರುತು
ಬತ್ತಿ ಹೋಗಿದೆ ಧ್ವಜ ಹಾರಿಸಿದ ಹೆಮ್ಮೆ
ಕನಲದೆ ಛೀತ್ಕಾರಗಳಿಗೆ ಭಯಗೊಳದೆ
ತಿರುಗುತಿದೆ ಬೂಟುಗಾಲು

ಹಸಿ ಭ್ರೂಣದ ಅಳು
ಮೂಳೆಗಳಿಲ್ಲದ ದೇಹ
ನಿರಾಶ್ರಿತರಿಗೊಂದು ಶಿಬಿರ

ಎಲ್ಲ ಕಡೆ

ದೇಶದ ಹೆಸರು
ಕಸದ ತೊಟ್ಟಿಯ ಮೇಲೆ
ಇನ್ನಷ್ಟು ನಿಚ್ಚಳ

ಕೂಸಿನ ನಗು ಇರುವೆಯ ಅನ್ನ
ಗಾಂಧಿಯ ಕನಸನ್ನೂ ಕದ್ದವರಿಗೇ
ರಾಜ್ಯ ಕೊಟ್ಟವರಾರು ?
ನಮ್ಮ ನಿರ್ಗತಿಕರಾಗಿ ಮಾಡಿದವರು ಯಾರು?
ಅಶೋಕ ಚಕ್ರ ? ಮೂರು ಬಣ್ಣದ ಬಟ್ಟೆ ?
ದುಷ್ಟ ಕೈ ಸೇರಿದ ಸಂವಿಧಾನದ ಹೊತ್ತಿಗೆ ?
ಹುಡುಕುತ್ತ ಹೋದರೆ ಕಾಣುತಿವೆ
ಕಸದ ರಾಶಿಯೊಳಗೆ ಅವರದೇ ಪಳೆಯುಳಿಕೆಗಳು..

**ಬಸವರಾಜ ಸೂಳಿಬಾವಿ,** ಲಡಾಯಿ ಪ್ರಕಾಶನ, ಗದಗ

ಅಸಹಾಯಕರಂತೆ ನಲುಗುತ್ತಾರೆ. ಅವರ ವಿದ್ಯಾವಂತ ಮಕ್ಕಳು ಅವಮಾನದಿಂದ ದುಮುಗುಡುತ್ತಾರೆ.

ಈ ಕೃತಿ ಮುಖ್ಯವಾಗುವುದೇ ಇಂತಹ ವಿವರಗಳನ್ನು ಅನಾವರಣಮಾಡುವ ಕಾರಣಕ್ಕೆ. ಹೆಂಗಸರ ಈ ನೋವುಗಳ ಕುರಿತು ಲೇಖಕಿ ಅವರನ್ನು ಕೇಳಿದಾಗ ಹಲವರು ಇದನ್ನು ಹೇಳಲು ತಯಾರೇ ಇರಲಿಲ್ಲ. ಇನ್ನು ಕೆಲವರು ತಮ್ಮ ದುಃಖವನ್ನೂ ಕೇಳುವವರಿದ್ದಾರಲ್ಲ ಎಂದು ಭಾವುಕರಾಗುತ್ತಾರೆ. ಮತ್ತೆ ಕೆಲವರು ತಮ್ಮ ದುಃಖವನ್ನು ಹೇಳಿಕೊಂಡು ಹಗುರಾಗಲು ಆ ದೇವರೇ ಈಕೆಯನ್ನು ಕಳಿಸಿದ್ದಾರೆ ಎಂದು ಭಾವಿಸುತ್ತಾರೆ ! ನಿಜ, ಸರ್ಕಾರಗಳು ಹಲವು ಯೋಜನೆಗಳನ್ನು ಜಾರಿ ಮಾಡುತ್ತವೆ.ಆದರೆ ಸಮಸ್ಯೆಯ ನಿಜವಾದ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಮಾತ್ರ ಹೊರಡುವುದಿಲ್ಲ. ಯೋಜನೆಯೊಂದು ಜನರಿಗೆ ಅನುಕೂಲ ಮಾಡಿಕೊಡುವುದಕ್ಕಿಂತಲೂ ಆ ಯೋಜನೆಯು ಅನುಷ್ಠಾನವಾಗಿದೆ ಎಂಬ ದಾಖಲೆಯನ್ನು ಸೃಷ್ಟಿಸುವುದು ಅವರಿಗೆ ಮುಖ್ಯವಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಅವರ ಸಮಸ್ಯೆಗಳ ಸ್ವರೂಪವನ್ನು ಅರಿಯುವ ವ್ಯವಧಾನವೇ ಅವರಿಗಿರುವುದಿಲ್ಲ. ಉದಾ: ದೇವದಾಸಿ ಪದ್ಧತಿಯ ನಿರ್ಮೂಲನ ಮಾಡುವ ಯೋಜನೆ ಸರ್ಕಾರಕ್ಕಿದೆ. ಆದರೆ ಪರೋಕ್ಷವಾಗಿ ಸರ್ಕಾರದ ನೀತಿಗಳೇ ದೇವದಾಸಿ ಪದ್ಧತಿಯನ್ನು ಪೋಷಿಸುತ್ತಲೂ ಇದೆ. ದೇವದಾಸಿಯರಿಗೆ ಮತ್ತು ಕಲಾವಿದರಿಗೆ ಸರ್ಕಾರ ಪೆನ್ಶನ್ ನೀಡುತ್ತದೆ. ನಾಗೇಶಿ ಕಲಾವಿದೆಯಾಗಬೇಕು ಎಂದರೆ ಆಕೆ ದಪ್ಪ ನುಡಿಸಬೇಕು. ದಪ್ಪ ನುಡಿಸಿದರೆ ಅವರಲ್ಲಿ ಮದುವೆಯಾಗುವುದು ನಿಷಿದ್ಧ. ಅಂದರೆ ನಾಗೇಶಿ ಕಲಾವಿದೆಯಾಗಬೇಕೆಂದರೆ ಅನಿವಾರ್ಯವಾಗಿ ದೇವದಾಸಿ ಆಗಬೇಕು! ಈಕೆ ಕಲಾವಿದೆಯಾದರೂ ಸರ್ಕಾರ ಈಕೆಗೆ ದೇವದಾಸಿ ಪೆನ್ಶನ್ ನೀಡುತ್ತದೆಯೇ ಹೊರತು ಕಲಾವಿದೆ ಪೆನ್ಶನ್ ಅಲ್ಲ. ಅದಕ್ಕಾಗಿ ಲಂಚ ಕೊಟ್ಟರೂ ತಮಗೆ ಈ ಪೆನ್ಶನ್ ಸಿಗುವುದಿಲ್ಲ ಎಂದು ಈ ಕಲಾವಿದೆಯರು ಅಲವತ್ತುಗೊಳ್ಳುತ್ತಾರೆ. ಅತ್ತ ಶಾಲೆಗಳಲ್ಲಿ ಮಕ್ಕಳನ್ನು ಸೇರಿಸುವಾಗ ಕಡ್ಡಾಯವಾಗಿ ತಂದೆಯ ಹೆಸರನ್ನು ಹಾಕಲು ಹೇಳಲಾಗುತ್ತದೆ. ಹಾಗೆ ತಂದೆಯ ಹೆಸರು ಹಾಕಿದರೆ ಆಕೆಯನ್ನು ದೇವದಾಸಿ ಎಂದು ಪರಿಗಣಿಸಲು ಸಾಧ್ಯವಿಲ್ಲ ಎಂದು ಅಧಿಕಾರಿಗಳು ದೇವದಾಸಿ ಪೆನ್ಶನ್‌ಅನ್ನು ಕೂಡ ನಿರಾಕರಿಸುತ್ತಾರೆ! ಹೋಗಲಿ, ಕೂಲಿ ಮಾಡಿಕೊಂಡು ಬದುಕೋಣ ವೆಂದರೆ ಇವರ ಸಮಾಜದಲ್ಲಿ ಹಾಡಕಿಯವರು ಕೂಲಿಗೆ ಹೋಗುವುದನ್ನು ಕೀಳೆಂದು ಭಾವಿಸಿ ಅಲ್ಲಿಯೂ ಅವಮಾನಿಸಲಾಗುತ್ತದೆ. (ಕೂಲಿಗಿಂತ ಹಾಡಿಕೆಗೆ ಹೋದರೆ ಹಣ ಹೆಚ್ಚು ಸಿಗುತ್ತದೆ) ಹಸಿವು, ಮಕ್ಕಳನ್ನೂ ಮನೆಯ ಇತರರನ್ನೂ ಸಾಕಬೇಕಾದ ಜವಾಬ್ದಾರಿ, ಹಾಡಿಕೆಗೆ ಹೋದಾಗ ಆಗುವ ಸಾವಿರ ಅವಮಾನಗಳು, ಅನಾರೋಗ್ಯ, ದುಡಿದ ದುಡ್ಡನ್ನು ಮನೆಗೇ ಸುರಿದರೂ ಸಿಗದ ಮನೆಯ ಯಜಮಾನಿಕೆ... ಹೀಗೆ ಈ ಕಲಾವಿದೆಯರದು ಕೊನೆಯಿಲ್ಲದ ಬವಣೆಗಳು. ತುಂಬು ಗರ್ಭಿಣಿಯರಾಗಿದ್ದಾಗಲೂ ರಾತ್ರಿಯಿಡೀ ನಿಂತು ಹಾಡುವ ಇವರು, ಹೆರಿಗೆ ಆದ ಹದಿನೈದು ದಿನಕ್ಕೇ ಮತ್ತೆ ಹಾಡಿಕೆಗೆ ತೊಡಗುತ್ತಾರೆ. ಊರೂರು ಅಲೆಯುತ್ತಾರೆ. ತಮ್ಮ ಮಾನ ಉಳಿಸಿ ಕೊಳ್ಳುವುದಕ್ಕಾಗಿ ಸದಾ ಆತಂಕಿತರಾಗಿರುತ್ತಾರೆ. ತಾವು ಮಾಡದೆ ಇರುವ ತಪ್ಪುಗಳನ್ನೆಲ್ಲಾ ತಮ್ಮ ಮೇಲೆ ಹೇರಿದಾಗಲೂ ತಾಳ್ಮೆ ಕಳೆದುಕೊಳ್ಳದೆ ಅವುಡುಗಚ್ಚಿ ಸಹಿಸಿಕೊಳ್ಳುತ್ತಾರೆ. ಈ ಕೃತಿಯಲ್ಲಿ ಇಂತಹ ಹತ್ತು ಹಲವು ಪ್ರಸಂಗಗಳು ಮೈತೆರೆದುಕೊಂಡಿವೆ. ತನ್ನ ಸಂಶೋಧನೆಗಾಗಿ ಲೇಖಕಿ ಇವರ ಈ ಬವಣೆಗಳನ್ನು ಆಲಿಸಹೊರಟಾಗ ಹಲವರು ತಮ್ಮ ಭೂತಕಾಲವನ್ನು ನೆನಪಿಸಿಕೊಳ್ಳಲೂ ಬಯಸಲಿಲ್ಲ. ಇನ್ನು ಕೆಲವರು ತಮ್ಮ ಅನುಭವವನ್ನು ಹೇಳಿದರೂ ಹಾಗೆ ಹೇಳುತ್ತಲೇ ತೀವ್ರವಾದ ದೈಹಿಕ ನೋವಿಗೆ ಒಳಗಾದರು ಎಂದು ಲೇಖಕಿ ಹೇಳುತ್ತಾರೆ. ಆದರೆ ಯಾವ ಪುರುಷನಲ್ಲೂ ಇಂತಹ ಪ್ರತಿಕ್ರಿಯೆ ಕಾಣಲಿಲ್ಲವಂತೆ. ಬದಲಿಗೆ ಅವರು ಹೆಮ್ಮೆಯಿಂದ ತಮ್ಮ ಅನುಭವವನ್ನು ಹೇಳಿ ಕೊಂಡರಂತೆ. ನೋವಿನಲ್ಲೂ ಎಷ್ಟು ಸ್ವರೂಪಗಳು! ಕೆಲವು ನೋವುಗಳು ಕಾಲಾಂತರದಲ್ಲಿ ಹೆಮ್ಮೆಯಿಂದ ಹೇಳಿಕೊಳ್ಳುವ ಸಂಗತಿಗಳಾಗುತ್ತವೆ. ಆದರೆ ಈ ದೇವದಾಸಿಯರಿಗೆ ಅದು ಎಂದೆಂದಿಗೂ ನೆನಪಿಸಿ ಕೊಳ್ಳಬೇಕಾದ ಸಂಗತಿಗಳಾಗಿರುವುದಿಲ್ಲ.

ಹೆಣ್ಣಿನ ಮೇಲೆ ನಡೆಯಬಹುದಾದ ಮಾನಸಿಕ ಮತ್ತು ದೈಹಿಕ ದಾಳಿಗಳೆಲ್ಲದರ ಆತ್ಯಂತಿಕ ಸ್ಥಿತಿಯೊಂದರ ರೂಪಕದಂತೆ ನಾಗೇಶಿ ಹಾಡಿಕೆ ಹಾಡುವ ಈ ಹೆಣ್ಣುಮಕ್ಕಳಿದ್ದಾರೆ. ಅವರ ಕುರಿತ ಈ ಅಧ್ಯಯನ ಕೇವಲ ಅಧ್ಯಯನವಲ್ಲ. ಒಟ್ಟು ಸಮಸ್ಯೆಯ ಆಳ ಅಗಲ ಗಳನ್ನು ಖಚಿತ ನೆಲೆಗಳಲ್ಲಿ ಗುರುತಿಸಿರುವ ಅಧ್ಯಯನ ವಾಗಿದೆ. ಇದು ಅನವಶ್ಯಕ ಅಪಮಾನಕ್ಕೆ ಒಳಗಾಗುತ್ತಿರುವ ನಾಗೇಶಿ ಹಾಡುಗಾರ್ತಿಯರಿಗೆ ಮಾತ್ರವಲ್ಲ, ಅವರನ್ನು ಅಪಮಾನಿಸಿಯೇ ಬಕ್ಷೀಸು ಪಡೆಯಬೇಕಾಗಿರುವ ಹರದೇಶಿ ಹಾಡುಗಾರರ ಸ್ಥಿತಿಯನ್ನೂ ಬದಲಿಸಲು ಈ ಸಮಾಜ/ಸರ್ಕಾರ ಮನಸ್ಸು ಮಾಡಬೇಕಾಗಿ ಇರುವುದನ್ನು ಒತ್ತಾಯಿಸುವ ಕೃತಿಯೂ ಆಗಿದೆ.

**ಡಾ॥ ಸಬಿತಾ ಬನ್ನಾಡಿ**
ಸಹ ಪ್ರಾಧ್ಯಾಪಕಿ
ಸ್ನಾತಕೋತ್ತರ ಕನ್ನಡ ಅಧ್ಯಯನಾಂಗ
ಸರ್ ಎಂ. ವಿ. ಸರ್ಕಾರಿ ಕಲಾ ಮತ್ತು ವಾಣಿಜ್ಯ ಕಾಲೇಜು
ನ್ಯೂಟೌನ್, ಭದ್ರಾವತಿ

# ಅಂಧಶ್ರದ್ಧೆ: ಕಾರಣ, ಪರಿಣಾಮ, ನಿರ್ಮೂಲನೆ

ಓದುಗರ ವೇದಿಕೆ




**ತ**ರ್ಕಮಾಡದೆ, ವಿಚಾರಮಾಡದೆ, ವಿಮರ್ಶೆಮಾಡದೆ ಬರೀ ನಂಬಿಕೆಯಿಂದ, ನಿಷ್ಠೆಯಿಂದ, ವಿಶ್ವಾಸದಿಂದ ಮಾಡುವ ಕಾರ್ಯಗಳೆಲ್ಲವೂ ಅಂಧಶ್ರದ್ಧೆಗಳೇ. ಇವುಗಳನ್ನೇ ಕುರುಡು ನಂಬಿಕೆಗಳು ಎನ್ನುವುದು.

ಅನೇಕ ಧಾರ್ಮಿಕ ಸಾಹಿತ್ಯಗಳು, ಕಪೋಲಕಲ್ಪಿತ ಕತೆಗಳನ್ನು ಕಟ್ಟಿ ವ್ಯವಸ್ಥಿತವಾಗಿ ಪ್ರಚಾರ ಮಾಡುತ್ತಿವೆ. ಇಂಥ ಪ್ರಚಾರ ಹರಿಕತೆ ದಾಸರುಗಳಿಂದ, ಪುರಾಣ ಪ್ರವಚನ ಮಾಡುವವರಿಂದ, ಮಠಾಧಿಪತಿಗಳಿಂದ, ಧರ್ಮಗುರುಗಳಿಂದ ನಡೆಯುತ್ತಿವೆ. ದೇವರುಗಳು, ಅವರ ಹುಟ್ಟು, ಅವರ ಪ್ರಭಾವ, ಅವರನ್ನು ಮೆಚ್ಚಿಸುವ ರೀತಿಗಳ ಸಂಹಿತೆಗಳು ಮನುಷ್ಯರ ಮೆದುಳನ್ನು ಅಫೀಮು ಸೇವಿಸಿದಂತೆ ಮಾಡುತ್ತವೆ. ಗ್ರಹಗಳೇ ಜ್ಯೋತಿಷ್ಯ ಹೇಳುವವರಿಗೆ ಬಂಡವಾಳ. ಇದರಿಂದಲೇ ಅವರ ಜೀವನ. ಬಿಸಿಲಲ್ಲಿ ಬೇಯದ, ಮಳೆಯಲ್ಲಿ ನೆನೆಯದ, ಚಳಿಯಲ್ಲಿ ನಡುಗದ ಸುಖ ಜೀವನಕ್ಕೆ ಇವರು ಎಷ್ಟು ಬೇಕಾದರೂ ಸುಳ್ಳು ಹೇಳಿ ನಂಬಿಸುತ್ತಾರೆ. ಅವಿದ್ಯಾವಂತರು – ವಿದ್ಯಾವಂತರು ಸಹ ಇವರ ಮಾತಿನ ಮೋಡಿಗೆ ಬಲಿಯಾಗುತ್ತಾರೆ. ಕುರುಡು ನಂಬಿಕೆಗಳನ್ನು ಬೆಳೆಸುವಲ್ಲಿ ಇವರ ಪಾತ್ರ ದೊಡ್ಡದು.

ಎಲ್ಲಿ ವಿಚಾರಕ್ಕೆ ಅವಕಾಶವಿಲ್ಲವೋ ಅಲ್ಲಿ ತಾನೇ – ತಾನಾಗಿ ನಂಬಿಕೆ ಬೆಳೆಯುತ್ತಾ ಹೋಗಿ ಹೆಮ್ಮರವಾಗುತ್ತದೆ. ಇಂಥ ಅನರ್ಹವಾದ, ಅವಿಚಾರ ನಂಬಿಕೆಗಳನ್ನು ಯಾರಾದರೂ ಪ್ರಶ್ನಿಸಿದರೆ ಈ ಗುಂಪಿಗೆ ಎಲ್ಲಿಲ್ಲದ ಕೋಪ – ತಾಪ; ಹೀಗಾಗಿ ಅಂಥವರನ್ನು ಮಟ್ಟಹಾಕಲು ಪ್ರಯತ್ನಿಸುತ್ತಾರೆ; ಕುಗ್ಗದಿದ್ದರೆ ಕೊಂದೇ ಹಾಕಿ, ತಮ್ಮ ಹಿತವನ್ನು ಕಾಪಾಡಿಕೊಳ್ಳುತ್ತಾರೆ.

ಅಜ್ಞಾನವೇ, ವಿಚಾರಹೀನವೇ, ವಿಜ್ಞಾನಕ್ಕೆ ಮಹತ್ವ ಕೊಡದಿರುವುದೇ ಅಂಧಶ್ರದ್ಧೆ ಬೆಳೆಯಲು ಕಾರಣ. ಇಂಥ ಮೂಢಶ್ರದ್ಧೆ ಬೆಳೆದಷ್ಟೂ... ದ್ರೋಹ ಮಾಡುವ ಗುರುಗಳು – ಪುರೋಹಿತರು – ಪೂಜಾರಿಗಳು – ವೇಷಧಾರಿಗಳು ಹೆಚ್ಚಾಗುತ್ತಾರೆ. ಇವರು ದೈವಾಂಶಸಂಭೂತರೆಂಬಂತೆ ವರ್ತಿಸಿ "ಹಿಕ್–ಮತ್" ಮೂಲಕ (ಸಮ್ಮೋಹನದಿಂದ) ವಸ್ತುಗಳನ್ನು ಸೃಷ್ಟಿಸಿಕೊಟ್ಟು, ತಮ್ಮ ಗುಂಪನ್ನು ದೊಡ್ಡದು ಮಾಡಿಕೊಳ್ಳುತ್ತಾರೆ. ಈ ಸೈನ್ಯದ ಭದ್ರಕೋಟೆಯ ರಕ್ಷಣೆಯಲ್ಲಿ ಏನೆಲ್ಲಾ ನಡೆಯಬಹುದು. ಸರ್ಕಾರ ನರಹೀನವಾಗುತ್ತದೆ. ಆಡಳಿತದ ಅಧಿಕಾರಿಗಳು ತಮಗೇನೂ ಗೊತ್ತಿಲ್ಲವೆಂಬಂತೆ ವಂಚಕರಿಗೇ ಸಹಾಯ ಮಾಡುತ್ತಾರೆ.

ದೇಶದಾದ್ಯಂತ, ಅಂದರೆ ಹಳ್ಳಿಯಿಂದ ನಗರದವರೆಗೆ ಸತತವಾಗಿ ವಿಚಾರ ಗೋಷ್ಠಿಗಳು ನಡೆಯಬೇಕು. ಮಾಟ–ಮಂತ್ರ–ಪವಾಡಗಳ ಬಗ್ಗೆ ಇರುವ ಅಜ್ಞಾನವನ್ನು ತಿಳಿಸಬೇಕು. ಗುರುಪೀಠಗಳ–ಭವಿಷ್ಯ ಹೇಳುವವರ ವಂಚನೆಯ ಜಾಲಗಳನ್ನು ಬಯಲಿಗೆಳೆಯಬೇಕು. **ಕಾಮದ ಸುತ್ತ ಕಾವಿ ಆವರಿಸಿರುವುದನ್ನು ಅನಾವರಣಗೊಳಿಸಿ, ಬೆತ್ತಲೆ ಮಾಡಬೇಕು.** ಈ ಕಾರ್ಯಕ್ಕೆ ಸರ್ಕಾರ, ವಿಜ್ಞಾನಿಗಳು, ಸಮಾಜ ಸುಧಾರಕರು, ವಿಚಾರವಾದಿಗಳು ಹಾಗೂ ಸಂಘ–ಸಂಸ್ಥೆಗಳ ಸಹಕಾರದೊಂದಿಗೆ ಅಂಧಶ್ರದ್ಧೆಯನ್ನು ನಿರ್ಮೂಲನ ಮಾಡಲು ಪ್ರಯತ್ನಿಸಬಹುದು. ಇದನ್ನು ರಾಷ್ಟ್ರೀಯ ಆಂದೋಲನವಾಗಿ ರೂಪಿಸಬೇಕು.

**ಎಸ್. ಸಿ. ರಂಗನಾಥ್,** ಬೆಂಗಳೂರು




**ಮಾ**ನವ ಸಮಾಜ ಹುಟ್ಟಿದಾಗಿನಿಂದಲೂ ಶ್ರದ್ಧೆ ಹಾಗೂ ಅಂಧಶ್ರದ್ಧೆಗಳ ನಡುವೆ ತಾಕಲಾಟ ನಡೆಯುತ್ತಲೇ ಬಂದಿದೆ. ಇದಕ್ಕೆ ನಮಗೆ ವೇದ ಕಾಲ, ಹಾಗೂ ಉಪನಿಷತ್ ಕಾಲಗಳ ಸಾಹಿತ್ಯದಿಂದಲೂ ತಿಳಿದುಬರುತ್ತದೆ. ಸಾಂಖ್ಯಯೋಗ, ಕಪಿಲಮುನಿಗಳ ವಿಚಾರ ಹಾಗೂ ಚಾರ್ವಾಕರ ವಾದಗಳಿಂದಲೂ ಕಂಡುಬರುತ್ತದೆ. ಬುದ್ಧಿಜೀವಿಗಳೆಂದು ತಿಳಿಯಲ್ಪಡುವ ಕೆಲವು ವಿಚಾರವಾದಿಗಳು ಭೌತಿಕವಾದಕ್ಕೆ ಅಂಟಿಕೊಂಡಿದ್ದು ತಮ್ಮನ್ನು ನಾಸ್ತಿಕರೆಂದು ತಿಳಿಯುತ್ತಾರೆ. ಆದರೆ ಈ ವಿಚಾರಗಳನ್ನು ಒಪ್ಪದವರು ದೈವಿಕ ಶಕ್ತಿಯನ್ನು ನಂಬಿ ನಡೆಯುವವರು ತಮ್ಮನ್ನು ಆಸ್ತಿಕರೆಂದು ತಿಳಿಯುತ್ತಾರೆ. ಸಮಾಜದಲ್ಲಿಯ ಅಂಧಶ್ರದ್ಧೆಯ ಬೇರನ್ನು ನಾವು ಇಲ್ಲಿ ಕಾಣುತ್ತೇವೆ.

ಕಾಲ ಕಳೆದಂತೆ ಅಂಧಶ್ರದ್ಧೆಯ ಪ್ರಭಾವ ಹೆಚ್ಚುತ್ತ ಹೋಗಿ ಅಂಧಶ್ರದ್ಧೆಯೇ ನಮ್ಮ ಧರ್ಮವೇನೋ, ಸಂಸ್ಕೃತಿಯೇನೋ ಅನ್ನುವ ಮಟ್ಟಿಗೆ ಬೆಳೆದುಹೋಗಿದೆ. ಅಲ್ಲದೆ ಸಮಾಜದ ಕೆಳಸ್ತರದಲ್ಲಿರುವವರಿಗೆ, ಅಂಧಶ್ರದ್ಧೆಯೇ ಒಂದು ಬಂಡವಾಳವಾಗಿ, ಉದ್ಯೋಗವಾಗಿ ಅನ್ನದ ಮಾರ್ಗವಾಗಿದೆ. ಅಂಧಶ್ರದ್ಧೆ ಕೇವಲ ಸಮಾಜದ

'ಅಂಧಶ್ರದ್ಧೆ: ಕಾರಣ, ಪರಿಣಾಮ, ನಿರ್ಮೂಲನೆ' : ಈ ವಿಷಯ ಕುರಿತು ಓದುಗರು ತಮ್ಮ ಅನಿಸಿಕೆಗಳನ್ನು 'ಓದುಗರ ವೇದಿಕೆಗೆ' ಕಳುಹಿಸಬೇಕೆಂದು ವಿನಂತಿಸಿಕೊಂಡಿದ್ದೆವು. ನಮ್ಮ ಕೋರಿಕೆಗೆ ಪ್ರತಿಕ್ರಿಯಿಸಿ ನಮ್ಮ ನಿರೀಕ್ಷೆ ಮೀರಿ ಅಭಿಪ್ರಾಯಗಳು ಬಂದಿವೆ. ನಿಗದಿತ ಅವಧಿಯೊಳಗೆ ನಮಗೆ ತಲುಪಿದ ಬಹುತೇಕ ಅನಿಸಿಕೆಗಳನ್ನು ಸಂಕಲಿಸಿ ಇಲ್ಲಿ ಪ್ರಕಟಿಸಿದ್ದೇವೆ. ತಮ್ಮ ಅಮೂಲ್ಯವಾದ ಅನಿಸಿಕೆಗಳನ್ನು ಕಳಿಸಿದ ಎಲ್ಲರಿಗೂ 'ಹೊಸತು' ವಂದನೆಗಳನ್ನು ಸಲ್ಲಿಸುತ್ತದೆ. ಅವಧಿ ಮುಗಿದ ಮೇಲೂ ಬಂದ ಕೆಲವು ಅನಿಸಿಕೆಗಳನ್ನು ಆಯ್ದು ಫೆಬ್ರವರಿ ತಿಂಗಳ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು.

ನಂಬಿಕೆ, ಮೂಢನಂಬಿಕೆಗಳ ಕುರಿತು ವ್ಯಾಪಕ ಚರ್ಚೆ ನಡೆಯುತ್ತಿರುವ ಈ ಸಂದರ್ಭದಲ್ಲಿ ಓದುಗರ ವೇದಿಕೆಯ ಈ ವಿಷಯ ವಿಸ್ತೃತವಾಗಿ ಚರ್ಚೆಯಾಗಲಿ, ಚರ್ಚೆ ಕ್ರಿಯೆಗೂ ಸ್ಫೂರ್ತಿಯಾಗಲೆಂದು ಆಶಿಸುತ್ತೇವೆ.

– ಸಂಪಾದಕ



ಕೆಳಸ್ತರದಲ್ಲಿರದೆ ಮೇಲ್ವರ್ಗದಲ್ಲಿಯೂ ಕಾಣುತ್ತೇವೆ. ೫೦ ವರ್ಷಗಳಿಂದಲೂ ವಿಚಾರವಾದಕ್ಕೆ ಅಂಟಿಕೊಂಡಿರುವ ನಾನು ಇನ್ನೂ ತಂದೆ ತಾಯಿಗಳ, ಪ್ರತಿ ವರ್ಷ ಶ್ರಾದ್ಧವನ್ನು ತಪ್ಪದೇ ಮಾಡುತ್ತಿರುವೆ.

೫೦ ವರ್ಷಗಳ ಹಿಂದಿನ ಹಳ್ಳಿಯ ಜೀವನಕ್ಕೆ, ಇಂದಿನ ಜೀವನಕ್ಕೆ ಬಹಳಷ್ಟು ಅಂತರವಿದೆ. ನಾನು ಚಿಕ್ಕವನಿದ್ದಾಗ ಹಳ್ಳಿಯಲ್ಲಿ ದೇವರ ಹೆಸರಿನಲ್ಲಿ ಜಾತ್ರೆ, ಪಶು ಬಲಿ, ಬೆಂಕಿಯಲ್ಲಿ ಹಾಯುವದು, ದೇವರ ಗೋಪುರದಿಂದ ಚಿಕ್ಕ ಮಕ್ಕಳನ್ನು ತಳ್ಳುವದು, ಎಂಜಲಿನ ಎಲೆಯಲ್ಲಿ ಉರುಳಾಡುವದು, ಪ್ರಸಾದವೆಂದು ಅಭೋಜ್ಯ ಸ್ವೀಕರಿಸುವದು, ತೇರು, ಪಲ್ಲಕ್ಕಿಗಳ ಕೆಳಗೆ ಮಕ್ಕಳನ್ನು ಮಲಗಿಸುವದು, ಮುಂತಾದವುಗಳನ್ನು ಕಂಡಿದ್ದೆ. ಆದರೆ ಈಗ ಬಹಳಷ್ಟು ಆಚರಣೆಗಳು ಮಾಯವಾಗಿವೆ. ಇನ್ನು ಕೆಲವು ಆಚರಣೆಗಳು ಸಾಂಕೇತಿಕವಾಗಿ ಉಳಿದಿವೆ. ಇದಕ್ಕೆ ಮೂಲ ಕಾರಣ ಶಿಕ್ಷಣದ ಪ್ರಸಾರ ಹಾಗೂ ಆರ್ಥಿಕ ಮುನ್ನಡೆ. ಈ ಸ್ಥಿತಿ ಮುಂದುವರಿದರೆ, ಇನ್ನು ೫೦ – ೧೦೦ ವರ್ಷಗಳಲ್ಲಿ ಅಂಧಶ್ರದ್ಧೆ ನಮ್ಮ ಹಳ್ಳಿಯಿಂದಲೂ ದೂರವಾಗುವದು. ಅಂಧಶ್ರದ್ಧೆ ನಿರ್ಮೂಲನೆಗೆ ಕಾಯಿದೆಯ ದಾರಿ ಹಿಡಿಯದೆ ಶಿಕ್ಷಣ, ಆರ್ಥಿಕ ಪ್ರಗತಿ, ಮತ್ತು ವಿಜ್ಞಾನ ಹಾಗೂ ತಾಂತ್ರಿಕತೆಯ ಲಾಭ ಎಲ್ಲರಿಗೂ ಸಮಾನವಾಗಿ ದೊರೆಯುವ ಅವಕಾಶ ಒದಗಿಸಿದರೆ, ಸಮಾಜದಲ್ಲಿಯ ಅಂಧಶ್ರದ್ಧೆ ನಿರ್ಮೂಲನೆಯ ಜೊತೆಗೆ, ಸಮರಸವೂ ಕಂಡುಬರುವದು. ಒಂದು ವೇಳೆ, ಕಾಯಿದೆಯ ಹಾದಿ ಹಿಡಿದರೆ, ಸಮಾಜದಲ್ಲಿ ಬಿರುಕು, ಶಾಂತತೆಗೆ ಭಂಗವಾಗುವ ಸಾಧ್ಯತೆ ಇದೆ.

ಇತ್ತೀಚೆಗೆ ಮಹಾರಾಷ್ಟ್ರದಲ್ಲಿ ವಿಚಾರವಾದಿ ದಾಭೋಲ್ಕರ ಹತ್ಯೆಯ ನಂತರ ಮೌಢ್ಯಾಚರಣೆ ನಿರ್ಮೂಲನೆ ಕಾಯಿದೆ ಪಾಸಾಗಿದೆ. ಆದರೆ ಈ ಕಾನೂನಿನಿಂದ ದೊರೆಯುವದು ಲಾಭವೋ ಅಥವಾ ಹಾನಿಯೋ ಎಂಬುದನ್ನು ಕಾದು ನೋಡಬೇಕು. ಈಗಾಗಲೇ ಮಹಾರಾಷ್ಟ್ರದಲ್ಲಿ ಇದಕ್ಕೆ ವಿರೋಧ ಕಂಡುಬರುತ್ತಿದೆ. ನಾವು ಸಮಾಜ ಸುಧಾರಣೆಗಾಗಿ ಕಾನೂನಿನ ಮಾರ್ಗ ಹಿಡಿಯದೆ, ಸಮಾಜ ಸುಧಾರಣೆಯ ಮಾರ್ಗ ಹಿಡಿದರೆ ಹೆಚ್ಚು ಉಪಯೋಗವಾದೀತು.

**ಹ. ಶ್ರೀ. ಆಡೂರ,** ಮುಂಬಯಿ





**ಮೊ**ನ್ನೆ ನನ್ನ ಪರಿಚಯದವರ ಅಳಿಯ ಹೃದಯಾಘಾತದಿಂದ ವಿಧಿವಶನಾದ. ಇದು ಅವನ ಪತ್ನಿಯು ಮನೆಗೆ ಕಾಲಿಟ್ಟಿರುವ ದೋಷ; ತೌರಿಗೆ ಕಳುಹಿಸಿಬಿಡಿ ಇಲ್ಲದಿದ್ದರೆ ಇನ್ನೂ ಕೇಡು ಎಂದು ಆಕೆಯ ಅತ್ತೆಗೆ 'ಜೋಯಿಸರ ಕಟ್ಟು' ಹೇಳಿತು. ಅದೂ ಆಯ್ತು. ಅದೇ ಮನೆಯಲ್ಲಿ ಇಂಪೋರ್ಟೆಡ್ ಬೈಕ್‌ನ ವೇಗದ ಸರದಾರ, ಆಕೆಯ ಭಾವನ ಮಗ, ಯಾರೂ ಊಹಿಸದಂತೆ ಶರವೇಗದಲ್ಲಿ ಅಮರನಾದ. ಶಾಸ್ತ್ರದ ಕಟ್ಟು ಹೇಳಿತು : ಇದಾಗಬಾರದಿತ್ತಲ್ಲ ! ಈ ಮನೆಯನ್ನು ಎಂಟು ತಿಂಗಳು ಬಿಟ್ಟುಬಿಡಿ. ಎಲ್ಲಾ ಸರಿಹೋಗುತ್ತೆ ಎಂದಿತು. ಅವರೀಗ ಬಾಡಿಗೆ ಮನೆಗೆ ಹೋದರು. ಈ ತಿಳಿವಳಿಕೆ ಕೇಳುವವರು ಹೇಳುವವರು ಅಕ್ಷರಸ್ಥ ಸಮಾಜದ ನಾಗರಿಕರೆಂದು ಬೀಗುವವರು.

ಬಹು ಹಿಂದೆ ನನ್ನಜ್ಜ ಮೊಮ್ಮಗಳ ಮದುವೆ ನಿರ್ಧರಿಸಿದರು. ಮದುವೆ ದಿನ ಇಡಬೇಕಲ್ಲವೆ ! ಅಯ್ಯನೋರ ಮನೆಗೆ ಹೋದರು. "ಅಯ್ಯನೋರೆ; ಮದುವೆ ದಿನ ಇಟ್ಟುಕೊಡಿ" ಎಂದರು. ಪಂಚಾಂಗ ಬಿಚ್ಚಿದ ಅಯ್ಯನೋರು, "ಹೆಸರು" ? ಎಂದರು. ಪುಟ್ಟಪ್ಪ. ಹುಡುಗಿ ಹೆಸರು ? ಪುಟ್ಟವ್ವ. ಗುಣಾಕಾರ ಭಾಗಾಕಾರ ನೋಡಿ, ಈ ಹೆಸರು ಕೂಡಲ್ಲವೆ, ಏನು ಮಾಡೋದು ! ಎಂದರು ಅಯ್ಯನೋರು. "ಅದಕ್ಕೇನಂತೆ ಅವನಜ್ಜನ ಹೆಸರಿಗೆ ಬಂದಾತೆ ನೋಡಿ !" ಎಂದಿತು ಅಜ್ಜ. "ಇಲ್ಲಾ ಗೌಡರೇ, ಅದೂ ಹೊಂದಲ್ಲ. ಅವನ ಮನೆ ದೇವರು ತಿರುಪತಿ ಅಲ್ಲವೆ? ಹೊಂದಿಸಿ ನೋಡಿ ! ನಿಮ್ಮ ಕೈಲಿ ಆಗದ್ದು ಯಾವುದಿದ್ದಾತು !" ಎಂದು ಜೇಬೊಳಗಿಂದ ಆಗಿನ ಎರಡು ರೂಪಾಯಿ ನೋಟು ತೆಗೆದಿಟ್ಟಿತು ಅಜ್ಜ. "ಅಲ್ಲಾ ಅಯ್ಯನೋರ್ರೆ ಸರಿಯಾಗಿ ನೋಡ್ರಿ. ನಿಮ್ಮ ಪಂಚಾಂಗವೇನು ದೇವರು ಬರೆದಿದ್ದೇ ! ಏನೋ ಕೇಳ್ಬೇಕು ಕೇಳ್ತೀನಿ. ಹೊಂದದೆ ಇದ್ರೆ ಮದುವೆ ನಿಲ್ಲಿಸಕಾದೀತೆ ?" ಎಂದಿತು ಅಜ್ಜನ ಗಡುಸು ದನಿ. ಅಯ್ಯನೋರು 'ಹೆಸರು ಬಲ' ನೋಡಿ ದಿನಾ ಇಟ್ಟುಕೊಟ್ಟರು ಅನ್ನಿ. ಈ ನನ್ನಜ್ಜನ ಮಿದುಳು ಧಾರ್ಷ್ಟ್ಯತೆ ಅನಕ್ಷರಸ್ಥನದು. ಅವನ ಅಧಿಕಾರವಾಣಿ ನಮ್ಮ ಗ್ರಾಮ ಮೂಲದ ಪರಂಪರೆಯದು ಸಹ ಹೌದು.

ಮೇಲಿನ ಈ ಎರಡು ಘಟನೆಗಳಿಗೆ ಅಂತರ ಸುಮಾರು ಅರವತ್ತು ವರುಷ. ಸ್ವಾತಂತ್ರ್ಯೋತ್ತರ ವಿದ್ಯೆ ನನ್ನಜ್ಜನ ಅನಕ್ಷರಸ್ಥ ತಿಳಿವಳಿಕೆಯನ್ನು ಮೆಟ್ಟಿಲಾಗಿ ಮಾಡಿಕೊಂಡು ವೈಚಾರಿಕ ಏಣಿ ಹತ್ತಬೇಕಾಗಿತ್ತು. ಆದರೆ ಇಂದು ವಿದ್ಯಾವಂತ ಸಮಾಜವು ಅವೈಜ್ಞಾನಿಕ ಮೌಢ್ಯಾಚರಣೆಯ ಬೇಸಾಯ ಮಾಡುವ ಶ್ರೇಣೀಕರಣ ರಾಕ್ಷಸರ ತೆಕ್ಕೆಗೆ ಸುಲಭವಾಗಿ ವಶವಾಗಿದೆ. ಈ ಅಂಧಶ್ರದ್ಧೆ ತುಂಬುವವರ ಜೋಳಿಗೆಯೊಳಗೆ ಬೀಳುವ ನವಸಮಾಜಕ್ಕೆ ಬುದ್ಧಿ ಬೇಡವೆ ! ಹಿಂದಿನ ಸರ್ಕಾರವಂತೂ ಇಂಥಾ ಮೂಢನಂಬಿಕೆಯ ಮಂಪರಿನೊಳಗಿಂದ ಜಿಗಿದು ಬಂದದ್ದು. ಈಗಿನ ಸರ್ಕಾರವೇನೋ ಭರವಸೆ ಹುಟ್ಟಿಸುವಂತಿದೆ. ಆತುರಾತುರದಲ್ಲಿ ಮುಖ ಉಳಿಸಿಕೊಳ್ಳಲು ಹೊರಟ ಮಹಾರಾಷ್ಟ್ರವು ಕಾನೂನು ಮಾಡಿದೆ. ಕರ್ನಾಟಕವು ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕಾನೂನು ರಚಿಸಿದಲ್ಲಿ ದಿನ ಬೆಳಗಾದರೆ ದೃಶ್ಯಮಾಧ್ಯಮಗಳಲ್ಲಿ ಕಾಣಿಸಿಕೊಳ್ಳುವ ಮೌಢ್ಯಪೀಳಿಗೆಯನ್ನು ಹದಕ್ಕೆ ತರಬಹುದು. ಇಂಥದಕ್ಕೆ ಮಾಧ್ಯಮಗಳು ಸಹ ಸಹಕರಿಸಬೇಕು. ನಮ್ಮ ಹಳ್ಳಿ ಕಡೆ ಒಂದು ಮಾತುಂಟು. ಹಣ ಸಂಪಾದನೆಗೇನು ! ಯಾರೂ ಸಂಪಾದಿಸಬಹುದು. ಹಣಕ್ಕಿಂತ ವಿಚಾರ ಮುಖ್ಯ. ಮೌಢ್ಯದಿಂದ ಇಡೀ ಸಮಾಜವನ್ನು ಬಿಡಿಸಿಕೊಳ್ಳಿ.

**ಡಾ॥ ರಾಜೇಗೌಡ ಹೊಸಹಳ್ಳಿ,** ಬೆಂಗಳೂರು



**ಮೂ**ಢನಂಬಿಕೆ ಎಂಬುದು ಕಾನೂನಿನ ಪರಿಧಿಯೊಳಗೆ ಸೇರಿಸಿಕೊಳ್ಳಲು ಸಾಧ್ಯವಿಲ್ಲದ ಒಂದು ಧಾರ್ಮಿಕ ವಿಚಾರ. ಈ ಪದದ ಹಿಂದೆ 'ಮೂಢ' ಎಂಬ ಶಬ್ದದ ಬದಲಿಗೆ 'ಗಾಢ' ಎಂಬುದನ್ನು ಸೇರಿಸಿ ನೋಡಿ. ಆಗ 'ಮೂಢ' ಎಂಬ ಪದಕ್ಕೆ ಅರ್ಥಬಾರದೆ ತಾನಾಗಿಯೇ 'ಗಾಢ' ತೆರೆದುಕೊಳ್ಳುತ್ತದೆ. ಭಾರತದ ಸಂವಿಧಾನವು ನನಗೆ ಗೊತ್ತಿರುವ ಹಾಗೆ 'ನಂಬಿಕೆ' ಎನ್ನುವ ಪದಕ್ಕೆ ಯಾವುದೇ ಅಪನಂಬಿಕೆ ತೋರಿಸಿಕೊಳ್ಳದೆ ಆ ಪದದ ಅರ್ಥ ತೀರ್ಮಾನ ಧಾರ್ಮಿಕ ಮನೋಭಾವದ ಹಾಗೆ ಮುಂದೆ ಹೋಗುತ್ತಿದೆ. ಹೋಗಲೂ ಬೇಕು. ಅದುವೇ ಸರ್ವಸಮ್ಮತ. ಅದಕ್ಕೆ ನಮ್ಮ ಪೂರ್ತಿ ಒಪ್ಪಿಗೆಯೂ ಇದೆ ಎಂದು ಕೋರ್ಟಿನ ಮೇಲ್ಮನೆ ತೀರ್ಪೊಂದು ಹೇಳುತ್ತಿದೆ ಎಂಬುದನ್ನು




ಮರೆತುಹೋಗಿಲ್ಲ. ಮರೆಯುವಂತೆಯೂ ಇಲ್ಲ.

ಹಲವು ಧರ್ಮಗಳ, ಹಲವಾರು ಸಂತ ಫಕೀರರ ತವರೂರು ಭಾರತ. ಇಲ್ಲಿ ಹಿಂದೂ ದೇಶವೆಂದು ಕರೆಯಲ್ಪಟ್ಟಿದ್ದರೂ ಇದು ಹಿಂದುಗಳಿಗೆ ಮಾತ್ರ ಸೀಮಿತವಾದುದೂ ಅಲ್ಲ. ಇಲ್ಲಿ ಅನಾದಿಯಿಂದಲೇ ನಡೆದುಕೊಂಡು ಬರುತ್ತಿರುವ ಧಾರ್ಮಿಕ ಕಟ್ಟುಪಾಡುಗಳು ಪರಸ್ಪರ ಒಗ್ಗಟ್ಟು ಒಮ್ಮತದಿಂದ ಒಂದಾಗಿ ಜೀವಿಸಿಕೊಂಡು ಬರುತ್ತಿರುವ ಮುಸ್ಲಿಂ, ಕ್ರಿಶ್ಚಿಯನ್, ಜೈನ, ಬೌದ್ಧ ಮೊದಲಾದ ಧಾರ್ಮಿಕ ಪಂಥಗಳು ಹಿಂದುಗಳೊಂದಿಗೆ ಜತೆ ಜತೆಯಾಗಿ ನಗು ಹೊನಲಿನ ಕಣ್ಮಣಿಗಳಾಗಿ ಪರಸ್ಪರ ಪ್ರೇಮ ಸೌಹಾರ್ದತೆ ಉಳಿಸಿಕೊಂಡು ಅವರವರ ಧಾರ್ಮಿಕ ಪದ್ಧತಿಗಳನ್ನು ಅಳಿಸಿಹೋಗದಂತೆ, ಪರಿಪಾಲಿಸಿಕೊಂಡು ಬರುತ್ತಿದ್ದಾರೆ. ಹಾಗಾಗಿಯೇ ಇರಬೇಕು – ಭಾರತವೆಂಬ ಪುಣ್ಯಭೂಮಿ ಕರ್ಮಭೂಮಿಯೂ ಹೌದು – ಎಂಬ ಹೇಳಿಕೆ ಅಸ್ತಿತ್ವದಲ್ಲಿರುವುದು. ಜಗತ್ ಜನನಿಯಾಗಿ ಹಿಂದುಗಳ ನಂಬಿಕೆಯಂತೆ ಜಗತ್ಪಾಲನಾದೇವಿಯಾಗಿ ಸಲಹುವಂತಹ ಜಗನ್ಮಾತೆ, ಆದಿಶಕ್ತಿ, ಮಹಾದೇವಿ, ಮಹಾಗಣಪತಿ, ಶ್ರೀರಾಮ, ಕೃಷ್ಣ, ಈಶ್ವರ, ಸುಬ್ರಹ್ಮಣ್ಯ – ಎಂದೆಲ್ಲಾ ಹಲವು ಹೆಸರು ಬಿರುದುಗಳಿಂದ ಕರೆಯಲ್ಪಡುವ, ದಿವ್ಯಶಕ್ತಿ ಮೇರಿಯಾಗಿ ಪೊರೆಯುವಳೆಂಬ ಕಲ್ಪನೆ. ಮಹಮ್ಮದೀಯ ಪಂಥ, ಬೌದ್ಧಿಕ ಸಿದ್ಧಾಂತವೆಲ್ಲವನ್ನು ಪರಿಪಾಲಿಸಿಕೊಂಡು ಏಕದೇವ, ನಾಮ ಹಲವು ಎಂಬ ತತ್ವ ಪಾಲಿಸಿಕೊಂಡು ಬರುವ ಈ ಪುಣ್ಯಭೂಮಿಯಲ್ಲಿ ಯಾವುದೇ ನಂಬಿಕೆಗಳು ಮೂಢ ಅಥವಾ ಗಾಢ ಇನ್ನಾವುದೇ ಪರ್ಯಾಯ ಹೆಸರುಗಳಿಂದ ಕರೆಯಲ್ಪಟ್ಟವು. ಈಗ ಸಮಸ್ಯೆಯಾಗಿರುವ 'ಮೂಢ' ಎಂಬ ಶಬ್ದವನ್ನು ಪ್ರತಿಬಂಧಿಸಿದರೆ ಇನ್ನೊಂದು ಪ್ರಶ್ನೆ ತಾನಾಗಿಯೇ ತೆರೆದು ಕೊಳ್ಳುತ್ತದೆ. ಅದು ಯಾವುದೆಂದರೆ ಮೇಲ್ಕಾಣಿಸಿದ ಧರ್ಮಗಳ, ದೇವರುಗಳ ಹೆಸರಲ್ಲಿ ಇನ್ನೂ ಕೆಲವು ಹೇಳಲ್ಪಡದಿರುವ ಹೆಸರುಗಳನ್ನು ಸೇರಿಸಿಕೊಳ್ಳ ಬೇಕಾಗುತ್ತದೆ. ಭಾರತದಾದ್ಯಂತ ಎಲ್ಲಾ ಮತಧರ್ಮಗಳಲ್ಲಿಯೂ ಇನ್ನೂ ಹಲವು ಆರಾಧನೆ, ನಡವಳಿಕೆ, ಆಚರಣೆಗಳಾದ ತುಳುನಾಡಿನ ಭೂತಾರಾಧನೆಯ ಒಳವಿಭಾಗಗಳೊಂದಿಗೆ ಕೋಟಿ ಚೆನ್ನಯ. ನಾಗಾರಾಧನೆ, ಪರಕಾಯ ಪ್ರವೇಶ, ಪ್ರೇತ ಪಿಶಾಚಿ, ಮಂತ್ರಮಾಯ, ಉರೂಸ್ ಎಂಬಿತ್ಯಾದಿ ಹತ್ತು ಹಲವು ಹಿಂದಿನಿಂದಲೇ ನಡೆದುಕೊಂಡು ಬರುತ್ತಿರುವ ಧಾರ್ಮಿಕ ಹಾಗೂ ಮಾರ್ಮಿಕ ವಿಧಿ ವಿಧಾನಗಳು ಎಂದೂ ಪ್ರತ್ಯೇಕ ಹೇಳಬೇಕಿಲ್ಲ. ಕಾನೂನಿನ ಚೌಕಟ್ಟಿನೊಳಗೆ ಈ ಪದ ಬಂಧನ ಸಾಧ್ಯವಾಗಲಾರದು. ಬಲಪ್ರಯೋಗದಿಂದ ಇದರ ಫಲೀಕರಣಕ್ಕಾಗಿ ಬಲಾಬಲ ತೋರ್ಪಡಿಸುವುದೂ ಸಾಧುವಲ್ಲ. ಇವೆರಡೂ ಒಂದು ಕೂಡಿಕೊಂಡು ಹೋಗುವ ಪದಸಂಕಲನವೇ ಹೊರತು ಪರಸ್ಪರ ವಿರೋಧ ಮನೋಭಾವನೆಯ ಪದಗಳಲ್ಲ. ಅದಕ್ಕಾಗಿ ಹಂಬಲಿಸಿದ್ದಲ್ಲಿ ಬುದ್ಧಿಜೀವಿಗಳ ಬೆಂಬಲವೂ ಸಿಕ್ಕಲೊಲ್ಲದು. ಇದು ನನ್ನ ಆಂತರ್ಯದ ಅನುಭವ.

**ಕೀರಿಕ್ಕಾಡು ವನಮಾಲ ಕೇಶವ ಭಟ್ಟ**, ಕಾಸರಗೋಡು




**ಇಂ**ದು ಮೌಢ್ಯ ಕೇವಲ ಅವಿದ್ಯಾವಂತರ ಸ್ವತ್ತಾಗಿ ಉಳಿಯದೆ ವಿದ್ಯಾವಂತರೂ ಸಹ ಅದಕ್ಕೆ ಸಿಲುಕುತ್ತಿದ್ದಾರೆ. ಇಂಥ ಕಂದಾಚಾರದ ವಿರುದ್ಧ ಹೋರಾಡುವ ವಿಚಾರವಂತರ ದೊಡ್ಡ ಪಡೆ ನಮ್ಮಲ್ಲಿದೆ. ಯಾವ ಧಾರ್ಮಿಕ ಆಚರಣೆಯನ್ನು ಪ್ರಶ್ನಿಸದೆ ಒಪ್ಪಿಕೊಳ್ಳದೆ, ಸತ್ಯ ಸಾಯಿಬಾಬಾಗೆ ಸವಾಲು ಹಾಕಿದ ವಿಚಾರವಾದಿ ಎಚ್. ನರಸಿಂಹಯ್ಯನವರು; ಪವಾಡ, ಮೂಢನಂಬಿಕೆ ವಿರುದ್ಧ ದೇಶ–ವಿದೇಶಗಳಲ್ಲಿ ಪ್ರವಾಸ ಮಾಡಿ, ಹಲವು ಬಾರಿ ಹಲ್ಲೆಯಾಗಿ, ಮೂರು ಬಾರಿ ಸಾವಿನಿಂದ ಪಾರಾಗಿರುವ ದಕ್ಷಿಣ ಕನ್ನಡ ಜಿಲ್ಲೆಯ ಪ್ರೊ॥ ನರೇಂದ್ರ ನಾಯಕ್; ಪವಾಡ ಸಂಶೋಧನಾ ಸಂಸ್ಥೆಯ ಸ್ಥಾಪಕ, ರಾಜ್ಯಾದ್ಯಂತ ಪವಾಡ ಬಯಲು ಮಾಡುವ ಕಾರ್ಯಕ್ರಮ ಆಯೋಜಿತ ಹುಲಿಕಲ್ ನಟರಾಜ್; ಜ್ಯೋತಿಷ್ಯ ಮತ್ತು ವಾಸ್ತುವಿನ ಪರಿಣಾಮವನ್ನು ಬಿಂಬಿಸುವ ಶ್ರೀನಿವಾಸ ನಟೇಕರ್; ಈ ಹಾದಿಗಳಲ್ಲಿ ಸಾಗುತ್ತಿರುವ ಎ. ಎಸ್. ನಟರಾಜ್, ಗುಲ್ಬರ್ಗಾದ ಡಾ॥ ಶ್ರೀಶೈಲ ಗೋಗಿ ಮತ್ತು ಬೀದರಿನ ಮನೋಹರ ಮುಂತಾದ ವಿಚಾರವಾದಿಗಳು ಇದ್ದಾರೆ. ಹಾಗೆಯೇ ಕರ್ನಾಟಕ ವಿಜ್ಞಾನ ಪರಿಷತ್ತು, ಭಾರತ ಜ್ಞಾನ ವಿಜ್ಞಾನ ಸಮಿತಿ, ದಕ್ಷಿಣ ಕನ್ನಡ ವಿಚಾರವಾದಿಗಳ ವೇದಿಕೆ, ಬಾನಾಮತಿ ನಿರ್ಮೂಲನಾ ಆಂದೋಲನ – ಗುಲ್ಬರ್ಗಾ, ಅರಿವು ಸಂಸ್ಥೆ – ಬಳ್ಳಾರಿ, ಅಖಿಲ ಕರ್ನಾಟಕ ವಿಚಾರವಾದಿಗಳ ವೇದಿಕೆ – ಬೆಂಗಳೂರು ಇವೆಲ್ಲ ಮೌಢ್ಯದ ವಿರುದ್ಧ ಶ್ರಮಿಸುತ್ತಿರುವ ಸಂಸ್ಥೆಗಳು.

ಪವಾಡ, ಬಾನಾಮತಿ, ವಾಸ್ತು, ಮಾಟಮಂತ್ರ, ದೇವರ ಹೆಸರಿನಲ್ಲಿ ವಂಚನೆ ಶೋಷಣೆ ಈಗೀಗ ಹೆಚ್ಚುತ್ತಿರುವ ಕೆಲವು ಮೌಢ್ಯಗಳು. ಈ ತರಹದ ಮೌಢ್ಯಗಳಿಂದ ಜನರಲ್ಲಿ ಆತ್ಮವಿಶ್ವಾಸ ಕುಗ್ಗಿ ಚಿಂತೆ ಮತ್ತು ಭಯದ ವಾತಾವರಣ ನಿರ್ಮಾಣ ವಾಗುತ್ತದೆ. ಜನರಲ್ಲಿ ಮಾನಸಿಕ, ಆರ್ಥಿಕ ಆಘಾತ ಉಂಟಾಗುತ್ತದೆ. ಕಟ್ಟಳೆಗಳ ಹೆಸರಲ್ಲಿ ಜನರ ವಂಚನೆ ಶೋಷಣೆ ಆಗುತ್ತದೆ. ವಿಚಾರವಾದದ ಸಾವು ಉಂಟಾಗುವುದು. ಭಾರತ ದೇಶದಲ್ಲಿ ೧೯೭೭ರಲ್ಲಿ ಕೇರಳದ ಪಾಲಕ್ಕಾಡ್‌ನಲ್ಲಿ ಬಸವ್ ಪ್ರೇಮಚಂದ್ ಅವರಿಂದ ಭಾರತೀಯ ವಿಚಾರವಾದಿಗಳ ಸಂಘಗಳ ಒಕ್ಕೂಟ ಆರಂಭವಾಗಿ, ೭೫ಕ್ಕೂ ಹೆಚ್ಚು ಶಾಖೆಗಳು ದೇಶಾದ್ಯಂತ ಕಾರ್ಯ ನಿರ್ವಹಿಸುತ್ತಲಿವೆ. ಗ್ರಾಮೀಣ ಪ್ರದೇಶದಲ್ಲಿ ಅತ್ಯಂತ ಹೆಚ್ಚು ಮೌಢ್ಯಗಳು ನೆಲೆಗೊಂಡಿವೆ.

ನಂಬಿಕೆ ಎಂಬುದು ಸಾಂಪ್ರದಾಯಿಕವಾಗಿ ಅಂಗೀಕೃತ ಪರಿಕಲ್ಪನೆ ಆಗಿದ್ದು, ವ್ಯಕ್ತಿಯ ವಿಶ್ವಾಸಕ್ಕೆ ಸಂಬಂಧಿಸಿದೆ. ಅದು ಬದುಕಿನ ಸಮಸ್ಯೆಗಳನ್ನು ನಿವಾರಿಸಲು ಅಥವಾ ಮುಂದೆ ಸಂಭವಿಸಬಹುದಾದ ಸಮಸ್ಯೆಗಳನ್ನು ತಡೆಯಲು ಬಳಸುವ ಸಾಧನ. ಧಾರ್ಮಿಕ ಸ್ವರೂಪದಲ್ಲಿರುವ ಆಚರಣೆ – ಸಂಪ್ರದಾಯಗಳು ಅಪಾಯಕಾರಿಯಲ್ಲ. ಆದರೆ ಕೆಲವೊಂದು ಅಮಾನವೀಯ ಅನೈತಿಕ ಆಚರಣೆ – ಸಂಪ್ರದಾಯಗಳು ಸಮಾಜದ ಆರೋಗ್ಯಕ್ಕೆ ಅಪಾಯಕಾರಿಯಾಗಿ ಪರಿಣಮಿಸಿವೆ. ಮಾಂತ್ರಿಕ ಅಥವಾ ಅಗೋಚರ ಶಕ್ತಿಗಳನ್ನು ಅವಲಂಬಿಸಿ ಬಂದ ಅಥವಾ ವಾಮಾಚಾರದ ತಂತ್ರ ಪರಿಕಲ್ಪನೆಗಳು ಜನರನ್ನು ಹಿಂಸಿಸುವ, ಆಸ್ತಿ ನಾಶಮಾಡುವ, ಮಾರಣಾಂತಿಕ ಪರಿಣಾಮ ಬೀರುವ – ಹೀಗೆ ಅನಾರೋಗ್ಯಕರ ಸಮಾಜವನ್ನು ಸೃಷ್ಟಿಸುವ ಯಾವುದೇ ನಂಬಿಕೆ – ಆಚರಣೆಗಳನ್ನು ಮೌಢ್ಯ ಎನ್ನಲಾಗುತ್ತದೆ.

ಭಾರತದಲ್ಲಿ ಸತ್ಯಶೋಧನೆ ಮತ್ತು ಅಂಧಶ್ರದ್ಧೆಗೆ ಸವಾಲುಗಳನ್ನು ಒಡ್ಡಿದ ಮಹಾನ್ ಇತಿಹಾಸವಿದೆ. ಮೊತ್ತಮೊದಲು ಇಂಥ ಮೌಢ್ಯವನ್ನು ಪ್ರಶ್ನಿಸಿದವನು ನಿರೀಶ್ವರವಾದಿ ಚಾರ್ವಾಕನೆಂದು ಕರೆಯಲ್ಪಡುತ್ತಿದ್ದ ಬೃಹಸ್ಪತಿ. ಮೊದಲ ವಿಚಾರವಾದಿ ಗೌತಮಬುದ್ಧ ಹೀಗೆ ಹೇಳಿದ್ದಾನೆ:

* ಕೇಳಿದ ಮಾತನ್ನೆಲ್ಲ ನಂಬಬೇಡ.
* ಪೂರ್ವಜರಿಂದ ನಿನಗೆ ಸಿಕ್ಕಿದೆಯೆಂಬ ಕಾರಣಕ್ಕಾಗಿ ಪರಂಪರೆಯನ್ನು ಒಪ್ಪಬೇಡ.
* ಹಲವು ಬಾರಿ ಹೇಳಲಾಗಿದೆ ಎಂದು ಯಾವುದನ್ನೂ ನಂಬಬೇಡ.
  ಯಾವುದೋ ಮುನಿ ಹೇಳಿದ್ದಾನೆಂದು ನಂಬಬೇಡ.
* ಕೇವಲ ಕಲ್ಪನೆಗಳನ್ನು ನಂಬಬೇಡ.

## ಬೆನ್‌ಹಿನ್ ಗೆ ಧಿಕ್ಕಾರ ಹೇಳಿ

**ಮೂ**ಢ ನಂಬಿಕೆ ಯಾವುದೇ ಒಂದು ಧರ್ಮಕ್ಕೆ ಸೀಮಿತವಾಗಿಲ್ಲ. ಎಲ್ಲ ಧರ್ಮಗಳಲ್ಲೂ ಮೌಢ್ಯಾಚರಣೆಗಳು ಸಾಕಷ್ಟಿವೆ. ಜನರ ಮೂಢ ನಂಬಿಕೆಗಳನ್ನು ಬಂಡವಾಳ ಮಾಡಿಕೊಳ್ಳುವ ಸ್ವಹಿತಸಾಧಕರು, ಧರ್ಮಾಂಧರು ಎಲ್ಲ ಧರ್ಮಗಳಲ್ಲೂ ತುಂಬಿದ್ದಾರೆ. ಮಡೆಸ್ನಾನದ ಮೂಲಕ ಚರ್ಮರೋಗ ವಾಸಿಯಾಗುತ್ತದೆಂದು ಅದನ್ನು ಆಚರಿಸುತ್ತಿರುವ ಸಂದರ್ಭದಲ್ಲಿಯೇ, ಕ್ರಿಶ್ಚಿಯನ್ ಧರ್ಮದ ಹೆಸರಿನಲ್ಲಿ ಮೂಢನಂಬಿಕೆಗಳ ಪ್ರಚಾರಕನಾಗಿ ವಂಚಕ ಬೆನ್‌ಹಿನ್ ಬರುತ್ತಿದ್ದಾನೆ. 'ಸ್ಪರ್ಶಚಿಕಿತ್ಸೆ' ಎಂದು ಹೇಳಿ ಸಾಮಾನ್ಯರೋಗ ಹಾಗೂ ಗುಣಪಡಿಸಲಸಾಧ್ಯವಾದ ರೋಗಗಳನ್ನೂ ಅಂಗವೈಕಲ್ಯವನ್ನೂ ಕೇವಲ ಸ್ಪರ್ಶದಿಂದ ವಾಸಿಮಾಡುತ್ತೇನೆನ್ನುವ ಈ ವಂಚಕನ ಪ್ರವೇಶವನ್ನು ಸರಕಾರ ನಿಷೇಧಿಸಬೇಕು. ಮೌಢ್ಯವನ್ನು ವಿರೋಧಿಸುವ ಎಲ್ಲ ಧರ್ಮಗಳ ವಿಚಾರವಂತರು ಈ ಬೆನ್‌ಹಿನ್ ಎಂಬ ವಂಚಕನಿಗೆ ಧಿಕ್ಕಾರ ಹೇಳಬೇಕು. ವಿಷ ಯಾವ ಧರ್ಮದಲ್ಲೇ ಇರಲಿ ಅದರ ನಿರ್ಮೂಲನೆ ಆರೋಗ್ಯಕರ ಸಮಾಜದ ಆದ್ಯತೆಯಾಗಬೇಕು.

*–ಸಂಪಾದಕ*

✷ ಗಮನಿಸು, ವಿಶ್ಲೇಷಿಸು. ತಾರ್ತಿಕವಾಗಿ ಸರಿ ಇದ್ದರೆ, ಎಲ್ಲರಿಗೂ ಅದರಿಂದ ಒಳ್ಳೆಯದಾಗುವಂತಿದ್ದರೆ ಅದನ್ನು ನಂಬು ಮತ್ತು ಪಾಲಿಸು ಎಂದಿದ್ದಾನೆ.

ಹಿಂದೂ ಧರ್ಮ ಹಲವಾರು ಮೂಢನಂಬಿಕೆಗಳ ಆಚರಣೆಗಳನ್ನು ಒಳಗೊಂಡಿದೆ ಎಂಬ ಬಲವಾದ ನಂಬಿಕೆ ಇದೆ. ಹಾಗೆಂದು ಎಲ್ಲ ಆಚರಣೆಗಳೂ ಅವೈಜ್ಞಾನಿಕ ಎನ್ನಲಾಗದು. ವೇದಗಳನ್ನು ವೈಜ್ಞಾನಿಕ ದೃಷ್ಟಿಯಿಂದ ಮಾತ್ರ ನೋಡಿದಾಗ ಅರಿವು ಉಂಟಾಗುವುದು. ರಾಮಾಯಣ-ಮಹಾಭಾರತಗಳಲ್ಲಿ ಉಲ್ಲೇಖಿಸಲ್ಪಟ್ಟ ಸಸ್ಯ, ಪ್ರಾಣಿ, ಸಂಬಂಧ ವಿಚಾರಗಳು ಜೀವಶಾಸ್ತ್ರ ವಿದ್ಯಾರ್ಥಿಗಳಿಗೆ ಅಧ್ಯಯನಕ್ಕೆ ಅನುಕೂಲವಾಗಿವೆ. ಅಸ್ಪೃಶ್ಯತೆ, ಸಹಗಮನ, ಬಾಲ್ಯವಿವಾಹದಂಥ ಮೂಢಾಚರಣೆ ಗಳಿವೆ. ಮನುಷ್ಯ ಹುಟ್ಟಿದಾಗಿನಿಂದ ಮರಣಿಸುವವರೆಗಿನ ಷೋಡಶ ಸಂಸ್ಕಾರಗಳು ವೈಜ್ಞಾನಿಕ ಮಹತ್ವವನ್ನು ಹೊಂದಿವೆ. ಜಾತಕರ್ಮ ಸಂಸ್ಕಾರದಲ್ಲಿ ಬಳಸುವ ಜೇನು ಮತ್ತು ತುಪ್ಪ ವಿರುದ್ಧ ಆಹಾರವಾದರೂ ನವಜಾತ ಶಿಶುವಿಗೆ ಉತ್ತಮ ಪೋಷಕಾಂಶ. ನಾಮಕರಣ ಸಾಮಾಜಿಕ ಬೆಳವಣಿಗೆಗೆ ಸಹಕಾರಿ. ಅನ್ನಪ್ರಾಶನ ಆರನೆಯ ತಿಂಗಳಿನಲ್ಲಿ ಮಗುವಿಗೆ ಘನ ಆಹಾರವನ್ನು ಜೀರ್ಣಿಸುವ ಕಿಣ್ವಗಳನ್ನು ಸ್ಫುರಿಸುವುದರಿಂದ ಔಚಿತ್ಯವಾದದ್ದು. ಹೀಗೆ ಸಂಸ್ಕಾರಗಳು ವೈಜ್ಞಾನಿಕ ಸಮ್ಮತ. ನಮ್ಮಲ್ಲಿರುವ ಕೆಲ ಸಂಪ್ರದಾಯಗಳು ಆಚರಣೆಗಳು ಧಾರ್ಮಿಕ ಮುಖವಾಡ ಹಾಕಿದ್ದರೂ ಮಾನವನ ಶಾರೀರಿಕ, ಮಾನಸಿಕ, ಸಾಮಾಜಿಕ, ಆಧ್ಯಾತ್ಮಿಕ ಸ್ವಾಸ್ಥ್ಯಕ್ಕೆ ಪೂರಕವಾಗಿವೆ. ಹೀಗಾಗಿ ಆಚರಣೆಗಳು ಮೂಢನಂಬಿಕೆ ಆಗಲಾರವು.

ಹಿಂದೂ ಧರ್ಮದ ಆಚರಣೆಗಳಷ್ಟೆ ಮೂಢನಂಬಿಕೆ ಎನಿಸುತ್ತವೆಯೇ ? ಮುಸ್ಲಿಮರಲ್ಲಿ ಸುನ್ನತ ಆಚರಣೆ, ತಲಾಕ್ ಹೇಳುವ ಪದ್ಧತಿ, ಬುರ್ಖಾ ಪದ್ಧತಿ, ಬಕ್ರೀದ್ ಸಮಯದಲ್ಲಿ ಪ್ರಾಣಿಹತ್ಯೆ, ಮೊಹರಂ ಕೊನೆ ದಿನ, ಪ್ರವಾದಿ ಮಹಮ್ಮದರ ಮೊಮ್ಮಗ ಹುಸೇನ್‌ನನ್ನು ಶತ್ರುಗಳು ಪಿತೂರಿಯಿಂದ ಕೊಲೆ ಮಾಡಿದ್ದರಿಂದ ಅದನ್ನು ಸಂಕೇತವಾಗಿ ಆಚರಿಸಿ, ಆ ದಿನ ಮುಸ್ಲಿಮರು ದೇಹದಂಡನೆ ಮಾಡಿಕೊಳ್ಳುವರು. ಹೀಗೆ ಮುಸ್ಲಿಮರಲ್ಲೂ ಅಮಾನವೀಯ ಸಂಪ್ರದಾಯಗಳು ಇವೆ. ಇವೆಲ್ಲ ಮೌಢ್ಯದ ಪರಮಾವಧಿ ಅಲ್ಲವೇ ? ಕ್ರಿಶ್ಚಿಯನ್‌ರಲ್ಲಿ ಸಾಂತಾ ಕ್ಲಾಸ್ ರಾತ್ರಿ ಬಂದು ಮಕ್ಕಳಿಗೆ ಉಡುಗೊರೆ ಕೊಡುತ್ತಾನೆ ಎಂದು ಮಕ್ಕಳನ್ನು ಕಾಯಿಸುವದು ಒಂದು ವಿಧದ ಶೋಷಣೆ. ಕ್ರಿಶ್ಚಿಯನ್‌ರಲ್ಲೂ ಪವಾಡಗಳು ಇವೆ. ಮದರ್ ತೆರೆಸಾ ಪವಾಡದಿಂದ ಕ್ಯಾನ್ಸರ್‌ನ್ನು ನಿವಾರಣೆ ಮಾಡಿದರು ಎನ್ನುತ್ತಾರೆ. ವಾರವಿಡೀ ತಪ್ಪು ಮಾಡಿ ವಾರಕ್ಕೊಮ್ಮೆ ಚರ್ಚಿನಲ್ಲಿ ತಪ್ಪು ಒಪ್ಪಿಕೊಂಡರೆ, ನಮ್ಮಲ್ಲಿ ಪುಣ್ಯಸ್ನಾನದಿಂದ ಪಾಪವೇಕೆ ತೊಲಗಬಾರದು ? ಹೀಗೆ ಎಲ್ಲ ಧರ್ಮಗಳಲ್ಲಿಯೂ ಅವರದೇ ಆದ ನಂಬಿಕೆ-ಮೂಢನಂಬಿಕೆ ಸಂಪ್ರದಾಯಗಳು ಇವೆ.

ಈ ಮೂಢನಂಬಿಕೆಗಳನ್ನು ನಿರ್ಧರಿಸುವವರು ಯಾರು ? ಹೇಗೆ ಹುಟ್ಟಿತು ? ಇದರ ಮಾನದಂಡವೇನು ? ನಂಬಿಕೆ ಮತ್ತು ಮೂಢನಂಬಿಕೆಯಲ್ಲಿ ಸ್ಪಷ್ಟ ವ್ಯತ್ಯಾಸವಿದೆ. ಇನ್ನೊಬ್ಬರಿಗೆ ಹಾನಿ ಮಾಡುವ ಉದ್ದೇಶ ಮೂಢನಂಬಿಕೆ ಆದರೆ ಇನ್ನೊಬ್ಬರಿಗೆ ಹಾನಿ ಉಂಟುಮಾಡದ್ದು ನಂಬಿಕೆ. ಹಾಗೆ ಅನಿಷ್ಟ, ಹಿಂಸಾತ್ಮಕ ಪದ್ಧತಿಗಳ ನಂಬಿಕೆಗೆ ಮೂಲವಾಗಿರುವ ನಂಬಿಕೆ ಮೂಢನಂಬಿಕೆ. ಒಬ್ಬನ ಮಗುವಿಗೆ ಜ್ವರ ಬಂದರೆ ತಾಯಿತದಿಂದ, ದೇವರ ಹರಕೆಯಿಂದ ವಾಸಿಯಾಗುತ್ತದೆ – ಇದು ಅವನ ನಂಬಿಕೆ. ಆದರೆ ಮತ್ತೊಬ್ಬರಿಗೆ ಇದು ಮೂಢನಂಬಿಕೆ. ಓರ್ವನ ಅನುಭವದಿಂದ ಒಳ್ಳೆಯದಾದರೆ ಅದರಲ್ಲಿ ಅವನ ನಂಬಿಕೆ ಉಂಟಾಗುವದು. ನಂಬಿಕೆ-ಮೂಢನಂಬಿಕೆಯಲ್ಲಿ ನಂಬುವದು ಅನುಭವಜನ್ಯವಾದದ್ದು. ಇದು ವ್ಯಕ್ತಿಗತ. ಆದರೆ ಸಾಮಾಜಿಕವಾಗಿ ಯಾವ ನಂಬಿಕೆಯಿಂದ ಹಿಂಸೆ, ಶೋಷಣೆ, ಅಸಮಾನತೆ, ಉಂಟಾಗುವದೋ ಅಂಥ ಸಂಪ್ರದಾಯ-ಆಚರಣೆ-ಮೂಢನಂಬಿಕೆಗಳನ್ನು ಕಾನೂನುಗಳ ಮುಖಾಂತರ ನಿಷೇಧಿಸಬೇಕು. ಉದಾಹರಣೆ : ಬಾಲ್ಯವಿವಾಹ, ದೇವದಾಸಿ ಪದ್ಧತಿ, ಬೆತ್ತಲೆಸೇವೆ, ಪ್ರಾಣಿಬಲಿ, ವಾಮಾಚಾರ, ಬಾನಾಮತಿ ಇತ್ಯಾದಿ.

ಸಂವಿಧಾನದ ಧರ್ಮನಿರಪೇಕ್ಷತೆ ತತ್ವವನ್ನು ಮನ್ನಿಸಿ ಧಾರ್ಮಿಕ ಸ್ವಾತಂತ್ರ್ಯಕ್ಕೆ ಗೌರವಿಸಿ, ಏನನ್ನು ನಂಬಬೇಕು, ಏನನ್ನು ನಂಬಬಾರದು ಎಂಬ ಹಕ್ಕು ಪ್ರತೀ ವ್ಯಕ್ತಿಯ ಮೂಲಭೂತ ಹಕ್ಕಾಗಿದ್ದು, ಆದುದರಿಂದ ಪ್ರತೀ ನಾಗರಿಕನು ನಂಬಿ ಕೊಂಡಿರುವದನ್ನು ನಂಬಬಾರದೆಂದು ಕಾನೂನು ಮಾಡಿ, ನಂಬಿದಲ್ಲಿ ಶಿಕ್ಷೆಗೆ




ಒಳಪಡಿಸುವದು ಸಂವಿಧಾನಬಾಹಿರವಾಗುತ್ತದೆ. ನಂಬಿಕೆಯ ಮೂಲಭೂತ ಹಕ್ಕಿಗೆ ಚ್ಯುತಿ ತರುವ ಯಾವುದೇ ಪ್ರಸ್ತಾವನೆಗಳು ಮಾನವ ಹಕ್ಕಿಗೆ ವಿರೋಧವಾಗಿರುತ್ತವೆ. ಆದರೆ ಆಚರಣೆಯ ಹೆಸರಿನಲ್ಲಿ ಮಾನಸಿಕ ಮತ್ತು ದೈಹಿಕವಾಗಿ ದುಷ್ಪರಿಣಾಮ ಉಂಟುಮಾಡಿ ಸಾಮಾಜಿಕ ಸ್ವಾಸ್ಥ್ಯವನ್ನು ಕೆಡಿಸುತ್ತಿರುವ ಮೂಢನಂಬಿಕೆ ಮತ್ತು ಅಂಧಾಚರಣೆಗಳ ವಿರುದ್ಧ ವಿಧೇಯಕ ರಚಿಸಿದರೆ ಸ್ವಾಗತಾರ್ಹ. ಧರ್ಮದ ಹೆಸರಿನಲ್ಲಿ ವಂಚಿಸುತ್ತಿರುವವರ ವಿರುದ್ಧ ಧ್ವನಿ ಎತ್ತಿ ಅಂಥವರನ್ನು ಹತ್ತಿಕ್ಕುವ ಪ್ರಯತ್ನ ಆಗಬೇಕು.

ವೈಜ್ಞಾನಿಕ ಮನೋಭಾವನೆ ಸಮಾಜದಲ್ಲಿ ಅರಳುವಂತೆ ಮಾಡಲು ಬೇಕಾದದ್ದು ಅರಿವಿನ ಆಂದೋಲನ. ಅದರಲ್ಲಿಯೂ ಅಂತರಂಗದ ಅರಿವಿನ ಮೂಲಕ ಇಂತಹ ವೈಜ್ಞಾನಿಕ ಮನೋಧರ್ಮ ಅರಳಿದರೆ ಆಗ ಬಹಿರಂಗದ ಅರಿವು ಸ್ಪಷ್ಟವಾಗಿ ನಿಖರವಾಗಿ ಒಡಮೂಡಲು ಸಾಧ್ಯವಾಗುತ್ತದೆ.

**ಯು. ಎನ್. ಸಂಗನಾಳಮಠ, ಹೊನ್ನಾಳಿ**



**ಮ**ನುಷ್ಯನಿಗೆ ರೋಗಗಳು ಹೇಗೆ ಬರುತ್ತವೆ ಅವು ಬರುವುದು ದೇವರಿಂದಲ್ಲ ಮನುಷ್ಯನ ರಕ್ತದಲ್ಲಿ. ಬ್ಯಾಕ್ಟೀರಿಯಾ ವೈರಸ್ ಕೂಡಿದಾಗ ಅವನಿಗೆ ರೋಗಗಳು ಬರುತ್ತವೆ. ಈಗ ಒಬ್ಬ ಮನುಷ್ಯನಿಗೆ ಕುಷ್ಠರೋಗ ತಗಲಿದೆ ಎಂದಿಟ್ಟುಕೊಳ್ಳಿ. ಆಗ ಜನ ಆಡಿಕೊಳ್ಳುವರು. ಹಿಂದಿನ ಜನ್ಮದಲ್ಲಿ ಅವನು ಪಾಪ ಮಾಡಿದ್ದಾನೆ. ಅದರ ಫಲವಾಗಿ ಈ ಮಹಾರೋಗದಿಂದ ಬಳಲುವವನು ಎಂದು ಅವನಿಗೆ ಹೀಯಾಳಿಸುವರು. ಅವನಿಗೆ ಸಮಾಜದಿಂದ ಹೊರಗೆ ಇಡುವರು. ಅವನು ಜನರ ಕಿರುಕುಳಕ್ಕೆ ಅಂಜಿ ಆತ್ಮಹತ್ಯೆ ಮಾಡಿಕೊಳ್ಳುವನು. ಸಮಾಜದ ಜನ ಅವನಿಗೆ, "ಕುಷ್ಠರೋಗದ ಬ್ಯಾಕ್ಟೀರಿಯಾ ನಿನ್ನ ರಕ್ತದಲ್ಲಿ ಕೂಡಿದೆ, ಅದಕ್ಕಾಗಿ ನಿನಗೆ ಈ ರೋಗಬಂದಿದೆ. ಔಷಧಿ ತೆಗೆದುಕೊ ಗುಣವಾಗುತ್ತದೆ" ಎಂದು ಹೇಳಿ ಔಷಧಿ ಕೊಡಿಸಿದರೆ ಮುಂದೆ ಆರೋಗ್ಯವಂತನಾಗುವನು. ಸಮಾಜದಲ್ಲಿ ನಮ್ಮೊಡನೆ ಬಾಳುವನು. ಮೊದಲು ಇಂತಹ ಅಂಧಶ್ರದ್ಧೆಗಳನ್ನು ನಿರ್ಮೂಲನ ಮಾಡಬೇಕು.

ಒಂದು ಹೆಣ್ಣುಮಗಳು ಮದುವೆಯಾಗಿ ಗಂಡನ ಮನೆಗೆ ಹೋಗುತ್ತಾಳೆ. ಕೆಲವು ದಿನಗಳ ನಂತರ ಅವಳ ಗಂಡ ಅಪಘಾತದಲ್ಲಿ ಸಿಕ್ಕು ಸತ್ತರೆ ಆಗ ಜನರು, ಮನೆಯವರು ನಿನ್ನ ಕಾಲ್ಗುಣ ಚೆನ್ನಾಗಿಲ್ಲ ಎಂದು ಹೇಳಿ ಅವಳಿಗೆ ಪರಿಪರಿ ಕಾಡುವರು. ಅವಳ ಕಾಲ್ಗುಣ ಚೆನ್ನಾಗಿಲ್ಲದಕ್ಕೆ ಅವಳ ಗಂಡ ಸತ್ತನೇ ?

ಈ ಅಂಧಶ್ರದ್ಧೆ ತಡೆಯಲು ಒಬ್ಬ ವ್ಯಕ್ತಿಯಿಂದ ಸಾಧ್ಯವಿಲ್ಲ. ನಮ್ಮ ಪಠ್ಯ ಪುಸ್ತಕಗಳು ಬದಲಾಗಬೇಕು. ನಮ್ಮ ಪತ್ರಿಕೆಗಳು ಮಾಧ್ಯಮಗಳು ನಮ್ಮ ಸಂಪ್ರದಾಯಗಳು ಬದಲಾಗಬೇಕು. ನಾವು ಎಲ್ಲರಲ್ಲಿ ವೈಜ್ಞಾನಿಕ ಮನೋಭಾವ ಬಿತ್ತಬೇಕು.

**ಸಂಗಣ್ಣ ಚಂದ್ರಾಮಪ್ಪ ಹೊಸಮನಿ** ಗುಲಬರ್ಗಾ



**ನ**ಮ್ಮ ದೇಶ ಬಡತನ, ದಾರಿದ್ರ್ಯ, ರೋಗರುಜಿನಗಳಿಂದ ಬಳಲುವ ದೇಶ. ಅಲ್ಲದೆ ಸ್ತ್ರೀಪುರುಷ ಎಂಬ ಭೇದವಿಲ್ಲದೆ ಬಂಜೆತನ, ಸಿಟ್ಟು ಸೆಡವು, ಕ್ರೌರ್ಯ ದಬ್ಬಾಳಿಕೆ, ಮೋಹ, ಮತ್ಸರ, ಜೀವನದಲ್ಲಿ ಹಿಂಜರಿಕೆ, ಕೋಪ ತಾಪ, ನಿರುದ್ಯೋಗ ಇವೆಲ್ಲ ಕಾಡುತ್ತಿರುತ್ತವೆ, ಇವೆಲ್ಲವುಗಳಿಂದ ಸುಲಭವಾಗಿ ಮುಕ್ತ ಹೊಂದಲು ಜೀವ ಬಯಸುತ್ತದೆ.

ಇವೆಲ್ಲವುಗಳ ದುರ್ಲಾಭ ಪಡೆಯಲು ಮೋಸಗಾರರು ಹೊಂಚುಹಾಕುತ್ತಾರೆ. ನಾನು ಚಿಕ್ಕವನಾಗಿದ್ದಾಗಿನಿಂದಾಗಲೂ ನೋಡುತ್ತ ಬಂದಿದ್ದೇನೆ. ದೆವ್ವ ಪಿಶಾಚಿಗಳ ಕಥೆ ಕೇಳಿದ್ದೇನೆ. ತುಂಬಿದ ಕೊಡ ಹೊತ್ತ ಮಹಿಳೆ, ಆಕಳು, ಬಂದರೆ ಶುಭ; ವಿಧವೆ, ಕ್ಷೌರಿಕ, ಸಲಿಕೆ–ಗುದ್ದಲಿ ಹೊತ್ತ ವ್ಯಕ್ತಿ, ಬೆಕ್ಕು ಅಡ್ಡ ಬರುವದು ಇತ್ಯಾದಿ ಜರುಗಿದರೆ ಶುಭವಲ್ಲ ಎನ್ನುವ ಮಾತುಗಳನ್ನು ಕೇಳಿದ್ದೇನೆ.

ಮಡೆಸ್ನಾನ, ಬೆತ್ತಲೆ ಸೇವೆ, ದೀಡ ನಮಸ್ಕಾರ, ಕೂದಲು ಬೋಳಿಸಿ ಕೊಳ್ಳುವದು, ಇಂತಹ ಕಂದಾಚಾರಗಳನ್ನು ಕಂಡಿದ್ದೇನೆ, ಮಾಟಮಂತ್ರ ಮಾಡುವದನ್ನೂ ನೋಡಿದ್ದೇನೆ, ಅಮಾವಾಸ್ಯೆ ದಿವಸ ರಾತ್ರಿ, ಸತ್ತ ಬಾಣಂತಿಯ ಹೂಳಿದ ಶವ ಹೊರಗೆ ತಂದು ಕ್ರಿಯೆಗೊಳಿಸಿ ಅವಳ ಕೈಯನ್ನು ಸಿದ್ಧಿಗಾಗಿ ಕತ್ತರಿಸಿ ತರುವದು, ಸಿದ್ಧಿಗಾಗಿ ಇಡೀ ರಾತ್ರಿ ತಣ್ಣೀರಿನಲ್ಲಿ ನಿಂತು ಮಲ ತಿಂದು ಶಕ್ತಿ ಪಡೆದು ಬಾನಾಮತಿ ಪ್ರಯೋಗ ಮಾಡುವವರ ಕಥೆ ಕೇಳಿದ್ದೇನೆ.

ಕ್ರೂರ ದೇವತೆಗಳಿಗೆ ನರಬಲಿ, ಸ್ತ್ರೀ ಬಲಿ, ಮಕ್ಕಳ ಬಲಿ, ಪ್ರಾಣಿ ಬಲಿ ಕೊಟ್ಟು ತಮ್ಮ ಕಾರ್ಯಸಾಧನೆ ಮಾಡುವವರ ಕಥೆಗಳಿಗೇನೂ ಕಡಿಮೆಯಿಲ್ಲ. ಯಜ್ಞ ಯಾಗಗಳಲ್ಲಿ, ಹೋಮಹವನಗಳಲ್ಲಿ ಆಹುತಿ ಕೊಡುವದಂತೂ ನಿತ್ಯ ನಡೆದೇ ಇರುತ್ತದೆ.

ರಾಜಕಾರಣದಲ್ಲಿ ಮೇಲೇರುವವರು ಇನ್ನೊಬ್ಬರನ್ನು ಹತ್ತಿಕ್ಕಲು ಇಂತಹ ಕಂದಾಚಾರಗಳ ಮೊರೆಹೋಗುತ್ತಾರೆ. ಪ್ರಸಿದ್ಧ ಸ್ವಾತಂತ್ರ್ಯ ಯೋಧ, ವಕೀಲ ದಿ॥ ಆರ್. ಎಚ್. ಕುಲಕರ್ಣಿ ಬೆಳಗಾವಿ ಅವರು ಹೇಳಿದ ಮಾತು ಈ ಸಂದರ್ಭದಲ್ಲಿ ನೆನಪಾಗುತ್ತದೆ. ಅವರು, "ನಾನು ಕಷ್ಟಕಾಲದಲ್ಲಿ ಮುಂಬಯಿಗೆ ಹೋಗಿದ್ದೆ. ಹಸಿವೆಯಿಂದ ಬಳಲುತ್ತಿರುವಾಗ ಜೋತಿಷಿಯ ವೇಷ ಧರಿಸಿ ಬೀದಿಯಲ್ಲಿ ಕುಳಿತು ಕೈ ನೋಡಿ, ಕುಂಡಲಿ ನೋಡಿ ಭವಿಷ್ಯ ಹೇಳಿ ದುಡ್ಡು ಪಡೆದೆ. ಆದರೆ ನಾನು ಮಾಡಿದ್ದೆಲ್ಲ ಸುಳ್ಳು! ಭವಿಷ್ಯ, ಜೋತಿಷ್ಯ ನಂಬಬೇಡಿರಿ! ಅದೆಲ್ಲ ಹೊಟ್ಟೆ ತುಂಬಿಸಿಕೊಳ್ಳುವ ದಂಧೆ" ಎಂದು ನನ್ನೆದುರು ನುಡಿದಿದ್ದರು.

ಬೆಂಗಳೂರಿನಲ್ಲಿ ಒಬ್ಬ ಜೋತಿಷಿ ಅಂಗೈ ನೋಡಿ ಭವಿಷ್ಯ ಹೇಳುವವ. ಅವನ ಜಾಹೀರಾತು ದೊಡ್ಡ ದೊಡ್ಡ ದಿನ ಪತ್ರಿಕೆಗಳಲ್ಲಿಯೂ ಬರುತ್ತಿರುತ್ತದೆ, ಆತ ವಧುವರರ ಕಾರ್ಯಾಲಯವನ್ನು ನಡೆಸುತ್ತಿದ್ದಾನೆ, ವಧುವರರ ಆ ಕೆಲಸಕ್ಕಾಗಿ ನಮ್ಮಾಕೆಯ ಜತೆಗೂಡಿ ಹೋಗಿದ್ದೆ. ಎಲ್ಲ ಕೆಲಸ ವಿಚಾರ ಮುಗಿದ ಮೇಲೆ, ಅವನ ಬೆನ್ನು ಹಿಂದಿನ ಅಂಗೈ ಚಿತ್ರ ನೋಡಿದೆ, ನನ್ನ ಕೈ ಅವನಿಗೆ ತೋರಿಸಿದೆ. "ನಿಮ್ಮ ಆಯುಷ್ಯ ಮುಗಿದಿದೆ, ವರ್ಷಾರು ತಿಂಗಳು ನೀವು ಬದುಕಿರುತ್ತೀರಿ" ಎಂದ. ನಮ್ಮಾಕೆಯ ಕಣ್ಣಲ್ಲಿ ನೀರು ಬಂದವು! ಅವನಿಗೆ ಕೈ ಏಕೆ ತೋರಿಸಿದಿರಿ ? ಎಂದು ಸಿಟ್ಟಿಗೆದ್ದಳು. "ಸತ್ಯ ಅರಿಯಲು! ಈತ ಸುಳ್ಳುಗಾರ, ಕಪಟಿ, ಮೋಸಗಾರ ಎಂದೇ ತೋರಿಸಲು ಕೈ ತೋರಿಸಿದೆ" ಎಂದೆ. ಕೈ ತೋರಿಸಿ ಹತ್ತಾರು ವರುಷ ಕಳೆದಿದೆ. ನಾನು ಇನ್ನೂ ಜೀವಂತವಾಗಿದ್ದೇನೆ! ಕಾಡುವ ರೋಗ, ಸಾವಿನ ಭಯದಿಂದಾಗಿ ಜನರು ಇಂಥವರ ಮೊರೆಹೋಗುತ್ತಾರೆ. ಅವರು ಅವುಗಳ ದುರ್ಲಾಭ ಪಡೆಯುತ್ತಾರೆ. ಮಾಟ ಮಂತ್ರ, ರೋಗನಿವಾರಣೆ ಸೋಗು ಮಾತ್ರ! ನರಬಲಿ, ಶಿಶುಬಲಿ, ಪ್ರಾಣಿಬಲಿ, ಬಾನಾಮತಿ ಪ್ರಯೋಗ, ಇಂತಹ ಮೌಢ್ಯಗಳ ವಿರುದ್ಧ ಕಾನೂನು ಕ್ರಮ ಜರುಗಿಸಿ ನಿಯಂತ್ರಿಸುವುದೇ ಸೂಕ್ತ. ಇಂತಹ ಕ್ರಮ ಜರುಗಿಸಲು ಅವಸರ ಮಾಡದೆ, ವ್ಯಾಪಕವಾಗಿ ಸಮಾಜದಲ್ಲಿ ಚರ್ಚೆಯಾಗಬೇಕು. ಒಳಿತು ಕೆಡಕುಗಳ ಚರ್ಚೆಯಾಗಬೇಕು. ಇದರ ದುರ್ಲಾಭ ಪಡೆಯುವವರು ಪುರೋಹಿತಶಾಹಿ ಜನರಷ್ಟೆ ಎಂಬ ತಪ್ಪು ಕಲ್ಪನೆಯಿದೆ! ಎಲ್ಲ ಜಾತಿಯವರು, ಎಲ್ಲ ಜನಾಂಗದವರು, ಎಲ್ಲ ಧರ್ಮದವರಲ್ಲಿ ದುರ್ಲಾಭ ಪಡೆಯುವವರಿದ್ದಾರೆ! ಎಡಪಂಥೀಯರು, ಬಲಪಂಥೀಯರು ಎಂಬ ಗೆರೆ ಕೊರೆಯದೆ ತೆರೆದ ಮನಸ್ಸಿನಿಂದ ಪರಾಮರ್ಶಿಸಿ ಕಾನೂನು ಜರುಗಿಸುವುದು ಅವಶ್ಯವಾಗಿದೆ.

**ಪುಂಡಲೀಕ ಪಾಟೀಲ,** ಬೆಳಗಾವಿ



**ಇಂ**ದು ರಾಜಕೀಯ ಹಾಗೂ ಧಾರ್ಮಿಕ ರಾಜಕಾರಣದ ಅದ್ಭುತ ಒಳ ಹೊಂದಾಣಿಕೆ, ಮೂಢನಂಬಿಕೆಗಳಿಂದಾಗಿ ದೇವಸ್ಥಾನಗಳ, ಮಠಗಳ, ಜಗದ್ಗುರುಗಳ ಲಾಭ ಗಣನೀಯವಾಗಿ ಏರಿಕೆ ಕಂಡಿದೆ. ಮಧ್ಯಮ ಮಾಂಸಾಹಾರಿ ಶೂದ್ರರ ಹಿಂದುಳಿದ ಹಾಗೂ ದಲಿತರ ಗುಡಿಗಳಿಗೆ ಭಕ್ತರ ಚಲನೆ ಮೈಲಿಗೆ ಇಂಥವು ಜಾತಿ ಬದ್ಧವಾಗಿ ಸೀಳಿಕೊಂಡಿದ್ದವು. ವಿಸ್ಮಯವೆಂದರೆ, ಇವರೆಲ್ಲಾ ದೂರದ ಶಿಷ್ಟ ದೇವದೇವತೆಗಳ ಭಕ್ತರಾಗಿ ಆ ವಲಯದ ಮೇಲಕ್ಕೆ ತಕ್ಕಂತೆ ಸಾಲ ಮಾಡಿಯಾದರೂ ನೂರಾರು ಸಾವಿರಾರು ರೂಪಾಯಿ ಹರಕೆ, ಕಾಣಿಕೆ ಸಲ್ಲಿಸುವಂತಾದರು. ಅಲ್ಲಿ ತಲೆ ಬೋಳಿಸಿಕೊಂಡು ಅವರ ಕೇಶ ಉದ್ಯಮಕ್ಕೆ ಕೋಟ್ಯಂತರ ರೂಪಾಯಿ ವರಮಾನ ತಂದುಕೊಡುವ 'ತಲೆದಂಡ' ಭಕ್ತರೂ ಆದರು. 'ಯಾರದೋ ದುಡ್ಡು ಧರ್ಮಸ್ಥಳ ಜಾತ್ರೆ' ಎಂಬೋದು ದೇಶದ ಎಂಟೂ ಮೂಲೆಯ ಲಕ್ಷಾಂತರ ದೇವಸ್ಥಾನಗಳಿಗೆ ಅನ್ವಯಿಸುತ್ತದೆ.




ಬಹುಸಂಖ್ಯಾತ ಆಸ್ತಿಕ ಸಮುದಾಯಗಳು ತಮ್ಮ ಕಷ್ಟ, ಅಸಹಾಯಕತೆಗಳನ್ನು ನಿವಾರಿಸಿಕೊಳ್ಳಲು ವೈದಿಕ ಪ್ರಭುತ್ವ ಸ್ಥಾಪಿಸಿದ ದೈವಿಕ ಮೂಢನಂಬಿಕೆಗಳನ್ನು ನಂಬಿಕೆಯಾಗಿ ಪಾಲಿಸಬೇಕಿದೆ. ಈ ಮುಳ್ಳುಬೇಲಿಯ ಜೈಲಿನಿಂದ ಹೊರಜಿಗಿದು ಪಾರಾಗುವಂತಿಲ್ಲ. ಪಾರಾದಲ್ಲಿ; ದೇವರ ಕೋಪ – ಶಾಪಕ್ಕೆ ಬಲಿಯಾಗಬೇಕೆನ್ನುವ ಭಯವನ್ನೂ ಪುರೋಹಿತವರ್ಗ ಹೆಣೆದುಬಿಟ್ಟಿದೆ.

ಪ್ರಶ್ನಿಸುವ, ದೇವರನ್ನು ಪ್ರೀತಿಸುವ ವಿವೇಕವನ್ನೇ ಕಿತ್ತುಕೊಂಡ ಈ ಶಾಸ್ತ್ರ, ಸಂಪ್ರದಾಯ, ನಂಬಿಕೆ, ಮೂಢನಂಬಿಕೆಗಳು... ದೇಶಾದ್ಯಂತ ರಥವಾಗಿ ಭಕ್ತರ ಮೈ–ಮನಗಳ ಮೇಲೆ, ಬದುಕುಗಳ ಮೇಲೆ ಉದ್ದರಿಸುವ ರಥವಾಗಿ ಹರಿದಿದೆ. ಯಾರೂ ನೋವು–ರಕ್ತ ಎನ್ನುವಂತಿಲ್ಲ. ಭಕ್ತರು ದೈವಶಿಕ್ಷೆಗೆ, ಹಣೆಬರಹ, ನರಕಕ್ಕೆ ಹೆದರಿ; ಮೂಢ ಆಚರಣೆಗೆ ಕಂದಾಚಾರಕ್ಕೆ ಗುಲಾಮರಾಗಿ ತಮ್ಮದೆಲ್ಲವನ್ನೂ ಕಳೆದುಕೊಂಡು ದೇವರು ಮತ್ತೆ ಕರುಣಿಸುತ್ತಾನೆಂದು ಕಾದು... ಕಾದು... ಮಣ್ಣಾದವರ ಸುಟ್ಟು ಹೋದವರ ಸಂಖ್ಯೆ ಅದೆಷ್ಟು ಕೋಟಿ ದಾಟಿದೆಯೊ... !

ಹರಕೆಯ ಹೆಸರಲ್ಲಿ, ನಂಬಿಕೆಯ ಹೆಸರಲ್ಲಿ ಕೋಟ್ಯಂತರ ಮಂದಿ ಸಲ್ಲಿಸುವ ಮುಡಿ, ತಲೆಗೂದಲು ದೇವರಿಗಾದರೂ ಯಾಕೆ ? ನಮ್ಮ ಯಾವ ದೇವ – ದೇವತೆಯರೂ ಬಾಲ್ಡ್‌ಹೆಡ್‌ಗಳಲ್ಲ... ಆದರೆ ದೇವಸ್ಥಾನಗಳು ಸ್ಥಾಪಿಸಿದ ಕೇಶ ಉದ್ಯಮಗಳಿಂದ ದೇಶ ವಿದೇಶಗಳಿಗೆ ರಫ್ತಾಗುವ, ಅದರಲ್ಲೂ ಮುಖ್ಯವಾಗಿ ಹೆಂಗಸರ ಕೂದಲಿಗೆ ಭಾರಿ ಬೇಡಿಕೆ ಇದೆ; ವಿಗ್ ಉದ್ದಿಮೆಗಳಿಂದ ! ಇದು ಕೋಟ್ಯಂತರ ರೂಪಾಯಿಗಳ ದಂಧೆಯಾಗಿದೆ.

ಜನರ ದೈವಭಯವನ್ನೇ ಅಸ್ತ್ರವನ್ನಾಗಿಸಿಕೊಂಡು ಜ್ಯೋತಿಷ್ಯ, ವಾಸ್ತು ಶಾಸ್ತ್ರ ಕಂಟಕ ನಿವಾರಣೆಗೆ ದುಬಾರಿ ಪೂಜೆ, ಬ್ರಾಹ್ಮಣರಿಗೆ ಗೋದಾನ, ಕನಕದಾನ, ಇತ್ಯಾದಿಗಳ ಹೆಸರಿನಲ್ಲಿ ಅಮಾಯಕ ಭಕ್ತರ ಬದುಕಿಗೆ, ಜೋಬಿಗೆ ಕನ್ನ ಹಾಕುವ ಮನೆ ಮುರುಕ ಪುರೋಹಿತರ ಕಂದಾಚಾರ ಕ್ರೌರ್ಯಕ್ಕೆ ತಡೆ ಒಡ್ಡಬೇಕಿದೆ. ಮೈದುಂಬಿದ ದೈವಶಕ್ತಿಯಿಂದ ದೆವ್ವ ಬಿಡಿಸುವ ಅಮಾನವೀಯ ಕ್ರೌರ್ಯ, ಮಾಟ–ಮಂತ್ರ, ಹುತ್ತಕ್ಕೆ ಹಾಲು, ಕೆರೆ ಬಾವಿಯಲ್ಲಿ ಗಣಪತಿ ವಿಸರ್ಜನೆ, ತುಲಾಭಾರ, ಪಾದಪೂಜೆ, ಮುಡಿ ನೀಡುವಿಕೆ, ಉಂಡ ಎಂಜಲನ್ನದ ಮೇಲೆ ಹೊರಳುವ ಮಡೆಸ್ನಾನ, ಪಂಕ್ತಿಭೇದದ ಭೋಜನ ವ್ಯವಸ್ಥೆ, ಸಿಡಿ ಏರಿಸುವಿಕೆ, ಬ್ರಾಹ್ಮಣ ಜಾತಿ ಅರ್ಚಕರ ಏಕಸ್ವಾಮ್ಯ, ಹಲವು ಸಾವಿರ ಬೆಲೆಯ ದೈವಪೂಜೆ ಶುಲ್ಕ, ಇಂತಹ ಮೂಢನಂಬಿಕೆಗಳ ಏಜೆಂಟರಂತಾಗಿ ಕಾರ್ಯ ನಿರ್ವಹಿಸುವ ಟಿ.ವಿ. ವಾಹಿನಿಗಳ, ಆ್ಯಂಕರ್‌ಗಳ, ನರೇಂದ್ರ ಶರ್ಮರಂತಹ ಕ್ಷುಲ್ಲಕ, ಅಧಾರ್ಮಿಕ ವ್ಯಕ್ತಿಗಳ ಮೌಢ್ಯಭರಿತ ವಿಕೃತ ಆಲೋಚನಾಕ್ರಮಕ್ಕೆ ಕಡಿವಾಣ ಬೀಳಬೇಕಿದೆ.

ದಲಿತರ ಉಸಿರಾಟಕ್ಕೆ ಅಡ್ಡಿಯಾಗಿ ಕೂತಿರುವಂಥ ಮೂಢನಂಬಿಕೆ ಜಾತಿಪದ್ಧತಿ, ಮೇಲುಕೀಳು ಭೇದ–ಭಾವ, ಅವರ ಆರ್ಥಿಕ–ಬೌದ್ಧಿಕ ಚಲನೆಗಳನ್ನು ಕತ್ತರಿಸಿಬಿಟ್ಟ ಕಂದಾಚಾರಗಳು... ಇಂತಹ ಮೂಢನಂಬಿಕೆಯ ಆಚರಣೆಯನ್ನು ನಿವಾರಿಸಿಕೊಳ್ಳಲು ಜಾತಿ ವಿನಾಶವೇ ಶ್ರೇಷ್ಠ ಔಷಧವೆಂಬ ಬುದ್ಧ, ಅಂಬೇಡ್ಕರ್, ವಿವೇಕಾನಂದರರಂಥ ಮನುಜರ ನುಡಿಕಿರಣವನ್ನು ಅಸ್ಪೃಶ್ಯ ಸಮುದಾಯ ಸ್ವೀಕರಿಸಿತು. ಜಾತ್ಯತೀತ ಪ್ರಜ್ಞಾವಂತರು ಸಮರ್ಥಿಸಿದರು. ಬಹು ಸಂಖ್ಯಾತ ಜಾತಿಗಳು ಜಾತಿಪದ್ಧತಿಯೆಂಬ ಮೂಢನಂಬಿಕೆಯ ಪರವಾಗಿದ್ದವು. ಜಾತಿ ಪದ್ಧತಿಯಲ್ಲಿ ಸೃಜನಶೀಲತೆ ಇದೆಯೆಂದ ಸಾಹಿತಿ ಅನಂತಮೂರ್ತಿಯವರು ಚಂದ್ರಗುತ್ತಿಯಲ್ಲಿ ನಡೆದುಕೊಂಡು ಬರುತ್ತಿದ್ದ ಕೆಳಜಾತಿಯ ಹೆಣ್ಣುಮಕ್ಕಳ ಬೆತ್ತಲೆಸೇವೆ ಉಳಿಯಬೇಕೆಂದು ಆಗ್ರಹಿಸಿದ್ದರು. ೧೯೮೭ರಲ್ಲಿ ಪ್ರೊ॥ ಬಿ. ಕೃಷ್ಣಪ್ಪನವರ ನೇತೃತ್ವದಲ್ಲಿ ದಸಂಸ, ಪ್ರಗತಿಪರರು ನಡೆಸಿದ ಅವಿಸ್ಮರಣೀಯ ಹೋರಾಟದಿಂದ ಬೆತ್ತಲೆ ಸೇವೆ ಮೂಢನಂಬಿಕೆಗೆ ಜನತಾ ಸರ್ಕಾರ ನಿಷೇಧ ಹೇರಿತು. ಬೆತ್ತಲೆ ಮೈಗಳನ್ನು ಕಣ್ಮನದಲ್ಲಿ ತುಂಬಿಕೊಳ್ಳುತ್ತಿದ್ದ ಲಕ್ಷಾಂತರ ಧರ್ಮಾಂಧ ಕಣ್ಣುಗಳು ೧೯೮೭ರ ನಂತರ ಮಂಜಾಗಿ ಹೋದವು...

ದೈವಾಚರಣೆಯ ಸನ್ನಿಧಿಯಲ್ಲಿ ನಿತ್ಯ ಆಹಾರದ ಲಕ್ಷಾಂತರ ತೆಂಗಿನಕಾಯಿ, ಬಾಳೆಹಣ್ಣು ಭಕ್ತಿಯ ಉನ್ಮಾದದಲ್ಲಿ ನಾಶಗೊಳ್ಳುತ್ತಿರುತ್ತವೆ. ಲೋಕಕಲ್ಯಾಣದ ಯಜ್ಞ–ಯಾಗದಲ್ಲಿ ನಾಶವಾಗುವ ಜೇನುತುಪ್ಪ, ರೇಶ್ಮೆ ಬಟ್ಟೆ, ಹಣ್ಣು ಹಂಪಲು, ನವ ಧಾನ್ಯರಾಶಿ, ತೆಂಗಿನಕಾಯಿ, ಕೊಬ್ಬರಿ ಇಂಥವು ನಿಜಕ್ಕೂ ದೇಶದ ಲಕ್ಷಾಂತರ ಬಡ ಕುಟುಂಬಗಳಿಗೆ ಜೀವನಾಧಾರವಾಗಬಲ್ಲವು. ಹೀಗೆ ಭಕ್ತಿಯ ಹೆಸರಲ್ಲಿ ಸುಖ ಸಂಸ್ಕೃತಿಯು ಹಲವು ಕೋಟಿ ಬೆಲೆಯ ಆಹಾರಕ್ಕೆ ಧರ್ಮದ ಬೆಂಕಿ ಹಚ್ಚುವುದು ಮಹಾನ್ ಮೂಢನಂಬಿಕೆಯಲ್ಲವೇ ?

ಓಶೋ (ರಜನೀಶ್) "ಪುರೋಹಿತರು, ಅರ್ಚಕರು, ಮೂಲತಃ ಪರಾವಲಂಬಿ ಜೀವಿಗಳು. ಇವರ ದೇವಸ್ಥಾನಗಳಲ್ಲಿ ದೀಪದ ಶ್ರೀಮಂತಿಕೆ ಕೋರೈಸುತ್ತಿದ್ದರೆ, ನಿಮ್ಮ ಜೀವನದಲ್ಲಿರುವ ಕಗ್ಗತ್ತಲು ಒಂದಿಷ್ಟೂ ಕರಗಿಲ್ಲ. ಪುರೋಹಿತನ ಮಾತು ನಿಮಗೆ ಯಾವಾಗಲೂ ಹಿತವೆನಿಸುವುದು. ಪುರೋಹಿತನಿಗೆ ಬೇಕಿರುವುದು ನಿಮ್ಮನ್ನು ಶೋಷಿಸುವುದು. ನಿಮ್ಮೊಳಗಿನ ಪರಿವರ್ತನೆಯಲ್ಲ. ಅದರಲ್ಲಿ ಆತನಿಗೆ ಆಸಕ್ತಿಯೂ ಇಲ್ಲ. ನೀವು ಈಗ ಇರುವಂತೆಯೇ ಇದ್ದಾಗಲೇ ಪುರೋಹಿತ ವರ್ಗಕ್ಕೆ ಲಾಭ. ಮೂಢನಂಬಿಕೆಗಳ ರೋಗಿಯಾಗಿ ಆ ಹಾಸಿಗೆಯಲ್ಲಿ ನಿರಂತರವಾಗಿ ಬಿದ್ದುಕೊಂಡಿರುವುದರಿಂದಲೇ ಅವನ ವೃತ್ತಿ ಲಾಭದಾಯಕವಾಗಿದೆ" ಎನ್ನುವ ಒಳನೋಟವನ್ನು ಅದ್ಭುತವಾಗಿ ದಾಖಲಿಸುತ್ತಾರೆ. ನಾವೆಲ್ಲರೂ ಕೇಳಿಸಿಕೊಳ್ಳಬಹುದಾದ ಓಶೋ ಹೇಳುವ ಕತೆ ಕುತೂಹಲಕಾರಿಯಾಗಿದೆ:

"... ಒಬ್ಬ ಡಾಕ್ಟರ್ ತನ್ನ ಮಗನನ್ನೂ ಓದಿಸಿ ಡಾಕ್ಟರ್‌ರನ್ನಾಗಿಸುತ್ತಾನೆ. ಈ ತಂದೆ ಒಂದು ದಿನವೂ ರಜೆ ಪಡೆಯದೆ ತನ್ನ ವೈದ್ಯಕೀಯ ವೃತ್ತಿ ನಡೆಸಿಕೊಂಡು ಬಂದಿದ್ದ. ಮನೆಗೆ, ಬಂದ ಮಗನಿಗೆ "ಇನ್ನು ನೀನು ನನ್ನ ವೃತ್ತಿಯನ್ನು ಮುಂದುವರಿಸಿಕೊಂಡು ಹೋಗು. ನಾನು ಮೂರು ತಿಂಗಳು ವಿಶ್ರಾಂತಿಯಲ್ಲಿರುವೆ. ನನ್ನ ಜೀವನವನ್ನೆಲ್ಲಾ ಸಂಪಾದನೆಯಲ್ಲೇ ಕಳೆದೆ. ಹಾಯಾಗಿ ಒಂದು ದಿನವೂ ವಿರಾಮ ಪಡೆಯಲಿಲ್ಲ" ಎಂದು ಹೇಳಿ ದೇಶ ಪರ್ಯಟನೆಗಾಗಿ ಹೊರಟುಹೋದ. ಮೂರು ತಿಂಗಳು ಪ್ರವಾಸಮಾಡಿ ವಾಪಸ್ಸು ಮನೆಗೆ ಬರುತ್ತಾನೆ.

ಬಂದೊಡನೆ ಮಗನನ್ನು ಕರೆದು, "ಹೇಗೆ ನಡೆಯುತ್ತಿದೆ ನಿನ್ನ ಕಾರುಬಾರು ?" ಎಂದು ಕೇಳುತ್ತಾನೆ. ಅದಕ್ಕೆ ಮಗನಿತ್ತ ಉತ್ತರ: "ಬಹಳ ಚೆನ್ನಾಗಿ ನಡೆಯುತ್ತಿದೆ. ನಿಮ್ಮ ಜೀವನದಲ್ಲೆಲ್ಲ ನೀವು ಗುಣಪಡಿಸಲಾಗದಂತಹ ರೋಗಿಗಳನ್ನು ನಾನು ಮೂರೇ ತಿಂಗಳಿನಲ್ಲಿ ಗುಣಪಡಿಸಿದೆ !" ಇದನ್ನು ಕೇಳಿ ತಂದೆ ಹಣೆ ಚಚ್ಚಿಕೊಳ್ಳುತ್ತಾ ಹೇಳಿದನಂತೆ 'ಅಯ್ಯೋ ದಡ್ಡಾ ! ನಮ್ಮ ವೃತ್ತಿ, ನಮ್ಮ ವ್ಯವಸಾಯವೇ ಅದು... ನನಗೇನು ಅವರನ್ನು ಗುಣಪಡಿಸಲಾಗುತ್ತಿರಲಿಲ್ಲವೆಂದುಕೊಂಡಿದ್ದಿಯಾ ? ಹಾಗೆ ಗುಣಪಡಿಸಿದ್ದಲ್ಲಿ ನಿನ್ನನ್ನು ಡಾಕ್ಟರ್ ಪರೀಕ್ಷೆಗೆ ಓದಿಸಲಾಗುತ್ತಿತ್ತೇ ? ಆ ರೋಗಿಗಳ ಬಲದ ಮೇಲೆಯೇ ನಿನ್ನನ್ನು ಓದಿಸಿದ್ದು. ಈಗ ನೀನು ಎಲ್ಲವನ್ನೂ ಹಾಳು ಮಾಡಿದೆ...!!'

ಇಲ್ಲಿಗೆ ಕತೆ ನಿಲ್ಲಿಸಿದ ಓಶೋ, ಮುಂದುವರಿದು, "ಪುರೋಹಿತರು ಕೂಡ ಹಾಗೆಯೇ. ನೀವು ರೋಗಿಯಾಗಿದ್ದಷ್ಟೂ ಇನ್ನಷ್ಟು ಮೂಢನಂಬಿಕೆಗಳ ರೋಗಾಣುಗಳನ್ನು ನಿಮ್ಮಲ್ಲಿ ಹುಟ್ಟುಹಾಕುತ್ತಾ ಹೋದಷ್ಟೂ ಅವರಿಗೆ ಲಾಭ" ಎನ್ನುತ್ತಾ ಅವರ ಧಾರ್ಮಿಕ ಮೌಢ್ಯತೆಯನ್ನು, ಆರ್ಥಿಕ ಶೋಷಣೆಯ ಗುಟ್ಟನ್ನು ಬಯಲುಗೊಳಿಸಿಬಿಡುತ್ತಾರೆ.

ಈ ನುಡಿ ಸತ್ಯ; ದೇಶದ ತಲೆಯ ಮೇಲೂ ಮೆದುಳಿನ ಒಳ–ಒಳಗೂ ನಿತ್ಯವೂ ಹಾರಾಡುತ್ತಾ ವಿಕಸಿಸುತ್ತಿದ್ದಲ್ಲಿ, ಬದಲಾವಣೆ ಸಾಧ್ಯವೆಂದೆನಿಸುತ್ತದೆ. ದೈವ ಭಕ್ತಿ ಸರಿ. ನಿಮ್ಮ ಭಕ್ತಿಯ ಆಶಯ ಈಡೇರಲು ಭಕ್ತಿಗೆ ಹಣದ ಹುಚ್ಚೇರಿಸಿ ಆ ಮೂಲಕ ಭಕ್ತ ಹಣವನ್ನು ಪೂಜೆಯ ಹೆಸರಲ್ಲಿ ; ಹರಕೆಯ ಹೆಸರಲ್ಲಿ ; ಸುಲಿಗೆ ಮಾಡುವುದು ಅಪರಾಧ. ಇದನ್ನು ಅಪರಾಧವೆಂದು ಅರಿವು ಮೂಡಿಸುವ ಜವಾಬ್ದಾರಿ ಪ್ರಜ್ಞಾವಂತ ಆಸ್ತಿಕರ ಮೇಲಿದೆ. ಮಾಧ್ಯಮಗಳ ಹೊಣೆಯಾಗಿದೆ.

ಭಕ್ತರ ದೌರ್ಬಲ್ಯವನ್ನು ಬಳಸಿಕೊಳ್ಳುವ ಪುರೋಹಿತರು ಆತನಲ್ಲಿ ಪಾಪಪ್ರಜ್ಞೆ ಹುಟ್ಟುಹಾಕುತ್ತಿದ್ದಾರೆ. ಇದರಿಂದ ಪಾರಾಗಲು, ಉನ್ನತಿ ಗಳಿಸಲು, ಪುಣ್ಯ ಸಂಪಾದಿಸಲು, ಸ್ವರ್ಗದಲ್ಲಿ ಸ್ಥಳ ಕಾದಿರಿಸಲು ಪುರೋಹಿತರನ್ನು ಅರ್ಚಕರನ್ನು ಹಣ(ದಕ್ಷಿಣೆ)ದ ಮೂಲಕ 'ಸರಿಪಡಿಸಿ'ಕೊಳ್ಳಿ ಎಂಬಂಥ ಮೌಢ್ಯತೆ ನಿಜಕ್ಕೂ ಅಪಾಯಕಾರಿಯಾಗಿ ಪರಿಣಮಿಸಿದೆ.

ಈ ದುಸ್ಥಿತಿ... ಆಸ್ಪತ್ರೆಗಳನ್ನು, ರಾಜಕಾರಣಿಗಳನ್ನು, ವಕೀಲರನ್ನು, ಧಾರ್ಮಿಕ ಸಂಘಟನೆಗಳನ್ನು ನೆನಪಿಸುವಂತಿದೆ. ಬದುಕನ್ನು ಬೆಳಗುವಂತಹ ನಂಬಿಕೆಗಳನ್ನು ಕತ್ತರಿಸಿಹಾಕುವ ಮೂಢನಂಬಿಕೆಗಳ ವಿಕೃತ ಬೆಳವಣಿಗೆ ತಡೆಯಲು, ಸರ್ಕಾರದೊಂದಿಗೆ ಪ್ರಜ್ಞಾವಂತ, ಆರೋಗ್ಯವಂತ ಮನಃಸ್ಥಿತಿಗಳು ಕೈಜೋಡಿಸಬೇಕಾದ ಅಗತ್ಯವಿದೆ.

**ರಾಮಸ್ವಾಮಿ ಸಿ., ಮಡಿಕೇರಿ**




**ಭಾ**ರತ ಕೃಷಿ ಪ್ರಧಾನ ರಾಷ್ಟ್ರವಾಗಿದ್ದು, ಕಲೆ, ಸಾಹಿತ್ಯ, ಪರಂಪರೆಯಿಂದ ಕೂಡಿದ ಸಂಪ್ರದಾಯನಿಷ್ಠ ರಾಷ್ಟ್ರ. ಭಕ್ತಿ ಭಾವನೆಗಳು ಆಳವಾಗಿ ಬೇರೂರಿದ್ದು, ತಮ್ಮೊಳಗೆ ಅಗೋಚರವಾದ ಶಕ್ತಿಯನ್ನು ಸೃಷ್ಟಿಸಿಕೊಂಡು ಬೇರೊಬ್ಬರಿಗೆ ತೊಂದರೆಯಾಗದಂತೆ ದೈನಂದಿನ ಕೆಲಸ ಮಾಡಿಕೊಂಡು ಹೋದರೆ ಸೃಷ್ಟಿಕರ್ತ ಒಳ್ಳೆಯದನ್ನು ಮಾಡುತ್ತಾನೆ ಎಂಬ ನಂಬಿಕೆಯನ್ನು ಹೊಂದಿರುವ ದೇಶ. ಹಿಂದೂ ಧರ್ಮವು ದಿನನಿತ್ಯದ ಜೀವನದ ನಡುವೆಯೂ ದೈವತ್ವದ ಬಗ್ಗೆ ಚಿಂತಿಸಲು ನೆರವಾಗುವ ಉದ್ದೇಶದಿಂದ ಅನೇಕ ಆಚರಣೆಗಳನ್ನು ಮನೆಯಲ್ಲಿ ಅಥವಾ ದೇವಸ್ಥಾನದಲ್ಲಿ ಆರಾಧನೆ ಮಾಡುವಂತೆ ಮಾಡಿದೆ, ಮನೆಯಲ್ಲಿ ಹಿಂದುಗಳು ತಮ್ಮ ಇಷ್ಟದೇವತೆಗಳಿಗೆ ಸಮರ್ಪಿತವಾಗಿ ಮೂರ್ತಿಗಳಿಂದ ದೇವರ ಮನೆಯನ್ನು ನಿರ್ಮಿಸಿ ದಿನನಿತ್ಯ ಪೂಜೆಯ ಮೂಲಕ ತಮ್ಮ ನಂಬಿಕೆಯನ್ನು ವ್ಯಕ್ತಪಡಿಸುವುದರಿಂದ ದೇವಾಲಯಗಳಿಗೆ ಭೇಟಿ ನೀಡುವುದು ಅನಿವಾರ್ಯವಲ್ಲ; ಹಿಂದುಗಳು ತಮ್ಮ ಪೂಜೆಯನ್ನು ಮೂರ್ತಿಗಳ ಮೂಲಕ ಆರಾಧಕ ಮತ್ತು ದೇವರ ನಡುವೆ ಒಂದು ಪ್ರತ್ಯಕ್ಷ ಸಂಪರ್ಕವಾಗಿ ಕೆಲಸ ಮಾಡುವುದರ ಜೊತೆಗೆ ದೇವರು ಸರ್ವಾಂತರ್ಯಾಮಿಯಾಗಿರುತ್ತಾನೆ ಎಂಬ ನಂಬಿಕೆಯನ್ನು ಹೊಂದಿದ್ದಾರೆ. ಮೂರ್ತಿಯನ್ನು ಹಲವು ವೇಳೆ ದೇವರ ಅಭಿವ್ಯಕ್ತಿಯೆಂದು ಪರಿಗಣಿಸಿ ಮೂರ್ತಿಯನ್ನು ಬರಿಯ ಕಲ್ಲು ಅಥವಾ ಕಟ್ಟಿಗೆಯಾಗಿ ಭಾವಿಸದೆ ದೈವತ್ವದ ರೂಪದಲ್ಲಿ ಭಾವಿಸಬೇಕೆಂಬ ಮೂಢನಂಬಿಕೆಯನ್ನು ಕೆಲವು ಸ್ವಯಂಘೋಷಿತ ದೇವಮಾನವರು ಪ್ರಚಾರ ಮಾಡುವುದರ ಮೂಲಕ ಸಮಾಜದಲ್ಲಿನ ನಂಬಿಕೆಯನ್ನು ಬದಲಾಯಿಸುತ್ತಿದ್ದಾರೆ. ಆದರೆ ನಂಬಿಕೆಯು ದಿನಕಳೆದಂತೆ ಬದಲಾಗಿ ವಿಭಿನ್ನವಾದ ದೇವರ ಅರಿವನ್ನು ಮತ್ತು ದೇವ/ದೇವತೆಗಳ ಆಶೀರ್ವಾದ ಪಡೆಯಲು ದೇವರಿಗೆ ನೈವೇದ್ಯ ರೂಪದಲ್ಲಿ ವಿಚಿತ್ರ ಆಚರಣೆಗಳ ಮೂಲಕ (ಪ್ರಾಣಿಬಲಿ, ಮಕ್ಕಳನ್ನು ನಿಧಿಗಾಗಿ ಬಲಿಕೊಡುವುದು, ಉರುಳುಸೇವೆ ಮಾಡಿಸುವುದು, ಬೆಂಕಿಯ ಮೇಲೆ ನಡೆಯುವುದು) ಪ್ರಕೃತಿ ವಿಕೋಪದಿಂದಾಗುವ ಮತ್ತು ಮಾನವನಿಗೆ ಎದುರಾಗುವ ದೈಹಿಕ ಮತ್ತು ಮಾನಸಿಕ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬಹುದು ಎಂದು ದೇವಮಾನವರು ಪ್ರಚಾರ ಮಾಡುತ್ತಿದ್ದಾರೆ.

ದೇವರು ಒಂದು ಅಗೋಚರ ಶಕ್ತಿ. ಅಂದರೆ ನಮ್ಮನ್ನು ನಮ್ಮಿಂದಲೇ ನಿಯಂತ್ರಿಸಲ್ಪಡುವ ಒಂದು ಶಕ್ತಿ. ದೇವರು ಪ್ರತಿಯೊಂದು ಧರ್ಮ, ಜಾತಿ, ವರ್ಗಗಳಲ್ಲಿಯೂ ಕೆಟ್ಟದನ್ನು ನಿಯಂತ್ರಿಸುತ್ತಾನೆ ಎಂಬ ನಂಬಿಕೆಯು ಸಮಾಜದಲ್ಲಿ ಪ್ರತಿಯೊಬ್ಬರಲ್ಲೂ ಇದೆ. ಈ ನಂಬಿಕೆಯನ್ನು ಮೂಢನಂಬಿಕೆಯನ್ನಾಗಿ ಬದಲಾಯಿಸಲು ಮುಂದಾಗಿರುವ ದೈವಮಾನವರೆಂದೇ ಕರೆಸಿಕೊಳ್ಳುತ್ತಿರುವ ಸ್ವಾಮೀಜಿಗಳು, ವಾಸ್ತುಶಾಸ್ತ್ರಜ್ಞರು, ಜ್ಯೋತಿಷಿಗಳು ಸಮಾಜದ ಕೆಟ್ಟ ನಂಬಿಕೆಯ ಹೆಸರಿನಲ್ಲಿ ಜನಸಾಮಾನ್ಯರನ್ನು ದಾರಿ ತಪ್ಪಿಸಿ ಹಣ ಮಾಡುವುದರ ಜೊತೆಗೆ ತಮ್ಮ ಸ್ವಾರ್ಥಸಾಧನೆ ಮಾಡಿಕೊಳ್ಳುತ್ತಿದ್ದಾರೆ, ಹಾಗೆಯೇ ತಾವೇ ದೇವರುಗಳೆಂದು ಪಾದಪೂಜೆ ಇನ್ನಿತರೆ ಆಚರಣೆಯ ನೆಪವೊಡ್ಡಿ ಮಾನಸಿಕ, ಲೈಂಗಿಕ ಕಿರುಕುಳವನ್ನು ನೀಡುತ್ತಿರುವುದು ಬಳಕೆಗೆ ಬಂದಿದೆ. ಪ್ರಸ್ತುತ ಸಮಾಜವನ್ನು ಕಠಿಣ ಕಾನೂನು ಇಲ್ಲದೇ ಬದಲಾವಣೆ ಮಾಡುವುದು ಅಸಾಧ್ಯ ಎಂಬುದು ಸತ್ಯ. ಕಾನೂನುಗಳು ಪೂರಕವಾದಾಗ ಸಾಮಾಜಿಕ ಜಾಗೃತಿ ಕಾನೂನನ್ನು ಬಲಗೊಳಿಸುತ್ತದೆ, ಸೂಕ್ತವಾದ ಕಾನೂನು ಅನುಷ್ಠಾನಗೊಂಡ ನಂತರ ಖಂಡಿತವಾಗಿಯೂ ಬದಲಾವಣೆಯನ್ನು ತರಲು ಸಹಾಯಕವಾಗುತ್ತದೆ, ಎಂದು ದಿವಂಗತ ಡಾ॥ ನರೇಂದ್ರ ದಾಭೋಲ್ಕರ್‌ರವರು ತಮ್ಮ ಮೂಢನಂಬಿಕೆಯನ್ನು ಕರಡು ಲೇಖನದಲ್ಲಿ ತಿಳಿಸಿದ್ದಾರೆ.

ದಿವಂಗತ ಡಾ॥ ನರೇಂದ್ರ ದಾಭೋಲ್ಕರ್ ಮತ್ತು ಅವರ ಸಹಚರರು ಹಾಗೂ ಪ್ರಸಿದ್ಧ ಕಾರ್ಯಕರ್ತರಾದ ಶ್ಯಾಮ್ ಮಾನವ್ ಜೊತೆಗೂಡಿ ೧೮ ವರ್ಷಗಳ ನಿರಂತರ ಶ್ರಮದಿಂದಾಗಿ, ರಾಜಕೀಯ ಮತ್ತು ಸಾಮಾಜಿಕ ಸಂಸ್ಥೆಗಳ ಸಲಹೆ ಮತ್ತು ಟೀಕೆಗಳೊಂದಿಗೆ ಹಲವಾರು ಬಾರಿ ತಿದ್ದುಪಡಿಗಳೊಂದಿಗೆ ಮೂಢನಂಬಿಕೆ ವಿಧೇಯಕದ ಕರಡು ಪ್ರತಿಯನ್ನು ರಚಿಸಿದರು. ನಂತರದ ಕೆಲವೇ ದಿನಗಳಲ್ಲಿ ಪುಣೆಯಲ್ಲಿ ಕಗ್ಗೊಲೆಗೀಡಾದರು, ಈ ಹತ್ಯೆಯನ್ನು ಗಂಭೀರವಾಗಿ ಪರಿಗಣಿಸಿದ ಮಹಾರಾಷ್ಟ್ರ ಸರ್ಕಾರ ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಕ್ರೌರ್ಯವನ್ನು ಹಾಗೂ ದೇವಮಾನವರೆಂದು ಹೇಳಿಕೊಳ್ಳುತ್ತಿದ್ದವರನ್ನು ಮಟ್ಟಹಾಕಲು ಮೂಢನಂಬಿಕೆಯನ್ನು ನಿಷೇಧಿಸುವ ವಿಧೇಯಕವನ್ನು ಜಾರಿಗೆ ತಂದು ಸದನದ




ಅನುಮೋದನೆಯನ್ನು ಪಡೆದಿದೆ. ಈ ಮೂಢನಂಬಿಕೆ ಕಾಯಿದೆಯಲ್ಲಿ ಪ್ರಮುಖವಾಗಿ ಯಾವುದೇ ವ್ಯಕ್ತಿ, ಅಥವಾ ಅವನ ಪರವಾಗಿ ದುಷ್ಟ ಅಭ್ಯಾಸಗಳನ್ನು ಆಚರಣೆ ಮಾಡುವಂತೆ ಪ್ರಚಾರ ಮಾಡುವುದು ಮತ್ತು ಮಾಡಿಸುವುದು ಕೂಡ ಅಪರಾಧವಾಗಿದೆ, ಈ ಮಸೂದೆಯು ಸಮಾಜದಲ್ಲಿ ಜಾಗೃತಿ, ಅಜ್ಞಾನ ಮತ್ತು ಕುರುಡು ನಂಬಿಕೆಗಳ ಅಭಿವೃದ್ಧಿ, ಕೆಟ್ಟ ಅಭ್ಯಾಸ, ಸಂಪ್ರದಾಯಗಳ ವಿರುದ್ಧ ಸಾಮಾನ್ಯ ಜನರನ್ನು ರಕ್ಷಿಸುವ, ಮಾನವ ಬಲಿದಾನ ಹಾಗೂ ಇತರೆ ಸಮಸ್ಯೆಗಳನ್ನು ನಿರ್ಮೂಲನೆ ಮಾಡಿ ಸುರಕ್ಷಿತ ಸಮಾಜವನ್ನು ರಚಿಸುವುದು, ನಂಬಿಕೆಗಳ ಹೆಸರಿನಲ್ಲಿರುವ ದುಷ್ಟ ಮತ್ತು ಭಯಂಕರ ಅಭ್ಯಾಸಗಳ ಮೂಲಕ ದುಷ್ಟ ಶಕ್ತಿ ಅಥವಾ ಮಾಂತ್ರಿಕ ಶಕ್ತಿಗಳ ಹೆಸರಿನಲ್ಲಿ ಜನರನ್ನು ಬಲಿ ಕೊಡುವುದನ್ನು ನಿಲ್ಲಿಸುವುದೇ ಇದರ ಪ್ರಮುಖ ಉದ್ದೇಶ ಎಂದು ಮಹಾರಾಷ್ಟ್ರ ಸರ್ಕಾರ ಹೇಳಿದೆ.

ಮಹಾರಾಷ್ಟ್ರದ ನಂತರ ಕರ್ನಾಟಕ ವ್ಯಾಪಕವಾಗಿ ರೋಗದಂತೆ ಹರಡಿರುವ ಮೂಢನಂಬಿಕೆಯನ್ನು ತೊಡೆದುಹಾಕಲು, ದೇವಮಾನವರನ್ನು ನಿಯಂತ್ರಿಸಲು, ದೇವರ ಹೆಸರಿನಲ್ಲಿ ನಡೆಸುತ್ತಿರುವ ದಿನನಿತ್ಯದ ಕ್ರೌರ್ಯವನ್ನು ತಡೆದು ಜನರಲ್ಲಿ ಜಾಗೃತಿ ಮೂಡಿಸಲು ಮೂಢನಂಬಿಕೆ ವಿಧೇಯಕ ೨೦೧೩ರ ಕರಡನ್ನು ಡಾ॥ ಜಾಫೆಟ್ ನೇತೃತ್ವದ ತಂಡ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿದೆ. ಈ ವಿಧೇಯಕದಲ್ಲಿ ಪ್ರಮುಖವಾಗಿ, ಲಾಭಕ್ಕಾಗಿ ಮತ್ತು ದೈವತ್ವದ ಸಂತೃಪ್ತಿಗಾಗಿ ಹಿಂಸೆ ಮಾಡುವುದು (ನರಬಲಿ), ಕಾಯಿಲೆಯನ್ನು ಗುಣಪಡಿಸುವ ಸಲುವಾಗಿ ಹಿಂಸಾತ್ಮಕ ಶಿಕ್ಷೆಯನ್ನು ನೀಡುವುದು, ದೈಹಿಕ ಮತ್ತು ಆಧ್ಯಾತ್ಮಿಕ ದೈವಮಾನವರೆಂದು ಗುರುತಿಸಿಕೊಂಡವರು ದೈಹಿಕ ಮತ್ತು ಮಾನಸಿಕ ಶಿಕ್ಷೆ, ಹಣಕ್ಕಾಗಿ ಮಾಟ ಮಂತ್ರ, ವಾಮಾಚಾರ ಇತರೆ ಮೂಢನಂಬಿಕೆಯ ವಿರೋಧ, ದೈಹಿಕ ಹಿಂಸೆ, ದೇಹಕ್ಕೆ ಕೊಕ್ಕೆ ಕಟ್ಟಿ ರಥ ಎಳೆಯುವುದು, ಮಕ್ಕಳ ಕಾಯಿಲೆ ವಾಸಿಮಾಡುವ ಸಲುವಾಗಿ ಮುಳ್ಳು, ಮತ್ತು ಎತ್ತರ ಸ್ಥಳದಿಂದ ಎಸೆಯುವುದು, ಮಹಿಳೆಯರ ವಿಷಯಗಳ ಕುರಿತ ಮೂಢನಂಬಿಕೆ, ಮಾನವನ ಘನತೆಯನ್ನು, ಮಡೆಸ್ನಾನ ಪಂಕ್ತಿಭೇದ ಇತ್ಯಾದಿ ಮಾಡುವುದು, ಜಾತಿ ಮತ್ತು ಲಿಂಗ ತಾರತಮ್ಯ ಕಲ್ಪಿಸುವಂತೆ ಮಾಡುವುದು, ಯಾರೇ ವ್ಯಕ್ತಿಯ ಜನನದ ಸಮಯ ಮತ್ತು ಸ್ಥಳದ ಆಧಾರದ ಮೇಲೆ ತೆಗಳುವುದನ್ನು ಸಹ ಅಪರಾಧ ಎಂಬುದು ಈ ಕರಡು ವಿಧೇಯಕದ ಸಾರಾಂಶವಾಗಿದೆ. ಆದರೆ ವಿಧೇಯಕದ ಕರಡಿನ ಆರಂಭದಲ್ಲಿಯೇ ಅಪಸ್ವರಗಳು ಕೇಳಿಬರುತ್ತಿದ್ದು, ವ್ಯಾಪಕ ಟೀಕೆ/ಚರ್ಚೆಗೆ ಗುರಿಯಾಗುವುದರ ಮೂಲಕ ಜಾರಿಗೆ ಬರುವುದು ಅನುಮಾನಾಸ್ಪದವಾಗಿದೆ.

ಮೂಢನಂಬಿಕೆಯನ್ನು ತೊಡಗಿಸಿಕೊಂಡಿರುವವರಲ್ಲಿ ಜನಸಾಮಾನ್ಯರಿಗಿಂತ ರಾಜಕಾರಣಿಗಳೇ ಹೆಚ್ಚು! ಭಾರತದಂತಹ ದೇಶದಲ್ಲಿ ಕಾಯಿದೆ/ಕಾನೂನುಗಳು ಪ್ರಜೆಗಳಿಗೆ ಸಮರ್ಪಕವಾಗಿರದಿದ್ದರೆ ಪ್ರಜೆಗಳು ಸ್ವತಃ ಪ್ರತಿಭಟನೆ ಅಥವಾ ಸಹಿ ಅಭಿಯಾನ ನಡೆಸಿ ಸರ್ಕಾರಗಳನ್ನು ಎಚ್ಚರಗೊಳ್ಳುವಂತೆ ಮಾಡಿ ತಮ್ಮ ವಿರೋಧ ವ್ಯಕ್ತಪಡಿಸಲು ಮುಂದಾಗುತ್ತಾರೆ. ಮೂಢನಂಬಿಕೆ ವಿಷಯದಲ್ಲಿ ಅಂತಹ ಯಾವುದೇ ಬೆಳವಣಿಗೆಗಳು ಇಲ್ಲಿಯವರೆಗೂ ನಡೆದಿಲ್ಲ, ಆದರೂ ಎಲ್ಲರೂ ಒಪ್ಪಿಕೊಂಡಿದ್ದಾರೆ ಎಂದು ನಾನು ಹೇಳುವುದಿಲ್ಲ.

ಪ್ರಜಾಪ್ರತಿನಿಧಿಗಳು ನಂಬಿಕೆಯನ್ನು ವೈಯಕ್ತಿಕವಾಗಿಟ್ಟುಕೊಂಡು, ಸರ್ಕಾರದ ಆಡಳಿತವನ್ನು ಸಂವಿಧಾನದ ಮೂಲಕ ರೂಪಿಸಲು ಸಹಕರಿಸಬೇಕೇ ವಿನಾ ಯಾವುದೇ ಮಠಾಧೀಶರ, ಜ್ಯೋತಿಷಿಗಳ ಕಪಿಮುಷ್ಟಿಗೆ ಒಳಗಾಗಿ ಸಂವಿಧಾನದ ಆಶಯವನ್ನು ಮರೆತು ಪರೋಕ್ಷ ಮತ್ತು ಪ್ರತ್ಯಕ್ಷವಾಗಿ ಕೆಟ್ಟ ಆಚರಣೆಗಳಿಗೆ ಬೆಂಬಲಿಸುವುದು ಸಮಂಜಸವಾಗುವುದಿಲ್ಲ, ಭಾರತದ ವಸಾಹತುಶಾಹಿ ಆಡಳಿತದ ಸಮಯದಲ್ಲಿ ನಂಬಿಕೆ ಮತ್ತು ಮೂಢನಂಬಿಕೆಗಳಿಗಿಂತ ಕಾನೂನುಗಳೇ ಮುಖ್ಯವಾಗಿದ್ದವು ಎನ್ನುವುದು ಪ್ರತಿಯೊಬ್ಬರೂ ಅರಿಯಲೇಬೇಕಾದ ಸತ್ಯವಾಗಿದೆ. ಪಾದಪೂಜೆ, ಮಡೆಸ್ನಾನ, ಪಂಕ್ತಿಭೇದ, ಮುಸ್ಲಿಮರು ಮೊಹರಂ ಸಮಯದಲ್ಲಿ ಬ್ಲೇಡ್‌ನಲ್ಲಿ ಕೊಯ್ದುಕೊಳ್ಳುವುದು ಇತ್ಯಾದಿ... ಇಂತಹ ಆಚರಣೆಗಳು ರಾಜಕಾರಣಿಗಳಿಗೆ ಯಾಕೆ ತಪ್ಪು ಅನಿಸುವುದಿಲ್ಲ? ಕೆಟ್ಟ ಆಚರಣೆಯನ್ನು ಮಟ್ಟಹಾಕಲು ಮುಂದಾಗಿರುವ ಕಾನೂನು ತರಲು ಇವರಿಗೇಕೆ ಇಷ್ಟವಾಗುತ್ತಿಲ್ಲ?

ಮೂಢನಂಬಿಕೆಯ ವಿಧೇಯಕವು ಯಾವುದೇ ಒಂದು ಧರ್ಮಕ್ಕೆ ಸಂಬಂಧಿಸಿರಬಾರದು, ಯಾವ ಧರ್ಮದಲ್ಲಿಯಾದರೂ ಪ್ರಜೆಗಳಿಗೆ ದೇವರ ಹೆಸರಿನಲ್ಲಿ ನಡೆಯುವ ದೈಹಿಕ, ಮಾನಸಿಕ ಹಾನಿ, ಶೋಷಣೆ, ಲೈಂಗಿಕ ಕಿರುಕುಳ, ಮಾನವನ ಘನತೆಗೆ ಧಕ್ಕೆ ಉಂಟುಮಾಡುವ ಪ್ರತಿಯೊಂದು ಅಂಶಗಳು ಈ ಕಾಯಿದೆಯ ವ್ಯಾಪ್ತಿಗೆ ಒಳಪಡಬೇಕು. ಆಗ ಮಾತ್ರ ಕರ್ನಾಟಕದ ಪ್ರತಿಯೊಬ್ಬ ಪ್ರಜೆಗೆ ನ್ಯಾಯ ಒದಗಿಸಿದಂತಾಗುತ್ತದೆ ಎಂಬುದು ಹಲವು ನಾಯಕರ ವಾದ. ಆದರೆ ವಾಸ್ತವಿಕವಾಗಿ ಗಮನಿಸಿದಾಗ ವಿಧೇಯಕ ಕರಡು ರಚನೆಯ ಸದಸ್ಯರನ್ನು ಆಯ್ಕೆಯಲ್ಲಿ ಮಠಾಧೀಶರು, ಜ್ಯೋತಿಷಿಗಳು, ವಿದ್ವಾಂಸರನ್ನು ಸೇರಿಸದೆ ಕೇವಲ ಹಿಂದುಳಿದ ವರ್ಗದ ನಾಯಕರ ಮೂಲಕ ರಚಿಸಿರುವ ಕರಡನ್ನು ಕೆಲವೊಂದು ಮಠಾಧೀಶರು, ಜ್ಯೋತಿಷಿಗಳು, ರಾಜಕಾರಣಿಗಳು, ಒಪ್ಪಲು ಮನಸ್ಸು ಮಾಡುತ್ತಿಲ್ಲ.

**ವೆಂಕಟೇಶ್ ಹೆಚ್. ಎಸ್.**, ಮಂಗಳೂರು




ಶ್ರದ್ಧೆ ಮತ್ತು ಅಂಧಶ್ರದ್ಧೆ ಇವುಗಳ ನಡುವಿನ ಅಂತರ ತೀರಾ ತೆಳುವಾದದ್ದು. ನನಗೆ ಶ್ರದ್ಧೆಯಾಗಿ ಕಂಡದ್ದು ಇನ್ನೊಬ್ಬರಿಗೆ ಅಂಧಶ್ರದ್ಧೆಯಾಗಿ ಕಾಣಬಹುದು. ಅವೂ ಅಲ್ಲದೆ ಅಂಧಶ್ರದ್ಧೆಯ ಹಿಂದೆ ಧರ್ಮವೂ ತಳಕು ಹಾಕಿಕೊಂಡಿರುವದರಿಂದ ಈ ವಿಚಾರವೂ ತುಂಬ ಸೂಕ್ಷ್ಮವೂ ಜಟಿಲವೂ ಆಗಿದೆ. ಹಾಗಾಗಿ ಶ್ರದ್ಧೆ ಯಾವುದು ಮತ್ತು ಅಂಧಶ್ರದ್ಧೆ ಯಾವುದು ಎನ್ನುವದನ್ನು ಸ್ಪಷ್ಟಪಡಿಸಿಕೊಳ್ಳಬೇಕಾಗಿದೆ. ಕ್ರೂರವಾದ, ಅವಮಾನೀಯವಾದ, ಅಂಧಶ್ರದ್ಧೆಗಳನ್ನು ತಡೆಗಟ್ಟುವ ನಿಟ್ಟಿನಲ್ಲಿ ಕಠಿಣವಾದ ಕಾನೂನು ಖಂಡಿತ ಬೇಕಾಗಿದೆ. ಕೆಲವೊಂದು ಆಚರಣೆಗಳು ಸಮಾಜಕ್ಕಾಗಲಿ, ಇನ್ನಿತರರಿಗಾಗಲಿ ಯಾವುದೇ ತೊಂದರೆ ಉಂಟುಮಾಡುವುದಿಲ್ಲ. ಅಂತಹ ಆಚರಣೆಗಳ ನಿಷೇಧಕ್ಕೆ ಕಾನೂನು ಬೇಕಾಗಿಲ್ಲ. ತಿಳುವಳಿಕೆ ನೀಡಿದರೆ ಸಾಕು. ಇನ್ನು ಪ್ರಾಥಮಿಕ ತರಗತಿಯ ಹಂತದಿಂದಲೇ ಪಠ್ಯಕ್ರಮದಲ್ಲಿ ವೈಚಾರಿಕತೆಯ ಬಗ್ಗೆ ವಿಷಯಗಳನ್ನು ಅಳವಡಿಸಿ ಬೋಧಿಸ ಬೇಕಾಗಿದೆ. ಈಗಿನ ಶಾಲಾ ಪಠ್ಯಕ್ರಮದಲ್ಲಿ ವೈಚಾರಿಕತೆಯನ್ನು ಗಟ್ಟಿಗೊಳಿಸುವಂತಹ ಪರಿಣಾಮಕಾರಿ ಪಠ್ಯಗಳು ಇಲ್ಲವೆಂದೇ ಹೇಳಬೇಕಾಗಿದೆ. ಕೇವಲ ಕಾನೂನುಗಳಿಂದ ಅಂಧಶ್ರದ್ಧೆ ತೊಡೆದುಹಾಕಲು ಸಾಧ್ಯವಿಲ್ಲ. ಜನರಲ್ಲಿ ಅಂಧಶ್ರದ್ಧೆಗಳು ಧಾರ್ಮಿಕ ನೆಲೆಗಟ್ಟಿನಲ್ಲಿ ಬಲವಾಗಿ ಬೇರೂರಿರುವುದರಿಂದ ಅವರಿಂದ ಅಂಧಶ್ರದ್ಧೆಯನ್ನು ಒಂದೇ ಸಲಕ್ಕೆ ಕಿತ್ತುಹಾಕಲು ಸಾಧ್ಯವಿಲ್ಲ. ಹಾಗೇನಾದರೂ ಬಲ ಪ್ರಯೋಗದ ಮೂಲಕ ಅಂಧಶ್ರದ್ಧೆಯನ್ನು ಹೋಗಲಾಡಿಸಲು ಮುಂದಾದರೆ ಸಮಾಜದಲ್ಲಿ ಸಂಘರ್ಷ, ಅಶಾಂತಿಗೆ ಎಡೆಮಾಡಿಕೊಡಬೇಕಾದೀತು. ಅದರ ಬದಲಾಗಿ ಸಾಕಷ್ಟು ಪ್ರಚಾರ, ವೈಜ್ಞಾನಿಕ ವಿಚಾರಗಳ ಮೂಲಕ ಜನರಲ್ಲಿ ವೈಜ್ಞಾನಿಕ ಮನೋಭಾವನೆ ಮೂಡಿಸಬೇಕು. ಅಲ್ಲದೆ ಇಂದಿನ ಮಕ್ಕಳಿಗೆ ಈಗಿನಿಂದಲೇ ವೈಜ್ಞಾನಿಕತೆಯನ್ನು ಬೆಳೆಸಿಕೊಳ್ಳುವಂತೆ ಮಾಡಬೇಕು. ಯಾವಾಗ ಜನರಲ್ಲಿ ತಿಳುವಳಿಕೆ ಮೂಡಿ ಅಂಧಶ್ರದ್ಧೆ ಆಚರಣೆಗಳನ್ನು ಪ್ರಶ್ನೆಮಾಡ ತೊಡಗುತ್ತಾರೋ, ಅಲ್ಲದೆ ಅಂತಹ ಆಚರಣೆಗಳನ್ನು ಸ್ವತಃ ನಿಲ್ಲಿಸುತ್ತಾರೋ ಆವಾಗ ಅಂಧಶ್ರದ್ಧೆಯನ್ನು ಪ್ರೋತ್ಸಾಹಿಸುವವರು ಕಡಿಮೆಯಾಗುತ್ತಾರೆ. ಎಲ್ಲದಕ್ಕೂ ಮುಖ್ಯವಾಗಿ ಸಮಾಜಕ್ಕೆ ದಿಕ್ಕಾಗಬೇಕಾದ, ಬೆಳವಣಿಗೆಗೆ ಪೂರಕವಾಗಬೇಕಾದ ಮಾಧ್ಯಮ ಜಗತ್ತು ಮೊದಲು ಅಂಧಶ್ರದ್ಧೆ ಬಿಟ್ಟು ವೈಜ್ಞಾನಿಕ ಮನೋಭಾವನೆ ರೂಢಿಸಿಕೊಳ್ಳಲಿ ಎನ್ನುವುದೇ ನನ್ನ ಆಶಯ.

**ವಿನಾಯಕ ಎಲ್. ಪಟಗಾರ**, ಉತ್ತರ ಕನ್ನಡ




ಎಲ್ಲಿಯವರೆಗೆ ವಿಚಾರ ಮಾಡದೆ ಹೇಳಿದ್ದನ್ನೆಲ್ಲ ನಂಬಿ ಅದರಂತೆ ನಡೆಯುವವರು ಇರುತ್ತಾರೋ ಅಲ್ಲಿಯವರೆಗೆ ಅಂಧಶ್ರದ್ಧೆಗಳು, ಮೂಢನಂಬಿಕೆಗಳು ಇರುತ್ತವೆ ಮತ್ತು ಇನ್ನಷ್ಟು ಹೆಚ್ಚುತ್ತವೆ. ಕೆಲವು ಅಂಧಶ್ರದ್ಧೆಗಳು ಮೈಗಳ್ಳರಿಗೆ ವರದಾನದಂತಿರುತ್ತವೆ. "ಎಲ್ಲ ಕ್ರಿಯೆಗಳೂ ದೈವೇಚ್ಛೆಯಂತೆ ನಡೆಯುತ್ತವೆ ಮತ್ತು ಅವು ಪೂರ್ವನಿರ್ಧಾರಿತವಾಗಿರುತ್ತವೆ" ಎಂಬುದೂ ಅಂಥವುಗಳಲ್ಲಿ ಒಂದು. ಕೆಲವರು ಇದನ್ನೇ ಅದೃಷ್ಟವೆಂದೂ ಕರೆಯುತ್ತಾರೆ. ಸಾಮಾನ್ಯವಾಗಿ ಹಿರಿಯರು ಕಿರಿಯರಿಗೆ ಇಂಥ ಮಾತುಗಳನ್ನು ಸಹಜವಾಗಿ ಹೇಳಿಬಿಡುತ್ತಾರೆ. ತಮ್ಮಿಂದ ಹಿಂದೆ ಏನನ್ನು ಮಾಡಲು ಆಗಿರುವುದಿಲ್ಲವೋ ಅದಕ್ಕೆ ಈ ನೆಪವೇ




ಅವರಿಗೆ ಒಂದು ಕಾರಣ. ಕಿರಿಯರಾದರೋ ಇದನ್ನು ತಕ್ಷಣ ಸ್ವಾಗತಿಸಿ "ಉಪದೇಶ" ಮಾಡಿದ ಹಿರಿಯರನ್ನು ತುಂಬ ಕೃತಜ್ಞತಾಭಾವದಿಂದ ನೋಡುತ್ತಾರೆ!

ಉನ್ನತ ಶಿಕ್ಷಣ ಪಡೆದ ನಂತರವೂ ಕೆಲವು ಯುವಕರು ನೌಕರಿ ಹುಡುಕುವ ಸಾಹಸ ಮಾಡದೆ ದೇವರೇ ಅಂಥ ಅದೃಷ್ಟ–ಅವಕಾಶಗಳನ್ನು ಕಲ್ಪಿಸಿಕೊಡಲೆಂದು ಕೂತಿರುತ್ತಾರೆ. ಕೆಲವರಂತೂ ಇದರಲ್ಲಿ ಎಷ್ಟು ನಂಬುಗೆ ಇಟ್ಟಿರುತ್ತಾರೆಂದರೆ, ಯಾರಾದರೂ ಸಹಾಯ ಮಾಡಿದರೆ ಅದೂ ಕೂಡ ದೈವೇಚ್ಛೆಯಂತೆ ಪೂರ್ವನಿರ್ಧಾರಿತವಾಗಿ ಬಂದದ್ದೆಂದೂ ದೇವರೇ ಅವರ ಮನಸ್ಸಿನಲ್ಲಿ ಬಂದು ಹಾಗೆ ನುಡಿಸಿರುತ್ತಾನೆಂದೂ ಹೇಳುತ್ತಾರೆ. ಪಾಪ ಸಹಾಯ ಮಾಡಿದವನಿಗೆ ಸಲ್ಲಬೇಕಾದ ಕೃತಜ್ಞತೆ, ತಥಾಕಥಿತ ದೇವರಿಗೆ ಸಲ್ಲುತ್ತದೆ.

ನಿರ್ದಿಷ್ಟ ಸಮಯಗಳಲ್ಲಿ ಸಂಭವಿಸುವ ಹಗಲು ರಾತ್ರಿ, ಹುಣ್ಣಿಮೆ–ಅಮಾವಾಸ್ಯೆ, ಆಕಾಶಕಾಯಗಳ ಮಧ್ಯೆ ಗ್ರಹ–ನಕ್ಷತ್ರಗಳ ಗೋಚರಿಕೆ – ಇವೆಲ್ಲಾ ನಡೆಯುವಂತೆ ನಮ್ಮ ಕಾರ್ಯಗಳು, ಬದುಕಿನ ಆಗುಹೋಗುಗಳು ಕೂಡ 'ಪೂರ್ವನಿರ್ಧಾರಿತವಾಗಿ' ನಡೆಯುತ್ತವೆ. ನಾವು ಎಲ್ಲಾದರೂ ಹೋಗುವುದು ಬರುವುದು ಕೂಡ ಪೂರ್ವ ನಿರ್ಧಾರಿತವಾಗಿರುತ್ತದೆ ಎಂದೆಲ್ಲಾ ಕೆಲವರು ಹೇಳುತ್ತಾರೆ. ಆದರೆ ಇವರು ಸ್ವಲ್ಪವಾದರೂ ವಿಚಾರ ಮಾಡಿದರೆ ವಾಸ್ತವ ಸ್ಥಿತಿ ಏನೆಂಬುದು ತಾನಾಗಿಯೇ ಗೊತ್ತಾಗುತ್ತದೆ. ಸಣ್ಣ ಮಕ್ಕಳೂ ಕೂಡ ಸುಲಭವಾಗಿ ಅರಿಯುವಂಥ ವೈಜ್ಞಾನಿಕ ಸತ್ಯವೆಂದರೆ, ಚಲನೆಯಲ್ಲಿರತಕ್ಕಂಥ ಜಡ ವಸ್ತುಗಳು ಬಾಹ್ಯ ವಸ್ತುಗಳ ಎಳೆತ–ಸೆಳೆತಗಳಿಗನುಗುಣವಾಗಿ ಸ್ಪಂದಿಸುತ್ತವೆ, ಜೀವಿಗಳಂತೆ ಅವುಗಳಿಗೆ ಮೆದುಳು ಇರುವುದಿಲ್ಲ, ಆದಕಾರಣ ಅವು ಮುಟ್ಟುವಂಥ ಗುರಿಗಳನ್ನು ವೈಜ್ಞಾನಿಕವಾಗಿ, ಪ್ರಕೃತಿಯ ನಿಯಮಗಳಿಗನುಗುಣವಾಗಿ ಮೊದಲೇ ಹೇಳಬಹುದು; ಆದರೆ ಜೀವಿಗಳು ಹಾಗಲ್ಲ, ಅವು ಯಾವಾಗ ಬೇಕಾದಾಗ ತಮ್ಮ ದಿಕ್ಕು–ದೆಸೆಗಳನ್ನು ಸ್ವಪ್ರೇರಣೆಯಿಂದ ಬದಲಿಸಿಕೊಳ್ಳುತ್ತವೆ; ಅವು ಇಷ್ಟೇ ಅವಧಿಯೊಳಗೆ ಖಚಿತವಾಗಿ ತಲುಪಬಲ್ಲವೆಂದು ಹೇಳಲಿಕ್ಕಾಗದು.

ಇದಕ್ಕೆ ಪರಿಹಾರವೆಂದರೆ ನಾವು ಯಾವಾಗಲೂ ನಮ್ಮ ಬುದ್ಧಿ–ಬಲವನ್ನು ಉಪಯೋಗಿಸಿಕೊಂಡು ಸೂಕ್ತವಾದ ದಿಕ್ಕು–ದೆಸೆಗಳನ್ನು ಕಂಡುಕೊಳ್ಳಬೇಕು, ಇರತಕ್ಕಂಥ ಅವಕಾಶಗಳನ್ನು ಸದ್ವಿನಿಯೋಗಮಾಡಿಕೊಂಡು ಸರಿಯಾದ ನಿಟ್ಟಿನಲ್ಲಿ ಕಾರ್ಯೋನ್ಮುಖರಾಗಬೇಕು, ಎಲ್ಲವೂ ದೈವಪ್ರೇರಿತವಾಗಿ ನಡೆಯುತ್ತದೆಂಬ ಅಂಧಶ್ರದ್ಧೆಯನ್ನು ತೊರೆದು, ಸೋಮಾರಿತನದ ಮುಸುಕನ್ನು ಹರಿದೊಗೆದು ಕ್ರಿಯಾಶೀಲರಾಗಬೇಕು.

**ಸೂರ್ಯಕಾಂತ ಸೊನ್ನದ,** ಗುಲಬರ್ಗಾ




**ಜ**ನಮಾನಸದಲ್ಲಿರುವ ಎಲ್ಲಾ ನಂಬಿಕೆಗಳು ಅಂಧಶ್ರದ್ಧೆಗಳಲ್ಲ, ಇವುಗಳ ಮಧ್ಯೆ ತೆಳುವಾದ ಎಳೆಯಿದೆ. ನಂಬಿಕೆಗಳನ್ನು ಅವಶ್ಯಕತೆಯಿದ್ದಲ್ಲಿ ಉಳಿಸಿಕೊಳ್ಳಲಿ. ಅಂಧಶ್ರದ್ಧೆಗಳು ಬದುಕನ್ನು ಸರ್ವನಾಶಗೊಳಿಸುತ್ತಲಿವೆ. ಅವುಗಳ ಕುರಿತು ಅವಲೋಕಿಸಿದಾಗ ಅಜ್ಞಾನ, ಧಾರ್ಮಿಕ ಅಂಧಶ್ರದ್ಧೆಗಳು, ದೇವರು – ದೆವ್ವಗಳ ಭಯ, ಬಾನಾಮತಿ, ಅವೈಜ್ಞಾನಿಕ ತಿಳಿವಳಿಕೆಗಳು, ಸಾಂಪ್ರದಾಯಿಕತೆ, ಗ್ರಾಮದೇವಿಯ ಶಾಪ, ರೋಗ, ಜ್ವರ ಸಂಬಂಧಿ, ವಾಸ್ತು, ಪ್ರವಾಸ, ಮದುವೆ, ಜಾತಕ, ಜನನ, ಮರಣ, ಮರಣದ ನಂತರ ಆಚರಿಸುವ ಧಾರ್ಮಿಕ ಆಚರಣೆಗಳು, ಪ್ರಯಾಣ, ಋತುಮತಿ ದಿನ, ಗರ್ಭವತಿ, ಹಲ್ಲಿಶಕುನ, ಹಸ್ತಸಾಮುದ್ರಿಕೆ, ಸೀನುವುದು, ಬೆಕ್ಕು ಅಡ್ಡಬರುವುದು, ಕಾಗೆ ಕೂಗುವುದು, ಹದ್ದಿನ ಕೂಗು, ಗ್ರಹಣಕಾಲ, ತಾರಾಬಲ, ಚಂದ್ರಬಲ, ಪಂಚಾಂಗ, ಗ್ರಹಗತಿ, ಶನಿಕಾಟ, ದೇವರ ಹರಕೆ, ಮುಡಿ ಕೊಡುವುದು, ಶಸ್ತ್ರ ಹಾಕಿಸಿಕೊಳ್ಳುವುದು, ಸಿಡಿ ಆಡುವುದು, ಬೆಂಕಿ ತುಳಿಯುವುದು, ಉರಿಯುವ ಕರ್ಪೂರ ಕೈಯಲ್ಲಿ ಹಿಡಿಯುವುದು, ಬಾಯಿಗೆ ಹಾಕಿಕೊಳ್ಳುವುದು, ಬೆತ್ತಲೆ ಸೇವೆ, ಮಡೆಸ್ನಾನ, ಅಡ್ಡಪಲ್ಲಕ್ಕಿಯಲ್ಲಿ ಜೀವಂತ ಸ್ವಾಮಿಗಳನ್ನು ಹೊರುವುದು. ಹೀಗೆ ಹಲವು ಆಚರಣೆಗಳು ಮೌಢ್ಯಗಳಾಗಿರುವವು ಇವುಗಳೇ ಶೋಷಣೆಗಳಾಗಿ ದುಷ್ಪರಿಣಾಮ ಬೀರುತ್ತವೆ.

ಪರಿಣಾಮವಾಗಿ, ಜನಸಾಮಾನ್ಯರನ್ನು ಅವೈಜ್ಞಾನಿಕ ಅನರ್ಥಗಳಿಗೆ ಈಡಾಗಿಸಿ ಅವರ ಜೀವನಮಟ್ಟ, ಜೀವನಶೈಲಿಯನ್ನೇ ಅಧೋಗತಿಗೆ ತಳ್ಳುತ್ತಿವೆ. ಜನರ ಶೋಷಣೆ, ಸುಲಿಗೆ ನಿರಂತರವಾಗಿ ನಡೆಯುತ್ತದೆ. ಇದಕ್ಕಾಗಿ ವ್ಯವಸ್ಥಿತವಾದ ಗುಂಪು ಗುಪ್ತಗಾಮಿನಿಯಾಗಿ ಸಮಾಜದ ಮುಖ್ಯ ವಾಹಿನಿಯಲ್ಲಿ ಪ್ರವಹಿಸುತ್ತಾ ಸದಾ ಕಾರ್ಯ ನಿರ್ವಹಿಸುತ್ತಿರುತ್ತದೆ. ಇವೆಲ್ಲ ಅವರವರ ನಂಬಿಕೆಗೆ ಬಿಟ್ಟ ವಿಚಾರವೆನ್ನುತ್ತಾರೆ ಸಂಪ್ರದಾಯವಾದಿಗಳು. ಇಂತಹವುಗಳನ್ನು ವಿರೋಧಿಸದಿದ್ದರೆ ಇಂದಿಗೂ ಸತಿಸಹಗಮನ, ಬೆತ್ತಲೆಸೇವೆ, ಮಲ ಹೊರುವಂಥ ಮೌಢ್ಯತೆಗಳು ಜೀವಂತವಾಗಿರುತ್ತಿದ್ದವು. ಇವುಗಳ ವಿರುದ್ಧ ಪ್ರತಿಭಟಿಸುವುದು ಪ್ರಗತಿಪರರ ಹೊಣೆಯಾಗಿದೆ. ಜನಸಾಮಾನ್ಯರಲ್ಲಿ ಈ ಬಗ್ಗೆ ಸೂಕ್ತ ತಿಳುವಳಿಕೆ ನೀಡಿ, ಮೌಢ್ಯತೆಯಿಂದ ಅವರನ್ನು ಹೊರತಂದು ಕಾಪಾಡಬೇಕಾಗಿದೆ.

ವಾಸ್ತವವಾಗಿ ವೈಜ್ಞಾನಿಕ ಜ್ಞಾನದ ಬೆಳಕಿನಲ್ಲಿ ಆಲೋಚಿಸಿದಾಗ, ಶೂನ್ಯದಿಂದ ಯಾವುದೇ ವಸ್ತು ಸೃಷ್ಟಿಯಾಗುವುದಿಲ್ಲವೆಂದು ದೃಢಪಟ್ಟಿರುವುದು. ಅಲ್ಲದೆ ವಾಸ್ತವವಾಗಿ ಯಾವುದೇ ಶಕ್ತಿಯಿಲ್ಲದೆ ಯಾವುದೇ ಚಲನವಲನ, ಕ್ರಿಯೆ – ಪ್ರಕ್ರಿಯೆಯಾಗುವುದಿಲ್ಲವೆಂಬ ಸತ್ಯ ತಿಳಿಸಬೇಕು. ಅದು ಎಲ್ಲರಿಗೂ ಮನವರಿಕೆಯಾಗಬೇಕು. ಅದಕ್ಕಾಗಿ,

- ಅಂಧಶ್ರದ್ಧೆ ನಿಷೇಧ ಕಾನೂನು ರಚಿಸಿ ಶೋಷಿಸುವವರನ್ನು ಗುರುತಿಸಿ, ಶಿಕ್ಷೆಯನ್ನು ವಿಧಿಸಬೇಕು.
- ವಿವಿಧ ಮಾಧ್ಯಮಗಳ ಮೂಲಕ ಸೂಕ್ತ ಅರಿವು ಮೂಡಿಸಬೇಕು.
- ಶಾಲಾ ಹಂತದಲ್ಲಿಯೇ ವೈಜ್ಞಾನಿಕ ಆಲೋಚನೆ, ವೈಚಾರಿಕತೆ ಬೆಳೆಸಬೇಕು.
- ಯಾವುದೇ ಅತಿಮಾನುಷ ಶಕ್ತಿಯಿಲ್ಲ. ಇದಕ್ಕಾಗಿ ಹೆದರಬೇಕಾದ ಅವಶ್ಯಕತೆ ಇಲ್ಲವೆಂದು ಬಿಂಬಿಸಬೇಕು. ಇವುಗಳನ್ನು ಉದಾಸೀನ ಮಾಡಬೇಕೆಂದು ತಿಳಿಸಬೇಕು.
- ಸಂಕಷ್ಟಕ್ಕೊಳಗಾದವರು ನೇರವಾಗಿ ಆರಕ್ಷಕ ಇಲಾಖೆಯನ್ನೋ, ವೈದ್ಯರನ್ನೋ ಕಾಣಬೇಕೆಂದು ತಿಳಿಸಬೇಕು.
- ಬೀದಿನಾಟಕ, ಜಾದು ಪ್ರದರ್ಶನ ಹಾಗೂ ಅದರ ಒಳಗಿರುವ ತಂತ್ರಗಾರಿಕೆಯನ್ನು ಬಿಡಿಸಿ ತೋರಿಸಬೇಕು.
- ಪರಸ್ಪರರಲ್ಲಿ ದ್ವೇಷಾಸೂಯೆ, ಮತ್ಸರ ಹೋಗಲಾಡಿಸಿ ಪ್ರೀತಿ–ವಿಶ್ವಾಸವೆಂಬ ಮಾನವೀಯತೆಯನ್ನು ಬೆಳೆಸಬೇಕು.

ಕರ್ನಾಟಕದಲ್ಲಿ ಮೌಢ್ಯತೆಯ ನಿಷೇಧ ಕಾನೂನು ರಚನೆಗೆ ವಿರೋಧ ವ್ಯಕ್ತಪಡಿಸುತ್ತಿರುವವರಲ್ಲಿ ಮೌಢ್ಯತೆಯ ಭಯವಿರುವುದನ್ನು ಸೂಚಿಸುತ್ತದೆ. ಕಾನೂನು ರಚಿಸಿದಾಕ್ಷಣ ಸಮಸ್ಯೆ ಬಗೆಹರಿಯುವುದಿಲ್ಲ. ಮಹಾರಾಷ್ಟ್ರದಲ್ಲಿ ನರೇಂದ್ರ ದಾಭೋಲ್ಕರ್ ಅವರು ಬಲಿಯಾಗಿದ್ದು ಸಾಕು. ಕಾನೂನು ರಚನೆಯಾಗಲಿ, ಆಗದಿರಲಿ ಜನರಲ್ಲಿ ಇಚ್ಛಾಶಕ್ತಿ, ವ್ಯವಸ್ಥೆ, ಸಾಮಾಜಿಕ ಸಂಘಟನೆಗಳು, ಶಾಲಾಕಾಲೇಜು, ಸಭೆ–ಸಮಾರಂಭಗಳನ್ನು ಬಳಸಿಕೊಂಡು ಎಲ್ಲರೂ ಒಟ್ಟಾಗಿ ಪ್ರಯತ್ನಿಸಿದಲ್ಲಿ ಅಂಧಶ್ರದ್ಧೆಯನ್ನು ನಿವಾರಿಸುವುದು ಸವಾಲಿನದೇನಲ್ಲ. ಜ್ಞಾನದ ಬೆಳಕಲ್ಲಿ ಅಜ್ಞಾನದ ಕೇಡನ್ನು ನೋಡಬೇಕಾಗಿದೆ.

**ವೆಂಕಟೇಶ ಕೆ. ಜನಾದ್ರಿ,** ಕಲಬುರ್ಗಿ




**ಸ್ಥೂ**ಲವಾಗಿ ಹೇಳುವುದಾದರೆ, ಸಂಪ್ರದಾಯದ ಸಂಕೋಲೆಯೊಳಗೆ ಸಿಲುಕಿ ಅಥವಾ ಪರಂಪರೆಯನ್ನು ಬಿಡಲಾಗದ ಭೀತಿಯಿಂದ ಯಾವುದಾದರೂ ವ್ಯಕ್ತಿಯಲ್ಲಿ, ಆಚರಣೆಯಲ್ಲಿ, ಗ್ರಂಥಗಳ ಹೇಳಿಕೆಗಳಲ್ಲಿ ಇಡುವ ಸಂಪೂರ್ಣ ನಂಬಿಕೆಯನ್ನು ಅಂಧಶ್ರದ್ಧೆ ಎನ್ನಬಹುದು. ಸೂರ್ಯಗ್ರಹಣ, ಚಂದ್ರಗ್ರಹಣಗಳು ಸಂಭವಿಸಿದಾಗ, ನೋಡಲೇಬಾರದು, ಶಾಂತಿ, ಹೋಮ, ದಾನ, ಸ್ನಾನ ಇತ್ಯಾದಿಗಳನ್ನು ಮಾಡಲೇಬೇಕು ಎಂದು ನಂಬಿ ಅಂತಹ ಆಚರಣೆಗಳನ್ನು ಭಯಭಕ್ತಿಗಳಿಂದ (ಭಕ್ತಿಗಿಂತ ಭಯವೇ ಹೆಚ್ಚು!) ನಡೆಸುವುದು, ಜೀವನದಲ್ಲಿ ಬರುವ ಕಷ್ಟನಷ್ಟಗಳಿಗೆ ಮನೆಯ 'ವಾಸ್ತು' ಸರಿಯಿಲ್ಲ ಎಂದು ಭಾವಿಸಿ 'ಶಾಸ್ತ್ರ ಕೇಳಿ' ನಂತರ ಮನೆಯ ಬಾಗಿಲನ್ನೋ, ಗೋಡೆಯನ್ನೋ ಒಡೆಸಿ ಹಾಕಿ ಮತ್ತೆ ಕಟ್ಟಿ (ಆ ಮೂಲಕ ಹಣ ನಷ್ಟ ಮಾಡಿಕೊಂಡು) ಒದ್ದಾಡುವುದು, ಇಂತಹವೆಲ್ಲ ಅಂಧಶ್ರದ್ಧೆಯ ಉದಾಹರಣೆಗಳೇ. ನಮ್ಮಲ್ಲಿ ನೂರಾರು ಬಗೆಯ ಅಂಧಶ್ರದ್ಧೆಗಳಿವೆ. ವಿಧವೆಯರ ಮೇಲೆ (ಅದರಲ್ಲೂ ಬ್ರಾಹ್ಮಣ ವಿಧವೆಯರ)

ಹೇರಿರುವ ಕಟ್ಟುಪಾಡುಗಳಂತೂ ಮೌಢ್ಯದ ಪರಮಾವಧಿ. ಸಾಮಾನ್ಯವಾಗಿ ಹೆಂಗಸರಿಗೆ ಸಂಬಂಧಿಸಿದಂತೆ, ಅಂಧಶ್ರದ್ಧೆ ಪ್ರೇರಿತ ನಿರ್ಬಂಧಗಳು ನೂರಾರು. ಅವರ ಉಡುಗೆ, ಅಲಂಕಾರ, ಗಂಡನ ಕ್ಷೇಮಕ್ಕಾಗಿ ಅವರು ಆಚರಿಸಬೇಕಾದ ವ್ರತ, ಉಪವಾಸ, ಅವರ ಮುಟ್ಟು, ಬಸಿರು, ಬಾಣಂತನಗಳಲ್ಲಿ ಸ್ನಾನ, ಆಹಾರದಿಂದ ಹಿಡಿದು ಪ್ರತಿಯೊಂದಕ್ಕೂ ಸಾಂಪ್ರದಾಯಿಕ ಕಟ್ಟುನಿಟ್ಟುಗಳು ಇವೆ. ಇವುಗಳಿಂದಾಗಿ ಮಹಿಳೆಯರಲ್ಲಿ ಆತ್ಮವಿಶ್ವಾಸವೇ ಉಡುಗಿಹೋಗಿದೆ. ತಾರ್ಕಿಕವಾಗಿ ಚಿಂತಿಸುವುದಂತೂ ಸಾಧ್ಯವೇ ಇಲ್ಲ ಎಂಬಂತಾಗಿದೆ. ಹೀಗಾಗಿ ನಾಡಿನ ಶೇ. ೫೦% ಭಾಗ ಮಾನವ ಸಂಪನ್ಮೂಲ ವ್ಯರ್ಥವಾಗುತ್ತಿದೆ. ತಲಾಖ್, ಬಾಲ್ಯವಿವಾಹ, ದೇವದಾಸಿ ಪದ್ಧತಿ, ಬೆತ್ತಲೆ ಸೇವೆ, ನರಬಲಿ, ಗಂಡು ಮಗುವೇ ಬೇಕೆಂಬ ಹಂಬಲ ಇವೆಲ್ಲವೂ ಅಂಧಶ್ರದ್ಧೆಯ ಬೇರೆ ಬೇರೆ ರೂಪಗಳೇ.

ಈ ಎಲ್ಲ ಅಂಧಶ್ರದ್ಧೆಗಳನ್ನು, ಯಾವ ಪೂರ್ವಗ್ರಹವೂ ಇಲ್ಲದೆ ಆಲೋಚಿಸಿದಾಗ, **ಅಜ್ಞಾನ, ಬಡತನ, ಅತ್ಯಾಸೆ, ಸ್ಥಗಿತ ಚಿಂತನೆ** ಇವೇ ಅಂಧಶ್ರದ್ಧೆಗೆ ಮೂಲ ಕಾರಣಗಳು ಎನಿಸುತ್ತವೆ. ಒಂದು ವಿಷಯದ ಬಗೆಗಿನ ಅಜ್ಞಾನದಿಂದಲೂ, ಹೊಸ ತಿಳುವಳಿಕೆಗೆ ತೆರೆದುಕೊಳ್ಳಲು ಒಪ್ಪದ ಮಾನಸಿಕ ಅಥವಾ ಬೌದ್ಧಿಕ ಆಲಸ್ಯದಿಂದಲೂ, ಪರಂಪರೆಯಿಂದ ಬಂದದ್ದು ಸಾಂಪ್ರದಾಯಿಕವಾದದ್ದು, ಆದ್ದರಿಂದ ಶ್ರೇಷ್ಠ ಎಂದು ಭಾವಿಸಿರುವ ಗ್ರಂಥಗಳಲ್ಲಿ ಹೇಳಲಾಗಿದೆ ಎಂಬ ಬಲವಾದ ನಂಬಿಕೆಯಿಂದಲೂ ಅಂಧಶ್ರದ್ಧೆ ಬಲವಾಗಿ ಬೇರೂರಿದೆ. ಮೌಢ್ಯ ಮುಗಿಲೆತ್ತರಕ್ಕೆ ಬೆಳೆದಿದೆ. ಒಂದೇ ಉದಾಹರಣೆ ಎಂದರೆ ಸುಂದರವಾದ ನೈಸರ್ಗಿಕ ವಿದ್ಯಮಾನವಾದ ಗ್ರಹಣವನ್ನು ವೈಜ್ಞಾನಿಕವಾಗಿ ಅರ್ಥಮಾಡಿಕೊಳ್ಳಲು ಇಷ್ಟಪಡದೆ ವಿದ್ಯಾವಂತರೆನಿಸಿಕೊಂಡವರೂ ನಡೆದುಕೊಳ್ಳುವುದನ್ನು ನೋಡಿದಾಗ ನಗಬೇಕೋ ಮರುಗಬೇಕೋ ತಿಳಿಯದು.

ಮನುಷ್ಯನ ಅತ್ಯಾಸೆಯ ಈಡೇರಿಕೆಗೆ ದಾರಿ ಮುಖ್ಯವಲ್ಲ. ಮಾಟ, ಮಂತ್ರ, ಹೋಮ, ಹವನ, ದೇವರಿಗೆ ಬೆಳ್ಳಿ, ಚಿನ್ನ, ವಜ್ರದ ಆಭರಣಗಳ 'ಸೇವೆ' ಎಲ್ಲಕ್ಕೂ ಸಿದ್ಧ ಈ ಜನ. ನೀರಲ್ಲಿ ಮೀನು ಎದ್ದೆದ್ದು ಕುಣಿಯುವಾಗ ಬಲೆ ಬೀಸದೆ ಬಿಟ್ಟಾನೆಯೇ ಬೆಸ್ತ? ಆಗ ದೈವೋಪಾಸಕರು, ದೈವಾಂಶಸಂಭೂತರು, ಭಗವಂತನ ಅವತಾರವೇ ಆದ ಬಾಬಾಗಳು ಆವಿರ್ಭವಿಸುತ್ತಾರೆ. ಆಶಾಪಿಪಾಸುಗಳಿಗೆ, ಅತ್ಯಾಸೆ ಪೂರೈಕೆಯ ಆಮಿಷ ಒಡ್ಡಿ, ತಮ್ಮ ಜೀವನದ ಆಸೆಗಳನ್ನು ಕೂತಲ್ಲೇ ಪೂರೈಸಿಕೊಳ್ಳುತ್ತಾರೆ; ಮೈ, ಕೈ ನೋಯಿಸಿಕೊಳ್ಳದೆ ತೆರಿಗೆಯನ್ನೂ ಕೊಡದೆ, ತಮ್ಮ ಬ್ಯಾಂಕ್ ಬ್ಯಾಲೆನ್ಸ್ ಏರಿಸಿಕೊಳ್ಳುತ್ತಾರೆ, ಈ 'ಭಗವದವತಾರಿಗಳು'!

ಜನಸಾಮಾನ್ಯರ ಹಣ, ಕಾಲ, ಅದಕ್ಕಿಂತ ಹೆಚ್ಚಾಗಿ ಅವರ ಚಿಂತನಾಶಕ್ತಿಯ ಶೋಷಣೆ! ಬಡತನ, ಅಜ್ಞಾನಗಳೆಂಬ ಅರಿವಳಿಕೆಯ ಮತ್ತಿನಲ್ಲಿರುವ ಬವಣೆ ಪೀಡಿತರ ಶೋಷಣೆ!! ಆ ಜನ ಅನಕ್ಷರಸ್ಥರಾಗಿರಬಹುದು, ಸುಶಿಕ್ಷಿತರೂ ಆಗಿರಬಹುದು, ಬಡವರಾಗಿರಬಹುದು, ಶ್ರೀಮಂತರೇ ಇರಬಹುದು, ಅವರವರಿಗೆ ತಕ್ಕುದಾದ ರೂಪದಲ್ಲಿ ಶೋಷಣೆ!

ಈ ಎಲ್ಲ ಬಗೆಯ ಶೋಷಣೆಯ ಮೂಲವಾದ ಅಂಧಶ್ರದ್ಧೆಯ ನಿರ್ಮೂಲನಕ್ಕೆ, ಬಡತನ, ಅಜ್ಞಾನಗಳ ನಿವಾರಣೆ ಮೊದಲು ಆಗಬೇಕು. ಆತಂಕವಿಲ್ಲದೆ ಪ್ರತಿಯೊಬ್ಬರಿಗೂ ದುಡಿತಕ್ಕೆ ತಕ್ಕಂತೆ ರೋಟಿ, ಕಪಡಾ, ಮಕಾನ್ 'ಮಿತ ಪ್ರಮಾಣದಲ್ಲಾದರೂ ದೊರಕಬೇಕು, ಈಗಿರುವಂತೆ' 'ಯಾರದೋ ಕೈ ಕೆಸರು, ಮತ್ಯಾರದೋ ಬಾಯ್‌ಮೊಸರು' ಆಗಕೂಡದು. ಇದಕ್ಕೆ ಬೇಕಾದ್ದು ಬಹುಮುಖೀ ಪ್ರಯತ್ನ. ತನ್ನ ಬಡತನವನ್ನು ('ಪೂರ್ವ ಜನ್ಮದ ಕರ್ಮ' ಎಂದುಕೊಳ್ಳದೆ) ನಿವಾರಿಸಿಕೊಳ್ಳಬೇಕೆಂದು ಪ್ರತಿವ್ಯಕ್ತಿಯೂ ಪ್ರಾಮಾಣಿಕವಾಗಿ ಪ್ರಯತ್ನಿಸಬೇಕು. ಆಡಳಿತಾರೂಢರು ಇದಕ್ಕೆ ಇಂಬು ಕೊಡುವಂತಹ ಯೋಜನೆಗಳಿಂದ ಜನರ ಬವಣೆ ನಿವಾರಿಸಬೇಕು. ಯೋಜನೆಗಳು ಕೇವಲ ಕಾಗದದ ಮೇಲಿದ್ದರೆ ಸಾಲದು, ತಳಮಟ್ಟದಿಂದ ನಿರ್ದಿಷ್ಟ ಕಾಲಮಿತಿಯೊಳಗೆ ಕಾರ್ಯಗತವಾಗಬೇಕು.

ಎರಡನೆಯದಾಗಿ, ಅಜ್ಞಾನದ ನಿರ್ಮೂಲನೆ. ಇದರ ಬಗ್ಗೆ ವೇದಿಕೆಯ ಮೇಲಿಂದ ಸುಶಿಕ್ಷಿತರಿಗೆ ಭಾಷಣ ಮಾಡಿದರೆ ಸಾಲದು. ಪ್ರಯೋಜನವೂ ಇಲ್ಲ. ಜನಸಾಮಾನ್ಯರಲ್ಲಿ ಬೆರೆತು, ಅವರ ನಂಬಿಕೆಗಳಿಗೆ ನೋವಾಗದಂತೆ ಮಾಡಬೇಕಾದ ಕಾರ್ಯ. ಇದು ಅತ್ಯಂತ ಕಷ್ಟದ, ಬಹು ದೀರ್ಘಾವಧಿಯ ಹಾಗೂ ಅಪಾರ ತಾಳ್ಮೆ ಬೇಡುವ, ಪ್ರಾಮಾಣಿಕತೆ, ಬದ್ಧತೆಗಳೇ ಅಡಿಗಲ್ಲಾಗಿರಬೇಕಾದ ಕಾರ್ಯ. ಹಾಗಾಗಿ ವ್ಯಕ್ತಿಗಳು ತಮ್ಮ ತಮ್ಮ ಸೀಮಿತ ವಲಯಗಳಲ್ಲಿ, ಸಂಘಸಂಸ್ಥೆಗಳು ತಮ್ಮತಮ್ಮ ಕ್ಷೇತ್ರದ ವ್ಯಾಪ್ತಿಯಲ್ಲಿ ಈ ಕಾರ್ಯದಲ್ಲಿ ತೊಡಗಿಸಿಕೊಳ್ಳಬೇಕು.

ಮೂರನೆಯದಾಗಿ, ಅಂಧಶ್ರದ್ಧೆಯ ನಿರ್ಮೂಲನೆಗೆ ಸಾಮಾಜಿಕ ಶೋಷಣೆಯನ್ನೂ ಜೀವದ, ಜೀವನದ ಹಾನಿ ಉಂಟುಮಾಡುವ ಹಲವಾರು ಆಚರಣೆಗಳನ್ನೂ (ಮಾಟ, ಮಂತ್ರ, ನರಬಲಿ, ತಲಾಖ್ ಇತ್ಯಾದಿ) ಸರ್ಕಾರ ನಿಷೇಧಿಸಬೇಕು. ಈ ನಿಷೇಧಾಜ್ಞೆ ನಿಷ್ಪಕ್ಷಪಾತವಾಗಿ ಜಾರಿಯಾಗಲೂಬೇಕು.

**ಬಿ. ಜಿ. ಕುಸುಮಾ,** ಬೆಂಗಳೂರು

## ಅಭಿನಂದನೆ




ನವಕರ್ನಾಟಕ ಪ್ರಕಾಶನವು ಪ್ರಕಟಿಸಿದ ಕಾದಂಬರಿ 'ಸಂಕಲ್ಪ'ಕ್ಕೆ (ಲೇಖಕ : ಪ್ರೀತೀಶ) ಬಸವರಾಜ ಕಟ್ಟೀಮನಿ ಪ್ರತಿಷ್ಠಾನದವರು ನೀಡುವ 'ಯುವ ಸಾಹಿತ್ಯ ಪುರಸ್ಕಾರ'ದ ಜೊತೆಗೆ ರೂ. ೧೦,೦೦೦ ನಗದು ಕೂಡ ಲೇಖಕರಿಗೆ ಲಭಿಸಿದೆ. ಶ್ರೀ ಪ್ರೀತೀಶ ಅವರಿಗೆ ನವಕರ್ನಾಟಕ–ಹೊಸತು ಬಳಗದ ಹಾರ್ದಿಕ ಅಭಿನಂದನೆಗಳು.

सिंडआरोग्य
# SyndArogya

**(Unique Family Floater Health Insurance Policy)**

**in association with United India Insurance Co. Ltd.**


युनाइटेड इंडिया इंश्यूरेन्स कं. लिमिटेड
UNITED INDIA INSURANCE CO. LTD.

## Tax Benefit u/s 80 D




सिंडआरोग्य SyndArogya

| प्रीमियम तालिका (12.36% सेवा-कर सहित) Premium Table (incl. of service tax @ 12.36%) | | |
|---|---|---|
| बीमाकृत राशि Sum Assured | योजना (ए) प्रीमियम रु. मे Plan (A) Premium in ₹ | योजना (बी) प्रीमियम रु. मे Plan (B) Premium in ₹ |
| ₹ 50,000 | 956 | 1,597 |
| ₹ 1,00,000 | 1,848 | 3,085 |
| ₹ 1,50,000 | 2,709 | 4,519 |
| ₹ 2,00,000 | 3,488 | 5,815 |
| ₹ 2,50,000 | 4,181 | 6,967 |
| ₹ 3,00,000 | 4,875 | 8,120 |
| ₹ 3,50,000 | 5,484 | 9,131 |
| ₹ 4,00,000 | 6,094 | 10,143 |
| ₹ 4,50,000 | 6,706 | 11,156 |
| ₹ 5,00,000 | 7,316 | 12,167 |

Syndicate Bank is a Licensed Agent of United India Insurance Co. Ltd.
Insurance is a subject matter of Solicitation
The participation by the Bank's customers in insurance product is purely on voluntary basis.




- **Mediclaim - cum - Personal Accident Policy with family floater advantage.***
- **Mediclaim Cover** Minimum ₹50,000/-, Maximum up to ₹5.00 lacs.
- **Plan A** – Family size 1+3 (Account holder + Spouse + Two Dependent Children)
- **Plan B** – Family size 1+5, (Dependent Parents are also covered)
- **No medical checkup**, Only self declaration of health required.
- **All account holders with family members**, from 3 months to 65 years of age (entry age) eligible for coverage.
- **Policy can be renewed** up to 80 years of age, if renewed without break
- **Medical Check-up reimbursement** available up to 1% of Average Sum Insured can be availed after 3 Claims Free Years.
- **Personal Accident Insurance Claim**: 100% of sum assured for self, 50% for Spouse, 20% for children above 5 years & 10% for children below 5 years. No Personal Accident benefit for dependent parents
- **Deduction** up to ₹15,000 under Section 80 (D) of the Income Tax Act, 1961
- **Very Competitive Annual premium**

*Conditions apply.









# ಚಿತ್ರಕಲಾ ಪ್ರಪಂಚದಲ್ಲಿ ಸಾಧನೆ ಮಾಡುತ್ತಿರುವ

# ಕಾಸಿಂ ಕನಸಾವಿ



ಇಳಕಲ್ಲನ ಕಾಸಿಂ ಕನಸಾವಿ ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲ್ಲೂಕಿನ ಕರಡಿ ಸರ್ಕಾರಿ ಪ್ರೌಢಶಾಲೆಯಲ್ಲಿ ಚಿತ್ರಕಲಾ ಶಿಕ್ಷಕರು. ಅಬ್‌ಸ್ಟ್ರ್ಯಾಕ್ಟ್, ಲ್ಯಾಂಡ್‌ಸ್ಕೇಪ್ ಮತ್ತು ಗ್ರಾಮೀಣ ಬದುಕಿನ ಚಿತ್ರ ಬಿಡಿಸುವಲ್ಲಿ ನಿಷ್ಣಾತರು.

ಮೈಸೂರು ದಸರಾ, ಚಾಲುಕ್ಯ ಉತ್ಸವ, ಆಳ್ವಾಸ್ ನುಡಿಸಿರಿ – ಚಿತ್ರಸಿರಿ, ಅಕಾಡೆಮಿ ಸೇರಿದಂತೆ ದೆಹಲಿ, ನಾಗಪುರ, ಉದಯಪುರ, ವಿಶ್ವ ಕನ್ನಡ ಕಲಾಮೇಳದಲ್ಲಿ ಇವರ ಕೃತಿಗಳ ಪ್ರದರ್ಶನ ವಾಗಿವೆ. ಶಿಕ್ಷಕರ ರಾಜ್ಯ ಮಟ್ಟದ ಪ್ರಶಸ್ತಿ, ದಸರಾ (೧೯೯೬) ಬಿಪಿಎಲ್ ಪ್ರದರ್ಶನ (೧೯೯೬) ಪ್ರಶಸ್ತಿಗಳನ್ನು ಪಡೆದ ಇವರ ಅಪರೂಪದ ಚಿತ್ರಗಳು ಕೆನಡಾ, ಚೆನ್ನೈ, ಗುಜರಾತ್, ದೆಹಲಿ, ಸೂರತ್, ಧಾರವಾಡ, ಹೈದ್ರಾಬಾದ್ ಮುಂತಾದ ಕಡೆ ಸಂಗ್ರಹವಾಗಿವೆ.



ಇತ್ತೀಚಿಗಷ್ಟೆ 'ಕಾಸಿಂ ಆರ್ಟ್ ಗ್ಯಾಲರಿ' ಸ್ಥಾಪಿಸಿ ಈ ಭಾಗದ ಕಲಾವಿದರ ಚಿತ್ರ ರಚನೆಗೆ ಇಂಬು ನೀಡುತ್ತಿದ್ದಾರೆ. ವೃತ್ತಿಯನ್ನು ಸಮರ್ಥವಾಗಿ ನಿರ್ವಹಿಸುತ್ತಾ ಮಕ್ಕಳಲ್ಲಿ ಚಿತ್ರರಚನೆಯ ಅಂಕುರಕ್ಕೆ ಕಾರಣರಾಗಿ ಅನೇಕ ವಿದ್ಯಾರ್ಥಿ ಪ್ರತಿಭಾ ಪ್ರಕಾಶನಕ್ಕೆ ದಾರಿಯಾಗಿದ್ದಾರೆ. 'ಬಯಲು' ಸಂಘಟನೆಯ ಮೂಲಕ ವಿಶಿಷ್ಟ ಕಾರ್ಯಕ್ರಮ ರೂಪಿಸಿ ಚಿತ್ರರಸಿಕರ ಮನಸ್ಸು ತಣಿಸುತ್ತಿದ್ದಾರೆ.





# "ಪ್ರೀತಿ ಮತ್ತು ನಿರ್ಭೀತಿಯು ನನ್ನ ಬರಹದ ಉಸಿರು" – ಪ್ರತಿಭಾ ರೇ




೨೦೧೩ರ ನವೆಂಬರ್ ೯–೧೦ರಂದು ಕರ್ನಾಟಕ ಲೇಖಕಿಯರ ಸಂಘವು ಬೆಂಗಳೂರಿನಲ್ಲಿ ತನ್ನ ಏಳನೆಯ ಸಮ್ಮೇಳನವನ್ನು ವ್ಯವಸ್ಥೆಗೊಳಿಸಿತ್ತು. ಈ ಸಮ್ಮೇಳನವನ್ನು ಉದ್ಘಾಟಿಸಲು ಜ್ಞಾನಪೀಠ ಪ್ರಶಸ್ತಿ ಪಡೆದ ಒರಿಯಾದ ಪ್ರಥಮ ಲೇಖಕಿ ಶ್ರೀಮತಿ ಪ್ರತಿಭಾ ರೇಯವರು ಆಗಮಿಸಿದ್ದರು. ಈ ವಿಷಯ ಮುಂಚಿತವಾಗಿ ತಿಳಿದಿದ್ದರಿಂದ ಅವರನ್ನು ಹೊಸತು ಪತ್ರಿಕೆಗೆ ಸಂದರ್ಶಿಸಲೆಂದು ಬೆಂಗಳೂರಿನ ಅವರ ಮಗನ ಮನೆಯಲ್ಲಿ ಭೇಟಿಯಾದೆವು. ಒರಿಯಾದ ಈ ಪ್ರಖ್ಯಾತ ಲೇಖಕಿಯು ತಮ್ಮ ಬರವಣಿಗೆಯ ಕಾರಣಕ್ಕಾಗಿ ಮಾತ್ರವಲ್ಲದೆ, ತಮ್ಮ ನೇರ ಹಾಗೂ ನಿಷ್ಠುರ ಮಾತುಗಳಿಗಾಗಿ ಒರಿಸ್ಸಾದಲ್ಲಿ ಅತ್ಯಂತ ವಿವಾದಗ್ರಸ್ತರಾಗಿ ಮನೆಮಾತಾದವರು. ಇವರ ಸಾಹಿತ್ಯದ ವಿಶೇಷ ಪರಿಚಯ ನಮಗಿಲ್ಲದ್ದರಿಂದ ಸಂದರ್ಶನಕ್ಕೆ ಮುಂಚೆ ಅವರ 'ಉಲ್ಲಂಘನ' ಸಣ್ಣ ಕಥೆಗಳ ಸಂಗ್ರಹ ಮತ್ತು ಯಜ್ಞಸೇನಿ ಕಾದಂಬರಿಯನ್ನು ಓದಿಕೊಂಡು ಅವರನ್ನು ನಡೆಸಿದ ಸಂದರ್ಶನ ಇಲ್ಲಿದೆ :

**ಹೊಸತು :** ನಮಸ್ತೆ. ನಮ್ಮ ಪತ್ರಿಕೆಯ ವಿಶೇಷ ಸಂಚಿಕೆಗೆಂದು ನಿಮ್ಮನ್ನು ಸಂದರ್ಶಿಸಲೆಂದು ಬಂದಿದ್ದೇವೆ.

**ಪ್ರತಿಭಾ :** ನಮಷ್ಕಾರ್.

**ಹೊ. :** ನಿಮ್ಮ ವ್ಯಕ್ತಿತ್ವವನ್ನು ರೂಪಿಸಿದ ನಿಮ್ಮ ಬಾಲ್ಯವನ್ನು ಕುರಿತು ಹೇಳುವಿರಾ ?

**ಪ್ರ. :** ನಮ್ಮ ತಂದೆ ಗಾಂಧಿವಾದಿ. ಅವರು ಕೈತುಂಬಾ ಸಂಬಳ ತರುತ್ತಿದ್ದ ಸರ್ಕಾರಿ ಕೆಲಸವನ್ನು ಬಿಟ್ಟು ಶಾಲೆಯನ್ನು ಆರಂಭಿಸಿದರು. ಅವರು ತುಂಬ ವಿಶಾಲ ಮನಸ್ಸಿನವರಾಗಿದ್ದರು. ದೇವರು ಒಬ್ಬನೇ ಎಂದು ನಂಬಿದ್ದರು. ನನ್ನ ಹಳ್ಳಿಯಲ್ಲಿ ನಮ್ಮ ಮನೆ ಮುಸ್ಲಿಂ ಬಸ್ತಿಯ ನಡುವೆಯೇ ಇತ್ತು. ಎಲ್ಲ ಜಾತಿಯ ಜನರೂ ನಮ್ಮ ಮನೆಗೆ ಬರುತ್ತಿದ್ದರು. ನಮ್ಮ ಕುಟುಂಬ ಆದರ್ಶವಾಗಿತ್ತು. ನಾನು ಮದುವೆಯಾಗಿ ಸೇರಿದ ಮನೆ ತುಂಬ ಅನುಕೂಲವಾದುದಾಗಿತ್ತಾದರೂ ಸಂಪ್ರದಾಯಶರಣವಾಗಿತ್ತು. ಆದರೆ ನಾನು ನನ್ನದೇ ಮನೆ ಆರಂಭಿಸಿದಾಗ, ಎಲ್ಲ ಜಾತಿಯ, ಧರ್ಮದ ಜನರಿಗೂ ನನ್ನ ಮನೆಯಲ್ಲಿ ಪ್ರವೇಶವಿತ್ತು. ನನ್ನ ಎಲ್ಲ ಬರವಣಿಗೆಗೂ ನನ್ನ ತಂದೆಯದೇ ಪ್ರೋತ್ಸಾಹ.

ನಾನು ಬರವಣಿಗೆಯನ್ನು ಆರಂಭಿಸಿದಾಗ ನನಗಿನ್ನೂ ಒಂಬತ್ತು ವರ್ಷ ವಯಸ್ಸು. ಆಗಿನ್ನೂ ಶಾಲೆಯಲ್ಲಿ ಓದುತ್ತಿದ್ದೆ. ಭಾವುಕವಾಗಿರುವ ವಯಸ್ಸು. ಪ್ರಕೃತಿಯನ್ನು ಕುರಿತು ಏನೋ ಪದ್ಯ ಬರೆಯುತ್ತಿದ್ದೆ. ನನ್ನ ತಂದೆ ಮುಖ್ಯೋಪಾಧ್ಯಾಯರಾಗಿದ್ದ ಬಾಲಿಕುಡ ಪ್ರೌಢಶಾಲೆಯಲ್ಲೇ ನನ್ನ ವಿದ್ಯಾಭ್ಯಾಸ ನಡೆಯಿತು.

**ಹೊ. :** ನೀವು ಪತ್ರಿಕೆಯಲ್ಲಿ ಬರೆದ "ಧರ್ಮದ ಬಣ್ಣ ಕಪ್ಪು" ಎಂಬ ಲೇಖನವು ವಿವಾದವನ್ನು ಹುಟ್ಟಿಹಾಕಿತ್ತೆಂದು ಸುದ್ದಿಯಾಗಿತ್ತಲ್ಲ, ಆ ಪ್ರಕರಣ ಕುರಿತು ತಿಳಿಸುವಿರಾ ?

ಸಂದರ್ಶನ

**ಡಾ|| ಜಿ. ರಾಮಕೃಷ್ಣ**

**ಡಾ|| ಎನ್. ಗಾಯತ್ರಿ**

ಲೇಖನ

**ಎನ್. ಗಾಯತ್ರಿ**

**ಪ್ರ.** : ಒಮ್ಮೆ, ನಾನು ಪುರಿ ದೇವಸ್ಥಾನಕ್ಕೆ ಹೋಗಿದ್ದಾಗ ನನಗೊಂದು ಕೆಟ್ಟ ಅನುಭವ ಆಯಿತು. ನನ್ನೊಬ್ಬ ಸ್ನೇಹಿತೆ, ಮಹಾರಾಷ್ಟ್ರದವಳು, ಕಾಲೇಜ್ ಪ್ರೊಫೆಸರ್. ಪುರಿ ಜಗನ್ನಾಥ ದೇವಾಲಯ ನೋಡಲು ಬಂದಿದ್ದಳು. ಅವಳು ನೋಡೋಕೆ ಎತ್ತರಕ್ಕೆ, ಬೆಳ್ಳಗೆ ಇದ್ದಳು. ತಲೆಗೆ ಮೆಹಂದಿ ಬಣ್ಣದ ಕೂದಲು, ಬಾಬ್ ಕಟ್. ಸೀರೆಯುಟ್ಟು, ಹಣೆಗೆ ಬಿಂದಿ, ಕೊರಳಲ್ಲಿ ಮಂಗಳಸೂತ್ರ, ತುಂಬ ಆಧುನಿಕವಾಗಿ ಕಾಣಿಸುತ್ತಿದ್ದಳು. ಅಲ್ಲಿದ್ದ ಕೆಲವು ಪಂಡರು ಬಂದು ನಮ್ಮನ್ನು ಹಣ ಕೊಡಿ, ಎಂದು ಪೀಡಿಸಲು ಆರಂಭಿಸಿದರು. ಅವರಿಗೇಕೆ ಹಣ ಕೊಡಬೇಕೆಂದು ನಾನೇ ದರ್ಶನಕ್ಕೆಂದು ಟಿಕೇಟ್ ಕೊಂಡು ತಂದು ನನ್ನ ಮಗಳ ಜೊತೆ ಅವಳನ್ನು ದೇವರ ದರ್ಶನ ಮಾಡಲು ಒಳಕ್ಕೆ ಕಳುಹಿಸಿದೆ. ನನ್ನದೇ ಏನೋ ಕಾರಣಕ್ಕೆ ನಾನು ಒಳಕ್ಕೆ ಹೋಗದೆ, ಹೊರಗೆ ನನ್ನ ಮಗನ ಜೊತೆಯಲ್ಲಿ ನಿಂತಿದ್ದೆ. ಕೆಲವೇ ನಿಮಿಷಗಳಲ್ಲಿ, ಒಳಕ್ಕೆ ಹೋದ ಅವರು ದೇವರ ದರ್ಶನ ಮಾಡದೆ ಬರಿಗೈಯಲ್ಲಿ ಹಿಂತಿರುಗಿ ಬಂದರು. ಬರುವಾಗ ನನ್ನ ಮಗಳು ಅಳುತ್ತಿದ್ದಳು. ನನ್ನ ಗೆಳತಿ ತುಂಬಾ ವ್ಯಾಕುಲಳಾಗಿದ್ದಳು. ಕಾರಣ ಕೇಳಿದರೆ, "ನನಗೆ ಈ ದೇವಾಲಯ ನೋಡುವುದು ಬೇಡ. ಹೋಗೋಣ ನಡಿ. ಇನ್ನೆಂದೂ ಇಲ್ಲಿಗೆ ಬರುವುದಿಲ್ಲ" ಎಂದಳು. ನನಗೋ ಕಾರಣ ತಿಳಿಯದೆ, ಅಳುತ್ತಿದ್ದ ಮಗಳತ್ತ ನೋಡಿದಾಗ ಅವಳು ವಿಷಯ ತಿಳಿಸಿದಳು : ಅವರು ಒಳಗೆ ಹೋದಾಗ, ಅವರನ್ನು ಹಣ ಕೊಡಿರೆಂದು ಆ ಪಂಡರು ಪೀಡಿಸಲು ಪ್ರಾರಂಭಿಸಿದರು. ಹಣ ಕೊಡದಾಗ ನನ್ನ ಗೆಳತಿಯನ್ನು ನೂಕಿದರು. ನನ್ನ ಮಗಳನ್ನು ಎಳೆದಾಡಿದರು. ಅವರ ಈ ವರ್ತನೆಯಿಂದ ಬೇಸರಗೊಂಡ ಅವರಿಬ್ಬರೂ ದೇವರನ್ನು ನೋಡದೆ ಹಿಂತಿರುಗಿ ಬಂದರು. ತಕ್ಷಣ ನನಗೆ ಕೋಪ ಬಂತು. ಪಂಡರು ಅವರನ್ನು ಹಿಡಿದು ಎಳೆದಾಡುತ್ತಿದ್ದಾಗ, ಅಲ್ಲಿ ನಿಂತಿದ್ದ ಪೊಲೀಸರು ಸುಮ್ಮನೆ ನೋಡುತ್ತಾ ನಿಂತಿದ್ದರೆಂಬ ವಿಷಯ ತಿಳಿದೊಡನೆ, ಅವರ ಬಳಿಗೆ ಹೋಗಿ ವಾದಿಸ ತೊಡಗಿದೆ. "ಇವರ ಈ ವರ್ತನೆಯಿಂದ ನಮ್ಮ ರಾಜ್ಯದ ಘನತೆಗೆ ಮಸಿ ಬಳಿದಂತೆ. ಹೊರಗಿನಿಂದ ಬಂದವರು ನಮ್ಮ ಬಗ್ಗೆ ಏನೆಂದುಕೊಳ್ಳಬಹುದು. ಅವರ ಅನಾಗರಿಕ ವರ್ತನೆಯನ್ನು ನೋಡುತ್ತಾ ನೀವೇಕೆ ಸುಮ್ಮನಿದ್ದೀರಿ ?" ಎಂದು ದಬಾಯಿಸಿದೆ. "ಅವಳು ಹಿಂದೂ ಅಲ್ಲ, ದೇವಾಲಯಕ್ಕೆ ಬರಬಾರದಿತ್ತು" ಎಂದು ವಿವರಣೆ ಕೊಟ್ಟರು. "ನಿಮಗೆ ಅವಳು ಹಿಂದುವಲ್ಲವೆಂದು ಹೇಳಿದವರು ಯಾರು ? ಅವಳು ಹಿಂದುವೆ" ಎಂದು ನಾನು ಹೇಳಿದಾಗ, "ಅದನ್ನು ಹೇಳುವುದಕ್ಕೆ ನೀನ್ಯಾರು ?" ಎಂದು ಮರು ಪ್ರಶ್ನಿಸಿದರು. ಆಗ "ನಾನು ಪ್ರತಿಭಾ ರೇ, ಕಾಲೇಜ್ ಪ್ರೊಫೆಸರ್, ಗೆಜೆಟೆಡ್ ಆಫೀಸರ್. ಅವಳು ಹಿಂದು, ಎಂದು ನಾನು ಸರ್ಟಿಫೈ ಮಾಡುವೆ" ಎಂದು ಹೇಳಿದ ತಕ್ಷಣವೇ ಅವರಿಗೆ ಅಚ್ಚರಿ ಕಾದಿತ್ತು. ತಕ್ಷಣವೇ, "ಓಹೋ, ಪುರಿ ಶಂಕರಾಚಾರ್ಯರ ವಿರುದ್ಧ ಲೇಖನ ಬರೆದವಳು ನೀನೆಯೋ !" ಎಂದು ಕೇಳಿದರು. ಕೂಡಲೇ ಈ ಸುದ್ದಿ ತಕ್ಷಣ ಹಬ್ಬಿತು. ಮುಕ್ತಿ ಮಂಟಪದಲ್ಲಿ ನಿಂತಿದ್ದ ಸುಮಾರು ಹತ್ತು, ಹದಿನೈದು ಪಂಡರು ಕೂಡಲೇ ಒಟ್ಟಾಗಿ ಸೇರಿ, ಬಂದು ನಮ್ಮನ್ನು ಹೊರಕ್ಕೆ ದೂಡಿದರು. ಎಲ್ಲ ರೀತಿಯ ಅವಾಚ್ಯ ಶಬ್ದಗಳಿಂದ ನಮ್ಮನ್ನು ಬಯ್ದರು. ಅಲ್ಲಿದ್ದ ಯಾರೂ ನಮ್ಮ ಬೆಂಬಲಕ್ಕೆ ಬರಲಿಲ್ಲ. "ಸ್ತ್ರೀಯರನ್ನು ಈ ರೀತಿ ಅವಮಾನಿಸುವ ಈ ಜಾಗದಲ್ಲಿ ಜಗನ್ನಾಥ ಇದ್ದಾನೆಂದು ನಾನು ನಂಬುವುದಿಲ್ಲ. ಈ ದೇವಾಲಯವನ್ನು ನಾನು ಮತ್ತೊಮ್ಮೆ ಪ್ರವೇಶಿಸುವುದೇ ಇಲ್ಲ" ಎಂದು



ಜ್ಞಾನಪೀಠ ಪ್ರಶಸ್ತಿಯೂ ಸೇರಿದಂತೆ ಹಲವಾರು ಪ್ರತಿಷ್ಠಿತ ಸನ್ಮಾನಗಳನ್ನು ತಮ್ಮ ಮುಡಿಗೇರಿಸಿಕೊಂಡ ಒರಿಯಾ ಸಾಹಿತಿ ಮತ್ತು ಶಿಕ್ಷಣ ತಜ್ಞೆ ಪ್ರತಿಭಾ ರೇ ಜನವರಿ ೨೧, ೧೯೪೩ರಂದು ಭುವನೇಶ್ವರದಲ್ಲಿ ಕಟಕ್‌ನ ಬಾಲಿಕುಡ್ ಪ್ರಾಂತ್ಯದ ಅಲಾಬೋಲ್ ಹಳ್ಳಿಯಲ್ಲಿ ಜನಿಸಿದರು. ತಂದೆ ಪರಶುರಾಮ್ ದಾಸ್ ಮತ್ತು ತಾಯಿ ಮನೋರಮಾ ದೇವಿ. ಚಿಕ್ಕ ವಯಸ್ಸಿಗೆ ಬರವಣಿಗೆಯಲ್ಲಿ ತೊಡಗಿದ ಪ್ರತಿಭಾಗೆ ತಂದೆಯೇ ಗುರು, ಸ್ನೇಹಿತ, ಮಾರ್ಗದರ್ಶಕ. ೧೯೭೪ರಲ್ಲಿ ಬರೆದ ಮೊದಲ ಕಾದಂಬರಿ 'ಬರ್ಷ ಬಸಂತ ಬೈಶಾಕ'ದಿಂದ ಆರಂಭವಾದ ಅವರ ಬರವಣಿಗೆಯ ಪಯಣ ಇಂದಿಗೂ ಅವ್ಯಾಹತವಾಗಿ ಸಾಗಿದೆ. ಒರಿಸ್ಸಾ ಸರ್ಕಾರದಲ್ಲಿ ಇಂಜಿನಿಯರ್ ಆಗಿದ್ದ ಅಕ್ಷಯ ಚಂದ್ರ ರೇಯವರನ್ನು ಚಿಕ್ಕ ವಯಸ್ಸಿಗೇ ಮದುವೆಯಾದ ಮೇಲೆ ಹುಟ್ಟಿದ ಮೂವರು ಮಕ್ಕಳು ಶಾಲೆಗೆ ಹೋಗಲು ಪ್ರಾರಂಭಿಸಿದ ಮೇಲೆಯೇ ಅವರು ಶಿಕ್ಷಣದಲ್ಲಿ ಸ್ನಾತಕೋತ್ತರ ಪದವಿ ಗಳಿಸಿ ಕಾಲೇಜು ಶಿಕ್ಷಕಿಯಾದರು. ನಂತರ ಶೈಕ್ಷಣಿಕ ಮನಶ್ಶಾಸ್ತ್ರದಲ್ಲಿ ಡಾಕ್ಟರೇಟ್ ಪಡೆದು "ಬೋಂಡಾ ಜನಾಂಗದವರ ಅಪರಾಧೀಕರಣ ಮತ್ತು ಬುಡಕಟ್ಟುತನ" ಕುರಿತು ಸಂಶೋಧನೆ ನಡೆಸಿದರು.

ಸಾಮಾಜಿಕವಾಗಿ ಅತ್ಯಂತ ಕ್ರಿಯಾಶೀಲವಾಗಿರುವ ಮತ್ತು ದೇಶವಿದೇಶಗಳಲ್ಲಿ ವ್ಯಾಪಕವಾಗಿ ಪ್ರವಾಸ ಮಾಡಿರುವ ಪ್ರತಿಭಾ ಅವರ ಜೀವನಾನುಭವಗಳು ಶ್ರೀಮಂತವಾಗಿವೆ. ನಮ್ಮ ಶ್ರೇಣೀಕೃತ ಸಮಾಜದಲ್ಲಿ ಇರುವ ಜಾತಿ, ಧರ್ಮಗಳ ಅಸಮಾನತೆಯ ವಿರುದ್ಧ ಸದಾ ಧ್ವನಿಯೆತ್ತುತ್ತಾ ಸಮಾಜದ ಸಾಕ್ಷಿಪ್ರಜ್ಞೆಯಾದವರು. ಇವೇ ಅವರ ಬರವಣಿಗೆಯ ಮೂಲದ್ರವ್ಯವಾಗಿರುವುದು. ೧೯೮೬ರಲ್ಲಿ ಇಸ್ಕಸ್ ಸಂಘಟನೆಯ ಪರವಾಗಿ ಸೋವಿಯೆತ್ ಯೂನಿಯನ್ ಭೇಟಿಯಿಂದಾರಂಭಿಸಿ ಆಸ್ಟ್ರೇಲಿಯಾ, ಅಮೆರಿಕಾ, ಬ್ರಿಟನ್, ನಾರ್ವೆ, ಸ್ವೀಡನ್, ಡೆನ್ಮಾರ್ಕ್, ಜರ್ಮನಿ, ಫ್ರಾನ್ಸ್ , ಚೀನ, ಜಪಾನ್ - ಮುಂತಾದ ದೇಶಗಳಲ್ಲಿ ನಮ್ಮ ದೇಶವನ್ನು ಪ್ರತಿನಿಧಿಸಿದ್ದಾರೆ. ಅವರು ೨೦ ಕಾದಂಬರಿಗಳು, ೨೪ ಕಥಾಸಂಕಲನಗಳು ಮತ್ತು ಹತ್ತು ಪ್ರವಾಸ ಸಾಹಿತ್ಯ ಕೃತಿಗಳು, ಎರಡು ಕವನ ಸಂಕಲನಗಳು ಮತ್ತು ಹಲವಾರು ಲೇಖನಗಳನ್ನು ರಚಿಸಿದ್ದಾರೆ. ಇವರ ಬಹುಪಾಲು ಕೃತಿಗಳು ಹಿಂದಿ, ಇಂಗ್ಲಿಷ್ ಭಾಷೆಗಳಲ್ಲದೆ ಇತರ ಹಲವಾರು ಭಾರತೀಯ ಮತ್ತು ಕೆಲವು ವಿದೇಶಿ ಭಾಷೆಗಳಿಗೂ ಅನುವಾದಿತವಾಗಿವೆ. ಅವರು ತಮ್ಮ ಕೃತಿಗಳಿಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳನ್ನಲ್ಲದೆ, ಪ್ರತಿಷ್ಠಿತ ಮೂರ್ತಿ ದೇವಿ ಪ್ರಶಸ್ತಿಯನ್ನು ಪಡೆದಿದ್ದಾರೆ. ೨೦೦೭ರಲ್ಲಿ ಪದ್ಮಶ್ರೀ ಪ್ರಶಸ್ತಿ ಮತ್ತು ೨೦೧೧ರ ಜ್ಞಾನಪೀಠ ಪ್ರಶಸ್ತಿಗಳು ಅವರ ಹಿರಿಮೆಗೆ ಸಾಕ್ಷಿಯಾಗಿವೆ.

ಅವರಿಗೆ ನುಡಿದು, ನಾನು ಅಲ್ಲಿಂದ ಹೊರಬಿದ್ದೆ. ನಂತರ ಪತ್ರಿಕೆಯಲ್ಲಿ ಈ ಘಟನೆಯನ್ನು ಕುರಿತು "ಧರ್ಮದ ಬಣ್ಣ ಕಪ್ಪೇ ?" ಎಂಬ ಲೇಖನ ಬರೆದಿದ್ದೆ. ಇದರಿಂದ ನನ್ನ ಪತಿಗೆ ಇಷ್ಟವಾಗಲಿಲ್ಲ. ಅವರ ವಕೀಲ ಸೋದರ ಕೂಡ ಇದರಿಂದ ಅಸಂತೃಪ್ತರಾದರು. "ದೇವಾಲಯದ ಆ ಪಂಡರೆಲ್ಲಾ ಗೂಂಡಾಗಳು. ಅವರನ್ನು ಕೆರಳಿಸಿ ಆಪತ್ತನ್ನು ಮನೆಯೊಳಗೆ ಏಕೆ ಎಳೆದುಕೊಳ್ಳಬೇಕು ?" ಎಂಬುದು ಅವರ ವಾದವಾಗಿತ್ತು. ನಡೆದ ಘಟನೆಯನ್ನು ಖಂಡಿಸಿ ಪತ್ರಿಕೆಗಳು ಲೇಖನ, ಸಂಪಾದಕೀಯ ಬರೆದವು. ದೇವಸ್ಥಾನದವರು ನನಗೆ ತಪ್ಪೊಪ್ಪಿಕೊಳ್ಳಲು ಒತ್ತಡ ಹೇರತೊಡಗಿದರು. ಆದರೆ ನಾನು ಇದರಿಂದ ಜಗ್ಗಲಿಲ್ಲ. ಕೊನೆಗೆ ಅವರು ಕೋರ್ಟಿಗೆ ಹೋಗಿ ನನ್ನ ಮೇಲೆ ಮಾನನಷ್ಟದ ಮೊಕದ್ದಮೆ ಹಾಕಿ ಒಂದು ಲಕ್ಷ ರೂಪಾಯಿ ದಂಡ ಕೊಡಬೇಕೆಂದರು. ನಾನು ಅದಕ್ಕೆ ಹೆದರಲಿಲ್ಲ. ಹತ್ತು ವರ್ಷಗಳ ಕಾಲ ಈ ಮೊಕದ್ದಮೆ ನಡೆಯಿತು. ಅವರು ಕೋರ್ಟಿಗೆ ಬರುತ್ತಿರದಿದ್ದ ಕಾರಣ ಕೊನೆಗೆ ಈ ಮೊಕದ್ದಮೆ ಬಿದ್ದುಹೋಯಿತು.

**ಹೊ.** : ಶಂಕರಾಚಾರ್ಯರ ಪ್ರಕರಣವೇನು ?

**ಪ್ರ.** : ರೂಪ ಕನ್ವರ್‌ಳು ಸತಿ ಹೋದ ಸಂದರ್ಭದಲ್ಲಿ ಪುರಿ ಶಂಕರಾಚಾರ್ಯರು ಸತಿಯನ್ನು ಬೆಂಬಲಿಸಿ ಮಾತನಾಡಿದ್ದರು. ಆಗ ಇದನ್ನು ನನಗೆ ಖಂಡಿಸಬೇಕೆಂದೆನಿಸಿತ್ತು. ನಾನು ಪತ್ರಿಕೆಯಲ್ಲಿ "ಸತಿಯ ವ್ಯಾಖ್ಯಾನ" ಎಂಬ ಲೇಖನವನ್ನು ಬರೆದು ಶಂಕರಾಚಾರ್ಯರನ್ನು ಪ್ರಶ್ನಿಸಿದ್ದೆ. ಇದರಿಂದ ನಾನು ಬಹಳ ಪ್ರಖ್ಯಾತಳಾಗಿಬಿಟ್ಟಿದ್ದೆ. ಸನಾತನಿಗಳಿಗೆ ಇದರಿಂದ ಬಹಳ ಸಿಟ್ಟು ಬಂದಿತ್ತು.

**ಹೊ.** : ನಿಮ್ಮ ಬರವಣಿಗೆಯ ಮೂಲ ಈ ರೀತಿಯ ಸಾಮಾಜಿಕ ವಿಮರ್ಶೆಯಿಂದ ಆರಂಭವಾಯಿತೆನ್ನಬಹುದೇ ?

**ಪ್ರ.** : ಹಾಗೇನಿಲ್ಲ.

**ಹೊ.** : ನೀವು ಪಬ್ಲಿಕ್ ಸರ್ವೀಸ್ ಕಮಿಷನ್‌ನ ಸದಸ್ಯರಾಗಿದ್ದಿರಿ. ಅದರ ಅನುಭವ ಹೇಗಿತ್ತು ?

**ಪ್ರ.** : ಓ. ಅದೊಂದು ದೊಡ್ಡ ಕತೆ. ಆ ವಿಷಯ ನಿಮಗೆ ಗೊತ್ತಿಲ್ಲವಾ ? ನಿವೃತ್ತಿಗೆ ನನಗಿನ್ನೂ ಏಳು ವರ್ಷಗಳಿದ್ದುವು. ಆ ಸಂದರ್ಭದಲ್ಲಿ ಲೋಕಸೇವಾ ಆಯೋಗಕ್ಕೆ ನನ್ನನ್ನು ನೇಮಕ ಮಾಡಿದರು. ನಾನು ನನ್ನ ಕೆಲಸದಿಂದ ಸ್ವಯಂ ನಿವೃತ್ತಿ ಪಡೆದು ಈ ಕೆಲಸ ಒಪ್ಪಿಕೊಂಡೆ. ಪ್ರತಿಯೊಬ್ಬರೂ ನನಗೆ ಇದನ್ನು ಒಪ್ಪಿಕೊಳ್ಳಬೇಡ. ಅದೇನು ಒಳ್ಳೆಯ ಕೆಲಸವಲ್ಲ. ಇದುವರೆಗೂ ನಿನಗಿರುವ ಒಳ್ಳೆಯ ಹೆಸರು ಕೆಡಿಸಿಕೊಳ್ಳಬೇಡ, ಎಂದೆಲ್ಲ ಸಲಹೆ ನೀಡಿದರು. ನಾನಾದರೋ ಈ ಹೊಸ ಅನುಭವ ಹೇಗಿರುತ್ತದೆಯೋ ನೋಡಿಯೇ ಬಿಡೋಣ, ಎಂದು ನಿರ್ಧರಿಸಿದೆ.

ಆ ಆಯೋಗದ ಅಧ್ಯಕ್ಷರು ತುಂಬ ಬುದ್ಧಿವಂತರು ಆಗಿದ್ದರು. ನಾವು ಒಳ್ಳೆಯ ಸ್ನೇಹಿತರೂ ಕೂಡ. ಆಗ್ಗೆ ಒರಿಸ್ಸಾ ಅಡ್ಮಿನಿಸ್ಟ್ರೇಷನ್ ಸರ್ವಿಸ್‌ನಲ್ಲಿ ಕೆಲವೊಂದು ಕೆಟ್ಟ ಪದ್ಧತಿಗಳನ್ನು ಅಳವಡಿಸಿಕೊಂಡಿತ್ತು. ನನಗೆ ಮತ್ತು ನನ್ನ ಕೆಲವು ಸ್ನೇಹಿತರಿಗೂ ಇದು ಒಪ್ಪಿತವಾಗಲಿಲ್ಲ. ಇದರ ಬಗ್ಗೆ ನಮ್ಮ ರಾಜ್ಯಪಾಲರಿಗೆ ಒಂದು ಪತ್ರ ಬರೆದೆ. ಆಗ ನಡೆಯುತ್ತಿದ್ದ ಪರೀಕ್ಷೆಗಳ ಪ್ರಕ್ರಿಯೆಯಲ್ಲಿ ಅವರನ್ನು ಮುಂದುವರಿಸಬಾರದೆಂದು ಪ್ರಾರ್ಥಿಸಿಕೊಂಡೆ. ಪರೀಕ್ಷೆಗಳನ್ನು ಒಂದು ವರ್ಷಕ್ಕೂ ಹೆಚ್ಚು ಕಾಲ ಮುಂದೂಡಲಾಯಿತು. ನನ್ನ ಅರ್ಜಿಯನ್ನು ಆಗಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಕೆ. ಆರ್. ನಾರಾಯಣ್‌ರವರಿಗೂ ಕಳುಹಿಸಿಕೊಡಲಾಯಿತು. ಅದೇ ಸಮಯದಲ್ಲಿ ಮಹಾರಾಷ್ಟ್ರ, ಆಂಧ್ರಪ್ರದೇಶ, ಕರ್ನಾಟಕ, ಪಂಜಾಬ್ ಸೇವಾ ಆಯೋಗಗಳಲ್ಲೂ ಇಂತಹುದೇ ಗದ್ದಲಗಳು ನಡೆದಿದ್ದವು. ನಮ್ಮಲ್ಲಿ ನನ್ನನ್ನು ಎಲ್ಲರೂ ಚೆನ್ನಾಗಿ ಬಯ್ದರು. ಇವಳಿಗೆ ತಾನೇ ಸ್ವತಃ ಅಧ್ಯಕ್ಷಳಾಗುವ ಆಸೆ. ಅದಕ್ಕೆ ಈ ಗಲಾಟೆಗಳನ್ನು ಮಾಡಿಸುತ್ತಿದ್ದಾಳೆ, ಎಂದೆಲ್ಲ ಹೇಳಿದರು. ಮನೆಯಲ್ಲೂ ನನ್ನವರು ಇದನ್ನು ಇಷ್ಟಪಡಲಿಲ್ಲ. "ಇಂದಿನ ಸಮಾಜದಲ್ಲಿ ಭ್ರಷ್ಟಾಚಾರವನ್ನು ತಡೆಯಲು ಸಾಧ್ಯವಿಲ್ಲ. ನಿನಗೇಕೆ ಉಸಾಬರಿ ?" ಎನ್ನುವುದು ಅವರ ವಾದವಾಗಿತ್ತು. ನಂತರ ಈ ಪ್ರಕರಣ ಕಾನೂನು ವಿಭಾಗಕ್ಕೆ ಹೋಯಿತು. ಅವರು ವಿಚಾರಣೆ ಆರಂಭಿಸಿದರು.



ಸಂದರ್ಶಕರಾದ ಡಾ॥ ಜಿ. ರಾಮಕೃಷ್ಣ, ಡಾ॥ ಎನ್. ಗಾಯತ್ರಿ ಹಾಗೂ ಶ್ರೀಮತಿ ಪ್ರತಿಭಾ ರೇ

ಬಹುಶಃ ಇದೊಂದು ಚರಿತ್ರೆಯನ್ನೇ ಸೃಷ್ಟಿಸಿತು. ಆಯೋಗದ ಅಧ್ಯಕ್ಷರು ನನಗೆ ಫೋನ್ ಮಾಡಿ 'ಈ ಪ್ರಕರಣವನ್ನು ಇಲ್ಲಿಗೆ ಬಿಡಿ. ನಾನು ನಿಮಗೆ ಬೇಕಾದಷ್ಟು ಅನುಕೂಲ ಮಾಡಿಕೊಡ್ತೀನಿ' ಎಂದೂ ಕೇಳಿಕೊಂಡರು. ನಾವು ಸ್ನೇಹಿತರಂತೆಯೇ ಇದ್ದೆವು. ಆದರೆ ನನ್ನ ಕಣ್ಣ ಮುಂದೆ ನಡೆಯುವ ಅನ್ಯಾಯವನ್ನು ನನಗೆ ಸಹಿಸುವುದು ಸಾಧ್ಯವೇ ಇಲ್ಲ, ಎಂದು ಹೇಳಿದೆ. ಹಾಗೆಯೇ ಪತ್ರ ಬರೆದೆ. ನನ್ನ ಸ್ನೇಹಿತರು ನನ್ನನ್ನು ಬೆಂಬಲಿಸಿದರು. ಒಂದು ದಿನ ಅಧ್ಯಕ್ಷರು ನನಗೆ ಮನೆಗೆ ಫೋನ್ ಮಾಡಿ ನನ್ನನ್ನು ಅಶ್ಲೀಲವಾದ, ಅವಾಚ್ಯ ಶಬ್ದಗಳಿಂದ ನಿಂದಿಸುವುದಕ್ಕೆ ಪ್ರಾರಂಭಿಸಿದರು. ನಿನ್ನ ಕುಟುಂಬವನ್ನು ನಿರ್ನಾಮ ಮಾಡಿಬಿಡುತ್ತೇನೆ, ಎಂದು ಬೆದರಿಕೆ ಹಾಕಿದರು. ನಾನು ಈ ಕುರಿತು ಮುಖ್ಯ ಕಾರ್ಯದರ್ಶಿಗಳಿಗೆ, ಪೊಲೀಸ್ ವರಿಷ್ಠರಿಗೆ ಮತ್ತು ಇತರ ಸದಸ್ಯರುಗಳಿಗೆ ಪತ್ರ ಬರೆದೆ. ಪೊಲೀಸ್ ಠಾಣೆಯಲ್ಲಿ ದೂರು ದಾಖಲಿಸಿದೆ. ನಾನು ಭುವನೇಶ್ವರದಿಂದ ಕಟಕ್‌ಗೆ ಪ್ರಯಾಣ ಮಾಡುತ್ತಿದ್ದುದರಿಂದ ನನಗೆ ಪೊಲೀಸ್ ರಕ್ಷಣೆ ಬೇಕೆಂದು ಕೇಳಿಕೊಂಡೆ. ಈ ಸಂಬಂಧವಾಗಿ ರಾಜ್ಯಪಾಲರಿಗೆ ಮನವಿಯನ್ನು ಸಲ್ಲಿಸಲಾಯಿತು. ಅವರ ಮೇಲೆ ಮೊಕದ್ದಮೆ ದಾಖಲಾಗಿ ವಿಚಾರಣೆ ಮುಂದುವರಿಯಿತು. ಇನ್ನೇನು ಅವರ ಮೇಲೆ ಚಾರ್ಜ್ ಶೀಟ್ ಹಾಕುವುದರಲ್ಲಿದ್ದರು. ಆದರೆ ಸಾಂದರ್ಭಿಕ ಸಾಕ್ಷಿಗಳು ಸಾಲದೆಂಬ ಕಾರಣಕ್ಕೆ ಈ ಪ್ರಕರಣ ಅಲ್ಲಿಗೆ ಬಿದ್ದು ಹೋಯಿತು. ಆ ನಂತರ ನನ್ನ ಮೇಲೆ ಅವರು ಒಂದುಕೋಟಿ ರೂಪಾಯಿಗೆ ಮಾನನಷ್ಟ ಮೊಕದ್ದಮೆ ಹೂಡಿದರು. ಪ್ರಕರಣ ಕೋರ್ಟಿನಲ್ಲಿ ದೀರ್ಘಕಾಲ ನಡೆಯಿತು. ಅವರು ನಿವೃತ್ತಿ ಹೊಂದಿದರು. ನಾನೂ ನಿವೃತ್ತಿ ಹೊಂದಿದೆ. ಕೊನೆಗೆ ಪ್ರಕರಣ ಡಿಸ್‌ಮಿಸ್ ಆಯಿತು.

**ಹೊ.** : ಅಂತೂ ನಿಮ್ಮದು ಹೋರಾಟದ ಬದುಕು.

**ಪ್ರ.** : ಹೌದು.

**ಹೊ.** : ನೀವು ಬೋಂಡಾ ಬುಡಕಟ್ಟಿನವರನ್ನು ಕುರಿತು ಅಧ್ಯಯನ ಮಾಡಿದ್ದೀರಲ್ಲಾ, ಅದನ್ನು ಕುರಿತು ಸ್ವಲ್ಪ ಹೇಳುವಿರಾ ?

**ಪ್ರ.** : ಕೋರಾಕುಡ್, ಆಂಧ್ರದ ಗಡಿಯಲ್ಲಿ ಈ ಬುಡಕಟ್ಟಿನವರು ವಾಸ ಮಾಡುತ್ತಾರೆ. ಒಂದು ಸುಮಾರು ೫೦೦೦ ಜನರಿರಬಹುದು. ಅವರು ಬಹಳ ಬಡವರು. ಮೈಮೇಲೆ ಬಟ್ಟೆ ಧರಿಸುವುದಿಲ್ಲ. ನನಗೆ ಕೆಲವೊಮ್ಮೆ ಜನರು ನೀನೇಕೆ ಬುಡಕಟ್ಟಿನ ಜನರ ಬಗ್ಗೆ ಏನೂ ಬರೆದಿಲ್ಲ ? ಎಂದು ಕೇಳುತ್ತಿದ್ದರು. ಆಗೆಲ್ಲ ನಾನು ಆ ಜಗತ್ತಿಗೆ ತೆರೆದುಕೊಂಡಿಲ್ಲ. ಅಂತಹ ಅವಕಾಶ ಸಿಕ್ಕರೆ, ಖಂಡಿತ ಬರೆಯುವೆ, ಎನ್ನುತ್ತಿದ್ದೆ. ಆಗೆಲ್ಲ ಅವರು ಈ ಸಮುದಾಯ ಕುರಿತು ಹಲವಾರು ಕಥೆಗಳನ್ನು ಹೇಳುತ್ತಿದ್ದರು. ಅವರಲ್ಲಿ ಕೊಲೆ, ಕಳ್ಳತನದಂತಹ ಅಪರಾಧಗಳು ಸರ್ವೇಸಾಮಾನ್ಯವಾಗಿತ್ತು. ನನಗೂ ಕುತೂಹಲ ಹುಟ್ಟಿತು. ನನ್ನ ಗಂಡ ಈ ಜಿಲ್ಲೆಯಲ್ಲಿ ಕೆಲಸ ಮಾಡುತ್ತಿದ್ದರು. ನನಗೆ ಹೆಚ್ಚಿನ ಅಧ್ಯಯನ ನಡೆಸಲು ಫೆಲೋಶಿಪ್ ಸಿಕ್ಕಿತು. ಆಗ ನಾನು "ಬೋಂಡಾ ಜನರ ಅಪರಾಧಿ ಮನೋಭಾವದ ಮೇಲೆ ಶಿಕ್ಷಣದ ಪ್ರಭಾವ" ಕುರಿತು ಎರಡು ವರ್ಷಗಳ ಕಾಲ ಅಧ್ಯಯನ ನಡೆಸಿದೆ. ಆ ಹಳ್ಳಿಯಲ್ಲಿ ಲೆಕ್ಕಕ್ಕೆ ಎಂಟು ನೋಂದಾಯಿತ ಶಾಲೆಗಳು ಇದ್ದವು, ಅದರಲ್ಲಿ ಪಾಠಮಾಡಿದ್ದಕ್ಕೆ ಶಿಕ್ಷಕರು ಸಂಬಳ ಪಡೆಯುತ್ತಿದ್ದರು. ಆದರೆ ನಿಜದ ವಾಸ್ತವದಲ್ಲಿ ಶಾಲೆಗಳೇ ಇರಲಿಲ್ಲ. ಈ ಜನರ ಮೇಲೆ ಸರ್ಕಾರದಿಂದ ಸಾಕಷ್ಟು ಹಣ ವ್ಯಯ ಮಾಡಲಾಗುತ್ತಿತ್ತು. ಅದು ಈ ಜನರ ಬದುಕನ್ನು ಯಾವುದೇ ರೀತಿ ಬದಲಾಯಿಸಿರಲಿಲ್ಲ. ಅವರು ಸ್ನಾನ ಮಾಡುತ್ತಿರಲಿಲ್ಲ. ಶೌಚದ ನಂತರ ದೇಹವನ್ನು ಶುಚಿ ಮಾಡಿಕೊಳ್ಳಬೇಕೆಂಬ ತಿಳುವಳಿಕೆಯೂ ಅವರಲ್ಲಿರಲಿಲ್ಲ. ಅವರಿದ್ದ ಸ್ಥಳದಲ್ಲಿ ವಾಸಿಸುವುದೇ ದುರ್ಭರವಾಗಿತ್ತು. ಬೆಟ್ಟದ ಮೇಲಿದ್ದ ಅವರ ವಾಸಸ್ಥಾನದಲ್ಲಿ ಸೊಳ್ಳೆಗಳ ಸಾಮ್ರಾಜ್ಯ. ಮೆನೆಂಜಿಟೀಸ್ ಖಾಯಿಲೆ ಸರ್ವೇಸಾಮಾನ್ಯವಾಗಿತ್ತು. ನನ್ನ ಗಂಡ ಈ ಸ್ಥಳದ ಪರಿಸ್ಥಿತಿಯನ್ನು ಏನಾದರೂ ಒಮ್ಮೆ ನೋಡಿದ್ದರೆ, ಖಂಡಿತಾ ನನಗೆ ಹೋಗಲು ಬಿಡುತ್ತಿರಲಿಲ್ಲ. ಇಲ್ಲಿ ಪ್ರತಿ ದಿನ ಕೊಲೆಗಳು ನಡೆಯುತ್ತಿದ್ದವು. ಅವರು ಹೊರಗಿನವರನ್ನು ಮಾತ್ರವಲ್ಲ, ಅವರ ನಡುವಿನ ಜನರನ್ನು ಕೊಲೆ, ಸುಲಿಗೆ ಮಾಡುತ್ತಿದ್ದರು. ಈ ಅಪರಾಧ ಮಾಡಿ ಜೈಲಿಗೆ ಹೋಗಿ ಬಂದ ನಂತರ ಇವರಲ್ಲಿ ಸುಧಾರಣೆಯ ಕೆಲವಂಶಗಳು ಕಾಣಿಸುತ್ತಿದ್ದವು. ಇವರಿಗೆ ಹೊರಗಿನವರೆಂದರೆ ಹೆದರಿಕೆ. ಅವರು ತಮ್ಮ ನೆಲವನ್ನು ಕಸಿದುಕೊಳ್ಳಲು ಬಂದವರೆಂಬ ನಂಬಿಕೆ. ಆದ್ದರಿಂದ ಸದಾ ತಮ್ಮ ಬಳಿ ಶಸ್ತ್ರಾಸ್ತ್ರಗಳನ್ನು ಜೊತೆಯಲ್ಲಿ ಇಟ್ಟುಕೊಂಡಿರುತ್ತಿದ್ದರು.

ಅವರು ಹೆಂಗಸರನ್ನು ಎಂದೂ ಕೊಲ್ಲುತ್ತಿರಲಿಲ್ಲ. ಆ ಕಾರಣದಿಂದ ನನಗೆ ಅವರಲ್ಲಿ ಕೆಲಸ ಮಾಡಲು ಸಾಧ್ಯವಾಯಿತು. ಮೊದಲಿಗೆ ನಾನು ಅವರಿಗೆ ಅನೌಪಚಾರಿಕ ಶಿಕ್ಷಣ ಕೊಡುವುದರ ಮೂಲಕ ಅವರಿಗೆ ಹತ್ತಿರವಾಗಲು ಪ್ರಯತ್ನಿಸಿದೆ. ಈಗ ಕ್ರಮೇಣ ಅವರಲ್ಲಿಯೂ ಶಿಕ್ಷಿತರು ಕಂಡುಬರುತ್ತಿದ್ದಾರೆ. ಬದಲಾವಣೆಯ ಗಾಳಿ ನಿಧಾನವಾಗಿ ಬೀಸುತ್ತಿದೆ. ಶಿಕ್ಷಣ ಅದೆಷ್ಟು ಶಕ್ತಿಯುತ ಮಾಧ್ಯಮ !

ನಿಜವಾಗಿ ಹೇಳಬೇಕೆಂದರೆ, ಇವರನ್ನು ವಿದೇಶಗಳಿಗೆ ಕಳುಹಿಸಿದರೆ, ಅವರು ಡಿಸ್ಟಿಲರಿಗಳನ್ನು ಸ್ಥಾಪಿಸಿ ಅದೆಷ್ಟು ಒಳ್ಳೆಯ ವ್ಯಾಪಾರಿಗಳಾಗಬಹುದು. ಅವರು ತಾವು ಬೆಳೆಯುವ ಹಣ್ಣುಗಳನ್ನು ತಿನ್ನುವುದಿಲ್ಲ. ಬದಲಿಗೆ ಅದರಿಂದ

ಮದ್ಯ ತಯಾರಿಸುತ್ತಾರೆ. ವಿವಿಧ ಋತುಗಳಲ್ಲಿ ಬಿಡುವ ಹಲಸು, ಮಾವು, ಬಾಳೆ ಮುಂತಾದ ಹಣ್ಣುಗಳನ್ನು ಕಾಯಿಸಿ, ಕುದಿಸಿ ಮದ್ಯ ತಯಾರಿಸುತ್ತಾರೆ.

**ಹೊ.** : ನಿಮ್ಮ ವೃತ್ತಿ, ಬರವಣಿಗೆ, ಕುಟುಂಬ ಎಲ್ಲಕ್ಕೂ ಸಮಯ ಹೇಗೆ ಹೊಂದಿಸುತ್ತೀರಿ ?

**ಪ್ರ.** : ಅತ್ಯಂತ ಚಟುವಟಿಕೆಯ ಜನರು ಮಾತ್ರ ಕೆಲಸ ಮಾಡಲು ಸಮಯ ದೊರಕಿಸಿಕೊಳ್ಳಬಲ್ಲರು. ಆದರೆ ಬರವಣಿಗೆ ನನಗೆ ಒಂದು ರೀತಿಯ ಚಟ ಎನ್ನಬಹುದು.

**ಹೊ.** : ಕೆಲವೊಮ್ಮೆ ಬರಹಗಾರರು ಸಾಮಾಜಿಕ ಕಾರ್ಯಕರ್ತರೂ ಆಗಿರುತ್ತಾರೆ. ಉದಾಹರಣೆಗೆ, ಮಹಾಶ್ವೇತಾದೇವಿ... ಇದರಿಂದ ಲೇಖಕರ ಬರವಣಿಗೆಯ ಸೃಜನಶೀಲತೆಗೆ ತೊಂದರೆಯಾಗುತ್ತದೆಂದು ನಿಮಗನಿಸುತ್ತದೆಯೇ ?

**ಪ್ರ.** : ಮಹಾಶ್ವೇತಾದೇವಿ ಬರಹಗಾರ್ತಿ ಮತ್ತು ಸಾಮಾಜಿಕ ಕಾರ್ಯಕರ್ತೆ. ಆದರೆ ನಾನು ಯಾವ ಸ್ವಯಂಸೇವಾ ಸಂಘಟನೆಯಲ್ಲೂ ಕೆಲಸ ಮಾಡಲಿಲ್ಲ. ನಾನು ಉದ್ಯೋಗದಲ್ಲಿದ್ದೆ. ಜೊತೆಗೆ ಬರವಣಿಗೆಯಲ್ಲಿ ತೊಡಗಿಕೊಂಡಿದ್ದೆ. ನನ್ನನ್ನು ಬೇಕಾದರೆ ಸಾಹಿತ್ಯಿಕ ಕಾರ್ಯಕರ್ತೆ ಎಂದೆನ್ನಬಹುದು. ನನ್ನ ಬಹುಪಾಲು ಹೋರಾಟವೆಲ್ಲ ವೈಯಕ್ತಿಕವಾದದ್ದು.

**ಹೊ.** : ನಿಮ್ಮ ಬರವಣಿಗೆಯನ್ನು ಕುರಿತು ವಿಮರ್ಶಕರು ನಿಮ್ಮನ್ನು ಫೆಮಿನಿಸ್ಟ್ ಹಾಗೂ ಕಮ್ಯೂನಿಸ್ಟ್, ಎಂದು ಕರೆಯುತ್ತಾರೆ. ಈ ಬಗ್ಗೆ ನಿಮಗೇನನ್ನಿಸುತ್ತದೆ ?

**ಪ್ರ.** : ನಾನು ವಿಮರ್ಶಕರ ಲೇಬಲ್‌ಗಳಿಗೆ ತಲೆಕೆಡಿಸಿಕೊಳ್ಳುವುದಿಲ್ಲ. ಲೇಖಕ ಮೊದಲು. ನಂತರ ವಿಮರ್ಶಕರು ಅವರನ್ನು ಅನುಸರಿಸುತ್ತಾರೆ. ವಿಮರ್ಶಕರನ್ನು ಅನುಸರಿಸಿ ಯಾರೂ ಕೃತಿ ರಚಿಸುವುದಿಲ್ಲ. ನಾನು ಹೆಣ್ಣಿನ ನೋವನ್ನು ಕುರಿತು ಮತ್ತು ಅವರನ್ನು ಸಮರ್ಥಿಸುವ ಕೃತಿ ಬರೆದರೆ ಅದಕ್ಕೆ ನನ್ನನ್ನು ಫೆಮಿನಿಸ್ಟ್ ಅಂದರೆ, ಅದಕ್ಕೆ ನಾನು ಏನು ಮಾಡಲಿ ? ಸಮಾಜದ ದುರ್ಬಲರ, ಅಸ್ಪೃಶ್ಯರ, ತುಳಿತಕ್ಕೊಳಗಾದವರ ಪರವಾಗಿ ಮತ್ತು ಬೂರ್ಜ್ವಾಗಳ ವಿರುದ್ಧವಾಗಿ ಕೃತಿ ರಚಿಸಿದ್ದಕ್ಕೆ, ನನ್ನನ್ನು ಕಮ್ಯೂನಿಸ್ಟ್ ಅಂದರೆ ಅದು ನನ್ನ ತಪ್ಪಲ್ಲ. ಆದರೆ ಫೆಮಿನಿಸಂ ಆಗಿರಲಿ, ಕಮ್ಯುನಿಸಂ ಆಗಲಿ ಅವೆಲ್ಲ ಮಾನವತಾವಾದದ ಒಂದು ಭಾಗವೇ. ಆದ್ದರಿಂದ ನಾನು ಮಾನವತಾವಾದಿ ಎಂದೆನಿಸಿಕೊಳ್ಳಲು ಇಷ್ಟಪಡುತ್ತೇನೆ.

**ಹೊ.** : ನಿಮ್ಮ ಬರವಣಿಗೆಯ ಮೂಲಸತ್ವವನ್ನು ಹೇಗೆಂದು ವ್ಯಾಖ್ಯಾನಿಸುತ್ತೀರಿ ?

**ಪ್ರ.** : ನಾನು ಬದುಕುತ್ತಿರುವ ಸನ್ನಿವೇಶದಲ್ಲಿ ಯಾವುದೇ ಅನ್ಯಾಯದ ಘಟನೆ ನಡೆದಾಗಲೂ ಅದರ ವಿರುದ್ಧ ವೈಯಕ್ತಿಕವಾಗಿ ನನ್ನ ಬರವಣಿಗೆಯ ಮೂಲಕ ದನಿಯೆತ್ತಿದ್ದೇನೆ. ಬಂಡೇಳುವುದು ನಿಜವಾದ ಬರವಣಿಗೆಯ ಲಕ್ಷಣ. ಹಾಗೆಯೇ ನನ್ನ ಎದುರಿಗೆ ಕಂಡ ಜನಜೀವನವನ್ನು ಮತ್ತು ಅದರ ಸತ್ಯದ ನೆಲೆಯನ್ನು ಕತೆ, ಕಾದಂಬರಿಗಳಲ್ಲಿ ತರಲು ಪ್ರಯತ್ನಿಸುತ್ತೇನೆ. ನನ್ನ ಮೆಚ್ಚಿನ ಕೃತಿ "ಮಗ್ನಮತಿ" ಪ್ರವಾಹಪೀಡಿತ ಜನರ ಬದುಕನ್ನು ಕುರಿತದ್ದು. ನಾನು ಅಧ್ಯಯನ ನಡೆಸಿದ ಬೋಂಡಾ ಜನರನ್ನು ಕುರಿತು "ಆದಿಭೂಮಿ" ಎಂಬ ಕಾದಂಬರಿಯನ್ನು ಬರೆದಿದ್ದೀನಿ. ಹಾಗೆಯೇ ಅವರ ಬದುಕಿನ ವಸ್ತುವನ್ನು ಕುರಿತು ಹದಿನಾಲ್ಕು ಕಥೆಗಳ ಸಂಕಲನವೊಂದನ್ನು ತಂದಿದ್ದೇನೆ.

**ಹೊ.** : ನಿಮ್ಮ ಕಥೆ, ಕಾದಂಬರಿಗಳಲ್ಲಿ ಪೌರಾಣಿಕ ಪಾತ್ರಗಳು ಮತ್ತು ಸನ್ನಿವೇಶಗಳು ಹೆಚ್ಚು ಪ್ರವೇಶ ಪಡೆದುಕೊಂಡಿವೆ. ಇದಕ್ಕೆ ನಿರ್ದಿಷ್ಟವಾದ ಉದ್ದೇಶವಿದೆಯೇ ?

**ಪ್ರ.** : ಪುರಾಣ, ಮಹಾಕಾವ್ಯಗಳು ನಮ್ಮೆಲ್ಲರ ಪರಂಪರೆಯ ಭಾಗ. ನನ್ನ ಬದುಕಿನ ಅನುಭವವನ್ನು ವಿಸ್ತರಿಸಿ ಹೇಳಲು ನಾನು ಸಾಮಾನ್ಯವಾಗಿ ಪೌರಾಣಿಕ ಕಥೆಗಳನ್ನು ಬಳಸಿಕೊಳ್ಳುವುದುಂಟು. ಇದು ಜನರನ್ನು ತಲುಪಲು ಪರಿಣಾಮಕಾರಿ ಮಾರ್ಗ. ನನ್ನ ಬಹು ಚರ್ಚಿತ ಕಾದಂಬರಿ 'ಯಜ್ಞಸೇನಿ'ಯಲ್ಲಿ ನಾನು ದ್ರೌಪದಿಯ ಮೂಲಕ ಸತ್ವ, ರಜಸ್ ಹಾಗೂ ತಮಸ್ ಗುಣಗಳ ಚಿಂತನೆಯನ್ನು ನಡೆಸಿದ್ದೇನೆ. ಜೊತೆಗೆ ನಮ್ಮ ಸಮಕಾಲೀನ ಸಂದರ್ಭಕ್ಕೂ ಔಚಿತ್ಯಪೂರ್ಣವಾಗುವಂತೆ ಅವಳ ಪಾತ್ರವನ್ನು ನಿರ್ವಹಿಸಿದ್ದೇನೆ.

**ಹೊ.** : ಚಪ್ಪಲಿ, ಕಂಬಳಿ, ಆ್ಯಂಟಿಕ್‌ಗಳು – ಹೀಗೆ ಪ್ರಾಪಂಚಿಕ ವಸ್ತುಗಳನ್ನು ಬಳಸಿಕೊಂಡು ನೀವು ಆಧ್ಯಾತ್ಮಿಕ ವಿಚಾರಗಳನ್ನು, ಮನುಷ್ಯತ್ವದ ಗಹನತೆಯನ್ನು ನಿಮ್ಮ ಬರವಣಿಗೆಯಲ್ಲಿ ತೋರಿಸಲು ಪ್ರಯತ್ನಿಸುವುದು ನನಗೆ ತುಂಬ ಮುಖ್ಯವಾದ ಸಂಗತಿಯಾಗಿ ಕಾಣುತ್ತದೆ. ಇದರ ಹಿಂದಿರುವ ನಿಮ್ಮ ಜೀವನ ದೃಷ್ಟಿಯೇನು ?

**ಪ್ರ.** : 'ಎಲ್ಲರನ್ನು ಪ್ರೀತಿಸು ಮತ್ತು ಬದುಕಲು ಬಿಡು' ಇದು ನನ್ನ ಜೀವನದ ಧ್ಯೇಯ. "ನಿಮ್ಮ ಹೃದಯವನ್ನು ನನಗೆ ಕೊಡಿ. ನಾನು ನಿಮಗೆ ದೇವರನ್ನು ತೋರಿಸುತ್ತೇನೆ" ನನ್ನ ಬರವಣಿಗೆಯಲ್ಲಿ ಸದಾ ಕಾಣುವ ಆಶಯ.

**ಹೊ.** : ಇತ್ತೀಚಿನ ದಿನಗಳಲ್ಲಿ ಕೆಲವು ಸಾಹಿತಿಗಳು ವ್ಯವಸ್ಥೆಯ ಭಾಗವಾಗಿ, ತಮ್ಮ ದನಿಯನ್ನು ಕಳೆದುಕೊಳ್ಳುತ್ತಿದ್ದಾರೆಂದು ನಮಗನ್ನಿಸುತ್ತಿದೆ. ಇದಕ್ಕೆ ನಿಮ್ಮ ಅಭಿಪ್ರಾಯವೇನು ?

**ಪ್ರ.** : ನಿಜವಾದ ಸಾಹಿತಿ ಹಾಗೆ ಮಾಡುವಂತಿಲ್ಲ. ದ್ವೇಷದಿಂದ, ಭಯದಿಂದ ಯಾವ ಸಾಹಿತ್ಯವೂ ಹುಟ್ಟುವುದಿಲ್ಲ. ಸತ್ಯವನ್ನು ಕುರಿತು ಹೇಳಲು ಧೈರ್ಯ ವಿರಬೇಕು. ಪರಸ್ಪರ ದ್ವೇಷಿಸುವವನು ಅದೆಂತಹ ಸಾಹಿತ್ಯ ಸೃಷ್ಟಿಸಲು ಸಾಧ್ಯ ? ನನ್ನ ದೃಷ್ಟಿಯಲ್ಲಿ ಸಾಹಿತಿಯಾದವನಿಗೆ ಜನರ ಬಗ್ಗೆ ಅನುಕಂಪವಿರಬೇಕು. ಯಾವಾಗಲೂ ಪ್ರೀತಿ ಮತ್ತು ನಿರ್ಭೀತಿ ಸಾಹಿತಿಯ ಮುಖ್ಯ ಗುಣವಾಗಿರಬೇಕು.

* * *

ಬಿಡುವಿಲ್ಲದೆ, ನಿರರ್ಗಳವಾಗಿ ಸುಮಾರು ಎರಡು ಗಂಟೆಗಳಿಗೂ ಹೆಚ್ಚು ಕಾಲ ಪ್ರತಿಭಾ ನಮ್ಮೊಡನೆ ಮಾತನಾಡಿದರು. ನಮ್ಮ ಮಾತು ಮುಗಿದಾಗ ರಾತ್ರಿ ಒಂಬತ್ತಾಗಿತ್ತು. ಅವರ ಹಸನ್ಮುಖಿ ಸೊಸೆ ಒರಿಸ್ಸಾದ ವಿಶೇಷ ತಿಂಡಿಗಳನ್ನು ನೀಡಿ ನಮಗೆ ಪ್ರೀತಿಯ ಆತಿಥ್ಯ ನೀಡಿದರು. ಮೊಮ್ಮಗ ಪುಟಾಣಿ ಲಿಪಿ ತಾನು ಅಜ್ಜಿಯೊಡನೆ ಕಳೆಯಬಹುದಾಗಿದ್ದ ಸಮಯವನ್ನು ನಮಗಾಗಿ ನೀಡಿ ನಮ್ಮ ಸಂದರ್ಶನಕ್ಕೆ ಸಹಕರಿಸಿದ. ಈ ಸುಂದರ ಸಂಜೆಯನ್ನು ಆಗು ಮಾಡಿದ ಪ್ರತಿಭಾ ರೇ ಅವರಿಗೆ ವಂದಿಸಿ ಅವರಿಂದ ಬೀಳ್ಕೊಂಡೆವು.

**ಡಾ॥ ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್
ಕೆಂಪೇಗೌಡ ನಗರ, ಗವೀಪುರಂ, ಬೆಂಗಳೂರು – ೫೬೦ ೦೧೯

ಬ್ರಿಟಿಷರಿಂದ ಸೋತು ರಾಜ್ಯ ಕಳೆದುಕೊಂಡು ಮರಳಿ ಸಿಂಹಾಸನ ಪಡೆದಿದ್ದರೂ ವಾಸ್ತವದಲ್ಲಿ ಅಧಿಕಾರವನ್ನೇನು ಹೊಂದಿರಲಿಲ್ಲ. ಬ್ರಿಟಿಷರ ಅಧೀನ ಆಡಳಿತಗಾರರಾಗಿ ಕಾರ್ಯ ನಿರ್ವಹಿಸಿದರು. ರಾಜರು ಮೊದಲಿನಂತೆ ಪೋಷಾಕು ತೊಟ್ಟು, ಸಿಂಹಾಸನದಲ್ಲಿ ಕೂರಲು ಬಿಟ್ಟರು. ಜನರಿಗೆ ಆಡಳಿತದಲ್ಲಾದ ಬದಲಾವಣೆಯು ಅಷ್ಟೇನು ಕಾಣಲಿಲ್ಲ. ಭಾರತೀಯ ರಾಜರು ಬ್ರಿಟಿಷರಿಗೆ ವಾರ್ಷಿಕ ಪೊಗದಿಯನ್ನು ಸಲ್ಲಿಸುತ್ತಾ ಉಳಿದ ರಾಜ್ಯ ಬೊಕ್ಕಸದಲ್ಲಿ ರಾಜ್ಯಭಾರವನ್ನು ಮಾಡಿದರು.



ಡಾ॥ ವಸು ಮಳಲಿ

**ಮಾ**ಧ್ಯಮಗಳು ಶ್ರೀಕಂಠದತ್ತ ನರಸಿಂಹರಾಜ ಒಡೆಯರ್ ಅವರ ಸಾವನ್ನು ಬಿಂಬಿಸಿದ ರೀತಿ ಮತ್ತೊಮ್ಮೆ ರಾಜತ್ವವನ್ನು ಚರ್ಚಿಸುವಂತಾಗಿದೆ. ಮೈಸೂರಿನ ಯದು ವಂಶದ ಕೊನೆಯ ಕುಡಿ ಕೊನೆಗೊಂಡಿತ್ತೆಂದು ಹಲುಬಿದ್ದು, ಉತ್ತರಾಧಿಕಾರತ್ವದ ವಿಚಾರವನ್ನು ಸಾರ್ವಜನಿಕವಾಗಿಸಿದ್ದು, ಮೈಸೂರಿನ ದಸರ ಪರಂಪರೆ ಕೊನೆಗೊಳ್ಳುವುದೇನೋ ಎಂಬ ಆತಂಕಗಳನ್ನು ಬಿಂಬಿಸಿದ್ದು ಇದೆಲ್ಲದರ ಹಿಂದಿನ ಮನ ಸ್ಥಿತಿಯನ್ನು ಕುರಿತು ಪ್ರಶ್ನಿಸುವಂತಾಗಿದೆ.

ಶ್ರೀಕಂಠದತ್ತ ನರಸಿಂಹರಾಜ ಒಡೆಯರ್ ಮೈಸೂರಿನ ಕೊನೆಯ ಮಹಾರಾಜ ಜಯಚಾಮರಾಜೇಂದ್ರ ಒಡೆಯರ್‌ರ ಮಗ ಎನ್ನುವುದು ನಿಜ. ಆದರೆ ಸ್ವಾತಂತ್ರ್ಯಾನಂತರದ ಭಾರತದಲ್ಲಿ ಹುಟ್ಟಿ ಬೆಳೆದವರು. ಅಧಿಕೃತವಾಗಿ ಯುವರಾಜ ಹಾಗೂ ಮಹಾರಾಜ ಪಟ್ಟವನ್ನು ಕಡೆಯದಾಗಿ ಏರಿದವರು ಜಯಚಾಮರಾಜೇಂದ್ರ ಒಡೆಯರ್. ಮೈಸೂರು ಸಂಸ್ಥಾನ ಭಾರತ ಒಕ್ಕೂಟವನ್ನು ಸೇರುವ ಮೂಲಕ ಆ ರಾಜತ್ವವೂ ಕೊನೆಗೊಂಡಿತು. ಅಲ್ಲಿಂದ ಮುಂದೆ ಭಾರತ ಸರ್ಕಾರ ರಾಜರುಗಳಿಗೆ ಪ್ರಿವಿ ಪರ್ಸ್‌ನ್ನು (ಸಹಾಯಧನ) ಕೊಡಲು ನಿರ್ಧರಿಸಿತು. ಇದು ರಾಜ್ಯಗಳ ವಿಲೀನದ ಹೊತ್ತಿನಲ್ಲಿ ನಡೆದ ಸಂಧಾನದ ಭಾಗವೂ ಆಗಿತ್ತು. ಹಾಗೆ ಪಡೆದ ಪ್ರಿವಿ ಪರ್ಸ್‌ನ್ನೂ ೧೯೭೧ರ ಸಂವಿಧಾನ ತಿದ್ದುಪಡಿಯೊಂದಿಗೆ ಕೊನೆಗೊಳಿಸಲಾಯಿತು.

೧೯೨೦ರ ದಶಕದಲ್ಲೇ 'ಚೇಂಬರ್‌ಆಫ್ ಪ್ರಿನ್ಸಸ್' ಆರಂಭವಾಗಿತ್ತು. ಅದು ಭಾರತದ ರಾಜರುಗಳ ಹಿತಾಸಕ್ತಿಯನ್ನು ಕಾಪಾಡಲು ರೂಪುಗೊಂಡಿತ್ತು. ಅದಕ್ಕಿಂತ ಮುಖ್ಯವಾಗಿ ಬ್ರಿಟಿಷ್ ಸರ್ಕಾರಕ್ಕೆ ಭಾರತೀಯ ರಾಜರುಗಳ ಜೊತೆ ಚರ್ಚಿಸಲು ಒಂದು ವೇದಿಕೆಯಾಗಿತ್ತು. ಆ ರಾಜರುಗಳಲ್ಲೇನಾದರೂ ಒಗ್ಗಟ್ಟಿದ್ದಿದ್ದರೆ ಭಾರತದ ಒಕ್ಕೂಟವನ್ನು ಸೇರುವುದು ಇನ್ನೂ ಕಠಿಣವಾಗುತ್ತಿತ್ತು. ಚೇಂಬರ್ಸ್ ಮಹತ್ವದನ್ನೇನು ಸಾಧಿಸಲಾಗಲಿಲ್ಲ.

ಮೈಸೂರು, ಟ್ರಾವಂಕೂರು ಭಾರತದ ಒಕ್ಕೂಟದಲ್ಲಿ ವಿಲೀನವಾಗುವುದನ್ನು ನಿಧಾನಿಸಿತ್ತು. ಜಯಚಾಮರಾಜೇಂದ್ರ ಒಡೆಯರ ಈ ನಿಲುವಿನ ಹಿಂದೆ ದಿವಾನ್ ಆರ್ಕಾಟ್ ರಾಮಸ್ವಾಮಿ ಮುದಲಿಯಾರರ ಸಲಹೆ ಮುಖ್ಯವಾಗಿತ್ತು. ಕೂಡಲೇ ಭಾರತ ಒಕ್ಕೂಟವನ್ನೂ ಸೇರುವಂತೆ ರಾಜರನ್ನು ಒತ್ತಾಯಿಸಿ ಮೈಸೂರು ಕಾಂಗ್ರೆಸ್ ಮೈಸೂರು ಚಲೋ ಹೋರಾಟವನ್ನು ಆರಂಭಿಸಿತು. ಇದಕ್ಕಾಗಿ ಸೆಪ್ಟೆಂಬರ್‌ನಲ್ಲಿ ಸಮಿತಿಯನ್ನು ರಚಿಸಿ ಚಳುವಳಿ ನಡೆಸಲಾಯಿತು. ಹಾಗಾಗಿ ಮೈಸೂರು ಸಂಸ್ಥಾನ ಜನಾಭಿಪ್ರಾಯವನ್ನು ಮನ್ನಿಸಲೇಬೇಕಾದ ಒತ್ತಡವೂ ನಿರ್ಮಾಣವಾಗಿತ್ತು.

ಭಾರತದ ಏಕೀಕರಣದ ಸಂದರ್ಭದಲ್ಲಿ ರಾಜ್ಯಗಳು ಸ್ವತಂತ್ರವಾಗಿ ಉಳಿಯುವ ಇಲ್ಲವೇ ಭಾರತದ ಒಕ್ಕೂಟವನ್ನು ಸೇರುವ ಅಥವಾ ಪಾಕಿಸ್ತಾನವನ್ನು ಸೇರುವ ಆಯ್ಕೆಯನ್ನು ಕೊಟ್ಟದ್ದು ಈ ಹಗರಣಕ್ಕೆ ಕಾರಣವಾಗಿತ್ತು. ಭಾರತದ ಸ್ವಾತಂತ್ರ್ಯಕ್ಕಾಗಿ ದೇಶದಾದ್ಯಂತ ಹೋರಾಟ ನಡೆದಿದ್ದರೂ ರಾಜ್ಯಗಳು ಪ್ರತ್ಯೇಕವಾಗಿ ಉಳಿಯುವ ಹವಣಿಕೆ ಆಶ್ಚರ್ಯವನ್ನುಂಟುಮಾಡುತ್ತದೆ.

ಹೀಗೆ ಬ್ರಿಟಿಷರಿಂದ ಸೋತು ರಾಜ್ಯ ಕಳೆದುಕೊಂಡು ಮರಳಿ ಸಿಂಹಾಸನ ಪಡೆದಿದ್ದರೂ ವಾಸ್ತವದಲ್ಲಿ ಅಧಿಕಾರವನ್ನೇನು ಹೊಂದಿರಲಿಲ್ಲ. ಬ್ರಿಟಿಷರ ಅಧೀನ ಆಡಳಿತಗಾರರಾಗಿ ಕಾರ್ಯ ನಿರ್ವಹಿಸಿದರು. ರಾಜರು ಮೊದಲಿನಂತೆ ಪೋಷಾಕು ತೊಟ್ಟು, ಸಿಂಹಾಸನದಲ್ಲಿ ಕೂರಲು ಬಿಟ್ಟರು. ಜನರಿಗೆ ಆಡಳಿತದಲ್ಲಾದ ಬದಲಾವಣೆಯು ಅಷ್ಟೇನು ಕಾಣಲಿಲ್ಲ. ಭಾರತೀಯ ರಾಜರು ಬ್ರಿಟಿಷರಿಗೆ ವಾರ್ಷಿಕ ಪೊಗದಿಯನ್ನು ಸಲ್ಲಿಸುತ್ತಾ ಉಳಿದ ರಾಜ್ಯ ಬೊಕ್ಕಸದಲ್ಲಿ ರಾಜ್ಯಭಾರವನ್ನು ಮಾಡಿದರು. ಆಶ್ಚರ್ಯದ

# ಮರುಕಳಿಸುವ ರಾಜತ್ವದ ಸಂಕೇತಗಳು



ವಿಷಯವೆಂದರೆ ೫೬೨ ಸಣ್ಣ ಪುಟ್ಟ ಅಥವಾ ದೊಡ್ಡ ರಾಜ್ಯಗಳಲ್ಲಿ ಯಾರೊಬ್ಬರೂ ಬ್ರಿಟಿಷ್ ವಿರುದ್ಧದ ಹೋರಾಟಕ್ಕೆ ಧುಮುಕಲಿಲ್ಲ, ಅಥವಾ ರಾಜತ್ವವನ್ನು ತೊರೆದು ನಿಲ್ಲಲಿಲ್ಲ. ಎಲ್ಲರೂ ಬ್ರಿಟಿಷರ ಸಂಧಾನ ನೀತಿಯಲ್ಲಿ ತಮ್ಮ ಬದುಕನ್ನು ಕಂಡುಕೊಂಡರು. ಹಾಗೆ ಕಡೆಯಗಳಿಗೆವರೆಗೆ ಹೋರಾಡಿದ ರಾಜ ಟಿಪ್ಪು. ೧೭೯೯ರಲ್ಲಿ ಆತನ ಮರಣಾನಂತರ ಒಬ್ಬೊಬ್ಬರಾಗಿ ೧೮೫೭ರವರೆಗೆ ಸೋತು ಸಹಾಯಕ ಸೈನ್ಯಪದ್ಧತಿಗೆ ಸಹಿ ಹಾಕುತ್ತಾ ಬಂದರು. ೧೮೫೭ರಲ್ಲಿ ಹೋರಾಡಿದ ರಾಜರು ಹಾಗೂ ಭೂ ಜಮೀನುದಾರರು ಮುಖ್ಯವಾಗಿ ದತ್ತುಮಕ್ಕಳಿಗೆ ಹಕ್ಕಿಲ್ಲವೆಂಬ ನೀತಿಯನ್ನು ವಿರೋಧಿಸಿ ಹೋರಾಟಕ್ಕಿಳಿದಿದ್ದರು. ಈ ಎಲ್ಲಾ ನೆಪಗಳ ಜೊತೆಗೆ ಕಡೆಯ ಕ್ಷಣದವರೆಗೆ ಹೋರಾಡಿದವರು ನಾನಾ ಸಾಹೇಬ್, ಝಾನ್ಸಿ ಲಕ್ಷ್ಮಿಬಾಯಿ ಹಾಗೂ ಈ ಹೋರಾಟದ ಕೇಂದ್ರಬಿಂದುವಾಗಿದ್ದ ಬಹದ್ದೂರ್ ಷಾ ಜಫರ್. ಇಲ್ಲಿಂದ ಮುಂದೆ ಸಹಾಯಕ ಸೈನ್ಯ ಪದ್ಧತಿಗೆ ಒಳಗಾದ ರಾಜರು ಬ್ರಿಟಿಷರಿಗೆ ನಿಷ್ಠಾವಂತರಾಗಿ ನಡೆದುಕೊಂಡರು. ಅದಕ್ಕೆ ಮೈಸೂರು ಮಹಾರಾಜರು ಹೊರತಾಗಿರಲಿಲ್ಲ.

ದೇಶೀಯ ಸಂಸ್ಥಾನಗಳ ಆಳ್ವಿಕೆಯ ಪ್ರದೇಶಗಳಲ್ಲಿ ನಡೆದ ಬ್ರಿಟಿಷ್ ವಿರೋಧಿ ಬಂಡಾಯಗಳು ಅಂದರೆ ರೈತ, ಬುಡಕಟ್ಟು ಅಥವಾ ರಾಷ್ಟ್ರೀಯ ಹೋರಾಟಗಳನ್ನು ತಡೆಯುವ ಶಕ್ತಿಗಳಾಗಿ ಈ ಸಂಸ್ಥಾನಕರು ರೂಪಿತವಾದರು. ಈ ರಾಜರು ಜನರಿಗೆ ಬ್ರಿಟಿಷ್ ಪ್ರತಿನಿಧಿಗಳಾಗಿ ಕಂಡುದರಿಂದ ಅವರ ಹೋರಾಟಗಳು ಬ್ರಿಟಿಷರ ವಿರುದ್ಧವೇ ಆದರೂ ಪ್ರಾತಿನಿಧಿಕವಾಗಿದ್ದ ಸ್ಥಳೀಯ ರಾಜರ ವಿರುದ್ಧ ನಡೆಯುತ್ತಿತ್ತು. ಹಾಗೆಯೇ ಜನರಿಂದ ವಸೂಲಿ ಮಾಡುತ್ತಿದ್ದ ತೆರಿಗೆಗೆ ರಾಜರು ಮತ್ತು ಬ್ರಿಟಿಷರು ಇಬ್ಬರೂ ಪಾಲುದಾರರಾಗಿದ್ದರು. ಆದ್ದರಿಂದಲೇ ಮೈಸೂರು ಕಾಂಗ್ರೆಸ್ ತನ್ನ ಹೋರಾಟದ ಸಮಯದಲ್ಲಿ ಮೈಸೂರಿನಂತಹ ದೇಶೀಯ ರಾಜ್ಯಗಳಲ್ಲಿ ಬದುಕುವ ಜನರು ಡಬ್ಬಲ್ ಸ್ಲೇವರಿಯಲ್ಲಿ ಬದುಕುತ್ತಾರೆಂದು ಭಾವಿಸುತ್ತಿದ್ದರು. ದೇಶೀಯ ರಾಜರು ಹಾಗೂ ಬ್ರಿಟಿಷರಿಬ್ಬರಿಗೂ ತಾವು ಗುಲಾಮರಾಗಿದ್ದೇವೆಂದೇ ತಿಳಿದಿದ್ದರು. ಪ್ರಜಾಪ್ರತಿನಿಧಿ ಸಭೆಗಳಲ್ಲಿ ಸಿಗುವ ಸಣ್ಣ ಅವಕಾಶದಲ್ಲಿ ಗಟ್ಟಿಯಾಗಿ ತಮ್ಮ ವಾದಗಳನ್ನು ಮಂಡಿಸಿದರು. ಜನಾಧಿಕಾರ, ಪ್ರಜಾಪ್ರತಿನಿಧಿ ಸಭೆ,





ಸಂವಿಧಾನ, ರಾಷ್ಟ್ರೀಯತೆ ಇವೆಲ್ಲಾ ಹೋರಾಟಗಾರರಿಗೆ ಪ್ರಚೋದನಕಾರಿಯಾದ ತತ್ವಗಳಾಗಿದ್ದವು. ಅವು ಅವರ ಕನಸು ಹಾಗೂ ಗುರಿಯೂ ಆಗಿದ್ದವು.

ಮೈಸೂರಿನ ಪರಿಸ್ಥಿತಿ ತ್ರಿಕೋನ ಸಂಘರ್ಷವನ್ನು ಹುಟ್ಟುಹಾಕಿತ್ತು. ಮೈಸೂರಿನ ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರಿಗೆ ರಾಷ್ಟ್ರೀಯ ಕಾಂಗ್ರೆಸ್ ಅಪಾರ ಗೌರವ ನೀಡುತ್ತಿತ್ತು. ಗಾಂಧೀಜಿ ನಾಲ್ವಡಿಯವರನ್ನು'ರಾಜರ್ಷಿ'ಎಂದು ಸಂಬೋಧಿಸುತ್ತಿದ್ದರು. ಮೈಸೂರಿನಲ್ಲಿ ನಡೆಯುತ್ತಿದ್ದ ಅಭಿವೃದ್ಧಿ ಕಾರ್ಯಗಳಿಂದಾಗಿ ಮೈಸೂರು'ಮಾದರಿ ಸಂಸ್ಥಾನ'ವೆಂದು ಕರೆಸಿಕೊಂಡಿತ್ತು. ಇದರ ನಡುವೆ ಮೈಸೂರು ಕಾಂಗ್ರೆಸ್ ಜವಾಬ್ದಾರಿ ಸರ್ಕಾರಕ್ಕಾಗಿ ನಡೆಸುವ ಹೋರಾಟದ ಸಂದರ್ಭದಲ್ಲಿ ರಾಷ್ಟ್ರೀಯ ಕಾಂಗ್ರೆಸ್ ತಟಸ್ಥ ಭಾವನೆಯನ್ನು ತಳೆಯುತ್ತಿತ್ತು. ರಾಜರ ಜೊತೆಗೆ ಸರ್ ಎಂ ವಿಶ್ವೇಶ್ವರಯ್ಯ ಮತ್ತು ಮಿರ್ಜಾ ಇಸ್ಮಾಯಿಲ್ ಅವರೊಂದಿಗೂ ಭಾವುಕ ಕಾರಣಗಳಿಗಾಗಿ ಗೌರವವೂ ಸೈದ್ಧಾಂತಿಕ ಕಾರಣಗಳಿಗಾಗಿ ವಿರೋಧವೂ ಕಾಣುತಿತ್ತು.

ಜಯಚಾಮರಾಜೇಂದ್ರ ಒಡೆಯರ್ ಪಟ್ಟಾಭಿಷಿಕ್ತರಾದ ಮೇಲೆ ಮೈಸೂರಿನ ವ್ಯವಹಾರಗಳಲ್ಲಿ ಬದಲಾವಣೆಗಳು ಕಂಡುಬಂದವು. ದಿವಾನ್ ಮಿರ್ಜಾ ಇಸ್ಮಾಯಿಲ್‌ರ ನಂತರ ಬಂದ ದಿವಾನರುಗಳು ಅಷ್ಟೇನು ಪ್ರಬಲರಾಗಿರಲಿಲ್ಲ. ಭಾರತದರಾಷ್ಟ್ರೀಯ ಹೋರಾಟ ಸ್ವಾತಂತ್ರ್ಯದ ಕಡೆ ಸಾಗಿದ್ದರಿಂದ ರಾಜರು ತಮ್ಮ ಅಸ್ತಿತ್ವದ ಬಗೆಗೆ ಚಿಂತಿಸತೊಡಗಿದ್ದರು.

ರಾಜತ್ವದಿಂದ ಹೊರಬಂದು ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಜನಸಾಮಾನ್ಯರಾಗುವುದು ಅಷ್ಟೇನು ಸುಲಭದ ವಿಚಾರವಾಗಿರಲಿಲ್ಲ. ರಾಜ, ರಾಜ್ಯ, ಸಿಂಹಾಸನ, ಅಧೀನದಲ್ಲಿ ಬದುಕುವ ಪ್ರಜೆಗಳು ಹೀಗೆ ಬದುಕುವ ರಾಜಕೀಯ ವ್ಯವಸ್ಥೆಗೆ ಮೂರು ಸಾವಿರ ವರ್ಷಗಳ ಚರಿತ್ರೆಯೇ ಇದೆ. ಹಾಗಾಗಿ ಅದನ್ನು ಉರುಳಿಸುವುದು ಅಷ್ಟು ಸುಲಭದ ವಿಚಾರವಾಗಿರಲಿಲ್ಲ. ಸ್ವಾತಂತ್ರ್ಯ, ವ್ಯಕ್ತಿಸ್ವಾತಂತ್ರ್ಯದ ಕಲ್ಪನೆಗಳು ಯುಗದ ಪ್ರಜ್ಞೆಯಾಗಿ ಜಗದ ಪ್ರಜ್ಞೆಯಾಗಿ ಭಾರತೀಯರಿಗೂ ಹರಿದುಬಂದಿತ್ತು. ಆದ್ದರಿಂದ ರಾಜತ್ವದ ವಿರೋಧದ ಧೋರಣೆ ಆಧುನಿಕವಾಗಿ, ಇಲ್ಲವೆ ಅಸಹಜವಾಗಿ ಕಂಡಿದ್ದೂ ಇದೆ. ರಾಜ ಸಂಕೇತಗಳಿಗೆ ಗೌರವ ಸಲ್ಲಿಸುವುದು ಭಾರತೀಯನ ರಕ್ತದಲ್ಲಿ ಸೇರಿಹೋದಂತೆ ಕಾಣುತ್ತದೆ. ಇದನ್ನು ಅರ್ಥಮಾಡಿಕೊಂಡ ಲಾರ್ಡ್‌ಲಿಟ್ಟನ್ ಭಾರತೀಯರ ಮನದಾಳದಲ್ಲಿ ರಾಜರು ಭದ್ರವಾಗಿ ನೆಲೆಯೂರಿರುವುದರಿಂದ ಅವರನ್ನು ತೆಗೆದುಹಾಕುವುದು ಅಷ್ಟೇನು ಕ್ಷೇಮವಲ್ಲವೆಂದು ಮಂಡಿಸಿದನು.

ರಾಜಾಡಳಿತ ಮುಗಿದು ೬೨ ವರ್ಷಗಳೇ ಕಳೆದಿದ್ದರೂ ಬೂದಿಯೊಳಗೆ ಅಳಿದುಳಿದ ಕೆಂಡದ ಹಾಗೆ ಆಗಾಗ್ಗೆ ಹೊಗೆಯಾಡುತ್ತದೆ. ಮಾಧ್ಯಮಗಳು ತೋರುವ ಅಸಹಜವಾದ ಗೌರವ, ಸರ್ಕಾರ ತೋರುವ ಅತಿಯಾದ ಮರ್ಯಾದೆ ಇವೆಲ್ಲ ಇಂತಹ ಚಾರಿತ್ರಿಕ ಪ್ರಶ್ನೆಗಳನ್ನು ಮತ್ತೆ ಮತ್ತೆ ಕೇಳುವಂತೆ ಮಾಡುತ್ತದೆ.

ಮೈಸೂರು ಈ ಹಿಂದೆಯೂ ಅತಿರೇಕದ ವಿಧೇಯತೆಯನ್ನು ಆಗಾಗ್ಗೆ ತೋರಿಸಿದೆ. ಕರ್ನಾಟಕ ಏಕೀಕರಣದ ಸಂದರ್ಭದಲ್ಲಿ ಮೈಸೂರು ಪ್ರತ್ಯೇಕವಾಗುವ ಕೂಗು ಕೇಳಿ ಬಂದಿತ್ತು. ಉತ್ತರ ಕರ್ನಾಟಕ ಪ್ರಾಂತ್ಯವನ್ನು ಸೇರುವುದರಿಂದ ತಮ್ಮ ಬೆಳವಣಿಗೆ ಎಲ್ಲಿ ಹಾಳಾಗುವುದೋ ಎಂದು ಅನುಮಾನಿಸಿದ್ದರು. ಅದರ ಹಿಂದೆ ಇದ್ದ ವಾಸ್ತವದ ಕಾರಣ ದೇಹಕ್ಕಂಟಿದ ರಾಜತ್ವದ ವಾಸನೆಯೇ ಆಗಿತ್ತು. ಹಾಗಾಗಿ

ಜಯಚಾಮರಾಜೇಂದ್ರ ಒಡೆಯರ್‌ರನ್ನು ರಾಜಪ್ರಮುಖರಾಗಿ (ಗೌರ್‍ನರ್) ನೇಮಕ ಮಾಡುವ ಮೂಲಕ ರಾಜರೇ ಇನ್ನೂ ಇರುವಂತೆ ನೋಡಿಕೊಳ್ಳಲಾಯಿತು. ಆ ಸ್ಥಾನವನ್ನು 'ರಾಜ ಪ್ರಮುಖ್'ಎಂದು ಕರೆಯುವಾಗಲೂ ಅರಸೊತ್ತಿಗೆಯನ್ನು ಏಕಾಏಕಿ ತೆಗೆದುಹಾಕಲಾಗದ ಸೌಜನ್ಯದ ಮನಸ್ಸು ಕೆಲಸ ಮಾಡಿತ್ತು.

ರಾಜತ್ವದ ಸಂಕೇತಗಳನ್ನು ಸದಾಕಾಲಕ್ಕೂ ವಿರೋಧಿಸುತ್ತಾ ಬಂದವರು ಕುವೆಂಪು. ರಾಜರ ಆದೇಶಕ್ಕೆ ಮಣಿಯಬೇಕಾದ ಸಂದರ್ಭ ಒದಗಿಬಂದಾಗ ಕುವೆಂಪು ಅವರು ಹೀಗೆ ಬರೆದರು.

*'ವಸಂತವನದಲಿ ಹಾಡುವ ಕೋಗಿಲೆ*
*ರಾಜನ ಬಿರುದನು ಬಯಸುವುದೇನು'*

ರಾಜತ್ವದ ಸಂಕೇತಗಳನ್ನು ಉಳಿಸುವ ಈ ಮನಸ್ಸು ಎಲ್ಲಾ ದೇಶಗಳಲ್ಲಿ ಒಂದೇ ರೀತಿಯಾಗಿಲ್ಲ. ಇಂಗ್ಲೆಂಡಿನಲ್ಲಿ ಪಾರ್ಲಿಯಮೆಂಟ್, ಪ್ರೈಂಮಿನಿಸ್ಟರ್, ಹೌಸ್ ಆಫ್ ಕಾಮನ್ಸ ಎಲ್ಲಾ ಇದ್ದಾಗಿಯೂ ವಂಶಪಾರಂಪರ್ಯವಾದ ರಾಜರಾಣಿಯನ್ನು ಉಳಿಸಿಕೊಂಡಿರುವುದೇ ಅತಿರೇಕಕ್ಕೆ ಒಂದು ಉದಾಹರಣೆ ಆಗಿದೆ. ಭಾರತದ ಅಧ್ಯಕ್ಷನಿಗಿಂತ ಬ್ರಿಟನ್ನಿನ ರಾಣಿ ಹೆಚ್ಚು ಪ್ರಬಲವಾಗಿ ಇಂಗ್ಲೆಂಡಿನ ಒಟ್ಟು ರಾಜಕಾರಣದ ಹಿನ್ನೆಲೆಯಲ್ಲಿ ರಾಜಮನೆತನದ ಅಭಿಪ್ರಾಯ ಕೆಲಸ ಮಾಡುತ್ತದೆ. ರಾಜಮನೆತನ ಮಾತ್ರವಲ್ಲ ಚರ್ಚ್‌ನ ಕೈವಾಡವೂ ಸದಾಕಾಲಕ್ಕೂ ಇದೆ. ಆದರೆ ಅದನ್ನು ಆದರ್ಶವೆಂದು ಬೇರೆ ರಾಷ್ಟ್ರಗಳು ಪರಿಗಣಿಸದೆ ಇರುವುದು ಗಮನೀಯವಾದುದು.

ರಾಜತ್ವವನ್ನು ವಿರೋಧಿಸಿ ಹದಿನೆಂಟನೆ ಶತಮಾನದ ಫ್ರಾನ್ಸ್‌ನಲ್ಲಿ ಹೋರಾಟ ಆಂಭವಾದಾಗ ಅದು ತೀವ್ರ ಸ್ವರೂಪದ್ದಾಗಿತ್ತು. ಅವರಿಗೆ ರಾಜತ್ವದ ಸಂಕೇತಗಳಿರಲಿ ರಾಜರನ್ನೇ ಉಳಿಸಲು ಸಿದ್ಧರಿರಲಿಲ್ಲ. ಹಾಗಾಗಿ ಪ್ರಜಾಪ್ರಭುತ್ವದ ಹೋರಾಟಕ್ಕೆ ವಿರೋಧವಾಗಿದ್ದ ಎಲ್ಲರನ್ನೂ ಗಿಲೊಟಿನ್ ಯಂತ್ರಕ್ಕೆ ಬಲಿಕೊಟ್ಟರು. ರಾಜರು ಸರ್ವಾಧಿಕಾರಿಗಳಾಗಿದ್ದರಿಂದ ಹೋರಾಟಗಾರರ ವಿರೋಧ ಸರ್ವಾಧಿಕಾರದ ವಿರೋಧವಾಗಿರುತ್ತಿತ್ತು. ರಷ್ಯಾದಲ್ಲಿ ಕಮ್ಯುನಿಸ್ಟ ಕ್ರಾಂತಿ ಆರಂಭವಾದಾಗ ಝಾರ್‌ರನ್ನು ಇಳಿಸಿದರು. ಚೀನಾದಲ್ಲೂ ಎರಡನೆ ಮಹಾಯುದ್ಧದ ನಂತರ ರಾಜತ್ವವನ್ನು ಕೊನೆಗೊಳಿಸಿದ್ದಲ್ಲದೆ ಕಡೆಯ ಚಕ್ರವರ್ತಿ ಜನಸಾಮಾನ್ಯನ ಹಾಗೆ ಬದುಕನ್ನು ಸಾಗಿಸಬೇಕಾಯಿತು. ಈ ಹೋರಾಟ ಇಪ್ಪತ್ತೊಂದನೆ ಶತಮಾನದಲ್ಲೂ ಮುಂದುವರಿದೇ ಇದೆ. ನೇಪಾಳದ ರಾಜತ್ವ ಕೊನೆಗೊಳ್ಳುವಾಗ ಹಲವು ದುರಂತ ತಿರುವುಗಳನ್ನು ಪಡೆದುಕೊಂಡಿತು.

ರಾಜಮನೆತನಗಳು ಅಧಿಕಾರವನ್ನು ಕಳೆದುಕೊಳ್ಳುವುದಕ್ಕಿಂತ ಆಸ್ತಿಯನ್ನು




# ನನ್ನ ಬಸವನಿಗೊಂದು ಪ್ರಶ್ನೆ

**ಗು**ರುತು ಬಿಟ್ಟು
ಗುರುತಿಲ್ಲ ಹಾದಿ ತುಳಿದವನೆ
ಗುರುತುಗಳ ಯಾಕೆ ಬಿಟ್ಟುಹೋದೆ ?

ಹಂಗು ಹರಿದ ಹಾದಿಯಲಿ
ನಾ ಕಾಡ ಮನೆಯಲ್ಲಿದ್ದೆ
ತಪ್ಪಲದ ಗೆರೆಯೋ
ಊರ ಬೀದಿಯ ಕೇರಿಯೋ
ಮುಟ್ಟಿಸಿಕೊಳ್ಳದೇ ನಾನು
ಪವಿತ್ರವಾಗಿಯೇ ಇದ್ದೆ
ಹೇಳು ಬಸವಾ
ನನ್ನ ಯಾಕೆ ಮುಟ್ಟಿದೆ ?

ನನ್ನಂಥವರ ಸಂಕಟಗಳು
ನಿನ್ನ ಆವೇಶದ ಕ್ರಾಂತಿಯಲಿ
ಅರ್ಥವಾಗಲಿಲ್ಲ
ನಮ್ಮದೇ ಒಂದು
ಜನಾಂಗವಿದೆ
ಎಲ್ಲರ ಹಣೆಯ ಮೇಲೆಯೂ
ಪ್ರಶ್ನಾರ್ಥಕ ಚಿಹ್ನೆಗಳಿವೆ
ಕಂಡವರ ಪ್ರಶ್ನೆಗಳಿವೆ
ಏನು ಉತ್ತರ ಹೇಳೋಣ ?

ನೀ ಕಟ್ಟ ಬಯಸಿದ
ಸಮ ಸಮಾಜದ ಕನಸಿನಲಿ
ನಮಗಿನ್ನೂ ಸ್ಪಷ್ಟ ರೂಪ ಸಿಕ್ಕಿಲ್ಲ
ಹಣೆಯ ಮೇಲಿನ ವಿಭೂತಿ
ಕೊರಳಲ್ಲಿಯ ಲಿಂಗ
ಭಾರವಾಗಿದೆ
ಕಿತ್ತು ಬೀಸಾಕಬೇಕೆಂದರೆ
ಸಂಗಮದ ಹೊಳೆಯಲಿ ನೀರಿಲ್ಲ
ಅಲ್ಲಿ ಕೂಡಲ ಸಂಗಮನೂ ಇಲ್ಲ.

ನೀನಿಟ್ಟ ಹೆಜ್ಜೆಯ ಬಗ್ಗೆ
ಹೆಮ್ಮೆ ಇದೆ
ಅಷ್ಟೇ ಸಂಕಟವೂ ಇದೆ

ನನ್ನ ಹೆಗಲ ಮೇಲಿಟ್ಟ ನಿನ್ನ
ಕೈ ಭಾರವಾಗಿದೆ
ಚಹರೆಗಳನ್ನು ಅಳಿಸುತ್ತಲೇ
ಇದ್ದೇನೆ ಮತ್ತೆ ಮತ್ತೆ
ಮುತ್ತಿಕೊಳ್ಳುತ್ತಲೇ ಇವೆ
ನನ್ನ ನಾ ಹೇಗೆ ಬಿಡಿಸಿಕೊಳ್ಳಲಿ
ಉಳಿದು ಹೋದ ಪ್ರಶ್ನೆಗಳಿವೆ
ಉತ್ತರ ಕೊಡಲು
ಇಲ್ಲಿ ಯಾರೂ ಇಲ್ಲ

ಮಾಚಿದೇವ ಹೇಳಿದಂತೆ
'ನೀ ಮಾಡಿ ಕೆಟ್ಟೆ ಬಸವಣ್ಣ'
ಎಲ್ಲರೂ ಮಾಡುವದು
ಅರುಹಿನ ಕುರುಹಾಗುತ್ತದೆ
ಬಿದ್ದ ಬೀಜಗಳು
ಮತ್ತೆ ಹುಟ್ಟುತ್ತಲೇ ಇರುತ್ತವೆ



**ಬಸವರಾಜ ಹೂಗಾರ**
ಕೇರಾಫ್ : ರಮಾನಂದ ಜೋಪಡೆಕರ, ವಿಜಯನಗರ
ಕಾರವಾರ (ಉ.ಕ.) ಪಿನ್ ಕೋಡ್ – ೫೮೧ ೩೦೧

ಕಳೆದುಕೊಳ್ಳುವ ವಿಷಯದಲ್ಲಿ ಹೆಚ್ಚು ಆತಂಕ ಕಾಣುತ್ತದೆ. ಮೈಸೂರು ಅರಮನೆಯ ವಿಷಯದಲ್ಲಿ ಇನ್ನೂ ಬಗೆಹರಿಯದ ವ್ಯಾಜ್ಯಗಳಿವೆ. ರಾಜಾಡಳಿತ ಕೊನೆಗೊಳ್ಳುವ ಸೂಚನೆ ಸಿಕ್ಕಾಗಲೇ ರಾಜಮನೆತನದ ಸಮೀಪವರ್ತಿಗಳು 'ಬೆಂಕಿ ಹಚ್ಚಿದ ಮನೆಯ ಗಳ ಹಿರಿಯುವ ಕೆಲಸ'ದಲ್ಲಿ ತೊಡಗಿದ್ದರು. ಮೈಸೂರು ಬೆಂಗಳೂರಿನ ಸುತ್ತಮುತ್ತ ಹೀಗೆ ಹರಿದು ಹಂಚಿಹೋದ ಆಸ್ತಿಯ ಬಗ್ಗೆ ಸಾಕಷ್ಟು ಮಾಹಿತಿ, ವದಂತಿಗಳು ಜನರ ಬಾಯಲ್ಲಿವೆ. ಜಯಚಾಮರಾಜೇಂದ್ರ ಒಡೆಯರ್ ಅವರ ಸಾವಿನ ಹಿಂದೆ ಇಂತಹ ಹಲವು ಪುಕಾರುಗಳಿವೆ. ಅದು ಸಹಜವಾದ ಸಾವಾಗಿರಲಿಲ್ಲ. ಆಸ್ತಿಗಾಗಿ ತಂದೆಯ ವಿರುದ್ಧ ದಾವಾ ಹೂಡಿದ್ದು, ಅದರಿಂದ ಮನ ನೊಂದ ಜಯಚಾಮರಾಜ ಒಡೆಯರ್ ಬದುಕನ್ನು ಕೊನೆಗೊಳಿಸಿಕೊಂಡರು. ಇಲ್ಲಿ ಇದ್ದ ಪ್ರಶ್ನೆ ಜನಸಾಮಾನ್ಯನ ಹಾಗೆ ಕಟಕಟೆಯನ್ನು ಹತ್ತುವುದು; ಅವರಿಗದು ಸಾಧ್ಯವಿರಲಿಲ್ಲ.

ಪ್ರಜಾಪ್ರಭುತ್ವದ ಅಡಿಯಲ್ಲಿ ಜನಸಾಮಾನ್ಯನಾಗುವುದನ್ನು ಒಪ್ಪಿಕೊಳ್ಳಲಾಗದ ಮನಸ್ಥಿತಿ ಹೆಜ್ಜೆ ಹೆಜ್ಜೆಗೂ ಕಾಣುತ್ತದೆ. ಸ್ವತಂತ್ರ ಭಾರತದಲ್ಲಿ ರಾಜರಿಗೆ ಬಿಟ್ಟುಕೊಡಬೇಕಾದ ಆಸ್ತಿಯ ವಿಷಯದಲ್ಲಿ ಭಾರತ ಸರ್ಕಾರ ಬಹು ಉದಾರವಾಗಿಯೇ ನಡೆದುಕೊಂಡಿದೆ. ಇದ್ದಕ್ಕಿದ್ದಂತೆ ಜನಸಾಮಾನ್ಯನಾಗಿ ಬದುಕುವ ಸ್ಥಿತಿ ತಲೆದೋರದಂತೆ ರಾಜರಿಗೆ ಸ್ವಾತಂತ್ರ್ಯಾನಂತರವೂ 'ಪ್ರಿವಿ ಪರ್ಸ್'ನ್ನು ನಿಗದಿಪಡಿಸಿತು. ಹಲವು ಅರಮನೆಗಳನ್ನು ಬಂಗಲೆಗಳನ್ನು ಉಳುವ ಭೂಮಿಯನ್ನು ರಾಜವಂಶದ ಆಸ್ತಿಯಾಗಿ ಪರಿಗಣಿಸಿತು. ಆಸ್ತಿಯ ಮೇಲೆ ನಿರ್ಬಂಧವನ್ನು ಹೇರಿದಾಗ ಅದನ್ನೆಲ್ಲಾ ಉಳಿಸಿಕೊಳ್ಳುವುದು ರಾಜವಂಶಸ್ಥರಿಗೆ ಸವಾಲೇ ಆಗಿತ್ತು. ಇದು ಮೈಸೂರಿನಲ್ಲಿ ಮಾತ್ರವಲ್ಲ, ಭಾರತಾದ್ಯಂತ ಇದ್ದ ಐನೂರ ಅರವತ್ತೆರಡು ರಾಜಮನೆತನಗಳೂ ಒಂದಲ್ಲಾ ಒಂದು ರೀತಿಯಲ್ಲಿ ಆಸ್ತಿಗಾಗಿ ಹೊಡೆದಾಡಿವೆ, ಅದರಲ್ಲೂ ಮೈಸೂರಿನಂತಹ ವಿಶಾಲ ರಾಜ್ಯಗಳಿಂದ ಬಂದಂತಹ ರಾಜ ಮನೆತನದವರಿಗೆ ಸಂಪತ್ತು ಮತ್ತಷ್ಟು ಕಾಡಿಸಿದೆ. ೧೯೭೧ರಲ್ಲಿ ಪ್ರಿವಿ ಪರ್ಸ್‌ನ್ನು ತೆಗೆದು ಹಾಕಿದಾಗ ರಾಜಮನೆತನಗಳಿಂದ ಬಂದ ಕಾರಣಕ್ಕೆ ಕೊಟ್ಟ ರಿಯಾಯಿತಿಗಳೂ ಕೊನೆಗೊಂಡಂತಾಗಿತ್ತು. ಮಾಧ್ಯಮಗಳು ರಂಪ ಮಾಡಿದಂತೆ 'ಶ್ರೀಕಂಠದತ್ತನರಸಿಂಹರಾಜ ಒಡೆಯರ ಸಾವಿನಿಂದ ರಾಜವಂಶದ ಕೊನೆ ಕುಡಿ' ಕೊನೆಗೊಂಡಿರಲಿಲ್ಲ. ರಾಜವಂಶದ ಯಾವುದೇ ರೀತಿಯ ಹಕ್ಕುದಾರಿಕೆ ಪ್ರಿವಿ ಪರ್ಸ್‌ನೊಂದಿಗೆ ಕೊನೆಗೊಂಡಿತ್ತು. ದಸರಾ ಹಬ್ಬದಲ್ಲಿ ನಡೆಸುತ್ತಿದ್ದ ಖಾಸಗಿ ದರ್ಬಾರ್, ದಸರಾ ಮೆರವಣಿಗೆ ಇವುಗಳ ಮೂಲಕ ರಾಜತ್ವದ ಸಂಕೇತದ ಪಳೆಯುಳಿಕೆಗಳನ್ನು ಉಳಿಸಿಕೊಂಡು ಬಂದಂತಾಗಿದೆ. ರಾಜತ್ವವನ್ನು ನಿಷೇಧಿಸಿದ ನಂತರ ಅದರಿಂದ ಹರಿದು ಬಂದ ಸಂಸ್ಕೃತಿಯನ್ನೂ ಸಹಜವಾಗಿ ಕೊನೆಗೊಳಿಸಬೇಕಾಗುತ್ತದೆ. ಅದಕ್ಕೆ ಬದಲಾಗಿ ಅದಕ್ಕೆ ಸಂಬಂಧಿಸಿದ ಆಚರಣೆಗಳನ್ನು 'ಸಂಸ್ಕೃತಿ, ಪರಂಪರೆ' ಹೆಸರಿನ ನೆಪದಲ್ಲಿ ಉಳಿಸಿಕೊಳ್ಳುವ ಪ್ರಯತ್ನ ವಿಷಾದನೀಯವಾದುದು.



ಹಬ್ಬದ ನೆಪದಲ್ಲಿ ಖಾಸಗಿ ದರ್ಬಾರನ್ನು ನಡೆಸುವುದು ಸೂಕ್ಷ್ಮವಾಗಿ ಗಮನಿಸಿದರೆ ಸಂವಿಧಾನಬಾಹಿರವಾದ ನಡೆಯಾಗುತ್ತದೆ. ರಾಜರ ಪೋಷಾಕಿನಲ್ಲಿ ಸಿಂಹಾಸನದ ಮೇಲೆ ಕೂರುವುದು, ರಾಜ ಲಾಂಛನಗಳನ್ನು ಬಳಸುವುದು ಉಳಿಸಿಕೊಂಡು ಬರಬೇಕಾದ ಆಚರಣೆಗಳೇನೂ ಆಗಿರಲಿಲ್ಲ. ಪ್ರಜಾಪ್ರಭುತ್ವ ಆತಂಕದಲ್ಲಿದ್ದ ಕಾಲಕ್ಕೆ ಈ ಆಚರಣೆಗಳು ಅಪಾಯದ ವಿಚಾರಗಳೇ ಆಗುತ್ತವೆ.

ಇನ್ನು ದಸರಾ ಮೆರವಣಿಗೆಯ ವಿಚಾರಕ್ಕೆ ಬಂದರೆ, ಸ್ವಾತಂತ್ರ್ಯಾನಂತರವೂ ಸಂಭ್ರಮದಿಂದ ಆಚರಿಸುತ್ತಾ ಬಂದಿದ್ದೇವೆ. ವಿಜಯನಗರದ ರಾಜರು ತಾವು ಗೆದ್ದ ಯುದ್ಧಗಳ ವಿಜಯದ ಸಂಕೇತವಾಗಿ ಮೆರವಣಿಗೆಯನ್ನು ಮಾಡುತ್ತಿದ್ದರು. ಯುದ್ಧದಲ್ಲಿ ತಂದ ಸೂರೆಯನ್ನು ಮೆರವಣಿಗೆಯಲ್ಲಿ ಹೊತ್ತು ಸಾಗುತ್ತಿದ್ದರು. ಅವು ವಿಜಯದ ಪತಾಕೆಗಳಾಗುತ್ತಿದ್ದವು. ಕೊಂಬು ಕಹಳೆ ಸೈನ್ಯ ಶಸ್ತ್ರಾಸ್ತ್ರಗಳಿಂದ ಶಕ್ತಿಯ ಪ್ರದರ್ಶನವಾಗುತ್ತಿತ್ತು. ದೇವರು, ಪೂಜೆ, ಕಲೆ ಇವು ಹಬ್ಬದ ಭಾಗವಾಗುತ್ತಿತ್ತು.

ವಿಜಯನಗರ ಸಾಮ್ರಾಟರ ಕೆಳಗೆ ಸಣ್ಣ ಪಾಳೆಪಟ್ಟಾಗಿದ್ದ ಮೈಸೂರು, ವಿಜಯನಗರದ ಪತನಾ ನಂತರ ದಸರಾ ಆಚರಣೆಯನ್ನು ಕೈಗೆತ್ತಿಕೊಂಡರು. ಮೈಸೂರು ಒಡೆಯರು ಅಧಿಕಾರ ಕಳೆದುಕೊಂಡು ಹೈದರ್ ಆಳ್ವಿಕೆ ನಡೆಸುತ್ತಿದ್ದ ಕಾಲಕ್ಕೂ ಈ ಮೆರವಣಿಗೆಗಳಲ್ಲಿ ಮೈಸೂರು ಅರಸರನ್ನೇ ಕರೆದೊಯ್ಯಲಾಯಿತು. ಹೈದರ್ ಅಧಿಕಾರಕ್ಕೆ ಬಂದಾಗಿನಿಂದ ಟಿಪ್ಪುವಿನ ಮರಣದವರೆಗೆ ಯುದ್ಧಗಳನ್ನು ಗೆದ್ದು ರಾಜ್ಯವನ್ನು ವಿಸ್ತರಿಸಿದಾಗ ಅರಸರು ನೆಪ ಮಾತ್ರದವರಾಗಿದ್ದರು. ಅನಂತರ ಬ್ರಿಟಿಷರ ಅಧೀನದಲ್ಲಿ ಆಳ್ವಿಕೆಗೆ ಬಂದವರು ಮೈಸೂರು ಒಡೆಯರು. ಹಾಗಾಗಿ ಸುಮಾರು ಇನ್ನೂರು ವರ್ಷಗಳ ಕಾಲ ಅವರು ಯಾವ ಯುದ್ಧವನ್ನೂ ಮಾಡಲಿಲ್ಲ. ಹಾಗಾದರೆ, ಮೆರವಣಿಗೆಗಳಲ್ಲಿ ಕೊಂಡೊಯ್ಯುವ ತುಪಾಕಿಗಳಾಗಲಿ, ಯುದ್ಧದ ವಾದ್ಯಗಳಾಗಲಿ, ವಿಜಯ ಪತಾಕೆಗಳಾಗಲಿ ಯಾವುದರ ಸಂಕೇತ? ಬ್ರಿಟಿಷರ ಗೆಲುವಿನ ಸಂಕೇತವೆ ಅಥವಾ ಪಾಂಡವರ ಗೆಲುವಿನ ಸೂಚಕವೆ.

ರಾಜತ್ವದ ಸಂಕೇತಗಳನ್ನು ತೀವ್ರವಾಗಿ ವಿರೋಧಿಸಿದವರಲ್ಲಿ ಕೆಂಗಲ್ ಹನುಮಂತಯ್ಯನವರು ಪ್ರಮುಖರು. ಸ್ವಾತಂತ್ರ್ಯಾನಂತರ ದಸರಾ ಮೆರವಣಿಗೆಯ ಅಂಬಾರಿಯಲ್ಲಿ ರಾಜರು ಹೋಗುವುದನ್ನು ಅವರು ವಿರೋಧಿಸಿದ್ದರು. ಅದರ ಬದಲಿಗೆ ಪ್ರಜಾಪ್ರತಿನಿಧಿಗಳು ಹೋಗಬೇಕೆಂಬುದು ಅವರ ನಿಲುವಾಗಿತ್ತು. ಮುಂದೆ, ಚಾಮುಂಡೇಶ್ವರಿಯ ಭಾವಚಿತ್ರವನ್ನು ಹೊತ್ತು ಸಾಗುವುದು ಆರಂಭವಾಯಿತು. ಇವೆಲ್ಲಾ ಕಾಲಕಾಲಕ್ಕಾದ ಬದಲಾವಣೆಗಳ ಸೂಚನೆಗಳಾಗಿವೆ. ಎಚ್ಚರ ತಪ್ಪಿದರೆ ಸಂಸ್ಕೃತಿ ಪರಂಪರೆಯ ಹೆಸರಿನ ಆಚರಣೆಗಳು ಮೂಲಭೂತವಾದವಾಗಿ ಹೆಡೆ ಎತ್ತುತ್ತವೆ.

ಭಾರತದ ಜಾತಿ ವ್ಯವಸ್ಥೆಯಲ್ಲಿ ಮೈಸೂರು ಒಡೆಯರ್ ಆಳುವ ಮನೆತನವಾದುದರಿಂದ ಅರಸು ಎಂಬ ಜಾತಿ ಸಮುದಾಯ ಹುಟ್ಟಿ ಬಂದಿದೆ. ಒಡೆಯರ್ ಆಳ್ವಿಕೆ ಕಾಲಕ್ಕೆ ಈ ಸಮುದಾಯದ ಕುಟುಂಬಗಳಿಗೆಲ್ಲಾ ಧನ ಸಹಾಯವನ್ನೂ ವಿಶೇಷ ಸಂದರ್ಭಗಳಲ್ಲಿ ಗೌರವವನ್ನೂ ನೀಡಲಾಗುತ್ತಿತ್ತು. ಸಮುದಾಯದ ಶಿಕ್ಷಣಕ್ಕಾಗಿ ಅರಸು ಬೋರ್ಡಿಂಗ್ ಸ್ಕೂಲ್ ತೆರೆಯಲಾಯಿತು. ವೀರಶೈವರು ಹಾಗೂ ಉತ್ತರ ಭಾರತದ ಕ್ಷತ್ರಿಯರ ಜೊತೆಗೆ ವೈವಾಹಿಕ ಸಂಬಂಧಗಳನ್ನು ಹೊಂದಿದ್ದರೂ ಅರಸು ಒಂದು ಅಲ್ಪಸಂಖ್ಯಾತ ಜಾತಿಯಾಗಿ ರೂಪಿತವಾಗಿದೆ. ಈ ನಿಟ್ಟಿನಲ್ಲಿ ಯೋಚಿಸಿದಾಗ ಶ್ರೀಕಂಠದತ್ತ ನರಸಿಂಹರಾಜ ಒಡೆಯರ್‌ರವರ ಸಾವು ಸಮುದಾಯದ ರಾಜಕೀಯ ಪ್ರತಿನಿಧಿಯೊಬ್ಬರ ಕೊರತೆಯನ್ನು ಹುಟ್ಟುಹಾಕಿದೆಯೇ ಹೊರತು, ಮಾಧ್ಯಮಗಳು ಬಿಂಬಿಸಿದಂತೆ ನಾಡಿನ ರಾಜಕೀಯ ಅಥವಾ ಸಾಂಸ್ಕೃತಿಕ ಪ್ರತಿನಿಧಿಯೊಬ್ಬನ ಕೊರತೆಯನ್ನೇನೂ ಹುಟ್ಟುಹಾಕುವುದಿಲ್ಲ.


ಡಾ|| ವಸು ಮಳಲಿ

ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಜ್ಞಾನಭಾರತಿ, ಬೆಂಗಳೂರು ವಿ.ವಿ., ಬೆಂಗಳೂರು-೫೬

# OUR ADVERTISERS

## OUR ADVERTISERS






Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil



# ಹೊಸತು

ನೆಮ್ಮದಿಯ ನಾಳೆ ನಮ್ಮದು

ಹೊಸ ವರ್ಷದ ಹಾರ್ದಿಕ ಶುಭಾಶಯಗಳು

# ೨೦೧೪



## ಜನವರಿ

| | | | | | |
|---|---|---|---|---|---|
| ಭಾನುವಾರ | | ೫ | ೧೨ | ೧೯ | ೨೬ |
| ಸೋಮವಾರ | | ೬ | ೧೩ | ೨೦ | ೨೭ |
| ಮಂಗಳವಾರ | | ೭ | ೧೪ | ೨೧ | ೨೮ |
| ಬುಧವಾರ | ೧ | ೮ | ೧೫ | ೨೨ | ೨೯ |
| ಗುರುವಾರ | ೨ | ೯ | ೧೬ | ೨೩ | ೩೦ |
| ಶುಕ್ರವಾರ | ೩ | ೧೦ | ೧೭ | ೨೪ | ೩೧ |
| ಶನಿವಾರ | ೪ | ೧೧ | ೧೮ | ೨೫ | |

## ಫೆಬ್ರವರಿ

| | | | | | |
|---|---|---|---|---|---|
| ಭಾನುವಾರ | | ೨ | ೯ | ೧೬ | ೨೩ |
| ಸೋಮವಾರ | | ೩ | ೧೦ | ೧೭ | ೨೪ |
| ಮಂಗಳವಾರ | | ೪ | ೧೧ | ೧೮ | ೨೫ |
| ಬುಧವಾರ | | ೫ | ೧೨ | ೧೯ | ೨೬ |
| ಗುರುವಾರ | | ೬ | ೧೩ | ೨೦ | ೨೭ |
| ಶುಕ್ರವಾರ | | ೭ | ೧೪ | ೨೧ | ೨೮ |
| ಶನಿವಾರ | ೧ | ೮ | ೧೫ | ೨೨ | |

## ಮಾರ್ಚ್

| | | | | | |
|---|---|---|---|---|---|
| ಭಾನುವಾರ | ೩೦ | ೨ | ೯ | ೧೬ | ೨೩ |
| ಸೋಮವಾರ | ೩೧ | ೩ | ೧೦ | ೧೭ | ೨೪ |
| ಮಂಗಳವಾರ | | ೪ | ೧೧ | ೧೮ | ೨೫ |
| ಬುಧವಾರ | | ೫ | ೧೨ | ೧೯ | ೨೬ |
| ಗುರುವಾರ | | ೬ | ೧೩ | ೨೦ | ೨೭ |
| ಶುಕ್ರವಾರ | | ೭ | ೧೪ | ೨೧ | ೨೮ |
| ಶನಿವಾರ | ೧ | ೮ | ೧೫ | ೨೨ | ೨೯ |

## ಏಪ್ರಿಲ್

| | | | | | |
|---|---|---|---|---|---|
| ಭಾನುವಾರ | | ೬ | ೧೩ | ೨೦ | ೨೭ |
| ಸೋಮವಾರ | | ೭ | ೧೪ | ೨೧ | ೨೮ |
| ಮಂಗಳವಾರ | ೧ | ೮ | ೧೫ | ೨೨ | ೨೯ |
| ಬುಧವಾರ | ೨ | ೯ | ೧೬ | ೨೩ | ೩೦ |
| ಗುರುವಾರ | ೩ | ೧೦ | ೧೭ | ೨೪ | |
| ಶುಕ್ರವಾರ | ೪ | ೧೧ | ೧೮ | ೨೫ | |
| ಶನಿವಾರ | ೫ | ೧೨ | ೧೯ | ೨೬ | |

## ಮೇ

| | | | | | |
|---|---|---|---|---|---|
| ಭಾನುವಾರ | | ೪ | ೧೧ | ೧೮ | ೨೫ |
| ಸೋಮವಾರ | | ೫ | ೧೨ | ೧೯ | ೨೬ |
| ಮಂಗಳವಾರ | | ೬ | ೧೩ | ೨೦ | ೨೭ |
| ಬುಧವಾರ | | ೭ | ೧೪ | ೨೧ | ೨೮ |
| ಗುರುವಾರ | ೧ | ೮ | ೧೫ | ೨೨ | ೨೯ |
| ಶುಕ್ರವಾರ | ೨ | ೯ | ೧೬ | ೨೩ | ೩೦ |
| ಶನಿವಾರ | ೩ | ೧೦ | ೧೭ | ೨೪ | ೩೧ |

## ಜೂನ್

| | | | | | |
|---|---|---|---|---|---|
| ಭಾನುವಾರ | ೧ | ೮ | ೧೫ | ೨೨ | ೨೯ |
| ಸೋಮವಾರ | ೨ | ೯ | ೧೬ | ೨೩ | ೩೦ |
| ಮಂಗಳವಾರ | ೩ | ೧೦ | ೧೭ | ೨೪ | |
| ಬುಧವಾರ | ೪ | ೧೧ | ೧೮ | ೨೫ | |
| ಗುರುವಾರ | ೫ | ೧೨ | ೧೯ | ೨೬ | |
| ಶುಕ್ರವಾರ | ೬ | ೧೩ | ೨೦ | ೨೭ | |
| ಶನಿವಾರ | ೭ | ೧೪ | ೨೧ | ೨೮ | |

## ಜುಲೈ

| | | | | | |
|---|---|---|---|---|---|
| ಭಾನುವಾರ | | ೬ | ೧೩ | ೨೦ | ೨೭ |
| ಸೋಮವಾರ | | ೭ | ೧೪ | ೨೧ | ೨೮ |
| ಮಂಗಳವಾರ | ೧ | ೮ | ೧೫ | ೨೨ | ೨೯ |
| ಬುಧವಾರ | ೨ | ೯ | ೧೬ | ೨೩ | ೩೦ |
| ಗುರುವಾರ | ೩ | ೧೦ | ೧೭ | ೨೪ | ೩೧ |
| ಶುಕ್ರವಾರ | ೪ | ೧೧ | ೧೮ | ೨೫ | |
| ಶನಿವಾರ | ೫ | ೧೨ | ೧೯ | ೨೬ | |

## ಆಗಸ್ಟ್

| | | | | | |
|---|---|---|---|---|---|
| ಭಾನುವಾರ | ೩೧ | ೩ | ೧೦ | ೧೭ | ೨೪ |
| ಸೋಮವಾರ | | ೪ | ೧೧ | ೧೮ | ೨೫ |
| ಮಂಗಳವಾರ | | ೫ | ೧೨ | ೧೯ | ೨೬ |
| ಬುಧವಾರ | | ೬ | ೧೩ | ೨೦ | ೨೭ |
| ಗುರುವಾರ | | ೭ | ೧೪ | ೨೧ | ೨೮ |
| ಶುಕ್ರವಾರ | ೧ | ೮ | ೧೫ | ೨೨ | ೨೯ |
| ಶನಿವಾರ | ೨ | ೯ | ೧೬ | ೨೩ | ೩೦ |

## ಸೆಪ್ಟೆಂಬರ್

| | | | | | |
|---|---|---|---|---|---|
| ಭಾನುವಾರ | | ೭ | ೧೪ | ೨೧ | ೨೮ |
| ಸೋಮವಾರ | ೧ | ೮ | ೧೫ | ೨೨ | ೨೯ |
| ಮಂಗಳವಾರ | ೨ | ೯ | ೧೬ | ೨೩ | ೩೦ |
| ಬುಧವಾರ | ೩ | ೧೦ | ೧೭ | ೨೪ | |
| ಗುರುವಾರ | ೪ | ೧೧ | ೧೮ | ೨೫ | |
| ಶುಕ್ರವಾರ | ೫ | ೧೨ | ೧೯ | ೨೬ | |
| ಶನಿವಾರ | ೬ | ೧೩ | ೨೦ | ೨೭ | |

## ಅಕ್ಟೋಬರ್

| | | | | | |
|---|---|---|---|---|---|
| ಭಾನುವಾರ | | ೫ | ೧೨ | ೧೯ | ೨೬ |
| ಸೋಮವಾರ | | ೬ | ೧೩ | ೨೦ | ೨೭ |
| ಮಂಗಳವಾರ | | ೭ | ೧೪ | ೨೧ | ೨೮ |
| ಬುಧವಾರ | ೧ | ೮ | ೧೫ | ೨೨ | ೨೯ |
| ಗುರುವಾರ | ೨ | ೯ | ೧೬ | ೨೩ | ೩೦ |
| ಶುಕ್ರವಾರ | ೩ | ೧೦ | ೧೭ | ೨೪ | ೩೧ |
| ಶನಿವಾರ | ೪ | ೧೧ | ೧೮ | ೨೫ | |

## ನವೆಂಬರ್

| | | | | | |
|---|---|---|---|---|---|
| ಭಾನುವಾರ | ೩೦ | ೨ | ೯ | ೧೬ | ೨೩ |
| ಸೋಮವಾರ | | ೩ | ೧೦ | ೧೭ | ೨೪ |
| ಮಂಗಳವಾರ | | ೪ | ೧೧ | ೧೮ | ೨೫ |
| ಬುಧವಾರ | | ೫ | ೧೨ | ೧೯ | ೨೬ |
| ಗುರುವಾರ | | ೬ | ೧೩ | ೨೦ | ೨೭ |
| ಶುಕ್ರವಾರ | | ೭ | ೧೪ | ೨೧ | ೨೮ |
| ಶನಿವಾರ | ೧ | ೮ | ೧೫ | ೨೨ | ೨೯ |

## ಡಿಸೆಂಬರ್

| | | | | | |
|---|---|---|---|---|---|
| ಭಾನುವಾರ | | ೭ | ೧೪ | ೨೧ | ೨೮ |
| ಸೋಮವಾರ | ೧ | ೮ | ೧೫ | ೨೨ | ೨೯ |
| ಮಂಗಳವಾರ | ೨ | ೯ | ೧೬ | ೨೩ | ೩೦ |
| ಬುಧವಾರ | ೩ | ೧೦ | ೧೭ | ೨೪ | ೩೧ |
| ಗುರುವಾರ | ೪ | ೧೧ | ೧೮ | ೨೫ | |
| ಶುಕ್ರವಾರ | ೫ | ೧೨ | ೧೯ | ೨೬ | |
| ಶನಿವಾರ | ೬ | ೧೩ | ೨೦ | ೨೭ | |

**HOSATHU** Kannada Monthly / JANUARY 2014 / ₹ 45
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 256)




TAX INVOICE / CREDIT BILL

**BILL OF SALE (MAGAZINES)**

# HOSATHU KANNADA MONTHLY

(Published by NAVAKARNATAKA PUBLICATIONS PRIVATE LIMITED)
**Embassy Centre, 11, Crescent Road, P. B. No. 5159, Bangalore - 560 001**

No.

Date :

To.............................................................................................
...............................................................................................
...............................................................................................

Desp. by...................................................
on.............................................................
No. of parcels........................................

| COPIES | PARTICULARS | RATE | AMOUNT (Rs.) | |
|---|---|---|---|---|
| | ಹೊಸತು | | | |
| | (NET AMOUNT Ru-<br>pees........................................................................... | Total | | |
| | | Disc: | | |
| | TIN : 29900014843............................................................................E. & O.E) | Net | | |

1. Our responsibility ceases after delivery of consignment to the carriers. 2. Interest @18% p.a. is chargeable if this bill is not paid within 15 days. 3. Disputes subject to jurisdiction of Bangalore courts. 4. Goods once sold will not be taken back or exchanged. 5. Books & Periodicals meant for reading are exempted from levy of Tax under Section 5 of First Schedule of K-VAT.

Phone : (080) 30578029 Fax : (080) 30578023 e-mail : navakarnataka@gmail.com

PLEASE PAY BY MO / DD FAVOURING **HOSATHU,** BANGALORE.
IN CASE OF OUTSTATION CHEQUES ADD BANK CHARGES AS APPLICABLE.

*For* ***HOSATHU***

Sales in-charge


ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

TAX INVOICE / CREDIT BILL

BILL OF SALE (MAGAZINES)

HOSATHU KANNADA MONTHLY

(Published by NAVAKARNATAKA PUBLICATIONS PRIVATE LIMITED)
Embassy Centre, 11, Crescent Road, P. B. No. 5159, Bangalore - 560 001

No.

Date :

To.............................................................................................
...............................................................................................
...............................................................................................

Desp. by...................................................
on.............................................................
No. of parcels........................................

| COPIES | PARTICULARS | RATE | AMOUNT (Rs.) | |
|---|---|---|---|---|
| | ಹೊಸತು | | | |
| | (NET AMOUNT Ru-<br>pees........................................................................... | Total | | |
| | | Disc: | | |
| | TIN : 29900014843............................................................................E. & O.E) | Net | | |

1. Our responsibility ceases after delivery of consignment to the carriers. 2. Interest @18% p.a. is chargeable if this bill is not paid within 15 days. 3. Disputes subject to jurisdiction of Bangalore courts. 4. Goods once sold will not be taken back or exchanged. 5. Books & Periodicals meant for reading are exempted from levy of Tax under Section 5 of First Schedule of K-VAT.

Phone : (080) 30578029 Fax : (080) 30578023 e-mail : navakarnataka@gmail.com

PLEASE PAY BY MO / DD FAVOURING HOSATHU, BANGALORE.
IN CASE OF OUTSTATION CHEQUES ADD BANK CHARGES AS APPLICABLE.

For HOSATHU

Sales in-charge